

ಶ್ರೀ ವೇದವ್ಯಾಸಃ ಪ್ರಸೀದತು

ಭಗವಾನ್ ಶ್ರೀ ವೇದವ್ಯಾಸ ರಚಿತ

# ವಾಮನ ಮಹಾಪುರಾಣ


ಅನುವಾದ-ಲೇಖಕರು

ಮಹಾಮಹೋಪಾಧ್ಯಾಯ

**ಪಂ. ಪಂಢರೀನಾಥಾಚಾರ್ಯ ಗಲಗಲಿ**

ರಾಷ್ಟ್ರಪ್ರಶಸ್ತಿ, ರಾಜ್ಯಪ್ರಶಸ್ತಿ

ರಾಮಕೃಷ್ಣ ದಾಲ್ಮಿಯಾ ಲಕ್ಷ್ಮೀ ಶ್ರೀವಾಣಿ ಅಲಂಕರಣ ಪ್ರಶಸ್ತಿ ಪುರಸ್ಕೃತ



—: ಪ್ರಕಾಶಕರು :--

**ಖೋಡೇ ಫೌಂಡೇಶನ್**

ಗ್ರಂಥ ಪ್ರಕಟಣಾ ವಿಭಾಗ

ನಂ. 9, ಮೊದಲನೇ ಮುಖ್ಯರಸ್ತೆ, ಗಾಂಧಿನಗರ

ಬೆಂಗಳೂರು-560 009

ದೂರವಾಣಿ : 26320014 ಫ್ಯಾಕ್ಸ್ : 0091-80-26321416

VAMĀNA MAHĀPURĀṆA of Bhagavān Sri Vedavyāsā,
Edited and Translated in to Kannada by Rajyaprashasti, Rastraprashasti, Ramakrishna Dhalmia Lakshmi Shreevani Alankarana Prashasti Puraskrutha Panditha Sri Pandarinathāchārya Galagali
Vishveswara Nagar, Shanti Colony, Hubli-580032 Ph : (0836) 250250

First Edition : 1972

Second Edition : 2004

No. of Pages : xxvi + 508

No. of Copies : 1,000



Price : Rs. 180 = 00

Printed at : **SRI VENKATESHWARA PRINTERS**
No. 3, Yellappa Road, Susheela Road Cross
Chick Mavalli, Lalbagh Crumbigal Road Cross
BANGALORE-560 004
Phone : 26573001

# ಪ್ರಸ್ತಾವನೆ

ಶ್ರೀಹರಿಯ ಅವತಾರಗಳು ಎರಡು ವಿಧ. ಜ್ಞಾನ ಕಾರ್ಯಾರ್ಥ ಅವತಾರ, ಬಲಕಾರ್ಯಾರ್ಥ ಅವತಾರ ಎಂದು. ರಾಮ, ಕೃಷ್ಣ, ನರಸಿಂಹ, ವಾಮನ ಮುಂತಾದವು ಬಲಕಾರ್ಯದ ಅವತಾರಗಳು. ಇವುಗಳಲ್ಲಿ ರಾವಣ, ಹಿರಣ್ಯ ಕಶಪು, ಶಿಶುಪಾಲ ಮುಂತಾದ ದುಷ್ಟ ರಕ್ಕಸರನ್ನು ನಿಗ್ರಹಮಾಡಿ ಸಜ್ಜನರನ್ನು ದೇವರು ಕಾಪಾಡುತ್ತಾನೆ. ಇದೆಲ್ಲ ಬಲದ ಕಾರ್ಯ.

ಮಾನವರ ಬೆಳವಣಿಗೆಗೆ ಬಲದಂತೆ ಜ್ಞಾನವೂ ಅತ್ಯಾವಶ್ಯಕ. ಜ್ಞಾನಲೋಪವಾಗಿ ಬಿಟ್ಟರೆ ಮನುಷ್ಯ ಜನ್ಮವೇ ವ್ಯರ್ಥ. ಅದಕ್ಕಾಗಿ ಪರಮಾತ್ಮನು ಅವತಾರ ಮಾಡಿ ಜ್ಞಾನ ಪ್ರಸಾರ ಕಾರ್ಯವನ್ನು ಮಾಡುತ್ತಾನೆ. ಕಪಿಲ, ದತ್ತಾತ್ರೇಯ, ವೇದವ್ಯಾಸ, ಹಯಗ್ರೀವ, ಐತರೇಯ ಮುಂತಾದ ಭಗವಂತನ ಅವತಾರಗಳು ಈ ಜ್ಞಾನಕಾರ್ಯಕ್ಕಾಗಿಯೇ ಮೀಸಲು. ಶ್ರೀ ವಿಷ್ಣುವಿನ ಈ ಜ್ಞಾನಕಾರ್ಯದ ಅವತಾರಗಳಲ್ಲಿ ವೇದವ್ಯಾಸ ಅವತಾರವು ಮಹತ್ವ ಪೂರ್ಣವಾಗಿದೆ.

ಪರಾಶರ ಸತ್ಯವತಿಯಿಂದ ದ್ವೀಪದಲ್ಲಿ ಹುಟ್ಟಿ ದ್ವೈಪಾಯನ ಎಂದು ಹೆಸರಾದ ವ್ಯಾಸ ಮಹರ್ಷಿಗಳು ವೇದಗಳನ್ನು ನಾಲ್ಕುತೆರನಾಗಿ ವಿಭಾಗ ಮಾಡಿದರು. ಐದನೂರಾ ಅರವತ್ನಾಲ್ಕು ಬ್ರಹ್ಮಸೂತ್ರಗಳನ್ನು ರಚಿಸಿ ವೇದಾಂತ ಅಥವಾ ಬ್ರಹ್ಮ ಮೀಮಾಂಸಾ ಶಾಸ್ತ್ರಕ್ಕೆ ಮೂಲ ಪುರುಷರಾದರು. ಹಾಗೂ ಸ್ತ್ರೀ ಶೂದ್ರರಿಗೂ ಶ್ರೀ ಸಾಮಾನ್ಯರಿಗೂ ದಿವ್ಯಜ್ಞಾನ ಉಂಟಾಗಿ ಧರ್ಮ ಸಂಸ್ಕೃತಿಗಳ ತಿರುಳನ್ನು ತಿಳಿದುಕೊಳ್ಳಲು ಅನುಕೂಲವಾಗಲಿ ಎಂದು ಮಹಾಭಾರತ ಹಾಗೂ ಹದಿನೆಂಟು ಪುರಾಣಗಳನ್ನು ರಚಿಸಿದರು. ಈ ಹದಿನೆಂಟು ಪುರಾಣಗಳನ್ನೂ ಕೂಡ ಮೂಲ ಸಂಸ್ಕೃತದಿಂದ ಕನ್ನಡಿಸಿ ಕೊಡಬೇಕೆಂದು ನಮ್ಮ ಕುಲಸ್ವಾಮಿಯ ಪ್ರೇರಣಾನುಸಾರ, ನಾವು ಸಂಕಲ್ಪ ಮಾಡಿದ್ದೇನೆ.

ಪುರಾಣಗಳಲ್ಲಿ ಕೆಲವು ವೈಷ್ಣವ ಪುರಾಣಗಳಾದರೆ ಹಲವು ಶೈವ ಪುರಾಣಗಳು ಮತ್ತೆ ಕೆಲವು ಶಾಕ್ತ ಪುರಾಣಗಳೂ ಇವೆ. ನಾವು ಕನ್ನಡಿಸಿದ ವಿಷ್ಣು ವರಾಹ ಪುರಾಣಗಳು ವೈಷ್ಣವ ಪುರಾಣಗಳಾದರೆ ಪ್ರಕೃತ ವಾಮನ ಪುರಾಣವು ಶೈವ ಪುರಾಣವಾಗಿದೆ. ಇದರಲ್ಲಿ ಶಂಕರನ ಮಹಿಮೆ ಹಾಗೂ ಶ್ರೇಷ್ಠತೆಗಳು ಬಗೆಬಗೆಯಾಗಿ ಬಣ್ಣಿಸಲ್ಪಟ್ಟಿವೆ.

ಇನ್ನೊಂದು ದೃಷ್ಟಿಯಿಂದ ಇದು ಶಾಕ್ತ ಪುರಾಣವೂ ಹೌದು. ಇದರಲ್ಲಿ ಶಕ್ತಿ ಸ್ವರೂಪಿಣಿಯಾದ ಕಾಲೀ ಅಥವಾ ಪಾರ್ವತೀ ದೇವಿಯ ಅತ್ಯದ್ಭುತವಾದ ಚರಿತ್ರೆಯು ರೋಮಾಂಚಕಾರಿಯಾಗಿ ಬಿತ್ತರಿಸಲ್ಪಟ್ಟಿದೆ ಕಾರ್ತಿಕೇಯನ ಲೋಕಭೀಷಣ ಗೈಮೆ ಮೈಮೆಗಳ ಬಣ್ಣನೆಗೂ ಈ ಪುರಾಣದ ಬಹುಭಾಗ ಮೀಸಲಾಗಿದೆ.

ಇದು ಶೈವ ಪುರಾಣವಾದರೂ ಇದರಲ್ಲಿ ಎಲ್ಲಿಯೂ ವಿಷ್ಣುವಿನ ನಿಂದೆ ಅಥವಾ ನಿರ್ಭರ್ತ್ಸನೆಯು ಕಂಡು ಬರುವುದಿಲ್ಲ. ವಿಷ್ಣುವಿನ ಮುಖಾಂತರವೇ ಶಿವನ ಮಹಿಮೆ ವ್ಯಕ್ತವಾಗುವಂತೆ ಕೆಲವು ಸಂದರ್ಭಗಳಿದ್ದರೆ ಶಿವನ ಮುಖಾಂತರ ವಿಷ್ಣು ಮಹಿಮಾದ್ಯೋತಕ ಪ್ರಸಂಗಗಳೂ ಹೇರಳವಾಗಿವೆ. ವಿಶೇಷವಾಗಿ ಶೈವ ವೈಷ್ಣವ ಪ್ರಭೇದ

ಮೂಲಕವಾದ ವೈರಸ್ಯ ಕಲಹಗಳನ್ನು ಕಡಿಮೆ ಮಾಡುವುದಕ್ಕಾಗಿ ಉಭಯ ದೇವತೆಗಳ ಐಕ್ಯ ಅಥವಾ ಸಾಮರಸ್ಯವನ್ನು ಸಾಧಿಸಿ ಸಿದ್ಧಾಂತಿಸುವ ಪ್ರಯತ್ನ ಇಲ್ಲಿ ವಿಶೇಷವಾಗಿ ಕಂಡು ಬರುತ್ತದೆ. ಇದರ ಹೆಸರು ವಾಮನ ಮಹಾಪುರಾಣ ಎಂದು. ವಿಷ್ಣುವಿನ ದಶಾವತಾರದಲ್ಲಿ ಐದನೆಯದಾದ ವಾಮನಾವತಾರದ ಚರಿತ್ರವನ್ನು ಹೇಳುವದೇ ಈ ಪುರಾಣದ ಮುಖ್ಯ ಉದ್ದೇಶವಾಗಿದೆ. ಈ ವಾಮನಾವತಾರದ ಚರಿತ್ರವು ಈ ಪುರಾಣದಲ್ಲಿ ಎರಡು ಬಾರಿ ಬಂದಿದೆ. ಇದರಂತೆ ದೇವೀ ಮಹಾತ್ಮ್ಯ ಪ್ರಹ್ಲಾದನ ಉಪದೇಶ ಮುಂತಾದ ಕೆಲಭಾಗಗಳು ಇದರಲ್ಲಿ ಪುನರುಕ್ತವಾದುದು ಕಂಡು ಬರುತ್ತದೆ.

ಮತ್ಸ್ಯಪುರಾಣ, ಸ್ಕಂದ ಪುರಾಣಗಳಲ್ಲಿ ಈ ವಾಮನ ಪುರಾಣದ ವರ್ಣ್ಯವಸ್ತು ಅರ್ಥಾತ್ ವಿಷಯದ ಬಗ್ಗೆ "**ತ್ರಿವಿಕ್ರಮಸ್ಯ ಮಾಹಾತ್ಮ್ಯಂ ಅಧಿಕೃತ್ಯ ಚತುರ್ಮುಖಃ । ತ್ರಿವರ್ಗಮಭ್ಯಧಾತ್ ತಚ್ಚ ವಾಮನಂ ಪರಿಕೀರ್ತಿತಂ । ಪುರಾಣಂ ಶತಸಾಹಸ್ರಂ ಕೂರ್ಮ ಕಲ್ಪಾನುಗಂ ಶಿವಂ ॥**"

ಬ್ರಹ್ಮದೇವರು ತ್ರಿವಿಕ್ರಮ ಅಥವಾ ವಾಮನನ ವಿಷಯವಾಗಿ ನಿರೂಪಣೆ ಗೈಯುತ್ತ ಧರ್ಮ, ಅರ್ಥ, ಕಾಮ, ಮೋಕ್ಷ ಈ ಮೂರು ಪುರುಷಾರ್ಥಗಳ ವಿಚಾರವನ್ನು ಈ ವಾಮನ ಪುರಾಣದಲ್ಲಿ ನಿರೂಪಿಸಿದ್ದಾರೆ ಎಂದು ಹೇಳಲಾಗಿದೆ. ಈ ಪುರಾಣದ ಪದ್ಯಗಳ ಸಂಖ್ಯೆಯು ಹತ್ತು ಸಾವಿರವೆಂದು ನಿರ್ದೇಶಿಸಲಾಗಿದ್ದು ಇದರಲ್ಲಿಯ ವಿಷಯವೆಲ್ಲವೂ ಕೂರ್ಮ ಕಲ್ಪಾನುಸಾರವಾಗಿದೆ ಎಂದು ಉಲ್ಲೇಖಿಸಲಾಗಿದೆ. ಇದರ ಪ್ರಕೃತ ಉಪಲಬ್ಧವಿದ್ದ ವಾಮನ ಪುರಾಣದಲ್ಲಿ ಕೂರ್ಮ ಕಲ್ಪದ ಉಲ್ಲೇಖವಿಲ್ಲ. ಮತ್ತು ಮತ್ಸ್ಯ ಸ್ಕಂದ ಪುರಾಣಗಳಲ್ಲಿ ಹೇಳಿದಂತೆ ಇದನ್ನು ಬ್ರಹ್ಮ ಬಿತ್ತರಿಸುವದೂ ಇಲ್ಲ. ಈಗ ಉಪಲಬ್ಧವಿದ್ದ ಪ್ರತಿಗಳಲ್ಲೆಲ್ಲ ಪುಲಸ್ತ್ಯರು ನಾರದರಿಗೆ ಈ ಪುರಾಣವನ್ನು ಉಪದೇಶಿಸಿದ್ದೇ ಕಂಡು ಬರುತ್ತದೆ. ಎಲ್ಲ ಪುರಾಣಗಳಂತೆ ಇದನ್ನು ಸೂತರು ಶೌನಕಾದಿಗಳಿಗೆ ನಿರೂಪಿಸುವದಿಲ್ಲ. ಈ ಪುರಾಣದ ಮಧ್ಯದಲ್ಲಿ ಇಪ್ಪತ್ತೆರಡನೆಯ ಅಧ್ಯಾಯ ನಲವತ್ತಾರನೆಯ ಪದ್ಯ ಮುಗಿದ ಬಳಿಕ ನಲವತ್ತೇಳನೆಯ ಪದ್ಯದಲ್ಲಿ ಒಮ್ಮೆಲೆ ಲೋಮಹರ್ಷಣ ಸೂತಾಚಾರ್ಯನ ಪ್ರವೇಶವಾಗುತ್ತದೆ.

**ಸರಸ್ವತೀ ದೃಷದ್ವತ್ಯೋರಂತರೇ ಕುರಜಾಂಗಲೇ**
**ಮುನಿ ಪ್ರವರ ಮಾಸೀನಂ ಪುರಾಣಂ ಲೋಮಹರ್ಷಣಂ**
**ಅಪೃಚ್ಛಂತ ದ್ವಿಜವರಾಃ ಪ್ರಭವಂ ಸುರ ಸತ್ತಮಾಃ ॥**

ಸರಸ್ವತೀ ದೃಷದ್ವತೀ ನದಿಗಳ ನಡುವಿನ ಕುರುಜಾಂಗಲ ಕ್ಷೇತ್ರದಲ್ಲಿ ಕುಳಿತ ಪುರಾಣ ಪ್ರವಚನಾಚಾರ್ಯನಾದ ಲೋಮಹರ್ಷಣ ಮುನಿವರನ ಬಳಿಗೆ ಎಲ್ಲ ಬ್ರಾಹ್ಮಣರು ಬಂದು ಕೇಳುತ್ತಾರೆ.

**"ಪ್ರಮಾಣಂ ಸರಸೋ ಬ್ರೂಹಿ ತೀರ್ಥಾನಾಂಚ ವಿಶೇಷತಃ**
**ದೇವತಾನಾಂ ಚ ಮಾಹಾತ್ಮ್ಯಂ ಉತ್ಪತ್ತಿಂ ವಾಮನಸ್ಯ ಚ ॥**

ಸರೋವರದ ಮಹಿಮೆ, ತೀರ್ಥಗಳ ಹಾಗೂ ದೇವತೆಗಳ ಮಾಹಾತ್ಮ್ಯ ಮತ್ತು ವಾಮನ ದೇವರ ಉತ್ಪತ್ತಿಯ ವೃತ್ತಾಂತಗಳನ್ನು ಹೇಳಬೇಕೆಂದು" ಪ್ರಶ್ನಿಸುತ್ತಾರೆ.

ಆಗ ಲೋಮಹರ್ಷಣರು "**ಬ್ರಹ್ಮಾಣಮೀಶಂ ಕಮಲಾಸನಸ್ಥಂ ವಿಷ್ಣುಂಚ ಲಕ್ಷ್ಮೀ ಸಹಿತಂ ತಥೈವ**" ಎಂದು ಹರಿ ಹರ ಬ್ರಹ್ಮಾದಿ ದೇವತೆಗಳಿಗೆ ವಂದಿಸಿ ಮಂಗಲಾಚರಣ ಮಾಡಿ ವಾಮನಾವತಾರ ಚರಿತ್ರೆಯನ್ನು ಹೇಳಲು ಉಪಕ್ರಮಿಸಿದ್ದಾರೆ.

ಡಾಕಾ ಯುನಿವರ್ಸಿಟಿಯ ಸಂಸ್ಕೃತ ಪ್ರೊಫೆಸರರಾದ **ಆರ್.ಸಿ. ಹಜರಾ** ಎಮ್.ಎ.ಪಿ.ಎಚ್.ಡಿ. ಇವರು ತಮ್ಮ "**ಸ್ಟಡೀಸ್ ಇನ್ ದಿ ಪುರಾಣಿಕ್ ರಿಕಾರ್ಡ್ಸ ಆನ್ ಹಿಂದು ರಾಯಿಟ್ಸ ಆ್ಯಂಡ್ ಕಸ್ಟಮ್ಸ**" ಎಂಬ ಪುರಾಣ ಪರಿಶೋಧನಾತ್ಮಕ ಪ್ರಬಂಧದಲ್ಲಿ ಮೂಲ ವಾಮನ ಮಹಾಪುರಾಣದ ಪ್ರಾರಂಭವು ಈಗಿದ್ದ ವಾಮನ ಮಹಾಪುರಾಣದ ಇಪ್ಪತ್ತೆರಡನೆಯ ಅಧ್ಯಾಯದಲ್ಲಿ ಬರುವ ಲೋಮಹರ್ಷಣರ ಮಾತಿನಿಂದಲೇ ಪ್ರಾರಂಭವಾಗಿರ ಬಹುದೆಂದು ತರ್ಕಿಸಿದ್ದಾರೆ. ಅವರ ಅಭಿಪ್ರಾಯದಲ್ಲಿ ವಾಮನ ಮಹಾಪುರಾಣದಲ್ಲಿ ಅದರ ಹೆಸರೇ ಸೂಚಿಸುವಂತೆ ಮೂಲತಃ ವೈಷ್ಣವ ಪುರಾಣವೇ ಆಗಿದ್ದಿತು. ಅನಂತರ ಈ ವಿಷ್ಣುವಿನ ಮಹಿಮಾ ಪ್ರತಿಪಾದಕವಾದ ಮೂಲ ಪುರಾಣದಲ್ಲಿ ಇತ್ತೀಚಿನ ಶೈವರ ಶಿವ ಮಹಿಮಾ ವರ್ಣನಾತ್ಮಕ ಭಾಗವನ್ನು ಸೇರಿಸಿದ್ದಾರೆ. ಈ ಪ್ರಕ್ಷೇಪ ಎಷ್ಟು ಪ್ರಚಂಡ ಪ್ರಮಾಣದಲ್ಲಿ ನಡೆದಿದೆಯೆಂದರೆ ಅದನ್ನು ಯಾರಿಗೂ ಗುರುತಿಸಲಿಕ್ಕೂ ಕೂಡ ಬಾರದಂತಾಗಿದೆ. ಈ ವಿಷಯದಲ್ಲಿ ಅವರ ವಾಕ್ಯಗಳನ್ನು ಓದಿರಿ.

The Saiva materials in the present Vamana as contrasted with the title and contents given in the Matsya and Skanda, Show that the Purana in its earilier form was a Vaisnava work, and that it was later recast by the Siva worshipper who changed the work with additions and alterations in such a way that very little of its earlier contents was retained. The appearance of Lomaharsana as an interlocutor in a few chapters from Vam 22.47 Seems to indicate that the Vamana-P in its earlier from probably began with the Verses in chap 23, the opening verse being, Vam 22.47 (of course with same change in the third line.).

ಹಜರಾರ ಅಭಿಪ್ರಾಯದಂತೆ ನಿಜವಾದ ಮೂಲ ವಾಮನ ಮಹಾಪುರಾಣವು ಲೋಮಹರ್ಷಣ ಹಾಗೂ ಬ್ರಾಹ್ಮಣರ ಸಂವಾದದಿಂದ ಈಗಿನ ಇಪ್ಪತ್ತುಮೂರನೆಯ ಅಧ್ಯಾಯದಿಂದಲೇ ಪ್ರಾರಂಭವಾಗಿದ್ದಿತು.

**ಋಷಯ ಊಚುಃ**

**ಬ್ರೂಹಿ ವಾಮನ ಮಾಹಾತ್ಮ್ಯಂ ಉತ್ಪತ್ತಿಂ ಚ ವಿಶೇಷತಃ**
**ಯಥಾ ಬಲಿರ್ನಿಯ ಮಿತೋ ದತ್ತಂ ರಾಜ್ಯಂ ಶತಕ್ರತೋಃ ॥**

ವಾಮನನ ಮಾಹಾತ್ಮ್ಯವನ್ನು ವಿಶೇಷವಾಗಿ ವಾಮನ ದೇವರ ಹುಟ್ಟು ಹಾಗೂ ಅವರು ಬಲಿಯನ್ನು ನಿಗ್ರಹಿಸಿ ಇಂದ್ರನಿಗೆ ರಾಜ್ಯವನ್ನೆಲ್ಲ ಕೊಟ್ಟ ವೃತ್ತಾಂತವನ್ನು ನಿರೂಪಿಸಬೇಕು ಎಂದು ಪ್ರಶ್ನೆ ಮಾಡಿದರು. ಅದಕ್ಕೆ ಉತ್ತರ ರೂಪವಾಗಿ ಲೋಮಹರ್ಷಣರು :-

"ಶೃಣ್ವಂತು ಮುನಯಃ ಪ್ರೀತಾ ವಾಮನಸ್ಯ ಮಹಾತ್ಮನಃ ।
ಉತ್ಪತ್ತಿಂಚ ಪ್ರಭಾವಂ ಚ ನಿವಾಸಂ ಕುರುಜಾಂಗಲೇ ॥

ಮುನಿಗಳೇ, ನಾನು ನಿಮಗೆ ಪರಮಚೇತನವಾದ ವಾಮನ ದೇವರ ಅವತಾರ ಹಾಗೂ ಪ್ರಭಾವ ಮತ್ತು ಕುರುಜಾಂಗಲ ಕ್ಷೇತ್ರದ ನಿವಾಸಗಳ ಬಗೆಗೆ ಹೇಳುತ್ತೇನೆ. ಸಂತೋಷದಿಂದ ಆಲಿಸಿರಿ" ಎಂದು ಶುರುಮಾಡುತ್ತಾರೆ. ಇದರ ಮುಂದೆಯೂ ಅನೇಕ ಪ್ರಕ್ಷೇಪ ವಿಕ್ಷೇಪಗಳು ನಡೆದರೂ ಸ್ಕಂದ ಅಗ್ನಿ ಮತ್ಸ್ಯ ಪುರಾಣಗಳಿಗೆ ಅನುಸಾರವಾಗಿ ಮೂಲತಃ ಶುದ್ಧ ವೈಷ್ಣವ ಪುರಾಣವಾದ ವಾಮನ ಪುರಾಣದ ಪ್ರಾರಂಭವು ಇಲ್ಲಿಂದಲೇ ಆಗಿದೆ. ಮುಂದಿನ ಶೈವ ಭಾಗವೆಲ್ಲವೂ ಯಾರೋ ಶಿವಭಕ್ತರಿಂದ ಪ್ರಕ್ಷಿಪ್ತವಾಗಿದ್ದು ಅತ್ಯಂತ ಅರ್ವಾಚೀನ ಎಂದರೆ ಕ್ರಿಸ್ತಾಬ್ದದ ಹತ್ತನೆಯ ಶತಮಾನದ ಹಿಂದೆ ಮುಂದೆ ನಡೆದಿದೆ ಎಂದು ಅಭಿಪ್ರಾಯಪಟ್ಟಿದ್ದಾರೆ.

Such a beginning agrees considerably with the accounts contained in the Matsya, Skanda and Agni-purana refered to above, and in this case Lomaharsana becomes the narrator of the Purana. All the chapters ascribed to Lomaharsana in our present Vamana cannot however, be taken to have belonged to the Purana in its earlier form. Most of these are undoubtedly of comparatively late origin. Even chap. 23, which seems to contain verses from the earlier Vamana, have others which were added at the time of recasting because these latter verses presuppose the preceding chapters which are Saiva in character. These facts show that inspite of the probable retention of verses from the earlier Vamana our present Purana in practically a new work.

ಪ್ರೊ. ಹಜರಾರ ಈ ಅಭಿಪ್ರಾಯವು ಅರ್ಧ ಸತ್ಯವಾಗಿದೆ. ಅವರು ಹೇಳಿದಂತೆ, ಮತ್ತು ಅಗ್ನಿ, ಮತ್ಸ್ಯ, ಸ್ಕಂದ ಪುರಾಣಗಳು ವಿಷಯ ಸೂಚಿಸುವಂತೆ, ಇದರ ಹೆಸರಿಗೆ ಅನುಗುಣವಾಗಿ, ವಾಮನ ಮಹಾಪುರಾಣವು ಮೂಲತಃ ವಿಷ್ಣು, ವರಾಹಗಳಂತೆ ಶ್ರೀ ವಿಷ್ಣುವಿನ ಮಹಿಮೆಯನ್ನು ಪ್ರತಿಪಾದಿಸುವ ವೈಷ್ಣವ ಪುರಾಣವೇ ಆಗಿರಬೇಕು. ಮುಂದೆ ಕ್ರಿಸ್ತಶಕದ ಪ್ರಾರಂಭಿಕ ವರ್ಷಗಳಲ್ಲಿ ನಡೆದ ಪುರಾಣ ಸಂಸ್ಕರಣ ಸಂಧರ್ಭದಲ್ಲಿ ಕೆಲವು ಅಜ್ಞಾತ ಶೈವರು ಈ ವೈಷ್ಣವ ಪುರಾಣದಲ್ಲಿ ತಮ್ಮ ಮನಬಂದಂತೆ ಶಿವ ಮಹಿಮೆಯ ಪ್ರಸಂಗಗಳನ್ನು ಇದರೊಳಗೆ ತೂರಿಸಿ ಸೇರಿಸಿದ್ದೂ ನಿಜ. ಆದರೆ ಸಮಗ್ರ ಪುರಾಣವನ್ನೆಲ್ಲ ಬ್ರಹ್ಮದೇವರೇ ಹೇಳಿದ್ದು ಪುಲಸ್ತ್ಯ ನಾರದ ಸಂವಾದದ ಭಾಗವೆಲ್ಲ ಪ್ರಕ್ಷಿಪ್ತ ಎಂಬ ವಾದವು ಯುಕ್ತಿ ಯುಕ್ತವಲ್ಲ ವ್ಯಾಸ ರಚಿತ ಭಾರತವು ವೈಶಂಪಾಯನ, ಜನಮೇಜಯ ಸಂವಾದ ರೂಪವಾಗಿದ್ದರೂ ಸೂತ ಶೌನಕ ಸಂವಾದ ರೂಪವೂ ಆಗಿಲ್ಲವೆ!

ಅದರಂತೆ ಈ ವಾಮನ ಮಹಾಪುರಾಣವು ಬ್ರಹ್ಮರಚಿತವೆಂದರೆ ಸಂಪೂರ್ಣ ಪುರಾಣವೆಲ್ಲವೂ ಬ್ರಹ್ಮರಚಿತವಲ್ಲ. ಶ್ರೀ ವಿಷ್ಣು ರೂಪಿಯಾದ ಶ್ರೀ ವಾಸುದೇವನ

ಚತುರ್ಮೂರ್ತಿತ್ವ, ಸರ್ವತ್ರ ವ್ಯಾಪ್ತತ್ವ ಪರಬ್ರಹ್ಮತ್ವ, "**ಓಂ ನಮೋ ಭಗವತೇ ವಾಸುದೇವಾಯ**" ಎಂಬ ಈ ದ್ವಾದಶಾಕ್ಷರ ಮಂತ್ರದ ದ್ವಾದಶ ಪತ್ರಾತ್ಮಕವಾದ ಕಾಲ ರೂಪತ್ವಾದಿಗಳನ್ನು ಮತ್ತು ತ್ರಿವರ್ಗಸಾಧನ ಕ್ರಮವನ್ನೂ ಬ್ರಹ್ಮದೇವರು ಸಂದರ್ಭಾನುಸಾರವಾಗಿ ಹೇಳಿದ್ದಾರೆ. ಇಡೀ ವಾಮನ ಮಹಾಪುರಾಣದಲ್ಲಿ ವಾಮನ ದೇವರ ನಿಜ ಸ್ವರೂಪವನ್ನು ತಿಳಿಸುವ ಆ ಭಾಗವು ಮಹತ್ವದ್ದೆಂದು ತಿಳಿದು "**ತ್ರಿವಿಕ್ರಮಸ್ಯ ಮಾಹಾತ್ಮ್ಯಮಧಿಕೃತ್ಯ ಚತುರ್ಮುಖಃ। ತ್ರಿವರ್ಗಮಭ್ಯಧಾತ್**" ಎಂದು ತ್ರಿವರ್ಗಸಾಧಕತ್ವೇನ ವಾಮನ ದೇವರ ಮಹಿಮೆ ಮಾತ್ರ ಚತುರ್ಮುಖನಿಂದ ಹೇಳಲ್ಪಟ್ಟಿದೆ ಎಂಬ ಪುರಾಣಾಂತರದ ವಾಮನ ಮಹಾಪುರಾಣದ ವಿಷಯ ವಿನ್ಯಾಸವನ್ನು ಮಾಡಲಿಕ್ಕೆ ಬರುತ್ತದೆ.

ಯಾಕೆಂದರೆ ನಾರದ ಪುರಾಣದಲ್ಲಿ ವಾಮನ ಮಹಾಪುರಾಣದ ವಸ್ತು ನಿರೂಪಣೆಯ ಸಂದರ್ಭದಲ್ಲಿ ಇದರಲ್ಲಿ ಬರುವ ಎಲ್ಲ ವಿಷಯಾನುಕ್ರಮಣಿಯನ್ನು ಕೊಟ್ಟಿದ್ದು ಕೊನೆಗೆ "**ಪುಲಸ್ತ್ಯೇನ ಸಮಾಖ್ಯಾತಂ ನಾರದಾಯ ಮಹಾತ್ಮನೇ**" ಎಂದು ನಿರ್ದೇಶಿಸಿದ್ದಾರೆ. ಇದರಿಂದ ನಾರದ ಪುರಾಣ ರಚನೆಯ ಕಾಲದಲ್ಲಿ ವಾಮನ ಮಹಾಪುರಾಣವು ನಾರದ ಪುಲಸ್ತ್ಯ ಸಂವಾದ ರೂಪವೇ ಆಗಿದ್ದಿತೆಂದು ತಿಳಿದು ಬರುತ್ತದೆ. ನಾರದ ಪುರಾಣದಲ್ಲಿ ವಾಮನವು ಪೂರ್ವಭಾಗ ಉತ್ತರಭಾಗ ಎಂದು ಎರಡು ಭಾಗವುಳ್ಳದ್ದೆಂದು ನಿರ್ದೇಶಿಸಿ ಎರಡನೇ ಭಾಗಕ್ಕೆ ಬೃಹದ್ವಾಮನ ಪುರಾಣ ಎಂದು ಕರೆದಿದ್ದಾರೆ.

**"ಶೃಣು ತಸ್ಯೋತ್ತರಂ ಭಾಗಂ ಬೃಹದ್ವಾಮನ ಸಂಜ್ಞಕಂ ।
ಮಾಹೇಶ್ವರೀ ಭಾಗವತೀ ಸೌರೀ ಗಾಣೇಶ್ವರೀ ತಥಾ ॥
ಚತಸ್ರಃ ಸಂಹಿತಾಶ್ಚಾತ್ರ ಪೃಥಕ್ ಸಾಹಸ್ರ ಸಂಖ್ಯಯಾ ।
ಮಾಹೇಶ್ವರ್ಯಾಂತು ಕೃಷ್ಣಸ್ಯ ತದ್ಭಕ್ತಾನಾಂ ಚ ಕೀರ್ತನಂ ।
ಭಗವತ್ಯಾಂ ಜಗನ್ಮಾತುರವತಾರ ಕಥಾದ್ಭುತಾ ।
ಸೌರ್ಯಾಂ ಸೂರ್ಯಸ್ಯ ಮಹಿಮಾ ಗದಿತಃ ಪಾಪನಾಶನಃ ।
ಗಾಣೇಶ್ವರ್ಯಾಂ ಗಣೇಶಸ್ಯ ಚರಿತಂ ಚ ಮಹೇಶಿತುಃ ॥**

ಬೃಹದ್ವಾಮನ ಎಂಬ ಎರಡನೆಯ ಭಾಗದಲ್ಲಿ ಮಾಹೇಶ್ವರೀ ಭಾಗವತೀ ಗೌರೀ ಗಾಣೇಶ್ವರೀ ಎಂದು ನಾಲ್ಕು ಪ್ರಭೇದವಿದೆ ಪ್ರತಿಯೊಂದು ಭಾಗವೂ ಒಂದೊಂದು ಸಾವಿರ ಪದ್ಯಾತ್ಮಕವಿದೆ. ಮೊದಲಿನ ಮಾಹೇಶ್ವರೀ ಖಂಡದಲ್ಲಿ ಶ್ರೀ ಕೃಷ್ಣನ ಹಾಗೂ ವಿಷ್ಣುಭಕ್ತರ ಚರಿತ್ರ ನಿರೂಪಣೆ. ಭಗವತೀ ಎಂಬ ಎರಡನೇಯ ಖಂಡದಲ್ಲಿ ಜಗದಂಬೆಯ ಮಹಿಮೆ. ಸೌರಿ ಎಂಬ ಮೂರನೆಯ ಖಂಡದಲ್ಲಿ ಸೂರ್ಯನ ಮಹಿಮೆ, ಗಾಣೇಶ್ವರೀ ಎಂಬ ನಾಲ್ಕನೇ ಖಂಡದಲ್ಲಿ ಗಣಪತಿ ಹಾಗೂ ಗೌರೀಪತಿಯರ ಮಹಿಮೆಯ ವರ್ಣನೆ ಇದೆ ಎಂದು ಹೇಳಲಾಗಿದೆ. ಆದರೆ ವಾಮನ ಪುರಾಣದ ಈ ಉತ್ತರಾರ್ಧವು ಇಂದು ಎಲ್ಲಿಯೂ ಉಪಲಬ್ಧವಿಲ್ಲ ಈಗ ಎಲ್ಲ ಕಡೆಗೂ ಉಪಲಬ್ಧವಿದ್ದ ವಾಮನ ಪುರಾಣದಲ್ಲಿ-

**ಪುರಾಣ ಪ್ರಶ್ನಃ ಪ್ರಥಮಂ ಬ್ರಹ್ಮ ಶೀರ್ಷಚ್ಛಿದಾ ತತಃ ।
ಕಪಾಲ ಮೋಚನಾಖ್ಯಾನಂ ದಕ್ಷಯಜ್ಞ ವಿಹಂಸನಂ ॥
ಹರಸ್ಯ ಕಾಲ ರೂಪಾಖ್ಯಾ ಕಾಮಸ್ಯ ದಹನಂ ತತಃ ।**

ಪ್ರಲ್ಹಾದ ನಾರಾಯಣ ಯೋರ್ಯುದ್ಧಂ ದೇವಾಸುರಾಹ್ವಯಮ್ ॥
ಸುಕೇಶ್ಯರ್ಕಸಮಾಖ್ಯಾನಂ ತತೋ ಭುವನ ಕೋಶಕಂ ।
ತತಃ ಕಾಮ್ಯ ವ್ರತಾಖ್ಯಾನಂ ಶ್ರೀದುರ್ಗಾಚರಿತಂ ತತಃ ॥
ತಪತೀ ಚರಿತಂ ಪಶ್ಚಾತ್ ಕುರುಕ್ಷೇತ್ರಸ್ಯ ವರ್ಣನಂ ।
ಸುರಮಾಹಾತ್ಮ್ಯ ಮತುಲಂ ಪಾರ್ವತೀ ಜನ್ಮ ಕೀರ್ತನಂ ॥
ತಪಸ್ತಸ್ಯಾ ವಿವಾಹಶ್ಚ ಗೌರ್ಯುಪಾಖ್ಯಾನಕಂ ತತಃ ।
ತತೋಂಧಕವಧ್ಯಾಖ್ಯಾನಂ ಸಾಧೂ ಪಾಖ್ಯಾನಕಂ ತತಃ ॥
ಜಾಬಾಲಿ ಚರಿತಂ ಪಶ್ಚಾತ್ ಅರಜಾಯಾಃ ಕಥಾದ್ಭುತಾ ।
ಅಂಧಕೇಶ್ವರ ಯೋರ್ಯುದ್ಧಂ ಗಣತ್ವಂ ಚಾಂಧಕಸ್ಯ ಚ ॥
ಮರುತಾಂ ಜನ್ಮ ಕಥನಂ ಬಲೇಶ ಚರಿತಂ ತತಃ ।
ತತಸ್ತು ಲಕ್ಷ್ಮ್ಯಾಶ್ಚರಿತಂ ತ್ರೈವಿಕ್ರಮಮತಂ ಪರಂ ॥
ಪ್ರಲ್ಹಾದತೀರ್ಥಯಾತ್ರಾಯಾಂ ಪ್ರೋಚ್ಯಂತೇ ತತ್ಕಥಾಶ್ಶುಭಾಃ ।
ತತಶ್ಚ ಧುಂದುಚರಿತಂ ಪ್ರೇತೋಪಾಖ್ಯಾನಕಂ ತತಃ ॥
ನಕ್ಷತ್ರ ಪುರುಷಾಖ್ಯಾನಂ ಶ್ರೀರಾಮ ಚರಿತಂ ತತಃ ।
ತ್ರಿವಿಕ್ರಮ ಚರಿತ್ರಾಂತೇ ಬ್ರಹ್ಮಪ್ರೋಕ್ತಃ ಸ್ತವೋತ್ತಮಃ ।
ಪ್ರಲ್ಹಾದ ಬಲಿ ಸಂವಾದೇ ಸುತಲೇ ಹರಿ ಶಂಸನಮ್ ॥
ಇತ್ಯೇಷ ಪೂರ್ವಭಾಗೋಯಂ ಪುರಾಣಸ್ಯ ತವೋದಿತಃ ॥

ಮೊದಲು ವಾಮನ ಪುರಾಣ ಹೇಳಬೇಕೆಂದು ನಾರದ ಪ್ರಶ್ನೆ. ಅನಂತರ ಶಿವನಿಂದ ಬ್ರಹ್ಮದೇವರ ಐದನೆಯ ತಲೆಯ ಛೇದನ. ಅನಂತರ ಬ್ರಹ್ಮ ಕಪಾಲದಿಂದ ಬಿಡುಗಡೆ ಹೊಂದಲಿಕ್ಕಾಗಿ ಶಿವನ ಅಲೆದಾಟ. ದಕ್ಷ ಯಜ್ಞ ವಿಧ್ವಂಸ, ಹರನಕಾಲ ಸ್ವರೂಪ ಕಥನ, ಕಾಮದಹನ, ಪ್ರಹ್ಲಾದ ಹಾಗೂ ಶ್ರೀಹರಿಯ ಯುದ್ಧ ದೇವಾಸುರ ಯುದ್ಧೋದ್ಯೋಗ, ಸುಕೇಶಿ ಸೂರ್ಯರ ಅಖ್ಯಾನ, ಭುವನಕೋಶ ವರ್ಣನೆ, ಕಾಮ್ಯ ವ್ರತಗಳ ಬಣ್ಣನೆ, ಶ್ರೀ ದುರ್ಗಾದೇವಿಯರ ಚರಿತ್ರೆ, ತಪತೀ ಸಂವರಣರ ಉಪಾಖ್ಯಾನ, ಕುರುಕ್ಷೇತ್ರ ವರ್ಣನೆ, ದೇವತಾ ಮಾಹಾತ್ಮ್ಯ, ಪಾರ್ವತಿಯ ಜನ್ಮ ವೃತ್ತಾಂತ, ಅವಳ ವಿವಾಹ, ಗೌರಿಯ ಉಪಾಖ್ಯಾನ, ಕೌಶಿಕಿಯ ಕತೆ, ಅನಂತರ ಸ್ಕಂದನ ಚರಿತ್ರ, ಕೌಶಿಕಿಯ ಕತೆ, ಅನಂತರ ಸ್ಕಂದನ ಚರಿತ್ರೆ, ಅಂಧಕನ ವಧ, ಸಾಧು ಉಪಾಖ್ಯಾನ, ಜಾಬಾಲಿಯ ಚರಿತ್ರ, ಅರಿಜಾ ಎಂಬ ಶುಕ್ರಾಚಾರ್ಯರ ಮಗಳ ಅತ್ಯದ್ಭುತವಾದ ಇತಿಹಾಸ, ಅಂಧಕ ಹಾಗೂ ಪರಮೇಶ್ವರರ ಯುದ್ಧ ಅಂಧಕನ ಗಣಾಂತರ್ಭಾವ, ಮರುದ್ಗಣದ ಉತ್ಪತ್ತಿ, ಬಲಿರಾಜನ ಚರಿತ್ರ ಲಕ್ಷ್ಮಿಯ ಆಗಮನದ ವೃತ್ತಾಂತ, ವಾಮನದೇವರ ಚರಿತ್ರ, ಅನಂತರ ಪ್ರಲ್ಹಾದತೀರ್ಥಯಾತ್ರಾ ಪ್ರಸಂಗ, ದುಂಧುಚರಿತ್ರ, ಪ್ರೇತೋಪಾಖ್ಯಾನ, ನಕ್ಷತ್ರ ಪುರುಷಾಖ್ಯಾನ, ತ್ರೈವಿಕ್ರಮ ಚರಿತ್ರ, ಬ್ರಹ್ಮಪ್ರೋಕ್ತಸ್ತವ, ಪ್ರಹ್ಲಾದ ಬಲಿ ಸಂವಾದ, ಸುತಲದಲ್ಲಿ ಹರಿ ಪ್ರಶಂಸನ, ಇವಿಷ್ಟು ವಾಮನ ಪುರಾಣದ ಪೂರ್ವಭಾಗದಲ್ಲಿ ಬರುವ ವಿಷಯಗಳು. ಇದರ ಮುಂದಿನ ಬೃಹದ್ವಾಮನ ಪುರಾಣ ಎಂಬ ಉತ್ತರ ಭಾಗವು ನಷ್ಟವಾದದ್ದರಿಂದ ಇದಿಷ್ಟೇ ಈಗಿನ ವಾಮನ ಪುರಾಣ ಎಂದು ಕರೆಯಿಸಿಕೊಳ್ಳಲ್ಪಡುತ್ತದೆ.

ಈ ವಾಮನ ಮಹಾಪುರಾಣದ ಕಾಲ ವಿಷಯದಲ್ಲಿ ವಿಮರ್ಶಕರು ಬೇರೆ ಬೇರೆ ಅಭಿಪ್ರಾಯ ತಳೆದಿದ್ದಾರೆ. ಪ್ರೊ. ವಿಲ್ಸನ್ ಮುಂತಾದವರು ವಾಮನ ಮಹಾಪುರಾಣವು ನಾಕ್ಕೈದುನೂರು ವರುಷಗಳ ಹಿಂದೆ ರಚಿತವಾಯಿತೆಂದು ಹೇಳಿದರೆ ಹರಪ್ರಸಾದ ಶಾಸ್ತ್ರಿಗಳು ಇದು ಅತ್ಯಂತ ಪ್ರಾಚೀನ ಎಂದರೆ ಕ್ರಿಸ್ತಶಕ ಪ್ರಾರಂಭದಲ್ಲಿ ರೂಪಗೊಂಡಿದೆ ಎಂದು ಪ್ರತಿಪಾದಿಸಿದ್ದಾರೆ ಪ್ರೊ. ಹಜರಾರವರು ಈ ಎರಡೂ ವಾದಗಳನ್ನು ಖಂಡಿಸಿ ಕ್ರಿಸ್ತಶಕದ ಒಂಬತ್ತು ಅಥವಾ ಹತ್ತನೇ ಶತಮಾನದಲ್ಲಿ ಈಗಿದ್ದ ರೂಪದಲ್ಲಿ ವಾಮನ ಮಹಾಪುರಾಣವು ನಿರ್ಮಾಣಗೊಂಡಿದೆ ಎಂದು ವಾದಿಸಿದ್ದಾರೆ. ಇವರೆಲ್ಲರ ಅಭಿಪ್ರಾಯದಲ್ಲಿಯೂ ಮೂಲ ವಾಮನ ಮಹಾಪುರಾಣವು ಅತ್ಯಂತ ಪ್ರಾಚೀನ ಎಂಬ ಅಂಶವು ಸರ್ವಸಮ್ಮತವೇ ಇದೆ. ಈಗಿದ್ದ ಪ್ರಕ್ಷೇಪ ವಿಕ್ಷೇಪ ಸಹಿತ ವಾಮನ ಮಹಾಪುರಾಣವು ಸುಮಾರು ಎರಡು ಸಾವಿರದಷ್ಟು ವರ್ಷ ಪ್ರಾಚೀನ ಎಂಬ ಹರಪ್ರಸಾದ ಶಾಸ್ತ್ರಿಗಳ ಅಭಿಪ್ರಾಯವು ನಮಗೆ ಯೋಗ್ಯವೆನಿಸುತ್ತದೆ. ಮೂಲ ವಾಮನ ಮಹಾಪುರಾಣವು ಮಾತ್ರ ಭಗವಾನ್ ವೇದವ್ಯಾಸರಿಂದ ಕಲಿಯುಗ ಪ್ರಾರಂಭದಲ್ಲಿಯೇ ಮಹಾ ಭಾರತದ ಸಮಯದಲ್ಲಿಯೇ ರಚಿತವಾಗಿದೆ. ಅನಂತರ ಅದರಲ್ಲಿ ಅನೇಕ ಅವಾಪೋದ್ವಾಪಗಳು ನಡೆದುದು ಈ ಪುರಾಣವನ್ನು ಸೂಕ್ಷ್ಮವಾಗಿ ಪರಿಶೀಲಿಸಿದವರಿಗೆ ಗೊತ್ತಾಗದೇ ಇರದು.

ಕ್ರಿಸ್ತಶಕ ಪ್ರಾರಂಭದ ಶತಕಗಳಲ್ಲಿಯೂ ನಂತರ ಎಂಟು ಒಂಭತ್ತು ಶತಮಾನಗಳಲ್ಲಿಯೂ ಪುರಾಣಗಳ ಸಂಸ್ಕರಣ ನಡೆದು ಬೇಕಾದಷ್ಟು ಸ್ಥಿತ್ಯಂತರಗಳಾಗಿವೆ. ಸ್ಕಂದ, ಮತ್ಸ್ಯ, ಅಗ್ನಿ ಪುರಾಣ ಪ್ರೋಕ್ತ ವಾಮನ ಮಹಾಪುರಾಣ ಇಂದಿಲ್ಲ. ನಾರದೋಕ್ತ ವಾಮನವೂ ಇಂದಿಲ್ಲ. ಈಗಿದ್ದ ಪುರಾಣದ ಗಾತ್ರವೂ ಅಲ್ಪವಾಗಿದೆ. ಆದುದರಿಂದಲೇ ಇದನ್ನು ಕೆಲವರು ಉಪ ಪುರಾಣವೆಂದೇ ಹೇಳುವದೂ ಉಂಟು. ಆದರೆ ಕೆಲವು ಮುಖ್ಯ ಪುರಾಣಗಳಲ್ಲಿ ಇದನ್ನು ಅಷ್ಟಾದಶವು ಮಹಾಪುರಾಣಗಳಲ್ಲಿಯೇ ಗಣಿಸಲಾಗಿದೆ. ಇದೊಂದು ಮಹಾಪುರಾಣ, ಪ್ರಾಚೀನ ಪುರಾಣವಾದುದರಿಂದಲೇ ಭಾರತ ದೇಶದ ಎಲ್ಲ ಭಾಗದ ಎಲ್ಲ ಕಾಲದ ಸ್ಮೃತಿಕಾರರೂ ನಿಬಂಧಕಾರರೂ ವೇದಾಂತಿಗಳೂ ಇದರಲ್ಲಿಯ ಪದ್ಯಗಳನ್ನು ತಮ್ಮ ಗ್ರಂಥಗಳಲ್ಲಿ ಧಾರಾಳವಾಗಿ ಉದಾಹರಿಸಿದ್ದು ಕಂಡು ಬರುತ್ತದೆ. ಯಾಜ್ಞವಲ್ಕ್ಯ ಸ್ಮೃತಿಯ ಮೇಲಿನ ತನ್ನ ಟೀಕೆಯಲ್ಲಿ ಅಪರಾರ್ಕನು

**ವಸ್ತ್ರಾನ್ನ ಸ್ವರ್ಣದಾನಾನಿ ಪ್ರೀತಯೇ ಮಧುಘಾತಿನಃ ।**
**ಮಾಘ ಮಾಸೇ ತಿಲಾ ಶಸ್ತಾಃ ತಿಲಧೇನುಶ್ಚ ದಾನವ ॥**

ಇವೇ ಮೊದಲಾದ ವಾಮನ ಮಹಾಪುರಾಣದ ತೊಂಬತ್ತೈದನೆಯ ಅಧ್ಯಾಯದಲ್ಲಿಯ ೨೩ ರಿಂದ ೨೭ ರ ವರೆಗಿನ ಪದ್ಯಗಳನ್ನು ಮತ್ತು ಇದೇ ಅಧ್ಯಾಯದ ೩೮ ರಿಂದ ೪೫ ರ ವರೆಗಿನ ಪದ್ಯಗಳನ್ನು ಪ್ರಹ್ಲಾದ ಬಲಿ ಸಂವಾದ ಭಾಗದಿಂದ ಎತ್ತಿ ಉದಾಹರಿಸಿದ್ದಾರೆ. ೨೩ ರಿಂದ ೨೭ ರ ವರೆಗಿನ ಪದ್ಯಗಳಲ್ಲಿ ಮಾಘ ಫಾಲ್ಗುಣ ಚೈತ್ರ ವೈಶಾಖ ಮಾಸಗಳಲ್ಲಿ ಕೊಡಬೇಕಾದ ದಾನ ವಸ್ತುಗಳನ್ನು ಹೇಳಲಾಗಿದೆ. ೩೮ ರಿಂದ ೪೫ ರ ವರೆಗಿನ

**''ಅಪಿನಃ ಸ್ವಕುಲೇ ಕಶ್ಚಿದ್ ವಿಷ್ಣು ಭಕ್ತೋ ಭವಿಷ್ಯತಿ**
**ಹರಿ ಮಂದಿರ ಕರ್ತಾಯೋ ವಿಷ್ಣು ಭಕ್ತೋ ಭವಿಷ್ಯತಿ''**

ಇವೇ ಮೊದಲಾದ ಪದ್ಯಗಳಲ್ಲಿ ವಿಷ್ಣು ದೇವರ ಗುಡಿ ಕಟ್ಟಿಸುವ ಮತ್ತು ದೇವಸ್ಥಾನದಲ್ಲಿ ಉಡುಗುವ, ಸಾರಣೆ ಕಾರಣೆ ದೀಪ ಏಕಾದಶೀ ಉಪವಾಸಾದಿಗಳನ್ನು ಮಾಡುವದರ ಮಹತ್ವನ್ನು ತಿಳಿಸಿ ಇಂಥ ದೇವಾಲಯದಲ್ಲಿ ಸೇವೆ ಮಾಡುವ ಸಂತಾನ ತಮ್ಮ ದಾಗಬೇಕೆಂಬ ಪಿತೃಗಳ ಅಪೇಕ್ಷೆಯನ್ನು ತಿಳಿಸಲಾಗಿದೆ. ಹೀಗೆ ಈ ವಾಮನ ಮಹಾಪುರಾಣದಲ್ಲಿಯ ಅನೇಕ ಧರ್ಮ ಆಚಾರ ನೀತಿ ಸಂಪ್ರದಾಯ ಬೋಧಕವಾದ ಮಾರ್ಮಿಕ ಪದ್ಯಗಳನ್ನು ಅನೇಕ ಸ್ಮೃತಿ ವ್ಯಾಖ್ಯಾನ ಗ್ರಂಥಕಾರರು ತಮ್ಮ ಪ್ರಬಂಧಗಳಲ್ಲಿ ಪರಮ ಪ್ರಮಾಣತ್ವೇನ ಎತ್ತಿ ಉದಾಹರಿಸಿದ್ದಾರೆ.

ಬಲ್ಲಾಳಸೇನನ ದಾನಸಾಗರದಲ್ಲಿ ಇದೇ ವಾಮನ ಪುರಾಣದ ತೊಂಬತ್ತೈದನೆಯ ಅಧ್ಯಾಯದ೭-೮-೯-೪೪-೨೩-೨೪-೨೫-೨೬-೨೭-೩೮-೩೯-೪೦-೪೧-೪೩ ಇಷ್ಟು ಪದ್ಯಗಳನ್ನು ಉದಾಹರಿಸಲಾಗಿದೆ. ದೇವನ ಭಟ್ಟನ ಸ್ಮೃತಿ ಚಂದ್ರಿಕೆಯಲ್ಲಿ ವಾಮನ ಮಹಾಪುರಾಣದ ಹದಿನಾಲ್ಕನೇ ಅಧ್ಯಾಯದ ಕರ್ಮವಿಪಾಕ ಪ್ರಕರಣದಿಂದ೪೯-೫೦-೫೧ ನೆಯ ಪದ್ಯಗಳನ್ನೂ ಮೂವತ್ತು ನಾಲ್ಕನೆ ಅಧ್ಯಾಯದ೬-೭-೮-೯ ಪದ್ಯಗಳನ್ನೂ ಹದಿಮೂರನೆಯ ಅಧ್ಯಾಯದ೩೧-೩೨ನೇ ಶ್ಲೋಕಗಳನ್ನೂ ಉದಾಹರಿಸಲಾಗಿದೆ.

ಹೇಮಾದ್ರಿಯ ಚತುವರ್ಗ ಚಿಂತಾಮಣಿಯಲ್ಲಿ ವಾಮನ ಪುರಾಣದ ಹದಿನಾಲ್ಕನೇ ಅಧ್ಯಾಯದ ೪೮-೪೯-೫೦-೫೧ ಹದಿನಾರನೇ ಅಧ್ಯಾಯದ ೩೦-೩೧-೩೨-೩೩-೩೪-೩೫ ಮತ್ತು ೫೮ ಹದಿನೇಳನೇ ಅಧ್ಯಾಯದ ೧ ಮತ್ತು ೧೧ ರಿಂದ ೨೫ ರ ವರೆಗಿನ ಪದ್ಯಗಳನ್ನೂ ಮೂವತ್ತುನಾಲ್ಕನೇ ಅಧ್ಯಾಯದ ೬-೭-೮-೯ ನೇ ಪದ್ಯಗಳನ್ನೂ ತೊಂಬತ್ತೆರಡನೇ ಅಧ್ಯಾಯದ ೫೬-೫೭-೫೮ನೇ ಪದ್ಯಗಳನ್ನೂ ತೊಂಬತ್ತೈದನೆಯ ಅಧ್ಯಾಯದ ೨೩ ರಿಂದ ೨೭ ಹಾಗೂ ೩೮ - ೪೫ ರವರೆಗಿನ ಶ್ಲೋಕಗಳನ್ನೂ ಉದಾಹರಿಸಿದ್ದಾನೆ. ಇದರಂತೆ ಶ್ರೀ ದತ್ತ ಉಪಾಧ್ಯಾಯನು ತನ್ನ ಕೃತ್ಯಾಚಾರದಲ್ಲಿಯೂ ಚಂಡೇಶ್ವರನು ತನ್ನ ಕೃತ್ಯ ರತ್ನಾಕರದಲ್ಲಿಯೂ ವಾಮನ ಮಹಾಪುರಾಣದ ಹದಿನಾಲ್ಕು ಮತ್ತು ತೊಂಬತ್ತೈದನೆಯ ಅಧ್ಯಾಯಗಳಿಂದ ಅನೇಕ ಶ್ಲೋಕಗಳನ್ನು ಎತ್ತಿಕೊಂಡಿದ್ದಾರೆ.

ವೇದಭಾಷ್ಯಕಾರರಾದ ಮಾಧವಾಚಾರ್ಯರು ಪರಾಶರ ಸ್ಮೃತಿಯ ಮೇಲಿನ ತಮ್ಮ ವ್ಯಾಖ್ಯಾನದಲ್ಲಿ ವಾಮನ ಮಹಾಪುರಾಣದ ಹದಿನಾಲ್ಕನೆಯ ಅಧ್ಯಾಯದ ೨೩-೩೫, ೩೬, ೩೭, ೪೯, ೫೦, ೯೯, ೧೦೦, ೧೦೬, ೧೦೭, ೧೦೮ನೇ ಶ್ಲೋಕಗಳನ್ನು ಉದಾಹರಿಸಿದ್ದಾರೆ.

ಇದರಂತೆ ಶೂಲಪಾಣಿಯ ''**ಶ್ರಾದ್ಧ ವಿವೇಕ**'ಪದಲ್ಲಿ ೯೫ನೇ ಅಧ್ಯಾಯದಿಂದ, ವಾಚಸ್ಪತಿ ಮಿಶ್ರನ '**ತೀರ್ಥಚಿಂತಾಮಣಿ,**' ವಿದ್ಯಾಕರ ವಾಜಪೇಯಿಯ '**ನಿತ್ಯಾಚಾರ ಪದ್ಧತಿ**' ಗೋವಿಂದಾನಂದನ '**ವರ್ಷಕ್ರಿಯಾ ಕೌಮುದಿ**' '**ಶುದ್ಧಿಕ್ರಿಯಾ ಕೌಮುದೀ**' ಗದಾಧರನ '**ಕಲಾಸಾರ**' ರಘುನಂದನ ''**ಸ್ಮೃತಿತತ್ವ**'' ನರಸಿಂಹ ವಾಜಪೇಯಿಯ '**ನಿತ್ಯಾಚಾರ ಪ್ರದೀಪ**' ಗೋಪಾಲಭಟ್ಟನ '**ಹರಿಭಕ್ತಿ ವಿಲಾಸ**' ಮುಂತಾದ ಅನೇಕ ನಿಬಂಧ ಗ್ರಂಥಗಳಲ್ಲಿಯೂ ಸ್ಮೃತಿ ವ್ಯಾಖ್ಯಾನಗಳಲ್ಲಿಯೂ ಈ ವಾಮನ ಮಹಾಪುರಾಣದ ಅನೇಕ ಪದ್ಯಗಳನ್ನು ಹೇರಳವಾಗಿ ಉದಾಹರಿಸಿದ್ದು ಕಂಡು ಬರುತ್ತದೆ. ಈ ಪುರಾಣದ ಹನ್ನೊಂದನೇ ಅಧ್ಯಾಯದಲ್ಲಿ ನರಕದ ವರ್ಣನೆ ಇದ್ದು ಹನ್ನೆರಡನೆಯ ಅಧ್ಯಾಯದಲ್ಲಿ

ಯಾವ ಪಾಪಕರ್ಮದಿಂದ ಎಂಥ ಘೋರ ನರಕವಾಗುವದೆಂಬುದನ್ನು ತಿಳಿಸಿಕೊಟ್ಟಿದ್ದಾರೆ. ಹದಿನಾಲ್ಕನೆಯ ಅಧ್ಯಾಯದಲ್ಲಿ ಸದಾಚಾರ ವರ್ಣಾಶ್ರಮ, ಧರ್ಮಕರ್ಮ, ಸರ್ವ ವರ್ಣದವರ ಕರ್ತವ್ಯ, ಮೊದಲಾದ ಅನೇಕ ಉಪಯುಕ್ತವಾದ ವಿಷಯಗಳನ್ನು ಅತ್ಯಂತ ಸರಳವಾದ ರೀತಿಯಲ್ಲಿ ಎಲ್ಲರಿಗೂ ಗಮ್ಯವಾಗುವಂತೆ ನಿರೂಪಿಸಲಾಗಿದೆ. ಮತ್ತು ಪುರಾಣದ ಕೊನೆಯ ೯೫ ನೇ ಅಧ್ಯಾಯದಲ್ಲಿ ವಿಷ್ಣು ಭಕ್ತಿ ಹಾಗೂ ಆಸ್ತಿಕರು ಮಾಡಬೇಕಾದ ಕರ್ತವ್ಯಾಂಶಗಳನ್ನು ಬೋಧಿಸಿದ್ದರಿಂದ ಪ್ರಾಯಃ ಎಲ್ಲ ನಿಬಂಧಕಾರರೂ ಈ ಅಧ್ಯಾಯದಿಂದ ಅನೇಕಾನೇಕ ಮಾರ್ಮಿಕ ಪದ್ಯಗಳನ್ನು ಎತ್ತಿ ತಮ್ಮ ಗ್ರಂಥಗಳಲ್ಲಿ ನಿರ್ದೇಶಿಸಿ ಮಾನವೀಯ ಜೀವಿತದ ಇತಿಕರ್ತವ್ಯತೆಯನ್ನು ಸಾರಿದ್ದಾರೆ. ಸದಾಚಾರ, ದೇವತಾ ಶ್ರದ್ಧೆ, ಸುಸ್ವಭಾವ, ಸೌಶೀಲ್ಯ, ಸೌಜನ್ಯ, ಪರೋಪಕಾರ, ಇಂದ್ರಿಯ ನಿಗ್ರಹ, ಯಮನಿಯಮ, ಸತ್ಯ, ಅಹಿಂಸೆ, ದಾನ, ಧರ್ಮ ಮುಂತಾದ ಒಳ್ಳೊಳ್ಳೇ ಗುಣಗಳ ಅವಶ್ಯಕತೆಯನ್ನು ಒತ್ತಿ ಹೇಳಿ ಪರಿಪೂರ್ಣ ಜೀವನವನ್ನು ಬಾಳಬೇಕೆಂದು ಈ ಪುರಾಣವು ಬೋಧಿಸುತ್ತದೆ. ಜನಪೀಡೆ, ಅಹಂಕಾರ ಸ್ವಾರ್ಥ, ಕಾಮುಕತೆ, ಉಚ್ಛೃಂಖಲ ವೃತ್ತಿ ಮುಂತಾದ ದುರ್ಗುಣಗಳಿಂದ ಅಂಧಕ ಮಹಿಷ ತಾರಕ ಮುಂತಾದ ಮಹಾ ಬಲಿಷ್ಠ ದೈತ್ಯರೂ ಕೂಡ ಎಂಥ ಅಧಃಪಾತ ಹೊಂದಿದರೆಂಬುದನ್ನು ತೋರಿ ಶ್ರದ್ಧ ಸಾತ್ವಿಕ ಜೀವನದ ಸುಗಮದಾರಿಯನ್ನೇ ಮಾನವರು ಅನುಸರಿಸಬೇಕೆಂದು ಇಲ್ಲಿಯ ದೃಷ್ಟಾಂತಗಳು ತಿಳಿಸಿ ಕೊಡುತ್ತವೆ. ಶುಕ್ರಾಚಾರ್ಯರ ಮಗಳಾದ ಅರಜೆಯ ಕಥೆ ಮಾರ್ಮಿಕವೂ ಉದ್ಬೋಧಕವೂ ಆಗಿದೆ. ಜಾಬಾಲಿ ಚಿತ್ರಾಂಗದೆ, ಸುರಥ, ದೇವವತಿ ವೇದವತಿ ದಮಯಂತಿ ಮೊದಲಾದ ಇಲ್ಲಿ ಬರುವ ಪೌರಾಣಿಕ ಪಾತ್ರಗಳು ವಿಚಿತ್ರವಾದ ವಿಪಾಕ ವಿಧಿಯ ವಿಲಾಸಗಳಿಗೆ ಜೀವಂತ ಸಾಕ್ಷಿಗಳಾಗಿ ನಿಂತು ಕೊಂಡಿವೆ.

ಈ ಎಲ್ಲ ಸಂದರ್ಭಗಳಲ್ಲಿ ಇಲ್ಲಿಯ ಉಪಾಖ್ಯಾನಗಳು ಸನ್ನಿವೇಶದ ಸತ್ವ ಹಾಗೂ ಸಾಂದರ್ಭಿಕ ರಸಾವೇಶದಿಂದ ಮೈತುಂಬಿಕೊಂಡು ಬಿಡಿ ಬಿಡಿಯಾಗಿ ನೋಡಿದರೆ ಸುಂದರ ಸಣ್ಣ ಕತೆ ಸೊಬಗನಾಂತಿವೆ. ಇಡಿಯಾಗಿ ನೋಡಿದರೆ ಒಂದು ರೋಮಾಂಚಕಾರಿ ಕಾದಂಬರಿಯ ಹುರುಳು ಹುದುವುಗೂಡಿ ಕಳೆದುಂಬಿ ನಿಂತಿವೆ. ಇಲ್ಲಿಯ ವಾಮನಾವತಾರದ ಕಥಾ ಸಂದರ್ಭದಲ್ಲಿ ದೈತ್ಯರಾಜನಾದ ಬಲಿಚಕ್ರವರ್ತಿಯ ಧೀರೋದಾತ್ತ ವ್ಯಕ್ತಿತ್ವವು ಮೂರು ಲೋಕ ವ್ಯಾಪಿಸಿದ ತ್ರಿವಿಕ್ರಮನಿಗಿಂತ ಮೂರು ಪಟ್ಟು ಮಿಗಿಲಾಗಿಯೇ ನಿಂತುಕೊಳ್ಳುತ್ತದೆ. ಜಾತಿಯಿಂದ ದೈತ್ಯನಾಗಿದ್ದರೂ ಸ್ವಭಾವದಿಂದ ಎಲ್ಲ ಮಾನವ ದಾನವ ದೇವತೆಗಳನ್ನು ಮೀರಿ ಮಹತೋಮಹೀಮನಾಗಿ ನಿಂತಿದ್ದಾನೆ. ಬಲಿಚಕ್ರವರ್ತಿ ಹಾಗೂ ಅವನ ಹೆಂಡತಿ ವಿಂಧ್ಯಾವಲಿ ಇಬ್ಬರೂ ತಮ್ಮ ಅಸಾಮಾನ್ಯ ದಾನ, ಸೌಜನ್ಯ, ಉದಾರ ಅಂತಃಕರಣಗಳಿಂದ ಅತಿ ಮಾನವ ವ್ಯಕ್ತಿಗಳಾಗಿ ಕಂಗೊಳಿಸಿದ್ದಾರೆ.

ಹೀಗೆ ಅನೇಕ ಸಂದರ್ಭಗಳಲ್ಲಿ ಕಥಾ ತಂತ್ರದ ಸಿದ್ಧಿಯೇ ಈ ಪುರಾಣ ಪ್ರಣೇತಾರರ ರಸ ಶೈಲಿಗೆ ಶರಣಾಗಿ ಸ್ವಾಧೀನವಾಗಿದೆಯೆಂದು ಹೇಳಬಹುದಾದರೂ ನಡ ನಡುವೆ ಕೆಲವು ಅತಂತ್ರ ಘಟನೆಗಳು, ಅಸಂಬದ್ಧ ಕತೆಗಳೂ, ಅನನ್ವಿತ ಸನ್ನಿವೇಶಗಳೂ ಇದೊಂದು ಕಾದಂಬರಿಯಲ್ಲ, ಪುರಾಣ ಎಂಬ ಅರಿವನ್ನು ಎಚ್ಚರದಲ್ಲಿ ಉಳಿಸುತ್ತವೆ. ಸುಕೇಶಿಯ ಕತೆ ಇಂಥ ಅಸ್ವಾಭಾವಿಕತೆಯ ಬಸಿರನಲ್ಲಿ ಉದಿಸಿ ಅಸಂಗತತೆಯ ಅಪ್ಪುಗೆಯಲ್ಲಿಯೇ

ಕೊನೆಗೊಳ್ಳುತ್ತದೆ. ಇಂಥ ಅನೇಕ ತಲೆ ಬಾಲವಿಲ್ಲದ ಆಖ್ಯಾನೋಪಾಖ್ಯಾನಗಳು ಅಲ್ಲಲ್ಲಿ ನುಸುಳಿ ಇದು ಕಾಲ್ಪನಿಕ ಕಥಾಕೋಶವಲ್ಲ. ನಿಜಜೀವನದ ವಿಷಮ ಪರಿಸ್ಥಿತಿಯ ಯಥಾರ್ಥ ಪಡಿನೆಳಲು ಎಂಬುದನ್ನು ಎತ್ತಿ ತೋರಿಸಿ ಬದುಕಿನ ಭೀಷಣ ಬಂಧುರತೆಯನ್ನೂ ಬಾಳಿನ ಒಗರು ಹೊಗರುಗಳನ್ನೂ ಮನಗಾಣಿಸಿಕೊಡುತ್ತದೆ. ವಾಮನ ಮಹಾಪುರಾಣದ ಶೈಲಿಯು ಪ್ರಸಾದ ಭೂಯಿಷ್ಠವೂ ಸರಳ ಸುಂದರವೂ ಆಗಿದೆ. ಇದರ ಪ್ರವಾಹಿ ಸರಣಿಯು ಒಮ್ಮೊಮ್ಮೆ ಭಾವಾನುಗುಣವಾಗಿ ಕಾವ್ಯದ ಕಾವು ಕೆಚ್ಚು ಪಡೆದು ಅಂದ ಚಂದದ ಛಂದೋ ಬಂದವನ್ನು ಹೊಂದಿ ಒಮ್ಮೆಲೆ ಪುರಾಣ ಪ್ರಪಂಚದಿಂದ ರಸಲೋಕಕ್ಕೆ ಇಳಿದು ಬಿಡುತ್ತದೆ. ಆಗ ನಾವು ಓದುಗರು ಇದು ಏನು ಪುರಾಣವೋ ಅಥವಾ ನವರಸಭರಿತ ಕಾವ್ಯವೋ ಎನ್ನುವಂತಾಗುತ್ತದೆ. ಈ ಪುರಾಣ ಪ್ರಾರಂಭದಲ್ಲಿ ಎರಡನೆಯ ಅಧ್ಯಾಯದಲ್ಲಿ ಬರುವ ಒಂದು ಶರತ್ಕಾಲದ ವರ್ಣನೆಯನ್ನು ಕೇಳಿರಿ.

ವಿಕಾಸಮಾಯಾಂತಿ ಚ ಪಂಕಜಾನಿ ।
ಚಂದ್ರಾಂಶವೋ ಭಾಂತಿ ಲತಾಃ ಸುಪುಷ್ಪಾಃ ॥

ನಂದಂತಿ ಕೃಷ್ಣಾನ್ಯಪಬಿ ಗೋಕುಲಾನಿ ।
ಸಂತಶ್ಚ ಸಂತೋಷ ಮನುವ್ರಜಂತಿ ॥

ಸರಸ್ಸು ಪದ್ಮಂ ಗಗನೇ ಚ ತಾರಕಾಃ ।
ಜಲಾಶಯೇಷ್ವೇವ ತಥಾ ಪಯಾಂಸಿ ॥

ಸತಾಂ ಚ ಚಿತ್ತಂ ಹಿ ದಿಶಾಂ ಮುಖೈಃ ಸಮಂ ।
ವೈಮಲ್ಯ ಮಾಯಾಂತಿ ಶಶಾಂಕಕಾಂತಯಃ ॥

ಇಂಥ ರಸಾಲ ಶೈಲಿಯ ಕಾವ್ಯಮಯ ಬಣ್ಣನೆ ಹಾಗೂ ಸನ್ನಿವೇಶ ನಿರೂಪಣೆಗಳನ್ನು ಈ ಪುರಾಣದ ಉದ್ದಕ್ಕೂ ನಾವು ನೋಡಬಹುದು. ಭಾಗವತ ವಿಷ್ಣು ಪುರಾಣಗಳ ನಂತರ ಒಳ್ಳೇ ಪ್ರವಾಹಿಶೈಲಿ, ಪ್ರಾಸಾದಿಕವಾಣಿ ಕಲ್ಪನಾ ಸೌಂದರ್ಯಗಳಿಗೆ ವಾಮನ ಮಹಾಪುರಾಣವೇ ಆಗರವಾಗಿದೆ. ಅಲ್ಲಲ್ಲಿ ಈಗಿನ ದೃಷ್ಟಿಯಿಂದ ಅಪಾಣಿನೀಯ ಎನಿಸಬಹುದಾದ ಕೆಲವು ಅಸಾಧು ಶಬ್ದ ಪ್ರಯೋಗಗಳು ಕ್ವಚಿತ್ತಾಗಿ ಕಂಡು ಬಂದರೂ ಒಟ್ಟಾರೆ ಇಲ್ಲಿಯ ಸಂಸ್ಕೃತ ಭಾಷೆಯು ನಿರರ್ಗಲವಾಗಿ ನಾಗಾಲೋಟದಿಂದ ಸಾಗಿ ಘಟನಾವಳಿಗಳನ್ನು ಬಿಚ್ಚುತ್ತ ಹೋಗುತ್ತದೆ. ಕಥಾ ಸಂಯೋಜನೆಯಲ್ಲಿ ಕೆಲವು ಕಡೆ ಬಿಗುವು ಇಲ್ಲದೇ ಎಷ್ಟೋ ಇಲ್ಲಿಯ ವೃತ್ತಾಂತ ಆಖ್ಯಾನಗಳ ಬಿತ್ತರಣೆಯಲ್ಲಿ ಶೈಥಿಲ್ಯ ತಲೆ ತೋರಿದ್ದರೂ ನುಡಿಯ ನಡಿಗೆಯಲ್ಲಿ ಮಾತ್ರ ಎಲ್ಲಿಯೂ ಕುಂಟುವ ಅಥವಾ ಕುಂಠಿಸುವ ಪ್ರಸಂಗವು ಬಂದಿಲ್ಲ. ಈ ಪುರಾಣದಲ್ಲಿ ವಿಮರ್ಶಕ ದೃಷ್ಟಿಗೆ ತೋರಿ ಬಂದ ದೋಷಗಳಿಗೆಲ್ಲ ಇದರಲ್ಲಿ ಆಗೀಗ ನಡೆದ ಹಾರಿಕೆ ತೂರಿಕೆಗಳೇ ಕಾರಣ. ಆದರಲ್ಲಿ ಏನಾದರೂ ಗುಣ ಕಂಡರೆ ಅದು ವ್ಯಾಸವಾಣಿಯ ಪುಣ್ಯ ಪ್ರಸೂತ ಎಂದು ತಿಳಿಯಬೇಕು. ಇದರಲ್ಲಿ

ಅನೇಕ ನೀತಿ ವಚನಗಳೂ ಸುಭಾಷಿತಗಳೂ ಅತ್ಯಂತ ಉಪಯುಕ್ತವಿದ್ದು ಅವುಗಳನ್ನು ಅರ್ಥ ಸಹಿತವಾಗಿಯೇ ಈ ಪುಸ್ತಕದಲ್ಲಿ ಕೊಡಲಿಕ್ಕೆ ಪ್ರಯತ್ನಿಸಲಾಗಿದೆ.

ಕನ್ನಡಕ್ಕೆ ನಾವು ಈ ವಾಮನ ಮಹಾಪುರಾಣವನ್ನು ಭಾಷಾಂತರಿಸುವ ಮೊದಲು ವೆಂಕಟೇಶ್ವರ ಪ್ರೆಸ್, ಬಾಂಬೆ ಇವರು ಪ್ರಕಟಿಸಿದ ವಾಮನ ಮಹಾಪುರಾಣ ಮತ್ತು ಕಲಕತ್ತಾದಲ್ಲಿ ಪಂಚಾನನ ತರ್ಕರತ್ನರು ಪರಿಶೋಧಿಸಿ ವಂಗವಾಸಿ ಪ್ರೆಸ್ಸಿನಲ್ಲಿ ಮುದ್ರಿಸಿ ಪ್ರಕಟಿಸಿದ ಪ್ರತಿಯನ್ನೂ ಹಾಗೂ ಕಲಕತ್ತೆಯ ಕ್ಲಾಯಮ್ ರೋಡಿನಲ್ಲಿ ಮನಸುಖ ರಾವ ಮೋರ ಎಂಬವರು ಪ್ರಕಟಿಸಿದ ವಾಮನ ಪುರಾಣವನ್ನು ಮೈಸೂರಿನ ಅರಮನೆಯ ಪ್ರಕಟಣೆಯ ಪ್ರತಿಯನ್ನೂ ಹಿಂದಿನ ಮುಧೋಳ ಮಹಾರಾಜರ ವಾಚನಾಲಯದಲ್ಲಿಯ ಒಂದು ಲಿಖಿತ ತಾಡವಾತಿಯ ಪ್ರತಿಯನ್ನು ಕುಂಭಕೋಣದ ಕೃಷ್ಣಾಚಾರ್ಯರ ಮನೆಯಲ್ಲಿಯ ತಮಿಳು ಲಿಪಿಯ ಒಂದು ಪ್ರತಿಯನ್ನೂ ಕಾಪಿ ಮಾಡಿ ಕೂಡಿಸಿ ನಂತರ ಅನೇಕ ಪಂಡಿತರಿಂದ ಪರಿಶೋಧಿಸಿ ಈ ಕನ್ನಡ ಭಾಷಾಂತರವನ್ನು ಮಾಡಲಾಗಿದೆ.

ಈ ವಾಮನ ಮಹಾಪುರಾಣದ ಕನ್ನಡ ಭಾಷಾಂತರ ಕಾರ್ಯದಲ್ಲಿ ಬಾಗಲಕೋಟೆಯ ಪಂ. ಕೃಷ್ಣಾಚಾರ್ಯ ಜೋಶಿ, ಅನಂತರ ತಡಸ, ಮೈಸೂರಿನ ಕೀಂ ಘಟ್ಟಂ ವೆಂಕಟರಮಣಚಾರ್ಯ, ಪೂಜ್ಯ ಪಂಡಿತ ಗಲಗಲಿ, ಅಣಯ್ಯಾಚಾರ್ಯ, ಜೆ.ಪಿ. ಗೋಪೀನಾಥಚಾರ್ಯ, ಸೌ. ಭಾಗ್ಯವತೀ ದೇವಿ, ಕುಮಾರಿ ವಾಣೀ ಗಲಗಲಿ ಬಿ.ಎ. ಮುಂತಾದ ಅನೇಕ ಜನರು ಸಹಕಾರ ನೀಡಿದ್ದಾರೆ. ಇವರೆಲ್ಲರಿಗೂ ನನ್ನ ಕೃತಜ್ಞತಾ ಪೂರ್ವಕವಾದ ಧನ್ಯವಾದಗಳನ್ನು ಅರ್ಪಿಸುತ್ತೇನೆ ಅದರಲ್ಲಿಯೂ ಕೊನೆಯ ನೂರಾರು ಪುಟಗಳ ಪೂರ್ಣಾ ಲೇಖನ ಭಾರ ವಹಿಸಿದ ಪಂ. ಶ್ರೀ ಕೆ.ಟಿ. ಜೋಶಿಯವರಿಗೆ ನಾನು ಅತ್ಯಂತ ಆಭಾರಿಯಾಗಿದ್ದೇನೆ.

ಕೈಬರಹದ ತಾಡವಾಲೆ ಹಾಗೂ ಮುದ್ರಿತ ವಾಮನ ಮಹಾಪುರಾಣದ ಮೂಲ ಗ್ರಂಥದ ಸಂಶೋಧನೆ, ಪ್ರತಿ ಲಿಪೀಕರಣ, ಪಾಠಾಂತರ ಪರಿಶೀಲನೆ, ಪರಾವರ್ತನಾದಿ ಕಾರ್ಯಗಳಲ್ಲಿ ಸಂಪೂರ್ಣ ನೆರವನ್ನಿತ್ತ ಕೇ. ರಂಗನಾಥಾಚಾರ್ಯ ಬಾಳುಭಟ್ಟ ವಾಳುಂಬೆ, ಅನಂತರಾಮಶಾಸ್ತ್ರಿ, ಸುಬ್ಬಾಭಟ್ಟ ಜೋಯ್ಸ, ಕೃಷ್ಣಚಂದ್ರ ದ್ವಿವೇದಿ, ಮಧ್ವಾಚಾರ್ಯಆಧ್ಯ, ಮೊದಲಾದ ಸಂಸ್ಕೃತ ಪಂಡಿತರಿಗೆ ಪ್ರಣಾಮ ಸಲ್ಲಿಸುವೆವು.

**18 – 2 – 2004** *ಪಂಢರೀನಾಥಾಚಾರ್ಯ ಗಲಗಲಿ*

# ಕೃತಜ್ಞತಾ ಸಮರ್ಪಣೆ

ಸಂಸ್ಕೃತದಲ್ಲಿ ಒಂದು ಸುಭಾಷಿತವಿದೆ.

**ಶತೇಷು ಜಾಯತೇ ಶೂರಃ ಸಹಸ್ರೇಷು ಚ ಪಂಡಿತಃ।**

**ವಕ್ತಾ ದಶಸಹಸ್ರೇಶು ದಾತಾ ಭವತಿ ವಾ ನ ವಾ ॥**

ನೂರು ಜನರಲ್ಲಿ ಒಬ್ಬನು ಶೂರನಿರುತ್ತಾನೆ. ಸಾವಿರ ಜನರಲ್ಲಿ ಒಬ್ಬನು ಪಂಡಿತನಿರುತ್ತಾನೆ. ಹತ್ತುಸಾವಿರ ಜನರಲ್ಲಿ ಒಬ್ಬನು ವಾಕ್ ಚತುರನಿರುತ್ತಾನೆ. ಆದರೆ ಕೊಡುಗೈ ದಾನಿಯು ಎಲ್ಲಿಯಾದರೂ ಇರುವನೋ ಅಥವಾ ಇಲ್ಲವೋ!

ಈ ಸುಭಾಷಿತಕಾರನ ಸಂದೇಹಕ್ಕೆ ಸಮಂಜಸ ಉತ್ತರವೆಂದರೆ ಬೆಂಗಳೂರಿನ ಸುಪ್ರಸಿದ್ಧ ಉದ್ಯಮಿಗಳಾದ ಹಾಗೂ ಸ್ವತಃ ಪಂಡಿತರಾದ ಶ್ರೀಹರಿಖೋಡೆಯವರು. ಹತ್ತುಸಾವಿರ ಸಿರಿವಂತರಲ್ಲಿ ಒಬ್ಬರಿಗೂ ಇರದಿರುವ ವಾಕ್‌ಚಾತುರ್ಯ, ಕವಿತ್ವಕೌಶಲ್ಯ ಇವರ ಸೊತ್ತಾಗಿದೆ. ಒಂದು ಗಾಯತ್ರೀ ಹೋಮ ಮಾಡಿಸಿದರೆ ಅದೊಂದು ಅಭೂತಪೂರ್ವವಾದ **'ನ ಭೂತೋ ನ ಭವಿಷ್ಯತಿ'** ಎನ್ನುವಂಥ ಮಹಾಕಾರ್ಯವಾಗಿತ್ತು. ಅದರ ವೈಭವ ಪೂರ್ಣವಾದ ಆಚರಣೆಯ ನೆನಪು ಬೆಂಗಳೂರು ನಾಗರಿಕರಲ್ಲಿ ಹಚ್ಚಹಸಿರಾಗಿಯೇ ಇದೆ.

ಮುಖ್ಯವಾಗಿ ಕೂರ್ಮಪುರಾಣವೇ ಮೊದಲಾದ ಶ್ರೀ ವೇದವ್ಯಾಸ ರಚಿತ ಹದಿನೆಂಟೂ ಪುರಾಣಗಳ ಕನ್ನಡ ಅನುವಾದ ಗ್ರಂಥಗಳ ಸುಂದರ ಮುದ್ರಣ ಮತ್ತು ಪ್ರಕಾಶನದ ಬಹುದೊಡ್ಡ ಭಾರವನ್ನು, ಕೂರ್ಮರೂಪಿ ಶ್ರೀಹರಿಯು ತನ್ನ ಬೆನ್ನಮೇಲೆ ಮಂದರಪರ್ವತವನ್ನು ಹೊತ್ತಂತೆ, ಶ್ರೀಹರಿಯವರೂ ಹೊತ್ತಿದ್ದಾರೆ. ನನ್ನ ಮೇಲಿನ ಭಾರವನ್ನು ಕಡಿಮೆ ಮಾಡಿ ನಾನು ನಿರಂತರ ಪುರಾಣಗ್ರಂಥಗಳ ಸಂಶೋಧನೆ ಪರಿಶೀಲನ ಅನುವಾದನ ಮುದ್ರಣಾದಿ ಕಾರ್ಯಗಳನ್ನು ನಿಶ್ಚಿಂತೆಯಿಂದ ಮಾಡಲು ಸರ್ವವಿಧ ಸೌಲಭ್ಯ ಸೌಕರ್ಯಗಳನ್ನು ಒದಗಿಸಿಕೊಡುತ್ತಿದ್ದಾರೆ.

ಶ್ರೀಹರಿಖೋಡೆಯವರ ಇನ್ನೊಂದು ಅಪೂರ್ವವಾದ ವೈಶಿಷ್ಟ್ಯ, ಅವರೊಬ್ಬ ಶ್ರೀಹರಿಯ ಪರಮಭಕ್ತರು, ಮಹಾಕವಿಗಳು. ದೇವರ ಮೇಲೆ ಅವರು ಭಾವಪೂರ್ಣವಾದ ಅನೇಕ ಹಾಡುಗಳನ್ನು, ಸುಶ್ರಾವ್ಯವಾದ ಕಾವ್ಯಗಳನ್ನೂ ಸ್ವಂತ ರಚಿಸಿದ್ದಾರೆ. ಶ್ರೀಹರಿಯ ಅಂಕಿತದಿಂದ ಅಲಂಕೃತವಾದ ಈ ಪದ್ಯಗಳು ಪುರಂದರದಾಸ, ಕನಕದಾಸ, ಜಗನ್ನಾಥದಾಸ ರಂಥ ದಾಸಕೂಟ ಧುರೀಣರ ಭಕ್ತಿಪರ ಹಾಡುಗಬ್ಬಗಳ ಹೆದ್ದಾರಿಯಲ್ಲಿ ಇರಿಸಿದ ಹೆಜ್ಜೇನಿನ ಹೆಜ್ಜೆಗಳಾಗಿವೆ. ಅನುಭವಿ ಸಂತ ಶರೀಫಸಾಹೇಬರ ಪ್ರಭಾವಲಯದ ಪ್ರಭಾವಿ ಪರಿಧಿಯಲ್ಲಿ ಚಂಕ್ರಮಣ-ಸಂಕ್ರಮಣ ಗೈಯುವ ಶ್ರೀಹರಿಖೋಡೆಯವರ ಆಡುನುಡಿಯ ತಾಳಲಯ ಬದ್ಧವಾದ ಹಾಡುಗಳು ಕೇಳುಗರ ಹೃದಯನಾಡಿಗಳನ್ನು ಮಿಡಿಯುತ್ತವೆ.

ಸ್ವತಃ ಸಿವಿಲ್ ಇಂಜಿನಿಯರಿಂಗ್ ಪದವಿ ಪಡೆದಿರುವ ಶ್ರೀಹರಿಖೋಡೆಯವರೇ ಬೆಂಗಳೂರಿನಲ್ಲಿ ಅತ್ಯಾಧುನಿಕ ಕಂಪ್ಯೂಟರ್ ಭವನವನ್ನು ನಿರ್ಮಿಸಿದ್ದಾರೆ. ಪಾಶ್ಚಾತ್ಯ ದೇಶಗಳಲ್ಲಿನ ಕಂಪ್ಯೂಟರ್ ಭವನಗಳನ್ನು ಸ್ವತಃ ಭೇಟಿ ಮಾಡಿ, ಆ ಎಲ್ಲಾ ಭವನಗಳ ವಿನ್ಯಾಸದಲ್ಲಿನ ನ್ಯೂನತೆಗಳನ್ನು ಪರಿಶೀಲಿಸಿ, ಮನಗಂಡು ಹಾಗೂ ಅನುಕೂಲತೆಗಳನ್ನು ಮೆಚ್ಚಿ ಆಯಾ ಕಂಪ್ಯೂಟರ್ ಭವನಗಳ ಪಾಶ್ಚಾತ್ಯ ವಿನ್ಯಾಸಕರಲ್ಲಿ ಚರ್ಚಿಸಿ, ಶ್ರೀಹರಿಖೋಡೆಯವರೇ

ವಿನ್ಯಾಸಮಾಡಿರುವ ಹಾಗೂ ತಾವೇ ಖುದ್ದು ನಿಂತು ಕಟ್ಟಿಸಿರುವ ಖೋಡೇ ಕಾಂಟ್ಯಾಕ್ಟ್ ಸೆಂಟರ್ ಎಂಬ ಕಂಪ್ಯೂಟರ್ ಭವನದಲ್ಲಿ ಒಂದು ಸಾವಿರ ಕಂಪ್ಯೂಟರ್ ಇಂಜಿನಿಯರುಗಳು, ವಿಜ್ಞಾನಿಗಳು ಅಹೋರಾತ್ರಿ ಕೆಲಸ ಮಾಡುತ್ತಿದ್ದಾರೆ. ಅದಕ್ಕಾಗಿ ನಮ್ಮ ಹಾಗೂ ಅವರ ಕುಲಸ್ವಾಮಿಯಾದ ಶ್ರೀ ಪಾಂಡುರಂಗ ವಿಠಲದೇವರು ಅವರಿಗೂ, ಅವರ ಕುಟುಂಬ ಪರಿವಾರಕ್ಕೂ ಆಯುಷ್ಯ, ಆರೋಗ್ಯ, ಐಶ್ವರ್ಯ, ವಿಜಯ ವೀರ್ಯ ಸೌಭಾಗ್ಯಗಳನ್ನು ದಯಪಾಲಿಸಿ ಕರುಣೆಯಿಂದ ಕೈಹಿಡಿದು ಕಾಪಾಡಲಿ ಎಂದು ಪ್ರಾರ್ಥಿಸುತ್ತೇನೆ.

ಈ ದ್ವಿತೀಯ ಮುದ್ರಣವನ್ನು ಅತ್ಯಂತ ಶ್ರದ್ಧೆಯಿಂದ ಬಹಳ ಅಚ್ಚುಕಟ್ಟಾಗಿ ಮುದ್ರಿಸಿರುವ **ಶ್ರೀ ವೆಂಕಟೇಶ್ವರ ಪ್ರಿಂಟರ್ಸ್**, ನಂ. 3, ಯಲ್ಲಪ್ಪ ರಸ್ತೆ, ಚಿಕ್ಕಮಾವಳ್ಳಿ (ಸುಶೀಲ ರಸ್ತೆ ಕ್ರಾಸ್) ಬೆಂಗಳೂರು-560 004 ಇದರ ಮಾಲೀಕರಾದ **ಮುದ್ರಣಪ್ರಶಸ್ತಿ ವಿಜೇತ ಕೆ. ವಿ. ಸತ್ಯನಾರಾಯಣ ಮತ್ತು ಕುಟುಂಬದವರಿಗೆ** ಹಾಗೂ ಶ್ರೀಮತಿ ಮತ್ತು ಶ್ರೀ ಎಂ. ಮಂಜುನಾಥ್‌ರವರಿಗೆ ಶ್ರೀ ಲಕ್ಷ್ಮೀವೆಂಕಟೇಶ್ವರ ಸ್ವಾಮಿಯು ಸಕಲ ಸನ್ಮಂಗಳವನ್ನು ದಯಪಾಲಿಸಲಿ. ಮುದ್ರಣ ಕಾರ್ಯದಲ್ಲಿನ ಅವರ ಮುವತ್ತು ವರ್ಷದ ಅನುಭವ ಹಾಗೂ ಈಗಿನ ಕಂಪ್ಯೂಟರ್ (ಡಿ.ಟಿ.ಪಿ.) ಅಕ್ಷರ ಜೋಡಣೆಯ ಅನುಕೂಲತೆಯ ಜೊತೆ, ಮಾಡುವ ಪ್ರತಿ ಕೆಲಸದಲ್ಲಿನ ವೈಯಕ್ತಿಕ ಶ್ರದ್ಧೆ ಮತ್ತು ಮುದ್ರಣ ಮಾಡುವ ಎಲ್ಲಾ ಕೆಲಸಗಳು ಅಚ್ಚುಕಟ್ಟಾಗಿರಬೇಕೆಂಬ ಸಂಕಲ್ಪದಿಂದ ಈ ಗ್ರಂಥ ಮುದ್ರಣ ಮಾಡಿದ್ದಾರೆ. ರಕ್ಷಾಪುಟ ವಿನ್ಯಾಸವನ್ನು ಕಲಾವಿದರಾದ ಶ್ರೀ ಎಂ. ಮೋಹನ್, ತ್ಯಾಗರಾಜ ನಗರ, ಬೆಂಗಳೂರು ರವರು ಬಹಳ ಶ್ರದ್ಧೆಯಿಂದ ಅಚ್ಚುಕಟ್ಟಾಗಿ ಬರೆದಿದ್ದಾರೆ. ಶ್ರೀ ಪಾಂಡುರಂಗ ವಿಠಲದೇವರು ಅವರಿಗೂ, ಅವರ ಕುಟುಂಬ ಪರಿವಾರಕ್ಕೂ ಆಯುಷ್ಯ, ಆರೋಗ್ಯ, ಐಶ್ವರ್ಯ, ವಿಜಯ ವೀರ್ಯ ಸೌಭಾಗ್ಯಗಳನ್ನು ದಯಪಾಲಿಸಿ ಕರುಣೆಯಿಂದ ಕೈಹಿಡಿದು ಕಾಪಾಡಲಿ ಎಂದು ಪ್ರಾರ್ಥಿಸುತ್ತೇನೆ.

ಈ ಎಲ್ಲಾ ಪುರಾಣ ಪುಸ್ತಕಗಳ ಕರಡು ಪ್ರತಿ ತಿದ್ದುವಿಕೆ (ಪ್ರೂಫ್ ಕರೆಕ್ಷನ್) ಕಾರ್ಯವನ್ನು ಶ್ರೀಯುತ ಸಿ.ಹೆಚ್. ಬದ್ರಿಆಚಾರ್‌ರವರು ಅತ್ಯಂತ ಜವಾಬ್ದಾರಿ, ಜಾಗೂರಕತೆಯಿಂದ ಯಶಸ್ವಿಯಾಗಿ ನಿರ್ವಹಿಸಿದ್ದಾರೆ. ಶ್ರೀ ಪಾಂಡುರಂಗ ವಿಠಲದೇವರು ಅವರಿಗೂ, ಅವರ ಕುಟುಂಬ ಪರಿವಾರಕ್ಕೂ ಆಯುಷ್ಯ, ಆರೋಗ್ಯ, ಐಶ್ವರ್ಯ, ವಿಜಯ ವೀರ್ಯ ಸೌಭಾಗ್ಯಗಳನ್ನು ದಯಪಾಲಿಸಿ ಕರುಣೆಯಿಂದ ಕೈಹಿಡಿದು ಕಾಪಾಡಲಿ ಎಂದು ಪ್ರಾರ್ಥಿಸುತ್ತೇನೆ.

ಮುಖ್ಯವಾಗಿ ನನ್ನನ್ನು ಕೈಗಾರಿಕೋದ್ಯಮಿ ಎಲ್. ಶ್ರೀಹರಿಖೋಡೆಯವರಿಗೆ ಪರಿಚಯಿಸಿ, ಅವರಿಗೆ ಈ ಕಾರ್ಯದ ಮಹತ್ವ, ಅವಶ್ಯಕತೆಗಳನ್ನು ತಿಳಿಸಿ ಅವರಿಂದ ಪುರಾಣ ಪ್ರಕಾಶನಕ್ಕೆ ಪರ್ಯಾಪ್ತವಾದ ಸಹಾಯಧಾರೆ ಹರಿದುಬರುವಂತೆ ಮಾಡಿದ ಶ್ರೀ ಅನಂತರಾವ್ ಮತ್ತು ಕುಟುಂಬದವರಿಗೂ ನಾನು ಆಭಾರಿಯಾಗಿದ್ದೇನೆ. ಈ ಗ್ರಂಥ ಪಠಿಸುವವರಿಗೆಲ್ಲಾ ಶ್ರೀಹರಿಯು ಸಕಲ ಸನ್ಮಂಗಳವನ್ನು ದಯಪಾಲಿಸಲಿ ಎಂದು ಆಶಿಸುತ್ತೇನೆ.

ಮಹಾಮಹೋಪಾಧ್ಯಾಯ

18-2-2004 **ಪಂಢರೀನಾಥಾಚಾರ್ಯ ಗಲಗಲಿ**

ಹುಬ್ಬಳ್ಳಿ ಶಾಂತಿ ಕಾಲೋನಿ, ವಿಶ್ವೇಶ್ವರನಗರ, ಹುಬ್ಬಳ್ಳಿ-580 032

# ವಿಷಯಾನುಕ್ರಮಣಿಕೆ

—o—

ಶ್ರೀ ವಾಮನಾಯ ನಮೋನಮಃ
ಶ್ರೀ ವೇದವ್ಯಾಸ ಪ್ರಣೀತಂ

# ವಾಮನ ಮಹಾಪುರಾಣ

ಮೇಘನಿವಾಸ

## ಅಧ್ಯಾಯ - ೧

**ತ್ರೈಲೋಕ್ಯ ರಾಜ್ಯಮಾಚ್ಛಿದ್ಯ ಬಲೇರಿಂದ್ರಾಯ ಯೋ ದದೌ ।**
**ನಮಸ್ತಸ್ಮೈ ಸುರೇಶಾಯ ಸದಾ ವಾಮನರೂಪಿಣೇ ॥**

ಬಲಿ ಚಕ್ರವರ್ತಿಯ ಅಧೀನದಲ್ಲಿರುವ ಮೂರು ಲೋಕದ ಆಧಿಪತ್ಯವನ್ನು ಅವನಿಂದ ಕಸಿದು ದೇವೇಂದ್ರನಿಗೆ ಕೊಟ್ಟ ವಾಮನ ರೂಪಿಯಾದ ದೇವತೆಗಳ ಒಡೆಯನಿಗೆ ನಮಸ್ಕಾರ.

ಪುಲಸ್ತ್ಯ ಋಷಿ ತನ್ನ ಆಶ್ರಮದಲ್ಲಿ ಕುಳಿತುಕೊಂಡಿದ್ದ. ಮಾತು ಬಲ್ಲ-ಬಲ್ಲವರಲ್ಲಿ ಆ ಮುನಿಯು ಶ್ರೇಷ್ಠ. ಆಗ ನಾರದರು ಅಲ್ಲಿಗೆ ಬಂದರು. ವಾಮನದೇವರ ಬಗೆಗಿರುವ ಪುರಾಣವನ್ನು ಹೇಳಬೇಕೆಂದು ಕೇಳಿಕೊಂಡರು.

**೧. ಪುಲಸ್ತ್ಯಮೃಷಿಮಾಸೀನಮಾಶ್ರಮೇ ವಾಗ್ವಿದಾಂ ವರಂ ।**
**ನಾರದಃ ಪರಿಪಪ್ರಚ್ಛ ಪುರಾಣಂ ವಾಮನಾಶ್ರಯಮ್ ॥**

''ಪೂಜ್ಯರೇ, ಸರ್ವಸಮರ್ಥನಾದ ಭಗವಾನ್ ಶ್ರೀ ವಿಷ್ಣುವು ವಾಮನ ರೂಪವನ್ನು ಹಿಂದೆ ಏಕೆ ಧರಿಸಿದನು ? ಅದನ್ನು ನನಗೆ ಕೇಳಬೇಕಾಗಿದೆ ಹೇಳಿರಿ.

ದೈತ್ಯಶ್ರೇಷ್ಠನಾದ ಪ್ರಲ್ಹಾದನು ದೇವತೆಗಳ ಜೊತೆಗೆ ಹೇಗೆ ಯುದ್ಧ ಮಾಡಿದನು! ನನಗೆ ಇದೊಂದು ದೊಡ್ಡ ಸಂಶಯ ಬಂದಿದೆ. ವಿಪ್ರೋತ್ತಮ, ದಕ್ಷಪ್ರಜಾತಿಯ ಮಗಳಾದ ಸತೀದೇವಿಯು ಶಂಕರನ ಮೆಚ್ಚಿನ ಮಡದಿಯು ಆಗಿದ್ದಳೆಂದು ನಾನು ಕೇಳಿದ್ದೇನೆ. ಆ ಚೆಲುವೆಯು ತನ್ನ ದೇಹವನ್ನು ಬಿಟ್ಟಿದ್ದೇಕೆ? ಮಹಾತ್ಮನಾದ ಹಿಮಾಲಯನ ಮನೆಯಲ್ಲಿ ಮಗಳಾಗಿ ಹುಟ್ಟಿದ್ದೇಕೆ?

ಅವಳು ಮತ್ತೆ ದೇವದೇವನಾದ ಶಿವನ ಹೆಂಡತಿಯಾದಳಂತೆ. ಇದೆಲ್ಲ ಏನು ಅವಾಂತರ ? ನನ್ನ ಈ ಸಂಶಯವನ್ನು ಹೋಗಲಾಡಿಸಿರಿ. ನೀವು ಇದೆಲ್ಲವನ್ನೂ ಅರಿತು ಬಲ್ಲವರೆಂದು ನಾನು ತಿಳಿದಿದ್ದೇನೆ. ಮತ್ತು ಸಜ್ಜನ ಶ್ರೇಷ್ಠರೇ, ತೀರ್ಥಗಳ ಮಹಿಮೆಯನ್ನು ತಿಳಿಸಿರಿ. ದಾನಗಳ ಮಹತಿಯನ್ನೂ ರೀತಿಯನ್ನೂ ಹೇಳಿರಿ. ಬಗೆ-ಬಗೆಯ ವ್ರತಗಳನ್ನು ಆಚರಿಸುವ ವಿಧಿವಿಧಾನಗಳನ್ನೂ ನನಗೆ ಬಿತ್ತರಿಸಿರಿ.''

ನಾರದರು ಇಂತು ಬಿನ್ನಹ ಮಾಡಿಕೊಂಡ ಬಳಿಕ ಮುನಿಪುಂಗವರಾದ ಪುಲಸ್ತ್ಯರು ತಪೋನಿಧಿ ನಾರದರನ್ನು ಕುರಿತು ಹೇಳತೊಡಗಿದರು.

೩. ಪುರಾಣಂ ವಾಮನಂ ವಕ್ಷ್ಯೇ ಕ್ರಮಾನ್ನಿಖಿಲಮಾದಿತಃ ।
ಅವಧಾನಂ ಸ್ಥಿರಂ ಕೃತ್ವಾ ಶೃಣುಷ್ವ ಮುನಿಸತ್ತಮ ॥

ಮುನಿಶ್ರೇಷ್ಠ, ವಾಮನ ಪುರಾಣವನ್ನು ನಿಮಗೆ ಮೊದಲಿನಿಂದ ತುದಿಯವರೆಗೆ ನಾನು ಸಂಪೂರ್ಣವಾಗಿ ಕ್ರಮ ಪ್ರಕಾರ ಹೇಳುತ್ತೇನೆ. ಚಿತ್ತವಿಟ್ಟು ಆಲಿಸು.

೪. ಪುರಾ ಹೈಮವತೀ ದೇವೀ ಮಂದರಸ್ಥಂ ಮಹೇಶ್ವರಂ ।
ಉವಾಚ ವಚನಂ ದೃಷ್ಟ್ವಾ ಗ್ರೀಷ್ಮಕಾಲಮುಪಸ್ಥಿತಂ ॥

ಪೂರ್ವಕಾಲದಲ್ಲಿ ಮಹಾದೇವನು ಮಂದಾರ ಪರ್ವತದಲ್ಲಿ ನೆಲೆಸಿದ್ದನು. ಆಗ ಬೇಸಿಗೆಯ ಕಾಲ ಬಂದಿತು. ಅದನ್ನು ಕಂಡು ಅವನ ಮಡದಿ ಹೈಮವತಿಯು ಇಂತು ನುಡಿದಳು.

೫. ಗ್ರೀಷ್ಮಃ ಪ್ರವೃತ್ತೋ ದೇವೇಶ ನ ಚ ಮೇ ವಿದ್ಯತೇ ಗೃಹಂ ।
ಯತ್ರ ವಾತಾತಪೌ ಗ್ರೀಷ್ಮೇ ಸ್ಥಿತಯೋರ್ನೌ ಗಮಿಷ್ಯತಃ ॥

''ದೇವರೊಡೆಯ, ಗ್ರೀಷ್ಮ ಋತು ಪ್ರಾರಂಭವಾಗಿದೆ. ಈ ಕಾಲದ ಬಿಸಿಲು ಬಿರುಗಾಳಿಗಳನ್ನು ತಾಳಿಕೊಂಡು ಈ ಎರಡು ತಿಂಗಳು ಕಳೆಯಲು ನಮಗೆ ಮನೆ ಇಲ್ಲ. ನಾವು ಇರುವುದೆಂತು'' ? ಭವಾನಿಯ ಈ ನುಡಿಯನ್ನು ಕೇಳಿ ಶಂಕರನು ಹೇಳಿದನು.

೬. ಏವಮುಕ್ತೋ ಭವಾನ್ಯಾ ತು ತಚ್ಛಂಕರೋ ವಾಕ್ಯಮಬ್ರವೀತ್ ।
ನಿರಾಶ್ರಯೋಽಹಂ ಸುದತಿ ಸದಾರಣ್ಯಚರಃ ಶುಭೇ ॥

''ಪ್ರಿಯೇ, ನಾನೊಬ್ಬ ಕಾಡಿನ ತಿರುಕ. ನನಗೆಲ್ಲಿಯ ಮನೆ ! ನಾನು ನಿರಾಶ್ರಿತ''. ಮಹಾದೇವನು ಹೀಗೆ ನುಡಿಯಲು ಪತಿವ್ರತೆಯಾದ ಸತೀದೇವಿಯು ಮರಗಳ ನೆರಳುಗಳಲ್ಲಿ ಬೇಸಿಗೆಯನ್ನು ಕಳೆದಳು. ಶಿವನೂ ಕೂಡ ಅವಳೊಡನೆಯೇ ಗಿಡದಡಿಯೇ ವಾಸಿಸಿದ. ಬೇಸಿಗೆ ಕಳೆದ ಬಳಿಕ ಆ ನಿರ್ಜನ ಅರಣ್ಯದಲ್ಲಿ ಮಳೆಗಾಲ ಒಮ್ಮೆಲೇ ನುಗ್ಗಿ ಬಂದಿತು. ಅದೊಂದು ಅದ್ಭುತ ದೃಶ್ಯ. ಹಾಡು ಹಗಲೇ ದಿಕ್ಕುಗಳಲ್ಲಿ ದಟ್ಟ ಅಂಧಕಾರ. ಯಾವಾಗಲೂ ಗುಡುಗಿನ ಅಬ್ಬರ. ವರ್ಷಾಕಾಲ ಬಂದದ್ದನ್ನು ದಾಕ್ಷಾಯಣಿಯು ನೋಡಿದಳು ಶಿವನ ಬಳಿ ಬಂದಳು. ನಲುಮೆದುಂಬಿ ನುಡಿದಳು.

೭. ತಂ ದೃಷ್ಟ್ವಾ ದಕ್ಷತನುಜಾ ಪ್ರಾವೃಟ್ಕಾಲಮುಪಸ್ಥಿತಂ ।
ಪ್ರೋವಾಚ ವಾಕ್ಯಂ ದೇವೇಶಂ ಸತೀ ಸಪ್ರಣಯಂ ತದಾ ॥

ಮಹೇಶ್ವರ, ಏನು ಈ ಗಾಳಿ! ಎದೆ ಸೀಳಿಹೋಗುತ್ತದೆ. ಮೋಡಗಳು ಗುಡುಗುತ್ತವೆ. ನೀಲಿಬಣ್ಣದ ಮುಗಿಲುಗಳಲ್ಲಿ ಮಿಂಚಿನ ಗೊಂಚಲು ಸ್ಫುರಿಸುತ್ತವೆ. ನವಿಲುಗಳು ಮಧುರವಾಗಿ ದನಿಗೈಯುತ್ತವೆ. ಗಗನಮಂಡಲದಿಂದ ಜಲಧಾರೆಗಳು ಸುರಿಯುತ್ತವೆ. ಬಕ-ಬಲಾಕಮುಂತಾದ ಹಕ್ಕಿಗಳು ಮೇಘಗಳನ್ನು ಆಶ್ರಯಿಸುತ್ತವೆ. ಗಾಳಿಯ ದಾಳಿಗೆ ಕಡಹ, ಸರ್ಜ, ಮಡ್ಡಿ, ಕೇದಿಗೆ ಮುಂತಾದ ಮರಗಳಿಂದ ಹೂಗಳು ಬಳ-ಬಳ ಉದುರುತ್ತವೆ.

ಮೋಡಗಳ ಈ ಗುಡುಗಾಟವನ್ನು ಆಲಿಸಿದೊಡನೆಯೇ ಹಂಸಗಳು ಕೂಡಲೇ ತಾವು ನೆಲೆಸಿದ ಸರೋವರಗಳನ್ನು ಬಿಟ್ಟು ಬಿಡುತ್ತವೆ. ಎಷ್ಟು ದಿನ ಇದ್ದರೇನು? ನೀಚ ಜನರು ಬಂದು ಆಕ್ರಮಿಸಿದ ಬಳಿಕ ಸಜ್ಜನರು ತಮ್ಮ ಆತಾಣವನ್ನು ಬಿಟ್ಟು ತೆರಳುವುದಿಲ್ಲವೇ! ಅಂತೆ.

ಜಿಂಕೆಗಳ ಗುಂಪು ಹಿಂಡುಹಿಂಡಾಗಿ ಅಂಡಲೆಯುತ್ತದೆ. ಈ ಬನದೆದೆಯಲ್ಲಿ ಮಳೆಯ ಸಮೃದ್ಧಿಯಿಂದ ನೆಲವೆಲ್ಲವೂ ಹಿಗ್ಗಿದೆ. ಹಸಿರೊಡದಿದೆ. ಕುಸುರೆದ್ದಿದೆ. ಮೃಗಗಳು ಆನಂದದಿಂದ ಅತ್ತಿತ್ತ ಓಡಾಡಿ ಆಟವಾಡುತ್ತಲಿವೆ.

ಹೀಗೆ ಹಸಿರು ಹುಲ್ಲುಗಾವಲು ಹಾಗೂ ಪಚ್ಚೆಪೈರುಗಳಿಂದ ತಿರಿಯ ಸಿರಿ ಸೂರೆಗೊಂಡಂತೆ ತೋರಿದರೆ, ಆಗಸದ ಕರಿಮುಗಿಲುಗಳಲ್ಲಿ ಮಿಂಚಿನಮಾಲೆಯು ಬೆಳಗುತ್ತಲಿದೆ

ನೀರು ತುಂಬಿದ ನದಿಗಳ ರಭಸವು ಮೇರೆ ಮೀರಿದೆ. ಈ ನದೀ ನೀರೆಯರ ಬದುಕು ಇಳುಕಲಿಗೆ ಬಿದ್ದಿದೆ. ಎಲ್ಲಿ ನೋಡಿದಲ್ಲೆಲ್ಲ ನದಿಗಳ ಅಧಃಪಾತ. ಸಮೃದ್ಧಿಯಿಂದ ನಾರಿಯರು ದಾರಿತಪ್ಪಿ ನೀಚರನ್ನು ಆಶ್ರಯಿಸುತ್ತಾರಂತೆ. ಅದಕ್ಕೆ ಇದು ನಿದರ್ಶನವೋ ಏನೋ!

ಹಿಂಡು ಮೋಡಗಳು ವ್ಯಾಪಿಸಿ ಮುಗಿಲು ಮಾಯವಾಗಿದೆ. ಹೂಗಳು ಸುರಿದ ಮರಗಳು ಮರೆಯಾಗಿವೆ. ಮೈತುಂಬ ಮೊಗ್ಗೆ ಬಿಟ್ಟು ನೀಪವೃಕ್ಷಗಳು ಕಾಣದಂತಾಗಿವೆ. ಸವಿತುಂಬಿ ಹಣ್ಣು ಭಾರವಾಗಿವೆ. ನೀರು ತುಂಬಿ ನದಿಗಳು ತೋರವಾಗಿವೆ. ತಾವರೆಗಳು ತುಂಬಿ ಕೊಳಗಳು ಮುಚ್ಚಿಹೋಗಿವೆ. ನೋಡಿದಲ್ಲೆಲ್ಲ ಕಾಂತಿಯ ಮಹಾಪೂರ.

ಇದೆಲ್ಲವೂ ವರ್ಷಾಕಾಲದಲ್ಲಿ ನೋಡಲಿಕ್ಕೆ ಅಂದವಾಗಿದೆ. ಆದರೆ ನಿಲ್ಲಲು ನೆಲೆ ಇಲ್ಲದೆ, ಇರಲು ಮನೆ ಇಲ್ಲದೆ ಅಲೆಯುವವರಿಗೆ ಈ ಮಳೆಗಾಲವು ಭೀಕರವಾಗಿದೆ. ಈ ವರ್ಷಾಕಾಲದ ದುಃಖವನ್ನು ಬೆಟ್ಟದೆಡೆಯ ಬಟ್ಟಬಯಲುಗಳಲ್ಲಿ ನಿಂತು ಸಹಿಸುವದು ಅಸಹ್ಯವಾಗಿದೆ. ಬದುಕು ಅಸಾಧ್ಯವಾಗಿದೆ.

೧೦. ಗೃಹಂ ಕುರುಷ್ವಾತ್ರ ಮಹಾಚಲೋತ್ತಮೆ
ಸುನಿರ್ವೃತಾ ಯೇನ ಭವಾಮಿ ಶಂಭೋ ।
ಇತ್ಥಂ ತ್ರಿನೇತ್ರಃ ಶ್ರುತಿರಾಮಣೀಯಕಂ
ಶ್ರುತ್ವಾ ವಚೋ ವಾಕ್ಯಮಿದಂ ಬಭಾಷೆ ॥

ಆದುದರಿಂದ ಶಂಭುವಿನಲ್ಲಿ ನನ್ನದೊಂದು ಸವಿನಯ ವಿಜ್ಞಾಪನೆ. ಈ ಶ್ರೇಷ್ಠವಾದ ಪರ್ವತದಲ್ಲಿ ಒಂದು ಒಳ್ಳೇ ಮನೆ ಮಾಡಿರಿ. ಅದರಿಂದ ನನಗೆ ನೆಮ್ಮದಿ. ನಿಮಗೆ ನಿಶ್ಚಿಂತತೆ''

ಮುಕ್ಕಣ್ಣನಿಗೆ ಮಡದಿಯ ಮಾತು ಕೇಳಿ ಮೆಚ್ಚಿಗೆಯಾಯಿತು. ಅವಳ ಹೇಳಿಕೆಯನ್ನು ಕೇಳಿ ಅವನು ಇಂತು ಉಸುರಿದ.

೧೧. ನ ಮೇಽಸ್ತಿ ವಿತ್ತಂ ಗೃಹಸಂಚಯಾರ್ಥೇ
ಮೃಗಾರಿಚರ್ಮಾವೃತದೇಹಿನಃ ಪ್ರಿಯೇ !
ಮಮೋಪವೀತಂ ಭುಜಗೇಶ್ವರಃ ಫಣೇ
ಕರ್ಣೇಽಪಿ ಪದ್ಮಶ್ಚ ತಥೈವ ಪಿಂಗಲಃ ॥

ಪ್ರಿಯೇ, ಮನೆ ಮಾಡಲಿಕ್ಕೆ ಹಣ ಬೇಡವೇ ? ನನಗೆಲ್ಲಿಯ ಹಣ! ಉಡಲು ಬಟ್ಟೆ ಇಲ್ಲದೆ ಮಿಕದ ತೊಗಲಿನಿಂದ ಮೈಮುಚ್ಚಿಕೊಂಡಿದ್ದೇನೆ. ಹಾವನ್ನೇ ಜನಿವಾರವನ್ನಾಗಿ ಹಾಕಿಕೊಂಡಿದ್ದೇನೆ. ಕಿವಿಯ ಓಲೆಗಳೂ ಎರಡು ಹಾವುಗಳೇ. ಪದ್ಮ, ಪಿಂಗಳ ಇಟ್ಟುಕೊಳ್ಳಲು ನಾಗಮುರಿಗೆಯ ಆಭರಣ ಇಲ್ಲದ್ದರಿಂದ ಕಂಬಲ, ಧನಂಜಯ ಎಂಬ

ಎರಡು ಹಾವುಗಳನ್ನೇ ತೋಳುಸುತ್ತು ಮಾಡಿಕೊಂಡಿದ್ದೇನೆ. ಅಶ್ವತರ, ತಕ್ಷಕ ಎಂಬ ಎರಡು ಸರ್ಪಗಳೇ ನನ್ನ ಕೈಗೆ ಕಡಗ ಕಂಕಣಗಳು. ಕಾಡಿಗೆಯಂತೆ ಕಪ್ಪಾದ ನೀಲವೆಂಬ ಸರ್ಪವು ನನ್ನ ನಡುಗಚ್ಚೆಯಾಗಿದೆ. ಹೀಗೆ ಮೈತುಂಬ ಸರ್ಪ ಸಂಭ್ರಮ ತುಂಬಿದ ನನ್ನ ಹತ್ತಿರ ಹಣ ಎಲ್ಲಿಂದ ಬರಬೇಕು ?''

ಪುಲಸ್ತ್ಯ-ಮಹಾದೇವರ ಈ ಕಠೋರವಾದ ನುಡಿಯನ್ನು ಕೇಳಿ ಇದೆಲ್ಲವೂ ಸುಳ್ಳು ಎನಿಸಿತು. ಸತೀದೇವಿಗೆ ತುಸು ಹೆದರಿಕೆಯೂ ಆಯಿತು. ತನ್ನ ಒಡೆಯನಿಗೆ ಮನೆ ಮಾಡಲು ಇರುವ ತುಂಬ ತೊಂದರೆ, ಹಾಗೂ ಅನುಸಂಕಟಗಳನ್ನು ಕೇಳಿ ಅವಳಿಗೆ ನಾಚಿಕೆ ಎನಿಸಿತು. ಆದರೆ ಇದೆಲ್ಲವೂ ಸುಳ್ಳು ಎಂದು ತಿಳಿದಾಗ ಸಿಟ್ಟೂ ಬಂದಿತು. ಅವಳು ನಿಟ್ಟುಸಿರನ್ನು ಬಿಟ್ಟು ನೆಲವನ್ನು ನೋಡುತ್ತ ನಾಚಿಕೆಯಿಂದ ತಲೆಬಾಗಿ ನುಡಿದಳು.

## ದೇವ್ಯುವಾಚ

೧೨. ಕಿಮೇವಂ ಸಂಶ್ರಿತಾಯಾಸ್ತು ಪ್ರಾವೃಟ್ಕಾಲೋ ಗಮಿಷ್ಯತಿ ।
ವೃಕ್ಷಮೂಲೇ ಸ್ಥಿತಾಯಾಸ್ತು ಸುನಯೇನ ವದಾವ್ಯಯ ॥

ಸ್ವಾಮಿ ನಿಮ್ಮನ್ನು ಆಶ್ರಯಿಸಿದ ನಾನು ಈ ಮಳೆಗಾಲವನ್ನೆಲ್ಲ ಈ ಕಾಡು-ಮರದ ಕೆಳಗೆ ಕುಳಿತೇ ಕಳೆಯಬೇಕೇ ? ನಾನು ಹೀಗೆ ಅಡವಿಯಲ್ಲಿ ದುಃಖಪಡುವದು ನಿಮಗೆ ನ್ಯಾಯವೆನಿಸುವುದೇ ?

## ಶಂಕರ ಉವಾಚ

೧೩. ಘನಾವಸ್ಥಿತದೇಹಾಯಾಃ ಪ್ರಾವೃಟ್ಕಾಲಃ ಪ್ರಯಾಸ್ಯತಿ ।
ಯಥಾಂಬುಧಾರಾ ನ ತವ ನಿಪತಿಷ್ಯನ್ತಿ ವಿಗ್ರಹೇ ॥

ಪ್ರಿಯೇ, ಇದಕ್ಕೇಕೆ ಇಷ್ಟು ಚಿಂತೆ ! ಮೋಡದ ಮೇಲೆ ಏರಿಬಿಟ್ಟರಾಯಿತು. ನೀರಿನ ಹನಿ ನಿನ್ನ ಮೈಮೇಲೆ ಬೀಳುವದಿಲ್ಲ.

೧೪. ತತೋ ಹರಸ್ತದ್ಘನಖಂಡಮುನ್ನತಮಾರುಹ್ಯ ತಸ್ಥೌ ಸಹ ದಕ್ಷಕನ್ಯಯಾ।
ತತೋಭವನ್ನಾಮ ಮಹೇಶ್ವರಸ್ಯ ಜೀಮೂತಕೇತುಸ್ತ್ವಿತಿ ವಿಶ್ರುತಂ ದಿವಿ॥

ಹೀಗೆ ಹೇಳಿ ಮಹಾದೇವರು ದಾಕ್ಷಾಯಣಿಯೊಂದಿಗೆ ಎತ್ತರವಾದ ಮೇಘ ಮಂಡಲವನ್ನು ಹತ್ತಿನಿಂತರು. ಅದಕ್ಕಾಗಿ ಆ ಪರಮೇಶ್ವರನಿಗೆ ಜೀಮೂತಕೇತು ಎಂಬ ಹೆಸರು ಬಂದಿತು, ಅದು ಪ್ರಸಿದ್ಧಿಯನ್ನು ಹೊಂದಿತು.

ವಾಮನ ಮಹಾಪುರಾಣದಲ್ಲಿ ಶಿವಸತಿಯರ ಲೀಲಾಲಾಲಿತ್ಯ ಎಂಬ ಮೊದಲನೇ ಅಧ್ಯಾಯವು ಮುಗಿದುದು

—o—

ಪಂಚಮುಖೀ ಪುರುಷ

ಅಧ್ಯಾಯ - ೨

**೧೫. ತತಸ್ತ್ರಿನೇತ್ರಸ್ಯ ಗತಃ ಪ್ರಾವೃಟ್ಕಾಲೋ ಘನೋಪರಿ ।**
**ಲೋಕಾನಂದಕರೀ ರಮ್ಯಾ ಶರತ್ಸಮಭವನ್ಮುನೇ ॥**

ಅನಂತರ ಆ ತ್ರ್ಯಂಬಕನು ಮಡದಿಯೊಂದಿಗೆ ಆ ಮಳೆಗಾಲವನ್ನೆಲ್ಲ ಆ ಮುಗಿಲು ಮಹಡಿಯ ಮೇಲೆಯೇ ಕಳೆದನು. ಅನಂತರ ಜಗತ್ತಿಗೆಲ್ಲ ಆನಂದವನ್ನು ಉಂಟು ಮಾಡುವ ರಮಣೀಯವಾದ ಶರತ್ಕಾಲವು ಪ್ರಾರಂಭವಾಯಿತು.

ಕಪ್ಪು ಮೋಡಗಳು ಆಗಸದಿಂದ ಕಾಲುಕಿತ್ತಿದವು. ಹದ್ದುಗಳು ಗಿಡಗಳ ಬೀಡುಗಳಿಂದ ಹೊರಬಿದ್ದವು. ತೊರೆಗಳು ದಂಡೆಯ ಒಡ್ಡುಗಳನ್ನು ಬಿಟ್ಟು ಒಳಸರಿದವು. ತಾವರೆಗಳಿಂದ ಸೌರಭವು ಹೊರಸೂಸಿತು. ಕಾಗೆಗಳು ಗೂಡುಬಿಟ್ಟು ನಡೆದವು. ಜಿಂಕೆಗಳು ಕೆಸರು ಮೆತ್ತಿದ ಕೋಡುಗಳನ್ನು ನೀರಿನಲ್ಲಿ ತೊಳೆದುಕೊಂಡು ಮಿಂಚತೊಡಗಿದವು. ಕಮಲಗಳು ಅರಳಿದವು. ತಿಂಗಳಬೆಳಕು ತೂರಿಬಂತು. ಬಳ್ಳಿಗಳು ಹೂಗಳ ಭಾರದಿಂದ ಬಳುಕಿದವು. ಗೋಕುಲಗಳು ಆನಂದದಿಂದ ತುಳುಕಿದವು. ಒಕ್ಕಲಿಗರು ಹರಗಿದ ಹೊಲಗಳನ್ನು ಉತ್ತಿ ಬಿತ್ತಿ ಹಿಗ್ಗಿದರು.

ಕೊಳಗಳಲ್ಲಿ ತಾವರೆ, ಮುಗಿಲಿನಲ್ಲಿ ತಾರಗೆ, ಕೆರೆಹೊಂಡಗಳಲ್ಲಿ ನೀರು ಮತ್ತು ಸಜ್ಜನರ ಮನಸ್ಸು ಹಾಗೂ ದಿಕ್ಕುಗಳ ಮುಖಗಳು ಇವೆಲ್ಲವೂ ಚಂದ್ರನ ಕಾಂತಿಯೊಂದಿಗೆ ಶರತ್ಕಾಲದ ಪ್ರಭಾವದಿಂದ ಸ್ವಚ್ಛವಾಗಿ ನಿರ್ಮಲಕಾಂತಿಯನಾಂತು ಹೊಳೆಯತೊಡಗಿದವು. ಇಂಥ ಕಾಲದಲ್ಲಿ ಶಿವನು ಮೋಡದ ಬೆನ್ನ ಮೇಲೆಯೇ ನೆಲೆಸಿದ ಸತೀದೇವಿಯನ್ನು ಕರೆದುಕೊಂಡು ಗಿರಿಗಳ ಒಡೆಯನಾದ ಮಂದರಾಚಲಕ್ಕೆ ಬಂದನು.

ಮಂದರಗಿರಿಯ ಮೇಲ್ಭಾಗದಲ್ಲಿ ಕಲ್ಲುಗಳ ಹಾಸುಸಮವಾಗಿದ್ದಿತು. ಅಲ್ಲಿ ಕಾಂತಿಮಂತನಾದ ಆ ಭಗವಂತನು ತನ್ನ ರಮಣಿಯೊಂದಿಗೆ ಆನಂದದಿಂದ ವಿಹರಿಸಿದನು.

**೧೬. ತತೋ ಗತಾಯಾಂ ಶರದಿ ಪ್ರಬುದ್ಧೇ ಚೈವ ಕೇಶವೇ ।**
**ದಕ್ಷಃ ಪ್ರಜಾಪತಿ ಶ್ರೇಷ್ಠೋ ಯಷ್ಟುಮಾರಭತ ಕ್ರತುಂ ॥**

ಹೀಗೆ ಶರತ್ಕಾಲವು ಕಳೆಯಿತು. ನಾರಾಯಣನ ಪ್ರಭೋಧೋತ್ಸವವು ಆಯಿತು. ಆಗ ಶ್ರೇಷ್ಠನಾದ ದಕ್ಷನು ಒಂದು ಯಜ್ಞವನ್ನು ಮಾಡಲು ಮೊದಲುಮಾಡಿದನು.

ಆ ಯಜ್ಞಕ್ಕೆ ಅವನು ಕರೆಸಿದ ಸದಸ್ಯರೆಂದರೆ ಹನ್ನೆರಡು ಜನ ಆದಿತ್ಯರು. ಇಂದ್ರ ಮೊದಲಾದ ದೇವತೆಗಳು. ಕಶ್ಯಪಸಹಿತ ಮಹರ್ಷಿಗಳು.

**೧೭. ದ್ವಾದಶೈವ ಸ ಚಾದಿತ್ಯಾನ್ ಶಂಕ್ರಾದೀಂಶ್ಚ ಸುರೋತ್ತಮಾನ್ ।**
**ಸಕಶ್ಯಪಾನ್ಸಮಾಮಂತ್ರ್ಯ ಸದಸ್ಯಾನ್ಸಮಚೀಕರತ್ ॥**

ಕಶ್ಯಪ ಮತ್ತು ಅರುಂಧತಿ ಸಹಿತರಾದ ವಶಿಷ್ಠರನ್ನೂ ದಕ್ಷನು ಆಹ್ವಾನಿಸಿದನು. ಋಷಿಮಂಡಲದಲ್ಲಿ ಅವರಿಬ್ಬರಿಗೇ ಒಂದು ವಿಶಿಷ್ಟ ಅಗ್ಗಳಿಕೆ. ದಕ್ಷನ ಬಿನ್ನಹವನ್ನು ಮನ್ನಿಸಿ ಅತ್ರಿಅನಸೂಯೆಯರೂ, ವಿಶ್ವಾಮಿತ್ರ ಧೃತೀದೇವಿಯರೂ, ಅಹಲ್ಯಾ

ಗೌತಮರೂ, ಭರದ್ವಾಜ ಅಮಾಯಾದೇವಿಯೂ, ಅಂಗೀರಸ ಚಂದ್ರಾದೇವಿಯರೂ ಆಗಮಿಸಿ ದಕ್ಷಯಜ್ಞದ ಸದಸ್ಯತ್ವವನ್ನು ಅಂಗೀಕರಿಸಿದರು.

ದಕ್ಷನ ಯಜ್ಞದಲ್ಲಿ ಸದಸ್ಯರಾದವರೆಲ್ಲರೂ ಯಜ್ಞಕರ್ಮದಲ್ಲಿ ದಕ್ಷರೇ ಆಗಿದ್ದರು. ಎಲ್ಲರೂ ಗುಣವಂತರು. ಶೀಲವಂತರು. ವೇದ ವೇದಾಂಗ ಪಾರಂಗತರು.

ಆ ದಕ್ಷನು ತನ್ನ ಯಜ್ಞಮಂಟಪದ ದ್ವಾರಪಾಲಕ ಕಾರ್ಯಕ್ಕಾಗಿ ಯಮಧರ್ಮನನ್ನೇ ಆಮಂತ್ರಿಸಿದನು. ತನ್ನ ಧರ್ಮಪತ್ನಿಯಾದ ಹಿಂಸೆಯೊಡನೆ ಅಲ್ಲಿಗೆ ಐತಂದು ಯಮಧರ್ಮನು ಬಾಗಿಲಕಾಯಲು ನಿಂತುಕೊಂಡನು. ಅರಿಷ್ಟ ನೇಮಿಯನ್ನು ಸಮಿಧೆಯ ಕಟ್ಟಿಗೆಯನ್ನು ತರಲು ನೇಮಿಸಲಾಯಿತು. ವಿವಿಧ ಪಕ್ವಾನ್ನ ಮತ್ತು ಪಾನೀಯಗಳನ್ನು ಅಣಿಗೊಳಿಸಲಿಕ್ಕಾಗಿ ಅಂಗಿರಸಋಷಿಯನ್ನು ನಿಯೋಜಿಸಿದನು. ಈ ಕಾರ್ಯದಲ್ಲಿ ಪತಿಗೆ ಸಹಾಯ ಮಾಡಲು ಚಂದ್ರಾದೇವಿಯು ನಿಂತುಕೊಂಡಳು. ಯಜ್ಞಮಹೋತ್ಸವದ ಸಂಸ್ಕಾರಕಾರ್ಯಗಳನ್ನೆಲ್ಲ ಭೃಗುಋಷಿಗೆ ಒಪ್ಪಿಸಲಾಯಿತು. ರೋಹಿಣೀಚಂದ್ರ ದಂಪತಿ ಗಳನ್ನು ಕೋಶಾಧಿಕಾರಿಗಳನ್ನಾಗಿ ಮಾಡಿ ಹಣಕಾಸಿನ ಅಧಿಕಾರವನ್ನು ನೀಡಲಾಯಿತು.

೧೮. ಜಾಮಾತೃನ್ ದುಹಿತೃಶ್ಚೈವ ದೌಹಿತ್ರಾಂಶ್ಚ ಪ್ರಜಾಪತಿಃ ।
ಸಶಂಕರಾಂ ಸತೀಂ ಮುಕ್ತ್ವಾ ಮಖೇ ಸರ್ವಾನ್ನ್ಯಮಂತ್ರಯತ್॥

ಈ ಮಹಾಯಜ್ಞದ ಸಮಾರಂಭಕ್ಕೆ ದಕ್ಷಾಪ್ರಜಾಪತಿಯ ಎಲ್ಲ ಅಳಿಯಂದಿರೂ ಹೆಣ್ಣುಮಕ್ಕಳೂ ಬಂದರು. ಮೊಮ್ಮಕ್ಕಳು ಬಂದರು. ಇಷ್ಟಬಂಧುಗಳೆಲ್ಲರೂ ಬಂದರು. ಅಲ್ಲಿ ಬಾರದಿದ್ದವರೆಂದರೆ ಸತೀದೇವಿ ಅವಳ ಪತಿ ಪರಮೇಶ್ವರ ಇವರಿಬ್ಬರೇ.

## ನಾರದ ಉವಾಚ

೧೯. ಕಿಮರ್ಥಂ ಲೋಕಪತಿನಾ ಧನಾಧ್ಯಕ್ಷೋ ಮಹೇಶ್ವರಃ ।
ಜ್ಯೇಷ್ಠಶ್ರೇಷ್ಠೋ ವರಿಷ್ಠೋಽಪಿ ವಂದ್ಯೋಽಪಿ ನ ನಿಮಂತ್ರಿತಃ ॥

ನಾರದ-ಲೋಕಪತಿಯಾದದಕ್ಷನುಪರಮೇಶ್ವರನನ್ನು ಏಕೆಆಮಂತ್ರಿಸಲಿಲ್ಲ? ಅವನೇನುಸಾಮಾನ್ಯನೇ! ಐಶ್ವರ್ಯಕ್ಕೆಲ್ಲ ಅಧ್ಯಕ್ಷ. ಶ್ರೇಷ್ಠರಲ್ಲಿ ಅತ್ಯಂತಶ್ರೇಷ್ಠ. ಸಜ್ಜನರಲ್ಲಿ ಸರ್ವೋತ್ಕೃಷ್ಟ. ಮೇಲೆಎಲ್ಲರಿಗಿಂತಹಿರಿಯ. ಇಷ್ಟಾದರೂಅವನಿಗೇಕೆಆಮಂತ್ರಣವಿಲ್ಲ?

## ಪುಲಸ್ತ್ಯ ಉವಾಚ

೨೦. ಜ್ಯೇಷ್ಠಶ್ರೇಷ್ಠೋ ವರಿಷ್ಠೋಽಪಿ ಆದ್ಯೋಽಪಿ ಭಗವಾನ್ ಶಿವಃ ।
ಕಪಾಲೀತಿ ವಿದಿತ್ವೇಶೋ ದಕ್ಷೇಣ ನ ನಿಮಂತ್ರಿತಃ ॥

ಪುಲಸ್ತ್ಯ-ಶಿವನು ಸರ್ವಶ್ರೇಷ್ಠನೇನೋ ನಿಜ. ಎಲ್ಲರಿಗಿಂತ ಹಿರಿಯನೂ ಅಹುದು. ಆದರೆ ಆ ಪೂಜ್ಯನಾದ ಶಂಕರನು 'ಕಪಾಲಿ' ಎಂದರೆ ಕೈಯಲ್ಲಿ ತಲೆಬುರುಡೆಯನ್ನು ಹಿಡಿದವ, (ಅಮಂಗಲಕರ) ಎಂದು ತಿಳಿದು ದಕ್ಷನು ಅವನನ್ನು ಆಮಂತ್ರಿಸಲಿಲ್ಲ.

## ನಾರದ ಉವಾಚ

೨೧. ಕಿಮರ್ಥಂ ದೇವತಾಶ್ರೇಷ್ಠಃ ಶೂಲಪಾಣಿಸ್ತ್ರಿಲೋಚನಃ ।
ಕಪಾಲೀ ಭಗವಾನ್ ಜಾತಃ ಕರ್ಮಣಾ ಕೇನ ಶಂಕರಃ ॥

ನಾರದ-ದೇವಮುನಿಯೇ, ಉತ್ತಮನಾದ ಆ ಮುಕ್ಕಣ್ಣನು ಸ್ವಭಾವತಃ 'ಶಂಕರ.' ಅಂದರೆ ಎಲ್ಲರಿಗೂ ಸುಖವನ್ನು ಉಂಟುಮಾಡುವವ. ಆ ಶೂಲಪಾಣಿಯು 'ಕಪಾಲಿ' ಆಗಲಿಕ್ಕೆ ಕಾರಣವೇನು? ಅಂಥ ಕರ್ಮವನ್ನು ಅವನೇನು ಮಾಡಿದ್ದನು.

ಪುಲಸ್ತ್ಯ-ದೇವಮುನಿಯೇ, ಶಿವನು ' ಕಪಾಲಿ'ಯಾದದ್ದರ ಕಥೆಯನ್ನು ಹೇಳುತ್ತೇನೆ ಕೇಳು. ಆದಿಪುರಾಣಗಳಲ್ಲಿ ವ್ಯಕ್ತಮೂರ್ತಿಯಾದ ಬ್ರಹ್ಮದೇವರೇ ಆ ಕಥೆಯನ್ನು ಬಿತ್ತರಿಸಿದ್ದಾರೆ. ''ಸೃಷ್ಟಿಗೆ ಮೊದಲು ಆದಿಕಾಲದಲ್ಲಿ ಈ ಪ್ರಪಂಚವೆಲ್ಲವೂ ಜಲಮಯ ವಾಗಿದ್ದಿತು. ಎಲ್ಲಿ ನೋಡಿದಲ್ಲೆಲ್ಲ ನೀರೇ ನೀರು. ಸೂರ್ಯಚಂದ್ರ. ಚಿಕ್ಕೆ ಎಲ್ಲವೂ ಮಾಯವಾಗಿದ್ದವು.

೨೨. ಪುರಾ ತ್ವೇಕಾರ್ಣವೇ ಲೋಕೇ ನಷ್ಟೇ ಸ್ಥಾವರಜಂಗಮೇ ।
ನಷ್ಟಚಂದ್ರಾರ್ಕನಕ್ಷತ್ರೇ ಪ್ರನಷ್ಟಪವನಾನಲೇ ॥

ಗಾಳಿ ಇಲ್ಲ, ಬೆಳಕು ಇಲ್ಲ, ಬೆಂಕಿ ಇಲ್ಲ, ಇದ್ದುದಾವುದೂ ತಿಳಿಯುವಂತಿಲ್ಲ. ಸುತ್ತಲು ಎತ್ತಲೂ ಕತ್ತಲು. ಎಲ್ಲವೂ ನೀರಿನಲ್ಲಿ ಮುಳುಗಿದೆ. ಕತ್ತಲೆಯಲ್ಲಿ ಅಡಗಿದೆ. ಎಲ್ಲೆಡೆಯಲ್ಲಿಯೂ ಅಜ್ಞಾನದ ಸಾಮ್ರಾಜ್ಯ.

೨೩. ತಸ್ಮಿನ್ ಸ ಶೇತೆ ಭಗವಾನ್ ನಿಶಾಂ ವರ್ಷಸಹಸ್ರಕೀಂ ।
ರಾತ್ರ್ಯಂತೇ ಸೃಜತೇ ಲೋಕಾನ್ರಾಜಸಂ ರೂಪಮಾಸ್ಥಿತಃ ॥

ಅಂಥ ಸಮಯದಲ್ಲಿ ಭಗವಾನ್ ನಾರಾಯಣನು ಯೋಗ ನಿದ್ರೆಯನ್ನು ಮಾಡುತ್ತಲಿದ್ದಾನೆ. ಇಂಥ ಸಹಸ್ರ ಸಹಸ್ರ ವರ್ಷಗಳ ರಾತ್ರಿಯು ಕಳೆದ ಬಳಿಕ ಭಗವಾನ್ ನಾರಾಯಣನು ಸೃಷ್ಟಿ ಕಾರ್ಯಕ್ಕಾಗಿ ಉಜ್ಜುಗಿಸುವನು. ಅದಕ್ಕಾಗಿ ರಜೋಗುಣ ಪ್ರಾಚುರ್ಯವುಳ್ಳ ಒಂದು ಮಹಾಚೇತನವನ್ನು ನಿರ್ಮಿಸಿದನು.

೨೪. ರೇಜೇ ಸ ಪಂಚವದನೋ ವೇದವೇದಾಂಗ ಪಾರಗಃ ।
ಸ್ರಷ್ಟಾ ಚರಾಚರಸ್ಯಾಸ್ಯ ಜಗತೋಽದ್ಭುತದರ್ಶನಃ ॥

ಪರಮಾತ್ಮನಿಂದ ಅಧಿಷ್ಠಿತವಾದ ಆ ರಾಜಸಸ್ವರೂಪಕ್ಕೆ ಐದು ಮುಖಗಳಿದ್ದವು. ಅವನು ವೇದ ವೇದಾಂಗ ಪಾರಂಗತನೂ ಆಗಿದ್ದನು. ಅವನಲ್ಲಿ ಸ್ವಯಂ ನಾರಾಯಣನೇ ನಿಂತುಕೊಂಡು ಈ ಚರಾಚರಾತ್ಮಕವಾದ ಪ್ರಪಂಚವನ್ನೆಲ್ಲ ಸೃಷ್ಟಿ ಮಾಡುವವನಾಗಿದ್ದಾನೆ.

೨೫. ತಮೋಮಯಸ್ತಥೈವಾನ್ಯಸ್ಸಮುದ್ಭೂತ ಸ್ತ್ರಿಲೋಚನಃ ।
ಶೂಲಪಾಣಿಃ ಕಪರ್ದೀ ಚ ಅಕ್ಷಮಾಲಾಂ ಚ ದರ್ಶಯನ್ ॥

ಸೃಷ್ಟಿಕಾರ್ಯಕ್ಕಾಗಿ ನಿರ್ಮಿಸಲ್ಪಟ್ಟ ಆ ಪಂಚಮುಖಿ ಪುರುಷನಿಂದ ತಮೋಗುಣದ ಪ್ರಾಚುರ್ಯವುಳ್ಳ ಮಹಾದೇವನು ಉತ್ಪನ್ನನಾದನು. ಅವನಿಗೆ ಮೂರು ಕಣ್ಣುಗಳು.

ಅವನ ಒಂದು ಕೈಯಲ್ಲಿ ತ್ರಿಶೂಲವಿದ್ದರೆ ಇನ್ನೊಂದು ಕೈಯಲ್ಲಿ ಅಕ್ಷಮಾಲೆಯು ಇದ್ದಿತು. ಭಗವಂತನಿಂದ ಸೃಷ್ಟವಾದ ಅಹಂಕಾರವು ಅವನನ್ನು ಆವರಿಸಿತು.

**೨೬. ಅಹಂಕಾರಾವೃತೋ ರುದ್ರಃ ಪ್ರತ್ಯುವಾಚ ಪಿತಾಮಹಂ ।**
**ಕೋ ಭವಾನಿಹ ಸಂಪ್ರಾಪ್ತಃ ಕೇನ ಸೃಷ್ಟೋಽಸಿ ಮಾಂ ವದ ॥**

ಅಹಂಕಾರ ತುಂಬಿದ ರುದ್ರನು ಬ್ರಹ್ಮದೇವರನ್ನು ಕುರಿತು ನೀನು ಯಾರು? ಇಲ್ಲಿಗೇಕೆ ಬಂದೆ? ನಿನ್ನನ್ನು ಹುಟ್ಟಿಸಿದವ ಯಾರು? ಹೇಳು ಎಂದು ಕೇಳಿದನು.

**೨೭. ಪಿತಾಮಹೋಽಪ್ಯಹಂಕಾರೀ ಪ್ರತ್ಯುವಾಚಾಥ ಕೋ ಭವಾನ್ ।**
**ಭವತೋ ಜನಕಃ ಕೋಽತ್ರ ಜನನೀ ವಾ ತದುಚ್ಯತಾಂ ॥**

ಪಿತಾಮಹನಾದ ಬ್ರಹ್ಮನಿಗೂ ಅಹಂಕಾರವು ಸೋಂಕಿತೋ ಏನೋ! ಶಿವನಿಗೆ ತಿರುಗಿ ಅವನು ಸವಾಲು ಹಾಕಿದನು. "ನೀನು ಯಾರು? ನಿನ್ನ ತಂದೆ ಯಾರು? ನಿನ್ನ ತಾಯಿ ಯಾರು? ಇದನ್ನು ನೀನು ಮೊದಲು ನನಗೆ ಹೇಳು".

**೨೮. ಇತ್ಯನ್ಯೋನ್ಯಂ ಪುರಾ ತಾಭ್ಯಾಂ ಬ್ರಹ್ಮೇಶಾಭ್ಯಾಂ ಕಿಲ ಪ್ರಿಯಃ।**
**ಪರಿವಾದೋಽಭವತ್ತತ್ರ ಉತ್ಪತ್ತಿರ್ಭವತೋಽಭವತ್ ॥**

ಹೀಗೆ ಮೊದಲಾಗಿ ಅವರ ಸಂವಾದವು ಮಾತಿಗೆ ಮಾತು ಬೆಳೆದು ವಿವಾದದಲ್ಲಿ ಪರಿಣಮಿಸಿತು. ಇವರಿಬ್ಬರ ಕಲಹದ ಕಲಕಲಾಟದಲ್ಲಿಯೇ ನಿನ್ನ (ನಾರದನ) ಉತ್ಪತ್ತಿಯು ಆಯಿತು.

**೨೯. ಭವಾನಪ್ಯನ್ತರಿಕ್ಷಂ ಹಿ ಜಾತಮಾತ್ರಸ್ತದೋತ್ಪತತ್ ।**
**ಧಾರಯನ್ನತುಲಾಂ ವೀಣಾಂ ಕುರ್ವನ್ಕಿಲಕಿಲಾಧ್ವನಿಂ ॥**

ನಾರದ ರೂಪಿಯಾದ ನೀನು ಹುಟ್ಟಿದಕೂಡಲೇ ಕೈಯಲ್ಲಿ ದಿವ್ಯವಾದ ತಂಬೂರಿಯನ್ನು ಹಿಡಿದು ಅದರಿಂದ ಕಿಲಕಿಲ ಮಂಜುಳ ನಾದತರಂಗಗಳನ್ನು ಹೊರಡಿಸುತ್ತ ವೀಣೆಯ ತಂತಿಗಳನ್ನು ಮೀಟುತ್ತ ಮುಗಿಲಿನೆಡೆಗೆ ನಡೆದೆ.

**೩೦. ಪರಾಜಿತೇ ಲೋಕಪತೌ ದೇವೇನ ಪರಮೇಷ್ಠಿನಾ ।**
**ಕ್ರೋಧಾನ್ಧಕಾರಿತಂ ರುದ್ರಂ ಪಂಚಮಂ ಮುಖಮಬ್ರವೀತ್ ॥**

ಅನಂತರ ಭಗವಂತನಿಂದ ಮೊಟ್ಟಮೊದಲು ಹುಟ್ಟಿಸಲ್ಪಟ್ಟ ಬ್ರಹ್ಮದೇವನು ವಾದದಲ್ಲಿ ಶಿವನನ್ನು ಸೋಲಿಸಿದನು. ಅವನು ಮುಖ ತಗ್ಗಿಸಿ ನಿಂತುಕೊಂಡನು. ಗ್ರಹಣ ಹಿಡಿದ ಚಂದ್ರನಂತಾಗಿತ್ತು ಶಿವನ ಅವಸ್ಥೆ.

ಹೀಗೆ ಪರಾಜಿತನಾದ ರುದ್ರನಲ್ಲಿ ಕೋಪ, ಅಜ್ಞಾನ ಅಹಂಕಾರಗಳ ತಮಃ ಕಾರ್ಯವನ್ನು ಕಂಡು ಬ್ರಹ್ಮದೇವರ ಐದನೇ ಮುಖವು ಮಾತನಾಡಿತು.

**೩೧. ಅಹಂ ತೇ ಪ್ರತಿಜಾನಾಮಿ ತಮೋಮೂರ್ತೇ ತ್ರಿಲೋಚನ ।**
**ದಿಗ್ವಾಸಾ ವೃಷಭಾರೂಢೋ ಲೋಕಕ್ಷಯಕರೋ ಭವಾನ್ ॥**

"ಮುಕ್ಕಣ್ಣನೇ, ನನಗೆ ನಿನ್ನ ಸ್ವರೂಪವೆಲ್ಲವೂ ಗೊತ್ತು ನೀನು ತಮೋಮೂರ್ತಿ. ದಿಗಂಬರ ಎತ್ತಿನಮೇಲೆ ಹತ್ತಿ ಓಡಾಡುವಿ. ನಿನ್ನಿಂದ ಜಗತ್ತೆಲ್ಲವೂ ನಾಶವಾಗುವದು."

ಇದನ್ನು ಕೇಳಿ ಶಂಕರನಿಗೆ ಸಹಿಸಲಾರದಷ್ಟು ಸಿಟ್ಟು ಬಂತು. ಬ್ರಹ್ಮನನ್ನು ಸುಟ್ಟು ಹಾಕುವನೇನೋ ಎಂಬಂತೆ ಕೆಕ್ಕರಿಸಿ ನೋಡಿದನು.

**೩೨. ತತಸ್ತ್ರಿನೇತ್ರಸ್ಯ ಸಮುದ್ಭವನ್ತಿ ವಕ್ತ್ರಾಣಿ ಪಂಚಾತ್ರ ಸುಮರ್ದಶಾನಿ ।**
**ಸಿತಂ ಚ ರಕ್ತಂ ಕನಕಾವದಾತಂ ನೀಲಂ ತಥಾ ಪಂಜರಕಂ ಚ ರೌದ್ರಂ॥**

ಹೀಗೆ ಸುಡುಗಣ್ಣಿನ ನೆಟ್ಟನೋಟದಿಂದ ಶಿವನು ಬ್ರಹ್ಮನನ್ನು ನೋಡುತ್ತ ನಿಂತು ಕೊಂಡಾಗಲೇ ಅವನಿಗೆ ಐದು ಮುಖಗಳು ಚಿಗಿತು ನಿಂತವು. ಬಿಳಿ, ಕೆಂಪು, ನೀಲಿ, ಗುಲಾಬಿ, ಬೂದುಬಣ್ಣ, ಹೀಗೆ ಐದುಬಣ್ಣಗಳನ್ನು ತಳೆದಿದ್ದವು ಆ ಪರಮೇಶ್ವರನ ಮುಖಗಳು.

**೩೩. ವಕ್ತ್ರಾಣಿ ದೃಷ್ಟ್ವಾರ್ಕಸಮಾನಿ ಸದ್ಯಃ**
**ಪಿತಾಮಹೋ ವಾಕ್ಯಮುವಾಚ ರುದ್ರಂ ।**
**ಸಮಾಹತಸ್ಯಾಥ ಜಲಸ್ಯ ಬುದ್ಬುದಾ**
**ಭವನ್ತಿ ಕಿಂ ತೇಷು ಪರಾಕ್ರಮೋಽಸ್ತಿ ॥**

ಸೂರ್ಯನಂತೆ ತೇಜಸ್ವಿಯಾದ ಆ ಮುಖಗಳನ್ನು ಕಂಡು ಬ್ರಹ್ಮದೇವರು ನಕ್ಕು ನುಡಿದರು. ''ಕಲಕಿದರೆ ನೀರ್ಗುಳ್ಳೆಗಳು ಹುಟ್ಟುವದಿಲ್ಲವೇ ! ಇದರಲ್ಲೇನು ಪರಾಕ್ರಮ.''

**೩೪. ತಚ್ಛ್ರುತ್ವಾ ಕ್ರೋಧಯುಕ್ತೇನ ಶಂಕರೇಣ ಮಹಾತ್ಮನಾ ।**
**ನಖಾಗ್ರೇಣ ಶಿರಶ್ಛಿನ್ನಂ ಬ್ರಾಹ್ಮಂ ಪರುಷವಾದಿನಂ ॥***

ಅದನ್ನು ಕೇಳಿ ಶಿವನ ಪಿತ್ತವು ನೆತ್ತಿಗೇರಿತು. ಸಿಟ್ಟಿನಿಂದ ತಲೆಕೆಟ್ಟಂತಾಗಿ ತನ್ನನ್ನು ಹೀಗಳೆದ ಬ್ರಹ್ಮದೇವರ ಒಂದು ತಲೆಯನ್ನು ಉಗುರು ತುದಿಯಿಂದಲೇ ಕತ್ತರಿಸಿಹಾಕಿದನು.

**೩೫. ತಚ್ಛಿನ್ನಂ ಶಂಕರಸ್ಯೈವ ಸವ್ಯೇ ಕರತಲೇಽ ಪತತ್ ।**
**ಪತತೇನ ಕದಾಚಿಚ್ಚ ತದಾ ಕರತಲಾಚ್ಛಿರಃ ॥**

ಕಳಚಿ ಒಗೆದ ಆ ಬ್ರಹ್ಮದೇವರ ತಲೆ ಬುರುಡೆಯು ಶಿವನಬಲ ಕೈಯನ್ನು ಬಿಡಲಿಲ್ಲ. ಕೆಳಗೂ ಬೀಳಲಿಲ್ಲ. ಎಷ್ಟು ಪ್ರಯತ್ನ ಮಾಡಿದರೂ ಆ ಬ್ರಹ್ಮಕಪಾಲ ನಿಂದ ಬಿಡಿಸಿಕೊಳ್ಳಲು ಶಂಕರನಿಗೆ ಶಕ್ಯವಾಗಲಿಲ್ಲ.

**೩೬. ಅಥ ಕ್ರೋಧಾವೃತೇನಾಥ ಬ್ರಹ್ಮಣಾದ್ಭುತ ಕರ್ಮಣಾ ।**
**ಸೃಷ್ಟಸ್ತು ಪುರುಷೋ ಧೀಮಾನ್ಕವಚೀ ಕುಂಡಲೀ ಶರೀ ॥**

ಅನಂತರ ಕ್ರುದ್ಧರಾದ ಬ್ರಹ್ಮದೇವರು ತಮ್ಮ ಅದ್ಭುತವಾದ ಲೀಲಾಕೌಶಲ್ಯದಿಂದ ಓರ್ವ ತೇಜಸ್ವಿ ಪುರುಷನನ್ನು ನಿರ್ಮಿಸಿದರು. ಅವನಿಗೆ ನಾಲ್ಕು ಭುಜಗಳು. ಒಂದೊಂದು ಕೈಯಲ್ಲಿಯೂ ಬಿಲ್ಲುಬಾಣ, ಶಕ್ತಿ ಆಯುಧಗಳು. ಸೂರ್ಯನಂಥ ದಿವ್ಯ ವರ್ಚಸ್ಸು, ಧೀರ ನಿಲುವು, ಮೈಗೆ ಹತ್ತಿಕೊಂಡೇ ಥಳಥಳಿಸುವ ಕವಚ ಕುಂಡಲಗಳು. ಬ್ರಹ್ಮದೇವರ ಹೊಸ ನಿರ್ಮಿತಿಯಾದ ಆ ದಿವ್ಯ ಪುರುಷನು ಮಹಾದೇವನನ್ನು ಕುರಿತು ನುಡಿದನು.

**೩೭. ಸತ್ವಾಹ ಗಚ್ಛ ದುರ್ಬುದ್ಧೇ ಮಾ ತ್ವಾಂ ಶೂಲಿನ್ನಿಪಾತಯೆ ।**
**ಭವಾನ್ ಪಾಪಸಮಾಯುಕ್ತಃ ಪಾಪಿಷ್ಠಂ ಕೋ ಜಿಘಾಂಸತಿ ॥**

"ಬುದ್ಧಿಗೇಡಿಯಾದ ತ್ರಿಶೂಲಿಯೇ, ನಿನಗೆ ಬೇಕಾದಲ್ಲಿ ಹೋಗು. ನಿನ್ನನ್ನು ನಾನು ಕೊಲ್ಲಲ್ಲಾರೆ. ನಿನ್ನಲ್ಲಿ ಪಾಪವು ತುಂಬಿದೆ. ಪಾಪಿಷ್ಠರ ಗೊಡವೆಗೆ ಯಾರು ಹೋಗುವರು!

೩೮. ಇತ್ಯುಕ್ತಃ ಶಂಕರಸ್ತೇನ ಪುರುಷೇಣ ಮಹಾತ್ಮನಾ ।
ಪ್ರಿಯಾಯುಕ್ತೋ ಜಗಾಮಾಥ ರುದ್ರೋ ಬದರಿಕಾಶ್ರಮಂ ॥

ಬ್ರಹ್ಮಕುಮಾರನನುಡಿಯನ್ನು ಕೇಳಿಶಿವನುಸತಿಯೊಡನೆಬದರಿಕಾಶ್ರಮಕ್ಕೆನಡೆದನು. ಹಿಮಾಲಯಪರ್ವತದಲ್ಲಿರುವನರನಾರಾಯಣರನಿವಾಸಸ್ಥಾನವೇಬದರಿಕಾಶ್ರಮವು. ನದಿಗಳಲ್ಲಿ ಮಿಗಿಲಾದಸರಸ್ವತಿಯುಆಆಶ್ರಮದಬದಿಯಲ್ಲಿಯೇಹರಿಯುತ್ತದೆ.

೩೯. ತತ್ರ ಗತ್ವಾ ಚ ತಂ ದೃಷ್ಟ್ವಾ ನಾರಾಯಣಮುವಾಚ ಹ ।
ಭಿಕ್ಷಾಂ ಪ್ರಯಚ್ಛ ಭಗವನ್ ಮಹಾಕಾರುಣಿಕೋಽಸಿ ಭೋಃ ॥

ಇಂಥ ದಿವ್ಯವಾದ ಬದರಿಕಾಶ್ರಮಕ್ಕೆ ಬಂದು ಶಂಕರನು ನಾರಾಯಣನ ದರ್ಶನವನ್ನು ತೆಗೆದುಕೊಂಡನು ಮತ್ತು ಅವನನ್ನು ಕುರಿತು "ಪೂಜ್ಯನೇ, ನನಗೆ ಒಂದು ಭಿಕ್ಷೆಯನ್ನು ನೀಡು. ನೀನು ಕರುಣೆಯ ಕೈವಾರಿಯಲ್ಲವೇ!" ಎಂದು ಕೇಳಿಕೊಂಡನು. ಧರ್ಮನ ಮಗನಿಗೆ ಅವತರಿಸಿದ ಶ್ರೀಮನ್ ನಾರಾಯಣನು ಈ ಮಾತನ್ನು ಹೇಳಿ ಗೌರೀಪತಿಗೆ ಆದೇಶವಿತ್ತನು.

೪೦. ಇತ್ಯುಕ್ತೋ ಧರ್ಮಪುತ್ರಸ್ತು ರುದ್ರಂ ವಚನಮಬ್ರವೀತ್ ।
ಸವ್ಯಂ ಭುಜಂ ತಾಡಯಸ್ವ ತ್ರಿಶೂಲೇನ ಮಹೇಶ್ವರ ॥

ಮಹೇಶ್ವರನೇ ನನ್ನ ಈ ಬಲಭುಜವನ್ನು ನಿನ್ನ ತ್ರಿಶೂಲದಿಂದ ತಟ್ಟಿ ಹೊಡೆ.

೪೧. ನಾರಾಯಣವಚಶ್ಶ್ರುತ್ವಾ ತ್ರಿಶೂಲೇನ ಮಹೇಶ್ವರಃ ।
ಸವ್ಯಂ ನಾರಾಯಣಭುಜಂ ತಾಡಯಾಮಾಸ ವೇಗವಾನ್ ॥

ನಾರಾಯಣನ ಮಾತಿನಂತೆ ಶಿವನು ಅವನ ಬಲಭುಜಕ್ಕೆ ತನ್ನ ಶಕ್ತಿಯನ್ನೆಲ್ಲ ಉಪಯೋಗಿಸಿ ಹೊಡೆತಹಾಕಿದನು.

೪೨. ತ್ರಿಶೂಲಾಭಿಹತಾನ್ಮಾರ್ಗಾತ್ತಿಸ್ರೋ ಧಾರಾ ವಿನಿರ್ಯಯುಃ ।
ಏಕಾ ಗಗನಮಾಶ್ರಿತ್ಯ ಸ್ಥಿತಾ ತಾರಾಭಿಮಂಡಿತಂ ॥

ತ್ರಿಶೂಲದ ಚೂಪಾದ ಮೂರೂ ತುದಿಗಳು ಚುಚ್ಚಿ ಕಚ್ಚಾದ ಭಗವಂತನ ಬಲಭುಜದಿಂದ ಮೂರು ಧಾರೆಗಳು ಹೊರ ಚಿಮ್ಮಿದವು. ಅವುಗಳಲ್ಲಿ ಒಂದು ಮುಗಿಲಿಗೆ ನೆಗೆದು ನಕ್ಷತ್ರ ಪುಂಜಗಳಿಂದ ಅಲಂಕೃತವಾಯಿತು.

೪೩. ದ್ವಿತೀಯಾ ನ್ಯಪತದ್ಭೂಮೌ ತಾಂ ಜಗ್ರಾಹ ತಪೋಧನಃ ।
ಅತ್ರಿಸ್ತಸ್ಮಾತ್ಸಮುದ್ಭೂತೋ ದುರ್ವಾಸಾಃ ಶಂಕರಾಂಶತಃ ॥

ಎರಡನೇ ಧಾರೆಯು ನೆಲದ ಮೇಲೆ ಬಿದ್ದಿತು. ಅದನ್ನು ತಪೋಧನನಾದ ಅತ್ರಿಯು ಸ್ವೀಕರಿಸಿದನು. ಅದರಿಂದ ದುರ್ವಾಸ ಮುನಿಯು ಉತ್ಪನ್ನನಾದನು. ಅವನು ಶಂಕರನ ಅಂಶ.

೪೪. ತೃತೀಯಾ ನೃಪತದ್ಧಾರಾ ಕಪಾಲೆ ರೌದ್ರದರ್ಶನೇ ।
ತಸ್ಮಾಚ್ಛಿಶುಸ್ಸಮಭವತ್ಸನ್ನದ್ಧ ಕವಚೀ ಯುವಾ ॥

ಮೂರನೇ ಧಾರೆಯು ರುದ್ರನ ಕೈಯಲಿದ್ದ ರುದ್ರಭೀಕರವಾದ ಬ್ರಹ್ಮ ಕಪಾಲದಲ್ಲಿ ಬಿದ್ದಿತು. ಅದರಿಂದ ತಕ್ಷಣದಲ್ಲಿಯೇ ಒಂದು ಮಗು ಹುಟ್ಟಿತು. ಹುಟ್ಟಿನೊಡನೆಯೇ ಆ ಕೂಸು ಕವಚವನ್ನು ಕಟ್ಟಿಕೊಂಡೇ ಬಂದಿತ್ತು. ಜನಿಸಿದ ಮರುಕ್ಷಣದಲ್ಲಿ ಹರೆಯದ ಸಿರಿ ಅವನಲ್ಲಿ ಹೊರಸೂಸತೊಡಗಿತು. ಮೈಯಲ್ಲಿ ಹುರುಡು, ಕೈಯಲ್ಲಿ ಬಿಲ್ಲುಬಾಣ. ಯುದ್ಧಕ್ಕೆ ಸಿದ್ಧನಾಗಿಯೇ ಆ ಹುಡುಗ ನಿಂತುಕೊಂಡಿದ್ದ. ಗರ್ಜಿಸಿದರೆ ಮೇಘ ಗುಡುಗಿದಂತೆ. ಅವನು ಅಬ್ಬರಿಸಿ ಮಹಾದೇವನನ್ನು ಕೇಳಿದನು. ''ನಾನು ಯಾರನ್ನು ಕೊಲ್ಲಲಿ? ಮಾಗಿದ ಹಣ್ಣನ್ನು ತಾಳೆಯ ಗಿಡದಿಂದ ಇಳಿಸಿದಂತೆ ಯಾವನ ಹೆಗಲಿನಿಂದ ತಲೆಯನ್ನು ಕಡಿದು ಕೆಳಗಿಳಿಸಲಿ?'' ಅವನ ದೀಪ್ತಿ ಧೈರ್ಯಗಳನ್ನು ಕಂಡು ಮಹಾದೇವನಿಗೆ ''ಇವನು ನಾರಾಯಣನ ಬಾಹುಬಲದಿಂದ ಹುಟ್ಟಿದ ನರನೇ ಸರಿ'' ಎಂದು ಎನಿಸಿತು. ಅವನ ಬಲವನ್ನು ತಿಳಿದು ಹೇಳಿದನು. ''ನರನೇ, ನೂರು ಸೂರ್ಯರನ್ನು ಮೀರಿ ಹೊಳೆಯುವ ಈ ಬ್ರಹ್ಮನ ಮಗನು ಬಹಳ ಬಿರುನುಡಿಗಳನ್ನಾಡುತ್ತಿದ್ದಾನೆ. ಈ ದುಷ್ಟನನ್ನು ನೀನು ಸಂಹರಿಸು.'' ಶಂಕರನ ಈ ಮಾತನ್ನು ಕೇಳಿ ಆ ನಾರಾಯಣ ಕುಮಾರನು ಕೈಯಲ್ಲಿ ಬಿಲ್ಲನ್ನು ತೆಗೆದುಕೊಂಡನು. ಅದೇ ಜಗತ್ತಿನಲ್ಲಿ ಪ್ರಸಿದ್ಧವಾದ ಅಜಗವ ಎಂಬ ಪ್ರಸಿದ್ಧವಾದ ಧನಸ್ಸು.

೪೫. ತತಃ ಪ್ರಬು*ದ್ಧೌ ಸುಭೃಶಂ ಮಹಾಬಲೌ
ಬ್ರಹ್ಮಾತ್ಮಜೋ ಬಾಹುಭವಶ್ಚ ಶಾರ್ವಃ ।
ದುವ್ಯಂ ಸಹಸ್ರಂ ಪರಿವತ್ಸರಾಣಾಂ
ತತೋ ಹರೇಣಾಪಿ ವಿರಿಂಚಿರೂಚಿ ॥

ಅದರೊಡನೆ ಅಕ್ಷಯ ಬತ್ತಳಿಕೆಯನ್ನು ತೆಗೆದುಕೊಂಡು ಕದನಕ್ಕೆ ಅಣಿಯಾದನು. ಇತ್ತ ಬ್ರಹ್ಮಕುಮಾರನೂ ಕಣಕ್ಕೆ ಇಳಿದನು. ಇಬ್ಬರೂ ಕಲಿತನದಿಂದ ಕಾದಿದರು. ಅವರೀರ್ವರ ಹೋರಾಟವು ಸಾವಿರ ವರ್ಷಗಳವರೆಗೆ ಸಾಗಿತು. ರಣಕ್ಷೇತ್ರದಲ್ಲಿ ಆಗ ಒಂದು ದಿನ ಶಿವನು ಬ್ರಹ್ಮದೇವರಿಗೆ ನುಡಿದನು.

೪೬. ಜಿತಸ್ತ್ವದೀಯಃ ಪುರುಷಃ ಪಿತಾಮಹ
ನರೇಣ ದಿವ್ಯಾದ್ಭುತ ಕರ್ಮಣಾ ಬಲೀ ।
ಮಹಾ ಪೃಷತ್ಕೈ ರಭಿಪತ್ಯ ತಾಡಿತಃ
ತದದ್ಭುತಂ ಚೈವ ದಿಶೊ ದಶೈವ ॥

'' ಪಿತಾಮಹ, ನನ್ನ ನರನ ಗೈಮೆ ಅದ್ಭುತ. ಅವನ ಬಲ ಅಮಾನುಷ. ಅವನು ತನ್ನ ಪ್ರತಾಪದಿಂದ ಚೂಪಾದ ಬಾಣಗಳಿಂದ ನಿನ್ನ ಮಗನನ್ನು ಹೊಡೆದಿದ್ದಾನೆ. ಅವನ ಈ ಪ್ರತಾಪಯುಕ್ತವಾದ ಪ್ರಹಾರದಿಂದ ನಿನ್ನ ಮಗನು ಸೋತು ಹೋಗಿದ್ದಾನೆ. ಇದಕ್ಕೆ ಈ ಹತ್ತು ದಿಕ್ಕುಗಳೇ ಸಾಕ್ಷಿ. ನಿಜವಾಗಿಯೂ ನರನ ಈ ಸಾಹಸವು ಅತ್ಯದ್ಭುತವಾಗಿದೆ.''

ಆಗ ಬ್ರಹ್ಮದೇವರು ಶಿವನಿಗೆ ಹೇಳಿದರು.

**೪೭. ಬ್ರಹ್ಮಾ ತಮೀಶಂ ವಚನಂ ಬಭಾಷೆ**
**ನೇಹಾಸ್ಯ ಜನ್ಮನ್ಯಜಿತಸ್ಯ ಶಂಭೋ ।**
**ಪರಾಜಿತಂ ಜೈಷ್ಯತೇಽ ಸೌ ತ್ವದೀಯೊ**
**ನರೊ ಮದೀಯಃ ಪುರುಷೊ ಮಹಾತ್ಮಾ ॥**

ಶಂಕರ, ನನ್ನ ಮಗನಿಗೆ ಈ ಜನ್ಮದಲ್ಲಿಯಂತೂ ಸೋಲು ಎಂಬುದು ಇಲ್ಲವೇ ಇಲ್ಲ. ಅವನನ್ನು ಗೆಲ್ಲಬೇಕೆಂದು ನಿನ್ನ ಮಗನು ಮನದಲ್ಲಿ ಆಶಿಸಿದ್ದಾನೆ. ಅಷ್ಟೇ ಆ ಹಾರೈಕೆಯನ್ನೇ ''ಹಾಗಾಯಿತು'' ಎಂದು ನೀನು ಹೇಳುತ್ತಲಿರುವಿ.

**೪೮. ಇತ್ಯೇವ ಮುಕ್ತ್ವಾ ವಚನಂ ತ್ರಿನೇತ್ರಂ ಚಿಕ್ಷೇಪ ಸೂರ್ಯೇ ಪುರುಷಂ ವಿರಂಚಿಃ।**
**ನರಂ ನರಸ್ಯೈವತದಾ ಸವಿಗ್ರಹೇ ಚಿಕ್ಷೇಪ ಧರ್ಮಪ್ರಭವಸ್ಯ ದೇವಃ ॥**

ಹೀಗೆ ಹೇಳಿ ಚತುರ್ಮುಖನು ನಾರಾಯಣನ ಮಗನಾದ ನರನನ್ನು ಎತ್ತಿ ಮುಗಿಲು ಕಡೆ ಸೂರ್ಯ ಮಂಡಲಕ್ಕೆ ಎಸೆದುಬಿಟ್ಟನು ಮತ್ತು ಆ ನರನನ್ನು ನಾರಾಯಣ ದೇವರ ಮೈಯಲ್ಲಿ ಎತ್ತಿ ಒಗೆದನು.

ವಾಮನ ಮಹಾಪುರಾಣದಲ್ಲಿ ಪಂಚಮುಖೀ ಪುರುಷ ಎಂಬ ಎರಡನೇ ಅಧ್ಯಾಯವು ಮುಗಿದುದು

—o—

## ವರಹಾ - ಅಸಿ - ವಾರಾಣಸಿ

**ಅಧ್ಯಾಯ - ೩**

ಅನಂತರ ತನ್ನ ಅಂಗೈಗೆ ಅಂಟಿದ ಬ್ರಹ್ಮನ ಭೀಕರವಾದ ತಲೆ ಬುರುಡೆಯನ್ನು ಕಂಡು ಚಂದ್ರಶೇಖರನಿಗೆ ಚಿಂತೆಯಾಯಿತು. ಆ ಬ್ರಹ್ಮಕಪಾಲದಿಂದ ಬಿಡಿಸಿಕೊಳ್ಳಲು ಯಾವ ಉಪಾಯವೂ ತೋರದೆ ಅವನ ಮನಸ್ಸಿಗೆ ಬಹಳ ತಾಪವಾಯಿತು. ಮತ್ತು ಬ್ರಹ್ಮದೇವರ ಐದನೇಯ ತಲೆಯನ್ನು ಕಡೆದುದರಿಂದ ಬ್ರಹ್ಮಹತ್ಯಾ ಪಾಪವು ಬಂದಿತು. ಆ ಬ್ರಹ್ಮಹತ್ಯೆಯು ಕರಾಳ ಕೃತ್ಯೆಯ ಆಕಾರದಿಂದ ಶಿವನಿದ್ದಲ್ಲಿಗೆ ನಡೆದು ಬರತೊಡಗಿತು.

**೪೯. ತತಸ್ಸಮಾಗತಾ ರೌದ್ರಾ ನೀಲಾಂಜನಚಯಪ್ರಭಾ ।**
**ಸಂರಕ್ತಮೂರ್ಧಜಾ ಭೀಮಾ ಬ್ರಹ್ಮಹತ್ಯಾ ಹರಾಂತಿಕಮ್ ॥**

ಕಾಡಿಗೆಯ ಬೆಟ್ಟವೇ ಎದ್ದು ಬರುವಂತೆ ಕೆಂಬಣ್ಣದ ಕೂದಲುಗಳನ್ನು ಹರವಿಕೊಂಡು ಶಿವನನ್ನು ಸಮೀಪಿಸಿತು. ಅದರ ವಿಕಾರ ಆಕಾರವನ್ನು ನೋಡಿ ಶಂಕರನು ಸಂಭ್ರಾಂತನಾಗಿ ಕೇಳಿದನು. ಎಲೇ ರೌದ್ರಾಕಾಳಿಯೇ, ನೀನು ಯಾರು? ಇಲ್ಲಿಗೇಕೆ ಬಂದೆ

**೫೦. ಕಪಾಲಿನಮಥೋವಾಚ ಬ್ರಹ್ಮಹತ್ಯಾ ಸುದಾರುಣಾ ।**
**ಬ್ರಹ್ಮಹತ್ಯಾಸ್ಮಿ ಸಂಪ್ರಾಪ್ತಾ ಮಾಂ ಪ್ರತೀಚ್ಛ ತ್ರಿಲೋಚನ ॥**

''ನಾನು ಬ್ರಹ್ಮಹತ್ಯಾ. ಮೂರ್ತಿಮಂತ ಪಾತಕ. ನೀನು ಬ್ರಹ್ಮನ ಒಂದು ತಲೆಯನ್ನು ಹಾರಿಸಿದ್ದಿಯಲ್ಲವೇ? ಆ ಪಾಪವೇ ನಾನು. ಈ ರೂಪವನಾಂತು ನಿನ್ನೆಡೆಗೆ ಬಂದಿದ್ದೇನೆ. ನನಗೆ ಇಂಬುಕೊಡು.''

ಹೀಗೆ ಹೇಳಿ ಆ ಬ್ರಹ್ಮಹತ್ಯಾ ಪಾಪವು ಶೂಲವನ್ನು ಹಿಡಿದು ನಿಂತ ರುದ್ರನ ಪ್ರತಿರೋಧವನ್ನು ಲೆಕ್ಕಿಸದೇ ಅವನ ದೇಹದಲ್ಲಿ ಹೊಕ್ಕಿತು. ಅದರಿಂದ ಶಿವ ಶರೀರವು ಬೆಂಕಿಯಲ್ಲಿ ಬೆಂದುಹೋದಂತೆ ಭಾಸವಾಯಿತು.

೫೧. ಬ್ರಹ್ಮಹತ್ಯಾಭಿಭೂತಶ್ಚ ಶರ್ವೋ ಬದರಿಕಾಶ್ರಮಮ್ ।
ಅಗಚ್ಛನ್ನೋ ದದರ್ಶಾಥ ನರನಾರಾಯಣೌ ಋಷೀ ॥

ಬ್ರಹ್ಮಹತ್ಯೆಯು ಬಡಿದುಕೊಂಡ ಆ ಭವಾನೀಪತಿಯು ಬದರಿಕಾಶ್ರಮದ ನಾರಾಯಣಾಶ್ರಮಕ್ಕೆ ಬಂದನು.

೫೨. ಅದಷ್ಟ್ವಾ ಧರ್ಮತನಯೌ ಚಿಂತಾಶೋಕ ಸಮನ್ವಿತಃ ।
ಜಗಾಮ ಯಮುನಾಂ ಸ್ನಾತುಂ ಸಾಪಿ ಶುಷ್ಕ ಜಲಾಽಭವತ್ ॥

ಅಲ್ಲಿ ನರನಾರಾಯಣರಿಬ್ಬರೂ ಇರಲಿಲ್ಲ. ಅವರ ದರ್ಶನವು ಆಗದ್ದಕ್ಕಾಗಿ ಶಿವನಿಗೆ ಚಿಂತೆಯಾಯಿತು. ದುಃಖವೂ ಉಕ್ಕಿ ಬಂದಿತು.

೫೩. ಅದೃಷ್ಟ್ವಾ ಧರ್ಮತನಯೌ ಚಿಂತಾ ಶೋಕ ಸಮನ್ವಿತಃ ।
ಜಗಾಮ ಯಮುನಾಂ ಸ್ನಾತುಂ ಸಾಪಿ ಶುಷ್ಕಜಲಾಽಭವತ್ ॥

ಶಿವನು ಯಮುವಾ ನದಿಯಲ್ಲಿ ಸ್ನಾನ ಮಾಡಿ ಈ ಬ್ರಹ್ಮ ಹತ್ಯೆಯನ್ನು ಕಳೆದುಕೊಳ್ಳ ಬೇಕೆಂದು ಅಲ್ಲಿಗೆ ಹೋದನು. ಇವನು ಸ್ನಾನಕ್ಕಾಗಿ ನೀರಿಗೆ ಇಳಿದಕೂಡಲೇ ಯಮುನೆಯ ನೀರೆಲ್ಲವೂ ಬತ್ತಿಹೋಯಿತು. ಅಷ್ಟು ಪ್ರಖರವಾಗಿದ್ದಿತು ಆ ಪಾಪದ ಉಲ್ಬಣತೆ.

ಅಲ್ಲಿಂದ ತನ್ನ ಎತ್ತನ್ನು ಓಡಿಸುತ್ತಾ ಶಿವನು ಪ್ಲಕ್ಷಜಾ ಎಂಬ ನದಿಗೆ ಬಂದನು. ಇವನನ್ನು ಕಂಡ ಕೂಡಲೇ ಆ ನದಿಯ ನೀರಿನ ಸೆಲೆಗಳೆಲ್ಲವೂ ಒಣಗಿ ಅಟ್ಟಿಸಿ ಹೋದವು.

೫೪. ಸರಿತ್ಸುತೀರ್ಥೇಷು ತಥಾಶ್ರಮೇಷು ತ
ಪುಣ್ಯೇಷು ದೇವಾಯತನೇಷು ಶರ್ವಃ ।
ಸಮಾಪ್ಲುತೋ ಯೋಗಯುತೋಪಿ ಶಾಪಾ-
ನ್ನಾವಾಪ ಮೋಕ್ಷಂ ವೃಷಭ ಧ್ವಜೋಽಸೌ ॥

ಶಿವನು ಹೀಗೆ ಪುಷ್ಕರ ಮಾರ್ಗಧಾರಣ್ಯ, ಸೈಂಧವಾರಣ್ಯ ಮುಂತಾದ ಅನೇಕ ವನ-ವನಗಳಲ್ಲಿ ಅಲೆದನು. ತೀರ್ಥಕ್ಷೇತ್ರಗಳನ್ನೆಲ್ಲಾ ತಿರುಗಿದನು. ಎಲ್ಲಿ ಹೋದರೂ ಇದೇ ಹಾಡು. ನೈಮಿಷಾರಣ್ಯದಲ್ಲಿಯೂ ಧರ್ಮಾರಣ್ಯದಲ್ಲಿಯೂ ಇದೇ ಪಾಡು. ತುಂಬಿ ಹರೆವ ತೊರೆ, ತುಳುಕಿ ಸೂಸುವ ಝರಿ, ಹರನನ್ನು ಕಂಡು ನೀರಿಲ್ಲಿದ ಇಂಗು ಬಚ್ಚಲಾಗಿ ಬಿಡುತ್ತಿತ್ತು. ಎಷ್ಟು ತೀರ್ಥ ತಿರುಗಿದರೂ ಸ್ನಾನಕ್ಕೆ ಹನಿ ನೀರು ಶಂಕರನಿಗೆ ದೊರಕಲಿಲ್ಲ.

ಮುಂದೆ ಆ ಚಂದ್ರಮೌಳಿಯು ತನ್ನ ಯೋಗಶಕ್ತಿಯಿಂದ ನದೀ ತೀರ್ಥ ಗಳಲ್ಲಿಯ ನೀರು ಬತ್ತಿಹೋಗದಂತೆ ಮಾಡಿದನು. ಹಾಗೆ ಮಾಡಿ ಜಗತ್ತಿನ ಎಲ್ಲ ತೀರ್ಥಗಳಲ್ಲಿಯೂ ಸ್ನಾನ ಮಾಡಿದನು. ಎಲ್ಲ ಕ್ಷೇತ್ರಗಳ ಯಾತ್ರೆ ಮಾಡಿದನು. ಋಷಿ ಗಳ ಆಶ್ರಮಗಳಿಗೆಲ್ಲ ಬೆಟ್ಟಿ ಇತ್ತನು. ಸಕಲ ದೇವಾಲಯಗಳನ್ನೆಲ್ಲಾ ಸಂದರ್ಶಿಸಿದನು.

ಏನಾದರೇನು ! ಯಾವ ಸ್ನಾನವಾಗಲೀ, ಅವನ ಪ್ರಯೋಜನಕ್ಕೆ ಬರಲಿಲ್ಲ. ಏನು ಮಾಡಿದರೂ ಬ್ರಹ್ಮಹತ್ಯೆಯು ಅವನನ್ನು ಬಿಟ್ಟು ತೊಲಗಲಿಲ್ಲ.

೫೫. ತತೋ ಜಗಾಮ ನಿರ್ವಿಣ್ಣಃ ಶಂಕರಃ ಕುರುಜಾಂಗಲಂ ।
ತತ್ರ ಗತ್ವಾ ದದರ್ಶಾಥ ಚಕ್ರಪಾಣಿಂ ಖಗಸ್ಥಿತಂ ॥

ಇದರಿಂದ ಹರನು ಖಿನ್ನನಾದ, ನಿರ್ವಿಣ್ಣನಾದ. ಕೊನೆಗೆ ಕುರುಜಾಂಗಲಕ್ಕೆ ಬಂದ. ಅಲ್ಲಿಯ ದೇವತೆಯಾದ ಗರುಢಾರೂಢ ವಿಷ್ಣುವನ್ನು ಸಂದರ್ಶಿಸಿದ.

೫೬. ತಂ ದೃಷ್ಟ್ವಾ ಪುಂಡಾರೀಕಾಕ್ಷಂ ಶಂಖಚಕ್ರಗದಾಧರಂ ।
ಕೃತಾಂಜಲಿಪುಟೋ ಭೂತ್ವಾ ಹರಃ ಸ್ತೋತ್ರಮುಧೀರಯತ್ ॥

ಶಂಖ, ಚಕ್ರ, ಗಧೆ ಮುಂತಾದ ಆಯುಧಗಳನ್ನು ಧರಿಸಿ ನಿಂತುಕೊಂಡ. ಆ ತಾವರೆಗಣ್ಣಿನ ಶ್ರೀಹರಿಯನ್ನು ಶಿವನು ಕೈ ಮುಗಿದು ಭಕ್ತಿತುಂಬಿ ಸ್ತೋತ್ರ ಮಾಡತೊಡಗಿದ.

ಮಹಾದೇವ ಉವಾಚ

೫೭. ನಮಸ್ತೇ ದೇವತಾನಾಥ ನಮಸ್ತೇ ಗರುಡಧ್ವಜ ।
ಶಂಖಚಕ್ರಗದಾಪಾಣೇ ವಾಸುದೇವ ನಮೋಸ್ತುತೇ ॥

೫೮ ಸತ್ವಾಧಿಷ್ಠಿತ ಲೋಕೇಶ ವಿಷ್ಣುಮೂರ್ತೇ ಅಧೋಕ್ಷಜ ।
ಪ್ರಜಾಪಾಲ ಮಹಾಬಾಹೋ ಜನಾರ್ದನ ನಮೋಸ್ತುತೇ ॥

೫೯. ತಮೋಮೂರ್ತೇ ಅಹಂಹ್ಯೇಷ ತ್ವದಂಶಕ್ರೋಧಸಂಭವಃ ।
ಗುಣಾಭಿಯುಕ್ತೋ ದೇವೇಶ ಸರ್ವವ್ಯಾಪಿನ್ ನಮೋಸ್ತುತೇ ॥

೬೦. ಭೂರಿಯಂ ತ್ವಂ ಜಗನ್ನಾಥ ಜಲಮಂಬರ ಪಾವಕೌ ।
ವಾಯುರ್ಬುದ್ಧಿರ್ಮನಶ್ಚಾಪಿ ಶರ್ವರೀ ತ್ವಂ ನಮೋಸ್ತುತೇ ॥

೬೧. ಧರ್ಮೋ ಯಜ್ಞ ಸ್ತಪಸ್ಸತ್ಯಂ ಅಹಿಂಸಾ ಶೌಚಮಾರ್ಜವಂ ।
ಕ್ಷಮಾ ದಾನಂ ದಯಾಲಕ್ಷ್ಮೀಃ ಬ್ರಹ್ಮಚರ್ಯಂ ತ್ವಮೀಶ್ವರಃ ॥

೬೨. ತ್ವಂ ಸಾಂಗಾಶ್ಚ ಚತುರ್ವೇದಾಃ ತ್ವಂ ವೇದ್ಯೋ ವೇದಪಾರಗಃ ।
ಉಪವೇದೋ ಭವಾನೀಶ ಸರ್ವೋಽಪಿ ತ್ವಂ ನಮೋಸ್ತುತೇ ॥

೬೩. ನಮೋ ನಮಸ್ತೇಽಚ್ಯುತ ಚಕ್ರಪಾಣೇ
ನಮೋಸ್ತು ತೇ ವಾಮನ ಮೀನಮೂರ್ತೇ ।
ಲೋಕೇ ಭವಾನ್ ಕಾರುಣಿಕೋ ಮತೋ ಮೇ
ತ್ರಾಯಸ್ವ ಮಾಂ ಕೇಶವ ಪಾಪಬಂಧಾತ್ ॥

೬೪. ಮಮಾಶುಭಂ ನಾಶಯ ವಿಗ್ರಹಸ್ಥಂ
ಯದ್ಬ್ರಹ್ಮಹತ್ಯಾಭಿಭವಂ ಬಭೂವ ।
ದಗ್ಧೋಽಸ್ಮಿನಷ್ಟೋಽಸ್ಮ್ಯಸಮೀಕ್ಷ್ಯಕಾರೀ
ಪುನೀಹಿ ನಾಥೋಽಸಿ ನಮೋ ನಮಸ್ತೆ ॥

ಪುಲಸ್ತ್ಯ-ಮಹಾದೇವರು ಹೀಗೆ ಸ್ತೋತ್ರ ಮಾಡಿದ ಬಳಿಕ ಭಗವಂತನು ಶಿವನ ಬ್ರಹ್ಮಹತ್ಯೆಯ ಪಾತಕವನ್ನು ತೊಡೆದುಹಾಕುವ ಉದ್ದೇಶದಿಂದ ಇಂತು ನುಡಿದನು.

## ಶ್ರೀಹರಿಃ - ಉವಾಚ

೬೫. ಮಹೇಶ್ವರ ಶ್ರುಣಷ್ವೇಮಾಂ ಮಮ ವಾಚಂ ಕಲಸ್ವನಾಂ
ಬ್ರಹ್ಮಹತ್ಯಾಕ್ಷಯಕರೀಂ ಶುಭದಾಂ ಪುಣ್ಯವರ್ಧಿನೀಮ್ ॥

ಮಹೇಶ್ವರನೇ, ನನ್ನ ಈ ಮಧುರ ಮಾತನ್ನು ಆಲಿಸು. ಇದು ಬ್ರಹ್ಮಹತ್ಯೆಯ ಪಾಪವನ್ನು ಕಳೆಯುವುದು. ಶುಭವನ್ನು ಈಯುವದು, ಪುಣ್ಯವನ್ನು ಬೆಳೆಸುವದು.

೬೬. ಯೋಽಸೌ ಬ್ರಹ್ಮಾಂಡಕೇ ಪುಣ್ಯೇ ಮದಂಶಪ್ರಭವೋಽವ್ಯಯಃ ।
ಪ್ರಯಾಗೇ ವಸತೇ ನಿತ್ಯಂ ಯೋಗಶಾಯೀತಿ ವಿಶ್ರುತಃ ॥

ಈ ಬ್ರಹ್ಮಾಂಡದಲ್ಲಿ ಅತ್ಯಂತ ಶ್ರೇಷ್ಠ ಪುಣ್ಯಕ್ಷೇತ್ರ ಎನಿಸಿದ ಪ್ರಯಾಗದಲ್ಲಿ ನನ್ನ ಅಂಶದಿಂದ ಒಡಗೂಡಿ ಉದ್ಭವಿಸಿದ ಯೋಗಶಾಯಿ ಎಂಬ ಭಗನ್ಮೂರ್ತಿಯೊಂದು ಪ್ರಸಿದ್ಧವಾಗಿರುತ್ತದೆ.

೬೭. ಚರಣಾದ್ದಕ್ಷಿಣಾತ್ತಸ್ಯ ವಿನಿರ್ಯಾತಾ ಸರಿದ್ವರಾ ।
ವಿಶ್ರುತಾ ವರಣೇತ್ಯೇವಂ ಸರ್ವಪಾಪಹರಾ ಶುಭಾ ॥

ಆ ಯೋಗ ಶಾಯಿಯ ಬಲಗಾಲಿನಿಂದ ವರಣಾ ಎಂಬ ನದಿಯು ಹೊರಟಿರುತ್ತದೆ. ಎಡಗಾಲಿನಿಂದ ಅಸಿ ಎಂಬ ಇನ್ನೊಂದು ನದಿ ಹೊರಹೊಮ್ಮಿರುತ್ತದೆ.

೬೮. ಸರಿದನ್ಯಾ ದ್ವಿತೀಯಾಚ್ಚ ಅಸೀರಿತ್ಯೇವ ವಿಶ್ರುತಾ ।
ತೇ ಉಭೇ ತು ಸರಿಚ್ಛ್ರೇಷ್ಠೆ ಲೋಕಪೂಜ್ಯೇ ಬಭೂವತುಃ ॥

ನನ್ನ ಪದದಿಂದ ಉದಿಸಿದ್ದರಿಂದ ಅವೆರಡೂ ನದಿಗಳೂ ಲೋಕ ಪೂಜ್ಯವಾಗಿರುತ್ತವೆ. ಆ ಎರಡು ತೊರೆಗಳ ನಡುವಿನ ದೇಶವು ಯೋಗಶಾಯಿಯ ಕ್ಷೇತ್ರ ಎನಿಸುತ್ತದೆ. ಮೂರು ಲೋಕಗಳಲ್ಲಿ ಅದು ಮಿಗಿಲಾದ ತೀರ್ಥ. ಅದರಿಂದ ಎಲ್ಲ ಪಾಪಗಳೂ ತೊಳೆದುಹೋಗುತ್ತವೆ.

೬೯. ತತ್ತಾದ್ಯಶಾಸ್ತಿ ನಗರೀ ಪುಣ್ಯಾ ವಾರಾಣಸೀ ಶುಭಾ ।
ಯಸ್ಯಾಂ ಹಿ ಭೋಗಿನೋಽಪೀಶ ಪ್ರಯಾಂತಿ ಭವತೋಽಲಯಂ ॥

ಅದರಂತೆ ಈ ಎರಡು ನದಿಗಳ ಸಂಗಮದ ಬಳಿ ಇರುವ 'ವಾರಾಣಸೀ' ಎಂಬ ಪಟ್ಟಣವೂ ಕೂಡ ಪುಣ್ಯಕರವಾದುದು. ಅಲ್ಲಿ ನೆಲೆಸಿದ ಭೋಗಿಗಳು ಕೂಡ ಸಂಸಾರದಿಂದ ಬಿಡುಗಡೆ ಹೊಂದುತ್ತಾರೆ.

೭೦. ವಿಲಾಸಿನೀನಾಂ ರಶನಾಸ್ವನೇನ ಶ್ರುತಿಸ್ವರೋ ಬ್ರಾಹ್ಮಣಪುಂಗವಾನಾಂ ।
ಶುಚಿಸ್ವರತ್ವಂ ಗುರುವೋ ವಿಶಮ್ಯ ಹಾಸ್ಯಾನ್ವಿತಾ ಸ್ಸನ್ತಿಮುಹುರ್ಮುಹುಸ್ತಾಃ॥

ಅಲ್ಲಿಯ ಬ್ರಾಹ್ಮಣರ ವೇದಘೋಷವು ನಾರಿಯರ ನೂಪುರ ಗೆಜ್ಜೆಗಳ ಕಿಂಕಿಣಿ

ನಾದದಂತೆ ಇಂಪಾಗಿ ಕೇಳುವದು. ಒಮ್ಮೊಮ್ಮೆ ವಟುಗಳ ವೇದಘೋಷಕ್ಕೆ ಕಾಮಿನಿಯರ ಕಾಲಂದುದುಯು ತಾಳಬದ್ಧವಾಗಿ ಶ್ರುತಿಗೊಟ್ಟಾಗ ಅಲ್ಲಿಯ ಉಪಾಧ್ಯಾಯರಿಗೂ ನಗೆ ಬರುವದುಂಟು. ಅಲ್ಲಿಯ ಕೂಡುದಾರಿಗಳಲ್ಲಿ ಬಾಲೆಯರು ಕಾಲು ಊರಿ ಅಲತಿಗೆಯ ರಸದ ಕೆಂಪು ಹತ್ತಿದ್ದನ್ನು ನೋಡಿ ಚಂದ್ರನಿಗೂ ಅಚ್ಚರಿಯಂತೆ 'ನೆಲದಾವರೆ ಇಲ್ಲಿ ನಡೆದಾಡಿತೇ ?' ಎಂದು ಆ ಕಾಶೀ ಪಟ್ಟಣದಲ್ಲಿಯ ದೇವಮಂದಿರಗಳು ಬಹು ಎತ್ತರವಾಗಿವೆ. ರಾತ್ರೀ ಕಾಲದಲ್ಲಿ ಅವು ಚಂದ್ರನ ಗತಿಯನ್ನು ತಡೆಯಬಲ್ಲವು. ಹಗಲು ಎತ್ತರವಾದ ಬಾವುಟ ಗಳಿಂದ ಸೂರ್ಯನನ್ನು ತಡೆಯುತ್ತವೆ.

೭೧. ಭೃಂಗಾಶ್ಚ ಯಸ್ಯಾಂ ಶಶಿಕಾನ್ತಭಿತ್ತೌ
ಪ್ರಲೋಭ್ಯಮಾನಾಃ ಪ್ರತಿಬಿಂಬಿತೇಷು ।
ಅನಕ್ಷ್ಯ ಯೋಷಿದ್ವಿಮಲಾನನಾಬ್ಜೇ
ಷ್ವೀಯುರ್ಭ್ರಮಾನ್ನೈವಚ ಪುಷ್ಪಕಾಂತಂ ॥

ಅಲ್ಲಿಯ ಚಂದ್ರಕಾಂತ ಶಿಲೆಯ ಗೋಡೆಗಳಲ್ಲಿ ಪ್ರತಿಬಿಂಬಿತವಾದ ಸ್ತ್ರೀಯರ ಮುಖ ಕಮಲಗಳನ್ನು ಕಂಡು ದುಂಬಿಗಳು ಬೇರೆ ಹೂಗಳನ್ನು ಹುಡುಕಿಕೊಂಡು ಹೋಗುವುದೇ ಇಲ್ಲ.

೭೨. ಪರಿಶ್ರಮಾಶ್ಚಾಪಿ ಪರಾಜಿತೇಷು
ನರೇಷು ಸಂಮೋಹನ ಖೇಲನೇಷು ।
ಯಸ್ಯಾಂ ಜಲಕ್ರೀಡನಸಂಗತಾಸು
ನ ಸ್ತ್ರೀಷು ಶಂಭೋರ್ಗೃಹದೀರ್ಘಿಕಾಸು ॥

ಅಲ್ಲಿಯ ಜನರಿಗೆ ಸ್ತ್ರೀ-ಪುರುಷ ವಿಹಾರಶ್ರಮದ ಹೊರತು ಬೇರೆ ಶ್ರಮವೇ ಇಲ್ಲ. ಗಾಳಿಯ ಹೊರತು ಬೇರಾರೂ ಹೆರವರ ಮನೆಗೆ ನುಗ್ಗುವದಿಲ್ಲ.

೭೩. ವ ಚೈವಕಶ್ಚಿತ್ಪರ ಮಂದಿರಾಣಿ ರುಣದ್ಧಿ ಶಂಭೋ ಸಹ ಮಾರುತೇನ ।
ನ ಚಾಬಲಾನಾಂ ತರಸಾ ಪರಾಕ್ರಮಂ ಕರೋತಿ ಯಸ್ಯಾಂ ಸುರತಂ ಹಿ ಮುಕ್ತ್ವಾ ॥

ವಿಲಾಸಕಾಲದಲ್ಲಿ ಅಲ್ಲದೆ ಅಬಲೆಯರ ಮೇಲೆ ಗಂಡಸರು ಎಂದೂ ಕೈ ಮಾಡುವದಿಲ್ಲ.

೭೪. ಪಾಶಗ್ರಂಥಿರ್ಗಜೇಂದ್ರಾಣಾಂ ದಾನಚ್ಛೇದೋ ಮದಚ್ಯುತೌ ।
ಯಸ್ಯಾಂ ಮಾನಮದೌ ಪುಂಸಾಂ ಕರಿಣಾಂ ಯೌವನಾಗಮೇ ॥

ಆ ಪಟ್ಟಣದಲ್ಲಿ ಕಾಲಿಗೆ ಸರಪಳಿ ಬಿಗಿಯುವದು ಮತ್ತೂ ಮದ ಹಾಗೂ ದಾನಚ್ಛೇದ ಮಾನ ಮೊದಲಾದವುಗಳು ಮದ ತುಂಬಿದ ಆನೆಗಳಿಗೆ ಮಾತ್ರ ಉಂಟು. ಮಾನವರಿಗಲ್ಲ. ರಾತ್ರಿಯಲ್ಲಿ ದುರ್ವ್ಯಾಪಾರವನ್ನು ಗೂಬೆಗಳು ಮಾತ್ರ ಮಾಡುವವು ಮನುಷ್ಯರಲ್ಲ.

೭೫. ಪ್ರಿಯದೋಷಾಸ್ಸದಾ ಯಸ್ಯಾಂ ಕೌಶಿಕಾ ನೇತರೇ ಜನಾಃ ।
ತಾರಾಗಣೇSಕುಲೀನತ್ವಂ ಮೇಘೇ ವೃತ್ತಚ್ಯುತಿರ್ವಿಭೋ ॥

ಕುಲೀನರಲ್ಲದವರು ಅಲ್ಲಿ ಯಾರೂ ಇಲ್ಲ. 'ಅಕುಲೀನತೆ' ಬೇಕಾದರೆ ನೆಲದಲ್ಲಿ ನಿಲ್ಲದ ಚಿಕ್ಕೆಗಳನ್ನೇ ನೋಡಬೇಕು. ವೃತ್ತಭ್ರಷ್ಟ ಅಥವಾ ಆಚಾರಹೀನರು ಅಲ್ಲಿ ಯಾರೂ ಇಲ್ಲ. ಬೇಕೆಂದರೆ ಮಂಡಲಾಕಾರ ಮಳೆ ಸುರಿಸುವ ಮೋಡಗಳಲ್ಲಿ ಮಾತ್ರ ಕಾಣಬಹುದು.

೭೬. ಭೂತಿಲುಬ್ಧಾ ವಿಲಾಸಿನ್ಯಃ ಭುಜಂಗಪರಿವಾರಿತಾಃ ।
ಚಂದ್ರಭೂಷಿತದೇಹಾಶ್ಚ ಯಸ್ಯಾಂ ತ್ವಮಿವ ಶಂಕರ ॥

ಶಂಕರ, ಅಲ್ಲಿಯ ಸ್ತ್ರೀಯರೆಲ್ಲರೂ ಶಂಕರ ಸ್ವರೂಪಿಗಳೇ ಆಗಿದ್ದಾರೆ. ನೀನು ಭೂತಿಬೂದಿಯನ್ನು ಬಳೆದುಕೊಂಡರೆ ಅವರು ಭೂತಿ ಅಂದರೆ ಐಶ್ವರ್ಯ ಕಾಮುಕ ರಾಗಿದ್ದಾರೆ. ನೀನು ಭುಜಂಗ=ಹಾವುಗಳಿಂದ ಒಡಗೂಡಿದ್ದರೆ ಅವರು ಭುಜಂಗ=ನಲ್ಲ ರೊಂದಿಗೆ ನಲಿಯುತ್ತಾರೆ. ನೀನೂ ಚಂದ್ರಭೂಷಿತ. ಅವರೂ ಚಂದ್ರ ಎಂದರೆ ಕರ್ಪೂರದಿಂದ ಅಲಂಕೃತರಾಗಿದ್ದಾರೆ.

೭೭. ಈದೃಶಾಯಾಂ ಸುರೇಶಾನ ವಾರಾಣಸ್ಯಾಂ ಮದಾಶ್ರಮೇ ।
ವಸತೇ ಭಗವಾನ್ ಲೋಲಃ ಸರ್ವಪಾಪಹರೋ ರವಿಃ ॥

ಇಂಥ ಈ ಕಾಶೀ ಪಟ್ಟಣದಲ್ಲಿ ನನ್ನ ಆಶ್ರಮದಲ್ಲಿ ಸೂರ್ಯ ವಾಸವಾಗಿದ್ದಾನೆ. ಪಾಪಗಳನ್ನು ಪರಿಹರಿಸುತ್ತಾನೆ. ಅಲ್ಲಿಯೇ ದಶ್ವಾಮೇಧ ಸ್ಥಾನವಿದೆ. ಅಲ್ಲಿ ನಾನು ಕೇಶವರೂಪದಿಂದ ನೆಲೆಸಿದ್ದೇನೆ.

೭೮. ದಶಾಶ್ವಮೇಧಂ ಯತ್ರೋಕ್ತಂ ಮದಂಶೋ ಯತ್ರ ಕೇಶವಃ ॥
ತತ್ರಗತ್ವಾ ಸುರಶ್ರೇಷ್ಠ ಪಾಪಮೋಕ್ಷಮವಾಪ್ಸ್ಯಸಿ ॥

ನೀನು ಅಲ್ಲಿಗೆ ಹೋದರೆ ನಿನ್ನ ಬ್ರಹ್ಮಹತ್ಯಾ ಪಾಪದಿಂದ ಬಿಡುಗಡೆ ಹೊಂದುವಿ.

೭೯. ಗತ್ವಾ ಸುಪುಣ್ಯಾಂ ನಗರೀಂ ಸುತೀರ್ಥಾಂ
ದೃಷ್ಟ್ವಾ ಚ ಲೋಲಂ ಸ ದಶಾಶ್ವಮೇಧಂ ।
ಸ್ನಾತ್ವಾ ಚ ತೀರ್ಥೇಷು ವಿಮುಕ್ತಪಾಪಃ
ಸ ಕೇಶವಂ ದ್ರಷ್ಟುಮುಪಾಜಗಾಮ ॥

ಗರುಡಧ್ವಜನಾದ ಶ್ರೀಹರಿಯ ಈ ಮಾತನ್ನು ಕೇಳಿ ವೃಷಭಧ್ವಜನಾದ ಶಿವನು ಅವನಿಗೆ ತಲೆಬಾಗಿ ನಮಸ್ಕಾರ ಮಾಡಿದನು. ಮತ್ತೂ ಗರುಡವೇಗದಿಂದ ತನ್ನ ಪಾಪವನ್ನು ಕಳೆದುಕೊಳ್ಳಲಿಕ್ಕಾಗಿ ವಾರಾಣಸಿಗೆ ಹೋದನು.

ಅಲ್ಲಿ ಹೋಗಿ ಆ ದಿವ್ಯವಾದ ಪವಿತ್ರ ತೀರ್ಥಗಳಲ್ಲಿ ಸ್ನಾನ ಮಾಡಿ ದಶಾಶ್ವಮೇಧ ದೇವತೆಯನ್ನು ಸಂದರ್ಶಿಸಿ ತನ್ನ ಪಾಪಗಳನ್ನೆಲ್ಲ ಪರಿಹರಿಸಿಕೊಂಡನು. ಕಾಶಿಯ ತೀರ್ಥಸ್ನಾನದಿಂದ ಶಿವನ ಬ್ರಹ್ಮಹತ್ಯಾ ಪಾಪವು ಕಳೆದುಹೋದ ಬಳಿಕ ಅವನು ಕೇಶವನ ಬಳಿಗೆ ಬಂದನು. ಅವನಿಗೆ ನಮಸ್ಕರಿಸಿ ನುಡಿದನು.

೮೦. ನೇದಂ ಕಪಾಲಂ ದೇವೇಶ ಮದ್ಧಸ್ತಂ ಪರಿಮುಂಚತಿ ।
ಕಾರಣಂ ವೇದ್ಮಿ ನೈವೇತತ್ತನ್ಮೇ ತ್ವಂ ವಕ್ತುಮರ್ಹಸಿ ॥

ಹೃಷಿಕೇಶನೇ, ನಿನ್ನ ದಯೆಯಿಂದ ನನಗೆ ಅಂಟಿದ ಬ್ರಹ್ಮಹತ್ಯಾ ಪಾಪವು ನಾಶವಾಯಿತು. ಆದರೆ ದೇವನೇ ಈ ನನ್ನ ಕೈಯಲ್ಲಿಯ ಕಪಾಲವು ಮಾತ್ರ ಬಿಡಲಿಲ್ಲ ಅದರ ಕಾರಣವು ಗೊತ್ತಾಗಲಿಲ್ಲ. ನೀನೇ ತಿಳಿಸು.

**ಪುಲಸ್ತ್ಯ**-ಮಹಾದೇವನ ಮಾತನ್ನು ಕೇಳಿ ಕೇಶವರೂಪಿಯಾದ ಶ್ರೀಹರಿಯು ನುಡಿದನು.

**೮೧. ಯೋಽಸೌಮಮಾಗ್ರತೋ ದಿವ್ಯೋ**
**ಹ್ರದಃ ಪದ್ಮೋತ್ಪಲೈರ್ವೃತಃ**
**ಏಷ ತೀರ್ಥವರಃ ಪುಣ್ಯಃ ದೇವಗಂಧರ್ವ ಪೂಜಿತಃ**
**ಏತಸ್ಮಿನ್ ಪ್ರವರೇ ತೀರ್ಥೇ ಸ್ನಾನಂ ಶೋಭನಮಾಚರ ।**
**ಸ್ನಾತಮಾತ್ರಸ್ಯ ಚಾದ್ಯೈವ ಕಪಾಲಂ ಪರಿಮೋಕ್ಷ್ಯತಿ ॥**
**ತತಃ ಕಪಾಲೀ ಲೋಕೇಚ ಖ್ಯಾತೋ ರುದ್ರ ಭವಿಷ್ಯಸಿ**
**ಕಪಾಲಮೋಚನೇತ್ಯೇವ, ತೀರ್ಥಂ ಚೇದಂ ಭವಿಷ್ಯತಿ ॥**

''ವತ್ಸ, ಅದಕ್ಕೊಂದು ಉಪಾಯವಿದೆ. ಇಕೋ ಆಲ್ಲಿ ನನ್ನೆದುರು ಒಂದು ದಿವ್ಯ ಸರೋವರವು ಕಾಣುವುದಿಲ್ಲವೇ! ಆದೊಂದು ಪುಣ್ಯ ತೀರ್ಥ. ಅತ್ಯಂತ ಶ್ರೇಷ್ಠವಾಗಿದೆ. ಆದನ್ನು ದೇವತೆಗಳು ಪೂಜಿಸಿದ್ದಾರೆ. ಗಂಧರ್ವರು ಸೇವಿಸಿದ್ದಾರೆ. ಇಲ್ಲಿಯ ಪುಣ್ಯೋದಕ ದಲ್ಲಿ ನೀನು ಸ್ನಾನಮಾಡು. ಇಲ್ಲಿ ಸ್ನಾನಮಾಡಿದ ಕ್ಷಣದಲ್ಲಿಯೇ ಆ ಬ್ರಹ್ಮ ಬುರುಡೆಯು ನಿನ್ನ ಅಂಗೈಯನ್ನು ಬಿಟ್ಟು ತೊಲಗಿಹೋಗುವುದು.

ಅನಂತರ ನಿನಗೆ 'ಕಪಾಲಿ' ಎಂದೂ, ಇದಕ್ಕೆ 'ಕಪಾಲ ಮೋಚನ ತೀರ್ಥ'ವೆಂದೂ ಹೆಸರಾಗುವುದು.''

**೮೨. ಸ್ನಾತಸ್ಯ ತೀರ್ಥೇ ತ್ರಿಪುರಾಂತಕಸ್ಯ ಪರಿಚ್ಯುತಂ ಹಸ್ತತಲಾತ್ಕಪಾಲಂ**
**ನಾಮ್ನಾ ಬಭೂವಾಥ ಕಪಾಲಮೋಚನಂ ತತ್ತೀರ್ಥವರ್ಯಂ**
**ಭಗವತ್ಪ್ರಸಾದಾತ್**

ಪುಲಸ್ತ್ಯ-ದೇವತೆಗಳ ದೊರೆಯಾದ ಕೇಶವನ ಮಾತನ್ನು ಕೇಳಿ ಮಹೇಶ್ವರನು ವೇದದಲ್ಲಿ ಹೇಳಿದ ಸ್ನಾನವಿಧಿಯನ್ನು ಅನುಸರಿಸಿ ಆ ತೀರ್ಥದಲ್ಲಿ ಸ್ನಾನ ಮಾಡಿದನು. ತಕ್ಷಣವೇ ಆ ತ್ರಿಪುರಾಂತಕನ ಕೈಯಿಂದ ಬ್ರಹ್ಮಕಪಾಲವು ಕೆಳಗೆ ಬಿದ್ದಿತು. ಅಂದಿನಿಂದ ಆ ತೀರ್ಥಕ್ಕೆ ಕಪಾಲ ಮೋಚನ ಎಂದು ಹೆಸರಾಯಿತು. ಇದಕ್ಕೂ ಆ ತೀರ್ಥದ ಅಂಥ ಮಹಾಮಹಿಮೆಗೂ ಕೇಶವನ ಕರುಣೆಯೇ ಕಾರಣ.

ವಾಮನ ಮಹಾಪುರಾಣದಲ್ಲಿ ವರಹಾ - ಅಸಿ - ವಾರಾಣಸಿ ಎಂಬ ಮೂರನೇ ಅಧ್ಯಾಯವು ಮುಗಿದುದು

—o—

## ದಕ್ಷಯಜ್ಞ

## ಅಧ್ಯಾಯ - ೪

**೮೩. ಏವಂ ಕಪಾಲಿ ಸಂಜಾತೊ ದೇವರ್ಷೆ ಭಗವಾನ್ ಹರಃ ।**
**ಅನೇನ ಕಾರಣೇನಾಸೌ ದಕ್ಷೇಣ ನ ನಿಮಂತ್ರಿತಃ ॥**

ಪುಲಸ್ತ್ಯ-ಹೀಗೆ ಭಗವಾನ್ ಮಹಾದೇವನು 'ಕಪಾಲೀ' ಆದನು. ಅವನು ಕಪಾಲಿ ಆದ ಕಾರಣ ಆ ದಕ್ಷನು ಶಂಕರನನ್ನು ತನ್ನ ಯಜ್ಞಕ್ಕೆ ಆಮಂತ್ರಿಸಲಿಲ್ಲ.

**೮೪. ಏತಸ್ಮಿನ್ನಂತರೇ ದೇವೀಂ ದ್ರಷ್ಟುಂ ಗೌತಮ ನಂದನೀ**
**ಜಯಾ-ಜಗಾಮ ಶೈಲೇಂದ್ರ ಮಂದರಂ ಚಾರುಕಂದರಂ**

**೮೫. ಚತುರ್ದಶಸು ಲೋಕೇಷು ಜಂತವೋ ಯೇ ಚರಾಚರಾಃ**
**ನಿಮಂತ್ರಿತಾಃ ಕ್ರತೌ ಸರ್ವೆ ಕಿಂ ವಾ ತ್ವಂ ನ ನಿಮಂತ್ರಿತಾ**

ಇದೇ ಸಂದರ್ಭದಲ್ಲಿ ಗೌತಮರ ಮಗಳಾದ ಜಯೆಯು ಸುಂದರವಾದ ಕಂದರಗಳುಳ್ಳ ಮಂದರ ಪರ್ವತಕ್ಕೆ ಬಂದಳು. ಅವಳು ಒಬ್ಬಳೇ ಬಂದದ್ದನ್ನು ನೋಡಿ ಸತೀ ದೇವಿಯು ''ನಿನ್ನ ಸೋದರಿಯಾದ ಅಪರಾಜಿತಾ, ಜಯಂತೀ, ಜಯಾ ಈ ಮೂವರು ಏಕೆ ಬರಲಿಲ್ಲ''? ಎಂದು ಕೇಳಿದಳು.

ಸತೀದೇವಿಯ ವಚನವನ್ನು ಕೇಳಿ ಜಯೆಯು ಉತ್ತರಿಸಿದಳು.

''ಪರಮೇಶ್ವರಿ, ನಮ್ಮ ತಾಯಿಯ ತಂದೆಯಾದ ದಕ್ಷ ಪ್ರಜಾಪತಿಯ ಮನೆಯಲ್ಲಿ ಒಂದು ದೊಡ್ಡಯಜ್ಞ ನಡೆದಿರುತ್ತದೆ. ಅಲ್ಲಿಗೆ ಬರಲು ಎಲ್ಲರಿಗೂ ಕರೆ ಬಂದಿತ್ತು. ತಂದೆ ಗೌತಮ, ತಾಯಿ ಅಹಲ್ಯೆಯ ರೊಡನೆ ನನ್ನ ಎಲ್ಲ ಸಹೋದರಿಯರೂ ಆ ಯಜ್ಞ ಸಮಾರಂಭಕ್ಕಾಗಿ ಹೋಗಿದ್ದಾರೆ. ನನಗೂ ಅಲ್ಲಿಗೆ ಹೋಗಲು ಮನಸ್ಸು ತವಕಿಸುತ್ತಿದೆ. ಆದರೂ ನಿನ್ನನ್ನು ಕಂಡು ಹೋಗೋಣ ಎಂದು ಇಲ್ಲಿಗೆ ಬಂದಿದ್ದೇನೆ. ನೀನು ಏಕೆ ಹೋಗಲಿಲ್ಲ ? ನಿನ್ನ ಪತಿಪರಮೇಶ್ವರನಾದರೂ ಹೋಗದೇ ಹೇಗೆ ಉಳಿದಿದ್ದಾನೆ. ?

ತಂದೆಯಿಂದ ನಿಮಗೆ ಆಹ್ವಾನವು ಬಂದಿಲ್ಲವೇ ? ಅಥವಾ ಇನ್ನು ಮೇಲೆ ಹೊರಡುವ ವಿಚಾರವಿದೆಯೋ ? ಋಷಿಗಳೆಲ್ಲರೂ ಹೊರಟಾಯಿತು. ಋಷಿ ಪತ್ನಿಯರೂ ಅವರನ್ನು ಹಿಂಬಾಲಿಸಿದ್ದಾರೆ. ದೇವತೆಗಳೆಲ್ಲರೂ ಹೋಗಿಯಾಯಿತು.

ಚಂದ್ರನೂ ಅಲ್ಲಿಗೆ ಬಂದಿದ್ದಾನೆ. ಹದಿನಾಲ್ಕು ಲೋಕಗಳಲ್ಲಿಯ ಚರಾಚರ ಪ್ರಾಣಿಗಳಿಗೆಲ್ಲಾ ಆ ಯಜ್ಞಕ್ಕೆ ಆಮಂತ್ರಣ ಉಂಟು. ನಿನಗೊಬ್ಬಳಿಗೆ ಮಾತ್ರ ಅಲ್ಲಿಗೆ ಬರಲು ತಂದೆಯಿಂದ ಕರೆ ಹೇಗೆ ಬರಲಿಲ್ಲ? ಏಕೆ ಬರಲಿಲ್ಲ ?''

ಪುಲಸ್ತ್ಯ-ಜಯೆಯ ಆ ಮಾತನ್ನು ಕೇಳಿ ಸತಿಗೆ ಸಿಡಿಲು ಬಡಿದಂತಾಯಿತು. ಅವಳಿಗೆ ಭಯಂಕರ ಸಿಟ್ಟು ಬಂದಿತು. ಆ ಹೃದಯಾಘಾತದಿಂದ ಸತಿಯು ಆಗಲೇ ಅಲ್ಲಿಯೇ ಸತ್ತು ಬಿದ್ದುಬಿಟ್ಟಳು. ಸತೀ ದೇವಿಯ ಈ ಆಕಸ್ಮಿಕವಾದ ನಿಧನದಿಂದ ಜಯಾಳಿಗೆ ಬಹಳ ಕೋಪ ಬಂದಿತು. ದುಃಖ ಉಕ್ಕಿತು. ಕಣ್ಣಿನಿಂದ ಕಂಬನಿ ಕೋಡಿಯಿಟ್ಟು ಹರಿಯತೊಡಗಿತು. ಕೆಟ್ಟದನಿಯಿಂದ ಚೀರಿ ಅವಳು ಗಟ್ಟಿಯಾಗಿ ಅಳತೊಡಗಿದಳು.

ಆ ಅಳುವ ಧ್ವನಿಯನ್ನು ಕೇಳಿ ಮೂರುಕಣ್ಣಿನ ಶೂಲಪಾಣಿ ಶಿವನು ಜಯಾಳ ಬಳಿಗೆ ಬಂದನು. ಏನು ಸಮಾಚಾರ ಎಂದು ಕೇಳಿದನು

೮೭. ಆಗತೋ ದದೃಶೇ ದೇವೀಂ ಲತಾಮಿವ ವನಸ್ಪತೇಃ ।
ಕೃತ್ತಾಂ ಪರಶುನಾ ಭೂಮೌ ಶ್ಲಥಾಂಗೀಂ ಪತಿತಾಂ ಸತೀಂ ॥

ಅಲ್ಲಿ ಬಂದು ನೋಡಿದಾಗ ಮರದಿಂದ ಕಡಿದೊಗೆದ ಬಳ್ಳಿಯಂತೆ ಸತೀದೇವಿಯು ನೆಲದ ಮೇಲೆ ಉರುಳಿ ಬಿದ್ದದ್ದು ಅವನಿಗೆ ಕಂಡಿತು. ನೆಲದ ಮೇಲೆ ಒರಗಿದ ತನ್ನ ಮಡದಿಯನ್ನು ಕಂಡು ಶಂಕರನು ಜಯಾಳಿಗೆ ಕೇಳಿದನು, ''ಕತ್ತರಿಸಿ ಒಗೆದ ಲತೆಯಂತೆ ಇವಳು ಏಕೆ ಧರೆಗೆ ಉರುಳಿದ್ದಾಳೆ?''

೮೮. ಸಾ ಶಂಕರವಚಶ್ಶ್ರುತ್ವಾ ಜಯಾ ವಚನಮಬ್ರವೀತ್ ।
ಶ್ರುತ್ವಾ ಮಖೇ ಚ ಸ್ವಾವಜ್ಞಾಂ ಭಗಿನ್ಯಃ ಪತಿಭಿಸ್ಸಹಃ ॥

ಜಯಾ ಪರಮೇಶ್ವರನ ಪ್ರಶ್ನೆಗೆ ಉತ್ತರ ಹೇಳಿದಳು.

೮೯. ಅದಿತ್ಯಾಃ ತ್ರಿಷು ಲೋಕೇಷು ಸಮಂ ಶಕ್ರಾದಿಭಿಸ್ಸುರೈಃ ।
ಮಾತೃಷ್ವಸಾ ವಿಪನ್ನೇಯಮಂತದುಃಖೇನದಹ್ಯತೀ ॥

''ತಂದೆಯ ಮನೆಯ ಯಜ್ಞಕ್ಕೆ ಅಕ್ಕ ತಂಗಿಯರೆಲ್ಲರೂ ತಮ್ಮ ತಮ್ಮ ಪತಿಗಳೊಂದಿಗೆ ಹೋಗಿದ್ದಾರೆ. ಇಂದ್ರನಾದಿಯಾಗಿ ಎಲ್ಲ ದೇವತೆಗಳೂ ಆ ಸಮಾರಂಭಕ್ಕಾಗಿ ತೆರಳಿವ್ವಾರೆ. ಆದರೆ ತನಗೆ ಮಾತ್ರ ಯಜ್ಞ ಮಹೋತ್ಸವಕ್ಕೆ ಆಮಂತ್ರಣವು ಏಕೆ ಬರಲಿಲ್ಲ? ಎಂದು ಈ ಸತೀದೇವಿಯು ಒಳಗೊಳಗೇ ದುಃಖದಿಂದ ಕುದಿದು ಹೋಗಿದ್ದಾಳೆ. ಸಂತಾಪದ ಉರಿಯಲ್ಲಿ ಬೆಂದುಹೋಗಿದ್ದಾಳೆ. ಅದರಿಂದಲೇ ನನ್ನ ಈ ಚಿಕ್ಕತಾಯಿಯು ಮೃತಳಾಗಿದ್ದಾಳೆ.''

ಈ ಭೀಕರವಾದ ನುಡಿಯನ್ನು ಕೇಳಿ ಮಹಾದೇವನು ಕೋಪದಿಂದ ಕೆರಳಿ ಭೀಮ, ಭಯಂಕರವಾಗಿ ನಿಂತುಕೊಂಡನು. ಸಿಟ್ಟಿಗೆದ್ದ ಅವನ ಸರ್ವಾಂಗಗಳಿಂದಲೂ ಉರಿಯ ತೆರೆಗಳು ಹೊರಹೊಮ್ಮ ತೊಡಗಿದವು.

೯೦. ತಚ್ಛ್ರುತ್ವಾಥ ವಚೋರೌದ್ರಂ ರುದ್ರಃ ಕ್ರೋಧಾಪ್ಲುತೋ ಬಭೌ ।
ಕ್ರುದ್ಧಸ್ಯ ಸರ್ವಗಾತ್ರೇಭ್ಯೋ ನಿಶ್ಚೇರುಃ ಪಾವಕಾರ್ಚಿಷಃ
ತತಃ ಕ್ರೋಧಾತ್ತ್ರಿನೇತ್ರಸ್ಯ ಗಾತ್ರರೋಮೋದ್ಭವಾ ಮುನೇ ।
ಗಣಾಃ ಸಿಂಹಮುಖಾ ಜಾತಾ ವೀರಭದ್ರಪುರೋಗಮಾಃ

ಕ್ರೋಧಾವೇಶದಿಂದ ಎದ್ದು ನಿಂತ ಅವನ ರೋಮ ರೋಮಗಳಿಂದ ವೀರಭದ್ರನೇ ಮೊದಲಾದ ಸಿಂಹದ ಮೋರೆಯ ಗಣವೀರರು ಉದಿಸಿ ಬಂದರು. ಆ ಎಲ್ಲ ತನ್ನ ಗಣಗಳಿಂದ ಕೂಡಿಕೊಂಡು ಶಂಕರನು ಮಂದರ ಬೆಟ್ಟದಿಂದ ಹೊರಟು ಹಿಮಗಿರಿಗೆ ಬಂದನು. ಅಲ್ಲಿಂದ ಕನಖಲದ ಮಾರ್ಗವಾಗಿ ದಕ್ಷನ ಯಜ್ಞಮಂಟಪಕ್ಕೆ ದಿಗ್ವಿಜಯ ಮಾಡಿದನು. ಗಣನಾಯಕನಾದ ಬಲಿಷ್ಠ ವೀರಭದ್ರನು ತ್ರಿಶೂಲವನ್ನು ಹಿಡಿದುಕೊಂಡು ಯಜ್ಞವಾಟದ

ಪಶ್ಚಿಮೋತ್ತರ ದಿಕ್ಕಿನಲ್ಲಿ ನಿಂತುಕೊಂಡನು. ಸತೀದೇವಿಯ ದುರಂತಕ್ಕೆ ಕಾರಣನಾದ ದಕ್ಷನ ಮೇಲೆ ಜಯಾಳಿಗೂ ಬಹಳ ಕೋಪ ಬಂದಿತ್ತು. ಅವಳೂ ಅವನ ಶಾಸನಕ್ಕಾಗಿ ಒಂದು ಗದೆ ಹಿಡಿದುಕೊಂಡು ಶಿವಸೇನೆಯೊಂದಿಗೆ ಪೂರ್ವದಕ್ಷಿಣ ದಿಗ್ಭಾಗಗಳಲ್ಲಿ ನಿಂತುಕೊಂಡಳು.

ಇವರೆಲ್ಲರ ನಟ್ಟ ನಡುವೆ ಕ್ರುದ್ಧನಾದ ಮಹಾದೇವನು ತನ್ನ ತ್ರಿಶೂಲವನ್ನು ಎತ್ತಿ ಹಿಡಿದುಕೊಂಡು ನಿಂತುಕೊಂಡನು.

ಇಂದ್ರಾದಿ ದೇವತೆಗಳು ಈ ಸಿಂಹದ ಮೋರೆಯ ವೀರನು ಯಾರಿರಬಹುದು ಎಂದು ವಿಚಾರಿಸತೊಡಗಿದರು. ಗಂಧರ್ವರು ಗಾಬರಿಯಾದರು. ಋಷಿಗಳು ಚಿಂತೋದ್ಭ್ರಾಂತರಾದರು.

೯೧. ತತಸ್ತು ಧನುರಾದಾಯ ಶರಾನಾಶೀವಿಷೋಪಮಾನ್ ।
ದ್ವಾರಪಾಲಸ್ತದಾ ಧರ್ಮೋವೀರಭದ್ರಮುಪಾದ್ರವತ್ ॥

ದಕ್ಷ ಪ್ರಜಾಪತಿಯ ಯಜ್ಞಮಂಟಪ ಮಹಾದ್ವಾರದಲ್ಲಿ ಯಮಧರ್ಮನು ನಿಂತುಕೊಂಡಿದ್ದನು. ಅವನು ತನ್ನ ಬಿಲ್ಲು ಮತ್ತು ಸರ್ಪದಂತೆ ತೀಕ್ಷ್ಣವಾದ ಬಾಣಗಳನ್ನು ಹಿಡಿದುಕೊಂಡು ವೀರಭದ್ರನನ್ನು ಎದುರಿಸಿದನು. ತನ್ನೊಡನೆ ಹೋರಾಟಕ್ಕೆ ಅಣಿಯಾಗಿ ಬಂದ ಯಮನನ್ನು ಕಂಡು ವೀರಭಧ್ರನಾದರೂ ತಾನೂ ಯುದ್ಧಕ್ಕೆ ಸಿದ್ಧನಾದನು. ವಜ್ರ ಸಮಾನವಾದ ತ್ರಿಶೂಲವನ್ನು ಒಂದು ಕೈಯಲ್ಲಿ, ಧನುಸ್ಸನ್ನು ಮತ್ತೊಂದು ಕೈಯಲ್ಲಿ, ಬಾಣಗಳನ್ನು ಮಗದೊಂದು ಕೈಯಲ್ಲಿ ಗದೆಯನ್ನು ನಾಲ್ಕನೇ ಕೈಯಲ್ಲಿ ಹಿಡಿದುಕೊಂಡು ಯಮನನ್ನು ಪ್ರತಿಭಟಿಸಿದನು.

ಶಿವಸೇನೆಯ ಗಣಾಧ್ಯಕ್ಷನಾದ ವೀರಭಧ್ರನಿಗೆ ನಾಲ್ಕು ತೋಳಿರುವದನ್ನು ಕಂಡು ಯಮನು ತನಗೆ ಎಂಟು ತೋಳುಗಳನ್ನು ಮಾಡಿಕೊಂಡನು. ಒಂದೊಂದು ಬಾಹುವಿನಲ್ಲಿಯೂ ಒಂದೊಂದು ಭೀಕರವಾದ ಅಸ್ತ್ರ, ಖಡ್ಗ, ಗುರಾಣಿ, ಗದೆ, ಭರ್ಚಿ, ಕೊಡಲಿ, ಅಂಕುಶ, ಬಿಲ್ಲು, ಬಾಣ ಮುಂತಾದ ಆಯುಧಗಳನ್ನು ತನ್ನ ಎಂಟು ಬಾಹು ಗಳಿಂದ ಎತ್ತಿ ವೀರಭದ್ರನನ್ನು ಕೊಲ್ಲಬೇಕೆಂದು ಹೋರಾಡತೊಡಗಿದನು. ಗಣಪತಿಯಾದ ವೀರಭದ್ರನೂ ಕೂಡ ಕೋಪಾಟೋಪದಿಂದ ಯಮಧರ್ಮನ ಮೇಲೆ ಬಿರುಸಾಗಿ ಚೂಪಾದ ಬಾಣಗಳನ್ನು ಸುರಿದನು. ಚಳಿಗಾಲದ ಜಡಿ ಮಳೆ ಸುರಿದಂತೆ.

೯೨. ತಾವನ್ಯೋನ್ಯಂ ಮಹಾತ್ಮಾನೌ ಶರಚಾಪಧರೌ ಮುನೇ ।
ರುಧಿರಾರುಣಸಿಕ್ತಾಂಗೌ ಕಿಂಶುಕಾವಿವ ರೇಜತುಃ ॥

ಪರಸ್ಪರ ಬಾಣಪ್ರಯೋಗದಿಂದ ಅವರಿಬ್ಬರ ಮೈ ಕೈಗಳಿಂದ ನೆತ್ತರ ಚಿಮ್ಮಿತು. ಮುತ್ತುಗದ ಮರದಂತೆ ಮೈಯಲ್ಲಿ ಕೆಂಪಿಡಿದ ಅ ವೀರರಿಬ್ಬರೂ ಕಲಿತನದಿಂದ ಕಾದಿದರು.

೯೩. ಮೃಧೇ ವರಸ್ತ್ರೈ ರ್ಗಣನಾಯಕೇನ ಜಿತಸ್ಸಧರ್ಮಸ್ತರಸಾ ಪ್ರಸಹ್ಯ ।
ಪರಾಂಙ್ಮುಖೋಭೂದ್ವಿಮನಾ ಮುನೀಂದ್ರ ಸವೀರಭದ್ರಃ
ಪ್ರವಿವೇಶ ಯಜ್ಞಂ॥

ಕೊನೆಗೆ ಗಣನಾಥನಾದ ವೀರಭದ್ರನು ತನ್ನ ಘೋರಾಸ್ತ್ರಗಳಿಂದ ಯಮನನ್ನು ಸೋಲಿಸಿದನು. ಪರಾಜಿತನಾದ ಯಮನು ಅಲ್ಲಿಂದ ತಲೆತಗ್ಗಿಸಿ ಹಿಂದೆ ಸರಿದನು. ಆಗ ವೀರಭದ್ರನು ಯಜ್ಞಮಂಟಪದಲ್ಲಿ ಪ್ರವೇಶ ಮಾಡಿದನು. ಅದನ್ನು ಕಂಡು ದೇವತೆಗಳೆಲ್ಲರೂ ಶಸ್ತ್ರ ಹಿಡಿದು ಎದ್ದರು. ಎಂಟು ಹಸುಗಳು, ಒಂಭತ್ತು ಗ್ರಹಗಳು, ಇಂದ್ರನೇ ಮೊದಲಾದ ಹನ್ನೆರಡು ದೇವತೆಗಳು, ಮಹಾದೇವನಾದಿಯಾಗಿ ಹನ್ನೊಂದು ರುದ್ರಗಣಗಳೂ ಯುದ್ಧಕ್ಕೆ ಸನ್ನದ್ಧರಾಗಿ ಬಂದರು

ಅವರಷ್ಟೇ ಅಲ್ಲದೇ ವಿಶ್ವದೇವತೆಗಳು, ಸಾಧ್ಯರು, ಸಿದ್ಧರು, ಗಂಧರ್ವರು, ಹಾವುಗಳು, ಯಕ್ಷರು, ಕಿಂಪುರುಷರು, ಭೂತಗಳು, ಖಡ್ಗಮೃಗಗಳು, ಸೂರ್ಯಚಂದ್ರವಂಶದ ರಾಜರು, ದೈತ್ಯದಾನವರು, ಹಾಗೂ ಆ ಯಜ್ಞ ಮಂಟಪದಲ್ಲಿ ನೆರೆದ ಉಳಿದೆಲ್ಲ ಜನರು ವೀರಭದ್ರನನ್ನು ಎದುರಿಸಲು ಸಿದ್ಧರಾಗಿ ಬಂದರು. ಅವರ ಈ ಸಮರ ಸನ್ನಾಹವನ್ನು ಕಂಡು ಎಲ್ಲರ ಮೇಲೆಯೂ ಹಿಡಿಹಿಡಿಯಾಗಿ ಬಾಣಗಳನ್ನು ಎಸೆದನು. ಅವರೆಲ್ಲರೂ ಒಂದಾಗಿ ಅವನ ಮೇಲೆ ಬಲವಾಗಿ ಶಸ್ತ್ರಾಸ್ತ್ರಗಳನ್ನು ಪ್ರಯೋಗಿಸಿದರು. ಆ ಎಲ್ಲ ಅಸ್ತ್ರಗಳನ್ನು ಕತ್ತರಿಸಿ ಗಣಾಧ್ಯಕ್ಷನು ಪ್ರತ್ಯಸ್ತ್ರಗಳನ್ನು ವೈರಿಗಳ ಮೇಲೆ ತೂರಿದನು.

೯೪. ದಿತಿಜಾ ದಾನವಾಶ್ಚಾನ್ಯೇ ಯೇನ್ಯೇ ತತ್ರ ಸಮಾಗತಾಃ ।
ತೇ ಸರ್ವೇಪ್ಯದ್ರವನ್ ರೌದ್ರಂ ವೀರಭದ್ರಮುಧಾಯುಧಾಃ ॥

೯೫. ಶರೈಶಸ್ತ್ರೈಶ್ಚ ಸತತಂ ಬಾಧ್ಯಮಾನಾ ಮಹಾತ್ಮನಾ ।
ವೀರಭದ್ರೇಣ ದೇವಾದ್ಯಾ ಸ್ತ್ವವಹಾರಮರೋಚಯನ್ ॥

ವೀರಭದ್ರನ ಈ ಭೀಕರವಾದ ಶಸ್ತ್ರಗಳಿಂದ ದೇವತೆಗಳು ತತ್ತರಿಸಿ ಹಿಂತೆಗೆದರು. ಆಗ ಆ ಗಣಪತಿಯು ವಿಸ್ತೃತವಾದ ಯಜ್ಞಾಗಾರದ ಒಳಹೊಕ್ಕನು. ಹೋಮ ಮಾಡುವ ಋಷಿಗಳು ಯಜ್ಞ ಮಾಡುವುದನ್ನು ನಿಲ್ಲಿಸಿದರು. ಸಿಂಹ ಮುಖದ ಆ ಶೂರನನ್ನು ಕಂಡು ಭಯಭ್ರಾಂತರಾದ ಋತ್ವಿಜರು ಹೋಮ ಬಿಟ್ಟು ಹರಿಗೆ ಮೊರೆಹೊಕ್ಕರು.

೯೬. ತಾನಾರ್ತಾಂಶ್ಚಕ್ರಭೃದ್ದೃಷ್ಟ್ವಾ ಮಹರ್ಷೀಂಸ್ತ್ರಸ್ತಮಾನಸಾನ್ ।
ನ ಭೇತವ್ಯಮಿತೀತ್ಯುಕ್ತ್ವಾ ಸಮುತ್ತಸ್ಥೌ ವರಾಯುಧಃ ॥

ಭಯದಿಂದ ಕಂಗೆಟ್ಟು ತನ್ನೆಡೆಗೆ ಬಂದ ಋಷಿಗಳನ್ನು ಕಂಡು ಶ್ರೀಹರಿಯು ಎದ್ದು ನಿಂತು ಋಷಿಗಳಿಗೆಲ್ಲ ಅಂಜಬೇಡಿರಿ ಎಂದು ಅಭಯಪ್ರದಾನದ ಆಶ್ವಾಸನೆಯನ್ನು ನೀಡಿ ಆಯುಧಗಳನ್ನು ಪರಿಗ್ರಹಿಸಿದನು.

೯೭. ಸಮಾನಮ್ಯ ತತಶ್ಶಾರ್ಙ್ಗಂ ಶರಾನಾಶೀವಿಷೋಪಮಾನ್
ಮುಮೋಚ ವೀರಭದ್ರಾಯ ಕಾಯಾವರಣದಾರಣಾನ್

ತನ್ನ ಶಾರ್ಙ್ಗ ಎಂಬ ಬಿಲ್ಲನ್ನು ಬಗ್ಗಿಸಿ ಹಾವಿನಂತೆ ಹದನವಾದ ಬಾಣಗಳನ್ನು ವೀರಭದ್ರನ ಮೇಲೆ ಪ್ರಯೋಗಿಸಿದರು. ಅವು ಅವನ ಕವಚವನ್ನು ಸೀಳಿಹಾಕಿದವು. ಆದರೆ ಅವನ ದೇಹಕ್ಕೆ ಮಾತ್ರ ಏನೂ ಅಪಾಯ ಮಾಡಲಿಕ್ಕಾಗದೇ ಶ್ರೀಹರಿಯ ಶರಗಳು ನೆಲದಮೇಲೆ ವ್ಯರ್ಥವಾಗಿ ಬಿದ್ದವು. ನಾಸ್ತಿಕನ ಬಳಿಗೆ ಬೇಡ ಬಂದ ಯಾಚಕರಂತೆ ಹರಿಬಾಣಗಳ ಆಶಾಭಂಗವಾಗಿತ್ತು.

೯೮. ತಾನಸ್ತ್ರಾನ್ವಾಸುದೇವೇನ ಪ್ರಕ್ಷಿಪ್ತಾನ್ ಗಣನಾಯಕಃ ।
ವಾರಾಯಾಮಾಸ ಶೂಲೇನ ಗದಯಾ ಮಾರ್ಗಣೈಸ್ತಥಾ

ಆಗ ನಾರಾಯಣನು ವೀರಭದ್ರನ ಮೇಲೆ ಬೇರೆ ಬೇರೆ ಅಸ್ತ್ರಗಳನ್ನು ಪ್ರಯೋಗಿಸಿದನು. ಅವೆಲ್ಲವುಗಳನ್ನು ವೀರನು ತನ್ನ ಶೂಲ ಬಾಣ ಗದೆಗಳಿಂದ ತಡೆದನು. ಅನಂತರ ಹರಿ ಬೀಸಿದ ಗದೆಯನ್ನು ವೀರಭದ್ರನು ತನ್ನ ತ್ರಿಶೂಲದಿಂದ ಕತ್ತರಿಸಿ ಕೆಡವಿದನು. ನಂತರ ಅವನು ತೂರಿದ ನೇಗಿಲಾಯುಧವನ್ನು ಇವನ ಗದೆಯಿಂದ ಪುಡಿ ಮಾಡಿದನು.

೯೯. ಮುಸಲಂ ವೀರಭದ್ರಾಯ ಸಂಚಿಕ್ಷೇಪ ಹಲಾಯುಧಃ ।
ಪೂರ್ವವನ್ಮುಸಲಾಘಾತಂ ವೀರಭದ್ರೋ ನ್ಯವಾರಯತ್

ಆಗ ಬಲರಾಮನು ಮುಂದಾಗಿ ತನ್ನ ಕೈಯಲ್ಲಿಯ ಒನಕೆಯಿಂದ ವೀರಭದ್ರನಿಗೆ ಹೊಡೆದನು. ಅದನ್ನು ಕೂಡ ವೀರಭದ್ರನು ತನ್ನ ಗದಾಪ್ರಹಾರ ದಿಂದ ವ್ಯರ್ಥವನ್ನಾಗಿ ಮಾಡಿದನು.

೧೦೦. ಮುಸಲಂ ಸಂಹತಂ ದೃಷ್ಟ್ವಾ ಲಾಂಗಲಂ ಚ ನಿವಾರಿತಂ
ವೀರಭದ್ರಾಯ ಚಿಕ್ಷೇಪ ಚಕ್ರಂ ಕ್ರೋಧಾತ್ಖಗಧ್ವಜಃ

ಹೀಗೆ ತನ್ನ ಮತ್ತೂ ತನ್ನ ಅಣ್ಣನ ಆಯುಧಗಳು ವ್ಯರ್ಥವಾದುದನ್ನು ನೋಡಿ ಹರಿಗೆ ಸಿಟ್ಟು ಬಂದು ತನ್ನ ಚಕ್ರಾಯುಧವನ್ನು ಪ್ರಯೋಗಿಸಿದನು.

ನೂರು ನೇಸುರುಗಳ ಕಾಂತಿಯಿಂದ ಉರಿಯುತ್ತ ಬರುತ್ತಲಿರುವ ಆ ಸುದರ್ಶನ ಚಕ್ರವನ್ನು ನೋಡಿ ವೀರಭದ್ರನು ತನ್ನ ತ್ರಿಶೂಲವನ್ನು ಕೆಳಗೆ ಹಾಕಿ ಸುದರ್ಶನವನ್ನು ಬಾಯಿ ತೆಗೆದು ನುಂಗಿಬಿಟ್ಟನು. ಹಿಂದೆ ಮತ್ಸ್ಯಾವತಾರಿಯಾದ ಶ್ರೀಹರಿಯು ಮಧು ದೈತ್ಯನನ್ನು ಹೀಗೇ ಕಬಳಿಸಿರಲಿಲ್ಲವೇ !

೧೦೧. ಚಕ್ರೇ ನಿಗೀರ್ಣೆ ಗಣನಾಯಕೇನ ಕ್ರೋಧಾತಿರಕ್ತೋऽಸಿತಚಾರುನೇತ್ರ
ಮುರಾರಿರಭ್ಯೇತ್ಯ ಗಣಾಧಿಪೇಂದ್ರಮುತ್ಕ್ಷಿಪ್ಯವೇಗಾದ್ಭುವಿ ನಿಷ್ಪಿಪೇಷ

ಗಣಾಧೀಶನಾದ ವೀರಭದ್ರನು ತನ್ನ ಸುದರ್ಶನವನ್ನು ನುಂಗಿದ್ದನ್ನು ಕಂಡು ಹರಿಗೆ ಬಹಳ ಕೋಪ ಬಂದಿತು. ಕಣ್ಣು ಕೆಂಪಾಗಾದವು. ಅವನು ಆ ಗಣಾಧ್ಯಕ್ಷನ ಬಳಿಗೆ ಬಂದನು. ಅವನನ್ನು ಎತ್ತಿ ನೆಲಕ್ಕೆ ಅಪ್ಪಳಿಸಿದನು.

೧೦೨. ಹರಿಬಾಹೂರುವೇಗೇನ ವಿನಿಷ್ಪಿಷ್ಟಸ್ತ ಭೂತಲೆ ।
ಸಹಿತಂ ರುಧಿರೋದ್ಗಾರೈ ರ್ಮುಖಾಚ್ಚಕಂ ವಿನಿರ್ಗತಂ ॥

ಹರಿಯು ತೋಳುಗಳಿಂದ ಹಿಚುಕಿ ಅವನನ್ನು ನೆಲಕ್ಕೆ ಕುಕ್ಕುರ ಬಡಿದ ಕೂಡಲೇ ವೀರಭದ್ರನು ನೆತ್ತರವನ್ನು ಕಕ್ಕಿದನು. ರಕ್ತದೊಂದಿಗೇ ಸುದರ್ಶನ ಚಕ್ರವೂ ಅವನ ಬಾಯಿಯಿಂದ ಹೊರಗೆ ಸಿಡಿದುಬಂದಿತು.

೧೦೩. ತತೋ ನಿಸ್ಸೃತಮಾಲೋಕ್ಯ ಚಕ್ರಂ ಕೈಟಭನಾಶನಃ ।
ಸಮಾದಾಯ ಹೃಷೀಕೇಶೋ ವೀರಭದ್ರಂ ಮುಮೋಚ ಹ ॥

ಆ ಚಕ್ರವನ್ನು ಕೈಟಭಾರಿಯಾದ ಕೃಷ್ಣನು ತೆಗೆದುಕೊಂಡು ವೀರಭದ್ರನನ್ನು ಬಿಟ್ಟುಬಿಟ್ಟನು.

೧೦೪. ಹೃಷೀಕೇಶೇನ ಮುಕ್ತಸ್ತು ವೀರಭದ್ರೋ ಜಟಾಧರಂ ।
ಗತ್ವಾ ನಿವೇದಯಾಮಾಸ ವಾಸುದೇವಾತ್ಪರಾಜಯಂ ॥

ಹೀಗೆ ಹರಿಯ ದಯೆಯಿಂದ ಬದುಕಿ ಬಿಟ್ಟು ತನಗೆ ಆದ ಸೋಲನ್ನು ಅರಿಕೆ ಮಾಡಿಕೊಂಡನು. ವೀರಭದ್ರನ ಮೈಯೆಲ್ಲವೂ ನೆತ್ತರು ಬಸಿಯುತ್ತಿತ್ತು. ಹೆಡೆತುಳಿದ ಹಾವಿನಂತೆ ಅವನು ನಿಡಿದಾದ ಉಸಿರು ಬಿಡುತ್ತಿದ್ದ. ಅವನ ಆ ಅವಸ್ಥೆಯನ್ನು ಕಂಡು ಶಿವನಲ್ಲಿಯೂ ಸಿಟ್ಟು ತುಂಬಿತು.

೧೦೫. ತತಃ ಕ್ರೋಧಾಭಿಭೂತೇನ ವೀರಭದ್ರೋಽಥ ಶಂಭುನಾ ।
ಪೂರ್ವೋದ್ದಿಷ್ಟೇ ತದಾ ಸ್ಥಾನೇ ಸಾಯುಧಸ್ತು ನಿವೇಶಿತಃ ॥
ವೀರಭದ್ರಮಥಾದಿಶ್ಯ ಭದ್ರಕಾಲೀಂ ಚ ಶಂಕರಃ ।
ವಿವೇಶ ಕ್ರೋಧತಾಮ್ರಾಕ್ಷೋ ಯಜ್ಞವಾಟಂ ತ್ರಿಶೂಲಭೃತ್

ಕೋಪದಿಂದ ಕೆರಳಿದ ರುದ್ರನು ವೀರಭದ್ರನನ್ನು ಅವನು ಮೊದಲಿದ್ದ ಸ್ಥಾನದಲ್ಲಿಯೇ ಶಸ್ತ್ರಸಹಿತವಾಗಿ ನಿಲ್ಲಿಸಿದನು. ಮತ್ತೂ ಭದ್ರಕಾಳಿಯನ್ನು ಇನ್ನೊಂದು ಶಸ್ತ್ರಕೊಟ್ಟು ನಿಲ್ಲಿಸಿ ತಾನು ಕೋಪೋದ್ರಿಕ್ತನಾಗಿ ಯಜ್ಞಮಂಟಪವನ್ನು ಪ್ರವೇಶಿಸಿದನು.

೧೦೬. ತತಸ್ತು ದೇವಪ್ರವರೇ ಜಟಾಧರೇ
ತ್ರಿಶೂಲಪಾಣೌ ತ್ರಿಪುರಾಂತಕಾರಿಣೆ
ದಕ್ಷಸ್ಯ ಯಜ್ಞಂ ವಿಶತಿ ಕ್ಷಯಂಕರೆ
ಜಾತೋ ಮುನೀನಾಂ ಪ್ರವರೋ ಹಿ ಸಾಧ್ವಸಃ

ತ್ರಿಪುರನನ್ನು ಕೊಂದ ಶಿವನು ತ್ರಿಶೂಲವನ್ನು ಎತ್ತಿಕೊಂಡು ದಕ್ಷನ ಯಜ್ಞಾಗಾರದಲ್ಲಿ ಹೊಕ್ಕ ಕೂಡಲೇ ಮುನಿಗಳೆಲ್ಲರೂ ಭಯಭ್ರಾಂತರಾದರು.

ವಾಮನ ಮಹಾಪುರಾಣದಲ್ಲಿ ದಕ್ಷಯಜ್ಞ ಎಂಬ ನಾಲ್ಕನೇ ಅಧ್ಯಾಯವು ಮುಗಿದುದು.

—೦—

## ಜೀವನರಾಶಿಗಳ ಸಂಬಂಧ

ಅಧ್ಯಾಯ - ೫

**೧೦೭. ಜಟಾಧರಂ ಹರಿರ್ದೃಷ್ಟ್ವಾ ಕ್ರೋಧಾದಾರಕ್ತಲೋಚನಂ ।**
**ತಸ್ಮಾತ್ ಸ್ಥಾನಾದಪಾಕ್ರಮ್ಯ ಕುಬ್ಜಾಮ್ರೇಽಂತರ್ಹಿತಸ್ಸ್ಥಿತಃ**

ಪುಲಸ್ತ್ಯ-ಸಿಟ್ಟಿನಿಂದ ಕೆಂಪಡರಿದ ಕಣ್ಣುಳ್ಳ ಶಿವನನ್ನು ಕಂಡು ಹರಿಯು ಆ ಸ್ಥಾನದಿಂದ ಹೊರಬಿದ್ದು ಕುಬ್ಜಾಮ್ರಸ್ಥಳದಲ್ಲಿ ಬೆಳೆದ ಮಾಮರದ ಪದರಿನಲ್ಲಿ ಅವಿತುಕೊಂಡನು. ಅಷ್ಟವಸುಗಳು ಹಿಂಜರಿದರು. ಸೀತಾ ಎಂಬ ಹಿರಿಯ ತೊರೆಯು ಅಲ್ಲಿಯೇ ಬತ್ತಿಹೊಯಿತು.

**೧೦೮. ಏಕಾದಶ ತಥಾ ರುದ್ರಾಸ್ತ್ರಿನೇತ್ರಾ ವೃಷಕೇತನಾಃ**
**ಕಾಂದಿಶೀಕಾಲಯಂ ಜಗ್ಮುಃ ಸಮಭ್ಯೇತ್ಯಾಥ ಶಂಕರಂ**

ಹನ್ನೊಂದು ರುದ್ರರು ಶಿವನೊಡನೆ ಹೋರಾಡಿ ಸೋತು ಓಡಿ ಹೋದರು. ಅನಂತರ ವಿಶ್ವೇದೇವತೆಗಳು ಅಶ್ವಿನೀ ದೇವತೆಗಳೂ ಸಾಧ್ಯ, ಮರುದ್ಗಣ, ಚಂದ್ರ, ಸೂರ್ಯ, ಮುಂತಾದ ಯಜ್ಞದಲ್ಲಿ ಪುರೋಡಾಶವನ್ನು ತಿಂದ ದೇವತೆಗಳೆಲ್ಲರೂ ಶಿವನೊಡನೆ ಹೋರಾಡಿ ಸೋತು ಹೋದರು.

ರಾತ್ರಿಯಾತು ಎಂದು ನೆವಮಾಡಿ ಚಂದ್ರನು ಚಿಕ್ಕೆಗಳನ್ನು ತೋರಿಸಿ ಆಗಸಕ್ಕೆ ಏರಿದನು. ಕಶ್ಯಪಾದಿ ಋಷಿಗಳು ಶತರುದ್ರವನ್ನು ಪಾರಾಯಣ ಮಾಡುತ್ತ ಬೊಗಸೆಯಲ್ಲಿ ಹೂ ಹಿಡಿದು ಭರ್ಗನನ್ನು ನಮಿಸಿ ಸ್ತೋತ್ರಮಾಡುತ್ತ ನಿಂತುಕೊಂಡರು. ರುದ್ರನ ಕೈ ಯುದ್ಧದಲ್ಲಿ ಮೇಲಾದುದನ್ನು ಕಂಡು ದಕ್ಷನ ಹೆಂಡತಿಯು ಇಂದ್ರಾದಿ ದೇವತೆಗಳಿಗೆ ಬಂದು ದೀನಗಳಾಗಿ ಶೋಕಮಾಡಿದಳು.

**೧೦೯. ತತಃ ಕ್ರೋಧಾಭಿಭೂತೇನ ಶಂಕರೇಣ ಮಹಾತ್ಮನಾ**
**ತಲಪ್ರಹಾರೈರಮರಾ ಬಹವೋ ವಿನಿಪಾತಿತಾಃ**

ಇತ್ತ ಕೋಪಕ್ರಾಂತನಾದ ಕೈಲಾಸಪತಿಯು ತನ್ನ ಅಂಗೈ ಅಂಗಾಲಗಳಿಂದಲೇ ಹೊಡೆದು ಎಷ್ಟೋ ದೇವತೆಗಳನ್ನು ನೆಲಕ್ಕೆ ಉರುಳಿಸಿದನು. ಮತ್ತೆ ಕೆಲವರು ಅವನ ಕೆಂಗಣ್ಣಿನ ಕಿಡಿಗಳಿಂದಲೇ ಸುಟ್ಟು ಹೋದರು. ತ್ರಿಶೂಲದ ಹೊಡೆತದಿಂದ ಸಾವನ್ನಪ್ಪಿದವರು ಎಷ್ಟೋ!

**೧೧೦. ತತಃ ಪೂಷಾ ಹರಂ ವೀಕ್ಷ್ಯ ವಿನಿಘ್ನಂತಂ ಸುರಾಸುರಾನ್ ।**
**ಕ್ರೋಧಾತ್ ಬಾಹೂ ಪ್ರಸಾರ್ಯಾಥ ಪ್ರಾದುದ್ರಾವ ಮಹೇಶ್ವರಂಃ**

ಹೀಗೆ ಸುರಾ-ಸುರನ್ನೆಲ್ಲ ಮುತ್ತಿ ಮರ್ದಿಸುತ್ತಿರುವ ಹರನನ್ನು ಕಂಡು ಸೂರ್ಯನು ಕ್ರುದ್ಧನಾಗಿ ಶಿವನ ಮೇಲೆ ಕೈಯಾಡುತ್ತ ಏರಿಬಂದನು. ಅದನ್ನು ಕಂಡು ಮುಕ್ಕಣ್ಣನು ತನ್ನ ಎರಡೂ ತೋಳುಗಳನ್ನು ಚಾಚಿ ಸೂರ್ಯನ ಕೈ ಹಿಡಿದು ತನ್ನ ಕಡೆಗೆ ಎಳೆದು ಕೊಂಡನು. ಶಿವನು ಸೂರ್ಯನ ಕೈಯನ್ನು ತನ್ನ ಕೈಯಲ್ಲಿ ತೆಗೆದುಕೊಂಡು ಹಿಚಿಕಿದ ಕೂಡಲೇ ಭಾಸ್ಕರನ ಬೆರಳುಗಳಿಂದ ಬಳ-ಬಳ ರಕ್ತದ ಧಾರೆಗಳು ಸುರಿದವು.

೧೧೧. ಕರಾಭ್ಯಾಂ ಪ್ರಗೃಹೀತಸ್ಯ ಶಂಭ ನಾಂಶುವ ತೋಪಿಹಿ ।
ಕರಾಂಗುಲಿಭ್ಯೋ ನಿಶ್ಚೇರುರಸೃಗ್ಧಾರಾ ಸ್ಸಮನ್ತತಃ ॥

ಅನಂತರ ಶಂಕರನು ದಿವಾಕರನನ್ನು ಸಿಂಹವು ಜಿಂಕೆಮರಿಯನ್ನು ತಿರುಗಿಸುವಂತೆ ಗರ-ಗರನೆ ತಿರುಗಿಸಿ ಬಿಟ್ಟು-ಬಿಟ್ಟನು. ತೋಳು ಹಿಡಿದು ಹರನು ಭರದಿಂದ ತಿರುಗಿಸಿದ್ದರಿಂದ ರವಿಯ ಬಾಹುಗಳು ಮಾಟಕಾದವು. ಮೈಯಲ್ಲಿಯ

೧೧೨. ರುಧಿರಾಪ್ಲುತಸರ್ವಾಂಗಮಂಶಮನ್ತಂ ಮಹೇಶ್ವರಃ
ಸನ್ನಿರೀ ಕ್ಷ್ಯೋತ್ಸಸರ್ಜ್ಯ ನಮಸ್ಕತೋಽಭಿಜಗಾಮ ಹ

ಎಲುಬಿನ ಕೀಲಗಳು ಮುರಿದವು. ಮೈಗೆಲ್ಲ ನೆತ್ತರು ಮೆತ್ತಿತು. ಆದಿತ್ಯನ ಈ ಅವಸ್ಥೆಯನ್ನು ಕಂಡು ಅವನು ದಣಿದು ಸೋತಿದ್ದಾನೆಂದು ತಿಳಿದು ಶಿವನು ಬೇರೆ ಕಡೆಗೆ ತಿರುಗಿದನು. ಆಗ ದಿವಾಕರನು ನಕ್ಕು ಹಲ್ಲು ಕಿರಿದು "ಆ ಎಲೋ ಕಾಪಾಲಿಕನೇ ಬಾ, ಇತ್ತ ಬಾ" ಎಂದು ನುಡಿದನು. ಈ ಮೂದಲಿಕೆಯ ಮಾತನ್ನು ಕೇಳಿ ಕುಪಿತನಾದ ಭವನು ವೇಗದಿಂದ ಭಾಸ್ಕರನ ಬಾಯಿ-ಬಾಯಿ ಬಡೆದನು. ಅದರಿಂದ ಸೂರ್ಯನ ಹಲ್ಲುಗಳೆಲ್ಲ ನೆಲದ ಮೇಲೆ ಉದರಿ ಬಿದ್ದವು. ಹೀಗೆ ಹಲ್ಲು ಮುರಿದುಕೊಂಡು ಮುಖವೆಲ್ಲ ರಕ್ತ ಜೊಂಬಳವಾಗಿ ರವಿಯು ಭೂಮಿಗೆ ಉರಿದನು. ಎಚ್ಚರದಪ್ಪಿತು. ಗಿರಿಗೆ ವಜ್ರಾಘಾತವಾದಂತೆ ಆಯಿತು.

ಸೂರ್ಯರ ಈ ಅವಸ್ಥೆಯನ್ನು ಕಂಡು ಭಗನಿಗೆ ರೋಶಿ ಹೋಯಿತು. ದ್ವಾದಶ ಆದಿತ್ಯರಲ್ಲಿ ಒಬ್ಬನಾದ ಅವನು ಕಣ್ಣು ಕಿಸಿದು ಕೈಲಾಸಪತಿಯನ್ನು ಕೆಕ್ಕರಿಸಿ ನೋಡಿದನು. ಅದನ್ನು ಗಮನಿಸಿದ ಪುರವೈರಿಯು ಕೈಯಿಂದ ಹೊಡೆದು ಭಗನ ಎರಡೂ ಕಣ್ಣುಗುಡ್ಡೆಗಳು ನೆಲಕ್ಕೆ ಬೀಳುವಂತೆ ಮಾಡಿದನು. ಆಗ ಹನ್ನೆರಡು ಆದಿತ್ಯರೂ ನಲವಂತ್ತೊಂಬತ್ತು ಮರುದ್ದೇವತೆಗಳೂ ಮೂರು ಅಗ್ನಿಗಳೂ ಇಂದ್ರಸಹಿತರಾಗಿ ದಿಕ್ಕೆಟ್ಟು ಓಡಿಹೋದರು. ದೇವತೆಗಳು ಅಲ್ಲಿಂದ ಕಾಲ್ತೆಗೆದ ಬಳಿಕ ಪ್ರಹ್ಲಾದನೇ ಮೊದಲಾದ ಶ್ರೇಷ್ಠರು ಮಹೇಶ್ವರನಿಗೆ ನಮಸ್ಕರಿಸಿ ಕೈಮುಗಿದುಕೊಂಡು ನಿಂತರು.

ಅನಂತರ ಆ ಶಂಕರನು ಭೂತಭಯಂಕರನಾಗಿ ಉಗ್ರದೃಷ್ಟಿಯಿಂದ ಯಜ್ಞ ಮಂಟಪವನ್ನು ನೋಡತೊಡಗಿದನು. ದೇವದಾನವರೆಲ್ಲರೂ ಉರಿದು ಹೋಗಹತ್ತಿದರು. ಕೆಲವರು ಅಡಗಿಕೊಂಡರು, ಹಲವರು ಓಡಿದರು, ಉಳಿದವರು ನಮಸ್ಕರಿಸಿದರು. ಎಷ್ಟೋ ಜನರು ಹರನ ನೇತ್ರಾಗ್ನಿಗೆ ಆಹುತಿಯಾದರು. ದಕ್ಷಪ್ರಜಾಪತಿಯ ಅಗ್ನಿಕುಂಡದಲ್ಲಿ ಉಳಿದ ಅಗ್ನಿಯೂ ಶಿವನ ನೇತಾಗ್ನಿಯ ಝಳಕ್ಕೆ ಹೆದರಿ ಆರಿ ತಣ್ಣಗಾಯಿತು. ಹೀಗೆ ಹೋಮಾಗ್ನಿಯೇ ನಷ್ಟವಾದುದನ್ನು ಕಂಡು ದಕ್ಷನು ಕೈಕೊಂಡ ಆ ಯಜ್ಞವೂ ಕೂಡ ಜಿಗರೆಯ ರೂಪವನ್ನು ಧರಿಸಿ ದಕ್ಷಿಣೆಯೊಂದಿಗೆ ಆಕಾಶಕ್ಕೆ ಓಡಿ ಹೋಯಿತು. ಆಗ ರುದ್ರನು ಅದನ್ನು ಬಿಡದೇ ಪಾಶೂಪತ ಬಾಣದಿಂದ ಧನುಸ್ಸನ್ನು ಸಿದ್ಧಪಡಿಸಿ ಕೊಂಡು ಅದನ್ನು ಬೆನ್ನಟ್ಟಿದನು.

೧೧೯. ಅರ್ಧೇನ ಯಜ್ಞವಾಟಾಂತೇ ಜಟಾಧರ ಇತಿ ಶ್ರುತಃ
ಅರ್ಧೇನ ಗಗನೇ ಶರ್ವಃ ಕಾಲರೂಪೀ ಚ ಕಥ್ಯತೇ ॥

ಹೋಗುವಾಗ ಶಂಕರನು ತನ್ನ ಅರ್ಧ ಅಂಶವನ್ನು ತನ್ನ ಯಜ್ಞ ಮಂಟಪದಲ್ಲಿಟ್ಟು ಉಳಿದ ಅರ್ಧಅಂಶದಿಂದ ಯಜ್ಞರೂಪಿ ಮೃಗವನ್ನು ಬೆನ್ನಟ್ಟಿದನು. ಯಜ್ಞವಾಟದಲ್ಲಿಯ ಶಿವರೂಪವು ಜಟಾಧರ ಎಂದೂ ಆಕಾಶದಲ್ಲಿ ಹೊರಟ ಶಿವನ ಅರ್ಧಾಂಶವು ಕಾಲ ರೂಪ ಎಂದೂ ಹೆಸರಾಯಿತು.

ನಾರದ-ಗಗನಚಾರಿಯಾದ ಶಿವನು ಕಾಲ ರೂಪಿ ಎಂದು ತಾವು ಹೇಳಿದಿರಿ. ಆದರೆ ಆ ಕಾಲರೂಪಿ ಶಂಭುವಿನ ಲಕ್ಷಣವೇನು ? ಸ್ವರೂಪವಾವುದು ? ಇದನ್ನು ದಯವಿಟ್ಟು ತಾವು ತಿಳಿಸಬೇಕು.

## ಪುಲಸ್ತ್ಯ

೧೨೦. ಸ್ವರೂಪಂ ತ್ರಿಪುರಘ್ನಸ್ಯ ವದಿಷ್ಯೇ ಕಾಲರೂಪಿಣಃ ।
ಯೇನಾಂಬರಮ್ ಮುನಿಶ್ರೇಷ್ಠ ವ್ಯಾಪ್ತಂ ಲೋಕಹಿತೇಚ್ಛುನಾ॥

ಪುನಸ್ತ್ಯ - ಎಲೈ ಮುನಿಶ್ರೇಷ್ಠನೇ, ಲೋಕ ಹಿತೈಷಿಯಾದ ಯಾವ ತ್ರಿಪುರಾರಿಯ ಸ್ವರೂಪವು ಆಕಾಶದಲ್ಲಿ ವ್ಯಾಪ್ತವಾಗಿ ನಿಂತಿತೋ ಅಂತಹ ಕಾಲರೂಪಿಯಾದ ಅವನ ಸ್ವರೂಪವನ್ನು ಹೇಳುತ್ತೇನೆ.

ಯಾವಕಾಲದ ಅಂಶದಲ್ಲಿ ಅಶ್ವಿನೀ ಮತ್ತು ಭರಣೀ ಮತ್ತು ಕೃತ್ತಿಕಾ ನಕ್ಷತ್ರದ ಒಂದು ಪಾದವೂ ಸೇರಿರುತ್ತದೆಯೊ ಅದಕ್ಕೆ ಮೇಷರಾಶಿ ಎಂದು ಹೆಸರು. ಅದಕ್ಕೆ ಅಧಿಪತಿಯು ಅಂಗಾರಕನು. ಇಂತಹ ಕಾಲವು ಆ ಕಾಲರೂಪಿಯಾದ ಮಹೇಶ್ವರನಿಗೆ ಶಿರಸ್ಸು (ತಲೆ). ಹೀಗೆಯೇ ಕೃತ್ತಿಕಾ ನಕ್ಷತ್ರದ ಮೂರು ಪಾದಗಳೂ ರೋಹಿಣೀ ನಕ್ಷತ್ರದ ನಾಲ್ಕು ಪಾದ ಮತ್ತು ಮೃಗಶಿರಾ ನಕ್ಷತ್ರದ ಎರಡು ಪಾದ ಈ ಒಂಭತ್ತು ಪಾದಗಳು ವೃಷಭರಾಶಿ. ಅದಕ್ಕೆ ಶುಕ್ರನು ಅಧಿಪತಿಯಾಗಿರುವನು. ಇದು ಕಾಲರೂಪಿಯ ಮುಖವು.

ಮೃಗಶಿರಾ ನಕ್ಷತ್ರದ ಕೊನೆಯ ಎರಡು ಪಾದಗಳು ಮತ್ತು ಆರ್ದ್ರಾ ಪನರ್ವಸು-ವಿನ ಮೂರು ಅಂಶಗಳೂ ಸೇರಿ ಮಿಥುನರಾಶಿಯಾಗಿರುತ್ತದೆ. ಅದಕ್ಕೆ ಬುಧನು ಅಧಿಪತಿಯು, ಇದು ಕಾಲಲರೂಪಿಯ ಭುಜಸಂಧಿ. ಮತ್ತು ಪುನರ್ವಸು ನಕ್ಷತ್ರದ ಅಂತ್ಯಭಾಗವು ಪುಷ್ಯ ಆಶ್ಲೇಷಾ ಭಾಗಗಳು ಸೇರಿ ಕರ್ಕಾಟವೆನಿಸುತ್ತದೆ. ಇದಕ್ಕೆ ಚಂದ್ರನು ಸ್ವಾಮಿ. ಇದು ಕಾಲ ಪುರುಷನ ಪಾರ್ಶ್ವಪ್ರದೇಶ.

ಮೇಘಾ, ಪುಬ್ಬಾ, ಉತ್ತರೆಯ ಒಂದು ಪಾದವು ಸಿಂಹರಾಶಿಯಾಗಿರುತ್ತದೆ. ಇದು ಸೂರ್ಯನಕ್ಷತ್ರ. ಇದು ಕಾಲರೂಪಿಯ ಹೃದಯ. ಮತ್ತು ಉತ್ತರೆಯ ಮೂರು ಪಾದಗಳು ಹಸ್ತಾ, ಚಿತ್ರಾ ನಕ್ಷತ್ರದ ಮೊದಲನೇ ಎರಡು ಪಾದಗಳು ಕನ್ಯಾರಾಶಿ, ಇದಕ್ಕೆ ಬುಧನು ಅಧಿಪತಿ. ಇದು ಕಾಲಪುರುಷನ ಉದರ.

ಚಿತ್ರಾನಕ್ಷತ್ರ ಎರಡು ಪದಗಳು, ಸ್ವಾತಿ ವಿಶಾಖಾ ನಕ್ಷತ್ರದ ಮೂರು ಪಾದಗಳು ತುಲಾರಾಶಿ. ಇದು ಶುಕ್ರನ ಎರಡನೇ ಗ್ರಹ. ಇದು ಕಾಲಪುರುಷನ ನಾಭಿ. ವಿಶಾಖೆಯ ಕೊನೆಯ ಪಾದ ಅನುರಾಧಾ, ಜೇಷ್ಠಾ ನಕ್ಷತ್ರಗಳು ವೃಶ್ಚಿಕರಾಶಿ. ಇದು ಅಂಗಾರಕನ ಎರಡನೇಯ ಗ್ರಹ. ಇದು ಕಾಲ ಪುರುಷನ ಲಿಂಗ.

ಮೂಲಾ ಪೂರ್ವಾಷಾಢಾ ಉತ್ತರಾಷಾಢಾ ಒಂದು ಪಾದವೂ ಸೇರಿ ಧನೂರಾಶಿ ಯಾಗಿರುತ್ತದೆ. ಇದು ಬೃಹಸ್ಪತಿಯ ಗೃಹ. ಇದು ಕಾಲರೂಪಿಯ ಊರು (ತೊಡೆ) ವಿಭಾಗ ಮತ್ತು ಉತ್ತರಾಷಾಢಾ ನಕ್ಷತ್ರದ ಮೂರುಪಾದ ಮತ್ತು ಶ್ರವಣ ಧನಿಷ್ಠಾ ನಕ್ಷತ್ರದ ಅರ್ಧ ಇವು ಮಕರರಾಶಿ, ಇದಕ್ಕೆ ಶನಿಯು ಅಧಿಪತಿ. ಇದು ಕಾಲಪುರುಷನ ಜಾನು (ಮಂಡಿಯ) ಭಾಗವಾಗಿರುತ್ತದೆ. ಧನಿಷ್ಠೆಯ ಕಡೆಯ ಎರಡು ಪಾದಗಳು ಶತಭಿಷ, ಪೂರ್ವಾಭಾದ್ರ ಪಾದತ್ರಯ ಗಳೂ, ಕುಂಭರಾಶಿಯಾಗಿರುತ್ತದೆ. ಇದು ಶನಿಯ ಮತ್ತೊಂದು ಸ್ಥಾನ. ಇದು ಕಾಲ ಪುರುಷನ ಮೊಣಕಾಲು ಮತ್ತು ಪೂರ್ವಾಭಾದ್ರೆಯ ಒಂದು ಪಾದ ಉತ್ತರಾಭಾದ್ರ ರೇವತಿ ಗಳು ಮೀನರಾಶಿ, ಇದು ಬೃಹಸ್ಪತಿಯ ಎರಡನೇ ಗೃಹ. ಇದು ಕಾಲಪುರುಷನ ಪಾದಗಳು.

೧೨೧. ಏವಂ ಕೃತ್ವಾ ಕಾಲರೂಪಂ ತ್ರಿನೇತ್ರೋ
ಯಜ್ಞಂ ಕ್ರೋಧಾನ್ಮಾರ್ಗಣೈರಾಜಘಾನ ॥
ವಿದ್ಧಶ್ಚಾಸೌ ವೇದನಾ ಬುದ್ಧಿಮುಕ್ತಃ
ಖೇ ಸಂತಸ್ಥೌ ತಾರಕಾಭಿಶ್ಚಿತಾಂಗಃ

ಈ ರೀತಿಯಾದ ಕಾಲರೂಪವನ್ನು ಧರಿಸಿದ ಶಂಕರನು ಮೃಗರೂಪದಿಂದ ಓಡಿಹೋದ ಆ ಯಜ್ಞವನ್ನು ಕೋಪಾವಿಷ್ಟನಾಗಿ ಬಾಣಗಳಿಂದ ಹೊಡೆದನು. ಬಾಣಗಳಿಂದ ಹೊಡೆಯಲ್ಪಟ್ಟು ಆ ಮೃಗವು ಬುದ್ಧಿಜ್ಞಾನಗಳಿಂದ ಬಿಡಲ್ಪಟ್ಟು ಜಡವಾಗಿ ಆಕಾಶದಲ್ಲಿ ನಕ್ಷತ್ರಗಳಿಂದ ಆವೃತವಾಗಿ ಅಲ್ಲಿಯೇ ನಿಂತಿತು. (ಇಲ್ಲಿ ಹೇಳಿರುವ ನಕ್ಷತ್ರಾಂಶಗಳು ಜ್ಯೋತಿರೂಪವಾದ ಮೇಷಾದಿ ರಾಶಿಗಳು. ಇವುಗಳು ಕಾಲರೂಪವಲ್ಲ, ಆ ಮೇಷಾದಿ ರಾಶಿಗಳ ಉದಯಾಭಿವ್ಯಕ್ತಿಯಾಗುವ ಮೇಷಾದಿ ಲಗ್ನಗಳೇ ಕಾಲರೂಪ ವಾಗುತ್ತವೆ ಯಾದ್ದರಿಂದ ಇವುಗಳೇ ಕಾಲರೂಪಿಯಾದ ತ್ರಿನೇತ್ರನ ಅವಯವಗಳೆಂದು ರೂಪಿತವಾಗಿರುತ್ತದೆ.) ನಾರದರು ಹೇಳುತ್ತಾರೆ- ಮಹರ್ಷಿಯೇ ರಾಶಿಗಳನ್ನೆಲ್ಲಾ ನೀನು ಹೇಳಿಯಾಯಿತು. ಅವಿಗಳ ಸ್ವರೂಪ ಮತ್ತು ಲಕ್ಷಣಗಳನ್ನು ಹೇಳಬೇಕು.

## ಪುಲಸ್ತ್ಯ ಉವಾಚ

೧೨೨. ಸ್ವರೂಪಂ ತವ ವಕ್ಷ್ಯಾಮಿ ರಾಶೀನಾಂ ಶೃಣು ನಾರದ
ಯಾದೃಶಾ ಯತ್ರ ಸಂಚಾರಾ ಯಸ್ಮಿಂಸ್ಥಾನೆ ವಸಂತಿ ಚ ॥

೧೨೪. ಮೀನದ್ವಯ ಮಥಾಸಕ್ತಂ ಮೀನಸ್ತ್ರೀರ್ಥಾಬ್ಧಿ ಸಂಚರಃ ॥
ವಸತೇ ಪುಣ್ಯದೇಶೇಷು ದೇವಬ್ರಾಹ್ಮಣಸದ್ಮಸು ॥
ಲಕ್ಷಣಾ ಗದಿತಾಸ್ತುಭ್ಯಂ ಮೇಷಾದೀನಾಂ ಮಹಾಮುನೇ
ನ ಕಸ್ಯಚಿತ್ವಯಾಖ್ಯೇಯಂ ಗುಹ್ಯಮೇತತ್ಪುರಾತನಂ

೧೨೫. ಏತನ್ಮಯಾ ತೇ ಕಥಿತಂ ಸುರರ್ಷೇ
ಯಥಾ ತ್ರಿನೇತ್ರಃ ಪ್ರಮಮಂಥ ಯಜ್ಞಂ ॥
ಪುಣ್ಯಂ ಪುರಾಣಂ ಪರಮಂ ಪವಿತ್ರ
ಮಾಖ್ಯಾನತಃಪಾಪಹರಂ ಶಿವಂ ಚ ॥

ಎಲೈ ನಾರದನೇ, ಆ ರಾಶಿಗಳ ಸ್ವರೂಪವನ್ನೂ ಅವು ಸಂಚರಿಸುವ ಸ್ಥಳವನ್ನೂ ಅವುಗಳ ವಾಸಸ್ಥಾನವನ್ನೂ ಹೇಳುತ್ತೇನೆ ಕೇಳು. ಮೇಷರಾಶಿಯು ಟಗರಿಗೆ ಸಮನವಾದ ಆಕಾರವುಳ್ಳದ್ದು. ಅದು ಹಸಿರು ಹುಲ್ಲು ಬೆಳೆದಿರುವ ಪ್ರದೇಶದಲ್ಲೂ, ನದೀ ಸರೋವರಗಳಲ್ಲೂ, ಮರಳು ಪ್ರದೇಶದಲ್ಲೂ ಸಂಚರಿಸುತ್ತದೆ. ಆಡು, ಕುರಿ ಮುಂತಾದ ಪಶುಗಳನ್ನು ಸಾಕುವವರೇ ಅದಕ್ಕೆ ಆಶ್ರಯ ಸ್ಥಾನ.

ವೃಷಭರಾಶಿಯು ಎತ್ತಿನ ಆಕಾರವಾಗಿರುತ್ತದೆ. ಅದು ಗೋಕುಲದಲ್ಲಿ ಸಂಚರಿಸುತ್ತದೆ. ವ್ಯವಸಾಯಗಾರರೂ ಪರ್ವತವಿರುವ ಪ್ರದೇಶಗಳೂ ಅದಕ್ಕೆ ಆವಾಸಸ್ಥಾನ. ಶಯ್ಯೆ(ಹಾಸಿಗೆ) ಆಸನ ಇವುಗಳನ್ನು ಆಶ್ರಯಿಸಿ ಸ್ತ್ರೀ ಪುರುಷರ ಯುಗ್ಮಕ್ಕೆ ಸಮಾನವಾದ ಆಕಾರವನ್ನು ಹೊಂದಿ ವೀಣಾಧಾರಿಯಾಗಿ ಮಿಥುನರಾಶಿ ಇರುತ್ತದೆ. ಇದಕ್ಕೆ ಧನಿಕರೇ ಆಶ್ರಯ. ಸಂಗೀತ ನೃತ್ಯ ಮೊದಲಾದ ಕಲಾಭಿಜ್ಞರಲ್ಲಿ ಇದು ಸಂಚರಿಸುತ್ತದೆ. ಇದು ಪುರುಷರ ಉಭಯಾತ್ಮಕವಾದ ಹರನ ದೇಹ.

ಕರ್ಕಾಟವು ನಳ್ಳಿಗೆ (ಏಡಿ) ಸಮಾನವಾದ ಆಕಾರವುಳ್ಳದ್ದು. ಜಲವು ಅದಕ್ಕೆ ಆವಾಸಸ್ಥಾನ. ಗದ್ದೆ, ಬಾವಿ, ಮರಳು ಪ್ರದೇಶ, ಜನರಹಿತವಾದ ಭೂಮಿ ಇವು ಇದರ ಸಂಚಾರ ಸ್ಥಾನಗಳು, ಸಿಂಹವು ಪರ್ವತ ಅರಣ್ಯ, ದುರ್ಗ ಪ್ರದೇಶ, ಗುಹೆಗಳು ಇಲ್ಲಿ ವಾಸಮಾಡುತ್ತದೆ. ಬೇಡರಹಳ್ಳಿ, ಗುಹೆ ಇವುಗಳ ಇದರ ಸಂಚಾರಸ್ಥಾನಗಳು. ಕನ್ಯಾ ರಾಶಿಯು ಸ್ತ್ರೀಯರ ಸುಖಸ್ಥಾನದಲ್ಲಿ ವಾಸಿಸುತ್ತದೆ. ಭತ್ತ, ದೀಪಧಾರಣೆಯಾದ ಸ್ತ್ರೀ, ಮನುಷ್ಯರ ಅಂತಃಕರಣ, ಹುಲ್ಲಿನಿಂದ ಕೂಡಿರುವ ಪ್ರದೇಶ ಇವು ಇದರ ಸಂಚಾರಸ್ಥಾನಗಳು. ತುಲಾರಾಶಿಯು ತಕ್ಕಡಿಯುಳ್ಳ ಪುರುಷನ ಆಕಾರವಾಗಿರುತ್ತದೆ. ನಗರದ ಮಾರ್ಗ ದಲ್ಲೂ ದೊಡ್ಡ ಶಾಲೆಗಳಲ್ಲೂ ಅದರ ವಾಸ. ಮಾರ್ಗ ಅಂಗಡಿ ಇವಿ ಇದರ ಸಂಚಾರ ಸ್ಥಾನ. ವೃಶ್ಚಿಕವು ಚೇಳಿನ ಆಕಾರವುಳ್ಳದ್ದು. ವಿಷ ಗೋಮಯ(ಸಗಣೀ) ಕ್ರಿಮಿಗಳು, ಕಲ್ಲುಗಳು ಇವು ಇದರ ಸ್ಥಾನ. ಹಳ್ಳ, ಹುತ್ತ ಇವುಗಳು ಸಂಚಾರಸ್ಥಾನ ಧನೂರಾಶಿಯು ಕುದುರೆಯಂತೆ ಸಣ್ಣ ಮಧ್ಯಭಾಗವುಳ್ಳ ತೇಜಸ್ವಿಯಾದ ಧನುರ್ಧಾರಿಯ ಆಕಾರವುಳ್ಳದ್ದು. ಆನೆ ರಥ ಮುಂತಾದವು ಇದರ ಸಂಚಾರಸ್ಥಾನ. ಕುದುರೆ ಶೂರ, ಅಸ್ತ್ರವಿದ್ಯೆಯುಳ್ಳ ಪುರುಷ ಇವರಲ್ಲಿ ವಾಸಿಸುತ್ತದೆ.

ಮಕರರಾಶಿಯು ಜಿಂಕೆಯ ಮೋರೆಯಂತೆ ಮುಖವುಳ್ಳ ಎತ್ತಿನ ಭುಜದಂತೆ ಭುಜವುಳ್ಳ ಎತ್ತಿನಂತಹ ಕಣ್ಣುಳ್ಳ ಆನೆಯಂತಿರುವದು. ಅದರ ಸಂಚಾರ ನದಿಯಲ್ಲಿ. ಅದರ ವಾಸಸ್ಥಾನವು ಮಹಾಸಮುದ್ರ ಮತ್ತು ಕುಂಭರಾಶಿಯು ನೀರಿಲ್ಲದ ಗಡಿಗೆಯನ್ನು ಹೊಂದಿ ಭುಜಗಳಿಂದ ಸಂಚರಿಸುವ ಮನುಷ್ಯನಂತಿರುವದು. ನೀರಿನಿಂದ ತೊಯ್ದು ಹೋದ ಶರೀರ, ಜೂಜಿನ ಶಾಲೆಗಳಲ್ಲಿ ಇದಕ್ಕೆ ಸಂಚಾರ. ಪಡಖಾನೆಗಳಲ್ಲಿ ಇದರ ವಾಸ.

ಮೀನರಾಶಿಯು ಪರಸ್ಪರ ಸೇರಿಕೊಂಡಿರುವ ಮೀನದ್ವಯದ ಆಕಾರವುಳ್ಳದ್ದು. ತೀರ್ಥಗಳಲ್ಲಿಯೂ ಸಮುದ್ರಗಳಲ್ಲಿಯೂ ಇದಕ್ಕೆ ಪುಣ್ಯ ಕ್ಷೇತ್ರಗಳಲ್ಲಿಯೂ ದೇವ ಬ್ರಾಹ್ಮಣರ ಮನೆಯಲ್ಲಿಯೂ ಇದರ ವಾಸ. ಎಲೈ ಮಹರ್ಷಿಯೇ, ಈ ಮೇಷಾದಿಗಳ ಲಕ್ಷಣವೆಲ್ಲವನ್ನೂ ನಿನಗೆ ಹೇಳಿರುತ್ತೇವೆ. ಪರಮಪ್ರಾಚೀನವಾದ ಈ ರಹಸ್ಯವನ್ನು

ಯಾರಿಗೂ ಹೇಳಕೂಡದು. ಇಂತಹ ತ್ರಿನೇತ್ರನ ಸಾಮರ್ಥ್ಯ ಸೂಚಕವಾದ ದಕ್ಷ ಯಜ್ಞ ಧ್ವಂಸ ವೃತ್ತಾಂತವನ್ನು ನಿನಗೆ ಹೇಳಿದ್ದೇನೆ. ಈ ಪುರಾತನವಾದ ಕಥೆಯೂ ಪವಿತ್ರವೂ ಪುಣ್ಯಕರವೂ ಮಂಗಲಪ್ರದವೂ ಆಗಿರುವದರಿಂದ ಇದನ್ನು ಕೇಳಿದ ನೀನೂ ಹೇಳಿದ ನಾನೂ ಧನ್ಯರೆಂದು ತಾತ್ಪರ್ಯ.

ವಾಮನ ಮಹಾಪುರಾಣದಲ್ಲಿ ಜೀವನರಾಶಿಗಳ ಸಂಬಂಧ ಎಂಬ ಐದನೇಯ ಅಧ್ಯಾಯವು ಮುಗಿದುದು

—o—

## ಶಿವನ ಲಿಂಗಪತನ — ಅಧ್ಯಾಯ - ೬

**ಪುಲಸ್ತ್ಯ**-ಋಕ್ ಶಾಲೆಯ ಧರ್ಮ ಎಂಬ ಬ್ರಾಹ್ಮಣವು ವೇದ ವಿದ್ಯೆಯಲ್ಲಿ ಪಾರಂಗತನಾಗಿದ್ದನು. ಕರ್ಮಠನಾದ ಆ ಭೂಸುರವು ಮೂರ್ತಿಮಂತ ಧರ್ಮದಂತೆ ದಿವ್ಯವಾದ ಬ್ರಹ್ಮ ವರ್ಚಸ್ಸಿನಿಂದ ಶೋಭಿಸುತ್ತಿದ್ದನು.

**೧೨೬. ಬಹ್ವೃಚೋ ಬ್ರಾಹ್ಮಣೋ ಯೋಽಸೌ ಧರ್ಮೋ ದಿವ್ಯವಪುಃ ಸದಾ**
**ತಸ್ಯ ಭಾರ್ಯಾ ತ್ವಹಿಂಸಾ ಚ ತಸ್ಯಾಮಜನಯತ್ಸುತಾನ್ ॥**

ವಿಪ್ರವರ್ಯನಾದ ಆ ಮಹಾಮುನಿಯ ಮಡದಿಯ ಹೆಸರು ಅಹಿಂಸೆ. ಈ ದಂಪತಿಗಳಿಂದ ಜನಿಸಿದ ಹರಿ ಮತ್ತು ಕೃಷ್ಣ ಎಂಬ ಮಕ್ಕಳೇ ನರ ನಾರಾಯಣರು.

**೧೨೭. ಹರಿಃ ಕೃಷ್ಣಶ್ಚ ಚ ದೇವರ್ಷೇ ನರ ನಾರಾಯಣೌ ತಥಾ ।**
**ಯೋಗಾಭ್ಯಾಸರತೌ ನಿತ್ಯಂ ನಹರಿಕೃಷ್ಣೌ ಬಭುವತುಃ**

ಯೋಗಾಭ್ಯಾಸದಲ್ಲಿ ನಿರತರಾದ ಈ ಹರಿಕೃಷ್ಣರೆಂಬ ಶಾಂತಮೂರ್ತಿಗಳು ಜಗತ್ತಿನ ಕ್ಷೇಮಕ್ಕಾಗಿ ತಪಸ್ಸು ಮಾಡಿದರು. ಪುರಾಣ ಋಷಿ ಪುಂಗವರಾದ ಆ ನರ ನಾರಾಯಣ ರಿಬ್ಬರೂ ಬದರಿಕಾಶ್ರಮದಲ್ಲಿ ಗಂಗಾನದಿಯ ತಟಾಕದಲ್ಲಿ ನಿಂತುಕೊಂಡು ಪರಬ್ರಹ್ಮ ವನ್ನು ಧ್ಯಾನ ಮಾಡುತ್ತ ತಪೋನುಷ್ಠಾನವನ್ನು ಮುಂದುವರಿಸಿದರು.

**೧೨೮. ಪ್ರಾಲೇಯಾದ್ರಿಂ ಸಮಾಗಮ್ಯ ತೀರ್ಥೇ ಬದರಿಕಾಶ್ರಮೇ ।**
**ಗೃಣಂತೌ ತತ್ಪರಂ ಬ್ರಹ್ಮ ಗಂಗಾಯಾ ವಿಪುಲೇ ತಟೇ ॥**

ಅವರ ಈ ಘೋರ ತಪಸ್ಸಿನಿಂದ ಚರಾಚರವಾದ ಪ್ರಪಂಚವೆಲ್ಲವೂ ಪ್ರಕ್ಷುಬ್ಧ ವಾಯಿತು. ಈ ಋಷಿವರೇಣ್ಯರೀರ್ವರ ತಪಶ್ಚರ್ಯೆಯಿಂದ ಕಳವಳಗೊಂಡ ಸುರೇಂದ್ರನು ಅವರ ಮನಸ್ಸನ್ನು ಚಂಚಲಗೊಳಿಸಿ ತಪಸ್ಸನ್ನು ಭಂಗಪಡಿಸಬೇಕೆಂದು ರಂಭಾ ಎಂಬ ಅಪ್ಸರೆಯನ್ನು ಅಲ್ಲಿಗೆ ಕಳಿಸಿಕೊಟ್ಟನು. ರಂಭೆ ಸ್ವರ್ಗದ ಅಪ್ಸರೆಯರಲ್ಲಿ ಎಲ್ಲರಿಗಿಂತ ಮಿಗಿಲಾದವಳು. ರೂಪದಲ್ಲಿ ಸುರಲೋಕದ ಸುಂದರಿಯೂ ಅವಳಿಗೆ ಸರಿದೂಗುತ್ತಿರಲಿಲ್ಲ. ಇಂಥ ಚೆಲುವಿನ ಚೌರುಗಾತ್ರಿ ನರ ನಾರಾಯಣರ ಆಶ್ರಮಕ್ಕೆ ಹೊರಟುನಿಂತಾಗ ಅವಳಿಗೆ ಸಹಾಯಕನಾಗಿ ಮಾಮರದ ಕುಡಿ-ಮಿಡಿಗಳನ್ನು ತನ್ನ ಆಯುಧಗಳನ್ನಾಗಿ ಮಾಡಿಕೊಂಡ ಕಾಮನು ಬೆಂಬಲವಾಗಿ ನಡೆದ. ಅವನ ಬೆಂಗಾವಲಾಗಿ ವಸಂತ ಮಾಸವು ದಿಗ್ವಿಜಯವನ್ನು ಬೆಳೆಸಿತು.

ಹೀಗೆ ಮನ್ಮಥ ಮಧುಮಾಸರು ಅಪ್ಸರೆಯರ ಅರಸಿಯರನ್ನು ಅನುಸರಿಸಿಕೊಂಡು ಬಂದು ಬದರಿಕಾಶ್ರಮದ ಬನದ ಬಳಿಯಲ್ಲಿಯೇ ಬೀಡುಬಿಟ್ಟರು. ಅದೀಗ ಹೊಸದಾಗಿ ಇಳಿದು ಬಂದ ಚೈತ್ರದ ಚುಂಬನದಿಂದಾಗಿ ಚಳಿಯಿಂದ ಮರಗಟ್ಟು ನಿಂತ ಮರಬೊಡ್ಡೆಗಳಲ್ಲಿ ಚೆಲುವು, ಚಿಮ್ಮಿ ಬಂದಿತು. ಚಿಗುರು ಹೊಗರೇರಿ ಕುಡಿಮಿಡಿಗಳು ಚಲ್ವರಿದು ದಾಗುಂಡಿ ಇಟ್ಟು ಬೆಳೆದವು. ಹೊಂದಳಿರಿನ ಹಂದರಗಳು ಎಲ್ಲೆಲ್ಲಿಯೂ ಸುಂದರವಾಗಿ ತಲೆಎತ್ತಿ ತೂಗಾಡಿದವು. ಮುತ್ತುಗದ ಮರಗಳು ತಮ್ಮ ಹಣ್ಣೆಲೆಗಳನ್ನೆಲ್ಲ ಕಳಚಿ ಹೊಸ ಕಿಸಲಯಗಳ ಕೆಂಗಡಿಯ ಕಾಂತಿಯನ್ನು ಸೂಸುತ್ತ ಅಲ್ಲಲ್ಲಿ ಎಸೆದವು.

೧೨೯. ಶಿಶಿರಂನಾಮ ಮಾತಂಗಂ ವಿದಾರ್ಯ ನಖರೈರಿವ ।
ವಸಂತಕೇಸರೀ ಪ್ರಾಪ್ತಃ ಪಲಾಶಕುಸುಮೈರ್ಮುನೇ ॥

ಚಳಿಗಾಲವೆಂಬ ಆನೆಯನ್ನು ಸೋಲಿಸಿ ವಸಂತಮಾಸವು ಸಿಂಹದಂತೆ ಗರ್ಜಿಸಿತು. ಪಕಳೆದೆರೆದು ಹೂಗಳಿಂದ ಹಾಸ್ಯ ಮಾಡುತ್ತಿತ್ತು. ಗಣಿಗಲೆ, ಕದಂಬು, ಅಶೋಕ, ಬಂಧೂಕ, ಕುಂಧ ಮುಂತಾದ ಬಗೆಬಗೆಯ ಹೂಗಳು ಅರಳಿ ಕಂಪಿಂಪಾಗಳನ್ನು ಸೂಸತೊಡಗಿದವು. ಮಧುಪಾನದಿಂದ ಮತ್ತವಾದ ಕೋಗಿಲೆಗಳ ಮತ್ತು ಮಧುಕರಗಳ ಮಂಜುಳಗೀತ ಗುಂಜಾರವದಿಂದ ಆ ಏಕಾಂತವನಾಂತರಗಳೆಲ್ಲವೂ ಮಧುರ ಮುಖರಿತವಾಗಿದ್ದವು. ಹೀಗೆ ಸುತ್ತಲೂ ಅರಳಿನಿಂತ ವಸಂತಲಕ್ಷ್ಮಿಯ ವೈಭವವನ್ನು ಕಂಡು ಶ್ರೀಮನ್ನಾರಾಯಣನು ಕೌತುಕಪಟ್ಟನು.

೧೩೦. ತತೋ ನಾರಾಯಣೋ ದೃಷ್ಟ್ವಾ ಆಶ್ರಮಸ್ಯಾನವದ್ಯತಾಂ ।
ಸಮೀಕ್ಷ್ಯ ಸ ದಿಶಃ ಸರ್ವಾಸ್ತತೋಽನಂಗಮಪಶ್ಯತ ॥

ಒಮ್ಮಿಂದೊಮ್ಮೆ ಲೇಎಲ್ಲೆಡೆಗೂರಂಜಿಸುತ್ತಿರುವಈರಮಣೀಯತೆಯಕಾರಣವು ಏನು ? ಎಂದು ಪರಾಮರ್ಶಿಸಿದನು. ಆಕಸ್ಮಿಕವಾದ ಪ್ರಾಕೃತಿಕ ಸೌಂದರ್ಯದ ಪ್ರಾದುರ್ಭಾವಕ್ಕೆ ಮೂಲಕಾರಣನಾದಮನ್ಮಥನುಶ್ರೀಮನ್ನಾರಾಯಣನದೃಷ್ಟಿಗೆಗೋಚರನಾದನು.

ನಾರದ-ಬ್ರಹ್ಮರ್ಷಿಯೇ, ಆ ಬದರಿಕಾಶ್ರಮಕ್ಕೆ ಶ್ರೀಮನ್ನಾರಾಯಣನು ಕಂಡ ಕಾಮ ಅಥವಾ ಮನ್ಮಥನು ಯಾರು ?

## ಪುಲಸ್ತ್ಯ ಉವಾಚ

೧೩೧. ಕಂದರ್ಪೋ ಹರ್ಷತನಯೋ ಯೋಽಸೌ ಕಾಮೋ ನಿಗದ್ಯತೇ ।
ಸ ಶಂಕರೇಣ ಸಂದಗ್ಧೋ ಹ್ಯನಂಗತ್ವಮುಪಾಗತಃ ॥

ಪುಲಸ್ತ್ಯ - ಹರ್ಷದಿಂದ ಹುಟ್ಟಿದ ಆ ಕಾಮನಿಗೆ ಕಂದರ್ಪ, ಮನ್ಮಥ ಕಾಮ - ಮುಂತಾದ ಹೆಸರುಗಳು ಇರುತ್ತವೆ. ಹಿಂದೆ ಅವನನ್ನು ಶಂಕರನು ತನ್ನ ಹಣೆಗಣ್ಣಿನಿಂದ ನಿಟ್ಟಿಸಿ ನೋಡಿ ಸುಟ್ಟುಹಾಕಿದ್ದನು. ಅಂದಿನಿಂದ ಕಾಮನು ಅನಂಗ ಅಂದರೆ ಅಂಗಹೀನನಾದನು.

ನಾರದ-ದೇವತೆಗಳಿಗೂ ದೇವರೆನಿಸಿದ ಮಹಾದೇವನು ಕಾಮನನ್ನು ಏಕೆ ಸುಟ್ಟು ಹಾಕಿದನು ? ಯಾವ ಕಾರಣಕ್ಕಾಗಿ ಮನ್ಮಥನ ದೇಹ ದಾಹವಾಯಿತು. ಇದನ್ನೆಲ್ಲ ನನಗೆ ವಿವರಿಸಿ ಹೇಳಬೇಕು.

ಪುಲಸ್ತ್ಯ - ದಕ್ಷ ಪ್ರಜಾಪತಿಯ ಮಗಳಾದ ಸತೀದೇವಿಯು ಮರಣ ಹೊಂದಿದ ಬಳಿಕ ಶಂಕರನು ದಕ್ಷ ಯಜ್ಞವನ್ನು ಧ್ವಂಸಮಾಡಿ ಏಕಾಕಿ ಆಗಿ ಎಲ್ಲೆಡೆಯಲ್ಲಿ ಅಲೆದಾಡಿ ದನು. ಅಂಗನೆಯಿಂದ ಅಗಲಿದ ಆ ಶಂಭುವನ್ನು ಕಾಮನು ತನ್ನ ಕುಸುಮಾಯುಧದಿಂದ ಹೊಡೆದು ಗಾಯಗೊಳಿಸಿದನು.

೧೩.೨. ತತೋ ಹರಃ ಶರೇಣಾಥ ಉನ್ಮಾದೇನಾಶು ತಾಡಿತಃ ।
ವಿಚಚಾರ ತದೋನ್ಮತ್ತಃ ಕಾನನಾನಿ ಸರಾಂಸಿ ಚ ॥

೧೩.೩. ಸ್ಮರನ್ಸತೀಂ ಮಹಾದೇವಸ್ತಥೋನ್ಮಾದೇನ ತಾಡಿತಃ ।
ನ ಶರ್ಮ ಲೇಭೇ ದೇವರ್ಷೇ ಬಾಣವಿದ್ಧ ಇವ ದ್ವಿಪಃ ॥

ಮದೋನ್ಮತ್ತನಾದ ಕಾಮನ ಬಾಣದಿಂದ ಶಂಕರನ ಚಿತ್ತವು ಚಂಚಲಿಸಿ ತಲೆಕೆಟ್ಟಿತು. ಮನ ಮದಿಸಿತು. ಉನ್ಮಾದ ತುಂಬಿದವರಂತೆ ಆ ಪಶುಪತಿಯು ಸತಿಯನ್ನು ನೆನೆಯುತ್ತಾ ವ್ಯಥೆಯಿಂದ ತುಂಬಿದವನಾಗಿ ಬಾಣನಟ್ಟ ಗಂಡಾನೆಯಂತೆ ಕಾಡುಮೇಡು ಗಳಲ್ಲಿ ಅಲೆದಾಡಿದನು.

೧೩.೪. ತತಃ ಪಪಾತ ದೇವೇಶಃ ಕಾಲಿಂದೀಸರಿತಂ ಮುನೇ ।
ನಿಮಗ್ನೇ ಶಂಕರೇ ಚಾಪೋ ದಗ್ಧಾಃ ಕೃಷ್ಣತ್ವಮಾರ್ಗತಃ ॥

೧೩.೫. ತದಾ ಪ್ರಭೃತಿ ಕಾಲಿಂದ್ಯಾ ಭೃಗಾಂಜನನಿಭಂ ಜಲಂ ।
ಅಸ್ಯಂದತ್ಪುಣ್ಯತೀರ್ಥಾ ಸಾ ಕೇಶಪಾಶ ಇವಾವನೇಃ ॥

ಹುಚ್ಚನಂತೆ ಎತ್ತೆತ್ತಲೋ ಸುತ್ತಾಡುತ್ತಾ ಆ ಮುಕ್ಕಣ್ಣನು ಪಾಪ ಸಂತಪ್ತನಾಗಿ ಯಮುನಾನದಿಗೆ ಬಂದು ದರ ಅ ತಣ್ಣೀರಲ್ಲಿ ಧುಮುಕಿದನು. ಆದುದರಿಂದ ಯಮುನೆಯ ನೀರೆಲ್ಲವೂ ಸುಟ್ಟು ಕರಕಾದಂತೆ ಕಪ್ಪುಬಡಿದು ಹೋಯಿತು. ಅಂದಿನಿಂದ ಆ ಕಾಲಿಂದೀ ನದಿಯ ನೀರು ಕಾಡಿಗೆಯಂತೆ, ಕತ್ತಲೆಯಂತೆ, ಗುಂಗೀಹುಳದಂತೆ ಕೃಷ್ಣವರ್ಣದ್ದಾಗಿಯೇ ಇರುತ್ತದೆ. ಭೂದೇವಿಯ ಕೇಶಪಾಶದಂತೆ ಆ ಯಮುನೆಯು ಈಗಲೂ ಕರಿನೀರಿನ ತೊರೆಯಾಗಿಯೇ ಹರಿಯುತ್ತಲಿದ್ದಾಳೆ.

೧೩.೬. ತತೋ ನದೀಷು ಪುಣ್ಯಾಸು ಸರಸ್ಸು ಚ ಸರಸ್ಸು ಚ ।
ಪುಲಿನೇಷು ಚ ರಮ್ಯೇಷು ವಾಪೀಷು ನಲಿನೀಷು ಚ ॥

ಅನಂತರ ಅನೇಕ ಗಿರಿರಗಳಲ್ಲಿ, ತೊರೆಗಳಲ್ಲಿ, ಝರಿಗಳಲ್ಲಿ, ಸರಗಳಲ್ಲಿ, ದರಿಗಳಲ್ಲಿ, ಹಳ್ಳಗಳಲ್ಲಿ, ಕೊಳ್ಳಗಳಲ್ಲಿ, ಮಳಲು ಮೈದಾನಗಳಲ್ಲಿ, ಬನ ಬಯಲುಗಳಲ್ಲಿ, ಸಾನುಕಾನುಗಳಲ್ಲಿ ಅಲೆದಲೆದು ತೆರಪಿಲ್ಲದೇ ತಿರುಗಾಡಿ ತೊಳಲಿ ಬಳಲಿದನು ಆ ಪರಶಿವ.

೧೩೯. ಕ್ಷಣಂ ಗಾಯತಿ ದೇವರ್ಷೇ ಕ್ಷಣಂ ರೋದಿತಿ ಶಂಕರಃ ।
ಕ್ಷಣಂ ಧ್ಯಾಯತಿ ತನ್ವಂಗೀಂ ದಕ್ಷಕನ್ಯಾಂ ಮನೋರಮಾಂ ॥

ವನಿತೆಯ ವಿರಹದಿಂದ ವಿಹ್ವಲನಾದ ಆ ಚಂದ್ರಶೇಖರನು ಒಮ್ಮೊಮ್ಮೆ ಹುಚ್ಚನಂತೆ ಹಾಡುವನು, ಮರುಚಣದಲ್ಲಿ ಆರ್ತನಾಗಿ ಅಳುವನು. ಮತ್ತೆ ಮರುಗಳಿಗೆಯಲ್ಲಿ ಮೌನದಿಂದ ಕುಳಿತು ತನ್ನ ಮನದನ್ನೆಯನ್ನೇ ಧ್ಯಾನಿಸುವನು. ಅವಳನ್ನು ಧ್ಯಾನಿಸುತ್ತಲೇ

ಕಣ್ಣು ಮುಚ್ಚಿ ಕನಸು ಕಾಣುವನು. ಆ ಕನಸಿನಲ್ಲಿ ಕೂಡ ತನ್ನ ಆ ಸ್ವಪ್ನಸುಂದರಿಯನ್ನು ಕುರಿತು, ''ದಯೆ ಇಲ್ಲದ ದಾಕ್ಷಾಯಣಿಯೇ, ತುಸು ನಿಲ್ಲು. ಮೂಢಳೆ, ನನ್ನನ್ನೇಕೇ ತೊರೆದು ಹೋದೆ? ನೀನಿಲ್ಲದ್ದ ನನ್ನನ್ನೂ ಕಾಮನು ಸುಟ್ಟು ಹಾಕಿದ್ದಾನೆ. ದೇವಿ, ನಿಜವಾಗಿಯೂ ನೀನು ನನ್ನ ಮೇಲೆ ಕೋಪಗೊಂಡಿರುವಿಯಾ ? ಸುಂದರೀ, ಸಿಟ್ಟಾಗಬೇಡ, ಇದೋ ನಿನ್ನ ಪಾದಗಳಿಗೆ ಎರಗುತ್ತೇನೆ. ನನ್ನ ಜೊತೆ ಮಾತನಾಡು. ಪ್ರಿಯೆ, ನೀನೀಗ ನನ್ನ ಕಣ್ಣಿಗೆ ಕಾಣುವಿ, ಕಿವಿಗೆ ಕೇಳುವಿ, ಮೈಯನ್ನು ಮುಟ್ಟುವಿ, ತಲೆಯನ್ನು ತಟ್ಟುವಿ. ಅಂಗಾಂಗಗಳನ್ನು ಆಲಿಂಗಿಸುವಿ, ನಾನು ನಿನಗೆ ನಮಿಸುವೆ. ಬೇಕಾದಷ್ಟು ರಮಿಸುವೆ. ಇಷ್ಟಾದರೂ ನೀನೇಕೆ ನನ್ನ ಜೊತೆಗೆ ಮಾತನಾಡಲೊಲ್ಲಿ !

೧೪೦. ವಿಲಪಂತಂ ಜನಂ ದೃಷ್ಟ್ವಾ ಕೃಪಾ ಕಸ್ಯ ನ ಜಾಯತೇ ।
ವಿಶೇಷತಃ ಪತಿಂ ಬಾಲೇ ನನು ತ್ವಮತಿನಿರ್ಘೃಣಾ ॥

ಅಳುವವರನ್ನು ಕಂಡು ಯಾರ ಅಂತಃಕರಣವು ಕರಗಲಿಕ್ಕಿಲ್ಲ ! ನಾನಂತೂ, ನಿನ್ನ ಪತಿ ಜೀವನದ ಜ್ಯೋತಿ. ಇಷ್ಟಾದರೂ ನೀನೇಕೆ ಅಷ್ಟು ನಿಷ್ಠುರಳಾಗಿರುವೆ ?

೧೪೧. ತ್ವಯೋಕ್ತಾನಿ ವಚಾಂಸ್ಯೇವಂ ಪೂರ್ವಂ ಮಮ ಕೃಶೋದರಿ ।
ತ್ವಯಾ ವನಾ ಚ ಜೀವೇಯಂ ತದಸತ್ಯಂ ತ್ವಯಾಶ್ರುತಂ ॥

ಚೆಲುವಿ, ''ನಿನ್ನನ್ನು ಬಿಟ್ಟು ನಾನು ಬದುಕಲಾರೆ '' ಎಂದು ಹಿಂದೆ ನೀನು ಹೇಳುತ್ತಿರಲಿಲ್ಲವೇ! ಅದೆಲ್ಲವೂ ಈಗ ಸುಳ್ಳಾಯಿತೆ! ಪ್ರಿಯೇ, ಬಾ, ಕಾಮದ ಉರಿಯಲ್ಲಿ ಬೆಂದು ನೊಂದುಹೋದ ನನ್ನನ್ನು ಗಟ್ಟಿಯಾಗಿ ಆಲಂಗಿಸು. ನಿನ್ನ ಅಪ್ಪುಗೆ ಯಿಂದಲ್ಲದೇ ಈ ನನ್ನ ಎದೆಯ ಬೇಗೆಯು ಶಾಂತವಾಗಲಾರದು. ನೀಮ ಬಾರದಿದ್ದರೆ ನನ್ನ ಆಣೆ.''

೧೪೨. ಏಹ್ಯೇಹಿ ಕಾಮಸಂತಪ್ತಂ ಪರಿಷ್ವಜ ಸುಲೋಚನೇ ।
ನಾನ್ಯಥಾ ನಶ್ಯತೇ ತಾಪಃ ಸತ್ಯೇನಾಪಿ ಶಪೇ ಪ್ರಿಯೇ ॥

ಹೀಗೆ ಕನಸಿನಲ್ಲಿ ಕನವರಿಸಿ ಒಮ್ಮೆಲೆ ಎಚ್ಚರಾಗುತ್ತಿದ್ದನು. ಎದ್ದ ಬಳಿಕ ತನ್ನ ಕಣ್ಣೆದುರು ಆ ಮುದ್ದು ಮಡದಿ ಇಲ್ಲದ್ದನ್ನು ಕಂಡು ಶಂಕರನು ದೊಡ್ಡದನಿ ತೆಗೆದು ಮತ್ತೆ ತನ್ನ ಅರಣ್ಯರೋದನವನ್ನು ಪ್ರಾರಂಭಿಸುತ್ತಿದ್ದನು.

ಹೀಗೆ ಅಳುತ್ತ ಬಾಯಿಗೆ ಬಂದಂತೆ ಬಡಬಡಿಸುತ್ತ ಹುಚ್ಚನಂತೆ ಕಂಡುಕಂಡಲ್ಲಿ ಅಂಡಲೆಯುತ್ತಿರುವ ಅಖಂಡಪರಶುವಾದ ವಿರೂಪಾಕ್ಷನನ್ನು ಕಂಡು ಕಾಮನು ತನ್ನ ಹೂವಿನ ಬಿಲ್ಲಿನ ಹೆದೆಯನ್ನು ಏರಿಸಿ ಸಂತಾಪನ ಎಂಬ ಬಾಣವನ್ನು ಬಿಟ್ಟನು. ಅದರಿಂದ ಶಿವನ ಅಂತಸ್ಸಂತಾಪವು ಇನ್ನೂ ಹೆಚ್ಚಾಗಿ ಅಂತರಂಗವೆಲ್ಲವೂ ಕಿಚ್ಚಿನಲ್ಲಿ ಕುದಿಯಬಿಟ್ಟಂತೆ ಬೇಯತೊಡಗಿತು. ಸುಟ್ಟ ಹೃದಯದ ದಟ್ಟ ಹೊಗೆಯಂತೆ ನೀಳ ನಿಟ್ಟುಸಿರನ್ನು ಬಿಟ್ಟುಬಿಟ್ಟು ಅವನು ಕೆಟ್ಟ ಧ್ವನಿಯಿಂದ ಚೀರತೊಡಗಿದನು.

೧೪೩. ತಂ ಚಾಪಿ ಭೂಯೋ ಮದನೋ ಜಘಾನ
ವಿಜೃಂಭಣಾಸ್ತ್ರೇಣ ತತೋ ವಿಜೃಂಭೆ ।

ತತೋ ಭೃಶಂ ಕಾಮಶರೈರ್ವಿತುನ್ನೋ
ವಿಜೃಂಭಮಾಣಃ ಪರಿತೋ ಭ್ರಮಂಶ್ಚ ॥

ಅದನ್ನು ಕಂಡು ಹುರುಪುಗೊಂಡು ರಾಮನು ಜೃಂಭಣಾಸ್ತ್ರವನ್ನು ಅವನ ಮೇಲೆ ಮಸೆದು ಎಸೆದನು. ಅದರಿಂದ ತಾಡಿತ ಪೀಡಿತನೆದ ಪರಶಿವನು ಆ ಅಸ್ತ್ರದ ಮಬ್ಬು ಒಡಿದು, ಕಾಮದ ಗುಂಗು ಹಿಡಿದು, ತೂಕಡಿಕೆಯಲ್ಲಿ ಆಕಳಿಸುತ್ತ ಜೋಲಿ ಹೊಡೆಯುತ್ತ ತಿರುಗತೊಡಗಿದನು. ಹೀಗೆ ಪ್ರೇಮದ ಗರಬಡಿದು ಹರನು ಹೌಹಾರಿ ತಿರುಗುತ್ತಿರುವಾಗ ಕುಬೇರನ ಮಗನಾದ ಪಾಂಚಾಲಿಕ ಎಂಬ ಒಬ್ಬ ಪ್ರತಿಷ್ಠಿತ ವ್ಯಕ್ತಿಯನ್ನು ಕಂಡು ಅವನಿಗೆ ಹೇಳಿದನು. ''ನನ್ನ ಸೋದರನ ಕುಮಾರನಾದ ಪಾಂಚಾಲಿಕನು ನೀನು. ಮಹಾಪರಾಕ್ರಮಶಾಲಿ ಯಾಗಿರುವಿ. ನಾನು ನಿನ್ನಲ್ಲಿ ಒಂದು ಮಾತನ್ನು ಹೇಳುತ್ತೇನೆ. ಅದನ್ನು ನೀನು ಅವಶ್ಯವಾಗಿ ನಡೆಸಿಕೊಡಬೇಕು.''

## ಪಾಂಚಾಲಿಕ ಉವಾಚ

೧೪೪. ಯನ್ನಾಥ ಮಾಂ ವಕ್ಷ್ಯಸಿ ತತ್ಕರಿಷ್ಯೇ
ಸುದುಷ್ಕರಂ ಯದ್ಯಪಿ ದೇವಸಂಘೈಃ ।
ಆಜ್ಞಾಪಯಸ್ವಾತುವೀರ್ಯ ಶಂಭೋ
ದಾಸೋಽಸ್ಮಿ ತೇ ಭಕ್ತಿಯುತಸ್ತಥೇಶ ॥

ಪಾಂಚಾಲಿಕ - ''ಶಂಭು, ನೀನು ನಮಗೆ ಒಡೆಯ ನೀನು ಏನು ಹೇಳಿದರೂ ಅದನ್ನು ನಾನು ಮಾಡುವೆ. ಅದು ದೇವತೆಗಳಿಗೆ ಅಸಾಧ್ಯವಾಗಿದ್ದರೂ ಸರಿ. ನಾನು ನಿನ್ನ ದಾಸ. ನಿನ್ನ ಮೇಲೆ ನನಗೆ ಅಪಾರವಾದ ಭಕ್ತಿ ಇದೆ. ದೇವ, ಅಪ್ಪಣೆ ನೀಡು.'' ಅದನ್ನು ಕೇಳಿ ಸಂತುಷ್ಟನಾದ ಈಶ್ವರನು ಆ ಪಾಂಚಾಲಿಕನಿಗೆ ಹೇಳಿದನು.

## ಈಶ್ವರ ಉವಾಚ

೧೪೫. ನಾಶಂ ಗತಾಯಾಂ ವರದಾಂಬಿಕಾಯಾಂ
ಕಾಮಾಗ್ನಿನಾಪ್ಲುಷ್ಟ ಸುವಿಗ್ರಹೋಽಸ್ಮಿ ।
ವಿಜೃಂಭಣೋನ್ಮಾದಶರೈರ್ವಿಭಿನ್ನೋ
ಧೃತಿಂ ನ ವಿಂದಾಮಿ ರತಿಂ ಸುಖಂ ಚ ॥

''ಮಗನೇ, ನನ್ನ ಭಾರ್ಯೆಯಾದ ಅಂಬಿಕೆಯು ಮರಣ ಹೊಂದಿದ ಬಳಿಕ ಕಾಮಾಗ್ನಿಯಿಂದ ನನ್ನ ದೇಹವೆಲ್ಲವೂ ಬೆಂದುಹೋಗಿದೆ. ಮನಸ್ಸು ನೊಂದು ಹೋಗಿದೆ. ವಿಜೃಂಭಣ, ಉನ್ಮಾದ ಮುಂತಾದ ಕಾಮಬಾಣಗಳಿಂದ ನನ್ನ ಶರೀರವು ಸೀಳಿ ಹಾಳಾಗಿ-ಹೋಳಾಗಿ ಹೋಗಿದೆ.

೧೪೬. ವಿಜೃಂಭಣಂ ಪುತ್ರ ತಥೈವ ತಾಪ
ಮುನ್ಮಾದಮುಗ್ರಂ ಮದನ ಪ್ರಣುನ್ನಂ ।
ನಾನ್ಯಃ ಪುಮಾನ್ಧಾರಯಿತುಂ ಹಿ ಶಕ್ತೋ
ಮುಕ್ತ್ವಾ ಭವಂತಂ ಹಿ ತತಃ ಪ್ರತೀಚ್ಛ ॥

ಈಗ ನನ್ನಲ್ಲಿ ಧೃತಿ ಇಲ್ಲ, ರತಿ ಇಲ್ಲ, ಸತಿ ಇಲ್ಲ, ಸೌಖ್ಯವೂ ಇಲ್ಲ. ಮತಿಗೆಟ್ಟು ವ್ಯಥೆಯಿಂದ ತಿರುಗುತ್ತಲಿದ್ದೇನೆ. ಆದುದರಿಂದ ಕಾಮನು ನನ್ನ ಮೇಲೆ ಬಿಟ್ಟ ಆ ವಿಜೃಂಭಣ ಮತ್ತು ಉನ್ಮಾದ ಅಸ್ತ್ರಗಳನ್ನು ನೀನು ಧರಿಸು. ನಿನ್ನ ಹೊರತು ಅತ್ಯುಗ್ರವಾದ ಅಸ್ತ್ರಗಳನ್ನು ಧರಿಸಲು ಬೇರಾರು ಸಮರ್ಥರಲ್ಲ. ಆದುದರಿಂದ ನೀನೇ ಆ ಘೋರಾಸ್ತ್ರವನ್ನು ಸ್ವೀಕರಿಸಿ ನನ್ನ ಸಂತಾಪವನ್ನು ಶಮನಗೊಳಿಸು. ಎತ್ತನ್ನು ಹತ್ತಿಕೊಂಡು ಎತ್ತೆತ್ತಲೋ ಸುತ್ತುತ್ತಿರುವ ಆ ಮಹಾದೇವನು ನುಡಿದ ಈ ಮಾತನ್ನು ಕೇಳಿ ಪಾಂಚಾಲಿಕ ಯಕ್ಷನಿಗೆ ಹೃದಯವು ಕರಗಿತು. ಅವನು ಸಂತೋಷದಿಂದ ಶಿರಬಾಗಿ ವಂದಿಸಿ ಆ ಇಂದುಶೇಖರನಿಂದ ಆ ಘೋರಾಸ್ತ್ರಗಳನ್ನು ಸ್ವೀಕರಿಸಿದನು. ಅದರಿಂದ ಮಹಾದೇವರಿಗೆ ಅತ್ಯಂತ ಸಂತೋಷವಾಗಿ ಅವನಿಗೆ ವರವನ್ನು ಕೊಟ್ಟು ಕರುಣಿಸಿದನು.

ರುದ್ರ - ವತ್ಸ, ಬೇರಾರೂ ಧರಿಸಲಾರದ ಘೋರಾಸ್ತ್ರಗಳನ್ನು ನೀನು ನನ್ನಿಂದ ಸ್ವೀಕರಿಸಿರುವಿ. ಅದಕ್ಕೆ ಪ್ರತಿಯಾಗಿ ನಾನು ನಿನಗೆ ವರ ಕೊಡುತ್ತೇನೆ.

## ಹರ ಉವಾಚ

೧೪೭. ಯಸ್ಮಾತ್ತ್ವಯಾ ಪುತ್ರ ಸುದುರ್ಧರಾಣಿ
ವಿಜೃಂಭಣಾದೀನಿ ಪ್ರತೀಚ್ಛಿತಾನಿ ।
ತಸ್ಮಾದ್ವರಂ ತ್ವಾಂ ಪ್ರತಿಪೂಜನಾಯ
ದಾಸ್ಯಾಮಿ ಲೋಕಸ್ಯ ಚ ಹಾಸ್ಯಕಾರೀ ॥

ನಾನು ನಿನಗೆ ಕೊಡಲಿರುವ ಆ ವರವನ್ನು ಕೇಳಿ ಜನರಿಗೆಲ್ಲಾ ನಗೆ ಬರುವದು. ಕೌತುಕವೂ ಆಗುವುದು.

೧೪೮. ಯಸ್ತ್ವಾ ಯದಾ ಪಶ್ಯತಿ ಚೈತ್ರಮಾಸೇ
ಸ್ಪೃಶೇನ್ನರೋ ವಾರ್ಚಯತೇ ಚ ಭಕ್ತ್ಯಾ ।
ವೃದ್ಧೋಽಥ ಬಾಲೋಽಥ ಯುವಾಥ ಯೋಷಿ
ತ್ಸರ್ವೇ ತದೋನ್ಮಾದಧರಾ ಭವಂತಿ ॥

''ಚೈತ್ರಮಾಸದಲ್ಲಿ ನಿನ್ನನ್ನು ಯಾರು ಮುಟ್ಟುವರೋ ಅವರು ಹುಡುಗರೇ ಇರಲಿ, ಹೆಂಗಸರೇ ಇರಲಿ, ಹರೆಯದವರೇ ಇರಲಿ, ಯಾರೇ ಇದ್ದರೂ ನಿನ್ನನ್ನು ಮುಟ್ಟಿದರೆ ಸಾಕು ಅವರು ಹುಚ್ಚರಾಗಿ ಬಿಡುತ್ತಾರೆ. ಉನ್ಮತ್ತರಂತಾದ ಅವರು ಹಾಡುತ್ತಾರೆ. ನೃತ್ಯ ಮಾಡುತ್ತಾರೆ. ವಾದ್ಯಗಳನ್ನು ಬಾರಿಸುತ್ತಾ ನಿನ್ನೆದುರು ನಕ್ಕು ನಗೆ ಮಾತುಗಳನ್ನಾಡುತ್ತಾ ನಲಿಯುತ್ತಾರೆ. ನಿನ್ನನ್ನು ಪೂಜಿಸುತ್ತಾರೆ. ನಿನ್ನನ್ನೇ ಪಾಂಚಾಲಿಕೇಶ ಎಂಬ ನನ್ನ ಹೆಸರಿನಿಂದ ಕರೆದು ಪೂಜಿಸುತ್ತಾರೆ. ನನ್ನ ಅನುಗ್ರಹದಿಂದ ಭೂಮಂಡಲದಲ್ಲಿ ನೀನು ನರರಿಗೆ ಕೊಟ್ಟ ವರಗಳೆಲ್ಲವೂ ನಿಜವಾಗುತ್ತವೆ. ಅದರಿಂದ ನೀನು ಜಗತ್ ಪೂಜ್ಯನಾಗುವಿ ಹೋಗು.''
ಹೀಗೆ ರುದ್ರದೇವರು ಅಪ್ಪಣೆಯನ್ನು ಕೊಟ್ಟ ಬಳಿಕ ಆ ಪಾಂಚಾಲಿಕ ಯಕ್ಷನು ದೇಶ ಸಂಚಾರ ಕೈಕೊಂಡನು. ಕಾಲಂಜರ ಪರ್ವತದ ಉತ್ತರದಲ್ಲಿಯೂ ಹಿಮಾಲಯದ ದಕ್ಷಿಣ ದಿಕ್ಕಿನಲ್ಲಿಯೂ ಇರುವ ಪುಣ್ಯಕ್ಷೇತ್ರದಲ್ಲಿ ಆ ಪಾಂಚಾಲಿಕ ಯಕ್ಷನು ನಿಂತುಕೊಂಡನು. ಪಾಂಚಾಲಿಕೇಶ ಎಂಬ ಹೆಸರಿನಿಂದ ಈಗಲೂ ಆ ಯಕ್ಷಕನಿಗೆ ಅಲ್ಲಿ ವಿಶೇಷವಾದ

ಪೂಜೆಯು ನಡೆಯುತ್ತದೆ. ಹೀಗೆ ಆ ಪಾಂಚಾಲಿಕ ಯಕ್ಷನು ಅಲ್ಲಿಂದ ತೆರಳಿದ ಬಳಿಕ ಮಹೇಶ್ವರನು ವಿಂಧ್ಯ ಪರ್ವತಕ್ಕೆ ನಡೆದನು. ಆ ವಿಂಧ್ಯ ಪರ್ವತದಲ್ಲಿಯೂ ಕಾಮನು ಆ ಸತೀಪತಿಯಾದ ಶಿವನನ್ನು ಪ್ರಹರಿಸಲು ಪ್ರಯತ್ನಿಸಿದನು. ಆಗ ಆ ಕೈಲಾಸಪತಿಯು ಅಲ್ಲಿಂದಲೂ ಕಾಲು ಕಿತ್ತಿ ಘೋರವಾದ ದಾರು ವನಕ್ಕೆ ಬಂದನು. ಅಲ್ಲಿರುವ ಋಷಿಮುನಿಗಳೆಲ್ಲರೂ ಆ ಭೂತನಾಥನನ್ನು ಕಂಡು ಹಣೆ ಮಣಿದರು. ಆಗ ಶಿವನು ''ಭಿಕ್ಷೆಯನ್ನು ನೀಡಿರಿ'' ಎಂದು ಆ ಎಲ್ಲ ಮುನೀಶ್ವರರ ಪುಣ್ಯಾಶ್ರಮಗಳನ್ನು ತಿರುಗಿದನು.

೧೪೬. ತಂ ಪ್ರವಿಷ್ಟಂ ತದಾ ದೃಷ್ಟ್ವಾ ಭಾರ್ಗವಾತ್ರೇಯಯೋಷಿತಃ ।
ಪ್ರಕ್ಷೋಭಮಗಮನ್ಸರ್ವಾ ಹೀನಸತ್ತ್ವಾಃ ಸಮಂತತಃ ॥

ಹೀಗೆ ತಮ್ಮ ಆಶ್ರಮದ ಅಂಗಳಗಳಲ್ಲಿ ಸಂಚರಿಸುತ್ತಲಿರುವ ಆ ಗಂಗಾಧರನ ಕಳೆ ಕಾಂತಿಗಳನ್ನು ಕಂಡು ಎಲ್ಲ ಮುನಿಮಾನಿನಿಯರ ಮನಸ್ಸು ಚಲವಿಚಲವಾಯಿತು. ಅರುಂಧತಿ ದೇವಿ ಹಾಗೂ ಅನಸೂಯಾದೇವಿ ಇವರಿಬ್ಬರನ್ನು ಬಿಟ್ಟು ಪ್ರಾಯಃ ಪ್ರಾಯಕ್ಕೆ ಬಂದ ಎಲ್ಲ ಋಷಿಮಣಿಯರೂ ಕಾಮಾತುರರಾಗಿ ಆ ಕೈಲಾಸನಾಥನ ಹಿಂದೆ ಹಿಂದೆ ತಿರುಗತೊಡಗಿದರು.

೧೫೦. ಋತೇ ತ್ವರುಂಧತೀಮೇಕಾಮನಸೂಯಾಂ ಚ ಭಾಮಿನೀಂ ।
ಏತಯೋರ್ಭರ್ತೃಪೂಜಾಸು ತಚ್ಚಿಂತಾಸು ಸ್ಥಿತಂ ಮನಃ ॥

ಅವರಿಬ್ಬರೂ ಮಾತ್ರ ಹಗಲಿರುಳು ಪತಿಯ ಸೇವೆಯಲ್ಲಿಯೇ ರತರಾಗಿಸುತ್ತಿದ್ದರು. ಹೆಣ್ಣಾನೆಗಳು ಹಿಂಡುಹಿಂಡಾಗಿ ಗಂಡುಗಜವನ್ನು ಬೆಂಬತ್ತಿ ಹಿಂಬಾಲಿಸಿ ಹೋಗುವಂತೆ ಮುನಿಗಳ ಮಡದಿಯರೆಲ್ಲರೂ ತಂಡ ತಂಡವಾಗಿ ಆ ಚಂದ್ರಮೌಳೀಶ್ವರನ ಹಿಂದೆ ಓಡಾಡತೊಡಗಿದರು. ಮುನಿಗಳ ಆಶ್ರಮಗಳೆಲ್ಲವೂ ಗೃಹಿಣಿಯರಿಲ್ಲದೆ ಶೂನ್ಯವಾಗಿ ತೋರತೊಡಗಿದವು.

೧೫೧. ತತಸ್ತು ಋಷಯೋ ದೃಷ್ಟ್ವಾ ಭಾರ್ಗವಾಂಗಿರಸೋ ಮುನೇ ।
ಕ್ರೋಧಾನ್ವಿತಾಽಬ್ರುವನ್ಸರ್ವೇ ಲಿಂಗಮಾಪತತಾಂ ಭುವಿ ॥

ಆಗ ಭಾರ್ಗವ, ಅಂಗೀರಸ ಮೊದಲಾದ ಮುನಿಗಳಿಗೆ ಬಹಳ ಕೋಪ ಬಂದಿತು. ಪರಮೇಶ್ವರನ ಪೌರುಷ ಪ್ರತಿಷ್ಠಿತವಾದ ರಮಣೀಯ ರೂಪವೇ ತಮ್ಮ ಮಡದಿಯರ ಮನಸ್ಸನ್ನು ಮರುಳು ಮಾಡಿ ತಮ್ಮ ವ... ಮನೆಗಳನ್ನು ಶೂನ್ಯವನ್ನಾಗಿ ಮಾಡಲು ಕಾರಣವಾಗಿದೆ ಎಂದು ಬಗೆದು ಅವರೆಲ್ಲರೂ ಸಿಟ್ಟಿನಿಂದ ಶಾಪ ಕೊಟ್ಟುಬಿಟ್ಟರು.

''ಶಿವ, ನಿನ್ನ ಲಿಂಗವು ನೆಲದ ಮೇಲೆ ಬಿದ್ದು ಹೋಗಲಿ.'' ಅನಂತರ ಮಹಾದೇವನ ಲಿಂಗವು ನೆಲಕ್ಕೆ ಬಿದ್ದಿತು. ಅದರಿಂದ ಭೂಮಿ ಬಿರಿಯಿತು. ಕೂಡಲೇ ಶಂಕರನು ಅದೃಶ್ಯನಾದನು. ನೆಲಕ್ಕೆ ಬಿದ್ದ ಅವನ ಲಿಂಗವು ನೆಲವನ್ನು ಭೇದಿಸಿತು. ಅದರ ರಭಸದಿಂದ ಭೂಮಿ ಬಿರಿಯಿತು. ಬ್ರಹ್ಮಾಂಡದ ಮೇಲ್ಭಾಗವು ಸೀಳಿ ಬಿರಕುಬಿಟ್ಟಿತು. ಹೀಗೆ ಚರಾಚರ ಪ್ರಪಂಚವೆಲ್ಲವೂ ಆ ಲಿಂಗಪಾತದ ರಭಸದಿಂದ ನಡುಗಿ ಹೋಗಲು ಬ್ರಹ್ಮದೇವರು ಗಾಬರಿಯಾಗಿ ಶ್ರೀಮನ್ನಾರಾಯಣನನ್ನು ಕಂಡುಬರಲು ಹಾಲ್‌ಗಡಲಿನೆಡೆಗೆ ನಡೆದರು. ಅಲ್ಲಿ ಕ್ಷೀರ ಸಮುದ್ರಶಾಯಿಯಾದ ಶ್ರೀಹರಿಯನ್ನು ಕಂಡು ನಮಿಸಿ ''ಈ ಬ್ರಹ್ಮಾಂಡದ ಕಂಪನಕ್ಕೆ ಕಾರಣವೇನು?'' ಎಂದು ಕೇಳಿದರು.

೧೫೭. ಅಥೋವಾಚ ಹರಿರ್ಬ್ರಹ್ಮನ್‌ಶಾರ್ವೋ ಲಿಂಗೋ ಮಹರ್ಷಿಭಿಃ ।
ಪಾತಿತಸ್ತಸ್ಯ ಭಾರಾರ್ತಾ ಸಂಚಚಾಲ ವಸುಂಧರಾ ॥

ಅದಕ್ಕೆ ಸರ್ವಜ್ಞನಾದ ಆ ಶ್ರೀಹರಿಯು ಬ್ರಹ್ಮನನ್ನು ಕುರಿತು, "ಈ ಭೀಕರವಾದ ಭೂಕಂಪ ಮತ್ತು ಬ್ರಹ್ಮಾಂಡ ಕಂಪಗಳಿಗೆ ಮಹಾಋಷಿಗಳು ಶಾಪ ಕೊಟ್ಟು ಮಾಡಿದ ಮಹಾದೇವನ ಲಿಂಗಪಾತವೇ ಕಾರಣ" ಎಂದು ಹೇಳಿದರು. ಅದನ್ನು ಕೇಳಿ ಆಶ್ಚರ್ಯಚಕಿತರಾದ ವಾಣೀಪತಿಯು ಆ ವೈಕುಂಠಪತಿಗೆ "ನಾವಿಬ್ಬರೂ ಕೂಡಿ ಹೋಗಿ ಆ ಕೌತುಕವನ್ನು ಕಣ್ಣಾರೆ ಕಂಡು ಬರೋಣ ಬನ್ನಿರಿ" ಎಂದು ಬಿನ್ನವಿಸಿ ಅವನನ್ನೂ ಕರೆದುಕೊಂಡು ಆ ಲಿಂಗವು ಬಿದ್ದ ಸ್ಥಳಕ್ಕೆ ಹೋದರು. ಅಲ್ಲಿ ಆ ಲಿಂಗದ ತುದಿಮೊದಲುಗಳು ಕಾಣುತ್ತಲೇ ಇರಲಿಲ್ಲ. ಆಗ ಹರಿಬ್ರಹ್ಮರಿಬ್ಬರಿಗೂ ಆ ಶಿವಲಿಂಗದ ಮೂಲ ಮಧ್ಯಾಂತಗಳನ್ನು ನೋಡಿ ಬರಬೇಕೆಂದು ಕುತೂಹಲವಾಯಿತು. ಕೂಡಲೇ ಶ್ರೀಹರಿಯು ಗರುಡನನ್ನು ಆರೋಹಣ ಮಾಡಿಕೊಂಡು ಪಾತಾಳವನ್ನು ಪ್ರವೇಶಿಸಿದನು.

ಇತ್ತ ಚತುರ್ಮುಖನಾದರೂ ಆ ಭವಲಿಂಗದ ಮೂಲ ಮೊದಲುಗಳನ್ನು ತಿಳಿಯಬೇಕೆಂಬ ತವಕದಿಂದ ತನ್ನ ಹಂಸವನ್ನು ಹತ್ತಿಕೊಂಡು ಮೇಲೆ ಮೇಲೆ ನಡೆದನು. ಆ ವಾಣೀಪತಿಯು ಮೇಲಿನ ಉರ್ಧ್ವಲೋಕಗಳನ್ನೆಲ್ಲ ಸುತ್ತಾಡಿ ಕೊನೆಗೂ ಆ ಲಿಂಗದ ಮೂಲನಾಲಗಳನ್ನು ಕಾಣದೆ ನಿರಾಶನಾಗಿ ಮರಳಿಬಂದನು. ಇದರಂತೆ ಶ್ರೀಹರಿಯಾದರೂ ಗರುಡಾರೂಢನಾಗಿ ತೆಳಗಿನ ಪಾತಾಳಾದಿ ಸಪ್ತಲೋಕಗಳನ್ನು ಸುತ್ತಿ ಶೋಧಿಸಿದರೂ ಆ ಮಹೇಶನ ಲಿಂಗದ ಕೊನೆಯನ್ನು ಕಾಣದೇ ನಿರಾಶನಾಗಿ ಹಿಂದುರುಗಿ ಬಂದನು. ಅನಂತರ ವಿಷ್ಣು ಮತ್ತು ಬ್ರಹ್ಮ ಇಬ್ಬರೂ (ಲೋಕಶಿಕ್ಷಾರ್ಥವಾಗಿ) ಆ ಹರನ ಲಿಂಗದ ಬಳಿಗೆ ಬಂದು ಕೈಮುಗಿದು ಶಿವನನ್ನು ಸ್ತೋತ್ರ ಮಾಡಿದರು.

## ಹರಿಬ್ರಹ್ಮಾಣೌಊಚತುಃ

"ನಮೋಸ್ತುತೇ ಶೂಲಪಾಣೇ ನಮೋಸ್ತು ವೃಷಭಧ್ವಜ ।
ಜೀಮೂತವಾಹನ ಕವೇ ಶರ್ವತ್ರ್ಯಂಬಕ ಶಂಕರ ॥

ಮಹೇಶ್ವರ ಮಹೇಶಾನ ಸುವರ್ಣಾಕ್ಷ ವೃಷಾಕಪೇ ।
ದಕ್ಷಯಜ್ಞಕ್ಷಯಕರ ಕಾಲರೂಪ ನಮೋಽಸ್ತುತೇ ॥

ತ್ವಮಾದಿರಸ್ಯ ಜಗತಸ್ತ್ವಂ ಮಧ್ಯಂ ಪರಮೇಶ್ವರ ।
ಭವಾನಂತಶ್ಚ ಭಗವಾನ್ ಸರ್ವೇಗಸ್ತ್ವಂ ನಮೋಸ್ತುತೇ ॥

## ಹರ ಉವಾಚ

೧೫೩. ಕಿಮರ್ಥಂ ದೇವತಾನಾಥೌ ಪರಿಭೂತಶ್ರಮಂ ತ್ವಿಹ ।
ಮಾಂಸ್ತುವಾತೇ ಭೃಶಾಸ್ವಸ್ಥಂ ಕಾಮತಾಪಿತ ವಿಗ್ರಹಂ ॥

ಕಮಲಾಪತಿ ಮತ್ತೂ ಕಮಲಾಸನರ ಈ ಸ್ತೋತ್ರವನ್ನು ಕೇಳಿ ಪರಮೇಶ್ವನು ಸಂತುಷ್ಟನಾಗಿ ಅವರೆದುರು ಆ ದಾರುವನದಲ್ಲಿಯೇ ಪ್ರಕಟನಾದನು ಮತ್ತೂ

ಸರ್ವೋತ್ತಮರನ್ನು ಕುರಿತು ಇಂತು ನುಡಿದನು. "ದೇವತಾಧುರೀಣರಾದ ಹರಿಬ್ರಹ್ಮರೇ, ನಿಮ್ಮ ಸ್ವರೂಪಭೂತವಾದ ಮೇಲ್ಮೆ ಮಹತಿಗಳನ್ನು ಮರೆತು ಪ್ರೇಮ ಪೀಡಿತನೂ, ಕಾಮಪೀಡಿತನೂ ಆಗಿ ತಲೆಕೆಟ್ಟು ತಿರುಗುತ್ತಿರುವ ನನ್ನನ್ನು ನೀವೇಕೆ ದೇವತಾ ತಾರತಮ್ಯ ವನ್ನು ಗಮನಿಸದೇ ಸ್ತೋತ್ರ ಮಾಡುತ್ತಿರುವಿರಿ?" ಶಂಕರನ ಈ ಪ್ರಶ್ನೆಯನ್ನು ಕೇಳಿ ಹರಿಬ್ರಹ್ಮರು "ಶಂಭೋ, ನೆಲದಲ್ಲಿ ಅಧಃಪತಿತ ವಾದ ನಿನ್ನ ಲಿಂಗವನ್ನು ಮತ್ತೆ ಸ್ವೀಕರಿಸು. ಅದನ್ನು ಹೇಳಲಿಕ್ಕಾಗಿಯೇ ನಾವು ಇಲ್ಲಿಗೆ ಬಂದಿದ್ದೇವೆ " ಎಂದು ಹೇಳಿದರು. ಬ್ರಹ್ಮಾಚ್ಯುತರ ಆ ಆದೇಶವಚನವನ್ನು ಕೇಳಿ ಮಹೇಶ್ವರನು ಮಾರ್ನುಡಿದನು. "ದೇವ ಶ್ರೇಷ್ಠರೇ, ದೇವತೆಗಳು ನನ್ನ ಲಿಂಗವನ್ನು ಪೂಜಿಸುವಂತಾದರೆ ಮಾತ್ರ ಕೆಳಗೆ ಬಿದ್ದ ಅದನ್ನು ನಾನು ಮತ್ತೆ ಎತ್ತಿಕೊಳ್ಳುತ್ತೇನೆ." ಅದಕ್ಕೆ ಅಚ್ಯುತನು ಅಸ್ತು ಎಂದನು. ಬ್ರಹ್ಮನಂತೂ ಸ್ವಯಂ, ಬಂಗಾರ ಬಣ್ಣದ ಆ ಭವಲಿಂಗವನ್ನು ತಾನೇ ತೆಗೆದುಕೊಂಡನು.

೧೫೪. ತತಶ್ಚಕಾರ ಭಗವಾಂಶ್ಚಾತುರ್ವರ್ಣ್ಯಂ ಹರಾರ್ಚನೇ ।
ಶಾಸ್ತ್ರಾಣಿ ಚೈಷಾಂ ಮುಖ್ಯಾನಿ ನಾನೋಕ್ತವಿದಿತಾನಿ ಚ ॥

ಅನಂತರ ಪೂಜ್ಯನಾದ ಆ ಚತುರ್ಮುಖ ಬ್ರಹ್ಮನು ಶಿವನ ಉಪಾಸನೆಗಾಗಿ ಶೈವ, ಪಾಶುಪತ, ಕಾಲದಮನ, ಕಾಪಾಲಿಕ ಎಂದು ನಾಲ್ಕು ಶೈವಶಾಸ್ತ್ರಗಳನ್ನು ಮಾಡಿದನು.

೧೫೫. ಆದ್ಯಂ ಶೈವಂ ಪರಿಖ್ಯಾತಮನ್ಯತ್ಪಾಶುಪತಂ ಮುನೇ ।
ತೃತೀಯಂ ಕಾಲದಮನಂ ಚತುರ್ಥಂ ಚ ಕಪಾಲಿಕಂ ॥

ವಶಿಷ್ಠ ಪುತ್ರನಾದ ಶಕ್ತಿಮುನಿಯ ರೂಪದಿಂದ ಸಾಕ್ಷಾತ್ ಶಿವನೇ ಈ ಶೈವ ಶಾಸ್ತ್ರಕ್ಕೆಲ್ಲ ಮುಖ್ಯವಾಗಿ ಪ್ರಚೋದಕನೂ, ಪ್ರಚಾರಕನೂ, ಪ್ರವರ್ತಕನೂ ಆದನು. ಆ ಶಕ್ತಿಋಷಿಯ ಶಿಷ್ಯನಾದ ಗೋಪಾಯನನು ಈ ಶೈವಶಾಸ್ತ್ರದ ಸೀಮಾ ಪುರುಷ ನೆಂದು ಪ್ರಖ್ಯಾತಿಯನ್ನು ಪಡೆದನು. ತಪೋನಿಧಿಯಾದ ಭಾರದ್ವಾಜ ಋಷಿಯು ಈ ಪಾಶುಪತಶಾಸ್ತ್ರಕ್ಕೆ ಪ್ರಕಾಶಕನಾದನು. ಅವನ ಶಿಷ್ಯರಲ್ಲಿ ಸೋಮಕೇಶ್ವರ ರಾಜನೂ, ಅನೇಕ ಋಷಿಗಳೂ ಪ್ರಸಿದ್ಧರಾದರು. ಆಪಸ್ತಂಬ ಮುನಿಯು ಕಾಲ ದಮನ ಎಂಬ ಶೈವಶಾಸ್ತ್ರಕ್ಕೆ ದ್ರಷ್ಟಾರನಾದನು. ಅವನ ಶಿಷ್ಯರಾದ ಕ್ರಾಥೇಶ್ವರನು ಆ ಶೈವಶಾಸ್ತ್ರವನ್ನು ಪ್ರಚುರಪಡಿಸಿದನು. ನಾಲ್ಕನೇಯ ಕಾಪಾಲಿಕ ಶಾಸ್ತ್ರಕ್ಕೆ ಕುಬೇರನು ಪ್ರವರ್ತಕನಾದನು. ಅವನ ಶಿಷ್ಯನಾದ ಅರ್ಣೋದರ ಎಂಬ ಹೆಸರಿನ ಶೂದ್ರ ತಪಸ್ವಿಯು ಆ ಶಾಸ್ತ್ರವನ್ನು ಪ್ರಪಂಚದಲ್ಲಿ ಪ್ರಸಾರಗೊಳಿಸಿದನು.

ಹೀಗೆಪೂಜ್ಯರಾದಬ್ರಹ್ಮದೇವರುಶಿವಪೂಜೆಗೆನಾಲ್ಕುಬಗೆಯಾಗಿಏರ್ಪಾಡನ್ನುಮಾಡಿ ಸತ್ಯಲೋಕಕ್ಕೆತೆರಳಿದರು. ಬ್ರಹ್ಮದೇವರುಹೋದಬಳಿಕಭವಾನೀಪತಿಯುತನ್ನಲಿಂಗವನ್ನು ಉಪಸಂಹಾರಮಾಡಿಸೂಕ್ಷ್ಮರೂಪದಿಂದಅದನ್ನುಚಿತ್ರವನದಲ್ಲಿಪ್ರತಿಷ್ಠಾಪಿಸಿತಾನುಮತ್ತೆ ಸಂಚಾರಕೈಕೊಂಡನು. ಪುನಃಪ್ರಯಾಣಸನ್ನದ್ಧನಾಗಿಪುಣ್ಯಾರಣ್ಯಪರಿಸರಗಳಲ್ಲಿ ಸಂಚರಿಸುತ್ತಿರುವಶಂಕರನನ್ನುಕಂಡುಕಾಮನುಮತ್ತೆಹೂಂಕರಿಸಿತನ್ನಧನುಷ್ಟಂಕಾರ ಗೈದನು. ಆಭವನಬಳಿಯಲ್ಲಿಯೇನಿಂತುತನ್ನಹೂವಿನಬಿಲ್ಲನ್ನುಬಾಗಿಸಿಕುಸುಮ ಬಾಣಗಳನ್ನುಹರನಹೃದಯಕ್ಕೆಗುರಿಇಟ್ಟುಎಸೆಯತೊಡಗಿದನು.

೧೫೬. ತತಸ್ತಮಗ್ರತೋ ದೃಷ್ಟ್ವಾ ಕ್ರೋಧಾಧ್ಮಾತದೃಶಾ ಹರಃ ।
ಸ್ಮರಮಾಲೋಕಯಾಮಾಸ ಶಿಖಾಗ್ರಾಚ್ಚರಣಾಂತಿಕಂ ॥

ತನ್ನ ಎದುರೇ ನಿಂತು ತನ್ನ ಮೇಲೆ ಬಾಣಪ್ರಯೋಗ ಮಾಡುವ ಮನ್ಮಥನ ಎದೆಗಾರಿಕೆಯನ್ನು ಕಂಡು ಶಿವನಿಗೆ ಸಿಟ್ಟು ಬಂದಿತು. ಕಣ್ಣು ಕೋಪ ಕಷಾಯಿತವಾದವು. ಸಿಟ್ಟಿನಿಂದ ಕೆಂಪಡರಿದ ಕಣ್ಣಿನಿಂದ ಶಿವನು ಅಡಿಯಿಂದ ಮುಡಿಯವರೆಗೆ ಕಿಡಿನೋಟದಿಂದ ಕಾಮನನ್ನು ನೋಡಿದನು.

೧೫೭. ಆಲೋಕಿತ ಸ್ತ್ರಿನೇತ್ರೇಣ ಮದನೋ ದ್ಯುತಿಮಾನಪಿ ।
ಪ್ರಾದಹ್ಯತ ತದಾ ಬ್ರಹ್ಮನ್ಪಾದಾದಾರಭ್ಯ ಕಕ್ಷವತ್ ॥

ಮುಕ್ಕಣ್ಣನಆಕಿಡಿನೋಟದಿಂದತೇಜಸ್ವಿಯಾದಕಾಮನುನಖಶಿಖಾಂತವಾಗಿಸುಟ್ಟು ಬೆಂದುಹೋದನು. ತನ್ನ ಕೈಕಾಲುಗಳುಹರನನಡುಹಣೆಯಸುಡುಗಣ್ಣನಕಿಡಿನೋಟದ ಸಿಡಿಲುರಿಯಲ್ಲಿಸುಡತೊಡಗಿದಾಗಹತಾಶನಾದಆಕಾಮನುತನ್ನಕೈಯಲ್ಲಿಯಶ್ರೇಷ್ಠವಾದ ಧನುಸ್ಸನ್ನು ಕೆಳಗೆಒಗೆದನು. ಆಗಅದುಮುರಿದು ಐದು ಭಾಗವಾಯಿತು. ಚಿನ್ನದಕವಲುಳ್ಳ ಪ್ರಕಾಶಮಾನವಾದ ಆ ಧನುಸ್ಸಿನನಟ್ಟನಡುವಿನ ಹಿಡಿಕೆಯ ಭಾಗವುಕಂಪಿಂಪುಗಳಿಂದ ಕಳಕಳಿಸುವಸಂಪಿಗೆಯಮರವಾಗಿಪರಿಣಮಿಸಿತು. ವಜ್ರಭೂಷಿತವಾದ ಆ ಧನುಸ್ಸಿನ ಮೇಲ್ಭಾಗವುಬಕುಲಬನವಾಯಿತು. ಇಂದ್ರನೀಲಮಣಿಗಳಿಂದಅಲಂಕೃತವಾದಆಕೊನೆಯ ಭಾಗದುಂಬಿದುಂಬಿದಪಾದರೀಪುಷ್ಪವಾಗಿಪರಿಣತವಾಯಿತು. ಮೌರ್ವೀಬಂಧನದ ಮೇಲ್ಭಾಗದಲ್ಲಿರುವಚಂದ್ರಕಾಂತಮಣಿಯಂತೆಉಜ್ವಲವಾದಧನುರ್ಭಾಗವುಐದು ಸುತ್ತಿನಜಾಜೀಹೂವಾಗಿಪರಿಣಮಿಸಿತು. ಎರಡೂತುದಿಗಳಕೆಳಗಿನಹವಳದಕುಡಿಯಿಂದ ಭೂಷಿತವಾದಆಕಾಮನಬಿಲ್ಲಿನಉಪಾಂತ್ಯಭಾಗದಿಂದಪಕಳೆಪಕಳೆಯಾದಚಂಡಮಲ್ಲಿಗೆ ದುಂಡುಮಲ್ಲಿಗೆಮುಂತಾದಬಗೆಬಗೆಯಅರಳುಗಳುಉಂಟಾದವು.

೧೫೮. ಮುಮೋಚ ಮಾರ್ಗಣಾನ್ರಮ್ಯಾಂಚ್ಛರೀರೇ ದಹ್ಯತಿ ಸ್ಮರಃ ।
ಫಲೋಪಗಾನಿ ಪುಷ್ಪಾಣಿ ಸಂಭೂತಾನಿ ಸಹಸ್ರಶಃ ॥

ಹೀಗೆನಾನಾವಿಧವಾದಸುಗಂಧಿಸುಂದರಹೂಗಳನ್ನುಸ್ವಯಂನಿರ್ಮಿಸಿಕಾಮನುತನ್ನ ಶರೀರವುಸುಡುತ್ತಿದ್ದರೂಆಅರಳುಗಳನ್ನೇಸಹಸ್ರಾರುಬಾಣಗಳನ್ನಾಗಿಮಾಡಿಕೊಂಡು ಪ್ರಯೋಗಿಸಿದನು. ಪರಶಿವನಪ್ರಸಾದದಿಂದಸಹಸ್ರಸಹಸ್ರಮಾವು, ಹೂವು, ಮುಂತಾದ ಬಗೆಬಗೆಯಫಲಪುಷ್ಪಗಳುಅರಳಿದವು. ತಮ್ಮ ರುಚಿ, ರಸ, ಗಂಧ, ಅಂದ, ಚಂದಮುಂತಾದ ಗುಣಗಳಿಂದದೇವೋತ್ತಮರೆಲ್ಲರಭೋಗೋಪಭೋಗಕ್ಕೆಪಾತ್ರವಾದವು. ಹೀಗೆಪ್ರಭು ಪರಮೇಶ್ವರನು ಕಾಮನನ್ನು ಸುಟ್ಟು ತನ್ನ ದೇಹವನ್ನು ನಿಯಮಿತಗೊಳಿಸಿ ತಪೋನುಷ್ಠಾನಕ್ಕಾಗಿಹಿಮಗಿರಿಗೆತೆರಳಿದನು. ಅಂತೂಇಂತುಕಂತುಎಂದುಹೆಸರಾದಆ ಕಾಮನುದೇವತೆಗಳಲ್ಲಿಹಿರಿಯನಾದಶಂಕರನಿಂದಬಿಲ್ಲು-ಬಾಣಸಹಿತವಾಗಿಯೇ ದಹಿಸಲ್ಪಟ್ಟನು. ಅವನಅಂಗಾಂಗಗಳೆಲ್ಲವೂಹರನನೇತ್ರಾಗ್ನಿಯಲ್ಲಿಬಿದ್ದುಬೆಂದು ಬೂದಿಯಾಗಿಹೋದದ್ದರಿಂದಅವನುಅನಂಗನೆಂದುಪ್ರಖ್ಯಾತನೂ, ದೇವತೆಗಳಿಂದ ಪೂಜಿತನೂಆದನು. ಅವನಸಾಹಸವನ್ನುಸುರರುಈಗಲೂಹೊಗಳುತ್ತಿದ್ದಾರೆ.

ವಾಮನ ಮಹಾಪುರಾಣ ಶಿವನ ಲಿಂಗಪತನ ಎಂಬ ಆರನೇಯ ಅಧ್ಯಾಯವು ಮುಗಿದುದು

## ಊರ್ವಶಿಯ ಹುಟ್ಟು - ವೃತ್ತಾಂತ

**ಅಧ್ಯಾಯ - ೭**

**೧೫೯. ತದಕ್ಷುಬ್ಧತ್ವಮೀಕ್ಷ್ಯಾಸ್ಯ ಕಾಮೋ ವಿಸ್ಮಯಮಾಗತಃ ।
ವಸಂತೋಽಪಿ ಮಹಾಚಿಂತಾಂ ಜಗಾಮಾಶು ಮಹಾಮುನೇ ॥**

**ಪುಲಸ್ತ್ಯ :-** ಹೀಗೆ ಹರನ ಹಣೆಗಣ್ಣಿನ ಉರಿಯಲ್ಲಿ ಸುಟ್ಟು ಸೀಕರಿಗೊಂಡು ಅನಂಗನಾದ ಆ ಮನ್ಮಥನು ಮತ್ತೀಗ ತಪಂಗೈಯುತ್ತಿದ್ದ ಶ್ರೀಹರಿಯನ್ನು ಕೆಣಕಿದನು. ನರನರನಾರಾಯಣ ರೂಪದಿಂದ ತಪಂಗೈಯುತ್ತಿದ್ದ ಆ ತಾಪಸ ಕುಮಾರರಲ್ಲಿ ಆ ನಾರಾಯಣನನ್ನೇ ಕ್ಷೋಭೆಗೊಳಿಸಬೇಕೆಂದು ಉಜ್ಜುಗಿಸಿದಾಗ ಅವನ ದಗ್ಧ ಮುಗ್ಧ ಸ್ವರೂಪವು ಆ ಭಗವಂತನ ಕಣ್ಣಿಗೆ ಬಿದ್ದಿತು. ಆಗ ಶ್ರೀಮನ್ನಾರಾಯಣನು ನಸು ನಗುತ್ತ ಆ ಕಾಮನನ್ನು ಕೈಮಾಡಿ ಕರೆದನು. ''ಕಂದರ್ಪನೇ, ಇಲ್ಲಿ ಬಾ. ಇತ್ತ ಕುಳಿತುಕೋ'' ಎಂದು ಕರುಣೆದುಂಬಿ ಹೇಳಿದನು. ಯಾವುದೇ ಬಗೆಯ ಚಿತ್ತ ವಿಕಾರಕ್ಕೆ ಅವಕಾಶವಿಲ್ಲದ ಸತ್ತ್ವಮಯನಾದ ಆ ನಾರಾಯಣನ ಶುದ್ಧ ಸ್ವರೂಪವನ್ನು ಅಕ್ಷುಬ್ಧ ಸ್ವಭಾವವನ್ನೂ ನಿರ್ವಿಕಾರ ಚೇತಸ್ಕತೆಯನ್ನೂ ಮನಗಂಡು ಆ ಮದನನಿಗೆ ಅತ್ಯಾಶ್ಚರ್ಯ ವಾಯಿತು. ಆ ಕಾಮನಿಗೆ ಸಹಾಯಕನಾಗಿ ಬಂದ ವಸಂತನಿಗೂ ನಿರಾಶೆಯಿಂದ ಇನ್ನಿಲ್ಲದ ಚಿಂತೆಯುಂಟಾಯಿತು. ಅಲ್ಲಿಯೇ ನಿಂತುಕೊಂಡ ಸ್ವರ್ಗದ ಮುಗುಳುಮೊಗ್ಗೆಗಳಂತಿರುವ ಅಪ್ಸರೆಯರನ್ನು ಕಂಡು ನಾರಾಯಣನು ಉಪಹಾಸಗರ್ಭಿತವಾಗಿ, ಮೆಲುವಾಗಿ ನಕ್ಕು, ಮಿದುವಾಗಿ ನುಡಿದು, ಮಧುರ ಭಾವದಿಂದ ಅವರೆಲ್ಲರನ್ನು ಸ್ವಾಗತಿಸಿ, ಸತ್ಕರಿಸಿ ಮಧು ಮಾಸವನ್ನು ಕರೆದು, ''ವಸಂತ, ಇತ್ತ ಬಾ. ಇಲ್ಲಿ ಕುಳಿತೋಕೋ'' ಎಂದು ಹೇಳಿದನು.

**೧೬೦. ತತೋ ವಿಹಸ್ಯ ಭಗವಾನ್ಮಂಜರೀಂ ಕುಸುಮಾವೃತಾಂ ।
ಆದಾಯ ಪ್ರಾಕ್ಸುವರ್ಣಾಂಗೀಮೂರ್ವೋರ್ಬಾಲಾಂ ವಿನಿರ್ಮಮೇ॥**

ಅನಂತರ ಆ ಭಗವಂತನು ತನ್ನ ಮನದ ಸ್ಥೈರ್ಯವನ್ನು ಕದಡ ಬಂದ ಆ ಕಾಮನನ್ನು ನಖದಿಂದ ಶಿಖೆಯವರೆಗೆ ಒಮ್ಮೆ ನೋಡಿದನು, ಹವಳದುಟಿಯಲ್ಲಿ ಹಗುರಾಗಿಯೇ ನಕ್ಕು ಆ ಹರಿಯು ಕುಸುಮ ಕಿಸಲಯಿತವಾದ ಒಂದು ಹೂಗೊಂಚಲನ್ನು ತೆಗೆದುಕೊಂಡು ತನ್ನ ತೊಡೆಗೆ ಬಡೆದು ಅದರಿಂದ ಬಂಗಾರ ಬಣ್ಣದ ಓರ್ವ ಅಂಗನೆಯನ್ನು ನಿರ್ಮಿಸಿದನು. ನಾರಾಯಣನ ತೊಡೆಯಿಂದ ಉದಿಸಿದ ಆ ಸರ್ವಾಂಗ ಸುಂದರಿಯನ್ನು ಕಂಡು ಕಾಮನಿಗೆ ಎನಿಸಿತು ''ಇವಳ ಎದುರು ನನ್ನ ಮಡದಿಯಾದ ರತಿಯು ಏನು ಮಹಾ! ಇವಳನ್ನು ಕಂಡ ಬಳಿಕ ನನ್ನ ಸತಿಯಾದ ರತಿಯ ಮೇಲಿನ ನನ್ನ ಪ್ರೀತಿಯೂ ಹೊಯ್ದಾಡುತ್ತಲಿದೆ. ಇವಳ ಮಾತು ಅವಳಂತೆಯೇ ಮಧುರ-ಮಧುರ ವಾಗಿದೆ. ಹುಬ್ಬಿನ ಮೇಲೆ ಹಬ್ಬಿದ ಆ ಹಣೆಯ ಮಣೆ, ಆ ಕುಟಿಲ ಕುಂತಲ, ಆ ನಿಡಿದಾದ ಮೂಗು, ಹವಳದ ಕುಡಿಯಂತಿರುವ ಇವಳ ತುಟಿ, ಒಂದಕ್ಕೊಂದು ಒತ್ತಿ ಹತ್ತಿಕೊಂಡ ಎದೆ, ಆ ನಡು, ನಡೆ, ಅಡಿ, ಎಲ್ಲವೂ ರತಿಗಿಂತ ಮಿಗಿಲು. ಸತಿಗಿಂತ ಸುಂದರ, ಹೆಜ್ಜೆ ಇಟ್ಟರೆ ಕಮಲ ಕಿಂಜಲ್ಕದ ಕಾಂತಿಯು ರಂಜಿಸಿ ತೋರ್ಪುದು.'' ಹೀಗೆ ಅವಳನ್ನು ನೋಡಿ ಅವಳ ರೂಪವನ್ನು ಚಿಂತಿಸಿ ಕಾಮನೂ ಕೂಡ ಕಾಮಾತುರನಾದನು.

೧೬೧. ಮಾಧವೋಽಪ್ಯೂರ್ವಶೀಂ ದೃಷ್ಟ್ವಾ ಸಂಚಿಂತಯತಿ ನಾರದ ।
ಕಿಂ ಸ್ವಿತ್ಕಾಮನರೇಂದ್ರಸ್ಯ ರಾಜಧಾನೀ ಸ್ವಯಂ ಸ್ಥಿತಾ ॥

ಅವಳನ್ನು ನೋಡಿ ವಸಂತನಿಗೂ ಕೂಡ "ಕಾಮನ ರಾಜಧಾನಿಯೇ ಕಾಮಿನೀ ರೂಪದಿಂದ ಇಲ್ಲಿ ನಡೆದು ಬಂದಿದೆ" ಎನಿಸಿತು. ಸೂರ್ಯರಶ್ಮಿಯಿಂದ ಬೆದರಿದ ಚಂದ್ರನ ಚಂದ್ರಿಕೆಯೇ ಈ ಚಂದ್ರಮುಖಿಯ ರೂಪದಿಂದ ಹರಿಗೆ ಶರಣು ಬಂದಿರ ಬಹುದೇ ? ಎಂದಿತು ಆ ಮಧುಮಾಸಾಭಿಮಾನಿಯ ಮನಸ್ಸು. ಆಗ ನಾರಾಯಣನು ಒಂದು ಕ್ಷಣ ಆಲೋಚನೆಗೈದು ಊರ್ವಶಿಯ ರೂಪರಾಶಿಯಿಂದ ಧರ್ಷಿತಾಕರ್ಷಿತನಾಗಿ ನಿಂತ ಕಾಮನನ್ನು ಕುರಿತು ಮಂದಹಾಸ ಮಾಡಿ ನುಡಿದನು.

೧೬೯. ಇಯಂ ಮಮೋರುಸಂಭೂತಾ ಕಾಮಾಪ್ಸರಸ ಮಾಧವೀ ।
ನೀಯತಾಂ ಸುರಲೋಕಾಯ ದೀಯತಾಂ ವಾಸವಾಯ ಚ ॥

"ಮನ್ಮಥ, ಇವಳು ನನ್ನ ತೊಡೆಯಿಂದ ಹುಟ್ಟಿದಳು. ಇವಳ ಹೆಸರು ಊರ್ವಶಿ. ಇವಳನ್ನು ಇಂದ್ರಲೋಕಕ್ಕೆ ಕರೆದುಕೊಂಡು ಹೋಗಿ ಆ ಸುರರಾಜನಿಗೆ ಒಪ್ಪಿಸು."

ನಾರಾಯಣನ ಈ ನುಡಿಗಳನ್ನು ಆಲಿಸಿ ನಾಕಲೋಕದ ಆ ನಾರಿಯರೆಲ್ಲರೂ ನಡುಗತೊಡಗಿದರು. ಮರುಮಾತನಾಡದೇ ಅವನ ಆದೇಶದಂತೆ ಊರ್ವಶಿಯನ್ನು ಕರೆದುಕೊಂಡು ಸ್ವರ್ಗಕ್ಕೆ ತೆರಳಿದರು. ಮತ್ತು ಕಾಮನು ಆ ಅನಿಂದ್ಯ ಸುಂದರಿಯನ್ನು ಇಂದ್ರದೇವರಿಗೆ ಒಪ್ಪಿಸಿ ನರಲೋಕದ ನಾರಾಯಣಾಶ್ರಮದಲ್ಲಿ ನಡೆದ ಕೌತುಕ ಘಟನೆಯನ್ನು ವಿವರಿಸಿ ಹೇಳಿದನು. ಅದನ್ನು ಕೇಳಿ ಆ ದೇವರಾಜನಿಗೆ ಅತ್ಯಾಶ್ಚರ್ಯ ವಾಯಿತು. ಮತ್ತು ನರನಾರಾಯಣರ ಈ ಚರಿತ್ರವು ಎಲ್ಲ ಲೋಕಗಳಲ್ಲಿಯೂ ಪ್ರಸಿದ್ಧಿ ಯನ್ನು ಹೊಂದಿ ಪ್ರಸಾರಗೊಂಡಿತು.

೧೬೩. ಏಕದಾ ನಿಹತೇ ರೌದ್ರೇ ಹಿರಣ್ಯಕಶಿಪೌ ಮುನೇ ।
ಅಭಿಷಿಕ್ತಸ್ತದಾ ರಾಜ್ಯೇ ಪ್ರಹ್ಲಾದೋ ನಾಮ ದಾನವಃ ॥

ಹಿಂದೆ ಒಂದಾನೊಂದು ಕಾಲದಲ್ಲಿ ಹಿರಣ್ಯಕಶಿಪುವಿನ ಸಂಹಾರವಾದ ಬಳಿಕ ದಾನವ ರಾಜ್ಯದಲ್ಲಿ ಅವನ ಮಗ ಪ್ರಲ್ಹಾದನು ಪಟ್ಟಾಭಿಷಿಕ್ತನಾದನು. ದೇವ ಬ್ರಾಹ್ಮಣರನ್ನು ಪೂಜಿಸುವ ಆ ಪ್ರಲ್ಹಾದನು ರಾಜ್ಯವನ್ನು ಆಳುತ್ತಲಿರುವಾಗ ರಾಜರೆಲ್ಲರೂ ಯಜ್ಞಯಾಗ ಗಳಲ್ಲಿ, ಬ್ರಾಹ್ಮಣರು ತಪೋನುಷ್ಠಾನ ತೀರ್ಥಯಾತ್ರೆಗಳಲ್ಲಿ ವೈಶ್ಯರು ವಾಣಿಜ್ಯ ಮತ್ತು ಪಶುಪಾಲನೆಗಳಲ್ಲಿ, ಶೂದ್ರರು ಸೇವಾ ಧರ್ಮಗಳಲ್ಲಿ ಆಸಕ್ತರಾಗಿ ನಿತ್ಯ ತೃಪ್ತರಾಗಿದ್ದರು.

೧೬೪. ತತಸ್ತು ಚ್ಯವನೋ ನಾಮ ಭಾರ್ಗವೇಂದ್ರೋ ಮಹತಪಾಃ ।
ಜಗಾಮ ನರ್ಮದಾಂ ಸ್ನಾತುಂ ತೀರ್ಥಂ ವೈನಾಕುಲೇಶ್ವರಂ ॥

ಆ ಕಾಲದಲ್ಲಿ ಒಂದು ದಿನ ಭಾರ್ಗವ ವಂಶದ ಚ್ಯವನ ಎಂಬ ಮಹಾತಪಸ್ವಿಯು ನರ್ಮದಾ ನದಿಯ ವೈಣಾಕುಲೇಶ್ವರ ಎಂಬ ಸುಪ್ರಸಿದ್ಧವಾದ ತೀರ್ಥಯಾತ್ರೆಗೆ ಹೋಗಿದ್ದನು. ಅಲ್ಲಿ ಅವನು ಕ್ಷೇತ್ರಸ್ವಾಮಿಯಾದ ಈಶ್ವರನ ದರ್ಶನವನ್ನು ಮಾಡಿಕೊಂಡು ಸ್ನಾನಮಾಡಲು ನದಿಯ ನೀರಿಗೆ ಇಳಿದಾಗ ಅಲ್ಲಿಯ ಕೇಕರಲೋಹಿತ ಎಂಬ ಹಾವು ಕಚ್ಚಿ

ಹಿಡಿಯಿತು. ಹಾವು ಹಿಡಿದ ಆ ಮುನಿಯು ತನ್ನ ಹೃದಯದಿಂದ ಹರಿಯ ಧ್ಯಾನವನ್ನು ಮಾಡತೊಡಗಿದನು. ನಾರಾಯಣನ ನಾಮಸ್ಮರಣೆಯ ಪ್ರಭಾವದಿಂದ ಆ ಹಾವಿನ ಬಲವೇ ಕುಗ್ಗಿತು. ಹಲ್ಲುಗಳು ನಿರ್ವೀರ್ಯವಾದವು. ಅದರ ಘೋರ ವಿಷವು ನಿಸ್ಸತ್ವವಾಯಿತು.

ಆದರೂ ಆ ಚ್ಯವನ ಋಷಿಯು ಶ್ರೀಹರಿ ಧ್ಯಾನವನ್ನು ಮಾಡುತ್ತಲಿರುವಾಗಲೇ ಆ ಕ್ರೂರ ಸರ್ಪವು ಆ ಮುನಿಯನ್ನು ಕಚ್ಚಿ ಅವನ ಕಾಲನ್ನು ಹಿಡಿದು ಎಳೆಯುತ್ತ ಪಾತಾಳ ಲೋಕಕ್ಕೆ ಸೆಳೆದೊಯ್ಯಿತು. ಅಷ್ಟರಲ್ಲಿ ಹರಿಧ್ಯಾನವನ್ನು ಮಾಡಿ ಪೂರೈಸಿದ ಆ ಮುನಿಯ ನಾರಾಯಣನ ನಾಮೋಚ್ಚಾರಣೆಯ ಪ್ರಭಾವದಿಂದ ಆ ಹಾವಿನ ಬಿಗಿಯಾದ ನಾಗಬಂಧವು ತಾನಾಗಿಯೇ ಸಡಿಲಾಯಿತು. ಹಾವು ಕಚ್ಚಿದ ವಿಷದ ಬಾಧೆಯು ಇನಿತೂ ಆಗದೇ ಆ ಋಷಿಯು ಕೂಡಲೇ ಬಿಡುಗಡೆ ಮಾಡಲ್ಪಟ್ಟನು. ಅಲ್ಲಿರುವ ನಾಗ ಕನ್ನಿಕೆಯರು ಹರಿಧ್ಯಾನದಿಂದ ಬಂಧಮುಕ್ತನಾದ ಆ ತಾರುಣ ತಾಪಸನನ್ನು ಸತ್ಕರಿಸಿದರು. ನಾಗಲೋಕದ ನಾಗರಿಕರು ಸಂಭ್ರಮದಿಂದ ಅವನನ್ನು ಸ್ವಾಗತಿಸಿ ಗೌರವಿಸಿದರು.

ಅನಂತರ ಆ ಚ್ಯವನಮಹರ್ಷಿಯು ನಿರಾತಂಕನಾಗಿ ಆ ನಾಗರ ನಗರಗಳಲ್ಲಿ ಸಂಚರಿಸುತ್ತ ದೈತ್ಯಸಾರ್ವಭೌಮನಾದ ಪ್ರಲ್ಹಾದನ ರಾಜಧಾನಿಯನ್ನು ಪ್ರವೇಶಿಸಿದನು. ಪ್ರಲ್ಹಾದರಾಜನು ಭೂಲೋಕದಿಂದ ಬಂದ ಈ ಭೃಗುಪುತ್ರನನ್ನು ಕಂಡು ಆನಂದದಿಂದ ಎದುರುಗೊಂಡು ತನ್ನ ಆಸ್ಥಾನಕ್ಕೆ ಬರಮಾಡಿಕೊಂಡನು. ಪರಮ ಭಗವದ್‌ಭಕ್ತನಾದ ಪ್ರಲ್ಹಾದನನ್ನು ನೋಡಿ ಚ್ಯವನಋಷಿಗೆ ಮನದಲ್ಲಿ ಸ್ನೇಹಾಂಕುರವು ಉದಯಿಸಿತು. ನರ್ಮದಾ ನದಿಯ ವೈನಾಕುಲೇಶ್ವರ ತೀರ್ಥದಲ್ಲಿ ಸ್ನಾನಕ್ಕೆ ಇಳಿದ ತಾನು ಸರ್ಪಗ್ರಸ್ತನಾಗಿ ಈ ನಾಗಲೋಕಕ್ಕೆ ಬಂದಿಳಿದ ಸಮಾಚಾರವನ್ನು ತಿಳಿಸಿದನು.

ಅನಂತರ ಪ್ರಲ್ಹಾದ ರಾಜನು ಚ್ಯವನ ಮುನಿಯನ್ನು ಕುರಿತು ಕೇಳಿದನು.

''ಪೂಜ್ಯರೇ, ಈ ಭೂಮಂಡಲದಲ್ಲಿ ಮತ್ತೂ ಅಂತರಿಕ್ಷದಲ್ಲಿ ಅದರಂತೆ ಪಾತಾಳ ತಳದಲ್ಲಿರುವ ಉತ್ತಮೋತ್ತಮವಾದ ತೀರ್ಥಗಳು ಯಾವುವು? ದಯವಿಟ್ಟು ನನಗೆ ತಿಳಿಸಿ ಕೊಡಬೇಕು.'' ದಾನವೇಶ್ವರನ ಆ ಬಿನ್ನಹವನ್ನು ಆಲಿಸಿ ಭೃಗುಕುಮಾರರಾದ ಚ್ಯವನ ಮುನಿಗಳು ಹರ್ಷಭರಿತರಾಗಿ ''ಭೂಲೋಕದಲ್ಲಿ ನೈಮಿಷ ತೀರ್ಥವೂ, ಪಾತಾಳದಲ್ಲಿ ಚಕ್ರ ತೀರ್ಥವೂ ಮಹಾತೀರ್ಥವೆಂದು ಬಲ್ಲವರು ಹೇಳುತ್ತಾರೆ'' ಎಂದು ತಿಳಿಸಿದರು.

ಚ್ಯವನ ಋಷಿಯ ಆ ಮಾತುಗಳನ್ನು ಕೇಳಿ ಧರ್ಮಾತ್ಮನಾದ ದೈತ್ಯರಾಜನಿಗೆ ಭೂಮಂಡಲದಲ್ಲಿರುವ ಮಹಾತೀರ್ಥವೆನಿಸಿದ ನೈಮಿಷತೀರ್ಥಕ್ಕೆ ಹೋಗಬೇಕೆಂದು ಬಯಕೆಯಾಯಿತು. ಕೂಡಲೇ ಅವನು ಆ ಮುನಿಗಳನ್ನು ಕುರಿತು ನುಡಿದನು : ''ಪೂಜ್ಯರೇ, ಏಳಿರಿ ನೈಮಿಷಾರಣ್ಯಕ್ಕೆ ಹೋಗೋಣ. ಆ ಪುಣ್ಯತೀರ್ಥದಲ್ಲಿ ಸ್ನಾನ ಮಾಡೋಣ. ಅಲ್ಲಿಯ ಪೀತಾಂಬರ ಧಾರಿಯಾದ ಪುಂಡರೀಕಾಕ್ಷನನ್ನು ಕಣ್ಣತುಂಬ ನೋಡೋಣ'' ಎಂದು ಹೇಳಿ ತನ್ನ ಎಲ್ಲ ದೈತ್ಯಪರಿವಾರದೊಂದಿಗೆ ಪಾತಾಳದಿಂದ ಹೊರಟು ಭೂಲೋಕಕ್ಕೆ ಬಂದನು. ಅಲ್ಲಿಯ ಪುಣ್ಯಾರಣ್ಯವಾದ ನೈಮಿಷಕ್ಷೇತ್ರಕ್ಕೆ ಐತಂದನು.

ದೈತ್ಯದಾನವರೊಂದಿಗೆ ಅಲ್ಲಿಯ ತೀರ್ಥಜಲದಲ್ಲಿ ಮಿಂದನು. ಅನಂತರ ಆ ದಾನವ ಪತಿಯಾದ ಪ್ರಲ್ಹಾದನು ಒಂದು ದಿನ ಬೇಟೆಯಾಡುತ್ತ ತನ್ನ ಪರಿವಾರದೊಂದಿಗೆ

ಸರಸ್ವತೀ ನದೀತೀರಕ್ಕೆ ಬಂದನು. ಆ ನದೀ ತಟಾಕದಲ್ಲಿ ಒಂದು ಶಾಲವೃಕ್ಷವು ಅವರ ಕಣ್ಣಿಗೆ ಬಿದ್ದಿತು. ಅದರ ತುಂಬ ಬಾಣಗಳು ತುಂಬಿದ್ದವು. ಆ ಶಾಲವೃಕ್ಷದ ಸಮೀಪದಲ್ಲಿಯೇ ಇಬ್ಬರು ತರುಣ ತಪಸ್ವಿಗಳು ಕೃಷ್ಣಾಜಿನವನ್ನು ಹೊದ್ದುಕೊಂಡು ಕುಳಿತಿದ್ದರು. ಜಟಾಮಂಡಲಧಾರಿಗಳಾದ ಅವರಿಬ್ಬರೂ ತಪೋನುಷ್ಠಾನದಲ್ಲಿ ನಿರತರಾಗಿದ್ದರೂ ಅವರ ಅಕ್ಕಪಕ್ಕದಲ್ಲಿ ಒಳ್ಳೇ ಲಕ್ಷಣಗಳಿಂದ ಒಡಗೂಡಿದ ಎರಡು ಬಿಲ್ಲುಗಳು ಎರಡೂ ಬತ್ತಳಿಕೆಗಳು ಇರಿಸಲ್ಪಟ್ಟಿದ್ದವು. ಪಕ್ಕದಲ್ಲಿ ಬಿಲ್ಲು ಬಾಣಗಳನ್ನು ಇಟ್ಟುಕೊಂಡು ತಪಸ್ಸನ್ನು ಮಾಡುತ್ತಿದ್ದ ಆ ತರುಣ ತೇಜಸ್ವಿ ತಾಪಸರ ತಪಶ್ಚರ್ಯೆಯು ಬರಿ ಒಂದು ಸೋಗು ಎನಿಸಿತು ಆ ದೈತ್ಯ ಸಾಮ್ರಾಟನಿಗೆ. ''ನಿಜವಾದ ತಪಸ್ವಿಗಳಾಗಿದ್ದರೆ ಬಳಿಯಲ್ಲಿ ಬಿಲ್ಲು ಏಕೆ? ಬದಿಯಲ್ಲಿ ಬತ್ತಳಿಕೆ ಏಕೆ? ಇದೆಲ್ಲವೂ ಇವರೀರ್ವರ ತಪೋಡಂಭ. ಒಣ ಜಂಭ!'' ಎಂದು ಅವನ ಭಾವನೆಯಾಯಿತು. ಅದರಿಂದ ಕುಪಿತನಾದ ದೈತ್ಯಪತಿಯು ಆ ನರನಾರಾಯಣರನ್ನು ಬೆದರಿಸುತ್ತ ಕೇಳಿದನು —

''ಧರ್ಮ ವಿರುದ್ಧವಾದ ಈ ಡಂಭಾಚಾರವನ್ನು ನೀವೇಕೆ ಶುರು ಮಾಡಿದ್ದೀರಿ? ನಿಮ್ಮ ಜಡೆಯಲ್ಲಿ ? ತಪಸ್ಸೆಲ್ಲಿ ? ನಿಮ್ಮ ಬಳಿಯಲ್ಲಿರುವ ಈ ಘೋರ ಆಯುಧವೆಲ್ಲಿ! ಬಿಲ್ಲು ಬಾಣಗಳನ್ನು ಹಿಡಿದ ಭಿಲ್ಲರಂತಿದ್ದ ನೀವಿಬ್ಬರೂ ಸುಳ್ಳು ತಪ, ಟೊಳ್ಳು ಜಪಗಳನ್ನು ಮಾಡುತ್ತ ಜನರನ್ನು ಮೋಸಗೊಳಿಸುತ್ತಿರುವಿರಿ. ಇಂಥ ವಿಡಂಬನಾ ಕಾರ್ಯವನ್ನು ನೀವೇಕೆ ಕೈಕೊಂಡಿರುವಿರಿ...?'' ಪ್ರಲ್ಹಾದನ ಈ ಪ್ರಶ್ನೆಗೆ ನರನು ನಕ್ಕು ಉತ್ತರಿಸಿದನು. ''ದಾನವರ ದೊರೆಯೆ, ನಮ್ಮ ಗೊಡವೆ ನಿಮಗೇಕೆ? ಶಕ್ತಿಯಿಂದ ಮನುಷ್ಯನು ತಪವನ್ನೂ ಮಾಡಬಲ್ಲ. ತಲವಾರವನ್ನು ಬೀಸಬಲ್ಲ. ಜಯಿಸಲೂ ಬಲ್ಲ. ಜಪಿಸಲೂ ಬಲ್ಲ. ನಿನಗೇಕೆ ಇದೆಲ್ಲದರ ಚಿಂತೆ?'' ನರನ ದಿಟ್ಟತನದ ಈ ಉತ್ತರವನ್ನು ಕೇಳಿ ದೈತ್ಯ ಚಕ್ರವರ್ತಿಗೆ ಸಿಟ್ಟು ನೆತ್ತಿಗೇರಿತು. ಅವನು ದಾನವೇಶ್ವರರಿಗೆ ಉಚಿತವಾದ ದರ್ಪದ ದನಿಯಲ್ಲಿ ಗುಡುಗಿದ —

''ದೈತ್ಯ ದಾನವರಿಗೆಲ್ಲ ಇಂದ್ರನಾದ ನಾನು ಇರುವುದು ಧರ್ಮಚಕ್ರ ಪ್ರವರ್ತನೆಗಾಗಿಯೇ. ಧರ್ಮಕ್ಕೆ ವಿರುದ್ಧವಾಗಿ ನಡೆಯುವವರನ್ನು ದಂಡಿಸುವದು ನನ್ನ ಕರ್ತವ್ಯವಾಗಿದೆ. ಧರ್ಮಮರ್ಯಾದೆಯನ್ನು ಕಾಯಲು ಕಂಕಣಬದ್ಧನಾದ ನಾನು ಇನ್ನೂ ಬದುಕಿ ಇರುವಾಗ ತಪೋಧರ್ಮವನ್ನು ವಿಡಂಬಿಸುವ ಅದಟು ಬೀರಗಳು ನಿಮ್ಮಲ್ಲಿ ಉಂಟೇ!''

ಪ್ರಲ್ಹಾದನ ಈ ಕಿಡಿನುಡಿಗಳನ್ನು ಕೇಳಿ ನರನ ಪಿತ್ತವು ಕೆರಳಿತು. '' ಈ ನರನನ್ನು ಎದುರಿಸುವ ವೀರನು ಈ ಪ್ರಪಂಚದಲ್ಲಿ ಯಾರೂ ಈವರೆಗೆ ಉದಯಿಸಿಲ್ಲ. ನರನಾರಾಯಣರನ್ನು ಸೋಲಿಸಬಲ್ಲ ಶಕ್ತಿಯು ಯಾರಿಗೆ ಇದೆ?'' ನರನ ಈ ಮಾತು ದಾನವೇಶ್ವರನಿಗೆ ಸಂಗ್ರಾಮದ ಆಹ್ವಾನವೇ ಆಗಿತ್ತು. ಕೂಡಲೇ ಅವನು ಆ ನರ ನಾರಾಯಣರನ್ನು ಜಯಿಸುತ್ತೇನೆಂದು ಪ್ರತಿಜ್ಞೆ ಮಾಡಿ ಯುದ್ಧಕ್ಕೆ ಸಿದ್ಧನಾಗಿ ಬಂದ.

ಇತ್ತ ಈ ನರವೀರನೂ ತನ್ನ ಆಜಗವ ಎಂಬ ಬಿಲ್ಲನ್ನು ಎತ್ತಿ, ಬಗ್ಗಿಸಿ, ಹೆದೆ ಏರಿಸಿ, ಧನುಷ್ಟಂಕಾರ ಧ್ವನಿಯನ್ನು ಮಾಡುತ್ತ ಕಾಳಗದ ವೀಳ್ಯೆಯನ್ನು ಎತ್ತಿದನು. ಅವರೀರ್ವರಲ್ಲಿ ಘೋರವಾದ ದ್ವಂದ್ವವು ಮಸಗಿತು.

ಹೀಗೆ ಅವರಿಬ್ಬರು ಅತ್ಯಂತ ದಾರುಣವಾದ ಅಸ್ತ್ರಪ್ರತ್ಯಸ್ತ್ರಗಳಿಂದ ಹೋರಾಡುತ್ತಲಿರುವಾಗ ರೊಚ್ಚಿಗೆದ್ದ ಪ್ರಲ್ಹಾದನು ಬ್ರಹ್ಮಾಸ್ತ್ರವನ್ನು ನರನ ಮೇಲೆ ಪ್ರಯೋಗಿಸಿದನು. ಅದನ್ನು ಕಂಡು ನರನು ಆ ಬ್ರಹ್ಮಾಸ್ತ್ರಕ್ಕೆ ಪ್ರತಿಯಾಗಿ ನಾರಾಯಣಾಸ್ತ್ರವನ್ನು ಬಿಟ್ಟನು. ಆ ನಾರಾಯಣಾಸ್ತ್ರದಿಂದ ಪ್ರಲ್ಹಾದನು ಬಿಟ್ಟ ಆಗ್ನೇಯಾಸ್ತ್ರ ಮಾಹೇಶ್ವರಾಸ್ತ್ರ ಬ್ರಹ್ಮಾಸ್ತ್ರ ಮುಂತಾದ ಎಲ್ಲ ಅಸ್ತ್ರಗಳು ಕಂದಿ, ಕುಂದಿ ನಂದಿ ಶಾಂತವಾಗಿ ಹೋಗಲು ಪ್ರಲ್ಹಾದನು ರೋಷಾವಿಷ್ಟನಾಗಿ ರಥದಿಂದ ಕೆಳಗೆ ಧುಮುಕಿ ಗದೆಯನ್ನು ಎತ್ತಿ ನಾರಾಯಣನಿಗೆ ಅಭಿಮುಖನಾಗಿ ನಡೆದನು. ಗದಾಪಾಣಿಯಾದ ಆ ಅಸುರ ಸಾರ್ವಭೌಮನು ತಮ್ಮಿಬ್ಬರನ್ನು ಅಟ್ಟಿಸಿಕೊಂಡು ಬರುವುದನ್ನು ಕಂಡು ನಾರಾಯಣನು ನರನನ್ನು ತುಸು ಹಿಂದೆ ಸರಿಸಿ ತಾನೇ ಆ ದಾನವ ವೀರಧೀರನನ್ನು ಎದುರಿಸಿದನು.

ವಾಮನ ಮಹಾಪುರಾಣ ಊರ್ವಶಿಯ ಹುಟ್ಟು ಎಂಬ ಏಳನೆಯ ಅಧ್ಯಾಯವು ಮುಗಿದುದು



## ಭಕ್ತಿಯಿಂದ ಗೆಲುವು | ಅಧ್ಯಾಯ - ೮

**ಪುಲಸ್ತ್ಯ :-** ಶಾಂರ್ಗವನ್ನು ಹಿಡಿದು ತನ್ನ ಕಡೆಗೆ ನಡೆದು ಬರುವ ಆ ನಾರಾಯಣನನ್ನು ದೈತ್ಯದೊರೆ ಪ್ರಲ್ಹಾದನು ನೋಡಿದನು. ಕೂಡಲೇ ತನ್ನ ಗದೆಯನ್ನು ಗಿಮಿಗಿಮಿ ತಿರುಗಿಸಿ ನಾರಾಯಣನ ನಡುನೆತ್ತಿಗೆ ಏಟುಕೊಟ್ಟನು. ಬಲವಾಗಿತ್ತು ಆ ಪೆಟ್ಟು. ಅದರಿಂದ ಧರ್ಮನ ಮಗನಾದ ನಾರಾಯಣನ ಕಂಗಳಿಂದ ನೀರು ಸುರಿಯಿತು. ಬೆಂಕಿಯ ಮಳೆ ಕರೆದಂತಿತ್ತು ಆ ಕಂಬನಿಯ ಕೋಡಿ. ಆದರೆ ಹರಿಯ ಶಿರದಲ್ಲಿ ತೂರಿದ ಆ ದೈತ್ಯಗದೆ ನೂರು ಹೋಳಾಗಿ ಕೆಳಗೆ ಬಿದ್ದಿತು. ಕಗ್ಗಾಡಿನ ಕೋಡುಗಲ್ಲಿಗೆ ಅಪ್ಪಳಿಸಿದ ವಜ್ರಾಯುಧದಂತಾಗಿತ್ತು ಅದರ ಪಾಡು. ಮತ್ತೆ ಪ್ರಲ್ಹಾದ ರಥ ಏರಿ ಬಿಲ್ಲು ಬಾಗಿಸಿದ. ಬತ್ತಳಿಕೆಯಿಂದ ಬಾಣ ಹಿರಿದ. ಹದ್ದಿನ ಗರಿಹಚ್ಚಿದ ಆ ಬಾಣಗಳನ್ನು ಗುರಿ ಇಟ್ಟು ನಾರಾಯಣನ ಮೇಲೆ ಬಿಟ್ಟ.

ಅರ್ಧ ಚಂದ್ರನ ಆಕಾರದಲ್ಲಿ ತನ್ನೆಡೆಗೆ ವೇಗದಿಂದ ಬರುತ್ತಿರುವ ಅವುಗಳನ್ನು ನಾರಾಯಣನು ಅರೆದಾರಿಯಲ್ಲಿಯೇ ಕತ್ತರಿಸಿದನು. ಪ್ರಲ್ಹಾದನನ್ನು ಗಾಯಗೊಳಿಸಿದನು. ಹೀಗೆ ಅವನು ಇವನನ್ನೂ ಇವನು ಅವನನ್ನೂ ಶರಗಳ ಎಸೆದಾಟದಿಂದ ಪರಸ್ಪರ ದಣಿಸಿದರು. ಕಲಿತನದಿಂದ ಕಾದಿದರು. ಈ ತುಮುಲದಲ್ಲಿ ಆ ಭಕ್ತ ಭಗವಂತರೀರ್ವರ ಕೈಚಳಕವು ನೋಡುವಂತಹದಿತ್ತು. ಅವರ ಈ ಸಮರಾಂಗಣದ ಶರಚಾತುರ್ಯ ಹಾಗೂ ಚಾಕಚಕ್ಯತೆಯನ್ನು ಕಾಣಲು ಆಗಸದಲ್ಲಿ ದೇವತೆಗಳು ಗುಂಪುಗೂಡಿದರು.

ಕದನವು ಕೌಶಲದ ಕಳಶವೇರಿದಾಗ ಆ ಸುರರು ನಿಂತಲ್ಲಿಯೇ ದುಂದುಭಿ ಮೊಳಗಿಸುತ್ತಿದ್ದರು. ಹೂಮಳೆ ಕರೆಯುತ್ತಿದ್ದರು. ಆ ದೈತ್ಯಜಗದೀಶರ ಮೇಲೆ ನೋಡುವ ದೇವತೆಗಳು ಹೊಗಳಿ ಹಾಡುವಂತೆ ಈ ನರನಾರಾಯಣರೀರ್ವರೂ ನೆಲದ ಮೇಲೆ ನಡಿಸಿದರು ತಮ್ಮ ಹೋರಾಟವನ್ನು. ಹೀಗೆ ಇಬ್ಬರೂ ಬಾಣಗಳ ಮಳೆ ಸುರಿಸಿ ಆಗಸವನ್ನು ಮುಚ್ಚಿ ಹಾಕಿದರು. ದಶದಿಕ್ಕುಗಳನ್ನು ತುಂಬಿಬಿಟ್ಟರು.

ನಂತರ ನಾರಾಯಣನು ಚೂಪಾದ ಬಾಣಗಳಿಂದ ಪ್ರಲ್ಹಾದನ ಮರ್ಮ ಸ್ಥಳಗಳನ್ನು ಭೇದಿಸಿದನು. ಆಗ ಕುಪಿತನಾದ ಆ ದಾನವ ದೊರೆಯು ಹರಿಯ ತೋಳುಗಳನ್ನು ಸೀಳಿದನು. ಎದೆಗೆ ಏಟು ಕೊಟ್ಟನು. ಮುಖದ ಮೇಲೆಯೂ ಒಂದು ಪೆಟ್ಟನ್ನು ಇಟ್ಟನು.

ಆಗ ಶ್ರೀಹರಿಯು ಬಾಣ ಬಿಡುವ ಆ ದೈತ್ಯರಾಜನ ಬಿಲ್ಲನ್ನು ತನ್ನ ಅರ್ಧ ಚಂದ್ರಾಕಾರದ ಅಂಬುವಿನಿಂದ ಕತ್ತರಿಸಿದನು. ಮತ್ತೊಂದು ಬಿಲ್ಲಿಗೆ ಬಾಣ ಹೂಡಿ ಮತ್ತು ನಡೆಯಿತು ಪ್ರಲ್ಹಾದನ ಶರಜಾಲಗಳ ಜಡಿಮಳೆ. ಪುನಃ ಹರಿಯ ಮರುಬಾಣ ಗಳಿಂದ ದಾರಿಯಲ್ಲಿಯೇ ಅವೆಲ್ಲವೂ ಛಿನ್ನ ವಿಛಿನ್ನವಾದವು. ಧನಸ್ಸು ಕೂಡ ಕತ್ತರಿಸಿ ಕೆಳಗೆ ಕೆಡವಲ್ಪಟ್ಟಿತು. ಹರಿಯ ಶಸ್ತ್ರಾಸ್ತ್ರಗಳ ಆಘಾತದಿಂದ ಪ್ರಲ್ಹಾದನ ಬಿಲ್ಲು ದಾರಗಳೆಲ್ಲ ಕತ್ತರಿಸಿ ಕೆಲಸಕ್ಕೆ ಬಾರದಂತಾದವು.

ಆಗ ಪ್ರಲ್ಹಾದನು ಒಂದು ಕಬ್ಬಿಣದ ಪರಿಘಾಯುಧವನ್ನು ಎತ್ತಿದನು. ಅದನ್ನು ಬೀಸಬೇಕೆಂದು ವೇಗದಿಂದ ತಿರುಗಿಸತೊಡಗಿದನು. ಆಗಲೇ ಹರಿಯು ಬಾಣ ಬಿಟ್ಟು ಅದನ್ನು ಕತ್ತರಿಸಿ ಒಗೆದನು. ಬಳಿಕ ಪ್ರಲ್ಹಾದನು ಒಂದು ಉಕ್ಕಿನ ಸಳಾಕೆಯನ್ನು ಬೀಸಿ ಹರಿಯ ಮೇಲೆ ಎಸೆದನು. ಹತ್ತು ಬಾಣಗಳನ್ನು ತೆತ್ತು ನಾರಾಯಣನು ಅದನ್ನು ಕತ್ತರಿಸಿದನು. ಅದು ನೆಲಕ್ಕೆ ಬಿದ್ದಿತು. ಅನಂತರ ಪ್ರಲ್ಹಾದನ ಪಾಶಾಯುಧ ಪ್ರಯೋಗ. ಅದಕ್ಕೂ ನಾರಾಯಣನಿಂದ ಖಡ್ಗ ಪೂಜೆಯಾಯಿತು. ಪಾಶನಾಶದ ನಂತರ ಶಕ್ತಿ ಆಯುಧವನ್ನು ಎತ್ತಿದ ಪ್ರಲ್ಹಾದ. ಅದನ್ನು ಒಂದೇ ಬಾಣದಿಂದ ಮುರಿದು ಹಾಕಿದ ನಾರಾಯಣ.

ಹೀಗೆ ಪ್ರಲ್ಹಾದನ ಪ್ರಹಾರಗಳೆಲ್ಲವೂ ವಿಫಲವಾದವು. ಶಸ್ತ್ರಗಳೆಲ್ಲವೂ ನಾಶವಾದವು. ಆದರೂ ಧೈರ್ಯಗುಂದಲಿಲ್ಲ ಆ ಕಡುಗಲಿ. ಮತ್ತೊಂದು ದೈತ್ಯ ಧನುಸ್ಸನ್ನು ಎತ್ತಿದ. ಪುನಃ ಬಾಣವೃಷ್ಟಿ. ಎಡೆಬಿಡದೇ ಶರಸಂಪಾತ. ಆಗ ಜಗದ್ಗುರು ನಾರಾಯಣನು ತನ್ನ ಚಾಪದಿಂದ ಅತೀ ಚೂಪಾದ ಬಾಣ ಬಿಟ್ಟ. ಆ ಶರ ಗುರಿ ತಪ್ಪಲಿಲ್ಲ. ಪ್ರಲ್ಹಾದನ ಎದೆ ಸೀಳಿತು. ತೇರಿನ ನಟ್ಟನಡುವೆ ನಿಶ್ಚೇಷ್ಟನಾಗಿ ಬಿದ್ದುಬಿಟ್ಟ ಪ್ರಲ್ಹಾದ. ಸಾರಥಿ ತೇರನ್ನು ತಿರುಗಿಸಿದ. ಎಚ್ಚರ ಬಂದ ಪ್ರಲ್ಹಾದನಿಗೆ ತನ್ನ ಅವಸ್ಥೆ ಕಂಡು ನಾಚಿಕೆಯಾಯಿತು. ಅವನು ಮತ್ತೊಂದು ಗಟ್ಟಿಮುಟ್ಟಾದ ಬಿಲ್ಲನ್ನು ಹಿಡಿದು ಹೋರಾಟಕ್ಕೆ ಅಣಿಯಾದ. ಮೂರ್ಛೆ ತಿಳಿದೆದ್ದು ಮತ್ತು ಕಾದಾಟಕ್ಕೆ ಬಂದ ಆ ಅಸುರ ರಾಜನನ್ನು ಕುರಿತು ನಾರಾಯಣನು ನುಡಿದನು —

''ದೈತ್ಯೇಂದ್ರ, ನಿನ್ನ ಆಹ್ನಿಕದ ವೇಳೆಯಾಗಿಲ್ಲವೇ! ಅದಕ್ಕಾಗಿ ನೀನೀಗ ಹೋಗ ಬಹುದು. ನಾಳೆ ಬೆಳಿಗ್ಗೆ ಯುದ್ಧವನ್ನು ಪ್ರಾರಂಭಿಸೋಣ.'' ಹರಿಯ ನುಡಿ ಕೇಳಿ ಆ ಅಸುರರ ಅರಸು ರಣರಂಗದಿಂದ ಮರಳಿದ. ನೈಮಿಷಾರಣ್ಯಕ್ಕೆ ತೆರಳಿದ. ಅಲ್ಲಿ ತಾನು ಮಾಡಬೇಕಾದ ಪೂಜೆ ಆಹ್ನಿಕಗಳನ್ನೆಲ್ಲ ಮಾಡಿ ಪೂರೈಸಿದ.

ಮರುದಿನ ಹೊತ್ತೇರುವ ಹೊತ್ತಿಗೆ ಹಣಾಹಣೀ ಹೋರಾಟ. ಹೊತ್ತು ಇಳಿದಾಗ ವಿರಾಮ. ಪೂಜೆ, ಆಹ್ನಿಕ. ಪುನಃ ಮರುದಿನ ಪ್ರಾತಃಕಾಲ ಘೋರ ಯುದ್ಧ. ಹೀಗೆ ವರ್ಷಗಳು ಉರುಳಿದ್ದೆಷ್ಟೋ? ಕಾಲ ಹೊರಳಿದ್ದೆಷ್ಟೋ! ಹಗ್ಗ ಹರಿಯಲಿಲ್ಲ. ಕೋಲು ಮುರಿಯಲಿಲ್ಲ. ನಾರಾಯಣ ಸೋಲಲಿಲ್ಲ. ಪ್ರಲ್ಹಾದ ಬಿಡಲಿಲ್ಲ.

ಸಾವಿರಾರು ವರ್ಷಗಳು ಸಂದಿವೆ. ಪ್ರಲ್ಹಾದನ ಕೈಕಾಲು ಕಂದಿವೆ. ಕಣ್ಣುಗಳು ಕಳೆಗುಂದಿವೆ. ಅವನು ನೇರವಾಗಿ ಮೂಲರೂಪಿಯಾದ ವಿಷ್ಣುವಿನ ಬಳಿಗೆ ಸಾರಿದ. ಅವನ ಕಾಲು ಹಿಡಿದ. ಕೈಜೋಡಿಸಿ ದೀನನಾಗಿ ನುಡಿದ —

''ದೇವ ದೇವಾ, ನಾನು ಎಷ್ಟು ಯುದ್ಧ ಮಾಡಿದರೂ ನೆಲದಲ್ಲಿರುವ ಧರ್ಮ ಮುನಿಯ ಮಗನಾದ ನಾರಾಯಣನನ್ನು ಜಯಿಸಲಾರದವನಾಗಿದ್ದೇನೆ. ಇದಕ್ಕೆ ಕಾರಣವೇನು ? ದಯವಿಟ್ಟು ತಿಳಿಸಿ''. ಆಗ ಶ್ರೀವಿಷ್ಣು ನಸುನಕ್ಕು ನುಡಿದನು —

''ಪ್ರಲ್ಹಾದ ಈ ಧರ್ಮಕುಮಾರನನ್ನು ನೀನು ಗೆಲ್ಲಲಾರಿ. ನೀನೊಬ್ಬನೇ ಏಕೆ ದೇವದೈತ್ಯರಲ್ಲಿ ಯಾರೂ ಅವನನ್ನು ಗೆಲ್ಲಲಾರರು''.

ಪ್ರಲ್ಹಾದನ ಅಚ್ಚರಿಗೆ ಅಂತವಿಲ್ಲ. ಅವನು ಬೆರಗುವಡೆದು ಮತ್ತೆ ಬೆಸಗೊಂಡನು.

''ದೇವರೊಡೆಯ ಅವನನ್ನು ಗೆಲ್ಲುವುದು ಶಕ್ಯವಲ್ಲವೇ ? ಹಾಗಾದರೆ ನಾನಿಟ್ಟ ಆಣೆ ಹುಸಿಯಾಗುವದು ಎಂದಾಯಿತು. ಪ್ರತಿಜ್ಞಾ ಭ್ರಷ್ಟನಾಗಿ ನಾನೇಕೆ ಬದುಕಲಿ ! ಆದುದರಿಂದ ನಿನ್ನೆದುರು ಪ್ರಾಯೋಪ ವೇಶನಕ್ಕೆ ಕುಳಿತುಕೊಳ್ಳುವೆ. ಈ ದೇಹವು ನಿನ್ನ ಮುಂದೇ ಒಣಗಿ ಕಟ್ಟಿಗೆಯಾಗಿ ಹೋಗಲಿ.''

ಹೀಗೆ ನುಡಿದ ಆ ಪ್ರಲ್ಹಾದನು ತನ್ನ ತಲೆಗೆ ನೀರಿನಿಂದ ಸಂಪ್ರೋಕ್ಷಣೆ ಮಾಡಿ ಕೊಂಡು ಶಿರಸ್ನಾನವಾಯಿತು ಎಂದು ಭಾವಿಸಿ ಭಗವಂತನ ನಾಮಸ್ಮರಣೆಯನ್ನು ಮಾಡುತ್ತ ಆ ವಿಷ್ಣುವಿನ ಎದುರೇ ಪ್ರಾಯೋಪವೇಶನಕ್ಕೆ ಕುಳಿತುಕೊಂಡನು. ಆಗ ಪರಮಾತ್ಮನು ಪರಮ ಪ್ರಸನ್ನನಾಗಿ ಪ್ರಲ್ಹಾದನಿಗೆ ಹೇಳಿದನು —

''ಏಳು ಮಗು ಪ್ರಲ್ಹಾದ ನೀನು ಗೆಲ್ಲುವಿ.'' ಪ್ರಲ್ಹಾದನಿಗೆ ಪರಮಾನಂದವಾಯಿತು. ಆಸೆದುಂಬಿದ ಕಣ್ಣುಗಳಿಂದ ಅವನು ಪರಮಾತ್ಮನೆಡೆಗೆ ನೋಡತೊಡಗಿದನು. ಅವನ ಪ್ರಶ್ನಾರ್ಥಕ ದೃಷ್ಟಿಯನ್ನು ಅರಿತು ಕೊಂಡು ವಿಷ್ಣುವು ಮಾರ್ನುಡಿದನು —

''ವತ್ಸ, ಅವನನ್ನು ಗೆಲ್ಲುವದು ಯುದ್ಧದಿಂದಲ್ಲ. ಭಕ್ತಿಯಿಂದ, ಕದನದಿಂದ ಅವನನ್ನು ಯಾರೂ ಗೆಲ್ಲಲಾರರು. ಕೈಂಕರ್ಯದಿಂದ ಅವನನ್ನು ಯಾರಾದರೂ ಗೆಲ್ಲಬಹುದು.''

''ಪ್ರಲ್ಹಾದ - ದೇವೋತ್ತಮನೇ. ಆ ಧರ್ಮಪುತ್ರನು ಮೂರು ಲೋಕದಲ್ಲಿ ದುರ್ಜಯನೇ ಆಗಿರಲಿ. ಅದೆಲ್ಲವೂ ನಿನ್ನ ಅನುಗ್ರಹ ಇರುವವರೆಗೆ ಮಾತ್ರ.

ಆ ತಪ್ಪಿ ಅನುಗ್ರಹದ ಬದಲು ನೀನೇ ನಿಗ್ರಹಮಾಡಲು ಹೊರಟರೆ ಯಾವದು ತಾನೇ ಅಶಕ್ಯ! ಭಗವನ್, ನಾನು ಈಗ ಮೂರು ಲೋಕವನ್ನು ಗೆದ್ದಿಲ್ಲವೇ ? ಇಂದ್ರನನ್ನು ಜಯಿಸಲಿಲ್ಲವೇ ? ಸಾಕ್ಷಾತ್ ಯಮಧರ್ಮನನ್ನೂ ಕೂಡ ಸೋಲಿಸಲಿಲ್ಲವೇ! ಇದೆಲ್ಲವೂ ಯಾವುದರಿಂದ ? ನಿನ್ನ ಪ್ರಸಾದದಿಂದಲೇ ಅಲ್ಲವೇ? ಅದೇ ನಿನ್ನ ಪೂರ್ಣ ಪ್ರಸಾದವನ್ನು ನನ್ನ ಮೇಲೆ ಮಾಡು. ಅದರಿಂದ ನಾನು ಆ ನಾರಾಯಣ ಮುನಿಯನ್ನೂ ಸಹಜವಾಗಿ ಗೆಲ್ಲಬಲ್ಲೆನು.'' ಪ್ರಲ್ಹಾದನ ಆ ಮಾತುಗಳನ್ನು ಕೇಳಿ ವಿಷ್ಣುವು ನಗು ನಗುತ್ತ ನುಡಿದನು. ''ದೈತ್ಯೇಶ್ವರ, ಆ ಧರ್ಮಪುತ್ರನಾದ ನಾರಾಯಣನು ಯಾರೆಂದು ತಿಳಿದಿರುವಿರಿ ? ಜನರ ಮೇಲಿನ ದಯೆಯಿಂದ ನಾನೇ ಅವನಾಗಿ ಭೂಮಿಗೆ ಬಂದಿದ್ದೇನೆ. ಧರ್ಮ ಪ್ರಸಾರಕ್ಕಾಗಿ

ಈ ಮೂಲ ನಾರಾಯಣನೇ ಆ ನರರೂಪಿ ನಾರಾಯಣನಾಗಿ ತಪಂಗೈಯುತ್ತಿದ್ದಾನೆಂದು ತಿಳಿ. ನಾನು ಬೇರೆಯಲ್ಲ, ಅವನು ಬೇರೆಯಲ್ಲ. ನಾನೇ ಅವನು, ಅವನೇ ನಾನು. ಆ ನಾರಾಯಣನೇ ಈ ನಾರಾಯಣ. ಈ ನಾರಾಯಣನೇ ಆ ನಾರಾಯಣ. ನಿನಗೆ ಗೆಲುವಿನ ಇಚ್ಛೆ ಇದ್ದರೆ ನನ್ನ ಮಾತನ್ನು ಕೇಳು. ಭಕ್ತಿಯಿಂದ ಅವನನ್ನು ಆರಾಧಿಸು. ನನಗೆ ಗೊತ್ತು ನೀನು ಮನಸ್ಸು ಮಾಡಿದರೆ ಅವನ ಭಕ್ತಿಯ ನೆಲೆಯಲ್ಲಿ ನಿಲ್ಲಬಲ್ಲಿ ?'' ಆ ಭಕ್ತಿಯಿಂದಲೇ ಅವನನ್ನು ಗೆಲ್ಲಬಲ್ಲೆ.

**ಪುಲಸ್ತ್ಯ** - ಭಗವಂತನ ಈ ಮಾತನ್ನು ಕೇಳಿ ಭಕ್ತ ಪ್ರಲ್ಹಾದನು ಶಾಂತಚಿತ್ತನಾಗಿ ತನ್ನ ಮನೆಗೆ ಮರಳಿದನು. ಅಂಧಕಾಸುರನನ್ನು ಕರೆದು ಸಂತಸದಿಂದ ನುಡಿದನು-

''ಅಂಧಕ, ನಾನು ಇಂದಿನಿಂದ ಈ ನನ್ನ ಸಮಸ್ತ ರಾಜ್ಯವನ್ನು ಬಿಟ್ಟುಬಿಟ್ಟಿದ್ದೇನೆ. ಇನ್ನು ಮೇಲೆ ನೀನೇ ಸಮುದ್ರ ಸೀಮೆಯ ಈ ಧರೆಗೆಲ್ಲ ದೊರೆ. ಈ ಸಮಸ್ತ ಭೂಮಂಡಲದ ಶಾಸನದ ಭಾರವನ್ನು ನನ್ನಿಂದ ನೀನು ವಹಿಸಿಕೋ. ಇನ್ನು ಮೇಲೆ ಎಲ್ಲ ದೈತ್ಯರನ್ನೂ ದಾನವರನ್ನೂ ಹಾಗೂ ಅಸುರ ಸಾಮ್ರಾಜ್ಯವನ್ನು ನೀನೇ ಪಾಲಿಸ ಬೇಕು.''

ಹಿರಣ್ಯಾಕ್ಷನ ಪುತ್ರನಾದ ಅಂಧಕಾಸುರನು ದೈತ್ಯಸಾರ್ವಭೌಮ ಪ್ರಲ್ಹಾದನ ಮಾತಿನಂತೆ ದಾನವ ಸಾಮ್ರಾಜ್ಯದ ಅಧಿಕಾರವನ್ನು ಸ್ವೀಕರಿಸಿದನು. ಇತ್ತ ಪ್ರಲ್ಹಾದನು ಬದರಿಕಾಶ್ರಮದ ಪುಣ್ಯಾರಣ್ಯವನ್ನು ಕುರಿತು ಪ್ರಯಾಣ ಮಾಡಿದನು. ಬದರೀ ಕ್ಷೇತ್ರದ ನರನಾರಾಯಣರನ್ನು ನೋಡಿ ಪ್ರಲ್ಹಾದನು ದೂರದಿಂದಲೇ ಕೈ ಮುಗಿದನು. ಸನಿಹದಲ್ಲಿ ಬಂದು ನಾರಾಯಣನ ಚರಣಾರವಿಂದಗಳಿಗೆ ವಂದಿಸಿದನು. ಆಗ ನಾಶರಹಿತನಾದ ನಾರಾಯಣನು ಅವನನ್ನು ಪ್ರಶ್ನಿಸಿದನು. ದೈತ್ಯರಾಜ ನೀನು ನನ್ನನ್ನು ಗೆಲ್ಲುವುದನ್ನು ಬಿಟ್ಟು ನಮಸ್ಕಾರವನ್ನೇಕೆ ಮಾಡುವಿ ?

ಅದಕ್ಕೆ ಪ್ರಲ್ಹಾದನು ಬಾಗಿ ನುಡಿದನು-

''ಪ್ರಭು, ನಿನ್ನನ್ನಾರು ಗೆಲ್ಲಬಲ್ಲರು! ನಿನಗೆ ಮಿಗಿಲಾದ ಮಾನವರು ಯಾರು ? ನೀನು ಜಗದೀಶ್ವರನಾದ ಆ ಸಾಕ್ಷಾತ್ ನಾರಾಯಣನೇ ಆಗಿರುವಿ, ಶಾರ್ಂಗಧನುಸ್ಸನ್ನು ಧರಿಸಿದ ಆ ಪುಂಡರೀಕಾಕ್ಷನು ನೀನೇ. ಪುರುಷೋತ್ತಮಾ ನಿತ್ಯ ಸತ್ಯ ಸ್ವರೂಪನಾದ ನಿನಗೆ ನಾಶವೆಲ್ಲಿ ! ಯೋಗಿಗಳು ಚಿಂತಿಸುವದು ನಿನ್ನನ್ನೇ. ಜ್ಞಾನಿಗಳು ಪೂಜಿಸುವದು ನಿನ್ನನ್ನೇ. ತಪಸ್ವಿಗಳು ಜಪಿಸುವದು ನಿನ್ನನ್ನೇ. ಯಾಜ್ಞಿಕರು ಹೋಮ ಹವನಗಳಿಂದ ಆರಾಧಿಸುವದು ನಿನ್ನನ್ನೇ. ಕೈಯಲ್ಲಿ ಚಕ್ರವನ್ನು ಹಿಡಿದ ನೀನು ಜಗತ್ತನ್ನೇ ಧರಿಸಿರುವಿ. ನಿನ್ನಲ್ಲಿ ಸದ್ಗುಣಗಳಿಗೆ ಚ್ಯುತಿ ಇಲ್ಲ. ಎಲ್ಲ ಇಂದ್ರಿಯ ಹಾಗೂ ಇಂದ್ರಿಯಾಭಿಮಾನಿ ದೇವತೆಗಳಿಗೆ ನೀನೇ ನಿಯಾಮಕ. ಅಂದು ಪ್ರಳಯಾಕಾಲದ ಹೆಗ್ಗಡಲಿನಲ್ಲಿ ಮಾಯಾಮೀನನಾಗಿ ಹರಿದಾಡಿದವನು ನೀನೇ. ಹಯಗ್ರೀವ ರೂಪದಿಂದ ವೇದೋದ್ಧಾರವನ್ನು ಮಾಡಿದವನು ನೀನೇ. ಅಂದು ಮಂದರ ಗಿರಿಯನ್ನು ಬೆನ್ನ ಮೇಲೆ ಹೊತ್ತ ಆದಿಕೂರ್ಮನು ನೀನೇ. ವರಾಹ ವೇಷದಿಂದ ಹಿರಣ್ಯಾಕ್ಷನನ್ನು ಕೊಂದು ಭೂಮಿಯನ್ನು ನೀನೇ ಉದ್ಧರಿಸಿದೆ. ಸ್ವಾಮಿ, ನರಸಿಂಹ ರೂಪದಿಂದ ಬಂದು ನನ್ನ ತಂದೆಯನ್ನು ಕೊಂದು ಹಾಕಿದ ನರಹರಿಯು ನೀನೇ ಅಲ್ಲವೇ?

ಬ್ರಹ್ಮ, ಶಿವ, ಅಗ್ನಿ, ಯಮ, ವರುಣ, ವಾಯು, ರವಿ, ಚಂದ್ರ, ಮೊದಲಾದ ದೇವಾಧಿದೇವತೆಗಳಲ್ಲಿಯೂ ನರಮೃಗಾದಿ ಜೀವ ಜಂತುಗಳಲ್ಲಿಯೂ ಸಕಲ ಸ್ಥಾವರಜಂಗಮ ವಸ್ತುಗಳಲ್ಲಿಯೂ ನಿಂತು ನಿಯಮಿಸುವ, ಕಂತು ಕಾರ್ಯ ಮಾಡಿಸುವ ಪರಾತ್ಪರ ಶಕ್ತಿ, ವ್ಯಕ್ತಿ, ನೀನೇ ಅಲ್ಲವೇ. ಭೂಮಿ ಆಕಾಶ, ಅಗ್ನಿ, ನೀರು ಮುಂತಾದ ಪಂಚ ಮಹಾಭೂತಗಳಲ್ಲಿ ವ್ಯಾಪ್ತನಾಗಿ ಜಗದ್ವ್ಯಾಪಾರ ಮಾಡಿಸುವ ಮಹಾಪ್ರಭು ನೀನೇ ಆಗಿರುವಾಗ ನಿನ್ನನ್ನು ಗೆಲ್ಲಬಲ್ಲವರಾರು ! ಲಕ್ಷ್ಮೀಪತಿಯಾದ ನಾರಾಯಣನೇ, ನೀನು ಸಂತುಷ್ಟನಾಗುವದು ಭಕ್ತಿಯಿಂದ ಮಾತ್ರ. ಪರಾಭಕ್ತಿಗೆ ಮಾತ್ರ ನೀನು ವಶನಾಗುವಿ. ಸರ್ವಾಂತರ್ಯಾಮಿಯಾದ ನೀನು ನಿಜವಾಗಿಯೂ ನಾಶರಹಿತ. ನಿನ್ನನ್ನು ಗೆಲ್ಲುವದು ಅತ್ಯಂತ ಅಸಂಭಾವಿತ. ನಿನ್ನ ಗೆಲುವಿಗಿಂತ ನಿನ್ನ ಒಲುವನ್ನು ಗಳಿಸುವುದೇ ನನ್ನ ಮುಖ್ಯ ಗುರಿ. ಭಗವನ್ ನನ್ನ ಮೇಲೆ ಪ್ರಸನ್ನನಾಗು, ದಯೆದೋರು.'' ಸುಪ್ರಸನ್ನನಾದ ಭಗವಾನ್ ನಾರಾಯಣನು ಆಗ ಕರುಣೆದುಂಬಿ ಆ ಪ್ರಲ್ಹಾದನಿಗೆ ಹೇಳಿದನು -

''ವ್ರತಾಚಾರ ನಿಷ್ಠನಾದ ದೈತ್ಯರಾಜನೇ, ನಿನ್ನ ಈ ಸ್ತೋತ್ರದಿಂದ ನಾನು ಪ್ರೀತನಾಗಿದ್ದೇನೆ. ನಿನ್ನ ಈ ಅಸಾಧಾರಣ ಭಕ್ತಿಯಿಂದ ನೀನು ನನ್ನನ್ನು ಗೆದ್ದುಬಿಟ್ಟಿರುವಿ. ಸೋತ ಮನುಷ್ಯನು ಗೆದ್ದವನಿಗೆ ದಂಡವನ್ನು ಕೊಡಬೇಕಾದದ್ದು ನ್ಯಾಯ. ಅದಕ್ಕಾಗಿ ನಾನು ನಿನಗೆ ದಂಡರೂಪವಾಗಿ ವರವನ್ನು ಕೊಡುತ್ತೇನೆ. ನಿನ್ನ ಬಯಕೆ ಏನು ಹೇಳು. ವರವನ್ನು ಕೇಳಿಕೋ?'' ಭಗವಂತನ ಆ ನುಡಿಯನ್ನು ಆಲಿಸಿ ಸಂತುಷ್ಟನಾದ ಪ್ರಲ್ಹಾದನು ವರವನ್ನು ಕೇಳಿಕೊಂಡನು -

''ಜಗದೊಡೆಯನೇ, ನಿನ್ನ ಅಪ್ಪಣೆಯಂತೆ ಒಂದು ವರವನ್ನು ನಿನ್ನಲ್ಲಿ ಯಾಚಿಸುವೆನು. ದಯವಿಟ್ಟು ಅನುಗ್ರಹಿಸು. ಭಗವನ್, ನಾನು ನಿನ್ನೊಡನೆ ಯುದ್ಧ ಮಾಡಿದ ತಪ್ಪನ್ನು ಮನ್ನಿಸು. ನಿನ್ನ ವಿರುದ್ಧವಾಗಿ ಹೋರಾಡುವಾಗ ನನ್ನಿಂದಾದ ಕಾಯಿಕ, ವಾಚಿಕ, ಮಾನಸಿಕ ಪಾಪಗಳೆಲ್ಲವೂ ಪರಿಹಾರವಾಗಲಿ. ಇದರಂತೆ ನರನ ಜೊತೆಗೆ ನಡೆದ ನನ್ನ ಕಲಹ ಕದನಗಳಿಂದ ಉಂಟಾದ ತನು ಮನ ಹಾಗೂ ಮಾತುಗಳ ಮೂಲಕವಾದ ಪಾಪಗಳೆಲ್ಲವೂ ದೂರವಾಗಲಿ.'' ಅದಕ್ಕೆ ''ಅಸ್ತು'' ಎಂದು ಹೇಳಿದ ಶ್ರೀಹರಿಯು ತನ್ನ ಭಕ್ತನನ್ನು ಕುರಿತು ಮತ್ತೆ ''ದೈತ್ಯೇಂದ್ರ, ನಿನ್ನ ಇಚ್ಛೆಯಂತೆ ಆಗಲಿ. ನಿನ್ನ ಪಾಪಗಳೆಲ್ಲವೂ ಪರಿಹಾರವಾಗಲಿ. ನಿನಗೆ ಇನ್ನೂ ಒಂದು ವರವನ್ನು ನಾನು ಕೊಡಬಯಸುತ್ತೇನೆ. ಎರಡನೆಯ ವರವನ್ನು ಕೇಳಿಕೋ'' ಎಂದು ಆಗ್ರಹಪಡಿಸಿದನು. ಆಗ ಪ್ರಲ್ಹಾದನು ಭಕ್ತಿಯಿಂದ ಕೇಳಿಕೊಂಡನು-

''ಮಹಾವಿಷ್ಣುವೇ, ನನಗೆ ಉಂಟಾಗುವ ಬುದ್ಧಿಯು ನಿನ್ನನ್ನೇ ಆಧರಿಸಿ ನಿನ್ನಲ್ಲಿಯೇ ಲೀನವಾಗಿ ಇರಲಿ. ನಿನ್ನ ಪೂಜೆ, ನಿನ್ನ ಧ್ಯಾನ ಹಾಗೂ ನಿನ್ನ ಸೇವೆಗಳಲ್ಲಿಯೇ ನನ್ನ ಬುದ್ಧಿಯು ನಿರಂತರ ನಿರತವಾಗಿರಲಿ.'' ಇದಕ್ಕೂ ''ತಥಾಸ್ತು'' ಎಂದು ಹೇಳಿದ ನಾರಾಯಣನು ಮತ್ತೆ ನುಡಿದನು- ''ವೀರ ವರನಾದ ಪ್ರಲ್ಹಾದನೇ, ನೀನು ಕೇಳಿದಂತೆ ಆಗಲಿ. ಇನ್ನೊಂದು ವರ ಕೊಡಬೇಕೆಂದು ನನಗೆ ಅಪೇಕ್ಷೆಯಾಗಿದೆ. ಮೂರನೇ ವರವನ್ನೂ ಕೇಳಿಕೋ. ಯಾವ ವಿಚಾರವೂ ಇಲ್ಲದೇ ನೀನು ಕೇಳಿದ್ದನ್ನು ಕೊಟ್ಟುಬಿಡುವೆನು.'' ಆಗ ಪ್ರಲ್ಹಾದನು ಕೈಮುಗಿದು ಬಿನ್ನವಿಸಿದನು-

''ಅಧೋಕ್ಷಜನೇ, ನಿನ್ನ ಪ್ರಸಾದದಿಂದ ನನಗೆ ಅಪೇಕ್ಷಿತವಾದದ್ದೆಲ್ಲವೂ ದೊರೆತಂತೆ ಆಗಿದೆ. ನನಗೆ ಇನ್ನು ಬೇರೆ ಏನೂ ಬೇಡ. ನಿನ್ನ ಪಾದಕಮಲಗಳಲ್ಲಿ ಯಾವಾಗಲೂ ನನಗೆ ರತಿ ಇರಲಿ, ನಿನ್ನಲ್ಲಿ ಯಾವಾಗಲೂ ಮತಿ ಇರಲಿ. ಇದೇ ನನಗೆ ಮುಖ್ಯವಾಗಿ ಬೇಕಾದ ವರವು.'' ''ಭಕ್ತಶ್ರೇಷ್ಠನೇ, ನಿನ್ನ ಅಪೇಕ್ಷೆಯಂತೆ ಆಗಲಿ. ಮತ್ತೂ ನನ್ನ ಅನುಗ್ರಹ ವಿಶೇಷದಿಂದ ನಿನಗೆ ಮುಪ್ಪು ತಪ್ಪಲಿ. ಮರಣವು ಇಲ್ಲದಂತಾಗಲಿ. ನಿನ್ನ ಸಂಪತ್ತು ಸೌಭಾಗ್ಯವು ಅಕ್ಷಯವಾಗಿರಲಿ. ನೀನು ಚಿರಂಜೀವಿ ಆಗಿರು. ಇನ್ನು ನಿನ್ನ ಮನೆಗೆ ಹೋಗು. ನಿನ್ನ ಸ್ವಕರ್ಮವನ್ನೂ, ಸ್ವಧರ್ಮವನ್ನೂ ಆಚರಿಸು. ಬಗೆಯಲ್ಲಿ ಭಗವಂತನನ್ನು ಹೊತ್ತ ನನ್ನ ಭಕ್ತವಾದ ನಿನ್ನನ್ನು ಯಾವ ಕರ್ಮಪಾಶವೂ ಬಂಧಿಸಲಾರವು.

ನಿರಂತರವೂ ಈ ದೈತ್ಯ ಸಾಮ್ರಾಜ್ಯವನ್ನು ಪರಿಪಾಲಿಸು. ನಿನ್ನ ವರ್ಣಾಶ್ರಮ ಜಾತಿ ಧರ್ಮವನ್ನು ಯಥೋಚಿತವಾಗಿ ಪರಿಪಾಲನೆ ಮಾಡು.'' ಜಗದೀಶನ ಈ ನುಡಿಯನ್ನು ಕೇಳಿ ಪ್ರಹ್ಲಾದನು ಬೆಸಗೊಂಡನು-

''ಜಗದ್ಗುರುವೇ, ನಾನು ಅಸುರ ರಾಜ್ಯವನ್ನು ಬಿಟ್ಟುಬಿಟ್ಟಿದ್ದೇನೆ. ಅಂಧಕಾಸುರನಿಗೆ ಕೊಟ್ಟುಬಿಟ್ಟಿದ್ದೇನೆ. ಒಮ್ಮೆ ದತ್ತವಾದ ರಾಜ್ಯವನ್ನು ಮತ್ತೆ ಹೇಗೆ ಮರಳಿ ತೆಗೆದುಕೊಳ್ಳಲಿ! ದತ್ತಾಪಹಾರ ಮಾಡಲಾರೆ.'' ಅದನ್ನು ಕೇಳಿ ಪ್ರಸನ್ನನಾದ ಪರಮಾತ್ಮನು ಹೇಳಿದನು. ''ಹಾಗಾದರೆ ಪ್ರಹ್ಲಾದ, ನೀನು ನಿನ್ನ ಆಶ್ರಮಕ್ಕೆ ಹೋಗು. ನೀನು ಆಶ್ರಮವಾಸಿಯಾಗಿಯೇ ದೈತ್ಯ ದಾನವರಿಗೆ ಹಿತೋಪದೇಶವನ್ನು ಮಾಡು.''

ನಾರಾಯಣನ ಈ ಅಣತಿಯನ್ನು ಶಿರದೊಲಾಂತು ಆ ಭಗವಂತನಿಗೆ ಪ್ರಹ್ಲಾದನು ಮತ್ತೆ ಮತ್ತೆ ನಮಿಸಿದನು. ಪುನಃ ಪುನಃ ಸ್ತುತಿಸಿದನು. ಅವನ ದರುಶನ, ಸಂಭಾಷಣೆ, ಹಾಗೂ ಪ್ರಸಾದಗಳಿಂದ ಪರಿತುಷ್ಟನಾಗಿ ತನ್ನ ರಾಜಧಾನಿಗೆ ಮರಳಿದನು. ತಪಸ್ಸಿದ್ಧಿಯನ್ನು ಪಡೆದು ಭಗವಂತನ ಸಾಕ್ಷಾತ್ಕಾರವನ್ನು ಹೊಂದಿ ಧನ್ಯನಾಗಿ ಬಂದ ಆ ದೈತ್ಯಸಾರ್ವಭೌಮನನ್ನು ಕಂಡು ಪ್ರಜೆಗಳೆಲ್ಲರೂ ಆನಂದಭರಿತರಾದರು. ಅತ್ಯಂತ ಆದರದಿಂದ ಸ್ವಾಗತ ಸತ್ಕಾರ ಗೈದರು. ಆ ದೈತ್ಯರ ಒಡೆಯನಾದ ಅಂಧಕಾಸುರನು ಕೂಡ ಬಂದು ಪ್ರಹ್ಲಾದನಿಗೆ ವಂದಿಸಿ ಅಸುರ ಸಾಮ್ರಾಜ್ಯದ ಅಧಿಕಾರವನ್ನು ಪುನಃ ನೀನೇ ಸ್ವೀಕರಿಸಬೇಕೆಂದು ಆಮಂತ್ರಣವನ್ನು ಕೊಟ್ಟನು. ಆದರೆ ವಿರಕ್ತನಾದ ಪ್ರಹ್ಲಾದನು ಅದಾವುದನ್ನು ಸ್ವೀಕರಿಸಲಿಲ್ಲ. ರಾಜ್ಯ, ಐಶ್ವರ್ಯ, ಭೋಗ ಯಾವುದನ್ನೂ ಮುಟ್ಟದೇ ಅವನು ತನ್ನ ಆಶ್ರಮದಲ್ಲಿಯೇ ಇದ್ದು ಪರಮಾತ್ಮನ ನಿರಂತರ ಧ್ಯಾನಾರಾಧನೆಯಿಂದ ತನ್ನ ಜನ್ಮವನ್ನು ಸಾರ್ಥಕ ಮಾಡಿಕೊಂಡನು. ಭಕ್ತಿಯೋಗದಿಂದ ತನ್ನ ದೇಹವನ್ನು ಪವಿತ್ರವನ್ನಾಗಿಸಿದನು. ದೈತ್ಯರನ್ನು ಸನ್ಮಾರ್ಗಕ್ಕೆ ಹಚ್ಚಿದನು. ನಿರಂತರವೂ ಭಗವಂತನ ಚಿಂತನವನ್ನು ಮಾಡುತ್ತಲೇ ಇದ್ದನು. ನಾರದ, ಹಿಂದೆ ಹರಿಯಿಂದ ಸೋತರೂ ಮುಂದೆ ತನ್ನ ಭಕ್ತಿ ಬಲದಿಂದ ಹರಿಯನ್ನು ಗೆದ್ದ ಮಹಾನುಭಾವನೆಂದರೆ ಆ ಪ್ರಹ್ಲಾದರಾಜನೇ. ರಾಜೈಶ್ವರ್ಯವನ್ನು ತ್ಯಾಗ ಮಾಡಿದ ಅವನು ನಿರಂತರ ಭಕ್ತಿ ಯೋಗದಿಂದ ಪರಮಾತ್ಮನಲ್ಲಿಯೇ ಮನಸ್ಸನ್ನು ಇಟ್ಟು ಧ್ಯಾನಲೀನನಾಗಿದ್ದನು.

ವಾಮನ ಮಹಾಮಹಾಪುರಾಣದಲ್ಲಿ ಭಕ್ತಿಯಿಂದ ಗೆಲುವು ಎಂಬ ಎಂಟನೇಯ ಅಧ್ಯಾಯವು ಮುಗಿದುದು

—o—

## ಭೀಕರ ಸಂಗ್ರಾಮ - ದೇವ ದಾನವರ ಯುದ್ಧ

**ಅಧ್ಯಾಯ - ೯**

೧೬೫. ರಾಜ್ಯೇಭಿಷಿಕ್ತೋ ದೈತ್ಯೇಂದ್ರೋ ಹೈರಣ್ಯಾಕ್ಷಸ್ತದಾಂಧಕಃ ॥
ತಪಸಾರಾಧ್ಯ ದೇವೇಶಂ ಶೂಲಪಾಣಿಂ ತ್ರಿಲೋಚನಂ ॥೧॥

೧೬೬. ಅಜೇಯತ್ವಮವಧ್ಯತ್ವಂ ಸುರಸಿದ್ಧರ್ಷಿ ಪನ್ನಗೈಃ
ಅದಾಹ್ಯತ್ವಂ ಹುತಾಶೇನ ಅಕ್ಲೇದ್ಯತ್ವಂ ಜಲೇನ ಚ ॥೨॥

೧೬೭. ಏವಂ ಸ ವರಲಬ್ಧಸ್ತು ದೈತ್ಯೋ ರಾಜ್ಯಮಪಾಲಯತ್
ಶುಕ್ರಂ ಪುರೋಹಿತಂ ಕೃತ್ವಾ ಸಮಧ್ಯಾಸ್ತೇ ತತೋಂಧಕಃ ॥೩॥

೧೬೮. ತತಶ್ಚಕ್ರೇ ಸಮುದ್ಯೋಗಂ ದೇವಾನಾಮಂಧಕೋಸುರಃ
ಆಕ್ರಮ್ಯ ವಸುಧಾಂ ಸರ್ವಾನ್ಮನುಜೇಂದ್ರಾನ್ ಪರಾಜಯತ್॥೪॥

೧೬೯. ಪರಾಜಿತ್ಯ ಮಹೀಪಾಲಾನ್ ಸಹಾಯಾರ್ಥಂ ನಿಯೋಜ್ಯ ಚ
ತತಸ್ತು ಮೇರುಶಿಖರಂ ಜಗಾಮಾದ್ಭುತ ದರ್ಶನಮ್ ॥೫॥

೧೭೦. ಶಕ್ರೋಽಪಿ ಸುರಸೈನ್ಯಾನಿ ಸಮುದ್ಯೋಜ್ಯ ಮಹಾಗಜಮ್ ।
ಸಮಾರುಹ್ಯಾಮರಾವತ್ಯಾ ಗುಪ್ತಿಂ ಕೃತ್ವಾ ಪುನರ್ಯಯೌ ॥೬॥

೧೭೧. ಶಕ್ರಸ್ಯಾನು ತಥೈವಾನ್ಯೇ ಲೋಕಪಾಲಾ ಮಹೌಜಸಃ ।
ಆರುಹ್ಯವಾಹನಂ ಸ್ವಂ ಸ್ವಂ ಸಾಯುಧಾ ನಿರ್ಯಯುರ್ಬಹಿಃ ॥೭॥

**ಪುಲಸ್ತ್ಯ:**- ಪ್ರಲ್ಹಾದನ ಅನಂತರ ದೈತ್ಯರಾಜ್ಯದಲ್ಲಿ ಅಂಧಕನಿಗೆ ಪಟ್ಟಾಭಿಷೇಕ ವಾಯಿತು. ಈ ಅಂಧಕ ಹಿರಣ್ಯಾಕ್ಷನ ಮಗ. ಅವನು ತಾನೇ ದಾನವರ ದೊರೆಯಾದ ಬಳಿಕ ಮುಕ್ಕಣ್ಣನಾದ ಮಹಾದೇವನನ್ನು ಕುರಿತು ತಪಸ್ಸನ್ನು ಮಾಡಿದನು. ಭಕ್ತಿಯಿಂದ ಪರಮೇಶ್ವರನನ್ನು ಆರಾಧಿಸಿ ಅವನಿಂದ ಕೆಲವು ದಿವ್ಯವಾದ ವರಗಳನ್ನೂ ಪಡೆದು ಕೊಂಡನು- ''ನನ್ನನ್ನು ಯಾರೂ ಗೆಲ್ಲಬಾರದು. ಯಾರೂ ಕೊಲ್ಲಬಾರದು. ಬೆಂಕಿಯು ಸುಡ ಬಾರದು. ನೀರು ಮುಳುಗಿಸಬಾರದು. ದೇವ, ಮಾನವ, ಸಿದ್ಧ, ಋಷಿ, ಸರ್ಪ ಮುಂತಾದ ಯಾವ ಪ್ರಾಣಿಗಳಿಂದಲೂ ನನಗೆ ಸಾವು-ನೋವು-ಸೋಲುಗಳು ಉಂಟಾಗಬಾರದು'' ಎಂದು ಬೇಡಿಕೊಂಡು ಹರಮೇಶ್ವರನಿಂದ ಈ ಎಲ್ಲ ಅಮೋಘ ವಾದ ವರಗಳನ್ನೂ ಪಡೆದುಕೊಂಡನು. ಹೀಗೆ ಶಂಕರನ ವರಗಳಿಂದ ಬಲಿಷ್ಠನಾದ ಆ ದೈತ್ಯರ ಅಧಿನಾಯಕನು ದಾನವ ರಾಜ್ಯವನ್ನು ಆಳಿದನು. ಎಂದಿನಿಂದಲೂ ಅಂಧಕಾಸುರನಿಗೆ ಶುಕ್ರಾಚಾರ್ಯರೇ ಪುರೋಹಿತರು.

ಶುಕ್ರಾಚಾರ್ಯರನೇತೃತ್ವ ತನ್ನ ಕರ್ತೃತ್ವ ಹಾಗೂ ಕಲಿತನದಿಂದ ಅವನು ಮೊದಲು ಅಖಂಡ ಭೂಮಂಡಲವನ್ನೆಲ್ಲ ಆಕ್ರಮಿಸಿಕೊಂಡನು. ನೆಲದ ಮೇಲಿನ ರಾಜ ಮಹಾರಾಜರನ್ನೆಲ್ಲ ಗೆದ್ದು ಸಮಗ್ರ ಭೂಮಂಡಲದ ಸಾರ್ವಭೌಮನು ಎನಿಸಿದನು. ಹೀಗೆ ಭೂತಲದ ಭೂಪರನ್ನೆಲ್ಲ ತನ್ನ ಕಿಂಕರರನ್ನಾಗಿ ಮಾಡಿಕೊಂಡು ತನ್ನ ಸಹಾಯಕ ಮಾಂಡಲಿಕರನ್ನಾಗಿ ಅಲ್ಲಲ್ಲಿ ನೇಮಿಸಿದನು. ಇಂತು ಭೂಮಂಡಲದ ವಿಜಯದ

ಕಾರ್ಯವನ್ನೆಲ್ಲ ಮಾಡಿ ಪೂರೈಸಿದ ಬಳಿಕ ದೇವತೆಗಳನ್ನು ಗೆಲ್ಲುವ ಉದ್ಯೋಗವನ್ನು ಪ್ರಾರಂಭಿಸಿದನು. ಸ್ವರ್ಗಕ್ಕೆ ದಾಳಿಇಡುವ ಉದ್ದೇಶದಿಂದ ತನ್ನ ಸೇನಾ ಸನ್ನಾಹವನ್ನು ಮಾಡಿಕೊಂಡು ಅದ್ಭುತವಾಗಿ ಕಾಣುವ ಮೇರುಪರ್ವತದ ಶಿಖರಪ್ರಾಂತದವರೆಗೆ ಸಾಗಿದನು.

ಇತ್ತ ದೇವೇಂದ್ರನಾದರೂ ಯುದ್ಧದ ಸಿದ್ಧತೆಯನ್ನು ಮಾಡಿಕೊಂಡು ದೇವಸೇನೆಯೊಂದಿಗೆ ಅಮರಾವತಿಯ ಕೋಟೆಯನ್ನು ಭದ್ರಪಡಿಸಿ ಐರಾವತವನ್ನು ಏರಿಕೊಂಡು ಮೇರು ಪರ್ವತಕ್ಕೆ ಬಂದು ನಿಂತನು. ಇಂದ್ರನ ಬೆನ್ನ ಹಿಂದೆ ವೀರರಾದ ಎಲ್ಲ ಲೋಕಪಾಲಕರೂ ತಮ್ಮ ತಮ್ಮ ವಾಹನಗಳನ್ನು ಏರಿಕೊಂಡು ಆಯುಧಗಳನ್ನು ಹಿಡಿದು ಹೊರಬಿದ್ದರು. ಹೀಗೆ ಆ ದೈವೀ ಸೈನ್ಯವು ಇಂದ್ರನನ್ನು ಮುಂದೆ ಮಾಡಿಕೊಂಡು ಚತುರಂಗ ಬಲಸಹಿತವಾಗಿ ಮೇರುಶಿಖರಕ್ಕೆ ಬಂದಿತು.

## ನಾರದ ಉವಾಚ

೧೭೨. ರುದ್ರಾದೀನಾಂ ವದಸ್ವೇಹ ವಾಹನಾನಿ ಚ ಸರ್ವಶಃ
ಏಕೈಕಸ್ಯಾಪಿ ಧರ್ಮಜ್ಞ ಪರಂ ಕೌತೂಹಲಂ ಮಮ

## ಪುಲಸ್ತ್ಯ ಉವಾಚ

೧೭೩. ಶೃಣುಷ್ವ ಕಥಯಿಷ್ಯಾಮಿ ಸರ್ವೇಷಾಮಪಿ ನಾರದ ।
ವಾಹನಾನಿ ಸಮಾಸೇನ ಏಕೈಕಸ್ಯಾನುಪೂರ್ವಶಃ ॥

೧೭೪. ದನುಹಸ್ತ ತಲೋತ್ಪನ್ನಂ ಮಹಾ ಸತ್ವಂ ಮಹಾಗಜಮ್ ।
ಶ್ವೇತ ವರ್ಣಂ ಮಹಾವೀರ್ಯಂ ದೇವರಾಜಸ್ಯ ವಾಹನಮ್ ॥

೧೭೫. ರುದ್ರೌಜಃ ಸಂಭವಂ ಭೀಮಂ ಕೃಷ್ಣವರ್ಣಂ ಮನೋಜವಂ
ಪೌಂಡ್ರಕಂ ನಾಮ ಮಹಿಷಂ ಧರ್ಮರಾಜಸ್ಯ ನಾರದ ॥

೧೭೬. ರುದ್ರ ಕರ್ಣಮಲೋದ್ಭೂತಂ ಶ್ಯಾಮಂ ಜಲಧಿ ಸಂಜ್ಞಕಮ್ ।
ಶಿಶುಮಾರಂ ದಿವ್ಯಗತಿಂ ವಾಹನಂ ವರುಣಸ್ಯ ಚ ॥

೧೭೭. ರೌದ್ರಂ ಶಕಟ ಚಕ್ರಾಕ್ಷಂ ಶೈಲಾಕಾರಂ ನರೋತ್ತಮಮಂ ।
ಅಂಬಿಕಾ ಪಾದ ಸಂಭೂತಂ ವಾಹನಂ ಧನದಸ್ಯ ತು ।

೧೭೮. ರಥಂ ಚಂದ್ರಮಸಶ್ಚಾರ್ಧಸಹಸ್ರಂ ಹಂಸ ವಾಹನಂ
ಹಯೋಷ್ಟ್ರ ರಥ ವಾಹಾಶ್ಚ ಆದಿತ್ಯಾ ಮುನಿಸತ್ತಮಾಃ ॥

೧೭೯. ಕುಂಜರಸ್ಥಾಶ್ಚ ವಸವೋ ಯಕ್ಷಾಶ್ಚ ನರವಾಹನಾಃ ।
ಕಿನ್ನರಾ ಭುಜಗಾರೂಢಾ ಹಯಾರೂಢೌ ತಥಾಶ್ವಿನೌ ॥

೧೮೦. ಸಾರಂಗಾಧಿಷ್ಠಿತಾ ಬ್ರಹ್ಮನ್ಮರುತೋ ಘೋರ ದರ್ಶನಾಃ ।
ಶುಕಾರೂಢಾಶ್ಚ ಕವಯೋ ಗಂಧರ್ವಾಶ್ಚ ಪದಾತಿನಃ ॥

೧೮೧. ಆರುಹ್ಯ ವಾಹನಾನ್ಯೇವಂ ಸ್ವಾನಿ ಸ್ವಾನ್ಯಮರೋತ್ತಮಾಃ ।
ಸನ್ನಹ್ಯ ನಿರ್ಯಯುಃ ಹೃಷ್ಟಾ ಯುದ್ಧಾಯ ಸುಮಹೌಜಸಃ ॥

೧೮೨. ಪ್ರಲ್ಹಾದಸ್ಯ ರಥೋ ದಿವ್ಯಶ್ಚಂದ್ರವರ್ಣೈರ್ಹಯೋತ್ತಮೈಃ ।
ಉಹ್ಯಮಾನಸ್ತಥಾಷ್ಟಾಭಿಃ ಶ್ವೇತರುಕ್ಮಮಯಃ ಶುಭಃ ॥

ತಮ್ಮ ತಮ್ಮ ವಾಹನಗಳನ್ನು ಏರಿಕೊಂಡು ಆಯುಧಗಳನ್ನು ಪಿಡಿದುಕೊಂಡು ನಡುವೆ ನಡೆದಿದ್ದರು ಎಲ್ಲ ದೇವಕುಲ ಧುರೀಣರು. ಆ ದೇವಸೇನೆಯು ಕೊನೆಯಲ್ಲಿ ಕೃತ್ತಿವಾಸನಾದ ಪರಶಿವನು ತನ್ನ ವಾಹನವಾದ ಎತ್ತನ್ನು ಹತ್ತಿಕೊಂಡು ತ್ರಿಶೂಲವನ್ನು ಎತ್ತಿಕೊಂಡು ಯುದ್ಧಕ್ಕಾಗಿ ಹೊರಟಿದ್ದನು.

**ನಾರದ** - ಮುನಿಗಳೇ, ರುದ್ರಾದಿ ದೇವತೆಗಳಲ್ಲಿ ಯಾರು ಯಾರು ಯಾವ ಯಾವ ವಾಹನಗಳನ್ನು ಏರಿಕೊಂಡು ಹೋರಾಡುವುದಕ್ಕೆ ಹೊರಟಿದ್ದರು ? ಯಾವ ದೇವತೆಗೆ ಯಾವ ವಾಹನವಿರುತ್ತದೆ ? ಎಂಬುದನ್ನು ದಯಮಾಡಿ ತಿಳಿಸಬೇಕು.

**ಪುಲಸ್ತ್ಯ** - ದೇವತೆಗಳೆಲ್ಲರ ವಾಹನಗಳ ಸಮಾಚಾರವನ್ನು ತಿಳಿಸುತ್ತೇನೆ, ಕೇಳು. ಇಂದ್ರನ ವಾಹನವು ಐರಾವತ, ಅದರ ಬಣ್ಣ ಅಚ್ಚ ಬಿಳಿ. ಅದರ ಶಕ್ತಿ ಅತ್ಯದ್ಭುತ. ಅದು ದನುವಿನ ಹಸ್ತತಲದಿಂದ ಉತ್ಪನ್ನವಾಯಿತಂತೆ. ಯಮನ ವಾಹನ ಕೋಣ. ಅದರ ಹೆಸರು ಪೌಂಡ್ರಕ. ಅದು ಹುಟ್ಟಿದ್ದು ಮಹಾದೇವರ ತೇಜಸ್ಸಿನಿಂದ. ಮನಸ್ಸಿನಷ್ಟು ವೇಗ ಅದರ ಓಟ. ಬಣ್ಣ ಕಪ್ಪು. ನೋಡಲು ಭೀಕರ ಆಕಾರ. ವರುಣನ ವಾಹನವು ಮೊಸಳೆ. ಅದು ಹುಟ್ಟಿದ್ದು ಮಹಾದೇವರ ಕಿವಿಯ ಕಿಟ್ಟದಿಂದ. ಕಪ್ಪು ಬಣ್ಣದ ಆ ವರುಣ ವಾಹನದ ಹೆಸರು ಜಲಧಿ. ಅದರ ಓಟ ನಾಗಾಲೋಟ. ಕುಬೇರನ ವಾಹನನಾದ ನರೋತ್ತಮನು ಪಾರ್ವತಿಯ ಪಾದದಿಂದ ಹುಟ್ಟಿದ್ದಾನೆ. ಅವನ ಆಕಾರವು ಬೆಟ್ಟದಷ್ಟಿದೆ. ಒಂದೊಂದು ಕಣ್ಣೂ ಬಂಡೀ ಗಾಲಿಯಂತೆ ಭೀಕರವಾಗಿವೆ. ಏಕಾದಶ ರುದ್ರರಿಗೆ ಹಾವು, ಹಸು, ಎತ್ತು ಮತ್ತೂ ಕೆಲವು ಗಂಧರ್ವರು ವಾಹನಗಳಾಗಿದ್ದಾರೆ. ಚಂದ್ರನು ಕೂಡುವ ರಥವನ್ನು ಐದು ನೂರು ಹಂಸಗಳು ಎಳೆಯುತ್ತಿವೆ. ಹನ್ನೆರಡು ಜನ ಆದಿತ್ಯರು ಕುದುರೆ, ಒಂಟೆ, ರಥಗಳನ್ನು ಆರೋಹಣ ಮಾಡಿರುತ್ತಾರೆ. ಎಂಟು ವಸುಗಳು ಆನೆಗಳನ್ನು ಏರಿಕೊಂಡು ನಡೆದಿರುತ್ತಾರೆ. ಯಕ್ಷರಿಗೆಲ್ಲ ಮನುಷ್ಯರೇ ವಾಹನ. ಕಿನ್ನರರು ಹಾವುಗಳ ಮೇಲೆ ಹತ್ತಿ ಹರಿಯುತ್ತಾರೆ. ಅಶ್ವಿನೀ ದೇವತೆಗಳಿಗೆ ಕುದುರೆ ವಾಹನ. ಮರುದ್ಗುಣಗಳಿಗೆ ಚಿಗರೆ, ಕವಿ ಎಂಬ ದೇವತೆಗಳಿಗೆ ಗಿಳಿ, ಗಂಧರ್ವರಿಗೆ ಕೆಲವು ಕಾಲಾಳುಗಳು ವಾಹನವಾಗಿದ್ದಾರೆ. ಇದರಂತೆ ದೈತ್ಯರ ವಾಹನಗಳ ವಿವರವನ್ನು ಹೇಳುತ್ತೇನೆ ಕೇಳು.

ದೈತ್ಯ ಸಾರ್ವಭೌಮನಾದ ಪ್ರಲ್ಹಾದನ ರಥ ದಿವ್ಯವಾಗಿದೆ. ಅದು ಸಂಪೂರ್ಣವಾಗಿ ಬಂಗಾರ ಬೆಳ್ಳಿಗಳಿಂದ ವಿರಚಿತವಾಗಿದೆ. ಅದಕ್ಕೆ ಎಂಟು ಕುದುರೆಗಳನ್ನು ಹೂಡಿರುತ್ತಾರೆ. ಪ್ರತಿಯೊಂದು ಕುದುರೆಯೂ ಚಂದ್ರನಂತೆ ಅಚ್ಚ ಬಿಳಿ ಬಣ್ಣದಿಂದ ಸ್ವಚ್ಛ ಶುಭ್ರವಾಗಿ ಒಪ್ಪುವದು.

೧೮೩. ಅಂಧಕಸ್ಯ ರಥೋ ದಿವ್ಯೋ ಯುಕ್ತಃ ಪರಮವಾಜಿಭಿಃ ।
ಕೃಷ್ಣ ವರ್ಣಃ ಸಹಸ್ರಾರ ಸ್ತ್ರೀನಲ್ವ ಪರಿಮಾಣವಾನ್ ॥

೧೮೪. ವಿರೋಚನಸ್ಯತು ಗಜಃ ಕುಂಭಜಸ್ಯ ತುರಂಗಮಃ
ಜಂಭಸ್ಯತು ರಥೋ ದಿವ್ಯೋ ಹಯೈಃ ಕಾಂಚನ ಸನ್ನಿಭೈಃ ॥

೧೮೫. ಶಂಕು ಕರ್ಣಸ್ಯ ತುಂಗೋ ಹಯಗ್ರೀವಸ್ಯ ಕುಂಜರಃ
ರಥೋ ಮಯಸ್ಯ ವಿಖ್ಯಾತೋ ದುಂದುಭೇಶ್ಚ ಮಹೋರಗಃ ॥

೧೮೬. ಶಂಬರಸ್ಯ ವಿಮಾನೋಽಭೂದಯಃ ಶಂಕೋರ್ಮೃಗಾಧಿಪಃ
ತತೋ ರಣೋಽ ಭೂತ್ತುಮುಲಃ ಸಂಕುಲೋಽತಿ ಭಯಂಕರಃ॥

೧೮೭. ಪರಸ್ಪರಂ ಪ್ರತ್ಯಘ್ನನ್ನನ್ಯೋನ್ಯ ಜಯಕಾಂಕ್ಷಿಣಃ
ತತಸ್ತು ಸಂಕುಲೇ ತಸ್ಮಿನ್ಯುದ್ಧೇ ದೈವಾಸುರೇ ಮುನೇ ॥

೧೮೮. ಪ್ರಾವರ್ತತ ನದೀ ಘೋರಾ ಶಮಯಂತೀ ರಣೇ ರಜಃ ।
ಅಸೃಕ್ ತೋಯಾ ರಥಾವರ್ತಾ ಯೋಧ ಸಂಘಟ್ಟ ವಾಹಿನೀ॥

೧೮೯. ಗಜಕುಂಭ ಮಹಾ ಕೂರ್ಮಾ ಶರಮೀನಾ ದುರತ್ಯಯಾ
ತೀವ್ರಾಗ್ರ ಪ್ರಾಸ ಮಕರಾ ಮಹಾಸಿ ಗ್ರಾಹವಾಹಿನೀ ॥

೧೯೦. ಅಂತ್ರಶೇವಾಲ ಸಂಕೀರ್ಣಾ ಪತಾಕಾ ಫೇನ ಮಾಲಿನೀ
ಗೃಧ್ರಕಂಕ ಮಹಾ ಹಂಸಾ ಶ್ಯೇನ ಚಕ್ರಾವ್ಹ ಮಂಡಿತಾ ॥

ಅಂಧಕಾಸುರನ ರಥವು ಕಪ್ಪಾಗಿದೆ. ಸಾವಿರ ಹಲ್ಲುಗಳುಳ್ಳ ಗಾಲಿಗಳಿಂದ ಮುನ್ನೂರು ಗಜ ದೀರ್ಘವಾದ ಉದ್ದ ಳತೆಯುಳ್ಳದ್ದಾಗಿದೆ. ಇದರಂತೆ ವಿರೋಚನನಿಗೆ ಆನೆ, ಕಂಭಜನಿಗೆ ಹುಲಿ, ಶಂಕು ಕರ್ಣರಿಗೆ ಕುದುರೆ, ಜಂಭನಿಗೆ ಹೊಂಬಣ್ಣದ ತುರಂಗಗಳುಳ್ಳ ದಿವ್ಯ ರಥ, ಹಯಗ್ರೀವನಿಗೆ ಆನೆ, ದುಂದುಭಿಗೆ ಸರ್ಪ, ಶಂಬರನಿಗೆ ವಿಮಾನ, ಆಯಶ್ಶಂಕುವಿಗೆ ಸಿಂಹ ಮೊದಲಾದವುಗಳು ವಾಹನ ವಾಗಿರುತ್ತವೆ.

ಹೀಗೆ ತಮ್ಮ ತಮ್ಮ ವಾಹನಾರೂಢರಾಗಿ ಬಂದ ದೇವದಾನವರ ನಡುವೆ ಘನಘೋರವಾದ ಯುದ್ಧವು ನಡೆಯಿತು. ಉಭಯ ಸೇನೆಗಳಲ್ಲಿಯ ವೀರಾಧಿ ವೀರರು ತಮ್ಮ ಪ್ರಾಣಗಳನ್ನು ಪಣಕ್ಕೆ ಹಚ್ಚಿ ಕಲಿತನದಿಂದ ಕಾದಿದರು. ಹೇವದಿಂದ ಹೋರಿದರು, ರುಂಡಗಳನ್ನು ಚಂಡಾಡಿದರು. ಹೆಣಗಳ ಹಡದಿ ಹಾಸಿದರು. ರಕ್ತದ ಕಾಲುವೆ ಹರಿಸಿದರು. ಸುತ್ತಲೂ ನೆತ್ತರವು ಮಡವು ಗಟ್ಟಿಕೊಂಡು ನಿಂತಿತು. ರುಂಡದಂಡಗಳು ತೆಪ್ಪಗಳಂತೆ ತೇಲಾಡಿದವು. ಬಾಣಗಳು ಮೀನಗಳಂತೆ, ಖಡ್ಗಗಳು ಮೊಸಳೆಗಳಂತೆ, ಹದ್ದುಗಳು ಹಂಸಗಳಂತೆ, ಗಿಡುಗಗಳು ಚಕ್ರವಾಕ ಪಕ್ಷಿಗಳಂತೆ, ಆ ನೆತ್ತರದ ನದಿಯಲ್ಲಿ ಓಡಾಡಿ ತೇಲಾಡಿದವು. ಆ ಭೀಕರವಾದ ಸಂಗ್ರಾಮದಲ್ಲಿ ದೇವೇಂದ್ರನಿಗೂ, ದಾನವೇಂದ್ರನಿಗೂ ಅರ್ಥಾತ್ ಇಂದ್ರನಿಗೂ-ಅಂಧಕನಿಗೂ, ಪ್ರಲ್ಹಾದನಿಗೂ-ಯಮಧರ್ಮನಿಗೂ, ವರುಣನಿಗೂ-ವಿರೋಚನನಿಗೂ, ಅಗ್ನಿಗೂ-ಮಯಾಸುರನಿಗೂ ಚಂದ್ರಸೂರ್ಯರಿಗೂ ಶಂಬರಾಸುರನಿಗೂ ಘೋರವಾದ ಕದನ ನಡೆಯಿತು.

ವಾಮನ ಮಹಾಪುರಾಣದಲ್ಲಿ ಭೀಕರ ಸಂಗ್ರಾಮ ಎಂಬ ಒಂಭತ್ತನೆಯ ಅಧ್ಯಾಯವು ಮುಗಿದುದು

## ಅಂಧಕ ಇಂದ್ರರ ಯುದ್ಧ

**ಅಧ್ಯಾಯ - ೧೦**

ಅನಂತರ ಭಯಂಕರವಾದ ಆ ಯುದ್ಧವು ಹೀಗೆ ನಡೆಯುತ್ತಿರುವಾಗ ಇಂದ್ರನು ಮಹಾ ಧನುಸ್ಸನ್ನು ಸಿದ್ಧಪಡಿಸಿ ಅಂಧಕನ ಮೇಲೆ ಅನೇಕ ಬಾಣಗಳನ್ನು ಸುರಿದನು. ಅಂಧಕನೂ ಅದಕ್ಕೆ ಪ್ರತಿಯಾಗಿ ತನ್ನ ಉಜ್ವಲವಾದ ಧನುಸ್ಸಿನಿಂದ ನವಿಲುಗರಿಗಳಿಂದ ಭೂಷಿತವಾದ ಅನೇಕ ಬಾಣಗಳನ್ನು ಇಂದ್ರನ ಮೇಲೆ ಪ್ರಯೋಗಿಸಿದನು. ಹೀಗೆ ಇಬ್ಬರೂ ಹರಿತಗಳಾದ ವೇಗಶಾಲಿಗಳಾದ ರುಕ್ಮಪುಂಖಗಳುಳ್ಳ ಬಾಣಗಳಿಂದ ಪರಸ್ಪರ ಹೋರಾಡಿದರು. ಅನಂತರ ಕುಪಿತನಾದ ಇಂದ್ರನು ವಜ್ರಾಯುಧವನ್ನು ತಿರುಗಿಸಿ ಅಂಧಕನ ಮೇಲೆ ಪ್ರಯೋಗಿಸಿದನು. ಅಂಧಕನು ಅದನ್ನು ನೋಡಿ ಅನೇಕ ಬಾಣಗಳಿಂದಲೂ ಶಸ್ತ್ರಾಸ್ತ್ರಗಳಿಂದಲೂ ವಜ್ರಾಯುಧವನ್ನು ಹೊಡೆದನು. ಆದರೂ ಆ ವಜ್ರವು ಆ ಬಾಣಗಳನ್ನೆಲ್ಲಾ ಖಾಂಡವಾಗ್ನಿಯು ಸರ್ಪಗಳನ್ನು ಭಸ್ಮ ಮಾಡಿದಂತೆ ದಹಿಸಿತು. ಅನಂತರ ಆ ವಜ್ರದ ವೇಗವನ್ನು ನಿರೀಕ್ಷಿಸಿ ರಥದಿಂದ ಕೆಳಕ್ಕೆ ಧುಮುಕಿ ಬಾಹುಸಹಾಯಕನಾಗಿ ಅಂಧಕ ಕೆಳಗೆ ನಿಂತನು. ನಂತರ ಆ ವಜ್ರಾಯುಧವು ಅವನ ರಥವನ್ನು ಕುದುರೆ, ಧ್ವಜ, ಮೂಕಿ ಮೊದಲಾದ ಸಮಸ್ತ ಭಾಗಗಳೊಡನೆ ಸಾರಥಿಯನ್ನೂ ಸುಟ್ಟು ಭಸ್ಮ ಮಾಡಿ ಅಂಧಕನನ್ನು ನಾಶಪಡಿಸಲು ಅವನ ಸಮೀಪಕ್ಕೆ ಬಂದಿತು.

ಆ ಪ್ರಕಾರ ವೇಗವಾಗಿ ಬರುತ್ತಿರುವ ವಜ್ರಾಯುಧವನ್ನು ಮುಷ್ಟಿಯಿಂದ ಆ ಅಸುರನು ಹೊಡೆದು ನೆಲದಲ್ಲಿ ಕೆಡವಿದನು. ಅದನ್ನು ಹೊಡೆದದ್ದರಿಂದ ಅಂಧಕನು ಗರ್ಜನೆಯನ್ನೂ ಮಾಡಿದನು. ಹಾಗೆ ವಜ್ರದ ವಿಜಯದಿಂದ ಗರ್ಜಿಸುತ್ತಿರುವ ಅಂಧಕನನ್ನು ಇಂದ್ರನು ಬಾಣಗಳಿಂದ ಬಲವಾಗಿ ಪ್ರಹರಿಸಲು ಅಂಧಕನು ತನ್ನ ಪರಾಕ್ರಮವನ್ನು ತೋರಿಸಲು ಇಂದ್ರನ ಸಮೀಪಕ್ಕೆ ಬಂದನು. ತನ್ನ ಅಂಗೈನಿಂದ ಇಂದ್ರನ ಆನೆಯನ್ನು ಕುಂಭಸ್ಥಲದ ಮಧ್ಯದಲ್ಲಿ ಅಪ್ಪಳಿಸಿ ಮಂಡಿಯಿಂದ ಅದರ ಸೊಂಡಿಲನ್ನು ನೋಯಿಸಿ ಕೊಂಬನ್ನೂ ಮುರಿದು ಹಾಕಿದನು. ವೇಗದಿಂದ ಆ ಆನೆಯ ಎಡಪಾರ್ಶ್ವದಲ್ಲಿ ಹೊಡೆದು ಪೆಟ್ಟಿನಿಂದ ತರತರಗುಟ್ಟುತ್ತಿದ್ದ ಆನೆಯನ್ನು ಕೆಳಕ್ಕೂ ಕೆಡವಿದನು.

ಅನಂತರ ಹಾಗೆ ಕೆಳಕ್ಕೆ ಬಿದ್ದ ಆನೆಯಿಂದ ಇಂದ್ರನು ಹಾರಿ ವಜ್ರಾಯುಧವನ್ನು ಕೈಯಲ್ಲಿ ತೆಗೆದುಕೊಂಡು ಅಮರಾವತಿಯನ್ನು ಪ್ರವೇಶಿಸಿದನು. ಇಂದ್ರನು ಪರಾಙ್ಮುಖನಾಗಿ ಹೊರಟುಹೋದ ಮೇಲೆ ನಿರಾಶ್ರಯವಾದ ಆ ದೇವಸೈನ್ಯವನ್ನು ಅಂಧಕನು ಪಾದ, ಮುಷ್ಟಿ ಮತ್ತು ಅಂಗೈ ಇವುಗಳ ಪ್ರಹಾರದಿಂದ ಎಲ್ಲವನ್ನೂ ಕೆಳಕ್ಕೆ ಕೆಡವಿದನು. ಅನಂತರ ಯಮನು ಕಾಲದಂಡವನ್ನು ತಿರುಗಿಸಿ ತನಗೆ ಎದುರಾಗಿ ಬಂದ ಪ್ರಲ್ಹಾದನನ್ನು ಕೊಲ್ಲಲು ಅಭಿಮುಖವಾಗಿ ಓಡಿದನು.

ಹಾಗೆ ಬರುತ್ತಿರುವ ಯಮದಂಡವನ್ನು ಪ್ರಲ್ಹಾದನು ವೇಗಶಾಲಿಯಾದ ತನ್ನ ಬಾಣವೃಷ್ಟಿಯಿಂದ ಎದುರಿಸಿ ಗರ್ಜಿಸಿದನು. ಆಗ ಪ್ರಲ್ಹಾದನು ಬಾಣಗಳನ್ನೆಲ್ಲ ದಂಡಾಯುಧದಿಂದ ತಡೆದು ಯಮನು ಭಯಂಕರವಾದ ಆ ದಂಡಾಯುಧವನ್ನು ಸಜ್ಜುಗೊಳಿಸಿ ಪ್ರಯೋಗಿಸಿದನು. ಯಮನಿಂದ ಬಿಡಲ್ಪಟ್ಟ ದಂಡಾಯುಧವು ಆಕಾಶ

ಮಾರ್ಗವನ್ನು ಹೊಂದಿ ಜಗತ್ತನ್ನು ನಾಶಪಡಿಸುವ ಕಾಲಾಗ್ನಿಯಂತೆ ಜ್ವಲಿಸಿತು. ಹಾಗೆ ಜ್ವಲಿಸುತ್ತ ಬರುತ್ತಿರುವ ಆ ದಂಡವನ್ನು ನೋಡಿ ದೈತ್ಯರೆಲ್ಲರೂ ''ಅಯ್ಯೋ ಕಷ್ಟ. ಕಷ್ಟ. ಈ ಪ್ರಲ್ಹಾದನು ಯಮನಿಂದ ಕೊಲ್ಲಲ್ಪಟ್ಟನು'' ಎಂದು ಕೂಗಲಾರಂಭಿಸಿದರು.

ಆ ಕೂಗನ್ನು ಕೇಳಿ ಹಿರಣ್ಯಾಕ್ಷ ಪುತ್ರನಾದ ಅಂಧಕನು ''ಭಯಪಡಬೇಡಿ ನಾನಿರುವಾಗ ಯಾವ ಸುರಾಧಮವೂ ಪ್ರಲ್ಹಾದನನ್ನು ಕೊಲ್ಲಲು ಸಾಧ್ಯವಿಲ್ಲ''ವೆಂದು ಅಭಯವನ್ನಿತ್ತು ತ್ವರೆಯಿಂದ ಓಡಿಬಂದು ಆ ಯಮದಂಡವನ್ನು ಕೈಯ್ಯಿಂದ ಹಿಡಿದು ನಿಲ್ಲಿಸಿದನು ಮತ್ತು ಎಡಗೈಯ್ಯಿಂದ ಅದನ್ನು ಹಿಡಿದುಕೊಂಡು ವೇಗವಾಗಿ ತಿರುಗಿಸುತ್ತಾ ಅಂಧಕನು ವರ್ಷಕಾಲದ ಮೇಘದಂತೆ ಗರ್ಜಿಸಿದನು. ಅರಸು ಪ್ರಲ್ಹಾದನು ಯಮದಂಡದಿಂದಲೂ ರಕ್ಷಿಸಲ್ಪಟ್ಟನೆಂದು ತಿಳಿದು ದೈತ್ಯದಾನವ ಸೈನ್ಯಾಧಿಪತಿಗಳೆಲ್ಲರೂ 'ಭಲೆಭಾಪು' ಎಂದು ಹೇಳುತ್ತಾ ಹರ್ಷಗೊಂಡರು. ಈ ಪ್ರಕಾರ ತಿರುಗಿಸಲ್ಪಡುತ್ತಿರುವ ಆ ದಂಡವನ್ನು ನೋಡಿ. ಯಮನು ''ಇದು ದುಸ್ಸಹವೆಂದೂ ಧರಿಸಲು ಸಾಧ್ಯವಿಲ್ಲವೆಂದೂ'' ತಿಳಿದು ಅಂತರ್ಧಾನ ಹೊಂದಿದನು. ಯಮನು ಅಂತರ್ಧಾನ ಹೊಂದಿದ ಮೇಲೆ ಪ್ರಲ್ಹಾದನು ಅಶ್ರಯವಿಲ್ಲದ ಆ ದೇವಸೈನ್ಯವನ್ನು ಬಹುಮಟ್ಟಿಗೂ ಘಾಸಿಪಡಿಸಿದನು.

ಆಗ ಮೊಸಳೆ ವಾಹನನಾದ ವರುಣನು ಅಸುರರೆಲ್ಲರನ್ನು ಪಾಶಾಯುಧದಿಂದ ಬಿಗಿದು ಗದೆಯಿಂದ ಪ್ರಹರಿಸಿ ಉಪದ್ರವಪಡಿಸಿದನು. ಅದನ್ನು ನೋಡಿ ವಿರೋಚನನು ವರುಣನೊಡನೆ ಯುದ್ಧಕ್ಕೆ ನಿಂತನು. ವಜ್ರಾಯುಧದಂತೆ ಕಠಿಣವಾಗಿರುವ ಭರ್ಚಿಭಲ್ಲೆಗಳಿಂದಲೂ ಶಕ್ತಿ, ಬಾಣ, ಮುದ್ಗರ ಈ ಆಯುಧಗಳಿಂದಲೂ ವರುಣನನ್ನು ಬಹಳವಾಗಿ ಪ್ರಹರಿಸಿದನು. ಅನಂತರ ಗದಾಪಾಣಿಯಾದ ವರುಣನು ಅವನನ್ನು ಬಂದು ಎದುರಿಸಿ ಗದೆಯಿಂದಲೇ ಹೊಡೆದು ನೆಲಕ್ಕೆ ಕೆಡವಿದನು ಮತ್ತು ಅವನ ವಾಹನವಾದ ಆನೆಯನ್ನು ಪಾಶದಿಂದ ಬಿಗಿದು ಬೀಳಿಸಿದನು. ವಿರೋಚನನು ಆ ಪಾಶಗಳನ್ನೆಲ್ಲ ಚೂರುಚೂರಾಗಿ ಖಂಡಿಸಿ ವರುಣನ ಹತ್ತಿರಕ್ಕೆ ಬಂದು ಅವನನ್ನು ಮಧ್ಯಭಾಗದಲ್ಲಿ ಹಿಡಿದುಕೊಂಡನು. ಪಾಶಬಂಧವು ತಪ್ಪಿದ ನಂತರ ಅವನ ಆನೆಯೂ ಕೊಂಬುಗಳಿಂದ ವರುಣನನ್ನು ಮೇಲಕ್ಕೆ ಎಸೆಯಿತು. ಕೆಳಕ್ಕೆ ಬಿದ್ದ ವರುಣನನ್ನು ಪುನಃ ಕಾಲುಗಳಿಂದ ಗದೆಯೊಡನೆ ಮರ್ದಿಸಿತು. ಆ ರೀತಿ ಅಪಾಯಕ್ಕೆ ಸಿಕ್ಕಿರುವ ವರುಣನನ್ನು ನೋಡಿ ಚಂದ್ರನು ಬಂದು ನಿಶಿತವಾದ ಬಾಣದಿಂದ ಆ ಆನೆಯನ್ನು ಬಹಳವಾಗಿ ಪ್ರಹರಿಸಿದನು. ಚಂದ್ರನ ಬಾಣಗಳಿಂದ ಏಟು ತಿಂದು ಮತ್ತಷ್ಟು ರೇಗಿದ ಆ ಆನೆಯು ವೇಗದಿಂದ ವರುಣನನ್ನು ಬಾರಿಬಾರಿಗೂ ಕಾಲುಗಳಿಂದ ಉಜ್ಜಿ ಮರ್ದಿಸಿತು. ಆ ರೀತಿ ಮರ್ದಿಸಲ್ಪಟ್ಟರೂ ಮಹಾತ್ಮನಾದ ವರುಣನು ಕಾಲುಗಳಿಂದಲೇ ಆ ಆನೆಯನ್ನು ಬಲವಾಗಿ ಹಿಡಿದುಕೊಂಡು ಅದರ ಪಾದದಲ್ಲಿ ಲಗ್ನನಾಗಿ ಕೈಗಳಿಂದ ಭೂಮಿ ಯನ್ನು ಮುಟ್ಟುತ್ತಾ ಮೆಲ್ಲಗೆ ತಲೆಯನ್ನು ಎತ್ತಿ ಬೆರಳುಗಳಿಂದ ಆ ಆನೆಯ ಬಾಲವನ್ನು ಹಿಡಿದುಕೊಂಡು ತನ್ನ ಸರ್ಪದಿಂದ ಅದನ್ನು ಬಂಧಿಸಿ ಅದರ ಬಲದಿಂದ ಆ ವಿರೋಚನನನ್ನು ಅವನ ಆನೆಯೊಡನೆ ಆಕಾಶಕ್ಕೆ ಎಸೆದನು. ವರುಣನಿಂದ ಮೇಲಕ್ಕೆ ಎಸೆಯಲ್ಪಟ್ಟ ಆ ವಿರೋಚನನು ವಾಹನವಾದ ಆನೆಯೊಡನೆ ಭೂಮಿಯಲ್ಲಿ ಬಿದ್ದನು. ಹಾಗೆ ಬಿದ್ದ ವಿರೋಚನನು ಸೂರ್ಯನಿಂದ

ಆಕಾಶದಿಂದ ಕೆಳಕ್ಕೆ ತಳ್ಳಲ್ಪಟ್ಟ ಸುಕೇಶಿಯ ನಗರದಂತೆ ತೋರಿದನು. ಕೆಳಗೆ ಬಿದ್ದ ವಿರೋಚನನನ್ನು ಕೊಲ್ಲಲು ಗದಾ ಪಾಶಸಹಿತನಾಗಿ ವರುಣನು ಓಡಿ ಬಂದನು.

ಆ ಸಮಯದಲ್ಲಿ ''ಅಯ್ಯೋ ಅಯ್ಯೋ. ದಾನವ ಸೇನಾಪತಿಯಾದ ವಿರೋಚನನು ವರುಣನಿಂದ ಕೊಲ್ಲಲ್ಪಡುತ್ತಿದ್ದಾನೆ. ಎಲೈ ಪ್ರಲ್ಹಾದನೇ, ಜಂಭನೇ, ಕುಜಂಭನೇ, ನೀವು ಎಲ್ಲಿರುವಿರಿ! ಅಂಧಕನೊಡನೆ ಬೇಗ ಬಂದು ಇವನನ್ನು ರಕ್ಷಿಸಿರಿ. ಮಹಾತ್ಮನಾದ ವರುಣನು ದೈತ್ಯಭಟರೆಲ್ಲರನ್ನೂ ವಾಹನ ಸಮೇತರನ್ನಾಗಿ ಪುಡಿಪುಡಿ ಮಾಡುತ್ತ ಪಾಶದಿಂದ ಬಂಧಿಸಿ ಇಂದ್ರನು ಅಶ್ವಮೇಧದಲ್ಲಿ ಪಶುಗಳನ್ನು ಕೊಂದಂತೆ ಗದೆಯಿಂದ ಕೊಲ್ಲುತ್ತಿದ್ದಾನೆ''. ಈ ಪ್ರಕಾರವಾದ ದೈತ್ಯರ ಆರ್ತನಾದವನ್ನು ಕೇಳಿ ಜಂಭನೇ ಮೊದಲಾದ ದೈತ್ಯ ಪ್ರಮುಖರು ವೇಗದಿಂದ ಪತಂಗದ ಹುಳುಗಳು ಅಗ್ನಿಯನ್ನು ಮುತ್ತುವಂತೆ ಓಡಿಬಂದು ವರುಣನನ್ನು ಮುತ್ತಿದರು. ಹಾಗೆ ವೇಗದಿಂದ ಬಂದ ಅವರನ್ನು ನೋಡಿ ಜಲೇಶ್ವರನಾದ ವರುಣನು ಪ್ರಲ್ಹಾದ ಪುತ್ರನಾದ ವಿರೋಚನನನ್ನು ಬಿಟ್ಟು ಪಾಶವನ್ನು ವಿಸ್ತರಿಸುತ್ತ ಗದೆಯನ್ನು ತಿರುಗಿಸುತ್ತ ಅವರನ್ನು ಅಟ್ಟಿಸಿಕೊಂಡು ಹೊರಟನು. ಜಂಭನನ್ನು ಪಾಶದಿಂದಲೂ ತಾರನನ್ನು ವಜ್ರ ಸದೃಶವಾದ ಅಂಗೈಮುಂಗೈ ಏಟುಗಳಿಂದಲೂ, ವೃತ್ರನನ್ನು ಕಾಲಿನಿಂದಲೂ, ಕುಜಂಭನನ್ನು ಮುಷ್ಟಿಯಿಂದಲೂ ಪ್ರಹರಿಸಿ ವರುಣನು ಅವರನ್ನೆಲ್ಲ ಕೆಡವಿದನು. ಆ ಪ್ರಕಾರ ವರುಣನಿಂದ ಮರ್ದಿಸಲ್ಪಟ್ಟ ದೈತ್ಯರೆಲ್ಲರೂ ಆಯುಧಗಳನ್ನು ತ್ಯಜಿಸಿ ದಿಕ್ಕಾಪಾಲಾಗಿ ಓಡಿದರು. ಅದನ್ನು ನೋಡಿ ಅಂಧಕನು ವೇಗದಿಂದ ವರುಣನೊಡನೆ ಯುದ್ಧ ಮಾಡಲು ಓಡಿ ಬಂದನು.

ಅವನನ್ನೂ ವರುಣನು ಪಾಶದಿಂದ ಕಟ್ಟಿ ಗದೆಯಿಂದ ಪ್ರಹರಿಸಿದನು. ಅಂಧಕನು ಆ ಪಾಶವನ್ನು ಕಿತ್ತಿ ಹಾಕಿ ಗದೆಯನ್ನು ತಿರುಗಿಸಿ ವರುಣನ ಮೇಲೆ ಪ್ರಯೋಗಿಸಿದನು. ತನ್ನ ಮೇಲೆ ಬರುತ್ತಿರುವ ಆ ಪಾಶವನ್ನೂ, ಗದೆಯನ್ನೂ ನೋಡಿ ದಾಕ್ಷಾಯಣಿ ಪುತ್ರನಾದ ವರುಣನು ಬೇರೆ ಮಾರ್ಗತೋರದೆ ಸಮುದ್ರವನ್ನು ಹೊಕ್ಕನು. ಅನಂತರ ಅಂಧಕನು ದೇವಸೈನ್ಯವನ್ನು ಬಹಳವಾಗಿ ಘಾಸಿಪಡಿಸಿದನು. ಅನಂತರ ಅಗ್ನಿಯು ವಾಯುಸಮೇತವಾಗಿ ದಾನವ ಸೈನ್ಯವನ್ನು ಸುಡಲಾರಂಭಿಸಿದನು. ಅವನನ್ನು ಎದುರಿಸಲು ಪರಾಕ್ರಮಶಾಲಿಯಾದ ವಿಶ್ವಕರ್ಮನೊಡನೆ ಮಯನು ಎದುರಿಗೆ ಬಂದನು. ಅಗ್ನಿಯು ಹಾಗೆ ಬಂದ ಮಯನನ್ನು ಶಕ್ತಿಯಿಂದ ಪ್ರಹರಿಸಿ ಶಂಬರನ ಕುತ್ತಿಗೆಯನ್ನು ದಹಿಸಲು ಹಿಡಿದುಕೊಂಡನು. ಶಕ್ತಿಯಿಂದ ಕವಚವು ಸೀಳಲ್ಪಡಲಾಗಿ ದೇಹಭಂಗದಿಂದ ಮಯನು ಕೆಳಗೆ ಬಿದ್ದನು. ಅಗ್ನಿಯು ಅವನನ್ನು ಜ್ವಲಿಸಲಾರಂಭಿಸಿತು. ಶಂಬರನೂ ಸಹ ಕುತ್ತಿಗೆಯಲ್ಲಿ ಹತ್ತಿದ ಅಗ್ನಿಯು ದಂದಹಿಸಲಾಗಿ ನೆಲದಲ್ಲಿ ಬಿದ್ದನು.

ಅಗ್ನಿಯಿಂದ ಆ ಪ್ರಕಾರ ಸುಡಲ್ಪಡುತ್ತಿರುವ ಶಂಬರನು ಸಿಂಹದಿಂದ ಹಿಡಿಯಲ್ಪಟ್ಟ ಆನೆಯಂತೆ ಘೋರವಾಗಿ ಕಿರುಚಿದನು. ಆ ಶಬ್ದವನ್ನು ಕೇಳಿ ಕೋಪದಿಂದ ಕೆಂಗಣ್ಣು ಬಿಡುತ್ತ ''ಆ! ಇದೇನು? ಮಯನನ್ನೂ ಶಂಬರನನ್ನೂ ಯುದ್ಧದಲ್ಲಿ ಜಯಿಸಿದವರಾರು?'' ಎಂದು ಕೇಳಲು ದೈತ್ಯಭಟರು ಈ ಅಗ್ನಿಯಿಂದ ಸುಡಲ್ಪಡುತ್ತಿದ್ದಾರೆ. ಜಾಗ್ರತೆಯಾಗಿ ಬಂದು ಇವರನ್ನು ರಕ್ಷಿಸು, ಈ ಅಗ್ನಿಯನ್ನು ತಡೆಯಲು

ಯಾರಿಂದಲೂ ಸಾಧ್ಯವಿಲ್ಲ'' ಎಂದು ಮೊರೆ ಇಟ್ಟರು. ಈ ರೀತಿ ದೈತ್ಯರಿಂದ ಪ್ರೇರಿಸಲ್ಪಟ್ಟ ಅಂಧಕನು ಪರಿಘಾಯುಧವನ್ನು ಎತ್ತಿ ಹಿಡಿದು ''ನಿಲ್ಲು ನಿಲ್ಲು'' ಎಂದು ಹೇಳುತ್ತ ಅಗ್ನಿಯನ್ನು ಅಟ್ಟಿಸಿಕೊಂಡು ಬಂದನು. ಅಂಧಕನ ಆ ಮಾತನ್ನು ಕೇಳಿಯೂ ಸಾಹಸಿಯಾದ ಅಗ್ನಿಯು ಕೋಪದಿಂದ ಶಂಬರನನ್ನು ಹಿಡಿದು ಕೆಳಕ್ಕೆ ಅಪ್ಪಳಿಸಿ ಮರ್ದಿಸಿದನು. ಅಷ್ಟರಲ್ಲೇ ಅಂಧಕನು ಅಗ್ನಿಯ ಸಮೀಪಕ್ಕೆ ಬಂದು ಬಲವಾದ ತನ್ನ ಆಯುಧದಿಂದ ತಲೆಯ ಮಧ್ಯದಲ್ಲಿ ಹೊಡೆದನು. ಹಾಗೆ ಹೊಡೆಯಲ್ಪಟ್ಟ ಅಗ್ನಿಯು ಶಂಬರನನ್ನು ಬಿಟ್ಟು ಅಂಧಕನೊಡನೆ ಯುದ್ಧಕ್ಕೆ ಅಭಿಮುಖನಾದನು. ಬರುತ್ತಿರುವ ಆ ಅಗ್ನಿಯನ್ನು ಅಂಧಕನು ಪುನಃ ತಲೆಯಮೇಲೆ ಹೊಡೆದನು. ಹಾಗೆ ಹೊಡೆಯಲ್ಪಟ್ಟ ಅಗ್ನಿಯು ಭಯದಿಂದ ಯುದ್ಧ ಭೂಮಿಯನ್ನು ಬಿಟ್ಟು ಓಡಿದನು. ಅನಂತರ ಅಂಧಕನು, ವಾಯು, ಚಂದ್ರ, ಸೂರ್ಯ, ಸಾಧ್ಯರು, ವಸುಗಳು, ಅಶ್ವಿನೀ ದೇವತೆಗಳು ಇವರನ್ನು ಎದುರಿಸಿದನು. ಅಂಧಕನ ಬಾಣ ಪ್ರಯೋಗ ವಾದೊಡನೆಯೇ ಇವರೆಲ್ಲರೂ ಒಬ್ಬೊಬ್ಬರಾಗಿ ಪರಾಜಿತರಾಗಿ ಯುದ್ಧ ಭೂಮಿಯಿಂದ ಓಡಿದರು. ಅನಂತರ ಅಂಧಕನು, ಇಂದ್ರ, ರುದ್ರ, ಯಮ, ಚಂದ್ರ ಇವರೊಡನೆ ದೇವಸೈನ್ಯವನ್ನೆಲ್ಲವನ್ನೂ ಜಯಿಸಿ ದನುಜರಿಂದ ಪ್ರಶಂಸಿಸಲ್ಪಟ್ಟು ಭೂಮಿಗೆ ಬಂದನು. ಭೂಮಿಯಲ್ಲಿದ್ದ ರಾಜರುಗಳನ್ನೆಲ್ಲ ಜಯಿಸಿ ಅವರಿಂದ ಕಪ್ಪವನ್ನು ತೆಗೆದುಕೊಳ್ಳ ಲೇರ್ಪಡಿಸಿ ಚರಾಚರ ಜಗತ್ತನ್ನೆಲ್ಲಾ ಸ್ವಾಧೀನಪಡಿಸಿಕೊಂಡನು. ಪಾತಾಳಲೋಕದಲ್ಲಿರುವ ಅಶ್ಮಕವೆಂಬ ತನ್ನ ರಾಜಧಾನಿಯಲ್ಲಿ ನೆಲೆಸಿ ದನು. ಅಲ್ಲಿಯೂ ಸಹ ಗಂಧರ್ವ ವಿದ್ಯಾಧರರೇ ಮೊದಲಾದ ದೇವತೆಗಳು ಅಪ್ಸರಾಸ್ತ್ರೀಯರುಗಳೊಡನೆ ಮಹಾಸುರನಾದ ಅಂಧಕನ ಪರಿಚರಣೆಗಾಗಿ ಪಾತಾಳಲೋಕದ ಅಶ್ಮಕ ನಗರದಲ್ಲಿ ಅಂಧಕನೊಡನೆಯೇ ವಾಸ ಮಾಡಿದನು.

ವಾಮನ ಮಹಾಪುರಾಣ ಅಂಧಕ ಇಂದ್ರರ ಯುದ್ಧ ಎಂಬ
ಹತ್ತನೇಯ ಅಧ್ಯಾಯವು ಮುಗಿದುದು



## ಧರ್ಮ-ಯಾವುದು ? - ಯಾರಿಗೆ ?

**ಅಧ್ಯಾಯ - ೧೧**

೧೯೧. ಯದೇತದ್ಭವತಾ ಪ್ರೋಕ್ತಂ ಸುಕೇಶಿ ಪುರಮಂಬರಾತ್ ।
ಪಾತಿತಂ ಭುವಿಂ ಸೂರ್ಯೇಣ ತದಾಚಕ್ಷ್ವದ್ವಿಜೋತ್ತಮ ॥

೧೯೨. ಆಸೀನ್ನಿಶಾಚರಪತಿರ್ವಿದ್ಯುತ್ಕೇಶೀತಿ ವಿಶ್ರುತಃ ।
ತಸ್ಯ ಪುತ್ರೋ ಗಣಜ್ಯೇಷ್ಠಃ ಸುಕೇಶಿರಭವನ್ಮುನೇ ॥

೧೯೩. ತಸ್ಯ ತುಷ್ಟಸ್ತ್ವಥೇಶಾನಃ ಪುರಮಾಕಾಶಚಾರಿ ಯತ್ ।
ಪ್ರಾದಾದಜೇಯತ್ವಮಪಿ ಶತ್ರುಭಿಶ್ಚಾಪ್ಯವಧ್ಯತಾಂ ॥

೧೯೪. ಸ ಚಾಪಿ ಶಂಕಾರಾತ್ಪ್ರಾಪ್ಯ ವರಂ ಗಗನಗಂ ಪುರಂ ।
ರೇಮೇ ನಿಶಾಚರೈಸ್ಸಾರ್ಧಂ ಸದಾ ಧರ್ಮಪಥೇ ಸ್ಥಿತಃ ॥

೧೯೫. ಸ ಕದಾಚಿದ್ಗತೋಽರಣ್ಯಂ ಮಾಗಧಂ ದಾನವೇಶ್ವರಃ ।
ತತ್ರಾಶ್ರಮಾಂಸ್ತು ದದೃಶೇ ಋಷೀಣಾಂ ಭಾವಿತಾತ್ಮನಾಂ ।

೧೯೬. ಮಹರ್ಷೀನ್ಸ ತದಾ ದೃಷ್ಟ್ವಾ ಪ್ರಣಿಪತ್ಯಾಭಿವಂದ್ಯ ಚ ।
ಪ್ರತ್ಯುವಾಚ ಋಷೀನ್ಸರ್ವಾನ್ಕೃತಾಸನ ಪರಿಗ್ರಹಃ ॥

೧೯೭. ಕಿಂ ಸ್ವಿಚ್ಛ್ರೇಯಃ ಪರೇ ಲೋಕೇ ಕಿಮುಚೇಹ ದ್ವಿಜೋತ್ತಮಾಃ।
ಕೇನ ಪೂಜ್ಯಸ್ತಥಾ ಸತ್ಸು ಕೇನಾಸೌ ಸುಖಮೇಧತೇ ॥

೧೯೮. ಶ್ರೇಯೋ ಧರ್ಮಃ ಹರೇ ಲೋಕೇ ಇಹ ಚ ಕ್ಷಣದಾಚರ ।
ತಸ್ಮಿನ್ಸಮಾಶ್ರಿತೇ ಸತ್ಸು ಪೂಜ್ಯಸ್ತೇನ ಸುಖೀ ಭವೇತ್ ॥

೧೯೯. ಕಿಂ ಲಕ್ಷಣೋ ಭವೇದ್ಧರ್ಮಃ ಕಿಮಾಚರಣ ಸತ್ಕ್ರಿಯಃ ।
ಯಮಾಶ್ರಿತ್ಯ ವ ಸೀದಂತಿ ದೇವಾದ್ಯಾಸ್ತು ತದುಚ್ಯತಾಂ ॥

**ನಾರದ** - ದ್ವಿಜೋತ್ತಮರೇ, ನೀವು ವರುಣ ವಿರೋಚನರ ಸಂಗ್ರಾಮವನ್ನು ವರ್ಣಿಸುವಾಗ ''ಸೂರ್ಯನು ಅಂತರಿಕ್ಷದಿಂದ ಸುಕೇಶಿಪುರವನ್ನು ಕೆಳಗೆ ತಳ್ಳಿದಂತೆ ವರುಣನಿಂದ ತೂರಲ್ಪಟ್ಟ ವಿರೋಚನನು ನೆಲದಮೇಲೆ ಬಿದ್ದನು'' ಎಂದು ಹೇಳಿದಿರಿ, ಆ ಸುಕೇಶಿಯು ಯಾರು ? ಅವನ ಪುರವನ್ನು ಸೂರ್ಯನು ಏಕೆ ಕೆಳಗೆ ತಳ್ಳಿದನು? ಈ ವಿಚಾರವನ್ನು ದಯಮಾಡಿ ನನಗೆ ತಿಳಿಸಬೇಕು.

**ಪುಲಸ್ತ್ಯ** - ಮುನಿವರರನೇ, ಅದೊಂದು ಹಳೆಯ ಕಥೆ. ನಾನು ಹಿರಿಯರಿಂದ ಕೇಳಿದಂತೆ ನಿನಗೆ ಹೇಳುತ್ತೇನೆ. ಇತ್ತ ಚಿತ್ತವಿತ್ತು ಆಲಿಸು. ''ಹಿಂದೆ ವಿದ್ಯುತ್ಕೇಶಿ ಎಂಬ ದೈತ್ಯನು ಇದ್ದನು. ಅವನು ವೀರನೂ, ಪ್ರಸಿದ್ಧನೂ ಆಗಿದ್ದನು. ಅವನ ಮಗ ಸುಕೇಶಿ. ಅವನೂ ಗುಣವಂತನಿದ್ದನು. ಅವನ ಗುಣಗಳಿಗೆ ಮೆಚ್ಚಿ ಗಂಗಾಧರನು ಅವನಿಗೆ ನೆಲ ಮುಗಿಲು ಬೇಕಾದಲ್ಲಿ ಸಂಚರಿಸಬಲ್ಲ ಒಂದು ನಗರವನ್ನು ಕರುಣಿಸಿದನು. ''ಈ

ನಗರವನ್ನು ಯಾರೂ ಗೆಲ್ಲಬಾರದು. ನಿನ್ನನ್ನು ಯಾರೂ ಕೊಲ್ಲಬಾರದು'' ಎಂದು ಎರಡು ವರಗಳನ್ನಿತ್ತು ಅವನನ್ನು ಶಂಕರನು ವಿಶೇಷವಾಗಿ ಅನುಗ್ರಹಿಸಿದನು. ಹೀಗೆ ಭಗವಾನ್ ಶಂಕರನಿಂದ ವರವನ್ನು ಹೊಂದಿ, ಪುರವನ್ನು ಪಡೆದು ಆ ಸಂಚಾರೀ ಪಟ್ಟಣದಿಂದ ಮುಗಿಲಿನಲ್ಲಿ ಮನ ಬಂದತ್ತ ದೈತ್ಯರೊಡನೆ ಗಗನಯಾತ್ರೆಗೈಯುತ್ತ ಅವನು ಸುಖದಿಂದ ಇದ್ದನು. ಅವನೆಂದೂ ಧರ್ಮದ ದಾರಿಯನ್ನು ಮೀರಲಿಲ್ಲ. ಪಾಪ ಮಾರ್ಗದಲ್ಲಿ ಜಾರಲಿಲ್ಲ. ಒಂದು ದಿನ ದಾನವರ ದೊರೆಯು ಮಗಧ ದೇಶದ ಒಂದು ಗೊಂಡಾರಣ್ಯವನ್ನು ಪ್ರವೇಶಿಸಿದನು. ಆ ನಿಬಿಡಾರಣ್ಯದ ವನಾಂತರ ಪ್ರದೇಶಗಳಲ್ಲಿ ಪುಣ್ಯಾತ್ಮರಾದ ಋಷಿ ಮುನಿಗಳ ಆಶ್ರಮಗಳು ಎಸೆಯುತ್ತಿದ್ದವು.

ಅಲ್ಲಿಯ ಅರಣ್ಯಕ ಅಶ್ರಮಗಳಲ್ಲಿ ಆಶ್ರಯಗೈದ ಮುನಿ ಮಹರ್ಷಿಗಳನ್ನು ಕಂಡು ಮಹಾರಾಜನು ಸಾಷ್ಟಾಂಗ ಪ್ರಣಾಮ ಮಾಡಿದನು. ವಿನಯದಿಂದ ಕರಜೋಡಿಸಿ ಶಿರಬಾಗಿಸಿ ಬೇಡಿಕೊಂಡನು. ''ಋಷಿವರ್ಯರೇ, ಬಹುದಿನದಿಂದ ನನ್ನ ಹೃದಯದಲ್ಲಿ ಒಂದು ಸಂದೇಹವು ಮನೆಮಾಡಿದೆ. ಆ ವಿಷಯದಲ್ಲಿ ತಮ್ಮನ್ನು ವಿಚಾರಿಸಬೇಕು ಎಂದು ಮಾಡಿದ್ದೇನೆ. ತಾವು ನನ್ನ ಪ್ರಶ್ನೆರೂಪವಾದ ಪ್ರಾರ್ಥನೆಯನ್ನು ಕೇಳಿ ಸರಿಯಾಗಿ ಉತ್ತರ ಕೊಡಬೇಕು. ಮಾನವನಿಗೆ ಇಹಲೋಕದಲ್ಲಿಯಾಗಲೀ, ಪರಲೋಕದಲ್ಲಿ ಯಾಗಲೀ ಶ್ರೇಯಸ್ಕರವಾದುದು ಯಾವದು ? ಮತ್ತು ಮನುಷ್ಯನಿಗೆ ಸಜ್ಜನರ ವೃಂದದಲ್ಲಿ ಹೇಗಾದರೆ ಗೌರವಾದರ ಪೂಜ್ಯತೆಯು ಪ್ರಾಪ್ತವಾಗುವುವು ? ಹಾಗೂ ಮನುಷ್ಯನು ಸುಖ ಸೌಭಾಗ್ಯಗಳಿಂದ ಸಂಪನ್ನನಾಗಿ ಬಾಳಿ ಬದುಕುವಂತಾಗಬೇಕಾದರೆ ಏನು ಮಾಡಬೇಕು?''

**೨೦೦. ದೇವಾನಾಂ ಪರಮೋ ಧರ್ಮಃ ಸದಾ ಯಜ್ಞಾದಿಕಾಃ ಕ್ರಿಯಾಃ ।**
**ಸ್ವಾಧ್ಯಾಯ ತತ್ವವೇದಿತ್ವಂ ವಿಷ್ಣುಪೂಜಾ ಇತಿ ಶ್ರುತಿಃ ॥**

**೨೦೧. ದೈತ್ಯಾನಾಂ ಬಾಹುಶಾಲಿತ್ವಂ ಮಾತ್ಸರ್ಯಂ ಯುದ್ಧ ಸತ್ಕ್ರಿಯಾಃ**
**ವಂದನಂ ನೀತಿಶಾಸ್ತ್ರಾಣಾಂ ಹರಭಕ್ತಿರುದಾಹೃತಾ ॥**

**೨೦೨. ಸಿದ್ಧಾನಾಮುದಿತೋ ಧರ್ಮೋ ಯೋಗಸಿದ್ಧಿರನುತ್ತಮಾ ।**
**ಸ್ವಾಧ್ಯಾಯೋ ಬ್ರಹ್ಮವಿಜ್ಞಾನಂ ಭಕ್ತಿರ್ವಿಷ್ಣೌ ಹರೇ ಸ್ತಥಾ ॥**

**೨೦೩. ಉತ್ಕೃಷ್ಟೋಪಾಸನಂ ಜ್ಞೇಯಂ ನೃತ್ಯವಾದ್ಯೇಷು ವೇದಿತಾ ।**
**ಸರಸ್ವತ್ಯಾಂ ಸ್ಥಿರಾ ಭಕ್ತಿರ್ಗಾಂಧರ್ವೋ ಧರ್ಮ ಉಚ್ಯತೇ ॥**

**೨೦೪. ವಿದ್ಯಾಧಾರಿತ್ವಮತುಲಂ ವಿಜ್ಞಾನಂ ಪೌರುಷೇ ಮತಿಃ ।**
**ವಿದ್ಯಾಧರಾಣಾಂ ಧರ್ಮೋಽಯಂ ಭವಾನ್ಯಾಂ ಭಕ್ತಿರೇವ ಚ ॥**

ಆ ಸುಕೇಶಿ ದಾನವನ ಈ ಮಾರ್ಮಿಕ ಪ್ರಶ್ನೆಗಳನ್ನು ಕೇಳಿ ಮುನಿಗಳೆಲ್ಲರೂ ತಮ್ಮ ತಮ್ಮಲ್ಲಿ ವಿಚಾರ ವಿಮರ್ಶೆ ಮಾಡಿ ಅವನಿಗೆ ತಿಳಿಸಿದರು.

ಋಷಿಗಳು — ''ರಾಕ್ಷಸೇಶ್ವರಾ ! ಇಲ್ಲಿ ಮತ್ತು ಅಲ್ಲಿ ಅಂದರೆ ಬದುಕಿ ಇದ್ದಾಗ ಮತ್ತು ಮರಣದ ನಂತರ ಎರಡೂ ಸಂದರ್ಭಗಳಲ್ಲಿ ಶ್ರೇಯಸ್ಕರವಾದುದು ಯಾವುದು ಎಂಬುದನ್ನು ತಿಳಿಸುತ್ತೇವೆ, ಕೇಳು.''

''ಇಹಲೋಕದಲ್ಲಿಯೂ ಪರಲೋಕದಲ್ಲಿಯೂ ಧರ್ಮವೇ ಮಾನವನಿಗೆ ಶ್ರೇಯಸ್ಕರವಾಗಿದೆ. ಆ ಧರ್ಮವನ್ನು ಆಶ್ರಯಿಸುವದರಿಂದ ಮನುಷ್ಯನು ಲೋಕ ಪೂಜ್ಯನಾಗುತ್ತಾನೆ, ಆದರಿಂದಲೇ ಅವನಿಗೆ ಸುಖಶಾಂತಿಗಳು ಲಭಿಸುತ್ತವೆ.''

**ಸುಕೇಶಿ** - ಧರ್ಮದ ಲಕ್ಷಣವೇನು ? ಯಾವ ಕರ್ಮಾಚರಣೆಯಿಂದ ಆ ಧರ್ಮವು ಅಭಿವೃದ್ಧಿಯನ್ನು ಹೊಂದುವದು ? ಮತ್ತೂ ದೇವತೆಗಳು ಯಾವ ಧರ್ಮ ವನ್ನು ಆಶ್ರಯಿಸಿ ಉತ್ಕರ್ಷವನ್ನು ಹೊಂದಿದರು ? ದೇವತೆಗಳನ್ನು ಎಂದೂ ಅವನತಿ ಆಗದಂತೆ ರಕ್ಷಿಸುವ ಧರ್ಮ ಕರ್ಮವಾವುದು ?

**ಋಷಿಗಳು** - ಧರ್ಮವು ಅಧಿಕಾರಿ ಭೇದದಿಂದ ಭಿನ್ನ ಭಿನ್ನವಾಗಿರುತ್ತದೆ. ದೇವತೆಗಳ ಮುಖ್ಯ ಧರ್ಮವು ಶ್ರೀ ವಿಷ್ಣುವಿನ ಪೂಜೆ ತದುಪಯುಕ್ತವಾದ ಯಜ್ಞ, ಯಾಗ, ವೇದ ಶಾಸ್ತ್ರಾಧ್ಯಯನ, ದಿವ್ಯ ತತ್ವಜ್ಞಾನ, ಮುಂತಾದವುಗಳು ದೇವತೆಗಳ ಧರ್ಮವಾಗಿರುತ್ತದೆ. ಇದರಂತೆ ಪರಾಕ್ರಮ, ಧರ್ಮಯುದ್ಧ, ಹಿರಿಯರ ವಂದನೆ, ನೀತಿ ಶಾಸ್ತ್ರಗಳ ಅನುಸರಣ ಮತ್ತೂ ರುದ್ರನಲ್ಲಿ ಭಕ್ತಿ ಇವು ದೈತ್ಯರ ಧರ್ಮವಾಗಿರುತ್ತವೆ.

ಯೋಗ ಸಿದ್ಧಿ, ವೇದ ಶಾಸ್ತ್ರಾಧ್ಯಯನ, ಬ್ರಹ್ಮಜ್ಞಾನ ಮತ್ತೂ ಹರಿ ಹರ ಇಬ್ಬರಲ್ಲಿ ಭಕ್ತಿ ಇವು ಸಿದ್ಧಪುರುಷರ ಧರ್ಮಗಳು ಆಗಿರುತ್ತವೆ. ದೇವೋತ್ಕೃಷ್ಟನಾದ ಶ್ರೀಹರಿಯ ಉಪಾಸನೆ, ನೃತ್ಯ, ಗೀತ, ವಾದ್ಯಗಳಲ್ಲಿ ಪಾಂಡಿತ್ಯ ಮತ್ತು ಸರಸ್ವತೀ ದೇವಿಯಲ್ಲಿ ಸ್ಥಿರವಾದ ಭಕ್ತಿ ಇದು ಗಂಧರ್ವರ ಧರ್ಮವಾಗಿರುತ್ತದೆ. ವಿದ್ಯಾ ಸಂಪಾದನೆ, ಪ್ರಯತ್ನದಲ್ಲಿ ಭರವಸೆ ಮತ್ತು ಅಂಬಾದೇವಿಯಲ್ಲಿ ವಿಶ್ವಾಸ ಇವು ವಿದ್ಯಾಧರರ ಧರ್ಮವಾಗಿರುತ್ತವೆ.

೨೦೫. ಗಾಂಧರ್ವ ವಿದ್ಯಾ ವೇದಿತ್ವಂ ಭಕ್ತಿರ್ಭಾನೌ ತಥಾ ಸ್ಥಿರಾ ।
ಕೌಶಲ್ಯಂ ಸರ್ವ ಶಿಲ್ಪಾನಾಂ ಧರ್ಮಃ ಕಿಂಪುರುಷಃ ಸ್ಮೃತಃ ॥

೨೦೬. ಬ್ರಹ್ಮಚರ್ಯಮಮಾನಿತ್ವಂ ಯೋಗಾಭ್ಯಾಸರತಿರ್ದೃಢಾ ।
ಸರ್ವತ್ರ ಕಾಮಚಾರಿತ್ವಂ ಧರ್ಮೋಽಯಂ ಪೈತ್ರಿಕಃ ಸ್ಮೃತಃ ॥

೨೦೭. ಬ್ರಹ್ಮಚರ್ಯಂ ಸದಾ ಸತ್ಯಂ ಜಪ್ಯಂ ಜ್ಞಾನಂ ಚ ರಾಕ್ಷಸ ।
ನಿಯಮೋ ಧರ್ಮವೇದಿತ್ವಮಾರ್ಷೋ ಧರ್ಮ ಪ್ರಚಕ್ಷ್ಯತೇ ॥

೨೦೮. ಸ್ವಾಧ್ಯಾಯೋ ಬ್ರಹ್ಮಚರ್ಯಂ ಚ ದಾನಂ ಯಜನಮೇವ ಚ
ಅಕಾರ್ಪಣ್ಯಮನಾಯಾಸೋ ದಯಾ ಹಿಂಸಾ ಕ್ಷಮಾದಯಃ ॥

೨೦೯. ಜಿತೇಂದ್ರಿಯತ್ವಂ ಶೌಚಂ ಚ ಮಾಂಗಲ್ಯಂ ಭಕ್ತಿರುಚ್ಯತೇ ।
ಶಂಕರೇಭಾಸ್ಕರೇ ದೇವ್ಯಾಂ ಧರ್ಮೋಽಯಂ ಮಾನವ ಸ್ಮೃತಃ ॥

೨೧೦. ಧನಾಧಿಪತ್ಯಂ ಭೋಗಾಶ್ಚ ಸ್ವಾಧ್ಯಾಯಃ ಶಂಕರಾರ್ಚನಂ ।
ಅಹಂಕಾರ ಮಶೌಂಡೀರ್ಯಂ ಧರ್ಮೋಽಯಂ ಗುಹ್ಯಕೇಷ್ವಿತಿ ॥

೨೧೧. ಪರದಾರಾವಮರ್ಶಿತ್ವಂ ಪಾರಕ್ಯಾರ್ಥೇ ಚ ಲೋಲುಪಾಃ ।
ಸ್ವಾಧ್ಯಾಯಸ್ತ್ರ್ಯಂಬಕೇ ಭಕ್ತಿರ್ಧರ್ಮೋಽಯಂ ರಾಕ್ಷಸಃ ಸ್ಮೃತಃ ॥

೨೧೨. ಅವಿವೇಕಸ್ತಥಾऽ ಜ್ಞಾನಂ ಶೌಚಹಾನಿರಸತ್ಯತಾ ।
ಪಿಶಾಚಾನಾಮಯಂ ಧರ್ಮ ಸದಾಚಾಮಿಷ ಗೃಧ್ರತಾ ॥

೨೧೩. ಯೋನಯೋ ದ್ವಾದಶೈವೈತಾಸ್ತಾಸು ಧರ್ಮಾಶ್ಚ ರಾಕ್ಷಸ ।
ಬ್ರಹ್ಮಣಾ ಕಥಿತಾಃ ಪುಣ್ಯಃ ದ್ವಾದಶೈವ ಗತಿಪ್ರದಾಃ ॥

೨೧೪. ಭವದ್ಭಿರುಕ್ತಾ ಯೇ ಧರ್ಮಾಃ ಶಾಶ್ವತಾ ದ್ವಾದಶಾವ್ಯಯಾಃ ।
ತತ್ರ ಯೇ ಮಾನವಾ ಧರ್ಮಾಸ್ತಾನ್ಭೂಯೋ ವಕ್ತುಮರ್ಹಥ ।

೨೧೫. ಶೃಣಷ್ವ ಮನುಜಾದೀನಾಂ ಧರ್ಮಾಂಸ್ತು ಕ್ಷಣದಾಚರ ।
ಯೇ ವಸಂತಿ ಮಹೀಪೃಷ್ಠೇ ನರಾ ದ್ವೀಪೇಷು ಸಪ್ತಸು ॥

ಸಂಗೀತ ವಿದ್ಯೆಯಲ್ಲಿ ನೈಪುಣ್ಯ, ಎಲ್ಲ ಬಗೆಯಾದ ಶಿಲ್ಪಕಲೆಯಲ್ಲಿ ಕೌಶಲ್ಯ ಮತ್ತು ಸೂರ್ಯ ಭಕ್ತಿ ಕಿಂಪುರುಷರ ಧರ್ಮವಾಗಿರುತ್ತವೆ. ಬ್ರಹ್ಮಚರ್ಯ, ನಿರಭಿಮಾನಿತ್ವ, ಯೋಗಾಭ್ಯಾಸದಲ್ಲಿ ಆಸಕ್ತಿ ಮತ್ತು ಸರ್ವತ್ರ ಸೇವಾ ಸಂಚಾರ ಇವು ಪಿತೃಗಳ ಧರ್ಮವಾಗಿರುತ್ತವೆ. ಬ್ರಹ್ಮಚರ್ಯ, ಸತ್ಯನಿಷ್ಠತೆ, ಜಪ, ದಿವ್ಯ ತತ್ವಜ್ಞಾನ, ವ್ರತಾಚರಣ ಯಮ ನಿಯಮಗಳೂ, ಇಂದ್ರಿಯ ನಿಗ್ರಹ ಇವು ಋಷಿಗಳ ಧರ್ಮವಾಗಿರುತ್ತವೆ.

ಸ್ವಾಧ್ಯಾಯ, ಬ್ರಹ್ಮಚರ್ಯ, ದಾನ, ಯಜ್ಞ, ಔದಾರ್ಯ, ದಯಾ, ಅಹಿಂಸೆ ಕ್ಷಮಾ, ಇಂದ್ರಿಯ ನಿಗ್ರಹ, ಮಡಿ ಮೈಲಿಗೆ, ಶುಭಕಾರ್ಯ ಮತ್ತೂ ಶ್ರೀಹರನಲ್ಲಿ ಆದರಂತೆ ಸೂರ್ಯ ಮತ್ತು ದೇವಿಯರಲ್ಲಿ ಭಕ್ತಿ ಇವು ಮನುಷ್ಯರ ಧರ್ಮಗಳು ಆಗಿರುತ್ತವೆ. ಐಶ್ವರ್ಯ, ಭೋಗ, ಸ್ವಾಧ್ಯಾಯ, ಶಿವಾರ್ಚನೆ, ಅಹಂಕಾರ, ಕಾರ್ಪಣ್ಯ ಇವು ಯಕ್ಷರ ಧರ್ಮಗಳಾಗಿರುತ್ತವೆ. ಪರಸ್ತ್ರೀ ಬಲಾತ್ಕಾರ, ಹೆರವರ ವಸ್ತುಗಳನ್ನು ಬಯಸುವದು ಸ್ವಾಧ್ಯಾಯ ಮತ್ತು ಹರಭಕ್ತಿ ಇವು ರಾಕ್ಷಸ ಧರ್ಮಗಳಾಗಿರುತ್ತವೆ. ಅವಿವೇಕ, ಅಜ್ಞಾನ, ಅಶುಚಿತ್ವ, ಅಸತ್ಯ ಮಾಂಸಾಹಾರ ಇವು ಪಿಶಾಚಿಗಳ ಧರ್ಮ.

ಹೀಗೆ ಹನ್ನೆರಡು ವಿಧವಾದ ಧರ್ಮಗಳು ಹನ್ನೆರಡು ಬಗೆಯ ಜೀವ ಜಾತಿಗಳಿಗೆ ಬೇರೆ ಬೇರೆಯಾಗಿ ಹೇಳಲ್ಪಟ್ಟಿರುತ್ತವೆ. ಇವು ಆ ಯೋನಿ ಪ್ರಾಣಿಗಳ ಸ್ವಭಾವ ಧರ್ಮಗಳಾಗಿದ್ದು ಇವುಗಳಲ್ಲಿ ಶ್ರೀಹರಿಹರಭಕ್ತಿ, ಸ್ವಾಧ್ಯಾಯ, ತತ್ವಜ್ಞಾನ ಸದಾಚಾರ ಮುಂತಾದ ಧರ್ಮಗಳು ಮಾತ್ರ ಉತ್ಕರ್ಷಾದಾಯಕವಾಗಿರುತ್ತವೆ ಎಂದು ತಿಳಿಯಬೇಕು.

**ಸುಕೇಶಿ** - ಪೂಜ್ಯರೇ, ನೀವು ಹನ್ನೆರಡು ಬಗೆಯಾದ ಜೀವಗಳ ಶಾಶ್ವತ ಧರ್ಮಗಳನ್ನು ಹೇಳಿದಿರಿ. ಅದರೆ ಅವುಗಳಲ್ಲಿ ನನಗೆ ಮಾನವ ಧರ್ಮಗಳನ್ನು ಮತ್ತೊಮ್ಮೆ ಹೇಳಬೇಕು.

**ಋಷಿಗಳು** - ದೈತ್ಯೇಂದ್ರ, ಮಹೀಮಂಡಲದಲ್ಲಿ ಇರುವ ಸಪ್ತ ದ್ವೀಪಗಳಲ್ಲಿ ವಾಸಿಸುವ ಮನುಷ್ಯ ಮುಂತಾದವರ ಧರ್ಮಗಳನ್ನು ಹೇಳುತ್ತೇನೆ, ಕೇಳು.

''ಐವತ್ತು ಕೋಟಿ ಯೋಜನ ವಿಸ್ತಾರವಾದ ಈ ಭೂಮಂಡಲವು ನದಿಯ ನೀರಿನಲ್ಲಿ ನಾವಿನಂತೆ ಜಲರಾಶಿಯ ಮೇಲೆ ತೇಲುತ್ತಲಿರುತ್ತದೆ. ಆ ನೀರಿನ ಮೇಲೆ ಕಮಲದ ಮೊಗ್ಗೆಯಂತೆ ಒಂದು ಎತ್ತರವಾದ ಬೆಟ್ಟವನ್ನು ಆ ಬ್ರಹ್ಮದೇವರು ಇಟ್ಟಿದ್ದಾರೆ.

೨೧೬. ಯೋಜನಾನಾಂ ಪ್ರಮಾಣೇನ ಪಂಚಾಶತ್ಕೋಟಿರಾಯತಾ ।
ಜಲೋಪರಿ ಮಹೀಯಂ ಹಿ ನೌರಿವಾಸ್ತೇ ಸರಿಜ್ಜಲೇ ।
ತಸ್ಯೋಪರಿ ಚ ದೇವೇಶೋ ಬ್ರಹ್ಮಾಶೈಲೇಂದ್ರಮುತ್ತಮಂ ॥

೨೧೭. ಕರ್ಣಿಕಾಕಾರಮತ್ಯುಚ್ಚಂ ಸ್ಥಾಪಯಾಮಾಸ ಸತ್ತಮಃ ।
ಸ ಚೇಮಾಂ ನಿರ್ಮಮೇ ಪುಣ್ಯಾಂ ಪ್ರಜಾಂ ದೇವಶ್ಚತುರ್ದಿಶಂ

೨೧೮. ಸ್ಥಾನಾನಿ ದ್ವೀಪಸಂಜ್ಞಾನಿ ಕೃತವಾಂಶ್ಚ ಪ್ರಜಾಪತಿಃ ।
ತತ್ರ ಮಧ್ಯೇ ಚ ಕೃತವಾನ್ಜಂಬೂದ್ವೀಪಮಿತಿ ಶ್ರುತಂ ।

೨೧೯. ತಲ್ಲಕ್ಷಂ ಯೋಜನಾನಾಂ ಚ ಪ್ರಮಾಣೇನ ನಿಗದ್ಯತೇ ।
ತತೋ ಜಲನಿಧಿಃ ಕ್ಷಾರೋ ಬಾಹ್ಯತೋ ದ್ವಿಗುಣಃ ಸ್ಥಿತಃ ॥

೨೨೦. ತಸ್ಯಾಪಿ ದ್ವಿಗುಣಃ ಪ್ಲಕ್ಷೋ ಬಾಹ್ಯತಃ ಸಂಪ್ರತಿಷ್ಠಿತಃ ।
ತತಸ್ತ್ವಿಕ್ಷುರಸೋದಶ್ಚ ಬಾಹ್ಯತೋ ವಲಯಾಕೃತಿಃ ॥

೨೨೧. ದ್ವಿಗುಣಃ ಶಾಲ್ಮಲಿದ್ವೀಪೋ ದ್ವಿಗುಣೋಽಸ್ಯ ಮಹೋದಧಿಃ ।
ಸುರೋದೋ ದ್ವಿಗುಣಸ್ತಸ್ಯ ತಸ್ಮಾಚ್ಚ ದ್ವಿಗುಣಃ ಕುಶಃ ॥

೨೨೨. ಘೃತೋದೋ ದ್ವಿಗುಣಶ್ಚೈವ ಕುಶದ್ವೀಪಾತ್ಪ್ರಕೀರ್ತಿತಃ ।
ಘೃತೋದಾದ್ದಿ ಗುಣಃ ಕ್ರೌಂಚೋ ದದ್ಯೋದೊ ದ್ವಿಗುಣಸ್ತತಃ

೨೨೩. ಸಮುದ್ರಾದ್ದ್ವಿಗುಣಃ ಶಾಕಃ ಶಾಕಾದ್ದುಗ್ಧಾಬ್ಧಿರುತ್ತಮಃ ।
ದ್ವಿಗುಣಃ ಸಂಸ್ಥಿತೋ ಯತ್ರ ಶೇಷಪರ್ಯಂಕಗೋ ಹರಿಃ ॥

೨೨೪. ತಸ್ಮಾಚ್ಚ ಪುಷ್ಕರದ್ವೀಪಃ ಸ್ವಾದೂದಸ್ತದನಂತರಂ ।
ಏತೇ ಚ ದ್ವಿಗುಣಾಃ ಸರ್ವೇ ಪರಸ್ಪರಮವಸ್ಥಿತಾಃ ॥

೨೨೫. ಚತ್ವಾರಿಂಶದಿಮಾಃ ಕೋಟ್ಯೋ ಲಕ್ಷಾಶ್ಚ ನವತಿಃ ಸ್ಮೃತಾಃ ।
ಯೋಜನಾನಾಂ ರಾಕ್ಷಸೇಂದ್ರ ಪಂಚ ಜಾತಿ ಸುವಿಸ್ತೃತಾಃ ॥

೨೨೬. ಜಂಬೂ ದ್ವೀಪಾತ್ಸಮಾರಭ್ಯ ಯಾವಕ್ಷೀರಾಬ್ಧಿರಂತತಃ ।
ಕೋಟ್ಯಶ್ಚತಸ್ರೋ ಲಕ್ಷಾಣಾಂ ದ್ವಾಪಂಚಾಶಚ್ಚ ರಾಕ್ಷಸ ॥

೨೨೭. ಪುಷ್ಕರದ್ವೀಪ ಮಾನೋಽಯಂ ತಾವಾನಂತೇ ಮಹೋದಧೀಃ
ಲಕ್ಷಮಂಡಕಟಾಹೇನ ಸಮಂತಾದಭಿ ಪೂರಿತಂ । ೩೭।

೨೨೮. ಏವಂ ದ್ವೀಪಾಸ್ತ್ವಿಮೇ ಸಪ್ತ ಪೃಥಗ್ಧರ್ಮಾ ಪೃಥಕ್ಕ್ರಿಯಾಃ
ಗದಿಷ್ಯಾಮಸ್ತವ ವಯಂ ಶೃಣುಷ್ವ ತ್ವಂ ನಿಶಾಚರ

ಇದರ ನಾಲ್ಕು ದಿಕ್ಕಿನಲ್ಲಿಯೂ ಕೆಲವು ಸ್ಥಾನಗಳನ್ನು ನಿರ್ಮಿಸಿ ಅವುಗಳನ್ನು 'ದ್ವೀಪ' ಎಂದು ಆ ಬ್ರಹ್ಮದೇವನು ಕರೆದನು. ಅವುಗಳ ನಟ್ಟನಡುವಿನ ದ್ವೀಪವೇ ಜಂಬೂ ದ್ವೀಪ

ಎಂದು ಹೆಸರಾಗಿದೆ. ಈ ಜಂಬೂ ದ್ವೀಪದ ಪರಿಮಾಣವು ಒಂದು ಲಕ್ಷ ಯೋಜನ ಎಂದು ಹೇಳಲಾಗಿದೆ. ಈ ಜಂಬೂ ದ್ವೀಪವನ್ನು ಎರಡು ಲಕ್ಷ ಯೋಜನ ಉದ್ದಳತೆಯುಳ್ಳ ಉಪ್ಪಿನ ಸಮುದ್ರವು ಅಪ್ಪಿ ಒಪ್ಪುತ್ತಲಿದೆ. ಈ ಲವಣ ಸಮುದ್ರದ ಆಚೆಗೆ ಅದರ ಎರಡು ಪಟ್ಟು ಪ್ರಮಾಣವುಳ್ಳ ಪ್ಲಕ್ಷದ್ವೀಪ ತಲೆ ಎತ್ತಿದೆ. ಆ ಪ್ಲಕ್ಷದ್ವೀಪವನ್ನು ಅದರ ಎರಡು ಪಟ್ಟು ಪರಿಮಾಣವುಳ್ಳ ಕಬ್ಬಿನರಸದ ಕಡಲು ದುಂಡಾಗಿ ಸುತ್ತುಕೊಂಡಿದೆ. ಅದರಾಚೆಗೆ ಶಾಲ್ಮಲೀ ದ್ವೀಪವು ಕಂಗೊಳಿಸುತ್ತದೆ, ಅದನ್ನು ಸುತ್ತು ಹಾಕಿದ್ದು ಮಧ್ಯದ ಸಮುದ್ರ.

ಅದರ ಆಚೆಗೆ ಇರುವುದೇ ಕುಶದ್ವೀಪ. ಅದರ ಸುತ್ತುಮುತ್ತು ತುಪ್ಪದ ಸಮುದ್ರವು ತನ್ನ ಘೃತಮಯವಾದ ತೆರೆಗಳನ್ನು ತೂರಾಡುತ್ತಲಿದೆ. ಅದರ ಮುಂದಿರುವ ಕ್ರೌಂಚ ದ್ವೀಪವನ್ನು ತಬ್ಬಿಕೊಂಡು ಮೊಸರಿನ ಸಮುದ್ರವು ಮೊರೆಯುತ್ತಲಿದೆ. ಈ ಮೊಸರಿನ ಸಮುದ್ರಕ್ಕಿಂತ ಎರಡು ಪಟ್ಟು ವಿಸ್ತಾರವಾಗಿರುವ ಶಾಕದ್ವೀಪವನ್ನು ಹಾಲ್ಗಡಲು ಸುತ್ತುವರಿದಿದೆ. ಆ ಹಾಲಿನ ಸಮುದ್ರದಲ್ಲಿಯೇ ಶೇಷಶಾಯಿಯಾದ ನಾರಾಯಣನು ಯೋಗ ನಿದ್ರೆಯಲ್ಲಿ ಮಲಗಿರುತ್ತಾನೆ. ಅದರ ಮೇಲೆ ಪುಷ್ಕರದ್ವೀಪವಿರುತ್ತದೆ. ಅದು ಸಿಹಿನೀರಿನ ಸಮುದ್ರದಿಂದ ಆವರಿಸಲ್ಪಟ್ಟಿದೆ. ಈ ಏಳು ದ್ವೀಪಗಳೂ, ಇವುಗಳ ಸಮುದ್ರಗಳೂ ಒಂದರ ಮೇಲೊಂದು ದ್ವಿಗುಣ ಪರಿಮಾಣಗಳಲ್ಲಿ ಇರುತ್ತವೆ. ಇವೆಲ್ಲವೂ ಸೇರಿ ನಲವತ್ತು ಕೋಟಿ ತೊಂಬತ್ತೈದು ಲಕ್ಷ ಯೋಜನ ಪರಿಮಾಣವನ್ನು ಹೊಂದಿರುತ್ತವೆ.

ಜಂಬೂ ದ್ವೀಪದಿಂದ ಹಿಡಿದು ಕ್ಷೀರ ಸಮುದ್ರದವರೆಗೆ ನಾಲ್ಕು ಕೋಟಿ ಎರಡು ಲಕ್ಷ ಐವತ್ತು ಯೋಜನ ಪರಿಮಾಣವಾಗುತ್ತದೆ. ಇದರಷ್ಟೇ ಪುಷ್ಕರ ದ್ವೀಪದ ಪರಿಮಾಣವೂ ಇರುತ್ತದೆ. ಆದರೆ ಕೊನೆಯಲ್ಲಿರುವ ಲಕ್ಷ ಯೋಜನ ಪ್ರಮಾಣವುಳ್ಳ ಮಹಾ ಸಮುದ್ರವು ಬ್ರಹ್ಮಾಂಡ ಕಪಾಲದಿಂದ ಎಲ್ಲ ಕಡೆಯಲ್ಲಿಯೂ ಸುತ್ತಲ್ಪಟ್ಟಿದೆ. ಈ ಏಳು ವಿಧವಾದ ದ್ವೀಪಗಳಲ್ಲಿಯೂ ಪ್ರಚಲಿತವಿರುವ ಧರ್ಮಗಳೇ ಬೇರೆ. ಪ್ರಚಾರದಲ್ಲಿರುವ ಕರ್ಮಗಳೇ ಬೇರೆ. ಪ್ರತಿಯೊಂದು ದ್ವೀಪಗಳಲ್ಲಿಯೂ ಆಚಾರವೂ ಭಿನ್ನ ಭಿನ್ನ. ವಿಚಾರವೂ ಭಿನ್ನ ಭಿನ್ನ. ಅದೆಲ್ಲವನ್ನೂ ಇಲ್ಲಿ ಸೂಚ್ಯವಾಗಿ ಸಂಕ್ಷೇಪವಾಗಿ ಹೇಳುತ್ತೇನೆ ಕೇಳು - ಪ್ಲಕ್ಷದ್ವೀಪ ಮೊದಲುಗೊಂಡು ಶಾಕ ದ್ವೀಪದವರೆಗಿನ ದ್ವೀಪ ಕಲ್ಪಗಳಲ್ಲಿ ನೆಲೆಸಿದ ಜನರಿಗೆ ಯುಗಭೇದದಿಂದ ಉಂಟಾಗುವ ಧರ್ಮದ ಬದಲಾವಣೆಗಳು

೨೨೯. ಪ್ಲಕ್ಷಾದಿಷು ನರಾ ವೀರ ಯೇ ವಸಂತಿ ಸನಾತನಾಃ ।
ಮೋದಂತೆ ದೇವವತ್ತೇಷಾಂ ಧರ್ಮೋ ದಿವ್ಯ ಉದಾಹೃತಃ ॥

೨೩೦. ಕಿಮರ್ಥಂ ಪುಷ್ಕರ ದ್ವೀಪೋ ಭವದ್ಭಿಃ ಸಮುದಾಹೃತಃ ।
ದುರ್ದಶಃ ಶೌಚರಹಿತೋ ಘೋರಃ ಕರ್ಮಾರ್ಥ ನಾಶಕೃತ್ ॥

೨೩೧. ತಸ್ಮಿನ್ನಿಶಾಚರದ್ವೀಪೇ ನರಕಾಃ ಸಂತಿ ದಾರುಣಾಃ ।
ರೌರವಾದ್ಯಾಸ್ತತೋ ರೌದ್ರಃ ಪುಷ್ಕರೋ ಘೋರದರ್ಶನಃ ॥

೨೩೨. ಕಿಯಂತ್ಯೇತಾನಿ ರೌದ್ರಾಣಿ ನರಕಾಣಿ ತಪೋಧನಾಃ ।
ಕಿಯನ್ಮಾತ್ರಾಣಿ ಮಾರ್ಗೇಣ ಕಾ ಚ ತೇಷು ಸ್ವರೂಪತಾ ॥

೨೩೩. ದ್ವೇಸಹಸ್ರೇ ಯೋಜನಾನಾಂ ಜ್ವಲಿತಾಂಗಾರ ವಿಸ್ತೃತಃ ।
ರೌರವೋ ನಾಮ ನರಕಃ ಪ್ರಥಮಃ ಪರಿಕೀರ್ತಿತಃ ॥

೨೩೪. ತಪ್ತತಾಮ್ರಮಯಿ ಭೂಮಿರಧಸ್ತದ್ವಹ್ನಿತಾಪಿತಾ ।
ದ್ವಿತೀಯೋ ದ್ವಿಗುಣಸ್ತಸ್ಮಾನ್ಮಹಾರೌರವ ಉಚ್ಯತೇ ॥

೨೩೫. ತತೋಽಪಿ ವಿಸ್ತೃತಶ್ಚಾನ್ಯಸ್ತಾಮಿಸ್ರೋ ನರಕಃ ಸ್ಮೃತಃ ।
ಅಂಧತಾಮಿಸ್ರಕೋ ನಾಮ ಚತುರ್ಥೋ ದ್ವಿಗುಣಃ ಪರಃ ॥

೨೩೬. ತತಸ್ತು ಕಾಲಸೂತ್ರೇತಿ ಪಂಚಮಃ ಪರಿಗೀಯತೇ ।
ಅಪ್ರತಿಷ್ಠಂ ತಥಾ ಷಷ್ಠಂ ಘಟೀ ಯಂತ್ರಂ ಚ ಸಪ್ತಮಂ ॥

೨೩೭. ಅಸಿಪತ್ರವನಂ ಚಾನ್ಯತ್ಸಹಸ್ರಾಣಿ ದ್ವಿಸಪ್ತತಿಃ ।
ಯೋಜನಾನಾಂ ಪರಿಖ್ಯಾತಮಷ್ಟಮಂ ನರಕೋತ್ತಮಂ ॥

೨೩೮. ನವಮಂ ತಪ್ತಕುಂಭಂ ಚ ದಶಮಂ ಕೂಟಶಾಲ್ಮಲಿಃ ।
ಕರಪತ್ರಸ್ತಥೈವೋಕ್ತಸ್ತಥಾನ್ಯಃ ಶ್ವಾನ ಭೋಜನಃ ॥

೨೩೯. ಸಂದಂಶೋ ಲೋಹ ಪಿಂಡಶ್ಚ ಕರಂಭ ಸಿಕತಾ ತಥಾ ।
ಘೋರಾ ಕ್ಷಾರನದೀ ಚಾನ್ಯಾ ತಥಾಽನ್ಯಾ ಕೃಮಿ ಭೋಜನಾ ।
ತಥಾಷ್ಟಾದಶಮೀ ಪ್ರೋಕ್ತಾ ಘೋರಾ ವೈತರಣೀ ನದೀ ॥

೨೪೦. ತಥಾಪರಃ ಶೋಣಿತಪೂಯ ಭೋಜನಃ ।
ಕ್ಷುರಾಗ್ರಧಾರೋ ನಿಶಿತಶ್ಚ ಚಕ್ರಕಃ ।
ಸಂಶೋಷಣೋ ನಾಮತಥಾಪಿ ಚಾಂತೇ ।
ಪ್ರೋಕ್ತಾಸ್ತ್ವವೈತೇ ನರಕಾಃ ಸುಕೇಶಿನ್ ॥

ಯಾವವೂ ಇಲ್ಲ. ಅವರಿಗೂ ದೇವತೆಗಳಂತೆ ನಿತ್ಯಾನಂದ, ನಿತ್ಯೋತ್ಸವ. ಅವರ ಧರ್ಮವು ಏಕಪ್ರಕಾರವಾದ ದಿವ್ಯ ಧರ್ಮವಾಗಿರುತ್ತದೆ. ಕಲ್ಪಾಂತ ಕಾಲದಲ್ಲಿ ಅವರಿಗೂ ಪ್ರಳಯವಾಗುತ್ತದೆ. ಘೋರವಾದ ಪುಷ್ಕರ ದ್ವೀಪದಲ್ಲಿ ವಾಸಿಸುವ ಜನರು ಪಿಶಾಚ ಧರ್ಮವನ್ನು ಆಚರಿಸುತ್ತಾರೆ. ಅವರವರ ಕರ್ಮಾನುಸಾರವಾಗಿ ಅವರಿಗೆ ಸುಖದುಃಖ ಹ್ರಾಸವಿನಾಶಗಳು ಬೆನ್ನುಹತ್ತಿರುತ್ತವೆ.

**ಸುಕೇಶಿ** - ಪೂಜ್ಯರೇ, ಪುಷ್ಕರ ದ್ವೀಪವು ನೀವು ಹೇಳಿದಂತೆ ಅಪವಿತ್ರವೂ, ಘೋರವೂ, ವಿನಾಶಕಾರಿಯೂ ಏಕೆ ಆಗಿದೆ?

**ಋಷಿಗಳು** - ಆ ದೈತ್ಯ ದ್ವೀಪದಲ್ಲಿ ರೌರವವೇ ಮೊದಲಾದ ಘೋರ ನರಕಗಳು ಇರುತ್ತವೆ. ಆದುದರಿಂದಲೇ ಪುಷ್ಕರ ದ್ವೀಪವು ನೋಡಲಿಕ್ಕೂ ಕೂಡ ಭಯಂಕರ ಎಂಬ ಅರ್ಥದಲ್ಲಿ ಘೋರ ದರ್ಶನ ಎಂದೂ ಕರೆಯಲ್ಪಟ್ಟಿದೆ.

**ಸುಕೇಶಿ** - ಆ ನರಕಗಳು ಎಷ್ಟು ವಿಧವಾಗಿವೆ? ಅವುಗಳ ಸ್ವರೂಪವೇನು? ಪ್ರಮಾಣವೇನು? ಮಾರ್ಗವಾವುದು?

**ಋಷಿಗಳು** - ರಾಕ್ಷಸ ಶ್ರೇಷ್ಠನೇ! ರೌರವಾದಿ ನರಕಗಳ ಸಂಖ್ಯೆ. ಸ್ವರೂಪ, ಪ್ರಮಾಣಾದಿಗಳನ್ನು ಹೇಳುತ್ತೇನೆ. ಕೇಳು-

''ನರಕಗಳಲ್ಲಿ ಮೊದಲನೆಯದಾದ ರೌರವವು ಎರಡು ಸಾವಿರ ಯೋಜನ ವಿಸ್ತಾರವಾಗಿದೆ. ಅದರಲ್ಲಿ ನಿಗಿ ನಿಗಿ ಕೆಂಡಗಳಿಂದ ಅಗ್ನಿಯು ಯಾವಾಗಲೂ ಕಿಚ್ಚಾಡುತ್ತದೆ. ಎರಡನೆಯದು ಮಹಾ ರೌರವ. ಇದು ಮೊದಲನೇಯದಕ್ಕಿಂತ ಎರಡು ಪಟ್ಟು ದೊಡ್ಡದು. ಇದರ ಕೆಳಗೆ ಬೆಂಕಿಯ ಬಣಿವೆಗಳೇ ದಗದಗಿಸುತ್ತಲಿದ್ದು ಅದರಿಂದ ಅಲ್ಲಿಯ ತಾಮ್ರದ ನೆಲಗಟ್ಟಣೆಯು ಯಾವಾಗಲೂ ಕಾಯ್ದು ಕೆಂಡವಾಗಿರುತ್ತದೆ. ಇದಕ್ಕಿಂತ ವಿಸ್ತಾರವಾದ ತಾಮಿಶ್ರ ಎಂಬ ಮೂರನೇ ನರಕವು ಅತ್ಯಂತ ಘೋರ ವಾಗಿರುತ್ತದೆ. ಹೀಗೆ ಮುಂದಿನ ಎಲ್ಲ ನರಕಗಳೂ ಒಂದಕ್ಕಿಂತ ಒಂದು ಘೋರವಾಗಿದ್ದು ಪಾಪಿಗಳ ಶಾಸನಕ್ಕಾಗಿ ದೇವರಿಂದ ನಿರ್ಮಿಸಲ್ಪಟ್ಟಿವೆ. ತಾಮಿಸ್ರದಂತೆ ಭೀಕರವಾದ ಅಂಧತಾಮಿಸ್ರ, ಕಾಲಸೂತ್ರ, ಅಪ್ರತಿಷ್ಠ ಘಟೀಯಂತ್ರ, ಅಸಿಪತ್ರವನ, ತಪ್ತಕುಂಭ, ಕೂಟಶಾಲ್ಮಲಿ, ಕರಪತ್ರ, ಶ್ವಾನಭೋಜನ, ಸಂದಂಶ, ಲೋಹ ಪಿಂಡ, ಕರಂಭಸಿಕತಾ, ಕ್ರಿಮಿಭೋಜನ, ಕ್ಷಾರನದಿ, ವೈತರಣೀ, ಶೋಣಿತಪೂಯ, ಸಂಶೋಷಣ, ಚಕ್ರಕ ಮುಂತಾಗಿ ಇಪ್ಪತ್ತೊಂದು ಬಗೆಯ ನರಕಗಳು ಆ ಪುಷ್ಕರದ್ವೀಪದಲ್ಲಿ ಇರುತ್ತವೆ.

ವಾಮನ ಮಹಾಪುರಾಣದಲ್ಲಿ ಧರ್ಮ-ಯಾವುದು ? - ಯಾರಿಗೆ ? ಹನ್ನೊಂದನೆಯ ಅಧ್ಯಾಯವು ಮುಗಿದುದು



## ನರಕಗಳ ವೈವಿಧ್ಯ

**ಅಧ್ಯಾಯ - ೧೨**

೨೪೧. ಕರ್ಮಣಾ ನರಕಾನೇತಾಂಸ್ತೇನ ಗಚ್ಛಂತಿ ವೈ ಕಥಂ ।
ಏತದ್ವದತ ವಿಪ್ರೇಂದ್ರಾಃ ಪರಂ ಕೌತೂಹಲಂ ಮಮ ॥

೨೪೨. ದೇವ ದೇವ ದ್ವಿಜಾತೀನಾಂ ಯೈರ್ನಿಂದಾ ಸತತಂ ಕಲಾ ।
ಯೇ ಪುರಾಣೇತಿಹಾಸಾರ್ಥಾನ್ನಾಭಿನಂದಂತಿ ಪಾಪಿನಃ ॥

೨೪೩. ಗುರುನಿಂದಾಕರಾ ಯೇ ಚ ಮುಖವಿಘ್ನ ಕರಾಶ್ಚಯೇ ।
ದಾತುರ್ನಿವಾರಕಾ ಯೇ ಚ ತೇಷು ತೇ ನಿಪತಂತಿ ಹಿ ॥

೨೪೪. ಸುಹೃದಂ ಪತಿಸೋದರ್ಯಸ್ವಾಮಿಭೃತ್ಯಪಿತಾ ಸುತೈಃ ।
ಯಾಜ್ಯಾಧ್ಯಾಪಕಯೋಶ್ಚೈವ ಕೃತೋ ಭೇದೋಥ ವೈರ್ಮಿಥಃ ॥

೨೪೫. ಕನ್ಯಾಮೇಕಸ್ಯ ದತ್ವಾ ಚ ದದತ್ಯನ್ಯಸ್ಯ ಯೇಽಧಮಾಃ ।
ಪರೋಪತಾಪಜನಕಾಶ್ಚಂದನೋ ಶಿರಹಾರಿಣಃ ॥

೨೪೬. ನಿಮಂತ್ರಿತೋಽನ್ಯತೋ ಭುಂಕ್ತೇ ಶ್ರಾದ್ಧೇ ದೈವೇಥ ಪೈತೃಕೇ ।
ಮರ್ಮಾಣಿ ಯಸ್ತು ಸಾಧೂನಾಂ ತುದನಾಗ್ನಿರ್ನಿಕೃಂತತಿ ॥

೨೪೭. ಯಃ ಕರೋತಿ ಚ ಪೈಶುನ್ಯಂ ಸಾಧೂನಾಮನ್ಯಥಾ ಮತಿಃ ।
ಪಿತೃ ಮಾತೃ ಗುರೂಣಾಂ ಚ ಯೇಽವಜ್ಞಾಂ ಚಕ್ರುರುದ್ಧತಾಃ ॥

೨೪೮. ದೇವತಾತಿಥಿ ಭೃತ್ಯೇಷು ಭೂತೇಷ್ವಭ್ಯಾಗತೇಷು ಚ ।
ಅಭುಕ್ತವತ್ಸು ಯೇಶ್ನಂತಿ ಬಾಲಪಿತ್ರಗ್ನಿ ಮಾತೃಷು ॥

೨೪೯. ದುಷ್ಪಾಸ್ಯಕ್ಪೂಯನಿರ್ಯಾಸಂ ಭುಂಜತೇ ತ್ವಧಮಾ ಇಮೇ ।
ಸೂಚೀಮುಖಾಶ್ಚ ಜಾಯಂತೇ ಕ್ಷುಧಾರ್ತಾ ಗಿರಿವಿಗ್ರಹಾಃ ॥

೨೫೦. ಏಕಪಂಕ್ತ್ಯುಪವಿಷ್ಟಾನಾಂ ವಿಷಮಂ ಭೋಜಯಂತಿ ಯೇ ।
ಏಕ ಸಾರ್ಥಪ್ರಯಾತಾಶ್ಚ ಪಶ್ಯಾಂತಶ್ಚಾರ್ಥಿನಂ ನರಾಃ ॥
ಅಸಂವಿಭಜ್ಯ ಭುಂಜಂತಿ ತೇ ಯಾಂತಿ ಶ್ಲೇಷ್ಮಭೋಜನಂ ॥

೨೫೧. ಗೋಬ್ರಾಹ್ಮಣಾಗ್ನಯಃ ಸ್ಪೃಷ್ಟಾ ಯೈರುಚ್ಛಿಷ್ಟೈಶ್ಚ ಕಾಮತಃ ।
ಸೂರ್ಯೇಂದು ತಾರಕ ದಷ್ಟಾಯೈರುಚ್ಛಿಷ್ಟೈಶ್ಚ ಕಾಮತಃ ॥

೨೫೨. ಮಿತ್ರಜಾಯಾಥಾ ಜನನೀ ಜೇಷ್ಠೋ ಭ್ರಾತಾ ಪಿತಾ ಸ್ವಸಾ ।
ಜಾಮಯೋ ಗುರುವೋ ವೃದ್ಧಾ ಯೈ ಸಂಸ್ಪೃಷಾಃ ಪದಾ ನೃಭಿಃ ॥

೨೫೩. ಬಧ್ವಾಂಘ್ರಿತಸ್ತೆ ನಿಗಡೈರ್ಲೋಹೈರ್ವಹ್ನಿ ತಾಪಿತೈಃ ।
ಪಾಯಸಂ ಕೃಸರಂಮಾಂಸಂ ದೃಥಾ ಭುಕ್ತಾನಿ ಯೈರ್ನರೈ : ।

೨೫೪. ಗುರು ದೇವ ದ್ವಿಜಾತೀನಾಂ ವೇದನಾಂ ಚ ನರಾಧಮೈಃ ।
ನಿಂದಾನಿಶಲ ಶ್ರುತಾ ಯೈಸ್ತು ಪಾಪನಾಮಭಿ ಕುರ್ವತಾಂ ॥
ತೇಷಾಂ ಲೋಹಮಯಾಃ ಕೀಲಾ ವಹ್ನಿವರ್ಣಾಃ ಪುನಃ ಪುನಃ

**ಸುಕೇಶಿ** - ಈ ಇಪ್ಪತ್ತೊಂದು ಬಗೆಯ ನರಕಗಳಿಗೆ ಜೀವಿಗಳು ಏಕೆ ಹೋಗುತ್ತಾರೆ? ಇಂಥ ದಾರುಣವಾದ ನರಕಗಳಿಗೆ ನರರನ್ನು ನೂಕುವ ನೀಚ ಕರ್ಮಗಳು ಯಾವುವು?

**ಋಷಿಗಳು** - ಶಾನ ಕಟಂಕಟ ಎಂಬ ಅಡ್ಡ ಹೆಸರುಳ್ಳ ಸುಕೇಶಿ ದಾನವನೇ! ಯಾವ ಯಾವ ದುಷ್ಕರ್ಮಗಳಿಂದ ಎಂಥ ಎಂಥ ನರಕಗಳೂ ಪ್ರಾಪ್ತವಾಗುತ್ತವೆ ಎಂಬುದನ್ನು ಹೇಳುತ್ತೇವೆ, ಕೇಳು-

''ಸಾಮಾನ್ಯವಾಗಿ ದೇವರಿಲ್ಲ, ಧರ್ಮವಿಲ್ಲ ಎಂದು ಹೇಳುವ ನಾಸ್ತಿಕರು, ಬ್ರಹ್ಮ ದ್ವೇಷಿಗಳೂ, ವೇದ ಪುರಾಣ ಶಾಸ್ತ್ರಗಳನ್ನು ಬೈಯ್ಯುವವರೂ, ಗುರುಗಳನ್ನು ನಿಂದಿಸುವವರೂ, ಯಜ್ಞಗಳಿಗೆ ವಿಘ್ನ ಒಡ್ಡುವವರೂ, ದಾನ ಕೊಡುವವನನ್ನು ತಡೆದು ನಿಲ್ಲಿಸುವವರೂ, ದೇವರನ್ನು ನಿಂದಿಸುವವರೂ ಈ ಭೀಕರ ನರಕಗಳಲ್ಲಿ ಬಿದ್ದು ಕೊಳೆಯುವರು. ಗೆಳೆಯಂದಿರಲ್ಲಿ, ದಂಪತಿಗಳಲ್ಲಿ, ಅಣ್ಣ ತಮ್ಮಂದಿರಲ್ಲಿ, ಯಜಮಾನ-ಸೇವಕರಲ್ಲಿ ಯಜಮಾನ-ಯಾಜ್ಞಿಕರಲ್ಲಿ, ಗುರು-ಶಿಷ್ಯರಲ್ಲಿ, ಗುರು-ಗುರುಗಳಲ್ಲಿ ಭೇದ ಬುದ್ಧಿ ಯನ್ನು ಉಂಟು ಮಾಡಿ ಕಲಹಕ್ಕೆ ಕಾರಣರಾದವರನ್ನು ಯಮದೂತರು ಈ ನರಕಕ್ಕೆ ತಂದು ಅವರ ನಡುನೆತ್ತಿಯನ್ನು ಸೀಳಿ ಹಾಕುತ್ತಾರೆ ಮತ್ತು ಕನ್ಯೆಯನ್ನು ಒಬ್ಬನಿಗೆ ವಾಗ್ದಾನ ಕೊಟ್ಟು ಅನಂತರ ದುಡ್ಡಿನ ಆಸೆಗೆ ಬೇರೆಯವರಿಗೆ ಕೊಟ್ಟರೆ ಅವರಿಗೂ ಇದೇ ದುರ್ಗತಿ. ವ್ಯರ್ಥವಾಗಿ ಜನರಿಗೆ ತಾಪ

ಕೊಡುವ ಮತ್ತು ಉಪಯುಕ್ತ ವಸ್ತುಗಳನ್ನು ಕಳವು ಮಾಡುವ ಮತ್ತು ಬಾಲಕರನ್ನು ಅಪಹರಿಸುವ ಕದೀಮರನ್ನೂ ಕರಂಭಸಿ- ಕತಾ ಎಂಬ ನರಕದಲ್ಲಿ ಹಾಕಿ ಘೋರಶಿಕ್ಷೆಯನ್ನು ವಿಧಿಸುತ್ತಾರೆ. ಶ್ರಾದ್ಧ ಅಥವಾ ದೇವತಾಕಾರ್ಯದಲ್ಲಿ ಒಂದೆಡೆ ಆಮಂತ್ರಣ ತೆಗೆದುಕೊಂಡು ಬೇರೆಡೆ ಊಟ ಮಾಡುವವರು, ಸಜ್ಜನರನ್ನು ಬಿರುನುಡಿಗಳಿಂದ ನೋಯಿಸುವವರು ಮತ್ತು ಸಾಧುಜನರ ವಿಷಯದಲ್ಲಿ ಚಾಡಿ ಹೇಳುವವರೂ, ಈ ನಾಟಕೀಯ ಪ್ರಪಂಚದಲ್ಲಿ ದೈತ್ಯ ಪಕ್ಷಿಗಳ ವಜ್ರ ಸಮಾನವಾದ ಕೊಕ್ಕುಗಳಿಂದ ಕುಕ್ಕಲ್ಪಟ್ಟವರಾಗಿ ವಿಚಿತ್ರವಾದ ಹಿಂಸೆಯನ್ನು ಅನುಭವಿಸಬೇಕಾಗುತ್ತದೆ.

ಇದರಂತೆ ತಂದೆ-ತಾಯಿ, ಗುರು-ಹಿರಿಯರಿಗೆ ಅನಾದರಿಸುವವರನ್ನೂ, ನೈವೇದ್ಯ ವೈಶ್ವ ದೇವ ಅತಿಥಿ ತಾಯಿ-ತಂದೆ ಚಿಕ್ಕಮಕ್ಕಳು ಇವರಿಗಿಂತ ಮೊದಲು ಊಟ ಮಾಡುವವರನ್ನೂ, ಪಂಕ್ತಿ ಭೇದ ಮಾಡುವವರನ್ನೂ, ಅಶುಚಿಯಾಗಿದ್ದಾಗ ಪುಣ್ಯಕಾರ್ಯ ಮಾಡುವವರನ್ನೂ, ಹಿರಿಯರನ್ನು ಕಾಲಿನಿಂದ ಮುಟ್ಟುವವರನ್ನೂ, ಮಧ್ಯ ಮಾಂಸ ಸೇವಿಸುವವರನ್ನೂ, ಗುರುದೇವತಾ ಬ್ರಾಹ್ಮಣರ ನಿಂದೆಯನ್ನು ಕೇಳುವವರನ್ನೂ ಮತ್ತು ಅರವಟ್ಟಿಗೆ ದೇವಸ್ಥಾನ, ಉದ್ಯಾನ ಸಭೆ, ಮಠ, ಕೆರೆ-ಬಾವಿ ಮುಂತಾದ ಲೋಕೋಪಯುಕ್ತ ವಸ್ತುಗಳನ್ನು ಒಡೆದು ಕೆಡವಿ ಹಾಳು ಮಾಡುವವರನ್ನೂ ಹಾಗೂ ಆಪತ್ ಕಾಲದಲ್ಲಿ, ದುರ್ಭಿಕ್ಷೆ ಕಾಲದಲ್ಲಿ ಹೆಂಡತಿ-ಮಕ್ಕಳು, ಸೇವಕರನ್ನು ಬಿಟ್ಟು ಓಡಿ ಹೋಗುವವರನ್ನೂ ಈ ನರಕ ಯಾತನೆಗೆ ಗುರಿಪಡಿಸುವರು.

ವಿಶ್ವಾಸದಿಂದ ತಂದಿಟ್ಟ ವಸ್ತುಗಳನ್ನು ತಿರುಗಿ ಕೊಡದವರನ್ನೂ, ಮೈನೆರೆಯದ ಕನ್ನಿಕೆಯರೊಡನೆ ಸಂಭೋಗ ಮಾಡುವವರನ್ನೂ, ಪರಸ್ಪರ ಸತ್ಕಾರ ಅಥವಾ ಆಮಂತ್ರಣದ ಕರಾರಿನಿಂದ ಶ್ರಾದ್ಧ ಭೋಜನ ಮಾಡಿ ಮಾಡಿಸುವವರನ್ನೂ, ಸ್ತ್ರೀಯರ ಹೆಸರಿಗೆ ಕಳಂಕ ಹಚ್ಚುವವರನ್ನೂ, ಗರ್ಭಪಾತ ಮಾಡಿಸುವವರನ್ನೂ, ಹಸುಗಳ ಮಾರಾಟ ಮಾಡುವವರನ್ನೂ, ವೇದ ಶಾಸ್ತ್ರಗಳನ್ನು ಹಣ ತೆಗೆದುಕೊಂಡು ಉಪದೇಶ ಮಾಡುವವರನ್ನೂ, ಸುಳ್ಳು ಸಾಕ್ಷಿ ಹೇಳುವವರನ್ನೂ, ನಿತ್ಯ ನೈಮಿತ್ತಿಕ ಕರ್ಮಗಳನ್ನೂ ತೊರೆದು ವ್ರಾತ್ಯರಾದವರನ್ನೂ ಯಮದೂತರು ಇದ್ದಲ್ಲಿಂದ ಎಳೆದುತಂದು ಈ ಮಹಾ ರೌರವ ನರಕದಲ್ಲಿ ಹಾಕಿ ಶಿಕ್ಷಿಸುವರು. ಇಂಥ ಮಹಾಪಾಪಿಗಳು ರೌರವ ಮತ್ತು ಮಹಾ ರೌರವ ನರಕಗಳಲ್ಲಿ ಹತ್ತು ಸಾವಿರ ವರ್ಷ ಯಮಯಾತನೆಯನ್ನು ಅನುಭವಿಸಿ ಅನಂತರ ತಾಮಿಸ್ರ, ಅಸಿಪತ್ರವನ, ಘಟೀಯಂತ್ರ, ತಪ್ತಕುಂಭ ಮುಂತಾದ ನಾನಾ ವಿಧವಾದ ನರಕಗಳಲ್ಲಿ ಬಿದ್ದು ಬೇಯುವರು. ಬೆಂದು ಒದ್ದಾಡುವರು.

ಈ ಎಲ್ಲ ಪಾಪಗಳಲ್ಲಿ ಅತಿಘೋರಪಾಪವೆಂದರೆಕೃತಘ್ನತೆ. ಉಳಿದಪಾಪಗಳೆಲ್ಲವೂ ಹಲಕೆಲವುನರಕಯಾತನೆಗಳನ್ನು ಅನುಭವಿಸಿದ ಬಳಿಕಪರಿಹಾರವಾಗುತ್ತವೆ. ಆದರೆ ಮಾಡಿದ್ದನ್ನು ಮರೆತು, ಉಪಕಾರಿಯಾದವನಿಗೆಪ್ರತಿಅಪಕಾರಮಾಡುವಕೃತಘ್ನನುಮಾತ್ರ ಈಇಪ್ಪತ್ತೊಂದುನರಕಗಳನ್ನು ಅನುಭವಿಸಿದಬಳಿಕವೂಪಾಪಮುಕ್ತನಾಗಲಾರನು.

ದೇವತೆಗಳಲ್ಲಿ ನಾರಾಯಣನುಶ್ರೇಷ್ಠ. ಅದರಂತೆಪರ್ವತಗಳಲ್ಲಿ ಹಿಮಾಲಯ. ಆಯುಧಗಳಲ್ಲಿ ಸುದರ್ಶನ, ಪಕ್ಷಿಗಳಲ್ಲಿ ಗರುಡ, ನದಿಗಳಲ್ಲಿ ಗಂಗೆ, ಹೂಗಳಲ್ಲಿ ಕಮಲ, ಸರೋವರಗಳಲ್ಲಿ ಮಾನಸ, ವನಗಳಲ್ಲಿ ನಂದನ, ಲೋಕಗಳಲ್ಲಿ ಸತ್ಯಲೋಕ, ಯಜ್ಞಗಳಲ್ಲಿ

ಅಶ್ವಮೇಧ, ತಪಸ್ವಿಗಳಲ್ಲಿ ಅಗಸ್ತ್ಯ, ಪುರಾಣಗಳಲ್ಲಿ ಮತ್ಸ್ಯಪುರಾಣ, ಸ್ಮೃತಿಗಳಲ್ಲಿ ಮನುಸ್ಮೃತಿ, ದೇವತೆಗಳಲ್ಲಿ ಇಂದ್ರ, ನಕ್ಷತ್ರಗಳಲ್ಲಿ ಚಂದ್ರ, ಗ್ರಹಗಳಲ್ಲಿ ಸೂರ್ಯ, ಜಲಾಶಯಗಳಲ್ಲಿ ಸಮುದ್ರ, ಧಾನ್ಯಗಳಲ್ಲಿ ಭತ್ತ, ಮನುಷ್ಯರಲ್ಲಿ ಬ್ರಾಹ್ಮಣ, ಪಶುಗಳಲ್ಲಿ ಹಸು, ಮೃಗಗಳಲ್ಲಿ ಸಿಂಹ, ಹೂಗಳಲ್ಲಿ ಜಾತೀಕುಸುಮ, ನಗರಗಳಲ್ಲಿ ಕುಬೇರಪಟ್ಟಣ, ನಾರಿಯರಲ್ಲಿ ರಂಭೆ, ಆಶ್ರಮಗಳಲ್ಲಿ ಗೃಹಸ್ಥಾಶ್ರಮ, ಫಲಗಳಲ್ಲಿ ಮಾವಿನಹಣ್ಣು, ಬೇನೆಗಳಲ್ಲಿ ಅಜೀರ್ಣ, ಕಲೆಗಳಲ್ಲಿ ಗಣಿತ, ರಸಗಳಲ್ಲಿ ಲವಣ, ಮರಗಳಲ್ಲಿ ಆಲದಮರ, ಪತಿವ್ರತೆಯರಲ್ಲಿ ಪಾರ್ವತಿ, ಜ್ಞಾನಿಗಳಲ್ಲಿ ಶಿವನು ಎಲ್ಲರಿಗಿಂತ ಹೇಗೆ ಸರ್ವಶ್ರೇಷ್ಠರೋ ಅದರಂತೆ ಎಲ್ಲ ಪಾಪಗಳಲ್ಲಿ ಕೃತಘ್ನತೆಯು ಅತ್ಯಂತ ಘೋರವಾದ ಹೆಚ್ಚಿನದಾದ ಮಹಾಪಾಪವು ಆಗಿರುತ್ತದೆ. ಅದಕ್ಕೆ ಯಾವ ಪ್ರಾಯಶ್ಚಿತ್ತವೂ ಇಲ್ಲ.

ವಾಮನ ಮಹಾಪುರಾಣದಲ್ಲಿ ನರಕಗಳ ವೈವಿಧ್ಯ ಎಂಬ ಹನ್ನೆರಡನೇಯ ಅಧ್ಯಾಯವು ಮುಗಿದುದು



## ಜಂಬೂದ್ವೀಪದ ಪರ್ವತ ಹಾಗೂ ನದಿಗಳು | ಅಧ್ಯಾಯ - ೧೩

**ಸುಕೇಶ** - ಋಷಿ ಋಷಭರೇ! ಘೋರವಾದ ಪುಷ್ಕರ ದ್ವೀಪದ ಸ್ಥಿತಿಗತಿಗಳನ್ನು ನನಗೆ ಈವರೆಗೆ ಅರುಹಿದಿರಿ. ಈಗ ನಾವಿದ್ದ ಈ ಜಂಬೂ ದ್ವೀಪದ ಸಮಾಚಾರವನ್ನು ನನಗೆ ತಿಳಿಸಬೇಕು.

**ಋಷಿಗಳು** - ರಾಕ್ಷಸೇಶ್ವರನೇ! ಈ ಜಂಬೂದ್ವೀಪವು ಅತ್ಯಂತ ವಿಸ್ತಾರವಾಗಿದೆ. ಈ ವಿಸ್ತರದ ಭೂಖಂಡದಲ್ಲಿ ನೆಲೆಸಿದವರು ಸರಿಯಾಗಿ ಸಾಧನ ಮಾಡಿಕೊಂಡರೆ ಸ್ವರ್ಗವನ್ನಾದರೂ ಸೇರಬಹುದು, ಮೋಕ್ಷವನ್ನಾದರೂ ಪಡೆಯಬಹುದು. ಇಂಥ ಈ ಜಂಬೂದ್ವೀಪವು ಒಂಭತ್ತು ಬಗೆಯಾಗಿ ವಿಂಗಡಿಸಲ್ಪಟ್ಟಿದೆ. ಇದರ ನಟ್ಟ ನಡುವಿನ ಪ್ರದೇಶವು ಇಲಾವೃತ ವರ್ಷ. ಪೂರ್ವ ಭಾಗದಲ್ಲಿ ಭದ್ರಾಶ್ವ ವರ್ಷ. ಆಗ್ನೇಯಕ್ಕೆ ಹಿರಣ್ಮಾನ ವರ್ಷ. ದಕ್ಷಿಣ ದಿಕ್ಕಿನಲ್ಲಿ ಭಾರತ ವರ್ಷ. ನೈಋತ್ಯದಲ್ಲಿ ಹರಿ ವರ್ಷ. ಪಶ್ಚಿಮಕ್ಕೆ ಕೇತುಮಾಲವರ್ಷ. ವಾಯುವ್ಯ ದಿಕ್ಕಿನಲ್ಲಿ ಚಂಪಕ ವರ್ಷ, ಉತ್ತರದಲ್ಲಿ ಕುರುವರ್ಷ. ಈಶಾನ್ಯದಲ್ಲಿ ಕಿಂಪುರುಷ ವರ್ಷ. ಹೀಗೆ ಈ ಜಂಬೂ ದ್ವೀಪದಲ್ಲಿ ನವದ್ವೀಪಗಳು ಇರುತ್ತವೆ. ಇವುಗಳಲ್ಲಿ ಭಾರತ ವರ್ಷವನ್ನು ಬಿಟ್ಟು ಉಳಿದ ಇಲಾವೃತವೇ ಮೊದಲಾದ ಎಂಟು ವರ್ಷಗಳಲ್ಲಿ (ಭೂಖಂಡಗಳಲ್ಲಿ) ವಾಸಿಸುವವರಿಗೆ ಯುಗವೈಷಮ್ಯದಿಂದ ಉಂಟಾಗುವ ಅವಸ್ಥಾ ಪರಿವೃತ್ತಿ ವಿಶೇಷಗಳಾವವೂ ಇರುವದಿಲ್ಲ. ಅಲ್ಲಿದ್ದ ಜನರಿಗೆ ಮುಪ್ಪು ಇಲ್ಲ. ಮರಣ ಇಲ್ಲ. ಬಯಸಿದ ಸಿದ್ಧಿಗಳೆಲ್ಲವೂ ಅವರಿಗೆ ಸ್ವಾಭಾವಿಕವಾಗಿ ಕರಗತವಾಗಿರುತ್ತವೆ. ಪ್ರಯತ್ನವಿಲ್ಲದೆ ಅವರಿಗೆ ಸುಖ ಪ್ರಾಪ್ತಿ.

ರಾಕ್ಷಸೇಶ್ವರನೇ ಈ ನಮ್ಮ ಭಾರತವರ್ಷವೂ ನವದ್ವೀಪಗಳಿಂದ ಒಡಗೂಡಿದೆ. ಇಂದ್ರದ್ವೀಪ, ಕಶೇರೂಣ, ತಾಮ್ರವರ್ಷ ಗಭಸ್ತಿಮಾನ್, ನಾಗದ್ವೀಪ, ಕಟಾಹದ್ವೀಪ, ಸಿಂಹಳದ್ವೀಪ, ವಾರುಣದ್ವೀಪ ಮತ್ತು ಕುಮಾರದ್ವೀಪ ಎಂಬ ಆ ಒಂಭತ್ತು ದ್ವೀಪಗಳೂ ಸಮುದ್ರದಿಂದ ಸುತ್ತುವರಿಯಲ್ಪಟ್ಟಿದ್ದು ಒಂದರಿಂದ ಮತ್ತೊಂದಕ್ಕೆ ಸಂಚರಿಸುವದು ಅವಶ್ಯಕವಾಗಿರುತ್ತದೆ. ಈಗ ನಾನು ನೀವು ಇರುವ ಈ ದ್ವೀಪವೇ ಕುಮಾರ ದ್ವೀಪವಾಗಿದೆ.

ಈ ಕುಮಾರದ್ವೀಪದ ಪೂರ್ವಭಾಗದಲ್ಲಿ ಕಿರಾತರು, ಪಶ್ಚಿಮದಲ್ಲಿ ಯವನರು, ದಕ್ಷಿಣದಲ್ಲಿ ಆಂಧ್ರರು, ಉತ್ತರದಲ್ಲಿ ತುರುಕರು ನೆಲೆಸಿದ್ದಾರೆ. ಈ ದ್ವೀಪದ ನಡುನಾಡಿನಲ್ಲಿ ಬ್ರಾಹ್ಮಣ, ಕ್ಷತ್ರಿಯ, ಶೂದ್ರ, ವೈಶ್ಯ ಮುಂತಾದವರು ನೆಲೆಸಿದ್ದಾರೆ. ಈ ದ್ವೀಪದ ಮಧ್ಯಭಾಗದಲ್ಲಿ ಮಲಯ, ಮಹೇಂದ್ರ, ಸಹ್ಯಾದ್ರಿ, ಶಕ್ತಿಮಾನ್, ಋಕ್ಷಪರ್ವತ, ವಿಂಧ್ಯ, ಪಾರಿಯಾತ್ರ ಎಂಬ ಏಳು ಕುಲಪರ್ವತಗಳು ಇರುತ್ತವೆ. ಮತ್ತು ಇದರಂತೆ ಎತ್ತರ ಬಿತ್ತರದಿಂದ ರಮ್ಯಾಗಮ್ಯವಾದ ಅನೇಕಾನೇಕ ಸಾನುಕಾನು ಶೈಲ ಶ್ರೇಣಿಗಳಿಂದ ಒಡಗೂಡಿದ ವೈಭ್ರಾಜ, ಮಂದರ ದರ್ದುರಾಚಲ, ವಾತಧೂಮ, ವೈದ್ಯುತ, ಮೈನಾಕ, ಸರಸ, ತುಂಗಪ್ರಸ್ಥ, ನಾಗಗಿರಿ, ಗೋವರ್ಧನ ಉಜ್ಜಯಂತ, ಪುಷ್ಪಗಿರಿ, ಅರ್ಬುದ, ರೈವತ, ಋಷ್ಯಮೂಕ, ಗೋಮಂತ, ಚಿತ್ರಕೂಟ, ಶ್ರೀಪರ್ವತ, ಕೊಂಕಣಕ, ಇವೇ ಮೊದಲಾದ ಸಾವಿರಾರು ಪರ್ವತಗಳು ಇರುತ್ತವೆ. ಇವುಗಳಿಂದ ಕೂಡಿದ ದೇಶಗಳು ಮ್ಲೇಂಛದೇಶ, ಆರ್ಯದೇಶ ಎಂದು ವಿಭಾಗಿಸಲ್ಪಟ್ಟಿವೆ.

ದೇಶದ ಜನರ ಸ್ನಾನಪಾನಕ್ಕಾಗಿ ತುಂಬಿ ಹರಿಯುವ ವಿಶಿಷ್ಟ ನದಿಗಳಲ್ಲಿ ಕೆಲವನ್ನು ಹೇಳುತ್ತೇನೆ ಕೇಳಿ. ಹಿಮಾಲಯ ಪರ್ವತದಿಂದ ಸರಸ್ವತೀ, ಕಾಲಿಂದೀ, ಹಿರಣ್ವತೀ, ಶತದ್ರು, ಚಂದ್ರಿಕಾ, ನೀಲಾ, ವಿತಸ್ತಾ, ಇರಾವತೀ, ಧಾತಕೀ, ಗೋಮತೀ ಧೂತಪಾಪಾ, ಬಾಹುದಾ, ದೃಷದ್ವತೀ, ಗಂಡಕೀ, ಚಿತ್ರಾ, ಕೌಶಿಕೀ, ಸರಯೂ ಮುಂತಾದ ಅನೇಕ ನದಿಗಳು ಹೊಮ್ಮಿ ಹರಿದಿರುತ್ತವೆ. ಇದರಂತೆ ಪಾರಿಯಾತ್ರ ಪರ್ವತದಿಂದ ವೇದಸ್ಮೃತಿ, ಸಿಂಧು, ನಂದಿನೀ, ಪಾವನೀ, ಶರಾವತೀ, ಚರ್ಮಣ್ವತೀ, ವಿದಿಶಾ, ನರ್ಮದಾ, ಶೋಣಾ, ಮಂದಾಕಿನೀ, ಚಿತ್ರಕೂಟ, ತಮಸಾ, ಕರತೋಯಾ, ವಿಪಾಶಾ, ಮುಂತಾದ ಎಷ್ಟೋ ನದಿಗಳು ಹರಿದು ಕಾಡು ನಾಡುಗಳನ್ನು ಪಾವನಗೊಳಿಸುತ್ತವೆ. ವಿಂಧ್ಯ ಪರ್ವತ ಹಾಗೂ ಅದರ ಪರಿವಾರ ಪರ್ವತಗಳಿಂದ ಪಯೋಷ್ಣೀ ನಿರ್ವಿಂಧ್ಯಾ, ತಾಪೀ, ವೇಣಾ, ವೈತರಣೀ, ಕುಮುದ್ವತೀ ರೇವಾ, ವಾಕಿಲಾ ಮುಂತಾದ ಪುಣ್ಯ ಪಯಸ್ವಿನಿಗಳು ಪ್ರವಹಿಸುತ್ತವೆ. ಸಹ್ಯಾದ್ರಿ ಪರ್ವತದಿಂದ ಗೋದಾವರೀ, ಭೀಮರಥೀ, ಕೃಷ್ಣವೇಣೀ, ಕಾವೇರೀ ನಲಿನೀ, ದುಗ್ಧೋದಾ ಮುಂತಾದ ನದಿಗಳು ಹುಟ್ಟಿ ಹರಿಯುತ್ತವೆ. ಶಕ್ತಿಪರ್ವತದಿಂದ ಕೃತಮಾಲಾ, ತಾಮ್ರಪರ್ಣೀ, ವಂಜುಲಾ, ಸುದಾಮ ಮುಂತಾದ ನದಿಗಳು ಉದ್ಭವಿಸಿ ಹರಿಯುತ್ತಲಿವೆ.

ಈ ನದಿಗಳೆಲ್ಲವೂ ಪುಣ್ಯದಾಯಕವೂ ಪಾಪಪರಿಹಾರಕವೂ ಆಗಿದೆ. ಇವು ಅನೇಕ ಕೆರೆ, ಕಾಲುವೆಗಳಿಗೆ ಸೆಲೆ ನೆಲೆಯಾಗಿದ್ದು ಜನ ಜನಾವರಗಳಿಗೆ ತಾಯಿಯಂತೆ ಪೋಷಕವಾಗಿವೆ. ಈ ಎಲ್ಲ ನದಿಗಳು ಸಮುದ್ರನಾಥನ ಮಡದಿಯರು. ಇವಲ್ಲದೆ ಅನೇಕ ಸಾವಿರಾರು ಕ್ಷುದ್ರ ನದಿಗಳೂ ಉಂಟು. ಅವುಗಳಲ್ಲಿ ಕೆಲವು ಸರ್ವಕಾಲದಲ್ಲಿಯೂ ತುಂಬಿ ಹರಿಯುತ್ತಿದ್ದರೆ ಹಲವು ಮಳೆಗಾಲದಲ್ಲಿ ಮಾತ್ರ ನೀರು ತುಂಬಿ ಪ್ರವಹಿಸುತ್ತವೆ.

ಈ ಕುಮಾರ ದ್ವೀಪದ ಮಧ್ಯಭಾಗದಲ್ಲಿ ಇರುವ ದೇಶಗಳು ಮತ್ತು ಜಾತಿಗಳು ಇಂತಿವೆ. ಕುಶೂದ್ರ, ಕುಂಡಲ, ಪಾಂಚಾಲಕ, ಕೌಶಿಕ, ಶಕ, ಕೌರವ, ಕಲಿಂಗ, ವಂಶ, ಅಂಗ ಈ ಹೆಸರುಗಳು ಆ ದೇಶಗಳಿಗೂ ಅಲ್ಲಿ ವಾಸಿಸುವ ಜಾತಿ ಗಳಿಗೂ ವಾಚಕವಾಗಿರುತ್ತವೆ. ಇದರಂತೆ ಕಾಂಭೋಜ, ದರದ, ಬರ್ಬರ, ಆತ್ರೇಯ, ಭಾರದ್ವಾಜ, ಕಶೇರಕ, ಲಂಪಕ, ತಂಗಣ, ಚೂಡಿಕ, ಆಲಿಭದ್ರ, ಮುಂತಾದ ಕೆಲವು ಕಿರಾತ ಜಾತಿಗಳೂ

ತಾಮಸ, ಸುಪಾರ್ಶ್ವ, ಕುಕ್ಕುಟ, ಪಾಣವೀಯ ಮುಂತಾದ ನಾನಾ ಜಾತಿಯ ಜನರೂ ಉತ್ತರ ದಿಕ್ಕಿನಲ್ಲಿ ವಾಸವಾಗಿದ್ದಾರೆ. ಈ ದ್ವೀಪದ ಪೂರ್ವ ದಿಕ್ಕಿನಲ್ಲಿ ಅಂಗ ವಂಗ ಭಾರ್ಗವ ಪ್ರಾಗ್ಜ್ಯೋತಿಷ ವಿಧೆಯಮಘದ ಮುಂತಾದ ರಾಷ್ಟ್ರಗಳೂ, ದಕ್ಷಿಣಕ್ಕೆ ವೈದರ್ಭ ದಂಡಕ ಅಶ್ಮಕ ಕುಂದಲ ಮುಂತಾದ ರಾಷ್ಟ್ರಗಳೂ, ಪಶ್ಚಿಮದಲ್ಲಿ ಶೂರ್ಪಾರಕ, ಅಶಿನೀಲ, ವಾರಿದಾನ, ಸಾರಸ್ವತ, ದಾರುಕಚ್ಛ, ಅವಂತಿ, ಅರ್ಬುದ ಮುಂತಾದ ದೇಶಗಳೂ ಉತ್ತರಕ್ಕೆ ಕಾರೂಷ ಉತ್ಕಲ, ದಶಾರ್ಣ, ತೋಶಲ, ಕೋಶಲ, ನೈಷಧ, ಅನೂಪ ಮುಂತಾದ ನಾಡುಗಳೂ ಇರುತ್ತವೆ. ಆ ದೇಶಗಳಲ್ಲಿ ಆಯಾ ಜಾತಿಯ ಹೆಸರಿನ ಜನರೂ ಇರುತ್ತಾರೆ. ದೊಡ್ಡ ದೊಡ್ಡ ಪರ್ವತಗಳ ತಪ್ಪಲ ಪ್ರದೇಶದಲ್ಲಿಯೂ ಎಷ್ಟೋ ದೇಶಗಳು ಇರುತ್ತವೆ. ನಿರಾಹಾರ, ಹಂಸಮಾರ್ಗ, ಖಶ, ಕುಥಪ್ರಾವರಣ, ತ್ರಿಗರ್ತ, ಊರ್ಣಾಪುಷ್ಪ ತೋಮರ, ಶಶಿಖಾದ್ರಿಕ ಮುಂತಾದ ಅನೇಕ ದೇಶಗಳು ಪರ್ವತಗಳ ಅಂತರ ಪ್ರಾಂತ ಗಳಲ್ಲಿ ಇರುತ್ತವೆ. ಈ ಎಲ್ಲ ಕಾಡುನಾಡುಗಳಲ್ಲಿ ಪ್ರಚಲಿತವಿರುವ ದೇಶ ಧರ್ಮ ಜಾತಿ ಧರ್ಮಗಳನ್ನು ಮುಂದೆ ಹೇಳುತ್ತೇವೆ.

ವಾಮನ ಮಹಾಪುರಾಣಜಂಬೂದ್ವೀಪದ ಪರ್ವತ ಹಾಗೂ ನದಿಗಳು ಎಂಬ ಹದಿಮೂರನೇಯ ಅಧ್ಯಾಯವು ಮುಗಿದುದು

—o—

## ಶುದ್ಧಿ - ಅಶುದ್ಧಿಗಳು

## ಅಧ್ಯಾಯ - ೧೪

**ಋಷಿಗಳು** : ದೈತ್ಯ ಧುರೀಣನೇ, ಧರ್ಮವು ಎರಡು ವಿಧ. ಸಾಮಾನ್ಯ ಧರ್ಮ ವಿಶೇಷಧರ್ಮ, ಅಹಿಂಸೆ, ಸತ್ಯ, ಕಳವು ಮಾಡದಿರುವದು. ದಾನ ಕ್ಷಮೆ, ಇಂದ್ರಿಯ ನಿಗ್ರಹ, ಭಗವದ್ಭಕ್ತಿ, ಸಿಕ್ಕಷ್ಟರಲ್ಲಿ ಸಂತೋಷ, ಶುಚಿರ್ಭೂತತನ ಮತ್ತು ತಪಸ್ಸು, ಇವು ಹತ್ತು ಎಲ್ಲ ಜಾತಿ ಜನಾಂಗದವರಿಗೆ ಸಾಮಾನ್ಯ ಧರ್ಮಗಳಾಗಿರುತ್ತವೆ. ಬ್ರಹ್ಮಚರ್ಯಾದಿ ನಾಲ್ಕು ಆಶ್ರಮಗಳು ವ್ಯವಸ್ಥೆ ಮುಂತಾದವು ಬ್ರಾಹ್ಮಣರ ವಿಶೇಷ ಧರ್ಮಗಳಾಗಿರುತ್ತವೆ.

**ಸುಕೇಶಿ** : ತಪೋಧನರೇ, ಬ್ರಾಹ್ಮಣರ ವಿಶೇಷ ಧರ್ಮವಾದ ಆಶ್ರಮ ವಿಭಾಗವನ್ನು ನನಗೆ ತಿಳಿಸಿರಿ. ನಿಮ್ಮ ಬಾಯಿಂದ ಎಷ್ಟು ಕೇಳಿದರೂ ನನಗೆ ತೃಪ್ತಿ ಇಲ್ಲ.

**ಋಷಿಗಳು** : ಬ್ರಹ್ಮಚಾರಿಯಾದವನು ಮುಂಜಿ ಮಾಡಿಕೊಂಡು ಗುರುಗಳ ಮನೆಯಲ್ಲಿ ವಿನೀತನಾಗಿ ವಾಸ ಮಾಡಬೇಕು. ಅಂಥ ಬ್ರಹ್ಮಚಾರಿಯಾದವನ ಧರ್ಮಗಳನ್ನು ಹೇಳುತ್ತೇನೆ ಕೇಳು. ''ವೇದಾಧ್ಯಯನ, ಅಗ್ನಿಕಾರ್ಯ, ಸ್ನಾನ, ಮಧುಕರೀ ವೃತ್ತಿ ಆ ಮಧುಕರಿಯಲ್ಲಿ ಬಂದದ್ದನ್ನು ಗುರುಗಳಿಗೆ ಒಪ್ಪಿಸಿ ಅವರ ಅಪ್ಪಣೆಯಂತೆ ಊಟ ಮಾಡುವದು ಹಾಗೂ ಗುರುಗಳ ಸೇವೆ ಮತ್ತು ಅವರು ಹೇಳಿದ ವಿದ್ಯೆಯನ್ನು ಏಕಚಿತ್ತನಾಗಿ ಕಲಿಯುವುದು ಮೊದಲಾದವುಗಳು ಬ್ರಹ್ಮಚಾರಿಯ ಧರ್ಮಗಳಾಗಿರುತ್ತವೆ.

ಹೀಗೆ ಗುರುಕುಲದಲ್ಲಿ ಒಂದು ಎರಡು ಅಥವಾ ಮೂರು ವೇದದ ಶಾಖೆಗಳನ್ನು ಗುರುವಿನ ಮುಖದಿಂದ ಕೇಳಿ ತಿಳಿದುಕೊಂಡು ಪಂಡಿತನಾಗಬೇಕು. ಕೊನೆಗೆ ಅವರಿಂದ ಅಪ್ಪಣೆ ಪಡೆದುಕೊಂಡು ಅವರಿಗೆ ಗುರುದಕ್ಷಿಣೆಯನ್ನು ಕೊಟ್ಟು ಗೃಹಸ್ಥಾಶ್ರಮ ವನ್ನಾಗಲೀ ವಾನಪ್ರಸ್ಥಾಶ್ರಮವನ್ನಾಗಲೀ ಕೈಕೊಳ್ಳಬೇಕು. ಇಚ್ಛೆಯಿದ್ದರೆ ಸನ್ಯಾಸಿ ಆಶ್ರಮವನ್ನು ಕೂಡ ಸ್ವೀಕರಿಸಬಹುದು ಅಥವಾ ಕೊನೆಯವರೆಗೆ ಬ್ರಹ್ಮಚಾರಿಯಾಗಿಯೇ

ಎಲ್ಲಿಯಾದರೂ ಇರಬಹುದು. ಇಲ್ಲವೆ ಗುರುಗಳ ಮನೆಯಲ್ಲಿಯೇ ಇದ್ದರೆ ಗುರುಗಳನ್ನಾಗಲಿ ಅವರ ಮರಣದ ನಂತರ ಅವರ ಮಗನನ್ನಾಗಲಿ ಅವರ ಶಿಷ್ಯರನ್ನಾಗಲಿ ಸೇವೆ ಮಾಡುತ್ತ ಅವರ ಮನೆಯಲ್ಲಿಯೇ ಇರಬಹುದು. ಆದರೆ ಗುರುಗಳ ಮಗಳ ಸೇವೆಗೆಂದು ಅವಳ ಮನೆಯಲ್ಲಿ ಮಾತ್ರ ಎಂದೂ ಇರಕೂಡದು. ಹೀಗೆ ಗುರು ಮತ್ತು ತತ್ಸಂತಾನದ ಸತ್ಸೇವೆಯಿಂದ ಮಾನವನು ಸದ್ಗತಿಯನ್ನು ಹೊಂದುವನು.

ಗೃಹಸ್ಥಾಶ್ರಮಿಯಾಗಬೇಕೆನ್ನುವ ಬ್ರಹ್ಮಚಾರಿಗಳು ತಮ್ಮ ಅಧ್ಯಯನವು ಮುಗಿದ ಬಳಿಕ ಗುರುವಿನ ಅಪ್ಪಣೆ ಪಡೆದು ಮನೆಗೆ ಬಂದು ವಿವಾಹವನ್ನು ಮಾಡಿಕೊಳ್ಳಬೇಕು. ವಿವಾಹವಾಗುವ ಕನ್ನೆಯು ಭಿನ್ನ ಗೋತ್ರದ ಭಿನ್ನಪ್ರವರದ ಋಷಿವಂಶದವಳು ಇರಬೇಕು. ಹೀಗೆ ವಿವಾಹವಾಗಿ ವರ್ಣಾಶ್ರಮೋಚಿತವಾದ ಕರ್ಮಾನುಷ್ಠಾನದಿಂದಲೇ ಹಣವನ್ನು ಗಳಿಸಿ ಪಿತೃಕಾರ್ಯವನ್ನೂ, ದೇವತಾಕಾರ್ಯವನ್ನೂ, ಅತಿಥಿ ಸತ್ಕಾರವನ್ನೂ ಮಾಡಬೇಕು. ಸದಾಚಾರ ಸಂಪನ್ನನಾಗಿರಬೇಕು. ಶ್ರೀಹರಿಯಲ್ಲಿ ಭಕ್ತಿಯನ್ನು ಮಾಡಬೇಕು.

**ಸುಕೇಶಿ** : ಪೂಜ್ಯರೇ, ಗೃಹಸ್ಥನು ಸದಾಚಾರಿಯಾಗಿರಬೇಕು ಎಂದು ಹೇಳಿದಿರಲ್ಲವೇ ! ಆ ಸದಾಚಾರವೆಂದರೆ ಏನು ? ಅದರ ಲಕ್ಷಣವೇನು ? ಅದೆಲ್ಲವನ್ನೂ ಇಂದು ನನಗೆ ತಿಳಿಸಿ ಕೊಡಬೇಕು.

**ಋಷಿಗಳು** : ಗೃಹಸ್ಥನಾದವನು ಮುಖ್ಯವಾಗಿ ಆಚಾರವನ್ನು ಪರಿಪಾಲಿಸಬೇಕು. ಆಚಾರ ಹೀನನಾದವನಿಗೆ ಇಲ್ಲಿ ಸುಖವಿಲ್ಲ. ಮುಂದೆ ಸದ್ಗತಿ ಇಲ್ಲ. ತನ್ನ ವರ್ಣಾಶ್ರಮಗಳಿಗೆ ಉಚಿತವಾದ ಸದಾಚಾರವನ್ನು ಉಲ್ಲಂಘಿಸಿದ ಮಾನವನು ಯಜ್ಞ ಮಾಡಿದರೂ ವ್ಯರ್ಥ. ದಾನ ಮಾಡಿದರೂ ವ್ಯರ್ಥ, ತಪಸ್ಸು ಮಾಡಿದರೂ ವ್ಯರ್ಥ. ಈ ಸದಾಚಾರದ ಲಕ್ಷಣವನ್ನು ಹೇಳುತ್ತೇನೆ ಕೇಳು. ಸದಾಚಾರವು ಒಂದು ಮರವಿದ್ದಂತೆ. ಧರ್ಮವೇ ಅದರ ಬೊಡ್ಡೆ. ದ್ರವ್ಯವು ಅದರ ಟೊಂಗೆ. ಕಾಮವೇ ಹೂವು. ಮೋಕ್ಷವೇ ಅದರ ಹಣ್ಣು. ಇಂಥ ಸದಾಚಾರ ವೃಕ್ಷವನ್ನು ಸೇವಿಸಿದವರು ಅದರ ಪುಣ್ಯದ ಹಣ್ಣಾದ ಮೋಕ್ಷವನ್ನು ಪಡೆಯುತ್ತಾರೆ. ಬ್ರಾಹ್ಮ ಮುಹೂರ್ತ ಎನಿಸಿದ ಉಷಃಕಾಲದಲ್ಲಿ ಎದ್ದು ದೇವರನ್ನು ಸ್ಮರಿಸಬೇಕು. ಋಷಿಗಳನ್ನು ನೆನೆಯಬೇಕು. ಅನಂತರ ಮಹಾದೇವರು ಹೇಳಿದ ಮಂಗಳಕರವಾದ ಪ್ರಭಾತಗೀತವನ್ನು ಪಠಿಸಬೇಕು.

**ಸುಕೇಶಿ** :- ಮುನಿಗಳೇ, ಪೂಜ್ಯರಾದ ಮಹಾದೇವರು ಹೇಳಿದ ಆ ಸುಪ್ರಭಾತ ಗೀತವು ಯಾವದು?

**ಋಷಿಗಳು** : ರಾಕ್ಷಸೋತ್ತಮನೇ, ಶಂಕರನು ಹೇಳಿದ ಆ ಸುಪ್ರಭಾತ ಸ್ತೋತ್ರವನ್ನು ಕೇಳು. ಅದರ ಶ್ರವಣ ಸ್ಮರಣ ಪಠನಗಳಿಂದ ಮನುಷ್ಯರ ಎಲ್ಲ ಪಾಪಗಳು ತೊಳೆದು ಹೋಗುತ್ತವೆ.

**ಋಷಯ ಊಚುಃ**

೨೫೫. ಶ್ರೂಯತಾಂ ರಾಕ್ಷಸ ಶ್ರೇಷ್ಠ ಸುಪ್ರಭಾತಂ ಹರೋದಿತಂ ।
ಶೃತ್ವಾ ಸ್ಮೃತ್ವಾ ಪಠಿತ್ವಾಚ ಸರ್ವಪಾಪೈಃ ಪ್ರಮುಚ್ಯತೇ ॥

೨೫೬. ಬ್ರಹ್ಮಾ ಮುರಾರಿಸ್ತ್ರಿಪುರಾಂತಕಾರೀ
ಭಾನುಃ ಶಶೀ ಭೂಮಿಸುತೋ ಬುಧಶ್ಚ ।
ಗುರುಶ್ಚ ಶುಕ್ರಃಸಹ ಭಾನುಜೇನ
ಕುರ್ವಂತು ಸರ್ವೇ ಮಮ ಸುಪ್ರಭಾತಂ ॥

೨೫೭. ಭೃಗುರ್ವಸಿಷ್ಠಃ ಕ್ರತುರಂಗಿರಾಶ್ಚ
ಮುನಿಃ ಪುಲಸ್ತ್ಯಃ ಪುಲಹಃ ಸಗೌತಮಃ ।
ರೈಭ್ಯೋ ಮರೀಚಿಶ್ಚ್ಯವನೋ ಋಬುಶ್ಚ
ಕುರ್ವಂತು ಸರ್ವೇ ಮಮ ಸುಪ್ರಭಾತಂ ॥

೨೫೮. ಸನತ್ಕುಮಾರಸ್ಸನಕ ಸ್ಸನಂದನಃ
ಸನಾತನೋಽಥಾಸುರಿಪಿಂಗಲೌಚ ।
ಸಪ್ತಸ್ವರಾಃ ಸಪ್ತರಸಾತಲಾಶ್ಚ
ಕುರ್ವಂತು ಸರ್ವೇ ಮಮ ಸುಪ್ರಭಾತಂ ॥

೨೫೯. ಪೃಥ್ವೀ ಸಗಂಧಾ ಸರಸಾಪ್ತಥಾಪಃ
ಸಸ್ಪರ್ಶ, ವಾಯುರ್ಜ್ವಲನಃ ಸುತೇಜಾಃ ।
ನಭಃ ಸಶಬ್ದಂ ಮಹತಾ ಸಹೈವ
ಯಚ್ಛಂತು ಸರ್ವೇ ಮಮ ಸುಪ್ರಭಾತಂ

೨೬೦. ಸಪ್ತಾರ್ಣವಾಃ ಸಪ್ತ ಕುಲಾಚಲಾಶ್ಚ
ಸಪ್ತರ್ಷಯೋ ದ್ವೀಪವರಾಶ್ಚ ಸಪ್ತ ।
ಭುವಾದಯಃ ಸಪ್ತ ತಥೈವ ಲೋಕಾ
ಯಚ್ಛಂತು ಸರ್ವೇ ಮಮ ಸುಪ್ರಭಾತಂ

ಬ್ರಹ್ಮ, ವಿಷ್ಣು, ಶಿವ ಈ ತ್ರಿಮೂರ್ತಿಗಳು ಮತ್ತೂ ಚಂದ್ರ, ಸೂರ್ಯ, ಗುರು, ಮಂಗಳ, ಬುಧ, ಶುಕ್ರ, ಶನಿ ಮುಂತಾದ ಗ್ರಹಗಳೂ ನಮಗೆ ಒಳ್ಳೇ ಮುಂಜಾವನ್ನು ತರಲಿ. ಭೃಗು, ವಶಿಷ್ಠ, ಕ್ರತು, ಅಂಗಿರಸ, ಪುಲಸ್ತ್ಯ, ಪುಲಹ, ಗೌತಮ, ರೈಭ್ಯ, ಮರೀಚಿ, ಚ್ಯವನ, ಋಭು ಸನತ್ಕುಮಾರ ಸನಕ ಸನಂದನ ಸನಾತನ ಅಸುರಿ, ಪಿಂಗಲ ಮುಂತಾದ ಬ್ರಹ್ಮ ಋಷಿಗಳೂ ಮತ್ತು ಸಪ್ತ ಸ್ವರಗಳೂ ಭೂರಾದಿ ಸಪ್ತ ಲೋಕಗಳೂ ನಮಗೆ ಸುಪ್ರಭಾತವನ್ನು ಉಂಟು ಮಾಡಲಿ. ಗಂಧದಿಂದ ಒಡಗೂಡಿದ ಪೃಥ್ವಿ, ಸರಸವಾದ ನೀರು, ಸ್ಪರ್ಶವುಳ್ಳ ವಾಯು, ಜ್ವಲಿಸುವ ಅಗ್ನಿ, ಶಬ್ದ ವಿಶಿಷ್ಟವಾದ ಆಕಾಶ ಮುಂತಾದ ಪಂಚ ಮಹಾಭೂತಗಳು ಮತ್ತು ಮಹತ್ತತ್ವವೇ ಮೊದಲಾದ ತತ್ವಗಳೂ ನಮಗೆ ಸುಪ್ರಭಾತವನ್ನು ತಂದು ಕೊಡಲಿ. ಸಪ್ತ ಸಮುದ್ರಗಳು, ಸಪ್ತ ಕುಲಪರ್ವತಗಳು, ಸಪ್ತ ಋಷಿಗಳು, ಸಪ್ತ ದ್ವೀಪಗಳು ಭೂರಾದಿ ಸಪ್ತ ಲೋಕಗಳು ನಮಗೆ ಮಂಗಳವನ್ನು ಉಂಟು ಮಾಡಲಿ. ಈ ರೀತಿಯಾಗಿ ಮಹಾದೇವರು ಹೇಳಿದ ಈ ಪ್ರಭಾತ ಮಂಗಳ ಗೀತವನ್ನು ಪಠಿಸುವದರಿಂದ ದುಃಸ್ವಪ್ನ ನಾಶವಾಗುವದಲ್ಲದೇ ಪ್ರತಿ ಮುಂಜಾವವೂ ಮಂಗಳದಾಯಕವಾಗಿ ಶುಭಕಾರಕವಾಗುವುದು. ಹೀಗೆ ಪ್ರಾತಃಕಾಲದಲ್ಲಿ ಎದ್ದು ಈ ಸುಪ್ರಭಾತ ಸ್ತೋತ್ರವನ್ನು ಪಠಿಸಿ ಶ್ರೀಹರಿಯ

ನಾಮೋಚ್ಚಾರಣೆಪೂರ್ವಕವಾಗಿ ಧ್ಯಾನವನ್ನು ಮಾಡಿ ಹಾಸಿಗೆ ಬಿಟ್ಟು ಎದ್ದು ಅನಂತರ ಶೌಚ ವಿಧಿಗಾಗಿ ಹೊರಗೆ ಹೋಗಬೇಕು. ಜನರು ಓಡಾಡುವ ಬೀದಿಯಲ್ಲಿ, ದೇವಗೋಬ್ರಾಹ್ಮಣರು ಸಂಚರಿಸುವ ಸ್ಥಳದಲ್ಲಿ, ರಾಜಮಾರ್ಗದಲ್ಲಿ, ಹಸುಕಟ್ಟುವ ಕೊಟ್ಟಿಗೆಯಲ್ಲಿ ಮಲಮೂತ್ರ ವಿಸರ್ಜನೆಯನ್ನು ಮಾಡಬಾರದು.

೨೬೧. ತಥಸ್ತು ಶೌಚಾರ್ಥಮುಪಾಹರೇನ್ಮೃದಂ ।
ಗುದೇತ್ರಯಂ ಪಾಣಿ ತಲೇ ತಥೈವ ॥
ತಥೋಭಯೋಃ ಸಪ್ತ ತಥೈವ ಪಾದಯೋಃ ।
ಲಿಂಗೇ ತಥೈಕಾಂ ಮೃದ ಮಾಹರೇತ ॥

ಅನಂತರ ಮೃತ್ತಿಕಾ ಶೌಚವನ್ನು ಮಾಡಿಕೊಳ್ಳಬೇಕು. ಮೃತ್ತಿಕಾ ಶೌಚ ಎಂದರೆ ಮಾನವರು ಮಲ ಮೂತ್ರ ವಿಸರ್ಜನೆಯನ್ನು ಮಾಡಿದ ಬಳಿಕ ಅದರಿಂದ ಅಪವಿತ್ರವಾದ ತಮ್ಮ ದೇಹದ ಶುದ್ಧಿಗಾಗಿ ಮಣ್ಣು ಹಚ್ಚಿ ನೀರಿನಿಂದ ತಮ್ಮ ಅಂಗಗಳನ್ನು ತೊಳೆದು ಕೊಳ್ಳಬೇಕು. ಗುದ ಪ್ರದೇಶದಲ್ಲಿ ಮೂರು ಸಲ, ಕೈಗೆ ಹತ್ತು ಸಲ, ಎರಡೂ ಕಾಲು ಗಳಿಗೆ ಏಳೇಳು ಸಲ, ಲಿಂಗಕ್ಕೆ ಒಂದು ಸಲ ಮಣ್ಣನ್ನು ಹಚ್ಚಿ ಸ್ವಚ್ಛವಾಗಿ ತೊಳೆದುಕೊಳ್ಳ ಬೇಕು. ಹೀಗೆ ಮೃತ್ತಿಕಾ ಶೌಚವಿಧಿಗೆ ಹಾವು, ಇಲಿ, ಏಡಿಗಳು ಕಟ್ಟಿದ ಹುತ್ತಿನ ಮಣ್ಣನ್ನು ಉಪಯೋಗಿಸಬಾರದು. ನೀರೊಳಗಿನ ಮಣ್ಣಾಗಬಾರದು, ಇನ್ನೊಬ್ಬರು ಮೃತ್ತಿಕಾ ಶೌಚಕ್ಕೆ ಉಪಯೋಗಿಸಿದ ಮಣ್ಣನ್ನು ಉಪಯೋಗಿಸಬಾರದು.

೧೬೨. ದೂರ್ವಾದಧಿಂ ಸರ್ಪಿ ರಥೋದ ಕುಂಭಂ ।
ಧೇನುಂ ಸವತ್ಸಾಂ ವೃಷಭಂ ಸುವರ್ಣಾಂ ॥
ಮೃದ್ಗೋಮಯಂ ಸ್ವಸ್ತಿಕ ಮಕ್ಷತಾನಿ ।
ಲಾಜಾ ಮಧು ಬ್ರಾಹ್ಮಣ ಕನ್ಯಾಕಾಶ್ಚ ॥

೨೬೩. ಶ್ವೇತಾನಿ ಪುಷ್ಪಾಣಿ ಚ ಶೋಭನಾನಿ ।
ಹುತಾಶನಂ ಚಂದನಮರ್ಕಬಿಂದುಂ ॥

ಅನಂತರ ಹಲ್ಲುಜ್ಜಿಕೊಂಡು ಸ್ನಾನಮಾಡಿ ಸಂಧ್ಯಾ ವಂದನಾದಿ ನಿತ್ಯಾನ್ಹಿಕವನ್ನು ಮಾಡಬೇಕು. ಪ್ರಾತಃಕಾಲದಲ್ಲಿ ಎದ್ದು ಕರಿಕೆ, ಮೊಸರು, ತುಪ್ಪ, ಉದಕುಂಭ, ಕರು ಸಹಿತವಾದ ಹಸು, ಎತ್ತು, ಬಂಗಾರ, ಮೃತ್ತಿಕೆ, ಗೋಮಯ, ಅಕ್ಷತೆ, ಅರಳು, ಬ್ರಾಹ್ಮಣ, ಜೇನುತುಪ್ಪ, ಕನ್ಯೆಯರು, ಬೆಳ್ಳಗಿನ ಹೂ, ಅಗ್ನಿ, ಚಂದನ ಸೂರ್ಯಬಿಂಬ ಅಥವಾ ಅಶ್ವತ್ಥವೃಕ್ಷ ಇವುಗಳನ್ನು ನೋಡಿದರೆ ಶುಭ. ಇವೆಲ್ಲವೂ ಮುಂಜಾನೆ ನೋಡಿದರೆ ಮಂಗಳಪ್ರದವಾಗಿರುತ್ತದೆ. ಬಳಿಕ ತಮ್ಮ ತಮ್ಮ ಕುಲಾಚಾರಕ್ಕೆ ಅನುಗುಣ ವಾಗಿ ದೇವರ ಪೂಜೆಯನ್ನು ಮಾಡತಕ್ಕದ್ದು.

೨೬೪. ದೇಶಾನು ಶಿಷ್ಟಂ ಕುಧರ್ಮ ಮಗ್ರ್ಯಂ ।
ಸ್ವಗೋತ್ರ ಧರ್ಮಂ ನಹಿ ಸಂತ್ಯಜೇತ ॥
ನನಿಷ್ಠುರಂ ನಾಗಮಶಾಸ್ತ್ರ ಹೀನಂ ವಾಕ್ಯಂ ವದೇತ್......

ತಮ್ಮ ದೇಶಾಚಾರ ಕುಲಾಚಾರ ಸಂಪ್ರದಾಯಗಳನ್ನು ಯಾರೂ ಎಂದೂ ಮೀರಿ ನಡೆಯಬಾರದು, ಸುಳ್ಳು ಮಾತನಾಡಬಾರದು. ನಿಷ್ಠುರವಾಗಿ ನುಡಿಯಬಾರದು.

೨೬೬. ಸಂಗಂ ನಚಾಸತ್ಸು ನರೇಷು ಕುರ್ಯಾತ್
ಸಂಧ್ಯಾಸು ವರ್ಜ್ಯಂ ಸುರತಂ ದಿವಾ ಚ ।
ಸರ್ವಾಸು ಯೋನಿಷು ಪರಾಬಲಾಸು ।
ಸರ್ವ್ಯಾಯೋನಿಸ್ವಪರಾಬಲಾಸು ರಜಸ್ವಲಾಸ್ವೇವ ಜಲೇಷು ವೀರ

ಧರ್ಮಶಾಸ್ತ್ರಕ್ಕೆ ವಿರುದ್ಧವಾಗಿ ನಡೆಯಬಾರದು. ದುರ್ಜನರ ಸಹವಾಸ ಮಾಡಬಾರದು. ಪರಸ್ತ್ರೀ ಸಂಗವನ್ನು ಮಾಡಬಾರದು. ಸ್ವಸ್ತ್ರೀಯಾದರೂ ಹಗಲಿನಲ್ಲಿ, ಎರಡೂ ಸಂಧ್ಯಾಕಾಲಗಳಲ್ಲಿ, ರಜಸ್ವಲೆಯಾದಾಗ, ನೀರಿನಲ್ಲಿ ಸಂಗವನ್ನು ಮಾಡಬಾರದು.

೨೬೭. ವೃಥಾಟನಂ ವೃಥಾ ದಾನಂ ವೃಥಾ ಚ ಪಶುಮಾರಣಂ ।
ನ ಕರ್ತವ್ಯಂ ಗೃಹಸ್ಥೇನ ವೃಥಾದಾರ ಪರಿಗ್ರಹಃ

ತೀರ್ಥಯಾತ್ರಾದಿ ಉದ್ದೇಶವಿಲ್ಲದೆ ವ್ಯರ್ಥ ದೇಶ ಸಂಚಾರ ಮಾಡಬಾರದು. ಯಜ್ಞೋದ್ದೇಶವಿಲ್ಲದೇ ಪಶುಹತ್ಯೆಯನ್ನು ಮಾಡಬಾರದು. ಧರ್ಮ ಕಾರ್ಯಕ್ಕೆ ಹೊರತಾಗಿ ಕೇವಲ ಕಾಮವಾಸನಾ ತೃಪ್ತಿಗಾಗಿ ಮದುವೆ ಮಾಡಿಕೊಳ್ಳಬಾರದು.

೨೬೮. ಪರಸ್ವೇ ಪರ ದಾರೇಷು ನ ಕಾರ್ಯಾ ಬುದ್ಧಿರುತ್ತಮೈಃ ।
ಪರಸ್ವಂ ನರಕಾಯೈವ ಪರದಾರಾಶ್ಚಮೃತ್ಯವೇ ॥

ಪರರ ಹೆಣ್ಣು, ಪರರ ಹೊನ್ನು ಎರಡಕ್ಕೆ ಎಂದೂ ಮನಸ್ಸನ್ನು ಮಾಡತಕ್ಕದ್ದಲ್ಲ. ಹೆರವರ ಹಣವನ್ನು ಅಪಹರಿಸಿದರೆ ನರಕ. ಹೆರವರ ಹೆಣ್ಣನ್ನು ಕೂಡಿದರೆ ಮರಣ.

೨೬೯. ನೇಕ್ಷೇತ್ಪರ ಸ್ತ್ರಿಯಂ ನಗ್ನಾಂ ಸಂಭಾಷೇತ ತಸ್ಕರಾನ್ ।
ಉದಕ್ಯಾ ದರ್ಶನಂ ಸ್ಪರ್ಶಂ ಸಂಭಾಷಾಂ ಚ ವಿವರ್ಜಯೇತ್॥

ಮೈಮೇಲೆ ಬಟ್ಟೆಯಿರದ ಹೆಂಗಸನ್ನು ನೋಡಬಾರದು. ಕಳ್ಳರೊಡನೆ ಮಾತನ್ನು ಕೂಡ ಆಡಬಾರದು. ಮುಟ್ಟಾದ ಹೆಂಗಸರೊಡನೆ ಮಾತನಾಡಬಾರದು. ಅವರ ದರ್ಶನ ಸ್ಪರ್ಶನಾದಿಗಳನ್ನೂ ಕೂಡಾ ಮಾಡಬಾರದು.

೨೭೦. ನೈಕಾಸನೇ ತಥಾಸ್ಥೇಯಂ ಸೋದರ್ಯಾ ಪರಜಾಯಯಾ ।
ತಥಾ ಸಾಪತ್ನಮಾತುಶ್ಚ ತಥಾಸ್ವದುಹಿತೃಷ್ವಪಿ ॥

ಪುರುಷನಾದವನು ಪರಸ್ತ್ರೀಯಾಗಲಿ, ತಂಗಿಯಾಗಲಿ, ಮಲತಾಯಿಯಾಗಲಿ, ಮಗಳಾಗಲಿ ಯಾವದೇ ಸ್ತ್ರೀಯರೊಡನೆ ಒಂದೇ ಆಸನದಲ್ಲಿ ಕುಳಿತುಕೊಳ್ಳಬಾರದು.

೨೭೧. ನ ಚ ಸ್ನಾಯೀತ ವೈ ನಗ್ನೋ ವಾ ಶಯೀತ ಕದಾಚನ ।
ದಿಗ್ವಾಸಸೋಪಿನ ತಥಾ ಪರಿಭ್ರಮಣಮಿಷ್ಯತೇ ॥

ಗಂಡಸು ತಾನಾದರೂ ಬತ್ತಲೆಯಾಗಿ ಮೈ ತೊಳೆದುಕೊಳ್ಳಬಾರದು. ಹಾಗೇ ಮಲಗಲೂಬಾರದು, ದಿಗಂಬರನಾಗಿ ಎಲ್ಲಿಯೂ ತಿರುಗಬಾರದು.

ಉತ್ತರ ಪಶ್ಚಿಮ ದಿಕ್ಕುಗಳಿಗೆ ತಲೆಇಟ್ಟು ಮಲಗಬಾರದು. ದಕ್ಷಿಣ ಪಶ್ಚಿಮ ದಿಕ್ಕುಗಳ ಕಡೆಗೆ ಮುಖಮಾಡಿ ಊಟ ಮಾಡಬಾರದು. ದೇವಾಲಯ, ಅರಳೀಕಟ್ಟೆ, ನಾಲ್ಕು ದಾರಿ ಕೂಡುವ ಕೂಟಸ್ಥಲ (ಸರ್ಕಲ) ಮತ್ತು ಗುರು ಇವರನ್ನು ಯಾವಾಗ ಕಂಡರೂ ಬಲಕ್ಕೆ ಹಾಕಿಕೊಂಡೇ ಪ್ರದಕ್ಷಿಣಾಕಾರವಾಗಿಯೇ ಹೋಗಬೇಕು.

೨೭೨. ಮಾಲ್ಯಾನ್ನ ಪಾನಂ ವಸನಾನಿ ಯತ್ನತೋ ।
ಧೃತಾನಿ ಚಾನ್ಯೈರ್ನಹಿ ಧಾರಯೇದ್ಬುಧಃ

ಹೂವಿನ ಮಾಲೆ, ಅನ್ನ, ನೀರು, ವಸ್ತ್ರ ಇವುಗಳನ್ನು ಹೆರವರು ಉಪಯೋಗಿಸಿದ್ದನ್ನು ಉಪಯೋಗಿಸಬಾರದು. ನಿತ್ಯವೂ ತಲೆ ಮೇಲೆ ಸ್ನಾನ ಮಾಡಬೇಕು. ಗ್ರಹಣ ಮರಣಾದಿ ಹೊರತು ರಾತ್ರಿಯಲ್ಲಿ ತಲೆಯ ಮೇಲೆ ಸ್ನಾನ ಮಾಡಕೂಡದು.

೨೭೩. ಅಕ್ರೋಧನಾ ನ್ಯಾಯ ಪರಾ ವಿಮತ್ಸರಾಃ
ಕೃಷೀವಲಾ ಹ್ಯೌಷಧ ಜಾತಯಶ್ಚ ॥
ಸ್ವಾಪಸ್ತು ವೈದ್ಯೋ ಧನಿಕಶ್ಚ ಯತ್ರ ।
ಸಚ್ಛ್ರೋತ್ರಿಯ ಸ್ತತ್ರ ವಸೇತ ನಿತ್ಯಂ ॥

''ಜನರು ನ್ಯಾಯನಿಷ್ಠರಾಗಿರಬೇಕು. ಮುಂಗೋಪಿಗಳಿರಬಾರದು. ಅಸೂಯೆ ಪಡಬಾರದು. ಒಳ್ಳೆ ಒಕ್ಕಲಿಗರೂ, ಉತ್ತಮ ಔಷಧಗಳೂ ದೊರಕಬೇಕು. ಬೇಕಾದಾಗ ವೈದ್ಯರು ಬರುವಂತಿರಬೇಕು. ಸಹಾಯ ಮಾಡುವ ಸಿರಿವಂತರಿರಬೇಕು. ವಿದ್ವಾಂಸರಾದ ಬ್ರಾಹ್ಮಣರಿರಬೇಕು.'' ಇಷ್ಟೆಲ್ಲ ಸೌಕರ್ಯವಿದ್ದ ದೇಶದಲ್ಲಿ ಮಾನವರು ವಸತಿಯನ್ನು ಮಾಡಬೇಕು.

೨೭೪. ನ ತೇಷು ದೇಶೇಷು ವಸೇತ ಬುದ್ಧಿಮಾನ್ ।
ಸದಾನೃಪೋ ದಂಡರುಚಿಸ್ತ್ವಶಕ್ತಃ ॥
ಜನೋಪಿ ನಿತ್ಯೋತ್ಸವ ಬದ್ಧ ವೈರಃ ।
ಸದಾ ಜಿಗೀಷುಶ್ಚ ನಿಶಾಚರೇಂದ್ರ ॥

ದುರ್ಬಲನಾದ ರಾಜ, ದಂಡ ಹಾಕುವ ಅಧಿಕಾರಿಗಳು, ಯಾವಾಗಲೂ ಯದ್ಧದ ತೀಟೆಯಲ್ಲಿ ತೋಳೇರಿಸುವ ಜನತೆ, ಉತ್ಸವ ಹಬ್ಬಗಳೆಂದರೆ ಮೂಗು ಮುರಿಯುವ ಜನ ಯಾವ ದೇಶದಲ್ಲಿ ಇರುವರೋ ಅಂಥ ದೇಶದಲ್ಲಿ ಬುದ್ಧಿವಂತರಾದವರು ವಾಸಿಸತಕ್ಕದ್ದಲ್ಲ. ಆಹಾರ ವಿಷಯದಲ್ಲಿಯೂ ಮಾನವನು ಮಿತ ನಿಯಮಿತನಾಗಿರಬೇಕು. ತಂಗಳ ಆಹಾರವನ್ನು ತಿನ್ನಬಾರದು.

೨೭೫. ಭೋಜ್ಯಮನ್ನಂ ಪರ್ಯುಷಿತಂ ಸ್ನೇಹಾಕ್ತಂ ಚಿರಸಾಭೃತಂ ॥

ಎಣ್ಣೆ ಅಥವಾ ತುಪ್ಪದಲ್ಲಿ ಕರಿದಿದ್ದರೆ ತಿಂಗಳಾದರೂ ಅಡ್ಡಿ ಇಲ್ಲ. ಬೇಳೆ, ಅಕ್ಕಿ, ಬೆಣ್ಣೆ, ತುಪ್ಪ ಮುಂತಾದ ಪದಾರ್ಥಗಳನ್ನು ಎಲ್ಲರೂ ಎಲ್ಲ ಕಾಲದಲ್ಲಿಯೂ ಸ್ವೀಕರಿಸಲು ಅಡ್ಡಿ ಇಲ್ಲ.

೨೭೬. ಮಣಿವಸ್ತ್ರ ಪ್ರವಾಲಾನಾಂ ತದ್ವನ್ಮುಕ್ತಾ ಫಲಸ್ಯಚ ।
ಶೈಲದಾ ರುಮಯಾನಾಂಚ ತೃಣಮೂತಾಪ ಧಾನಿಚ ॥
ಶೂರ್ಪಧಾನ್ಯ ತೃಣಾನಾಂಚ ಸಂ ಹತಾನಾಂ ಚ ವಾಸ-
ಸಾಂ। ವಲ್ಕಲಾನಾಮಶೇಷಾಣಾಮಂಬುನಾ ಶುದ್ಧಿರಿಷ್ಯತೇ ॥

ಪದಾರ್ಥಗಳನ್ನು ಶುದ್ಧೀಕರಿಸಿ ಉಪಯೋಗಿಸಬೇಕು. ಮುತ್ತು, ರತ್ನ, ಹವಳ, ಕಲ್ಲು, ಕಟ್ಟಿಗೆ, ಹುಲ್ಲು, ಗೆಡ್ಡೆಗೆಣಸು, ಔಷಧ, ಧಾನ್ಯ, ಮೊರದಿಂದ ಕೇರಿದ ಧಾನ್ಯ ನಾರುಬಟ್ಟೆ ಮುಂತಾದ ವಸ್ತುಗಳಿಗೆಲ್ಲ ನೀರಿನಿಂದ ಶುದ್ಧಿಯುಂಟಾಗುತ್ತದೆ.

೨೭೭. ನಾಗದಂತಾಸ್ಥಿಶೃಂಗಾಣಾಂ ತತ್ಕ್ಷಣಾತ್ ಶುದ್ಧಿರಿಷ್ಯತೆ
ಪುನಃಪಾಕೇನ ಭಾಂಡಾನಾಂ ಮೃಣ್ಮಯಾನಾಂ ಚ ಮೇಧ್ಯತಾ

ಆನೆಯ ಹಲ್ಲು, ಮೂಳೆ, ಕೋಡುಗಳು ಕೂಡಲೇ ಶುದ್ಧವಾಗಿಬಿಡುವವು. ಮಣ್ಣಿನ ಪಾತ್ರೆಗಳು ಬೆಂಕಿಗಿರಿಸಿದರೆ ಶುದ್ಧವಾಗಿರುತ್ತವೆ.

೨೭೮. ಶುಚಿರ್ಭೈಕ್ಷ್ಯಂ ಕಾರುಹಸ್ತಃ ಪಣ್ಯಯೂಷಿನ್ಮುಖಂ ತಥಾ
ರಥ್ಯಾಗತಮ ವಿಜ್ಞಾತಂ ದಾಸವರ್ಗೇಣ ಯತ್ಕೃತಂ ॥

ಭಿಕ್ಷೆ ಬೇಡಿ ತಂದ ವಸ್ತು, ಅಗಸನ ಕೈ, ವೇಶ್ಯೆಯರ ಮುಖ, ದಾರಿಯಲ್ಲಿ ವಾರಸದಾರರಿಲ್ಲದೆ ಬಿದ್ದ ಪದಾರ್ಥ, ಆಪ್ತರ ನುಡಿ, ದಾಸರು ಮಾಡಿದ ಕಾರ್ಯ ಇವೆಲ್ಲ ಸ್ವಯಂ ಶುದ್ಧವಾಗಿರುತ್ತವೆ.

೨೭೯. ಕರ್ಮಾಂತಾಂಗಾರಶಾಲಾಸ್ತು ಸ್ತನಂಧಯಸುತಾಃ ಸ್ತ್ರಿಯಃ ।
ವಾಗ್ವಿ ಪ್ರುಷೋದ್ವಿಜೇಂದ್ರಾಣಾಂ ಸಂತಪ್ತಾಶ್ಚಾಂಬು ಬಿಂದವಃ ॥

ಬೆಂಕಿಯಿಂದ ಕೆಲಸ ಮಾಡುವ ಕಮ್ಮಾರ, ಕುಂಬಾರ, ಪತ್ತಾರ ಮುಂತಾದವರ ಮನೆಗಳು, ಕೂಸಿನ ತಾಯಂದಿರು, ತಾಯಿಯ ಮೊಲೆ ಕುಡಿಯುವ ಕೂಸುಗಳು, ಬ್ರಾಹ್ಮಣರ ಮಾತಿನ ಹನಿಗಳು, ಬಿಸಿ ನೀರಿನ ಹನಿಗಳು ಸ್ವತಃ ಶುದ್ಧವಾಗಿವೆ.

೨೮೦. ಭೂಮಿರ್ವಿಶುದ್ಧ್ಯತೇ ಖಾತದಾಹಮಾರ್ಜನ ಗೋಕ್ರಮೈಃ ।
ಲೇಪಾದುಲ್ಲೇಖನಾತ್ಸೇಕಾದ್ವೇಶ್ಮಸಂಮಾರ್ಜನಾರ್ಚನಾತ್ ॥

ಅಶುದ್ಧವಾದ ಭೂಮಿಯು ಅಗೆತ, ಸುಡುವದು, ಸಾರಣೆ, ಹಸುವಿನ ಸಂಚಾರ ಗಳಿಂದ ಶುದ್ಧವಾಗುವದು. ನೀರಿನಿಂದ ಪ್ರೋಕ್ಷಣೆ, ಕೆರೆಯುವುದು, ಗೋಮಯದಿಂದ ಸಾರಿಸುವುದು, ವಾಸ್ತು ಪೂಜಾದಿಗಳಿಂದ ಮನೆಗಳು ಶುದ್ಧವಾಗುವವು.

೨೮೧. ಔದುಂಬರಾಣಾಂಚಾಮ್ಲೇನ ಕ್ಷಾರೇಣ ತ್ರಪುಸೀಸಯೋಃ ।
ಭಸ್ಮಾದ್ಭಿಶ್ಚೈವ ಕಾಂಸ್ಯಾನಾಂಶುದ್ಧಿಃ ಪ್ಲಾವೋದ್ರವಸ್ಯಚ ॥

ತಾಮ್ರದ ಪಾತ್ರೆಗಳಿಗೆ ಹುಣಸೇ ಹಣ್ಣಿನಿಂದ, ತವರು ಸೀಸಗಳಿಗೆ ಉಪ್ಪಿನಿಂದ, ಕಂಚಿನ ಪಾತ್ರೆಗಳಿಗೆ ಬೂದಿ ನೀರುಗಳಿಂದ, ಅಮೇಧ್ಯ ಹತ್ತಿದ್ದರೆ ಮಣ್ಣು ನೀರುಗಳಿಂದ ಶುದ್ಧಿಯಾಗುವದು.

೨೮೨. ಮಾತುಃ ಪ್ರಸ್ರವಣೇವತ್ಸಃ ಶಕುನಿಃ ಫಲಪಾತನೇ ।
ಗರ್ದಭೋಭಾರವಾಹಿತ್ವೇ ಶ್ವಾ ಮೃಗ ಗ್ರಹಣೇ ಶುಚಿಃ ॥

ಕರುವಿನ ಎಂಜಲಾದ ಹಾಲು, ಹಕ್ಕಿಕಚ್ಚಿದ ಹಣ್ಣು, ಕತ್ತೆ ಹೊತ್ತು ತಂದ ಭಾರ ವಸ್ತು, ನಾಯಿ ಹಿಡಿದ ಚಿಗರೆ ಅಶುದ್ಧ ಎನ್ನಕೂಡದು.

೨೮೩. ಪಕ್ವಂದ್ರೋಣಾಧಿಕಂ ಚಾನ್ನಮಮೇಧ್ಯಾಭಿಪ್ಲುತಂಭವೇತ್ ।
ಅಗ್ರಮುದ್ಧೃತ್ಯ ಸಂತ್ಯಾಜ್ಯಂ ಶೇಷಸ್ಯಪ್ರೋಕ್ಷಣಂಭವೇತ್ ॥

ಬೀದಿಯಲ್ಲಿ ಬಿದ್ದ ನೀರು, ಕೆಸರು ಗಾಳಿಯಿಂದಲೇ ಶುದ್ಧವಾಗುತ್ತವೆ. ದೊಡ್ಡ ಪಾತ್ರೆಯಲ್ಲಿದ್ದ ಬಹಳ ಅನ್ನಕ್ಕೆ ಮೈಲಿಗೆಯಾದರೆ ಅಶುಚಿವಸ್ತು ತಗಲಿದ ಮೇಲಿನ ಅನ್ನವನ್ನು ಮಾತ್ರ ಕೆದರಿ ತೆಗೆದು ಉಳಿದುದನ್ನು ಸಂಪ್ರೋಕ್ಷಿಸಿ ಉಪಯೋಗಿಸಬಹುದು. ದೂಷಿತವಾದ ಅನ್ನವನ್ನು ತಿಳಿಯದೇ ತಿಂದರೆ ಪಾಪವಿಲ್ಲ. ಆದರೆ ಇದು ದುಷ್ಟ ಅಥವಾ ಅಪವಿತ್ರವಾದ ಅನ್ನ ಎಂದು ತಿಳಿದ ಬಳಿಕವೂ ಅದನ್ನು ಉಂಡರೆ ಪಾಪವುಂಟು. ಅದಕ್ಕಾಗಿ ಮೂರು ರಾತ್ರಿ ಉಪವಾಸ ಮಾಡಬೇಕು. ರಜಸ್ವಲೆ, ಅಶೌಚ, ಶವಸ್ಪರ್ಶ ಮಾಡಿದವರನ್ನು ಮುಟ್ಟಿದರೆ ಸ್ನಾನ ಮಾಡಬೇಕು. ಮೂಳೆಯು ಮಾಂಸ ಮೆತ್ತಿದ್ದರೆ ನೆತ್ತರು ಹತ್ತಿದ್ದರೆ ಮೈಲಿಗೆ. ಮುಟ್ಟಿದರೆ ಸ್ನಾನ ಮಾಡಿ ಆಚಮನ ಮಾಡಿ ಗೋವನ್ನು ಮುಟ್ಟಿ ಸೂರ್ಯನನ್ನು ನೋಡಬೇಕು. ಮನುಷ್ಯರನ್ನು ದಾಟಬಾರದು. ಉಗುಳು, ಮಲಮೂತ್ರ, ಕಾಲು ತೊಳೆದ ನೀರು ಗಳನ್ನು ಮನೆಯಲ್ಲಿಟ್ಟುಕೊಳ್ಳದೆ ಹೊರಗೆ ಚೆಲ್ಲಬೇಕು. ಸೂತಿಕಾ, ಷಂಡ, ಬೆಕ್ಕು, ಇಲಿ, ಕೋಳಿ, ಪತಿತ, ಅಪವಿದ್ಧ, ನಗ್ನ, ಚಂಡಾಲ ಇವರ ಅನ್ನವನ್ನು ಊಟ ಮಾಡಬಾರದು. ಈ ಎಂಟು ಜನರ ಲಕ್ಷಣ ಹೇಳುತ್ತೇನೆ. ಕೇಳು.

೨೮೪. ಬ್ರಾಹ್ಮಣೀ ಬ್ರಾಹ್ಮಣಶ್ಚೈವ ಯಾವಚ್ಛೇಷತ್ವ ಮಾಗತೌ ।
ತಾವುಭೌ ಸೂತಿಕೇತ್ಯುಕ್ತೌ ತಯೋರನ್ನಂ ವಿಗರ್ಹಿತಂ ॥
ನ ಜುಹೋತ್ಯುಚಿತೇ ಕಾಲೇ ನ ಸ್ನಾತಿ ನ ದದಾತಿ ಚ ।
ಪಿತೃದೇವಾರ್ಚನಾದಿಹೀನಃ ಸ ಷಂಢಃ ಪರಿಗೀಯತೇ ॥

ಗಂಡನನ್ನು ಬಿಟ್ಟ ಹೆಂಡತಿ, ಹೆಂಡತಿಯನ್ನು ಬಿಟ್ಟ ಗಂಡ ಇವರು ಸೂತಕ ದಲ್ಲಿದ್ದಂತೆ. ಅವರ ಅನ್ನವನ್ನು ಉಣ್ಣಬಾರದು. ತಂದೆತಾಯಿಗಳ ಶ್ರಾದ್ಧ ಮಾಡದೆ, ಸಕಾಲದಲ್ಲಿ ಸ್ನಾನ ಪೂಜೆಗಳನ್ನು ಮಾಡದಿರವ ನಾಸ್ತಿಕನಿಗೆ ಷಂಢ ಎಂದು ಹೆಸರು.

೨೮೫. ದಂಭಾರ್ಥಂ ಜಪತೇ ಯಶ್ಚ ತಪ್ಯತೇ ಪಠತೇ ತಥಾ ।
ನ ಪರತ್ರಾರ್ಥ ಮುದ್ಯುಕ್ತೋ ಮಾರ್ಜಾರಃ ಪರಿಕೀರ್ತಿತಃ ॥

ಧರ್ಮಪುಣ್ಯಾದಿಗಳ ಉದ್ದೇಶವಿಲ್ಲದೇ ಕೇವಲ ಡಂಭಾಚಾರಕ್ಕಾಗಿ ಜಪತಪ ಪೂಜಾಪಾರಾಯಣಾದಿಗಳನ್ನು ಮಾಡುವವನು ಮಾರ್ಜಾರ ಅಥವಾ ಬೆಕ್ಕು ಎನಿಸಿಕೊಳ್ಳುತ್ತಾನೆ.

೨೮೬. ವಿಭವೇ ಸತಿ ನೈ ವಾತ್ತಿ ನ ದದಾತಿ ಜುಹೋತಿ ಚ ।
ತಮಾಹುರಾಖುಂ ತಸ್ಯಾನ್ನಂ ಭುಕ್ತ್ವಾಕೃಚ್ಛ್ರೇಣ ಶುದ್ಧ್ಯತಿ ॥

ಐಶ್ವರ್ಯವನ್ನು ಬೇಕಾದಷ್ಟು ಭಗವಂತನು ಕೊಟ್ಟಾಗಲೂ ತಾನೂ ತಿನ್ನದೇ, ಇನ್ನೊಬ್ಬರಿಗೂ ಕೊಡದೇ ಪುಣ್ಯಕಾರ್ಯಗಳನ್ನು ಮಾಡದೇ ಇರುವ ಜಿಪುಣನಿಗೆ ಇಲಿ ಎಂದುಹೆಸರು.

೨೮೭. ಸ್ವಧರ್ಮಂ ಯಃ ಪರಿತ್ಯಜ್ಯ ಪರಧರ್ಮಂ ಸಮಾಚರೇತ್ ।
ಅನಾಪದಿ ಸ ವಿದ್ವದ್ಭಿಃ ಪತಿತಃ ಪರಿಕೀರ್ತ್ಯತೇ ॥

ಸಭ್ಯತೆಯಲ್ಲಿ ಪಕ್ಷಪಾತ ಮಾಡಿದವನು ಕೋಳಿ, ಸ್ವಧರ್ಮವನ್ನು ಬಿಟ್ಟು ಪರ ಧರ್ಮವನ್ನು ಆಶ್ರಯಿಸಿದವನು, ಪತಿತ, ದೇವಬ್ರಾಹ್ಮಣರನ್ನೂ ಗುರು-ಹಿರಿಯರನ್ನೂ ಬಿಟ್ಟವ ಅಪವಿದ್ಧ, ವೇದ ಮಾಡುವವ ನಗ್ನ ಎಂದು ಕರೆಯಲ್ಪಡುತ್ತಾರೆ.

೨೮೮. ಆಶಾರ್ತಾನಾಮದಾತಾಚ ದಾತುಶ್ಚ ಪ್ರತಿಷೇಧಕಃ ।
ಶರಣಾಗತಂ ಯಸ್ತ್ಯಜತಿ ಸ ಚಂಡಾಲೋಽಧಮೋ ಮತಃ ॥

ಆಶೆಯಿಂದ ಬೇಡಲಿಕ್ಕೆ ಬಂದವರಿಗೆ ಏನೂ ಕೊಡದೆ ಬರಿಗೈಯಿಂದ ತಿರುಗಿ ಕಳಿಸುವವನೂ ಮತ್ತು ಬೇರೆಯವರು ದಾನಕೊಡುವಾಗ ಬೇಡ ಎಂದು ನಿಷೇದ ಮಾಡುವವನೂ, ಶರಣು ಬಂದವರನ್ನು ಕಾಪಾಡದೇ ಕೈಬಿಡುವವನು ಚಂಡಾಲ ಎಂದೂ ಕರೆಯಲ್ಪಡುತ್ತಾನೆ. ಈ ಎಲ್ಲ ಪಾಪಿಗಳ ಅನ್ನವನ್ನು ಉಂಡರೆ ಮಹಾಪಾಪವುಂಟು. ಅದರ ಪರಿಹಾರಕ್ಕಾಗಿ ಕೃಚ್ಛ್ರ ಚಾಂದ್ರಾಯಣಾದಿ ವ್ರತಗಳನ್ನು ಮಾಡಿ ಪ್ರಾಯಶ್ಚಿತ್ತವನ್ನು ಆಚರಿಸಬೇಕು. ನಿತ್ಯ ನೈಮಿತ್ತಿಕವಾದ ಧರ್ಮ ಕರ್ಮಗಳನ್ನು ಎಂದೂ ಬಿಡತಕ್ಕದ್ದಲ್ಲ. ಬಿಟ್ಟವನ ಮನೆಯಲ್ಲಿ ಉಂಡರೆ ಮೂರು ರಾತ್ರಿ ಉಪವಾಸ ಮಾಡಿ ಶುದ್ಧನಾಗಬೇಕು.

ಪುತ್ರನು ಹುಟ್ಟಿದ ಕೂಡಲೇ ತಂದೆಯು ಸಚೈಲ (ಬಟ್ಟೆಸಹಿತ) ಸ್ನಾನ ಮಾಡಬೇಕು. ಮರಣ ಹೊಂದಿದರೂ ಸ್ನಾನ ಮಾಡಬೇಕು. ಸಗೋತ್ರನು ಮೃತನಾದರೆ ಅವನ ದಹನ ವಾದ ಬಳಿಕ ನಾಕು ಅಥವಾ ಏಳನೇ ದಿನ ಅಸ್ಥಿಸಂಚಯವಾದ ಬಳಿಕವೇ ಜ್ಞಾತಿಗಳು (ತಮ್ಮ ತಮ್ಮಲ್ಲಿ) ಸ್ಪರ್ಶನಕ್ಕೆ ಯೋಗ್ಯರಾಗುತ್ತಾರೆ. ವಿಷಪಾನ, ಉರುಲು ಹಾಕಿಕೊಳ್ಳು ವುದು, ನೀರು, ಶಸ್ತ್ರ, ಬೆಂಕಿಯಲ್ಲಿ ಬಿದ್ದು ಮರಣ ಹೊಂದುವದು, ಕೂಸಿನ ಮರಣ ಸನ್ಯಾಸಿಯ ಮರಣ ಮುಂತಾದ ಸಂದರ್ಭಗಳಲ್ಲಿ ಹತ್ತು ದಿನದ ಅಶೌಚವಿಲ್ಲ. ಸ್ನಾನದಿಂದ ಆಗಲೇ ಶುದ್ಧಿ. ಮರಣಾಶೌಚವು ಬ್ರಾಹ್ಮಣರಿಗೆ ಹತ್ತು ದಿನ, ಕ್ಷತ್ರಿಯರಿಗೆ ಹನ್ನೆರಡು ದಿನ, ವೈಶ್ಯರಿಗೆ ಹದಿನೈದು ದಿನ, ಶೂದ್ರರಿಗೆ ಮೂವತ್ತು ದಿನವಿದ್ದು ತಮ್ಮ ತಮ್ಮ ಕಾಲದಲ್ಲಿ ತಮ್ಮ ತಮ್ಮ ಕುಲಾಚಾರಕ್ಕನುಸರಿಸಿ ಉತ್ತರ ಕ್ರಿಯೆಗಳನ್ನು ಮಾಡಬೇಕು. ಮೃತನಿಗಾಗಿ ಹನ್ನೊಂದನೇ ದಿನ ಏಕೋದ್ದಿಷ್ಟ, ವರ್ಷದೊಳಗಾಗಿ ಸಪಿಂಡೀಕರಣ ನಂತರ ಅಮಾವಾಸ್ಯಾದಿಗಳಲ್ಲಿ ಪಿತೃ ಕಾರ್ಯಗಳನ್ನು ನೆರವೇರಿಸಬೇಕು. ಪಿತೃಗಳ ತೃಪ್ತಿಗಾಗಿ ಭೂದಾನ ಮಾಡಬೇಕು. ಪಿತೃಗಳಿಗೆ ಇಷ್ಟವಾದ ಪ್ರೀತಿಯ ಪದಾರ್ಥಗಳನ್ನು ಯೋಗ್ಯ ಬ್ರಾಹ್ಮಣರನ್ನು ಕರಿಸಿ ದಾನ ಮಾಡಿದರೆ ಪಿತೃಗಳು ಸಂತೃಪ್ತರಾಗುತ್ತಾರೆ. ಬ್ರಾಹ್ಮಣರು ಮೂರು ವೇದಗಳನ್ನು ಅಧ್ಯಯನ ಮಾಡಿ ಯಜ್ಞ ಯಾಗಾದಿ, ಪುಣ್ಯ ಕಾರ್ಯಗಳನ್ನು ಧರ್ಮಮಾರ್ಗದಿಂದಲೇ ಧನವನ್ನು ಸಂಪಾದಿಸಿ ಮಾಡಬೇಕು.

ಮಕ್ಕಳು ಪ್ರೌಢರಾದ ಬಳಿಕ ಅವರಿಗೆ ಮನೆತನದ ಭಾರವನ್ನೆಲ್ಲ ವಹಿಸಿಕೊಟ್ಟು ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಿ ತಪಸ್ಸಿಗಾಗಿ ಅರಣ್ಯಕ್ಕೆ ಹೋಗಬೇಕು. ಅಲ್ಲಿ ಕಾಡಿನಲ್ಲಿ

ದೊರಕುವ ಗೆಡ್ಡೆಗೆಣಸು ತಿಂದು ತಪಂ ಗೈಯ್ಯಬೇಕು. ನೆಲದ ಮೇಲೆ ಮಲಗಬೇಕು. ತ್ರಿಕಾಲ ಸ್ನಾನ, ಜಟಾಧಾರಣ, ನಾರು ಬಟ್ಟೆ, ಹೋಮಹವನ, ಪಿತೃದೇವತಾ ಅತಿಥಿ ಪೂಜೆ ಇವೇ ವಾನಪ್ರಸ್ಥಾಶ್ರಮಿಯ ಧರ್ಮಗಳಾಗಿರುತ್ತವೆ. ಸನ್ಯಾಸಾಶ್ರಮವನ್ನು ಸ್ವೀಕರಿಸುವವರು ಸರ್ವ ಸಂಗವನ್ನೂ ತೊರೆಯಬೇಕು. ಬ್ರಹ್ಮಚರ್ಯ, ನಿರಭಿಮಾನ, ಜಿತೇಂದ್ರಿಯತ್ವ ಮುಂತಾದವುಗಳು ಸನ್ಯಾಸಿಗಳ ಧರ್ಮ ಗಳಾಗಿವೆ. ಯತಿಯಾದವರು ಒಂದೆಡೆ ಮನೆ ಮಾಡಿಕೊಂಡು ನೆಲೆಸಬಾರದು. ಯಾವ ಲೌಕಿಕ ಕಾರ್ಯವನ್ನೂ ತಾನಾಗಿ ಪ್ರಾರಂಭಿಸಬಾರದು. ಭಿಕ್ಷೆಯಿಂದಲೇ ಬದುಕಬೇಕು. ಸಿಟ್ಟು ಮಾಡಬಾರದು, ಪರ ಬ್ರಹ್ಮ ವಿಚಾರದಲ್ಲಿಯೇ ಸರ್ವದಾಪಿ ತಲ್ಲೀನನಾಗಿರಬೇಕು. ಈ ನಾಲ್ಕು ಆಶ್ರಮಗಳಲ್ಲಿ ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ ಇವು ಮೂರು ವರ್ಣದವರಿಗೂ ಸಮಾನ ವಾಗಿದ್ದು ಶೂದ್ರನಿಗೆ ಗೃಹಸ್ಥಾಶ್ರಮ ಮಾತ್ರ. ಬ್ರಾಹ್ಮಣನಿಗೆ ನಾಲ್ಕೂ ಆಶ್ರಮಗಳಲ್ಲಿ ಅಧಿಕಾರವುಂಟು. ಎಲ್ಲ ಜನರೂ ತಮ್ಮ ವರ್ಣ ಹಾಗೂ ಆಶ್ರಮೋಚಿತವಾದ ಕರ್ಮಾನುಷ್ಠಾನವನ್ನು ತಪ್ಪದೇ ಮಾಡಬೇಕು. ಎಂಥ ಪ್ರಸಂಗದಲ್ಲಿಯೂ ಸ್ವಧರ್ಮವನ್ನು ಬಿಡತಕ್ಕದ್ದಲ್ಲ ಸ್ವಧರ್ಮವನ್ನು ಬಿಟ್ಟರೆ ವೇದ ದ್ರೋಹ ಮಾಡಿದಂತಾಗುವುದು. ಆದರಿಂದ ಸೂರ್ಯನು ಕುಪಿತನಾಗಿ ಕುಲನಾಶ ಮಾಡುತ್ತಾನೆ. ಸ್ವಧರ್ಮ ತ್ಯಾಗವು ಕುಲನಾಶವೆಂದು ಋಷಿಗಳೂ ಹೇಳಿದ್ದಾರೆ.''

ಹೀಗೆ ಋಷಿಗಳು ಸುಕೇಶಿ ದಾನವನಿಗೆ ಬಗೆಬಗೆಯ ಧರ್ಮ ಸೂಕ್ಷ್ಮವನ್ನು ತಿಳಿಸಿ ಹೇಳಿದರು. ಆ ಮುನಿಮಂಡಲದ ದಿವ್ಯ ಧರ್ಮೋಪದೇಶವನ್ನು ಪಡೆದು ಕೃತಕೃತ್ಯನೂ, ಧನ್ಯನೂ ಆದ ಸುಕೇಶಿದೈತ್ಯನು ಅದರಂತೆ ಸ್ವಧರ್ಮಾಚರಣವನ್ನು ಮಾಡಬೇಕೆಂದು ಮನಸಾ ಸಂಕಲ್ಪಿಸಿ, ಆ ಎಲ್ಲ ಮುನಿವೃಂದಕ್ಕೂ ಭಕ್ತಿಯಿಂದ ನಮಸ್ಕರಿಸಿ ಅಲ್ಲಿಂದ ಹಾರಿ ಆಕಾಶ ಮಾರ್ಗದಿಂದ ತನ್ನ ನಗರಕ್ಕೆ ತೆರಳಿದನು.

ವಾಮನ ಮಹಾಪುರಾಣದಲ್ಲಿ ಶುದ್ಧಿ - ಅಶುದ್ಧಿಗಳು ಎಂಬ
ಹದಿನಾಲ್ಕನೇಯ ಅಧ್ಯಾಯವು ಮುಗಿದುದು.



## ಸುಕೇಶಿಯ ಆಕ್ರಂದನ

ಅಧ್ಯಾಯ - ೧೫

ಅನಂತರ ಸುಕೇಶಿ ದಾನವನು ತನ್ನ ರಾಜಧಾನಿಗೆ ಮರಳಿ ಬಂದು ತನ್ನ ಪ್ರಜೆಗಳಾದ ದೈತ್ಯ ದಾನವರನ್ನೆಲ್ಲ ಕರೆದು ಧರ್ಮ ಸಮ್ಮತ ಮಾತುಗಳನ್ನಾಡಿದನು-

''ನಾಗರಿಕರೇ, ಮಹಾಮುನಿಗಳು ಅಹಿಂಸಾ, ಸತ್ಯ, ಕಳವು ಮಾಡದಿರುವದು, ಶುಚಿರ್ಭೂತತನ, ಇಂದ್ರಿಯನಿಗ್ರಹ, ದಾನ, ದಯೆ, ಕ್ಷಮೆ, ಬ್ರಹ್ಮಚರ್ಯ, ಗರ್ವ ರಾಹಿತ್ಯ, ಸತ್ಯ, ಹಿತನುಡಿ ಗುರುಹಿರಿಯರಿಗೆ ಗೌರವ, ಸದಾಚಾರ, ದೇವರಲ್ಲಿ ಭಕ್ತಿ ಮುಂತಾದವುಗಳು ಪ್ರಾಣಿಗಳಿಗೆ ಇಲ್ಲಿ ಉತ್ಕರ್ಷವನ್ನು ಉಂಟು ಮಾಡಿ ಮುಂದೆ ಸದ್ಗತಿಯನ್ನು ಕೊಡುತ್ತವೆ ಎಂದು ಹೇಳಿದ್ದಾರೆ. ದೊಡ್ಡವರು ಹೇಳಿದ ಆ ಧರ್ಮದ ಸಂದೇಶವನ್ನು ಸಮಸ್ತ ಪ್ರಜರೂ ತಪ್ಪದೇ ಪರಿಪಾಲಿಸಬೇಕು. ಇದೇ ನನ್ನ ರಾಜಾಜ್ಞೆ'' ಎಂದು ಘೋಷಿಸಿದನು. ಅವನ ಅಪ್ಪಣೆಯಂತೆ ಪ್ರಜಾಜನರೆಲ್ಲರೂ ಧರ್ಮದ ಸಂದೇಶವನ್ನು ಪಾಲಿಸ ತೊಡಗಿದರು. ಅದರಿಂದ ಅವರಿಗೆ ಎಲ್ಲ ರೀತಿಯಿಂದಲೂ ಉನ್ನತಿಯಾಯಿತು. ಅವರ ಮಕ್ಕಳು ಮೊಮ್ಮಕ್ಕಳು ಆಪ್ತೇಷ್ಟ ಮಿತ್ರ ಪರಿವಾರದವರೆಲ್ಲರೂ ಧಾರ್ಮಿಕರಾಗಿ ಸ್ವೋಚಿತವಾದ ಧರ್ಮಕರ್ಮಗಳಲ್ಲಿ ಆಸಕ್ತರಾದುದರಿಂದ ಸುಖ ಸಂಪದ ಸೌಭಾಗ್ಯಗಳಿಂದ ತುಂಬಿ ತೃಪ್ತರಾಗಿ ಸಂತಸದಿಂದ ಬಾಳತೊಡಗಿದರು. ಧರ್ಮಾನುಷ್ಠಾನದ ಮಹಿಮೆಯಿಂದ ಮಹಾಪ್ರಭಾವಶಾಲಿಗಳಾದ ಆ ದೈತ್ಯ ದಾನವರ ತೇಜಸ್ಸನ್ನು ಚಂದ್ರ ಸೂರ್ಯರಿಗೂ ಕೂಡ ಉಲ್ಲಂಘಿಸಲಿಕ್ಕೆ ಆಗಲಿಲ್ಲ.

ವರದ ಪ್ರಭಾವದಿಂದ ಗಗನಮಂಡಲದಲ್ಲಿ ಸ್ವಚ್ಛಂದ ಸಂಚಾರವನ್ನು ಮಾಡುತ್ತಲಿದ್ದ ಆ ದೈತ್ಯೇಂದ್ರನ ರಾಜಧಾನಿಯು ಸೂರ್ಯಪ್ರಭೆಯಂತೆ ಉಜ್ವಲವಾಗಿ ಆಕಾಶದಲ್ಲಿ ಬೆಳಗತೊಡಗಿತು. ಜನರಿಗೆ ಅದರಿಂದ ಹಗಲಾವುದು, ರಾತ್ರಿ ಯಾವುದು ಎಂಬುದೇ ತಿಳಿಯದಂತಾಯಿತು. ಹಗಲು ಆ ದೈತ್ಯಪುರಿಯು ಸೂರ್ಯಮಂಡಲದಂತೆ ಕಂಗೊಳಿಸಿದರೆ ರಾತ್ರಿ ಚಂದ್ರಬಿಂಬದಂತೆ ಬೆಳಗುತ್ತಿತ್ತು. ಅದರಿಂದ ಹಗಲು ಜನರಿಗೆ ಸೂರ್ಯನ ಗತಿಯು ಗೊತ್ತಾಗುತ್ತಿದ್ದಿಲ್ಲ. ಇರುಳ ಚಂದ್ರನ ಸ್ಥಿತಿಯೂ ತಿಳಿಯುತ್ತಿದ್ದಿಲ್ಲ. ಹಗಲೆಂದು ಕಮಲಗಳೂ, ನಿಶೆಯೆಂದು ನೈದಿಲೆಗಳು ಅರಳಿ ನಿಲ್ಲುತ್ತಿದ್ದವು. ಗೂಗೆ ಕಾಗೆಗಳೆರಡೂ ಹೊರಬಿದ್ದು ಹಾರಾಡುತ್ತಿದ್ದವು. ಚಕ್ರವಾಕ ದಂಪತಿಗಳಿಗೆ ನಿತ್ಯ ಪ್ರಕಾಶ ದೊರೆತು ವಿಯೋಗವಿಲ್ಲದೇ ಆನಂದದಿಂದ ನಮಗಾಗಿ ಸೂರ್ಯನು ಅಸ್ತನಾಗದೇ ಆಗಸದಲ್ಲಿ ಬೆಳಗುತ್ತಿದ್ದಾನೆ ಎಂದು ಅಭಿನಂದಿಸುತ್ತಿದ್ದವು. ಋತ್ವಿಜರು ರಾತ್ರಿಯಲ್ಲಿಯೂ ಹಗಲೆಂದು ಭ್ರಮಿಸಿ ಯಜ್ಞಯಾಗಾದಿ ಕರ್ಮಗಳನ್ನು ಪ್ರಾರಂಭಿಸಿದರು. ಕಾಮುಕರು ನಿರಂತರ ಬೆಳದಿಂಗಳೂ ತಮಗೆ ವಿಹಾರಕ್ಕೆ ದೊರಕಿತೆಂದು ಆನಂದಿಸುತ್ತಿದ್ದರು. ಗಣೆವಕ್ಕಿಗಳು ರಾತ್ರಿಯಲ್ಲಿಯೂ ಕೂಡ ಸೂರ್ಯನಂತೆ ಹೊಳೆ ಹೊಳೆಯುವ ಆ ನಗರವನ್ನು ನೋಡಿ ಅದು ಹಗಲು ಎಂದು ತಿಳಿಯುತ್ತಿದ್ದವು. ಆ ನಗರದ ನೇಸರಿನ ಬೆಳಕಿನಿಂದ ಆ ಜೋಡಿಹಕ್ಕಿಗಳಿಗೆ ವಿಯೋಗವೇ ಇಲ್ಲದಂತಾಗಿದೆ. ಅವು ಪರಸ್ಪರವಾಗಿ ಆಡುವ ಮಾತು ಶ್ರವಣೀಯವಾಗಿವೆ. ''ನಮ್ಮ ಚಕ್ರವಾಕ ಕುಲಕ್ಕೆ ಎಂಥ ಸುದೈವವು ತೆರೆದಿದೆ! ಈಗ ರಾತ್ರಿ ಎಂಬುದೇ ಇಲ್ಲವಾಗಿದೆ. ಸೂರ್ಯನು ಇತ್ತೀಚೆಗೆ ಅಸ್ತಮಿಸುವದೇ

ಇಲ್ಲ. ಯಾವಾಗಲೂ ಹಗಲು. ರವಿ ತುಂಬಿದ ಮುಗಿಲು ಸೂರ್ಯದೇವನ ಈ ನಿರಂತರ ಬೆಳಗುವದಕ್ಕೆ ಏನು ಕಾರಣವಿರಬಹುದು ? ಬಹುಶಃ ಯಾವದೋ ಒಂದು ಗೆಣೆವಕ್ಕಿಯು ರಾತ್ರಿಯಲ್ಲಿ ಪ್ರಿಯೆಯ ವಿರಹದಿಂದ ಸತ್ತಿರಬೇಕು. ನಲ್ಲೆಯ ವಿರಹದಿಂದ ನಿಟ್ಟುಸುರಿಟ್ಟು ಯಾವದೋ ಒಂದು ನದಿಯ ತಡಿಯಲ್ಲಿ ಮರಣ ಹೊಂದಿದ ಆ ಹಕ್ಕಿಯನ್ನು ನೋಡಿ ಸೂರ್ಯದೇವನೂ ಕನಿಕರ ಪಟ್ಟಿರಬೇಕು. ಇನ್ನ ಈ ಹಕ್ಕಿಗಳಿಗೆ ಹೀಗೆ ವಿರಹವ್ಯಥೆಯಿಂದ ವಿನಾಶಪಡುವ ಅವಸ್ಥೆ ಬರಬಾರದು ಎಂದು ಕರುಣೆದುಂಬಿ ತಾನು ಅಸ್ತವನ್ನೇ ಹೊಂದದೆ ಕಿಡಿಗಿರಣಗಳಿಂದ ಇಡೀ ಭೂಮಂಡಲವನ್ನು ಸುಡುವಂತೆ ಬೆಳಗುತ್ತಲಿರಬೇಕು'' ಮತ್ತು ಹಲವಾರು ಹಕ್ಕಿಗಳ ಮಾತುಕತೆ ಮನನೀಯವಾಗಿದೆ.

''ಪ್ರೀತಿಯ ಹೆಣ್ಣುಹಕ್ಕಿಯ ಅಗಲುವಿಕೆಯಿಂದ ಒಂದಿರುಳು ಯಾವುದೋ ಒಂದು ಗಂಡುಹಕ್ಕಿ ಮೃತಪಟ್ಟಿರಬೇಕು. ಆಗ ಅದರ ಒಲುವಿನ ಮಡದಿಹಕ್ಕಿ ದುಃಖ ಉಕ್ಕಿ ಅತ್ತು ಗೋಗರೆದು ಸೂರ್ಯನನ್ನು ಕುರಿತು ತಪಸ್ಸು ಮಾಡಿರಬಹುದು. ಆ ಚಕ್ರವಾಕ ಪಕ್ಷಿಕಾಮಿನಿಯ ತಪಸ್ಸಿನಿಂದ ಆರಾಧಿತನಾದ ಸೂರ್ಯದೇವನು ಚಂದ್ರನನ್ನು ಗೆದ್ದು ತಾನು ಅಸ್ತನಾಗದೇ ಹಗಲಿರುಳು ತಳತಳಿಸುತ್ತಲಿರಬೇಕು.'' ಹೀಗೆ ಪಕ್ಷಿ ಪ್ರಪಂಚದಲ್ಲಿ ಬಗೆಬಗೆಯ ಕಲ್ಪನಾ ವಿಲಾಸದ ಮಾತುಕತೆಗಳು ಮಿಂಚಿ ಮೂಡಿಬರುತ್ತಲಿದ್ದವು.

ಯಜ್ಞವಾಟಿಕೆಗಳಲ್ಲಿ ಯಾಜ್ಞಿಕರು ಋತ್ವಿಜರೊಂದಿಗೆ ಒಡಗೂಡಿ ರಾತ್ರಿ ಕಾಲದಲ್ಲಿಯೂ ಹೋಮ ಹವನಗಳನ್ನು ಮಾಡಲು ಪ್ರಾರಂಭಿಸಿದರು. ಭಗವದ್ಭಕ್ತರು ನಿಶಾಸಮಯದಲ್ಲಿ ಸ್ನಾನ ದೇವತಾರ್ಚನೆ ಮುಂತಾದ ಹಗಲಿನ ಕರ್ತವ್ಯ ಕಾರ್ಯಗಳನ್ನು ಮಾಡತೊಡಗಿದರು. ಇದರಂತೆ ಅನೇಕ ಭಾವುಕರು ತಮ್ಮ ತಮ್ಮ ಶ್ರದ್ಧೆಗೆ ಅನುಗುಣವಾಗಿ ವಿಷ್ಣು, ಸೂರ್ಯ, ಚಂದ್ರ, ಬ್ರಹ್ಮ, ರುದ್ರ ಮೊದಲಾದ ಸ್ವಸ್ವ ಇಷ್ಟದೇವತೆಗಳ ಪೂಜಾರಾಧನೆಗಳನ್ನು ಮಾಡತೊಡಗಿದರು.

ಕಾಮಿ ಪ್ರೇಮಿಗಳು ಹಗಲಿರುಳೂ ಹರಿದು ಸೂಸುವ ಬೆಳದಿಂಗಳನ್ನು ಹಾಡಿಹರಸಿ ತಮ್ಮ ಕಾಮಕೇಳೀವಿಲಾಸಕ್ಕೆ ಅನುಕೂಲತೆಯನ್ನು ಒದಗಿಸಿದ ಚಂದ್ರನನ್ನು ಅಭಿನಂದಿಸಿದರು. ಮತ್ತೆ ಕೆಲ ಭಾವಜೀವಿಗಳು ''ಚಾತುರ್ಮಾಸ್ಯ ಕಾಲದಲ್ಲಿ ನಾಲ್ಕು ತಿಂಗಳವರೆಗೆ ನಾವು ಲಕ್ಷ್ಮೀಪತಿಯಾದ ನಾರಾಯಣನನ್ನು ಭಕ್ತಿಯಿಂದ ಪೂಜಿಸಿದ್ದೇವೆ. ಆಗ ಶ್ರೀದೇವಿಯೊಡನೆ ಯೋಗನಿದ್ರೆಯಲ್ಲಿ ಶಯನ ಮಾಡಿದ ಭಗವಂತನನ್ನು ಸುಗಂಧಿ ಪುಷ್ಪಗಳಿಂದ ಪೂಜೆ ಮಾಡಿದ್ದರ ಫಲವೇ ಇದು ಆಗಿರಬಹುದು. ಅಶೂನ್ಯ ಶಯನ ದಿನದಂದು ನಾವು ಲಕ್ಷ್ಮೀನಾರಾಯಣರನ್ನು ಪೂಜಿಸಿದ್ದೇವೆ. ಅದರಿಂದ ಪ್ರೀತನಾದ ಆ ಪರಮಾತ್ಮನು ನಮ್ಮ ಶಯನವು ನಮ್ಮ ಮಡದಿಯರಿಂದ ಎಂದೂ ಶೂನ್ಯವಾಗದೇ ಆ ಅಶೂನ್ಯ ಶಯನದ ಭೋಗ ಭಾಗ್ಯವನ್ನು ನಮಗೂ ಕರುಣಿಸಿದ್ದಾನೆ'' ಎಂದು ಮುಂತಾಗಿ ಮಾತನಾಡಿಕೊಂಡರು. ಮತ್ತೆ ಕೆಲವು ಕಾಮುಕರ ಕಲ್ಪನಾ ಲಹರಿಯೇ ಬೇರೆ. ''ಚಂದ್ರನ ಕ್ಷೀಣದೆಶೆಯನ್ನು ನೋಡಿ ನಲುಗಿದ ನಲ್ಲೆ ರೋಹಿಣಿಯು ರುದ್ರನನ್ನು ಕುರಿತು ತಪಸ್ಸನ್ನು ಮಾಡಿರಬಹುದು.

ಅಥವಾ ವೇದೋಕ್ತ ವಿಧಿಯಿಂದ ಪುಣ್ಯಕರವಾದ ಕೃಷ್ಣಾಷ್ಟಮಿ ವ್ರತವನ್ನು ಗೈದಿರಬಹುದು. ಅದರಿಂದ ಪರಿತುಷ್ಟನಾದ ಪರಮೇಶ್ವರನು ಚಂದ್ರನಿಗೆ ಈ ಅಕ್ಷಯ

ವರವನ್ನು ಕೊಟ್ಟು ಯಾವಾಗಲೂ ಬೆಳಗುವಂತೆ ಮಾಡಿರಬಹುದು.'' ಮತ್ತೆ ಹಲವು ಹರಿಭಕ್ತರ ಉತ್ಪ್ರೇಕ್ಷೆಯ ಬಗೆಯೇ ಬೇರೆ.

''ಆ ಚಂದ್ರನು ಶ್ರೀಹರಿಯ ಸೇವಾರಾಧನೆಯ ಮಾಡಿದ್ದಾನೆ ಮತ್ತು ಅಖಂಡ ವ್ರತದಿಂದ ಆರಾಧಿಸಿದ್ದಾನೆ. ಆ ಹರಿಪ್ರಸಾದದ ಪುಣ್ಯದಿನದಿಂದ ಅಖಂಡವಾಗಿಯೇ ಗಗನ ಮಂಡಲದಲ್ಲಿ ತೊಳಗಿ ಬೆಳಗುತ್ತಲಿದ್ದಾನೆ.'' ಕೆಲವರ ದೃಷ್ಟಿಯಲ್ಲಿ ಈ ಚಂದ್ರನ ನಿತ್ಯ ಪ್ರಕಾಶವು ಒಂದು ರೀತಿಯಿಂದ ಹರಿಪ್ರಸಾದವೇ ಸರಿ. ಉತ್ತಾನಪಾದದ ವರಪುತ್ರನಿಗೆ ಧ್ರುವಸ್ಥಾನವನ್ನು ಕೊಟ್ಟು ಕರುಣಿಸಿದ ಶ್ರೀಹರಿಯ ಪಾದಗಳನ್ನು ಈ ಚಂದ್ರನು ಗಟ್ಟಿಯಾಗಿ ಹಿಡಿದು ಸೇವೆ ಮಾಡಿರಬೇಕು. ಆದರಿಂದ ಧ್ರುವ ದೀಪ್ತಿಯನ್ನು ಪಡೆದು ಸೂರ್ಯನ ಬೆಳಕನ್ನು ಕೂಡ ಕುಂದಿಸಿ, ಗ್ರಹಾಂತರಗಳ ತೇಜಸ್ಸನ್ನು ಕಂದಿಸಿ, ನಮ್ಮೆಲ್ಲರಿಗೂ ಆನಂದವನ್ನು ಉಂಟುಮಾಡುತ್ತ ಹಗಲಿರುಳೂ ಹೊಳೆಯುತ್ತಲಿದ್ದಾನೆ.

ಸೂರ್ಯನು ಮೊದಲಿನಂತೆ ಸುಡುಬಿಸಿಲನ್ನು ಬೀರದೆ ಸೌಮ್ಯನಾಗಿ ಕಾಣುವುದಕ್ಕೆ ಚಂದ್ರನಿಂದ ಉಂಟಾದ ಪರಾಜಯವೇ ಕಾರಣ ಎಂದು ಕೆಲವರು ತರ್ಕಿಸುತ್ತಿದ್ದರು.

ವಾಸ್ತವವಾಗಿ ವಿಚಾರಿಸಿದರೆ ಆ ದೈತ್ಯನಗರಿಯ ಪ್ರಕಾಶಪುಂಜವನ್ನು ಕಂಡು ದಿಗ್ಭ್ರಮೆಗೊಂಡ ಜನರಿಗೆ''ಇದಕ್ಕೆ ಸೂರ್ಯೋದಯ ಎನ್ನಬೇಕೋ? ಚಂದ್ರೋದಯ ಎನ್ನಬೇಕೋ'' ತಿಳಿಯದಂತಾಗಿತ್ತು. ಏಕೆಂದರೆ ಆಗ ಕಮಲಗಳೂ ಅರಳುತ್ತಿದ್ದವು. ಕನ್ನೈದಿಲೆಗಳೂ ಪಕಳೆದೆರೆದು ವಿಕಸಿತವಾಗಿ ನಿಲ್ಲುತ್ತಿದ್ದವು. ಎರಡರಲ್ಲಿಯೂ ದುಂಬಿಗಳು ಬಂಡನುಂಡು ಝೇಂಕಾರನಾದವನ್ನು ಮಾಡುತ್ತಿದ್ದವು. ಇದರಿಂದ ಸೂರ್ಯಚಂದ್ರ ಇಬ್ಬರ ಉದಯವು ಏಕಕಾಲದಲ್ಲಿ ಆದಂತೆ ಆಗಿದ್ದಿತು. ಹೀಗೆ ಭಿನ್ನ ಭಿನ್ನ ಜನರ ಬಗೆಬಗೆಯ ಭಾವಾಭಿವ್ಯಂಜಕವಾದ ಮಾತುಕತೆಗಳು ಸೂರ್ಯದೇವನ ಕಿವಿಯವರೆಗೂ ತಲುಪಿದವು.

''ಲೋಕದ ಜನರು ನಮ್ಮ ಬಗೆಗೆ ಒಳಿತು-ಕೆಡುಕಿನ ಮಾತುಗಳನ್ನು ಏಕೆ ಆಡುತ್ತಿದ್ದಾರೆ, ಏನು ಸಂದರ್ಭ?'' ಎಂದು ಸೂರ್ಯದೇವನು ವಿಚಾರಿಸಿದನು. ಧ್ಯಾನದೃಷ್ಟಿಯಿಂದ ವಸ್ತುಸ್ಥಿತಿಯನ್ನು ತಿಳಿಯಬೇಕೆಂದು ಪರ್ಯಾಲೋಚನೆ ಗೈದನು. ಅವನ ಕಣ್ಣಿಗೆ ಜಗತ್ತಿನ ವಾಸ್ತವಿಕ ಪರಿಸ್ಥಿತಿಯ ಚಿತ್ರವು ನಿಜರೂಪದಲ್ಲಿ ಕಂಡುಬಂದಿತು. ಪ್ರಪಂಚದಲ್ಲಿ ಎತ್ತ ನೋಡಿದತ್ತ ರಾಕ್ಷಸರದೇ ರಾಜ್ಯವಾಗಿದ್ದಿತು. ಮೂರು ಲೋಕಗಳು ರಕ್ಕಸರಿಂದ ಆಕ್ರಾಂತವಾಗಿದ್ದವು. ದೈತ್ಯರ ದೇದೀಪ್ಯಮಾನವಾದ ತೇಜೋ ದೀಪ್ತಿಯನ್ನು ಕಂಡು ಸ್ವಯಂ ಸೂರ್ಯನಿಗೇ ಅಸಹ್ಯವಾಗಿದ್ದಿತು. ದುಷ್ಟದಾನವರ ಆ ತೇಜೋವೃದ್ಧಿಯನ್ನು ಕಂಡು ದಿವಾಕರನು ಚಿಂತಾಕ್ರಾಂತನಾದನು. ದೈತ್ಯರ ಈ ತೇಜೋಽ ಅಭಿವೃದ್ಧಿಗೆ ಏನು ಕಾರಣವಿರಬಹುದು! ಓ! ತಿಳಿಯಿತು. ಇವರು ತಮ್ಮ ಸ್ವಭಾವಕ್ಕೆ ವ್ಯತಿರಿಕ್ತವಾಗಿ ಸದಾಚಾರ ಸಂಪನ್ನರಾಗಿದ್ದಾರೆ. ಜಪ ಉಪವಾಸ ಗಳಿಂದ ಶುಚಿರ್ಭೂತರಾಗಿದ್ದಾರೆ. ದೇವರನ್ನೂ ಪೂಜಿಸುತ್ತಾರೆ. ಬ್ರಾಹ್ಮಣರನ್ನು ಆರಾಧಿಸುತ್ತಾರೆ. ಧರ್ಮದಲ್ಲಿ ಆಸಕ್ತರಾಗಿದ್ದಾರೆ. ಇಂಥ ಧರ್ಮಮಾರ್ಗಾನುಸಾರಿಗಳಾದ ದಾನವರ ವಿನಾಶವು ಆಗುವುದೆಂತು? ಎಂದು ಅಂಬರಮಣಿಯು ಆಲೋಚನೆ ಗೈಯತೊಡಗಿ ದನು. ಕತ್ತಲೆ ಎಂಬ ಆನೆಯನ್ನು ತನ್ನ

ಕಿರಣಗಳೆಂಬ ಉಗುರುಗಳಿಂದ ಹೊಡೆದು ನಾಶ ಗೈಯುವ ಸೂರ್ಯಸಿಂಹನು ತೇಜೋವಂತರಾಗಿ ತೊಳಗುತ್ತಲಿರುವ ಆ ದೈತ್ಯದಾನವರ ವೃತ್ತಚರ್ಯಾದಿಗಳನ್ನು ಪರೀಕ್ಷಿಸಿ ನಿರುಕಿಸಿ ನೋಡತೊಡಗಿದನು.

ಸೂಕ್ಷ್ಮದೃಷ್ಟಿಯಿಂದ ಆಲೋಚಿಸಿದಾಗ ರಾಕ್ಷಸರ ಸಂಪನ್ನ ಜೀವನದ ಕ್ಷುದ್ರಛಿದ್ರಗಳೆಲ್ಲವೂ ಸ್ಪಷ್ಟವಾಗಿ ತಿಳಿದುಬಂದವು. ಸುಖಲೋಲುಪರಾದ ಆ ದೈತ್ಯರೆಲ್ಲರೂ ಸ್ವಧರ್ಮದಿಂದ ಚ್ಯುತರಾಗಿದ್ದರು. ಧರ್ಮಭ್ರಷ್ಟರಾದ ಅವರನ್ನು ಸಾವು ಸಮೀಪಿಸುತ್ತಲಿತ್ತು. ಸ್ವಧರ್ಮ ಲೋಪವು ಸರ್ವ ಧರ್ಮ ವಿಧ್ವಂಸಕ ಎಂಬುದನ್ನು ಚೆನ್ನಾಗಿಬಲ್ಲ ಆ ದಿವಾಕರನು ಆ ರಾಕ್ಷಸ ನಗರವನ್ನು ಸಂಪೂರ್ಣವಾಗಿ ನಾಶ ಮಾಡಿಬಿಡಬೇಕೆಂದು ಸಂಕಲ್ಪಗೈದನು.

ಕೋಪಾಟೋಪದಿಂದ ಉರಿಯುವ ಭಾಸ್ಕರನ ಪ್ರಭಾವದಿಂದ ಆ ರಾಕ್ಷಸ ನಗರವು ಹೆದರಿ ಹೌಹಾರಿತು. ಕೋಪದಿಂದ ಕೆಂಪಡರಿದ ಕಣ್ಣಿನ ಕಿಡಿಗಣ್ಣಿನ ನೋಟದಿಂದ ಪುಣ್ಯ ತೀರಿದ ಗ್ರಹದಂತೆ ಆ ದೈತ್ಯಪುರಿಯು ಉರಿದು ಆಕಾಶದಿಂದ ಉರುಳಿಬಿದ್ದಿತು. ಅದನ್ನು ನೋಡಿ ಸಂಕಟಗ್ರಸ್ತನಾದ ಸುಕೇಶಿಯು ''ಅಯ್ಯೋ! ಶಿವನ ವರವು ಸುಳ್ಳಾಯಿತೇ?'' ಎಂದು ಮಮ್ಮಲಮರುಗಿ ''ನಮೋ ಹರಾಯ ಶರ್ವಾಯ'' ಶಿವನಿಗೆ ನಮಸ್ಕಾರ. ಭವನಿಗೆ ನಮಸ್ಕಾರ ಎನ್ನುತ್ತ ಗಟ್ಟಿಯಾಗಿ ಕೂಗಿಕೊಂಡನು. ಅವನ ಆಕ್ರಂದನ ಚೀತ್ಕಾರವನ್ನು ಕೇಳಿ ಮುಗಿಲಲ್ಲಿ ಸಂಚರಿಸುವ ಚಾರಣರು ''ಹಾಯ್, ಹಾಯ್ ಹರಭಕ್ತನು ಧರೆಗೆ ಉರುಳುತ್ತಿದ್ದಾನೆ. ಅಕಟಕಟಾ'' ಎಂದು ಆರ್ತರಾಗಿ ಆಕ್ರೋಶಗೈದರು. ಗಗನಚಾರಿಗಳಾದ ಚಾರಣರ ಆ ಚೀತ್ಕಾರ ವಚನವು ಶಿವನ ಕಿವಿಗೂ ಬಿದ್ದಿತು. ನಾಶರಹಿತನಾದ ಆ ಪರಶಿವನು ಸರ್ವತ್ರ ವ್ಯಾಪ್ತನಲ್ಲವೇ! ಚಾರಣರ ನುಡಿ ಕಿವಿಗೆ ಬಿದ್ದ ಕೂಡಲೇ ಅವನಿಗೆ ಚಿಂತೆ ಸುರುವಾಯಿತು. ''ನನ್ನ ಭಕ್ತನಾದ ಈ ದೈತ್ಯನನ್ನು ಕೆಳಗೆ ಉರುಳಿಸಿದವರಾರು?''

ತಕ್ಷಣವೇ ಆ ಶಿವನಿಗೆ ತಿಳಿದುಹೋಯಿತು. ಸಾವಿರ ಕಿರಣಗಳ ಸೂರ್ಯದೇವನೇ ಈ ರಾಕ್ಷಸ ನಗರವನ್ನು ಕೆಳಗುರುಳಿಸಿದ್ದಾನೆ ಎಂದು. ಅದನ್ನು ತಿಳಿದು ಮುಕ್ಕಣ್ಣನ ಕಣ್ಣು ಕೆಂಪೊಡೆದವು. ಕೋಪ ಕಷಾಯಿತನಾಗಿ ಅವನು ಸೂರ್ಯನನ್ನು ಕೆಕ್ಕರಿಸಿ ನೋಡಿದನು. ಸಿಟ್ಟಿನ ದೃಷ್ಟಿಯಿಂದ ನಿಟ್ಟಿಸಿ ನೋಡಿದ ಮಾತ್ರಕ್ಕೆ ದಿವಾಕರನು ಆಕಾಶ ದಿಂದ ಪರಿಭ್ರಷ್ಟನಾದನು. ಯಂತ್ರವು ಎಸೆದೊಗೆದ ಕಲ್ಲಿನಂತೆ ಭಾಸ್ಕರನು ಮುಗಿಲಿನಿಂದ ಉರುಳಿ ಗಾಳಿ ಬೀಸುವ ವಾಯುಮಂಡಲದ ವೀಥಿಯಲ್ಲಿ ಆಕಸ್ಮಿಕವಾಗಿ ಉರುಳಿ ಬಿದ್ದನು. ಅನಂತರ ಆ ವಾಯುಮಂಡಲದಲ್ಲಿ ನಿಲ್ಲಲಾರದೆ ಮತ್ತೆ ಕೆಳಗುರುಳಿದನು. ಹೀಗೆ ಉರುಳುವ ಆ ಅಂಬರಮಣಿಯ ಹೊಂಬಣ್ಣವು ಕಿಂಶುಕದ ಕಾಂತಿಯನಾಂತು ಮೆರೆಯಿತು. ನಭೋಮಂಡಲದಿಂದ ಕಿರಣಗಳ ಮುಚ್ಚಳದಲ್ಲಿಯೇ ಕೆಳಗುರುಳುತ್ತ ಲಿರುವ ಆ ದಿವಾಕರನು ಅರ್ಧಪಕ್ವವಾದ ತಾಲೀಫಲವು ಕೆಳಗೆ ಉರುಳುತ್ತಿರುವಂತೆ ತೋರಿದನು. ಹೀಗೆ ಆಗಸದಿಂದ ಹೊರಳಿ ಉರುಳುತ್ತಲಿರುವ ಆ ರವಿ ಮಂಡಲವನ್ನು ನೋಡಿ ಕೆಲವು ತೇಜಸ್ವಿ ತಪಸ್ವಿಗಳು ಕೂಗಿ ಹೇಳಿದರು. ''ಸೂರ್ಯದೇವಾ, ನೀನು ನೆಲಕ್ಕೆ ಉರುಳುವದೇ ನಿಜವಾದ ಮೇಲೆ ಶ್ರೀಹರಿಯ ಕ್ಷೇತ್ರದಲ್ಲಾದರೂ ಹೋಗಿ ಬೀಳು. ಇದರಿಂದ ನಿನಗೆ ನಿಶ್ಚಿತವಾಗಿ ಶ್ರೇಯಸ್ಸು ಉಂಟಾಗುವದು.''

ಅವರ ಮಾತನ್ನು ಕೇಳಿ ಅಂತವಿಲ್ಲದ ಆಗಸದಿಂದ ಆಕಸ್ಮಿಕ ಅಧಃಪಾತವನ್ನು ಅನುಭವಿಸುತ್ತಲಿರುವ ಆ ಆದಿತ್ಯದೇವನು ತನಗೆ ಹಿತೋಪದೇಶ ಮಾಡುತ್ತಲಿರುವ ಆ ತಪಸ್ವಿಗಳನ್ನೇ ಕೇಳಿದನು. ''ಸ್ವಾಮಿ, ಪೂಜ್ಯರೇ, ನೀವು ಹೇಳಿದ ಹರಿಕ್ಷೇತ್ರವು ಯಾವದು? ಅದನ್ನು ಈಗಲೇ ಹೇಳಿರಿ, ಕೂಡಲೇ ತಿಳಿಸಿರಿ. ನಾನು ಎಲ್ಲಿ ಹೋಗಿ ಬೀಳಬೇಕು?''

ಆಗ ಆ ಮುಗಿಲ ಮುನಿಗಳೂ ಆಗಲೇ ಅಲ್ಲಿಯೇ ಉತ್ತರವಿತ್ತರು. ''ಕೇಳು, ನಾವು ಹೇಳಿದ ಹರಿಕ್ಷೇತ್ರವು ಮಹಾಕ್ಷೇತ್ರ. ಅಲ್ಲಿ ಮಾಡುವ ಅಲ್ಪ ಪುಣ್ಯಕ್ಕೂ ಅನಲ್ಪ ಫಲ ಉಂಟು. ಅದುವೇ ಮಹಾಫಲ. ಈಗ ಶ್ರೀಹರಿಗೂ ಶ್ರೀಹರನಿಗೂ ಅಭಿಮಾನ ಪಾತ್ರವಾದ ವಾರಣಾಸೀ ಕ್ಷೇತ್ರವೇ ಹರಿಕ್ಷೇತ್ರವೆನಿಸುತ್ತದೆ. ಪ್ರಯಾಗದಲ್ಲಿ ಪವಡಿಸಿದ ಯೋಗಶಾಲೆಯನ್ನು ಮೊದಲ್ಗೊಂಡು ಕೇಶವನ ದರ್ಶನ ಪರ್ಯಂತವಿರುವ ವಾರಣಾಸಿಯವರೆಗೆ ಚಾಚಿದೆ ಈ ಪುಣ್ಯಕ್ಷೇತ್ರ ಹರಿಯ ಕ್ಷೇತ್ರ. ಇಲ್ಲಿ ನೀನು ಬಿದ್ದರೂ ಶ್ರೇಯಸ್ಸು. ನೀನು ಇಂಥ ದಿವ್ಯಕ್ಷೇತ್ರದಲ್ಲಿ ಹೋಗಿಬೀಳು.''

ಇದನ್ನು ಕೇಳಿ ಪೂಜ್ಯನಾದ ಸೂರ್ಯದೇವನು ಕೈಲಾಸಪತಿಯ ಕಿಡಿಗಣ್ಣಿನ ನೋಟದಿಂದ ಬೆಂದು ಬಸವಳಿದು ವರಣಾ ಮತ್ತು ಅಸಿ ಎಂಬ ಎರಡು ನದಿಗಳ ನಟ್ಟ ನಡುವಿನ ನೀರಿನಲ್ಲಿ ಬಿದ್ದನು. ಅಗ್ನಿಜ್ವಾಲೆಯಿಂದ ಸಂತೃಪ್ತನಾದ ಆ ಸೂರ್ಯದೇವನು ಒಮ್ಮೆ ವರಣಾದಲ್ಲಿ ಇನ್ನೊಮ್ಮೆ ಅಸಿಯಲ್ಲಿ ಹೊರಳಾಡಿ ಮುಳುಗಿ ಎದ್ದನು.

ಆ ಎರಡು ನದಿಗಳ ತರಂಗಾಂತರಂಗಗಳಲ್ಲಿ ಬಿದ್ದು ಒದ್ದಾಡುತ್ತಲಿರುವ ಆ ರವಿಮಂಡಲವು ಅಗ್ನಿಜ್ವಾಲೆಯಿಂದ ತಿರುಗುವ ಕೊಳ್ಳಿಯಂತೆ ತೋರುತ್ತಲಿತ್ತು.

ಈ ಸಮಯದಲ್ಲಿ ಅನೇಕ ಋಷಿಗಳೂ, ಯಕ್ಷರಾಕ್ಷಸರೂ, ನಾಗ ವಿದ್ಯಾಧರರೂ, ಹಕ್ಕಿ ಅಪ್ಸರೆಯರೂ ಮತ್ತು ಸೂರ್ಯರಥದಲ್ಲಿರುವ ಸಕಲ ಭೂತಪ್ರೇತಗಳೂ ಎಲ್ಲರೂ ಸೇರಿ ಈ ವೃತ್ತಾಂತವನ್ನು ಅರುಹಬೇಕೆಂದು ಸತ್ಯಲೋಕದಲ್ಲಿರುವ ಬ್ರಹ್ಮದೇವರ ಮನೆಗೆ ಹೋದರು. ಅದನ್ನು ಕೇಳಿ ದೇವತೆಗಳ ಒಡೆಯನಾದ ಬ್ರಹ್ಮದೇವರು ಸುರಸಮೂಹದಿಂದ ಕೂಡಿಕೊಂಡು ಸೂರ್ಯನಿಗಾಗಿ ಮಂದರಗಿರಿಗೆ ಬಂದರು. ಮಹೇಶ್ವರನ ಮಂದಿರ ಎನಿಸಿದ ಆ ಮಂದರಗಿರಿಯು ಅತ್ಯಂತ ಸುಂದರವಾಗಿದ್ದಿತು. ಅಲ್ಲಿ ಮಹಾದೇವರನ್ನು ಕಂಡು ಆ ಶೂಲಪಾಣಿಗೆ ಸೂರ್ಯನ ವಿಷಯದಲ್ಲಿ ತಿಳಿಹೇಳಿ ಸಮಾಧಾನ ಮಾಡಿ ಆ ಶಿವನನ್ನು ವಾರಾಣಸಿಗೆ ಕರೆತಂದರು. ಚತುರ್ಮುಖನ ಮಾತಿನಂತೆ ಶಂಕರನು ವರಣಾ ನದಿಯಿಂದ ಅಸಿಗೂ, ಅಸಿ ನದಿಯಿಂದ ವರಣೆಗೂ ಉರುಳಿ ಹೊರಳಿ ಶಿವನೇತ್ರಜ್ವಾಲೆಯ ತಾಪವನ್ನು ತಾಳಲಾರದೇ ಮುಳುಮುಳುಗಿ ಏಳುತ್ತಲಿರುವ ಆ ದಿನಕರನನ್ನು ಕೈಹಿಡಿದು ಮೇಲಕ್ಕೆ ಎತ್ತಿದನು. ಎರಡು ತೊರೆಗಳ ತೆರೆನೆರೆಯಲ್ಲಿ ತೇಲಾಡುತ್ತಿರುವ ಆ ಸೂರ್ಯನಿಗೆ ಲೋಲ ಎಂದು ಹೆಸರಿಟ್ಟು ಶಂಕರನು ಕೈಹಿಡಿದು ತಂದು ರಥದಲ್ಲಿ ಕೂಡಿಸಿದನು. ಹೀಗೆ ಶಿವನು ಸೂರ್ಯನನ್ನು ರಥದಲ್ಲಿ ಕೂಡಿಸಿದ ಬಳಿಕ ಬ್ರಹ್ಮದೇವನು ಸುಕೇಶಿಯನ್ನೂ ಅವನ ಬಂಧು-ಬಳಗವನ್ನೂ ಮತ್ತು ಅವನ ಆ ದಿವ್ಯವಾದ ನಗರವನ್ನೂ ಮತ್ತೆ ಮುಗಿಲಿಗೆ ಏರಿಸಿದನು. ಇಂತು ಸುಕೇಶಿಯನ್ನು ಸ್ವಸ್ಥಾನದಲ್ಲಿ ಕೂಡಿಸಿ ಅವನನ್ನು ಬಿಗಿದಪ್ಪಿ ಬಂದು ಚಂದ್ರಶೇಖರನು ಕಾಶಿಯಲ್ಲಿರುವ

ಕೇಶವ ದೇವರಿಗೆ ನಮಸ್ಕಾರ ಮಾಡಿದನು ಮತ್ತು ವೈರಾಜ ಎಂಬ ತನ್ನ ಮನೆಯನ್ನು ಕುರಿತು ಹೊರಟುಹೋದನು. ಹಿಂದಕ್ಕೆ ಸೂರ್ಯನು ಸುಕೇಶಿಯ ನಗರವನ್ನು ನೆಲಕ್ಕೆ ಬೀಳಿಸಿದ್ದನು. ಅದನ್ನು ನೋಡಿ ಶಿವನು ಆ ಸೂರ್ಯನನ್ನು ಕ್ರುದ್ಧದೃಷ್ಟಿಯಿಂದ ನೋಡಿ ನೆಲಕ್ಕೆ ಉರುಳಿಸಿದ್ದನು. ಕೊನೆಗೆ ಆ ಆದಿತ್ಯನನ್ನು ಶಂಕರನು ಮತ್ತೆ ಭುವನದ ತುಂಬೆಲ್ಲ ಬೆಳಕನ್ನು ಬೀರುವದಕ್ಕಾಗಿ ಆಗಸಕ್ಕೆ ಏರಿಸಿದನು. ಆಗ ಬ್ರಹ್ಮದೇವನು ಆ ಸುಕೇಶಿ ದೈತ್ಯನನ್ನು ಅವನ ನಗರ ಹಾಗೂ ಬಂಧು ಬಾಂಧವರೊಂದಿಗೆ ಮುಗಿಲು ಮಂಟಪದಲ್ಲಿ ಯಥಾ ಪೂರ್ವ ಸಂಸ್ಥಾಪನೆ ಮಾಡಿದನು.

ವಾಮನ ಮಹಾಪುರಾಣದಲ್ಲಿ ಸುಕೇಶಿಯ ಆಕ್ರಂದನ ಹದಿನೈದನೆಯ ಅಧ್ಯಾಯವು ಮುಗಿದುದು



## ಹರಿಹರರನ್ನು ಒಲಿಸುವ ವ್ರತಗಳು — ಅಧ್ಯಾಯ - ೧೬

**ನಾರದ** - ಪೂಜ್ಯ ಮಹಾಋಷಿಗಳೇ, ಹರಿಹರರನ್ನು ಒಲಿಸಿಕೊಳ್ಳುವ ವ್ರತಗಳು ಯಾವುವು? ಆರಾಧನೆಯ ಕ್ರಮವು ಏನು ? ಹಿಂದೆ ಚಂದ್ರಾದಿಗಳು ಅಂಥ ವ್ರತಗಳನ್ನು ಮಾಡಿ ಹರಿಹರರನ್ನು ಮೆಚ್ಚಿಸಿ ವರ ಪಡೆದುಕೊಂಡಿರಬಹುದೆಂದು ಕಾಮಿಗಳು ಮಾತನಾಡಿದರು ಎಂದು ತಾವು ಬಣ್ಣಿಸಿದಿರಿ. ಅಂಥ ವ್ರತಗಳು ಯಾವುವು? ಎಂಬುದನ್ನು ತಿಳಿಯಲು ನಮಗೆ ಅಪೇಕ್ಷೆಯಾಗಿದೆ. ದಯವಿಟ್ಟು ಹೇಳಬೇಕು.

**ಪುಲಸ್ಯ** : ಕಲಹ ಕೇಲೀ ಪ್ರಿಯ ನಾರದನೇ, ಶಿವ ಹಾಗೂ ಕೇಶವರ ಪ್ರೀತಿಗಾಗಿ ಇರುವ ವ್ರತಗಳನ್ನು ಹೇಳುತ್ತೇನೆ ಕೇಳು. ಆ ಕಾಮಿಗಳು ಮಾತನಾಡಿದ್ದು ಇವೇ ವ್ರತಗಳ ವಿಷಯವಾಗಿ. ಆಷಾಢಮಾಸವು ಪ್ರಾಪ್ತವಾದಾಗ ಸೂರ್ಯನು ಉತ್ತರಾಯಣದ ಎಲ್ಲೆಯನ್ನು ದಾಟಿ ದಕ್ಷಿಣಾಯಣ ಪರಿಕ್ರಮವನ್ನು ಪ್ರಾರಂಭಿಸುತ್ತಾನೆ. ಆಗ ಸಿರಿದೇವಿಯ ಅರಸನಾದ ಶ್ರೀಮನ್ ನಾರಾಯಣನು ಶೇಷಶಯ್ಯೆ ಅಂದರೆ ಆದಿಶೇಷ ಎಂಬ ಹಾವಿನ ಮೈಮಂಚದ ಮೇಲೆ ಮಲಗಿಕೊಳ್ಳುತ್ತಾನೆ. ಮಹಾಪ್ರಭುವಾದ ಆ ಜಗದೀಶನು ಶಯನ ಮಾಡಲು ಎಲ್ಲ ದೇವತೆಗಳೂ, ಗಂಧರ್ವರೂ, ಯಕ್ಷರೂ ದೇವತಾಮಾತೆಯರೂ ಕ್ರಮವಾಗಿ ಶಯನ ಮಾಡುತ್ತಾರೆ.

**ನಾರದ** : ಶ್ರೀಹರಿಯನ್ನು ಅನುಸರಿಸಿ ಕ್ರಮವಾಗಿ ತಾವೂ ಮಲಗುವ ದೇವತೆಗಳ ಶಯನದ ಕ್ರಮಿಕ ಪ್ರಕಾರವನ್ನು ತಿಳಿಸಿರಿ.

**ಪುಲಸ್ಯ** : ತಪೋಧನನೇ, ಸೂರ್ಯನು ಮಿಥುನರಾಶಿಗೆ ಅಭಿಮುಖನಾಗಿದ್ದಾಗ ಆಷಾಢ ಶುಕ್ಲಪಕ್ಷ ಏಕಾದಶಿಯಂದು ಜಗದೊಡೆಯನಾದ ವಿಷ್ಣು ಶಯನ ಮಾಡುತ್ತಾನೆ. ಆ ಸಮಯದಲ್ಲಿ ಆದಿಶೇಷ ಎಂಬ ಹಾವಿನ ಮೈಯನ್ನೇ ಮಂಚವನ್ನು ಮಾಡಿಕೊಂಡು ಮಲಗಿದ ಕೇಶವನನ್ನು ದರ್ಭ ಪವಿತ್ರಗಳಿಂದ ರಚಿಸಿ ಪೂಜಿಸಬೇಕು. ದ್ವಾದಶಿಯ ದಿನ ಬ್ರಾಹ್ಮಣರನ್ನು ಪೂಜಿಸಬೇಕು. ಸಂತುಷ್ಟರಾದ ಅವರ ಆಶೀರ್ವಾದವನ್ನು ಪಡೆದು ಪೀತಾಂಬರಧಾರಿಯಾದ ಆ ಹರಿಯನ್ನು ತನ್ನ ಹೃದಯ ಸಂಪುಟದಲ್ಲಿ ಒರಗಿಸಿಕೊಂಡು ಅವನನ್ನು ಧ್ಯಾನಿಸುತ್ತಾ ತಾನು ಮಲಗಬೇಕು.

ತ್ರಯೋದಶೀ ದಿನದಂದು ಒಳ್ಳೇ ಸುವಾಸನೆಯುಳ್ಳ ಕದಂಬಹೂಗಳ ಹಾಸಿನಲ್ಲಿ ಕಾಮನು ಮಲಗುತ್ತಾನೆ. ಚತುರ್ದಶೀ ತಿಥಿಯಂದು ಬಂಗಾರ ಕಮಲಗಳಿಂದ ನಿರ್ಮಿತವಾದ ಮೆತ್ತಗಿನ ದಿಂಬುಳ್ಳ ಸುಖಶಯ್ಯೆಯಲ್ಲಿ ಯಕ್ಷರು ಹಾಯಾಗಿ ಒರಗುತ್ತಾರೆ.

ಮುಂದೆ ಹುಣ್ಣಿಮೆ ತಿಥಿಯಂದು ಪಾರ್ವತೀಪತಿಯಾದ ಶಂಕರನು ಹುಲಿದೊಗಲಿನಿಂದ ರಚಿತವಾದ ಹಾಸಿಗೆಯಲ್ಲಿ ಮತ್ತೊಂದು ಹುಲಿ ಚರ್ಮದಿಂದ ಕಟ್ಟಿದ ತನ್ನ ಜಟಾಜೂಟವನ್ನೇ ದಿಂಬನ್ನಾಗಿ ಮಾಡಿಕೊಂಡು ಮಲಗುತ್ತಾನೆ. ಅನಂತರ ಸೂರ್ಯನು ಕರ್ಕಾಟಕ ರಾಶಿಗೆ ಹೊರಳುತ್ತಾನೆ. ಆಗ ದೇವತೆಗಳ ರಾತ್ರಿಯಾದ ದಕ್ಷಿಣಾಯನ ಪ್ರಾರಂಭವಾಗುತ್ತದೆ. ಇದು ಬ್ರಹ್ಮದೇವರ ಶಯನ ಸಮಯ. ಕನ್ನೈದಿಲೆಗಳ ಹಾಸಿನಲ್ಲಿ ಬ್ರಹ್ಮದೇವನು ದಕ್ಷಿಣಾಯನ ಪ್ರಾರಂಭದ ಪ್ರತಿಪದೆಯಂದು ಪವಡಿಸುತ್ತಾನೆ. ಆದರಂತೆ ಬ್ರಹ್ಮದೇವರ ಮಾರ್ಗದರ್ಶನದಲ್ಲಿಯೇ ದ್ವಿತೀಯಾತಿಥಿಯಂದು ವಿಶ್ವಕರ್ಮನೂ, ತದಿಗೆಯ ದಿನ ಪಾರ್ವತಿಯೂ, ಚತುರ್ಥಿ ಯಂದು ಗಣಪತಿಯೂ, ಪಂಚಮಿಯ ದಿನ ಯಮಧರ್ಮನೂ ಶಯನ ಮಾಡುವರು. ಇದರಂತೆ ಸ್ಕಂದನು ಷಷ್ಠಿಯ ದಿನ, ಸೂರ್ಯ ಸಪ್ತಮಿಯಲ್ಲಿ, ಕಾತ್ಯಾಯನೀ ದೇವಿಯು ಅಷ್ಟಮಿಯಲ್ಲಿ, ಲಕ್ಷ್ಮೀದೇವಿಯು ನವಮಿಯಲ್ಲಿ, ಸರ್ಪಗಳು ದಶಮಿಯಲ್ಲಿ, ಸಾಧ್ಯ ಎಂಬ ದೇವತೆಗಳ ಗುಂಪು ಕೃಷ್ಣ ಪಕ್ಷ ಏಕಾದಶೀ ದಿನದಂದು ಶಯನವನ್ನು ಮಾಡುತ್ತಾರೆ. ಇದು ವರ್ಷ ಋತುವಿನಲ್ಲಿ ದೇವತೆಗಳು ಶಯನ ಮಾಡುವ ಕ್ರಮ. ಹೀಗೆ ದೇವತೆಗಳು ಮಲಗುವ ಈ ಕಾಲವೇ ಪ್ರಾವೃಟ್ ಕಾಲ ಎನಿಸುತ್ತದೆ. ಇಂತಹ ವರ್ಷಾ ಕಾಲದಲ್ಲಿ ಕೊಕ್ಕರೆಗಳೆಲ್ಲವೂ ಬಲಾಕೆಗಳೊಡನೆ ಬೆಟ್ಟದ ಮೇಲೆ ಹತ್ತಿ ವಿಹರಿಸುತ್ತವೆ. ಕಾಗೆಗಳು ಗೂಡು ಕಟ್ಟುತ್ತವೆ. ಹೆಣ್ಣು ಕಾಗೆಗಳು ಗರ್ಭಭಾರದಿಂದ ಶಯನ ಮಾಡುತ್ತವೆ. ವಿಶ್ವಕರ್ಮ ಪ್ರಜಾಪತಿಯು ಶಯನ ಮಾಡುವ ದ್ವಿತಿಯಾ ತಿಥಿಯು 'ಪುಣ್ಯಶಯನ ತಿಥಿ' ಎಂದು ಕರೆಯಲ್ಪಡುತ್ತದೆ. ಅದು ಶುಭಕರ ಮತ್ತೂ ಪುಣ್ಯಕರ.

ಆ ದ್ವಿತೀಯಾ ದಿನದಲ್ಲಿ ನಾಲ್ಕು ತೋಳು ಹಾಗೂ ಎದೆಯಲ್ಲಿ ಶ್ರೀವತ್ಸ ಚಿಹ್ನದಿಂದ ಅಲಂಕೃತನಾದ ಶ್ರೀಹರಿಯನ್ನು ಲಕ್ಷ್ಮೀದೇವಿಯೊಡನೆ ಮಂಚದಲ್ಲಿ ಬಿಜಯ ಮಾಡಿಸಿ ಗಂಧಪುಷ್ಪಾದಿಗಳಿಂದ ಪೂಜಿಸಬೇಕು. ರುಚಿಕರವಾದ ಹಣ್ಣುಗಳನ್ನೂ, ಹೂಗಳನ್ನೂ ಆ ಮಂಚದ ಮೇಲೆ ಇಟ್ಟು ಪರಮಾತ್ಮನಿಗೆ ನೈವೇದ್ಯ ಸಮರ್ಪಣ ಮಾಡಬೇಕು. ಅನಂತರ ಭಕ್ತಿಯಿಂದ ಭಗವಂತನಿಗೆ ಹೀಗೆ ಬಿನ್ನಹ ಮಾಡಿಕೊಳ್ಳಬೇಕು.

೨೮೪. ಯಥಾಹಿ ಲಕ್ಷ್ಮ್ಯಾನ ವಿಯುಜ್ಯಸೇ ತ್ವಂ
ತ್ರಿವಿಕ್ರಮಾನಂತ ಜಗನ್ನಿವಾಸ ॥
ತಥಾತ್ವ ಶೂನ್ಯಂ ಶಯನಂ ಸದೈವ
ಚಾಸ್ಮಾಕಮಪ್ಯಸ್ತು ತವ ಪ್ರಸಾದಾತ್ ॥

೨೮೫. ಯಥಾತ್ವಶೂನ್ಯಂ ತವ ದೇವ ಲಬ್ಧಂ
ಸಮಂ ಹಿ ಲಕ್ಷ್ಮ್ಯಾ ಶಯನಂ ಸುರೇಶ ॥
ಸತ್ಯೇನ ತೇನಾಮಿತ ವೀರ್ಯ ವಿಷ್ಣೋ
ಗಾರ್ಹಸ್ಥ್ಯ ನಾಶೋವ ಮಮಾಸ್ತುದೇವ ॥

ಲಕ್ಷ್ಮೀನಾರಾಯಣರಂತೆ ನಾವಿಬ್ಬರೂ ದಂಪತಿಗಳು ಅಗಲದಂತಿರಲಿ. ನಮ್ಮ ಹಾಸಿಗೆ ಶೂನ್ಯವಾಗದಿರಲಿ. ಈ ರೀತಿ ಉಚ್ಚರಿಸಿ ಪುನಃ ಪುನಃ ಅವರನ್ನು ಪ್ರಾರ್ಥಿಸಿ ಅನುಗ್ರಹ ಹೊಂದಿ ಹಗಲು ಉಪವಾಸವಿದ್ದು, ರಾತ್ರಿಯಲ್ಲಿ ತೈಲಕ್ಷಾರ ಇವುಗಳನ್ನು ಬಿಟ್ಟು ಊಟ ಮಾಡಬೇಕು. ಮಾರನೇ ದಿವಸ ಬ್ರಾಹ್ಮಣ ಶ್ರೇಷ್ಠರಿಗೆ ಫಲದಾನ ಮಾಡ ಬೇಕು. ಆ ರೀತಿ ದಾನ ಮಾಡುವ ಕಾಲದಲ್ಲೆಲ್ಲಾ, ಲಕ್ಷ್ಮೀಧರನು ಇದರಿಂದ ಪ್ರೀತನಾಗಲಿ ಎಂದು ಉಚ್ಚರಿಸಬೇಕು. ಈ ವಿಧಾನವನ್ನು ಅನುಸರಿಸಿ ಚಾತುರ್ಮಾಸ್ಯ ವ್ರತವನ್ನು ನಡೆಯಿಸಬೇಕು. ಸೂರ್ಯನು ವೃಶ್ಚಿಕರಾಶಿಗೆ ಬಂದೊಡನೆಯೇ ದೇವತೆಗಳೆಲ್ಲರೂ ನಿದ್ರೆಯಿಂದ ಕ್ರಮವಾಗಿ ಪ್ರಬೋಧ ಹೊಂದುತ್ತಾರೆ ಅಂದರೆ ಎಚ್ಚರಗೊಳ್ಳುತ್ತಾರೆ.

ಸೂರ್ಯನು ತುಲಾರಾಶಿಯಲ್ಲಿರುವಾಗ ವಿಷ್ಣುವು ಮೊದಲು ಎಚ್ಚರಗೊಳ್ಳುತ್ತಾನೆ. ಆ ದ್ವಿತೀಯಾತಿಥಿಯಲ್ಲಿ ತನ್ನ ವೈಭವಕ್ಕೆ ತಕ್ಕಂತೆ ವಿಷ್ಣುವಿನ ಮೂರ್ತಿಯನ್ನು ಹೊದಿಕೆ, ದಿಂಬು ಮೊದಲಾದ ಪರಿಕರಗಳಿಂದ ಕೂಡಿದ ಹಾಸಿಗೆಯನ್ನೂ ದಾನ ಮಾಡಬೇಕು. ಎಲ್ಲಾ ವ್ರತಗಳಲ್ಲೂ ಇದು ಉತ್ತಮವಾದ ವ್ರತವು. ಈ ವ್ರತವನ್ನು ನಡೆಸಿದವನಿಗೆ ಈ ಜನ್ಮದಲ್ಲಿ ವಿಯೋಗವೇ ಉಂಟಾಗುವದಿಲ್ಲ.

ಭಾದ್ರಪದ ಮಾಸದ ಕೃಷ್ಣಾಷ್ಟಮಿಯು ಶುಭಕರವಾದದ್ದು. ಮೃಗಶಿರಾನಕ್ಷತ್ರದಿಂದ ಕೂಡಿದ ಆ ಅಷ್ಟಮಿಯು ಕಾಲಾಷ್ಟಮೀ ಎಂದು ಪ್ರಸಿದ್ಧಿ ಹೊಂದಿದೆ. ಆ ಅಷ್ಟಮಿಯಲ್ಲಿ ಎಲ್ಲ ಲಿಂಗಗಳಲ್ಲೂ ಶಂಕರನು ಸಾನಿಧ್ಯವನ್ನು ಹೊಂದುತ್ತಾನೆ. ಅವನು ಸನ್ನಿಹಿತನಾಗಿರುವಾಗ ಲಿಂಗಪೂಜೆಯು ಅಕ್ಷಯವಾದ ಫಲದಾಯಕವು. ಆ ದಿವಸ ವ್ರತಾಚರಣದಲ್ಲಿ ಆಸೆಯುಳ್ಳ ಪಂಡಿತನು ಗೋಮೂತ್ರದಿಂದಲೂ, ಜಲದಿಂದಲೂ ಸ್ನಾನ ಮಾಡಬೇಕು. ಸ್ನಾನ ಮಾಡಿ ದತ್ತೂರಿ ಹೂಗಳಿಂದ ಶಂಕರನನ್ನು ಪೂಜಿಸಬೇಕು.

ನಾಗಕೇಸರ ವೃಕ್ಷದ ಮೇಣದಿಂದ ಧೂಪ ಮತ್ತು ಜೇನುತುಪ್ಪ, ತುಪ್ಪ ಇವುಗಳ ನೈವೇದ್ಯ. ಇವುಗಳಿಂದ ಪೂಜಿಸಿ ನನ್ನ ವಿಷಯದಲ್ಲಿ ವಿರೂಪಾಕ್ಷನು ಪ್ರೀತನಾಗಲಿ ಎಂದು ಹೇಳಿ ಹಿರಣ್ಯಸಹಿತವಾದ ನೈವೇದ್ಯವನ್ನು ದಕ್ಷಿಣೆಯೊಡನೆ ಬ್ರಾಹ್ಮಣನಿಗೆ ದಾನ ಮಾಡಬೇಕು. ಹಾಗೆಯೇ ಆಶ್ವಯುಜಮಾಸದಲ್ಲೂ ಉಪವಾಸಿಯಾಗಿ ಜಿತೇಂದ್ರಿಯನಾಗಿದ್ದು ನವಮೀ ತಿಥಿಯಲ್ಲಿ ಗೋಮಯದಿಂದ ಸ್ನಾನ ಮಾಡಿ ಕಮಲಗಳಿಂದಲೂ ಸಲ್ಲಕೀ ಮಡ್ಡಿಯ ಧೂಪದಿಂದಲೂ ಪೂಜಿಸಿ, ಮಧು ಮತ್ತು ಕಡಬುಗಳನ್ನು ನೈವೇದ್ಯವನ್ನಾಗಿ ಸಮರ್ಪಿಸಬೇಕು. ಅಷ್ಟಮಿಯಲ್ಲಿ ಉಪವಾಸ ಮಾಡಿ ನವಮಿಯಲ್ಲಿ ಸ್ನಾನ ಮಾಡಬೇಕು. ತಿಲಮಿಶ್ರವಾದ ದಕ್ಷಿಣೆಯನ್ನು ''ಪ್ರಿಯತಾಂ ಮೇ ಹಿರಣ್ಯಾಕ್ಷಃ'' ಎಂದು ಉಚ್ಚರಿಸಿ ದಾನ ಮಾಡಬೇಕು. ಹಾಗೆಯೇ ಕಾರ್ತೀಕ ಮಾಸದಲ್ಲಿ ಹಾಲಿನಿಂದ ಸ್ನಾನ ಮಾಡಬೇಕು. ಕಣಗಲೆ ಹೂಗಳಿಂದ ಪೂಜಿಸಬೇಕು. ಸರಳ ವೃಕ್ಷದ ಹಾಲು ಮಡ್ಡಿಯಿಂದ ಧೂಪವನ್ನು ಮಾಡಿ ಬೆಳ್ಳಿಯ ಪಾತ್ರೆಯೊಡನೆ ನೈವೇದ್ಯವನ್ನು ಬ್ರಾಹ್ಮಣನಿಗೆ ದಾನ ಮಾಡಬೇಕು. ದಾನ ಮಾಡುವ ಕಾಲದಲ್ಲಿ ಭಗವಂತನಾದ ಸ್ಥಾಣುವು ಪ್ರೀತನಾಗಲಿ ಎಂದು ನಮ್ರತೆಯಿಂದ ನುಡಿಯಬೇಕು.

ಅಷ್ಟಮಿಯಲ್ಲಿ ಉಪವಾಸ ಮಾಡಿ ನವಮಿಯಲ್ಲಿ ಸ್ನಾನ ಮಾಡಬೇಕು. ಹೀಗೆಯೇ ಮಾರ್ಗಶಿರ ಮಾಸದಲ್ಲಿಯೂ ಮೊಸರಿನಿಂದ ಸ್ನಾನ, ಬಿಲ್ವಮೇಣದ ಧೂಪ,

ಜೇನುಮಿಶ್ರವಾದ ಅನ್ನದ ನೈವೇದ್ಯದೊಡನೆ ಕೆಂಪುಭತ್ತವನ್ನು ದಕ್ಷಿಣೆಯಾಗಿ ಕೊಡಬೇಕು. ದಾನಮಾಡುವಾಗ "ಶರ್ವನು ಪ್ರೀತನಾಗಲಿ. ಅವನಿಗೆ ನಮಸ್ಕಾರ"ವೆಂದು ಉಚ್ಚರಿಸಿ ಕೊಡಬೇಕು. ಪುಷ್ಯಮಾಸದಲ್ಲಿ ತುಪ್ಪದಿಂದ ಸ್ನಾನ ಮಾಡಬೇಕು. ನಂದ್ಯಾವರ್ತ ಹೂಗಳಿಂದ ಪೂಜೆ, ಒಪ್ಪೆಯ ಮೇಣದಿಂದ ಧೂಪವನ್ನೂ ಜೇನುಮಿಶ್ರವಾದ ಅಕ್ಕಿ, ಗೋಧಿ ಹಿಟ್ಟನ್ನೂ ನೈವೇದ್ಯವಾಗಿಯೂ ಅರ್ಪಿಸಬೇಕು. ದಕ್ಷಿಣೆಯು ರೂಪಾಯಿ ಮೊದಲಾದ ಮೊಹರುಗಳಿಂದ ಕೂಡಿರಬೇಕು. ಜಗದ್ಗುರುವಾದ ರುದ್ರನ ಪ್ರೀತಿಗಾಗಿ "ದೇವೇಶ, ತ್ರ್ಯಂಬಕ ನಿನಗೆ, ನಮ್ಮ ನಮಸ್ಕಾರಗಳು" ಎಂದು ಉಚ್ಚರಿಸಬೇಕು.

ಮಾಘಮಾಸದಲ್ಲಿ ದರ್ಭಾಗ್ರದಿಂದ ಕೂಡಿದ ಶುದ್ಧ ಜಲದಿಂದ ಸ್ನಾನ, ಕುಮುದ (ನೈದಿಲೆ ಹೂವು) ಪುಷ್ಪಗಳಿಂದ ಅರ್ಚನೆ, ಕಡಬೆಮರದ ಹಾಲಿನ ಮಡ್ಡಿಯ ಧೂಪ, ನೈವೇದ್ಯಕ್ಕೆ ಜಲಮಿಶ್ರವಾದ ಅನ್ನ, ಹಾಲು, ಅನ್ನದ ನೈವೇದ್ಯವನ್ನು ಹಿರಣ್ಯಸಹಿತ ದಾನ ಮಾಡಬೇಕು. ದಾನ ಮಾಡುವಾಗ "ಉಮಾಪತಿಯಾದ ಮಹಾದೇವನು ಪ್ರೀತನಾಗಲಿ" ಎಂದು ಉಚ್ಚರಿಸಬೇಕು. ಆರು ತಿಂಗಳುಗಳಲ್ಲೂ ಹೀಗೆಯೇ ಪಾರಣವನ್ನು ಮಾಡಬೇಕು. ಪಾರಣೆಯಾದ ನಂತರ ತ್ರಿನೇತ್ರನ ಅಭಿಷೇಕವನ್ನು ನಡೆಸಬೇಕು.

ಅನಂತರ ಫಾಲ್ಗುಣ ಮಾಸದಲ್ಲಿ ಕೃಷ್ಣಾಷ್ಟಮೀ ದಿವಸ ನಿಯಮದೊಡನೆ ಉಪವಾಸ ಮಾಡಬೇಕು. ಮಾರನೇ ದಿವಸ ಪಂಚಗವ್ಯದಿಂದ ಸ್ನಾನಮಾಡಬೇಕು. ಮಾಘ ಮಲ್ಲಿಗೆಯಿಂದ ಪೂಜಿಸಿ ಚಂದನದಿಂದ ಧೂಪವನ್ನರ್ಪಿಸಬೇಕು. ತುಪ್ಪದಿಂದ ಮಾಡಿದ ನೈವೇದ್ಯವನ್ನು ಅರ್ಪಿಸಿ ಬೆಲ್ಲದ ಅನ್ನವನ್ನು ತಾಮ್ರದ ಪಾತ್ರೆಯಲ್ಲಿ ದಕ್ಷಿಣಾ ಸಹಿತವಾಗಿ ನೈವೇದ್ಯದೊಡನೆ ಬ್ರಾಹ್ಮಣರಿಗೆ ದಾನಮಾಡಬೇಕು. ವಸ್ತ್ರಯುಗ್ಮವನ್ನೂ ದಾನಮಾಡಿ ರುದ್ರನನ್ನು ನಾಮೋಚ್ಚಾರಣಪೂರ್ವಕವಾಗಿ ಸಂತೋಷಗೊಳಿಸಬೇಕು.

ಚೈತ್ರಮಾಸದಲ್ಲಿ ಅತ್ತಿಯ ನೀರಿನಿಂದ ಸ್ನಾನ, ಬೆಟ್ಟದಾವರೆ ಹೂವಿನಿಂದ ಅರ್ಚನ, ಮತ್ತು ಮಹಿಷವೆಂಬ ಗುಗ್ಗುಲವನ್ನು ತುಪ್ಪದಲ್ಲಿ ನೆನಿಸಿ ಧೂಪ, ಘೃತಪಕ್ವ ಮತ್ತು ಕಡಬು ಇವುಗಳ ನೈವೇದ್ಯ. ನೈವೇದ್ಯ ಸಹಿತವಾದ ಕೃಷ್ಣಾಜಿನವೇ ದಕ್ಷಿಣೆ. "ನಗೇಶ್ವರನೇ, ನಿನಗೆ ನಮಸ್ಕಾರವು" ಎಂದು ಹೇಳಿ ಶ್ರದ್ಧೆಯೊಡನೆ ರುದ್ರನನ್ನು ಸಂತೋಷಪಡಿಸಬೇಕು.

ವೈಶಾಖಮಾಸದಲ್ಲಿ ಸುಗಂಧಿಯಾದ ಕುಸುಮೋದಕದಿಂದ ಸ್ನಾನಮಾಡಬೇಕು. ಹೊಸದಾದ ಮಾವಿನ ಹೂವಿನ ಗೊಂಚಲಿನಿಂದ ಶಂಕರನನ್ನು ಪೂಜಿಸಬೇಕು. ಸರ್ಜ ವೃಕ್ಷದ ಹಾಲಿನ ಮಡ್ಡಿಯಿಂದ ಧೂಪವನ್ನೂ ತುಪ್ಪದೊಡನೆ ಫಲವನ್ನೂ ಅರ್ಪಿಸಬೇಕು. ಶಾಲಿಘ್ನ ಎಂಬ ಈಶ್ವರನ ನಾಮವನ್ನು ಜಪಿಸಬೇಕು. ಅನ್ನಾದಿ ನೈವೇದ್ಯ ದೊಡನೆ ಜಲಕುಂಭವನ್ನೂ, ವಸ್ತ್ರವನ್ನೂ ಈಶ್ವರ ತತ್ಪರನಾಗಿ ಬ್ರಾಹ್ಮಣನಿಗೆ ದಾನ ಮಾಡಬೇಕು.

ಜ್ಯೇಷ್ಠ ಮಾಸದಲ್ಲಿ ಆಮಲಕ (ನೆಲ್ಲಿ) ದಿಂದ ಸ್ನಾನ ಮಾಡಬೇಕು. ಎಕ್ಕೆಯ ಹೂಗಳಿಂದ ರುದ್ರದೇವರ ಜಗತ್ಸಂಹಾರಕಾರಿಯಾದ ನೇತ್ರವನ್ನು ಪೂಜಿಸಬೇಕು. ತುಪ್ಪದಿಂದಲೂ, ಮೊಸರಿನಿಂದಲೂ ಸಂಸ್ಕೃತವಾದ ಹುರಿಹಿಟ್ಟನ್ನು ನಿವೇದನ ಮಾಡಬೇಕು, ಪಾದುಕಾಯುಗ್ಮ ಮತ್ತು ಛತ್ರಿ ಇವನ್ನು ನೈವೇದ್ಯದೊಡನೆ ದಾನಮಾಡಬೇಕು. ದಾನಮಾಡುವಾಗ ರುದ್ರದೇವರ ಪ್ರೀತಿಗಾಗಿ "ಎಲೈ, ಭಗನೇತ್ರ ನಾಶಕನೇ, ಪೂಷಣನ ಹಲ್ಲುಗಳನ್ನು ನಾಶಪಡಿಸಿದವನೇ, ನಿನಗೆ ನಮಸ್ಕಾರಗಳು" ಎಂದು ಉಚ್ಚರಿಸಬೇಕು.

ಆಷಾಢ ಮಾಸದಲ್ಲಿ ಬಿಲ್ವದ ಹಣ್ಣಿನಿಂದ ಸ್ನಾನಮಾಡಬೇಕು. ಬಿಳಿದತ್ತೂರಿ ಹೂವಿನಿಂದ ಅರ್ಚಿಸಬೇಕು. ಸಲ್ಲಕಿಯ ಮಡ್ಡಿಯಿಂದ ಧೂಪಿಸಬೇಕು. ತುಪ್ಪದಿಂದ ಮಾಡಿದ ಭಕ್ಷ್ಯಗಳೇ ನೈವೇದ್ಯ ಮತ್ತು ತುಪ್ಪದೊಡನೆ ಗೋಧಿಯನ್ನು ದಾನ ಮಾಡಬೇಕು. ದಕ್ಷಜಯಘ್ನವೆಂಬ ರುದ್ರದೇವರ ಹೆಸರನ್ನು ಘಟ್ಟಿಯಾಗಿ ಉಚ್ಚರಿಸಬೇಕು.

ಶ್ರಾವಣ ಮಾಸದಲ್ಲಿ ಭೃಂಗರಾಜ (ಭೃಂಗಾಮಲಕಕ್ಕೆ ಉಪಯೋಗಿಸುವ ಔಷಧಿ) ದಿಂದ ಸ್ನಾನಮಾಡಬೇಕು ಬಿಲ್ವದಪತ್ರೆ ಮತ್ತು ಫಲಗಳಿಂದ ಪೂಜಿಸಬೇಕು. ಹಾಲು ಮಡ್ಡಿಯ ಧೂಪ, ತುಪ್ಪದ ಭಕ್ಷ್ಯಗಳೇ ನೈವೇದ್ಯ. ಮೊಸರಿನೊಡನೆ ಕಡಬುಗಳನ್ನು, ಚಿಗಳಿಯೊಡನೆ ಮೊಸರನ್ನವನ್ನೂ, ಉದ್ದಿನ ಭಕ್ಷ್ಯ, ಚಕ್ಕುಲಿ ಇವುಗಳನ್ನೂ ದಾನ ಮಾಡಬೇಕು. ಬಿಳಿಯ ಎತ್ತು, ಕಪಿಲವರ್ಣದ ಒಳ್ಳೆಯ ಹಸು, ಇವುಗಳನ್ನು ಚಿನ್ನ ಮತ್ತು ಕೆಂಪು ಬಟ್ಟೆಗಳೊಡನೆ ಬ್ರಾಹ್ಮಣನಿಗೆ ದಕ್ಷಿಣೆಯಾಗಿ ಕೊಡಬೇಕು. ಗಂಗಾಧರ ಎಂಬ ಶಂಭುವಿನ ನಾಮವನ್ನು ಜಪಿಸಬೇಕು.

ಈ ಆರು ತಿಂಗಳುಗಳಲ್ಲಿಯೂ ಬೇರೆ ಆರು ತಿಂಗಳುಗಳಲ್ಲಿಯೂ ಉಪವಾಸದಿಂದ ಪಾರಣೆ ಮಾಡುವದು ಉತ್ತಮ. (ಆಯಾಯ ತಿಂಗಳಲ್ಲಿ ಬರುವ ಅಷ್ಟಮಿಯಲ್ಲಿ ಉಪವಾಸ, ಮಾರನೇ ದಿನ ಪಾರಣೆಯೆಂದರ್ಥ) ಈ ರೀತಿ ಸಂವತ್ಸರ ಪೂರ್ತಿ ವೃಷಭಧ್ವಜನಾದ ಶಂಕರನನ್ನು ಪೂಜಿಸಿದವನು ಅಕ್ಷಯವಾದ ಲೋಕಗಳನ್ನು ಹೊಂದುತ್ತಾನೆ. ಇದು ಮಹೇಶ್ವರನ ವಚನದಿಂದಲೇ ನಿರ್ದೇಶಿಸಲ್ಪಟ್ಟಿದೆ. ಎಲೈ ಮಹರ್ಷಿಯೇ, ಈ ರೀತಿಯಾಗಿ ಪುಣ್ಯಕರವೂ, ಸರ್ವಪಾಪನಾಶಕವೂ ಆದ ಈ ವ್ರತವನ್ನು ಮಹೇಶ್ವರನೇ ಹೇಳಿರುವುದರಿಂದ ಇದು ಯಥಾರ್ಥವೇ ಹೊರತು, ಬೇರೆ ಯೋಚಿಸತಕ್ಕದ್ದಲ್ಲ.

ವಾಮನ ಮಹಾಪುರಾಣದಲ್ಲಿ ಹರಿಹರರನ್ನು ಒಲಿಸುವ ವ್ರತಗಳು
ಎಂಬ ಹದಿನಾರನೇಯ ಅಧ್ಯಾಯವು ಮುಗಿದುದು



## ಕಾತ್ಯಾಯನೀ ಚರಿತೆ

### ಅಧ್ಯಾಯ - ೧೭

ಪುಲಸ್ತ್ಯರು : ಎಲೈ, ಮಹರ್ಷಿಯೇ, ಆಶ್ವಯುಜ ಮಾಸದಲ್ಲಿ ಯಾವಾಗ ಚತುರ್ಮುಖನ ಉತ್ಪತ್ತಿಗೆ ಕಾರಣವಾದ ಪದ್ಮವು ವಿಷ್ಣುವಿನ ನಾಭಿಯಿಂದ ಹೊರಗೆ ಉದ್ಭವಿಸುತ್ತದೆಯೋ ಆ ಸಮಯದಲ್ಲಿ ದೇವತೆಗಳಿಗೆ ಪ್ರೀತಿಪಾತ್ರವಾದ ಉದ್ಯಾನವು ಉತ್ಪನ್ನವಾಗುತ್ತದೆ. ಮನ್ಮಥನ ಕೈಯಲ್ಲಿ ಕದಂಬ ವೃಕ್ಷವು ಉಂಟಾಗುತ್ತದೆ. ರಮಣೀಯವಾದ ಆ ವೃಕ್ಷದಿಂದ ಮನ್ಮಥನು ಸಂತೋಷ ಹೊಂದುತ್ತಾನೆ. ಯಕ್ಷರಾಜನಾದ ಮಣಿಭದ್ರನ ಹಸ್ತದಲ್ಲಿ ಆಲದಮರವು ಹುಟ್ಟುತ್ತದೆ. ಅದರಲ್ಲಿ ಅವನಿಗೆ ಬಹಳ ಪ್ರೀತಿ. ಹೀಗೆಯೇ ಈಶ್ವರನ ಹೃದಯದಲ್ಲಿ ದತ್ತೂರಿ ಗಿಡವು ಬೆಳೆಯುತ್ತದೆ. ಶುಭಕರವಾದ ಆ ಗಿಡದಿಂದ ಶಂಕರನಿಗೆ ಯಾವಾಗಲೂ ಪ್ರೀತಿಯುಂಟಾಗುತ್ತದೆ. ಬ್ರಹ್ಮನ ದೇಹದ ಮಧ್ಯದಿಂದ ಉದ್ಭವಿಸಿ ಪಟ್ಟೆಕಲ್ಲಿನಂತೆ ಪ್ರಕಾಶಿಸುವ ಖದಿರ (ಕಗ್ಗಲಿ) ವೃಕ್ಷವು ಮುಳ್ಳಿನಿಂದ ಕೂಡಿದ್ದರೂ, ಅದು ವಿಶ್ವಕರ್ಮನಿಗೆ ಪ್ರೀತಿಕರವಾಗುತ್ತದೆ. ಹೀಗೆಯೇ ಪಾರ್ವತಿಯ ಕೈಯಿಂದ ಮೊಲ್ಲೆಗಿಡವೂ, ಗಜಾನನ ಕುಂಭಸ್ಥಲದಲ್ಲಿ ಸಿರ್ಗುಂಡೀಗಿಡವೂ ಉಂಟಾಗುತ್ತವೆ.

ಯಮನ ದಕ್ಷಿಣ ಪಾರ್ಶ್ವದಲ್ಲಿ ಮುತ್ತುಗದ ಗಿಡವೂ ಉಂಟಾಗುತ್ತದೆ. ಇದು ಲೋಕಕ್ಕೆ ಬಹು ಕ್ಷೋಭಕರವಾದದ್ದು. ಷಣ್ಮುಖನ ಕೈಯಿಂದ ಬಂಧೂಕ ಪುಷ್ಪದ ಗಿಡವೂ (ಕೆಂಪು ದಾಸವಾಳ), ಸೂರ್ಯನಲ್ಲಿ ಅಶ್ವತ್ಥ ವೃಕ್ಷವೂ, ಕಾತ್ಯಾಯನಿಯಲ್ಲಿ ಬನ್ನಿಯ ಮರವೂ, ಲಕ್ಷ್ಮಿಯಲ್ಲಿ ಬಿಲ್ವದ ಗಿಡವೂ ಕೈಯಿಂದ ಉಂಟಾಗುತ್ತವೆ. ಸರ್ಪಗಳ ಮುಖಭಾಗದಿಂದ ಶರವೆಂಬ ತೃಣವೂ (ಉದ್ದವಾದ ಜೊಂಡು), ವಾಸುಕಿಯ ವಿಸ್ತಾರವಾದ ಪುಚ್ಛಭಾಗದಲ್ಲಿ ಬಿಳುಪಾಗಿಯೂ, ಕಪ್ಪಾಗಿಯೂ ಇರುವ ಗರಿಕೆಯ ಹುಲ್ಲೂ, ಸಾಧ್ಯರ ಹೃದಯದಲ್ಲಿ ಹಸಿರು ಚಂದನ ವೃಕ್ಷವೂ ಉದ್ಭವಿಸುತ್ತವೆ. ಹೀಗೆ ಉಂಟಾದ ವೃಕ್ಷಗಳಿಂದ ಅವರವರಿಗೆ ಪ್ರೀತಿಯುಂಟಾಗುತ್ತದೆ.

ಹೀಗೆ ಉಂಟಾದ ಫಲಪುಷ್ಪ ಸಮೃದ್ಧಿಯಿಂದ ರಮಣೀಯವಾದ ಆಶ್ವಯುಜ ಶುದ್ಧ ಏಕಾದಶಿಯಲ್ಲಿ ನಾರಾಯಣನನ್ನು ಪೂಜಿಸಬೇಕು. ಯಾವನು ಪೂಜಿಸುತ್ತಾನೆಯೋ, ಅವನು ಅಖಂಡಸುಖಿಯೂ ಬಲಿಷ್ಠ (ತೇಜಸ್ವಿ)ನಾಗಿಯೂ ಆಗುತ್ತಾನೆ. ಸುಗಂಧಿಯಾಗಿಯೂ, ವರ್ಣಗಳಿಂದ ಮನೋಹರವಾಗಿಯೂ ಇರುವ ಪತ್ರ ಪುಷ್ಪ ಇವುಗಳಿಂದಲೂ ರಸವತ್ತರವಾದ ಫಲಗಳಿಂದಲೂ ಮುಖ್ಯವಾದ ಔಷಧಿ ವಿಶೇಷಗಳಿಂದಲೂ, ತುಪ್ಪ, ಎಳ್ಳು, ಭತ್ತ, ಗೋಧಿ, ಸಿಹಿ, ಕಾರ, ಹುಳಿ, ಉಪ್ಪು, ಒಗರು ಮೊದಲಾದ ರಸಾನ್ವಿತವಾದ ಅಖಂಡ ವಸ್ತುಗಳ ನಿವೇದನದಿಂದಲೂ ಶರದೃತು ಮುಗಿಯುವವರಿಗೂ ಪೂಜಿಸಬೇಕು.

ಮಹಾತ್ಮನಾದ ನಾರಾಯಣನ ಅನುಗ್ರಹದಿಂದ ಲಬ್ಧವಾದ ಈ ಪದಾರ್ಥಗಳನ್ನು ಅವನ ಪೂಜೆಗಾಗಿ ವರ್ಷಪರ್ಯಂತವೂ ವಿನಿಯೋಗಿಸಿದ್ದಲ್ಲಿ ಅರ್ಪಿತವಾದ ಈ ಪದಾರ್ಥಗಳೆಲ್ಲವೂ ಮನೆಯಲ್ಲಿ ಅಖಂಡವಾಗಿ ವೃದ್ಧಿ ಹೊಂದುವವು. ಆ ಏಕಾದಶಿ

ಯಲ್ಲಿ ಜಿತೇಂದ್ರಿಯನಾಗಿ ಉಪವಾಸ ಮಾಡಿ, ಮಾರನೇದಿನ ಯಾವ ದ್ರವ್ಯದಿಂದ ವ್ರತ ಸ್ನಾನವನ್ನು ಮಾಡುತ್ತಾನೆಯೋ ಅಂತಹ ಪದಾರ್ಥವು ವರ್ಷಪರ್ಯಂತ ಅಖಂಡ ವಾಗಿರುತ್ತದೆ. ಸ್ನಾನ ಮಾಡುವಾಗ ಬಿಳಿಸಾಸುವೆ ಮತ್ತು ಬಿಳಿ ಎಳ್ಳು ಇವುಗಳಿಂದ ಮಲಾಪಕರ್ಷಣ ಚೂರ್ಣವನ್ನು ಮಾಡಿ ಮೈಯನ್ನು ಒರೆಸಿಕೊಳ್ಳಬೇಕು. ಪದ್ಮನಾಭ ನಿಗೂ ಹವಿಸ್ಸಿನಿಂದ (ಘೃತ) ಸ್ನಾನ ಮಾಡಿಸಬೇಕು. ಮೇಲೆ ಹೇಳಿದ ವಸ್ತುಗಳಿಂದಲೇ ಹೋಮವನ್ನು ಮಾಡಿ ಶಕ್ಯಾನುಸಾರ ದಾನ ಮಾಡಬೇಕು.

ಪಾದ ಮೊದಲು ಮಾಡಿ ಸರ್ವಾವಯವಗಳಲ್ಲೂ ಪುಷ್ಪದಿಂದ ಕೇಶವನನ್ನು ಪೂಜಿಸಬೇಕು. ವಿವಿಧ ಸುಗಂಧ ದ್ರವ್ಯಗಳಿಂದ ಧೂಪ ಮಾಡಿ ಸುವರ್ಣ, ರತ್ನ, ವಸ್ತ್ರ ಮೊದಲಾದ ಉತ್ತಮ ದ್ರವ್ಯಗಳಿಂದಲೂ ಆರಾಧಿಸಬೇಕು. ಇದರಿಂದ ಆ ವರ್ಷವೇ ಇವನಿಗೆ ಸುಖಕರವಾದೀತು. ದೇವತಾ ಯೋಗ್ಯವಾದ ಮೋದಕವನ್ನೂ ಚೋಷ್ಯವನ್ನೂ ನಿವೇದಿಸಬೇಕು. ಈ ರೀತಿ ಜಗದ್ಗುರುವಾದ ಪದ್ಮನಾಭನನ್ನು ಪೂಜಿಸಿ ಈ ಮಂತ್ರದಿಂದ ಅವನನ್ನು ಪ್ರಾರ್ಥಿಸಬೇಕು. ಎಲೈ ಪದ್ಮನಾಭನೇ, ಪದ್ಮಾಪ್ರಿಯನೇ, ಮಹಾಜ್ಯೋತಿಯೇ, ನಿನಗೆ ಅನಂತ ನಮಸ್ಕಾರಗಳು. ಎಲೈ ಕೇಶವನೇ, ನಿನ್ನ ಅನುಗ್ರಹದಿಂದ ನನ್ನ ಧರ್ಮಾರ್ಥ ಕಾಮ ಮೋಕ್ಷಗಳೆಂಬ ಪುರುಷಾರ್ಥಗಳು ಅಖಂಡವಾಗಿ ಸಿದ್ಧಿಸಲಿ, ಅರಳಿದ ಕಮಲದಂತೆ ನೇತ್ರಗಳುಳ್ಳ ಎಲೈ, ಪದ್ಮನಾಭನೇ, ನೀನು ಹೇಗೆ ಎಲ್ಲಾ ದೃಷ್ಟಿಯಿಂದಲೂ ಅಖಂಡ ನಾಗಿರುವೆಯೋ, ಅಂತಹ ನಿನ್ನ ಸತ್ಯಸ್ವರೂಪದಿಂದ ನನ್ನ ಧರ್ಮಾದಿಪುರುಷಾರ್ಥಗಳೂ ಅಖಂಡವಾಗಲಿ. ಹೀಗೆಯೇ ಸಂವತ್ಸರ ಪರ್ಯಂತವೂ ಉಪವಾಸ ನಿಯಮದಿಂದ ಇದ್ದು ಸರ್ವ ವಸ್ತುಗಳಲ್ಲೂ ಅಖಂಡತ್ವವನ್ನು ಹೊಂದಲು ವ್ರತವನ್ನು ಆಚರಿಸಬೇಕು. ಈ ವ್ರತವನ್ನು ಹೀಗೆ ಆಚರಿಸಿದರೆ ಸರ್ವದೇವತೆಗಳೂ ಸಂತುಷ್ಟರಾಗುತ್ತಾರೆ.

ಧರ್ಮಾರ್ಥಕಾಮ ಮೋಕ್ಷಗಳು ಅಕ್ಷಯವಾಗಿ ಉಂಟಾಗುತ್ತವೆ. ನಾನು ಹೇಳಿದ ಈ ವ್ರತಗಳೇ ಚಂದ್ರನಿಂದ ಆಚರಿಸಲ್ಪಟ್ಟಿರಬಹುದೆಂದು ಕಾಮಿಗಳು ಊಹಿಸಿದ ವ್ರತಗಳು. ಇನ್ನು ಮುಂದೆ ಈ ವೈಷ್ಣವ ವ್ರತಕ್ಕೆ ಅಂಗವಾದ ವೈಷ್ಣವ ಪಂಜರವನ್ನು ಹೇಳುತ್ತೇನೆ. (ಈ ಪಂಜರದ ಧ್ಯಾನವೂ, ಉಚ್ಚಾರಣೆಯೂ ಶುಭಕರವೂ ರಕ್ಷಕವೂ ಆಗಿರುತ್ತದೆ ಎಂದು ತಾತ್ಪರ್ಯ). ಎಲೈ, ದೇವೇಶನೇ, ನಿನಗೆ ಅನೇಕ ನಮಸ್ಕಾರಗಳು. ಸುದರ್ಶನವೆಂಬ ಚಕ್ರವನ್ನು ಧರಿಸಿ ಪೂರ್ವದಿಕ್ಕಿನಲ್ಲಿ ನನ್ನನ್ನು ರಕ್ಷಿಸು. ಎಲೈ ಪದ್ಮನಾಭನೇ, ಕೌಮೋದರೀ ಎಂಬ ಗದೆಯನ್ನು ಧರಿಸಿ ತೇಜಸ್ವಿಯಾದ ನೀನು ದಕ್ಷಿಣ ದಿಕ್ಕಿನಲ್ಲಿ ನನ್ನನ್ನು ರಕ್ಷಿಸು. ನಾನು ನಿನ್ನಲ್ಲಿ ಶರಣಾಗುತ್ತೇನೆ. ಎಲೈ, ಪುರುಷೋತ್ತಮನೇ, ಪದ್ಮವನ್ನು ಧರಿಸಿ ಪಶ್ಚಿಮ ದಿಕ್ಕಿನಲ್ಲಿ ನನ್ನನ್ನು ರಕ್ಷಿಸು. ನಾನು ನಿನ್ನಲ್ಲಿ ಶರಣಾಗತನಾಗಿರುತ್ತೇನೆ. ಎಲೈ, ಪುಂಡರೀಕಾಕ್ಷನೇ, ಶತ್ರು ನಾಶಕವಾದ ಮುಸಲವನ್ನು ಧರಿಸಿ ಉತ್ತರ ದಿಕ್ಕಿನಲ್ಲಿ ನನ್ನನ್ನು ರಕ್ಷಿಸು. ಜಗನ್ನಾಥನೇ, ನಾನು ನಿನ್ನಲ್ಲಿ ಶರಣಾಗತನಾಗಿರುವೆನು.

ಎಲೈ, ರಾಕ್ಷಸನಾಶಕನೇ, ಶಾರ್ಙ್ಗವೆಂಬ ಧನಸ್ಸನ್ನೂ ನಾರಾಯಣಾಸ್ತ್ರವನ್ನೂ ಧರಿಸಿ ಈಶಾನ್ಯದಿಕ್ಕಿನಲ್ಲಿ ಶರಣಾಗತನಾದ ನನ್ನನ್ನು ರಕ್ಷಿಸು. ಹರಿಯೇ ನಿನಗೆ ನಮಸ್ಕಾರ ಗಳು.

ಎಲೈ, ಆದಿವರಾಹರೂಪಿಯೇ, ಪಾಂಚ ಜನ್ಯವೆಂಬ ಮಹಾಶಂಖವನ್ನೂ ವಿಕಸಿತ ವಾದ ಪದ್ಮ ವನ್ನೂ ಧರಿಸಿ ಆಗ್ನೇಯ ದಿಕ್ಕಿನಲ್ಲೂ ನನ್ನನ್ನು ರಕ್ಷಿಸು. ಎಲೈ ಅಪ್ರಾಕೃತವಾದ ನೃಸಿಂಹ ಮೂರ್ತಿಯೇ, ಅನೇಕ ಸೂರ್ಯರಂತೆ ಪ್ರಕಾಶಮಾನವಾದ ಕವಚವನ್ನೂ ಖಡ್ಗ, ಗುರಾಣಿಗಳನ್ನೂ ಧರಿಸಿ ನೈಋತ್ಯ ದಿಕ್ಕಿನಲ್ಲೂ ನನ್ನನ್ನು ರಕ್ಷಿಸು.

ಎಲೈ, ಹಯಗ್ರೀವನೇ, ವೈಜಯಂತೀ ಎಂಬ ಮಾಲಿಕೆಯನ್ನೂ, ಶ್ರೀವತ್ಸವೆಂಬ ರತ್ನವನ್ನೂ, ಧರಿಸಿ ವಾಯುವ್ಯ ದಿಕ್ಕಿನಲ್ಲೂ ನನ್ನನ್ನು ರಕ್ಷಿಸು. ನಿನಗೆ ಅನಂತ ನಮಸ್ಕಾರ ಗಳು. ಎಲೈ ಶತ್ರುಗಳಿಂದ ಜಯಿಸಲ್ಪಡದ ಲೋಕೋತ್ತರ ಮಂಗಲಮೂರ್ತಿಯೇ, ಜನಾರ್ಧನನೇ, ಗರುಡವಾಹನನಾದ ನೀನು ಯಾವಾಗಲೂ ಅಂತರಿಕ್ಷದಲ್ಲಿ ನನ್ನನ್ನು ರಕ್ಷಿಸು. ಎಲೈ, ಅಜಿತ ಮೂರ್ತಿಯೇ, ಅಪರಾಜಿತನೇ, ನನ್ನನ್ನು ರಕ್ಷಿಸು. ನಿನಗೆ ನಮಸ್ಕಾರಗಳು. ಸಮುದ್ರರೂಪನಾದ ಮತ್ಸ್ಯಮೂರ್ತಿಯೇ, ವಿಶಾಲಾಕ್ಷವೆಂಬ ವಾಹನವನ್ನೇರಿ ಪಾತಾಳದಲ್ಲೂ ನನ್ನನ್ನು ರಕ್ಷಿಸು. ನಿನಗೆ ನಮಸ್ಕಾರಗಳು. ಎಲೈ, ಪುರುಷೋತ್ತಮನೇ, ಕೈಗಳು, ತಲೆ, ಪಾದ ಸರ್ವಾವಯವ ಇವುಗಳಿಂದ ರಕ್ಷಕವಾದ ಬಾಹುಪಂಜರವನ್ನೇರ್ಪಡಿಸಿ ನನ್ನನ್ನು ಸರ್ವದಿಕ್ಕುಗಳಲ್ಲೂ ರಕ್ಷಿಸು. ನಿನಗೆ ಅನಂತ ನಮಸ್ಕಾರಗಳು. ಎಲೈ ದ್ವಿಜೋತ್ತಮನಾದ ನಾರದನೇ, ಈಗ ನಾನು ಹೇಳಿದ ವೈಷ್ಣವ ಪಂಜರವು ಪೂರ್ವದಲ್ಲಿ ಭಗವಂತನಾದ ಶಂಕರನಿಂದಲೇ ಕಾತ್ಯಾಯನಿಗೆ ಉಪದೇಶಿಸ ಲ್ಪಟ್ಟಿತು. ಇದರಿಂದ ರಕ್ಷಣೆಯನ್ನು ಹೊಂದಿದ ಕಾತ್ಯಾಯನಿಯು ತನ್ನ ಸಾಮರ್ಥ್ಯದಿಂದ ಮಹಿಷಾಸುರನನ್ನೂ ಸಮರ, ರಕ್ತಬೀಜ ಮತ್ತು ಇತರ ರಾಕ್ಷಸರನ್ನೂ ನಾಶಪಡಿಸಿದಳು.

**ನಾರದ :** ಮಹರ್ಷಿಯೇ ಮಹಿಷನೆಂಬುವನಾರು? ರಕ್ತಬೀಜಾದಿಗಳು ಯಾರು? ಮಹಿಷಾಸುರನನ್ನು ನಾಶ ಮಾಡಿದ ಕಾತ್ಯಾಯಿನಿ ಎಂಬುವಳಾರು? ಮತ್ತು ಸಮರ, ಮಹಿಷ, ರಕ್ತಬೀಜ ಇವರು ಯಾರ ಮಕ್ಕಳು? ಎಲ್ಲಿ ಇರುತ್ತಾರೆ ? ಇವೆಲ್ಲವನ್ನೂ ವಿಸ್ತಾರವಾಗಿ ದಯವಿಟ್ಟು ಹೇಳಬೇಕು.

**ಪುಲಸ್ತ್ಯರು :** ಎಲೈ, ದೇವರ್ಷಿಯೇ, ಸರ್ವ ಪಾಪ ನಾಶಕವಾದ ಈ ಕಥೆಯನ್ನು ಹೇಳುತ್ತೇನೆ ಕೇಳಬೇಕು. ಸರ್ವ ವರಪ್ರದಳಾದ ದುರ್ಗಾದೇವಿಯೇ, ಇಲ್ಲಿ ಕಾತ್ಯಾಯಿನೀ ಎಂದು ಕರೆಯಲ್ಪಟ್ಟಿದ್ದಾಳೆ. ಪೂರ್ವದಲ್ಲಿ ಜಗತ್ತನ್ನೆಲ್ಲಾ ಕ್ಷೋಭೆಗೊಳಿಸುವಷ್ಟು ಭಯಂಕರವಾದ ರಂಭಕರಂಭರೆಂಬ ಬಲಶಾಲಿಗಳಾದ ರಾಕ್ಷಸರಿಬ್ಬರಿದ್ದರು. ಅವರು ಮಾಲವಟನೆಂಬ ಯಕ್ಷನ ಆಶ್ರಯದಲ್ಲಿದ್ದರು. ಅವರು ಅಪುತ್ರವಂತರಾದುದರಿಂದ ಪುತ್ರ ಪ್ರಾಪ್ತಿಗಾಗಿ ಪಂಚನದವೆಂಬ ಕ್ಷೇತ್ರದಲ್ಲಿ ಬಹುವರ್ಷ ಪರ್ಯಂತ ತಪಸ್ಸನ್ನು ಮಾಡತೊಡಗಿದರು. ಅವರಲ್ಲಿ ಕರಂಭನು ಜಲಮಧ್ಯದಲ್ಲಿಯೂ, ರಂಭನು ಅಗ್ನಿ ಮಧ್ಯದಲ್ಲಿಯೂ (ನಾಲ್ಕು ಕಡೆಗಳಲ್ಲೂ ಅಗ್ನಿಯನ್ನು ಜ್ವಾಲೆಗೊಳಿಸಿ ಮಧ್ಯದಲ್ಲಿ ತಾನು ನಿಂತು ಮಾಡುವ ತಪಸ್ಸು) ನಿಂತು ಉಗ್ರವಾದ ತಪಸ್ಸಿಗೆ ಪ್ರಾರಂಭಿಸಿದರು.

ನೀರಿನಲ್ಲಿ ಅಡಗಿ ತಪಸ್ಸನ್ನು ಮಾಡುತ್ತಿರುವ ಕರಂಭನನ್ನು ಇಂದ್ರನು ಮೊಸಳೆಯ ರೂಪದಿಂದ ಪ್ರವೇಶಿಸಿ ಕಾಲುಗಳನ್ನು ಹಿಡಿದು ಮನಬಂದಂತೆ ಹಿಂಸಿಸಿಕೊಂದು ಹಾಕಿದನು. ಅಂತಹ ಸಹೋದರನ ನಾಶದಿಂದ ಬಹಳ ದುಃಖ ಹೊಂದಿದ ರಂಭನು

ಸಾಹಸಿಯಾಗಿ ತನ್ನ ಕತ್ತನ್ನು ತಾನೇ ಕತ್ತರಿಸಿ ಅಗ್ನಿಯಲ್ಲಿ ಹೋಮ ಮಾಡಲು ಅಪೇಕ್ಷಿಪಟ್ಟನು. ಅಪೇಕ್ಷೆಗೆ ತಕ್ಕಂತೆ ಕೇಶಪಾಶಗಳನ್ನು ಕೈಯಿಂದ ಸೆಳೆದು ಸೂರ್ಯನಂತೆ ಜ್ವಲಿಸುವ ಕತ್ತಿಯನ್ನು ಹಿಡಿದು ತನ್ನ ತಲೆಯನ್ನು ಕತ್ತರಿಸಲು ಉದ್ಯುಕ್ತನಾದ ಈ ರಂಭನನ್ನು ಅಗ್ನಿಪುರುಷನೇ ತಡೆದನು.

ಆ ರಂಭನನ್ನು ಕುರಿತು ಅಗ್ನಿಯು 'ಎಲೈ ದೈತ್ಯ ಶ್ರೇಷ್ಠನೇ, ನಿನ್ನನ್ನು ನೀನೇ ನಾಶ ಮಾಡಿಕೊಳ್ಳಬೇಡ ಪರರ ವಧೆಯೂ ದಾಟಲಶ್ಯಕವಾದ ಮಹಾಪಾಪಕ್ಕೆ ಕಾರಣ ವಾಗುತ್ತದೆ. ಆತ್ಮವಧೆಯಂತೂ ಅದಕ್ಕಿಂತಲೂ ಕ್ರೂರವಾದ ಮಹಾಪಾಪಕ್ಕೆ ಕಾರಣ ವಾಗುತ್ತದೆ. ನೀನು ಯಾವ ಇಷ್ಟವನ್ನು ಅಪೇಕ್ಷಿಸಿ ಇಂತಹ ಸಾಹಸಕ್ಕೆ ಕೈ ಹಾಕಿರುವೆಯೋ ಅಂತಹ ವರವನ್ನು ನಿನ್ನ ಇಷ್ಟ ಬಂದಂತೆ ಕೇಳಿಕೋ, ಕೊಡುವೆನು. ಮರಣ ಹೊಂದ ಬೇಡ. ಮೃತನಾದವನಿಗೆ ಈ ಲೋಕದ ಕಥೆಯೇ ನಷ್ಟವಾದೀತು. (ಪರಲೋಕದ ಫಲಕ್ಕಾಗಿ ಸಾಹಸಪಡುವವನಿಗೆ ಮರಣ ಉಂಟಾದರೂ ಪರಲೋಕದ ಸುಖಕ್ಕೆ ಕುಂದಿಲ್ಲ. ಪಶು ಪುತ್ರಾದಿ ಇಹಲೋಕದ ಸುಖ ಸಾಧನಕ್ಕಾಗಿ ಸಾಹಸಪಡುವವನಿಗೆ ತಾನು ಬದುಕಿದ್ದರೆ ಅವುಗಳಿಂದ ಸುಖವೇ ಹೊರತು, ಇಲ್ಲದಿದ್ದರೆ ಅಂತಹ ಸುಖಸಾಧನಗಳಿಂದ ತನಗೇನೂ ಫಲವಿಲ್ಲ. ಆದುದರಿಂದ ಈ ಲೋಕದ ಸುಖದಲ್ಲಿ ಆಸೆ ಇರುವವನು ಮರಣವನ್ನು ತಾನಾಗಿಯೇ ಹೊಂದಬಾರದೆಂದು ತಾತ್ಪರ್ಯ).

ಅನಂತರ ರಂಭನು ಅಗ್ನಿಯನ್ನು ಕುರಿತು ''ನನಗೆ ಅಂತಹ ವರವನ್ನು ಕೊಡಲು ನಿನಗೆ ಇಷ್ಟವಿದ್ದಲ್ಲಿ ನಿನ್ನ ತೇಜಸ್ಸಿಗಿಂತಲೂ ಅಧಿಕ ತೇಜಸ್ಸುಳ್ಳ ಮೂರು ಲೋಕವನ್ನು ಜಯಿಸುವ ಪುತ್ರನು ನನಗೆ ಉಂಟಾಗಲಿ, ಎಲ್ಲಾ ದೇವತೆಗಳಿಗೂ ಅವನು ಅಜೇಯನಾಗಿರ ಬೇಕು. ವಾಯುವಿನಂತೆ ಮಹಾಬಲಶಾಲಿಯಾಗಿಯೂ, ಕಾಮರೂಪಿಯಾಗಿಯೂ, ಶಸ್ತ್ರಾಸ್ತ್ರ ಪಾರಂಗತನಾಗಿಯೂ ಇರಬೇಕು'' ಎಂದು ಕೇಳಲಾಗಿ ಅಗ್ನಿಯು ಅವನಿಗೆ ''ಹಾಗೇ ಆಗಲಿ'' ಎಂದು ವರವಿತ್ತನು. ಆದರೆ ಅಂತಹ ಅಸುರನು ''ಕಾಮಾತುರನಾಗಿ ಯಾವಳಲ್ಲಿ ಮನಸೋಲುವನೋ, ಅವಳಿಂದಲೇ ಅವನು ಮೃತನಾಗುವನು'' ಎಂದು ಆ ವರಕ್ಕೆ ವಿಶೇಷ ನಿಯಮವನ್ನೂ ಏರ್ಪಡಿಸಿದನು.

ಅಗ್ನಿಯಿಂದ ಹೇಳಲ್ಪಟ್ಟ ರಂಭನು ಅನೇಕ ಯಕ್ಷರಿಂದ ಕೂಡಿರುವ ಮೂಲವಟ ನೆಂಬ ಯಕ್ಷನನ್ನು ನೋಡಿ ತನ್ನ ಕೃತಕೃತ್ಯತೆಯನ್ನು ತಿಳಿಸಲು ಹೊರಟನು. ಆ ಯಕ್ಷರ ಮನೆಯಲ್ಲಿ ಮತ್ತಾರಿಗೂ ಇಲ್ಲದಿರುವ ಪದ್ಮನಿಧಿಯೇ ಇದ್ದುದರಿಂದ ಅದಕ್ಕೆ ಅನುಬಂಧಿ ಯಾದ ಆನೆ, ಕುದುರೆ, ಎಮ್ಮೆ, ಹಸು, ಕುರಿ, ಆಡು ಮೊದಲಾದ ಸರ್ವವಿಧವಾದ ಪಶುಸಮೃದ್ಧಿಯೂ ಅಲ್ಲಿ ತುಂಬಿದ್ದಿತ್ತು. ಅವುಗಳೆಲ್ಲವನ್ನೂ ನೋಡಿ ದಾನವೇಶ್ವರನಾದ ಈ ರಂಭನು ಚೆನ್ನಾಗಿರುವ ಮೂರು ವರ್ಷದ ಒಂದು ಎಮ್ಮೆಯಲ್ಲಿ ಕಾಮಾತುರನಾದನು. ಆ ಎಮ್ಮೆಯೂ ಕೂಡ ಕಾಮಪರವಶತೆಯಿಂದ ರಂಭನನ್ನು ಅಪೇಕ್ಷಿಸಿ ತ್ವರೆಯಿಂದ ಓಡಿಬಂದಿತು. ರಂಭನೂ ಸಹ ಭವಿತವ್ಯತೆಗೆ ಅದೀನನಾಗಿ ಆ ಮಹಿಷಿಯಲ್ಲಿ ರಮಿಸಿದನು.

ಆಗ ಆ ಮಹಿಷಿಯಲ್ಲಿ ಗರ್ಭವು ಮೂಡಿತು. ಅವಳನ್ನು ಕರೆದುಕೊಂಡು ರಂಭನು ಪಾತಾಲಲೋಕಕ್ಕೆ ಹೋಗಿ ತನ್ನ ಮನೆಯನ್ನು ಸೇರಿದನು.

ಅಲ್ಲಿದ್ದ ಬಂಧುವರ್ಗಕ್ಕೆ ಸೇರಿದ ದಾನವರೆಲ್ಲರೂ ಈ ವಿಷಯದಲ್ಲಿ ಅವನನ್ನು ಪ್ರಶ್ನೆ ಮಾಡಿದರು. ವಿಷಯವು ತಿಳಿದ ಮೇಲೆ ಅವರೆಲ್ಲರೂ ಇವನು (ಮಹಿಷೀ ಗಮನದಿಂದ) ಅಕಾರ್ಯ ಮಾಡಿರುವನೆಂದೂ, ನಿಂದ್ಯನೆಂದೂ ಇವನನ್ನು ಎಲ್ಲರೂ ಪರಿತ್ಯಾಗ ಮಾಡಿದರು. ಬಂಧುಗಳಿಂದ ತಿರಸ್ಕರಿಸಲ್ಪಟ್ಟ ಈ ರಂಭನು ಅವರನ್ನು ಬಿಟ್ಟು ಆಶ್ರಯಾರ್ಥಿಯಾಗಿ ಪುನಃ ಮಾಲ ವಟನನ್ನೇ ಸೇರಿದನು. ಗರ್ಭಿಣಿಯಾಗಿದ್ದ ಇವನ ಮಹಿಷಿಯೂ ಪತಿಯೊಡನೆ ಪುಣ್ಯಕರವಾದ ಯಕ್ಷರ ಗೋಷ್ಠಿಯನ್ನೇ ಸೇರಿದಳು.

ಆ ಯಕ್ಷಮಂಡಲದಲ್ಲಿ ರಂಭನು ವಾಸಮಾಡಿಕೊಂಡಿರುವಾಗ ಸಾಧು ವನದಲ್ಲಿ ಯೌವನವತಿಯಾದ ಆ ಮಹಿಷಿಯು ಶುಭ್ರನಾಗಿಯೂ, ಕಾಮರೂಪಿಯಾಗಿಯೂ ಇರುವ ಮಹಿಷಾಸುರನನ್ನು ಪ್ರಸವಿಸಿದಳು. ಪ್ರಸವವಾದ ನಂತರ ಋತುಮತಿಯಾದ ಈ ಮಹಿಷಿಯನ್ನು ಕಾಮಾತುರವಾದ ಮತ್ತೊಂದು ಮಹಿಷವು ನೋಡಿತು. ಮಹಿಷಿಯು ಈ ಸಂದರ್ಭವನ್ನು ತಿಳಿದು ತನ್ನ ಶೀಲರಕ್ಷಣೆಗಾಗಿ ಪತಿಯಾದ ರಂಭನನ್ನು ಮೊರೆ ಹೊಕ್ಕಿತು. ಆಗ ಕಾಮಪರವಶತೆಯಿಂದ ಮೋರೆಯನ್ನು ಎತ್ತಿಕೊಂಡು ಬರುತ್ತಿರುವ ಆ ಮಹಿಷವನ್ನು ನೋಡಿ ರಂಬನು ಕತ್ತಿಯನ್ನು ಒರೆಯಿಂದ ಹಿರಿದುಕೊಂಡು ವೇಗದಿಂದ ಅದನ್ನೇ ಅನುಸರಿಸಿ ಧಾವಿಸಿದನು. ಹೀಗೆ ಕೋಪದಿಂದ ಹೋದ ರಂಭನು ಆ ಮಹಿಷದಿಂದಲೇ ಕೊಂಬುಗಳಿಂದ ಎದೆಯಲ್ಲಿ ತಿವಿಯಲ್ಪಟ್ಟು ಹೃದಯಭೇದನದಿಂದ ಭೂಮಿಯಲ್ಲಿ ಬಿದ್ದು ಸತ್ತನು. ಪತ್ನಿಯಾದ ಆ ಮಹಿಷಿಯು ತನ್ನ ರಕ್ಷಣೆಗಾಗಿ ಯಕ್ಷರಲ್ಲಿ ಶರಣಾಗತಳಾದಳು. ಆ ಯಕ್ಷರು ಗುಹ್ಯಕರೊಡಗೂಡಿ ಆ ಮಹಿಷವನ್ನು ತಡೆದೋಡಿಸಿ ರಂಭನ ಪತ್ನಿಯಾದ ಮಹಿಷಿಯನ್ನು ರಕ್ಷಿಸಿದರು. ಯಕ್ಷರಿಂದ ಆ ಪ್ರಕಾರ ತಡೆಯಲ್ಪಟ್ಟ ಕಾಮಾತುರನಾದ ಆ ಮಹಿಷವು ಸಂತಾಪ ಹೊಂದಿ ಒಂದು ಸರೋವರದಲ್ಲಿ ಬಿದ್ದಿತು. ಆ ದಿವ್ಯ ಸರಸ್ಸಿನಲ್ಲಿ ಬಿದ್ದ ಒಡನೆಯೇ ಅದು ಮೃತವಾಗಿ ದೈತ್ಯರೂಪದಿಂದ ಆವಿರ್ಭಾವ ಹೊಂದಿತು. ಈ ದೈತ್ಯನೇ ಪರಾಕ್ರಮಶಾಲಿಯೆಂದು ಪ್ರಖ್ಯಾತನಾದ ನಮರನು.

ಯಕ್ಷರನ್ನೇ ಆಶ್ರಯಿಸಿಕೊಂಡು ರಂಭಪತ್ನಿಯಾದ ಮಹಿಷಿಯು ಆ ವನದಲ್ಲಿ ಕಾಲಯಾಪನ ಮಾಡುತ್ತಿದ್ದುದರಿಂದ ಮೂಲವಟನೇ ಮೊದಲಾದ ಆ ಯಕ್ಷರು ಮೃತನಾದ ದೈತ್ಯನನ್ನು (ರಂಭ) ಸಂಸ್ಕಾರಕ್ಕಾಗಿ ಚಿತೆಯನ್ನು ಏರಿಸಿದರು. ಪತ್ನಿಯಾದ ಮಹಿಷಿಯು ಪಾತಿವ್ರತ್ಯಕ್ಕೆ ಅನುಗುಣವಾಗಿ ತಾನೇ ಚಿತೆಯನ್ನು ಏರಿದಳು.

ಆಗ ಅವರ ಚಿತಾಗ್ನಿಯ ಮಧ್ಯದಿಂದ ಭಯಂಕರವಾದ ಒಬ್ಬ ಪುರುಷನು ಮೇಲಕ್ಕೆದ್ದನು. ರೌದ್ರಾಕಾರನಾದ ಆ ದೈತ್ಯನು ಕೈಯಲ್ಲಿ ಕತ್ತಿಯನ್ನು ಹಿಡಿದುಕೊಂಡು ಅಲ್ಲಿ ಯಕ್ಷರನ್ನೆಲ್ಲಾ ಓಡಿಸಿದನು. ಅಲ್ಲಿದ್ದ ಮಹಿಷಾಸುರನೊಬ್ಬನೇ ಉಳಿದನು. ಈ ರೀತಿ ಚಿತಾಗ್ನಿಯಿಂದ ಹುಟ್ಟಿದ ದೈತ್ಯನೇ ರಕ್ತಬೀಜನೆಂದು ಪ್ರಸಿದ್ಧಿ ಪಡೆದು ಇಂದ್ರ, ರುದ್ರ, ಸೂರ್ಯ, ವಾಯು ಇವರೇ ಮೊದಲಾದ ಎಲ್ಲಾ ದೇವತೆಗಳನ್ನು ಜಯಿಸಿದನು.

ಇಂತಹ ಪ್ರಭಾವಶಾಲಿಯೂ, ತೇಜಸ್ವಿಯೂ ಆದ ಮಹಿಷಾಸುರನೆಂಬ ಈ ದೈತ್ಯನನ್ನು ಇವನಿಂದಲೇ ಜಯಿಸಲ್ಪಟ್ಟ ಶಂಬರ, ತಾರಕ ಮೊದಲಾದ ಅಸುರ ಶ್ರೇಷ್ಠರು ಅಸುರರಾಜ್ಯದಲ್ಲಿ ಪಟ್ಟಾಭಿಷೇಕ ಮಾಡಿದರು. ಅನಂತರ ಇವನ ಹಾವಳಿಯನ್ನು

ಸಹಿಸಲಾರದೆ ಲೋಕಪಾಲಕರು, ಸೂರ್ಯನು ಇವರೇ ಮೊದಲಾದ ದೇವತೆಗಳು ತಮ್ಮ ತಮ್ಮ ಸ್ಥಾನಗಳೆಲ್ಲವನ್ನೂ ಬಿಟ್ಟರು. ಸೂರ್ಯಚಂದ್ರರೂ ಸ್ಥಾನಗಳನ್ನು ಬಿಟ್ಟ ಮೇಲೆ ಪ್ರಪಂಚವೆಲ್ಲವೂ ಅಂಧಕಾರದಿಂದ ಆವರಿಸಲ್ಪಟ್ಟಿತು.

ವಾಮನ ಮಹಾಪುರಾಣದಲ್ಲಿ ಕಾತ್ಯಾಯನೀ ಚರಿತೆ ಎಂಬ ಹದಿನೇಳನೇಯ ಅಧ್ಯಾಯವು ಮುಗಿದುದು



## ವಿಂಧ್ಯಾಚಲದಗತ್ತನ್ನ ತಗ್ಗಿಸಿದ ಅಗಸ್ತ್ಯರು | ಅಧ್ಯಾಯ - ೧೮

ಅನಂತರ ಮಹಿಷಾಸುರನು ಸೋಲಿಸಿದ ದೇವತೆಗಳು ತಮ್ಮ ತಮ್ಮ ಠಾಣಗಳನ್ನು ಬಿಟ್ಟರು. ಬ್ರಹ್ಮದೇವನನ್ನು ಮುಂದೆ ಮಾಡಿಕೊಂಡು ಶಂಕ, ಚಕ್ರ, ಗದಾಧಾರಿಯಾದ ಶ್ರೀಹರಿಯನ್ನು ನೋಡಲು ಹೊರಟರು. ಆಯುಧ ಹಿಡಿದು ವಾಹನ ಏರಿ ಬಂದ ಆ ದೇವಾಧಿದೇವತೆಗಳು ವಿಷ್ಣುವಿನ ಬಳಿಗೆ ಬಂದಾಗ ಶಂಕರನೂ ಅಲ್ಲಿಯೇ ಕುಳಿತಿದ್ದನು. ಹರಿಹರರಿಬ್ಬರೂ ಪರಸ್ಪರ ಸಂಭಾಷಣೆ ಗೈಯುತ್ತ ಸುಖಾಸೀನರಾಗಿದ್ದರು. ಆ ಇಬ್ಬರೂ ದೇವೋತ್ತಮರನ್ನು ಒಂದೆಡೆ ಕಂಡ ಸುರರ ಹೃದಯವು ಸಂತಸದುಂಬಿತು. ಆ ಪರಮಾತ್ಮ, ಪರಮೇಶ್ವರರಿಬ್ಬರಿಗೂ ದೇವತೆಗಳು ನಮಸ್ಕರಿಸಿದರು. ಇವರಿಬ್ಬರೂ ತಮ್ಮ ಇಷ್ಟಾರ್ಥ ಸಾಧಕರು ಎಂಬ ಭರವಸೆ ಅವರಲ್ಲಿ ಮೂಡಿದ್ದಿತು. ಆ ದೇವತಾ ಹೃದಯದಲ್ಲಿ ಆ ಮಹಾಸುರನ ದುಷ್ಟೇಷ್ಟೆ ದುರ್ವ್ಯಾಪಾರಗಳನ್ನು ಆ ದೇವದ್ವಯರಿಗೆ ತಿಳಿಸಿ ವಿಜ್ಞಾಪನೆಯನ್ನು ಮಾಡಿಕೊಂಡರು.

"ಪ್ರಭು, ಅಶ್ವಿನೀ ದೇವತೆಗಳು ರವಿ, ಚಂದ್ರ, ಅಗ್ನಿ ವಾಯು, ಬ್ರಹ್ಮ, ವರುಣ, ಇಂದ್ರ ಮುಂತಾದ ಎಲ್ಲ ದೇವತೆಗಳ ಅಧಿಕಾರಗಳನ್ನೂ ಆ ಮಹಿಷನು ಕಸಿದುಕೊಂಡಿದ್ದಾನೆ. ಅವರ ಸ್ಥಾನಗಳನ್ನು ಆಕ್ರಮಿಸಿದ್ದಾನೆ, ಸ್ವರ್ಗದಿಂದ ಅವರನ್ನೆಲ್ಲ ತಳ್ಳಿದ್ದಾನೆ. ಸ್ಥಾನಭ್ರಷ್ಟರಾದ ನಾವೆಲ್ಲರೂ ನೆಲದಲ್ಲಿ ನೆಲಸಿದ್ದೇವೆ.

ಅದಕ್ಕಾಗಿ ನಿಮ್ಮೀರ್ವರಿಗೂ ನಾವು ಶರಣು ಬಂದಿದ್ದೇವೆ. ನಮ್ಮ ಈ ಬಿನ್ನಹವನ್ನು ಅವಧರಿಸಿ ಸೂಕ್ತವಾದುದನ್ನು ಮಾಡಿರಿ. ನಮಗೆ ಹಿತವಾವುದು ಎಂಬುದನ್ನು ತಿಳಿಸಿರಿ. ಅಭಯ ನೀಡಿರಿ. ಇಲ್ಲದಿದ್ದರೆ ಆ ದಾನವನು ಸಮರದಲ್ಲಿ ನಮ್ಮ ಸಮಾಧಿ ಕಟ್ಟುವುದು ನಿಶ್ಚಿತ. ನಮಗೆ ಇನ್ನು ಮುಂದೆ ಅಧೋ ಲೋಕಗಳಿಗೆ ಅಧಃ ಪಾತವೇ ಗತಿಯಾದೀತು."

ದೇವತೆಗಳ ಈ ದಯನೀಯ ದುರ್ದಶೆಯನ್ನು ಕಂಡು, ದೀನ ನುಡಿಗಳನ್ನು ಕೇಳಿ ಶ್ರೀಹರಿ ಶಂಕರ ಇಬ್ಬರ ಮನಸ್ಸು ಕರಗಿತು. ನಾರಾಯಣನಿಗೆ ಬಹಳ ಕೋಪ ಬಂದಿತು. ಪ್ರಳಯ ಕಾಲದ ಅಗ್ನಿಯಂತೆ ಕಾಣುತ್ತಲಿದ್ದ ಆ ಶ್ರೀಹರಿ. ಅದರಂತೆ ಶಂಕರನಿಗೂ ಭಯಂಕರ ರೋಷ, ಬ್ರಹ್ಮನಿಗೂ ಬ್ರಹ್ಮಾಂಡ ಸಿಟ್ಟು. ಹೀಗೆ ಕೋಪಾಕ್ರಾಂತರಾದ ಹರಿಹರ ಬ್ರಹ್ಮಾದಿ ತ್ರಿಮೂರ್ತಿಗಳ ಕೋಪಾಟೋಪವನ್ನು ಕಂಡು ಇಂದ್ರಾದಿ ದೇವತೆಗಳಲ್ಲಿಯೂ ಸಿಟ್ಟು ಉಕ್ಕಿತು. ಇಂತು ಒಮ್ಮೆಲೆ ಎಲ್ಲ ದೇವತೆಗಳ ಮೈಮನಗಳಲ್ಲಿ ಚಿಮ್ಮಿ ಹರಿದ ಕ್ರೋಧಾಗ್ನಿಯಿಂದ ಒಂದು ತೇಜಃ ಪಿಂಡವು ಹೊರಹೊಮ್ಮಿತು.

ಎಲ್ಲ ದೇವಾಧಿದೇವತೆಗಳ ರೋಷದಿಂದ ಆ ರಕ್ತವಾದ ಕ್ರುದ್ಧ ಮುಖ ಮುದ್ರೆಯಿಂದ ಚಿಮ್ಮಿ ಹೊಮ್ಮಿ ಹೊರಬಂದ ಆ ತೇಜಸ್ಸು ಬೆಂಕಿಯ ಬೆಟ್ಟದಂತೆ ಧಗ ಧಗಿಸಿತು. ಒಂದೆಡೆಗೆ ಒಟ್ಟೈಸಿ ರಾಶಿಯಾದ ಆ ಉರಿಯು ಅಲ್ಲಿಯೇ ಸಮೀಪದಲ್ಲಿದ್ದ ಕಾತ್ಯಾಯನ ಮುನಿಯ ಆಶ್ರಮಕ್ಕೆ ನುಗ್ಗಿ ಹರಿಯಿತು.

ಆ ಮಹಾಮಹರ್ಷಿಯು ದೇವತಾ ವೃಂದದ ಕ್ರೋಧಾಗ್ನಿಯ ಸಾಮೂಹಿಕ ಆವಿಷ್ಕಾರದಂತಿರುವ ಬೆಂಕಿಯ ಮೊಟ್ಟೆಯನ್ನು ತನ್ನ ಅಸಾಧಾರಣವಾದ ತೇಜಸ್ಸಿನಿಂದ ಸಂಸ್ಕರಿಸಿ ಸ್ವೀಕರಿಸಿದನು. ಮತ್ತು ತನ್ನ ತಪಸ್ತೇಜಸ್ಸಿನಿಂದ ಸುಸಂಸ್ಕೃತವಾದ ಆ ದೈವೀ ತೇಜಸ್ಸನ್ನು ಹೊರಗೆ ಬಿಟ್ಟನು. ಸಾವಿರ ಉರಿಯುವ ಸೂರ್ಯರ ತಂಡಕ್ಕೆ ಸಮಾನವಾಗಿದ್ದ ಅದರ ದೀಪ್ತಿ. ಆ ತೇಜಃಪುಂಜದಿಂದ ಕಾತ್ಯಾಯಿನಿ ಎಂಬ ಚಿಗರೆಗಂಗಳ ಚೆಲುವೆಯು ಉದಿಸಿ ನಿಂತಳು. ಯೋಗ ಸಿದ್ಧಿಯಿಂದ ಅವಳ ದೇಹವು ಸಿದ್ಧವಾಗಿದ್ದಿತು. ಕಾತ್ಯಾಯನಿ ಮುನಿಯ ಮುಖಾಂತರ ದೇವೋತ್ತಮರ ಕೋಪರಸಾವೇಶದಿಂದ ಮೈದಾಳಿದ ಆ ಕಾತ್ಯಾಯನಿಯ ದೇಹ ವಿನ್ಯಾಸದ ಬಗೆಯನ್ನು ಕೇಳಿರಿ.

''ಮಹಾದೇವರ ತೇಜಸ್ಸಿನಿಂದ ಅವಳ ಮುಖವು ಉದಿಸಿತು. ಅವರ ಮೂರು ಕಣ್ಣುಗಳಲ್ಲಿಯೂ ಅಗ್ನಿಯ ಕೈವಾಡ ಕಾಣುತ್ತಿತ್ತು. ಅವಳ ಕೇಶಪಾಶದಲ್ಲಿ ಯಮನ ಕೃಷ್ಣಕರಾಲತೆ ಹೊಮ್ಮಿತ್ತು. ಹರಿಯ ಅನುಗ್ರಹ ವಿಶೇಷದಿಂದ ಹದಿನೆಂಟು ಭುಜಗಳು ಅವಳಲ್ಲಿ ಮೂಡಿ ನಿಂತಿದ್ದವು. ಅವಳ ಉಬ್ಬಿದ ಎರಡು ಎರಡು ಎದೆಗಳ ನಿರ್ಮಾಣದಲ್ಲಿ ಚಂದ್ರನ ತೇಜಸ್ಸು ಕಾರಣವಾಗಿದ್ದಿತು. ಇದರಂತೆ ಇಂದ್ರನ ತೇಜಸ್ಸಿನಿಂದ ನಡು, ವರುಣನ ತೇಜಸ್ಸಿನಿಂದ ತೊಡೆ ತೋಳು ಕಾಲು ಹಾಗೂ ಕಟಿಯ ಹಿಂಬದಿ ಭಾಗಗಳು ರೂಪಗೊಂಡಿದ್ದವು. ಪ್ರಪಂಚದ ಪಿತಾಮಹನಾದ ಬ್ರಹ್ಮದೇವನ ತೇಜಸ್ಸಿನಿಂದ ಅವಳ ಕಮಲ ಕೋಮಲವಾದ ಕಾಲುಗಳು ಮೈದಾಳಿದ್ದವು. ಹನ್ನೆರಡು ಸೂರ್ಯರ ತೇಜಸ್ಸುಗಳಿಂದ ಪಾದದ ಬೆರಳುಗಳು ಉಂಟಾದರೆ, ಇಂದ್ರನ ತೇಜಸ್ಸಿನಿಂದ ಕೈಬೆರಳುಗಳು ಚಿಗರಿದ್ದವು. ಕಾಮನ ಬಿಲ್ಲಿನಂತೆ ರಮ್ಯಾನಮ್ಯವಾಗಿ ಕಂಗೊಳಿಸುವ ಅವಳ ಎರಡು ಹುಬ್ಬುಗಳು ಸಾಧ್ಯ ದೇವತೆಗಳ ತೇಜಸ್ಸಿನಿಂದ ಕಾಂತಿಯ ನಾಂತು ಮೆರೆದವು.

ಹದಿನಾಲ್ಕು ಪ್ರಜಾಪತಿಗಳ ತೇಜಸ್ಸಿನಿಂದ ಹಲ್ಲುಗಳೂ ಯಕ್ಷರ ತೇಜಸ್ಸಿನಿಂದ ಸಂಪಿಗೆಯ ಮೂಗೂ ವಾಯುದೇವನ ತೇಜಸ್ಸಿನಿಂದ ಕಿವಿಗಳೂ ನಿರ್ಮಾಣಗೊಂಡಿದ್ದವು. ಹೀಗೆ ದೇವೋತ್ತಮರ ತೇಜಸ್ಸಿನ ಸಾರಾರ್ಕದಿಂದ ಸಾಕಾರಗೊಂಡ ಆ ತೇಜೋಮೂರ್ತಿಯು ಕಾತ್ಯಾಯನ ಮುನಿಯ ಮೂಲಕ ಮಹೀಮಂಡಲಕ್ಕೆ ಮೈದಳೆದು ಬಂದಿದ್ದರಿಂದ ಕಾತ್ಯಾಯಿನೀ ಎಂಬ ಹೆಸರಿನಿಂದ ಅವಳು ಜಗತ್‌ಪ್ರಸಿದ್ಧಳಾದಳು. ಬೇಡಿದವರಿಗೆಲ್ಲ ವರ ಕೊಡುವ ಮಹಾದೇವನು ಅವಳಿಗೆ ತ್ರಿಶೂಲವನ್ನು ಕೊಟ್ಟನು. ಶ್ರೀವಿಷ್ಣುವು ಅವಳ ಕೈಯಲ್ಲಿ ಚಕ್ರವನ್ನು ಇಟ್ಟನು. ವರುಣನು ಒಂದು ಶಂಖವನ್ನು ಕೊಟ್ಟನು. ಅಗ್ನಿಯು ಶಕ್ತಿ ಆಯುಧವನ್ನು ಕೊಡಮಾಡಿದರೆ, ವಾಯು ಬಿಲ್ಲನ್ನು ನೀಡಿದನು. ಸೂರ್ಯನು ಬಾಣ ಮತ್ತು ಅಕ್ಷಯ ಬತ್ತಳಿಕೆ ಹಾಗೂ ಬಾಣಗಳನ್ನು ಒದಗಿಸಿದನು. ವಜ್ರವೇ ಇಂದ್ರನ ಉಡುಗೊರೆಯಾಗಿದ್ದಿತು. ಯಮ ಯಮದಂಡವನ್ನು ಕೊಟ್ಟನು, ಅದರೊಂದಿಗೆ ಮೃತ್ಯುಗಂಟೆಯು ಘಣ ಘಣಿಸುತ್ತಲಿತ್ತು. ಭೀಕರವಾದ

ಗದೆಯೊಂದನ್ನು ಕುಬೇರನು ಕಾಣಿಕೆಯಾಗಿ ಕೊಟ್ಟನು. ಬ್ರಹ್ಮದೇವರ ಬಳುವಳಿ ಜಪಸರ ಮತ್ತು ಕಮಂಡಲು. ಮೃತ್ಯವು ಒಂದು ಕತ್ತಿಯನ್ನು ಗುರಾನಿಯೊಂದಿಗೆ ತಂದು ಒಪ್ಪಿಸಿತು. ಚಂದ್ರನು ಒಂದು ಚಾಮರವನ್ನೂ, ಚಾರುಹಾರವನ್ನೂ ಸಲ್ಲಿಸಿದನು. ಸಮುದ್ರರಾಜನು ಅವಳ ಕೊರಳಿಗೆ ಮಾಲೆಯನ್ನು ಹಾಕಿದನು. ಹಿಮಾಲಯವು ಅವಳಿಗೆ ಏರಲಿಕ್ಕೆಂದು ಒಂದು ಸಿಂಹವನ್ನು ತಂದು ಒಪ್ಪಿಸಿದನು. ದೇವಶಿಲ್ಪಿಯಾದ ವಿಶ್ವಕರ್ಮನು ಅವಳ ಮುಡಿಗೆ ಚೂಡಾಮಣಿಯನ್ನೂ, ಕಿವಿಗೆ ಕುಂಡಲಗಳನ್ನೂ, ಕತ್ತಿಗೆ ಚಂದ್ರಹಾರವನ್ನೂ ಕೈಗೆ ಒಂದು ಕುಠಾರವನ್ನೂ ಕರುಣಿಸಿದನು. ಗಂಧರ್ವರಾಜನು ಪಾನಪಾತ್ರೆಯನ್ನು ಮತ್ತು ಉಪಯುಕ್ತವಾದ ಬೆಳ್ಳಿಯ ಪೂರ್ಣ ಪಾತ್ರೆಯನ್ನೂ ಕೊಟ್ಟನು. ಸರ್ಪರಾಜನು ಹಾವಿನ ಹಾರಗಳನ್ನೂ, ಋತುಗಳು ಎಂದೂ ಬಾಡದ ಹೂವಿನಹಾರಗಳನ್ನೂ ಆ ಕಾತ್ಯಾಯಿನಿಗೆ ಕೊಟ್ಟು ತಮ್ಮ ತಮ್ಮ ಅಂತರಂಗದ ಸಂತಸವನ್ನು ವ್ಯಕ್ತಪಡಿಸಿದರು.

ದೇವತೆಗಳು ಕೊಟ್ಟ ಆ ಎಲ್ಲ ಕಾಣಿಕೆಗಳಿಂದ ತುಷ್ಟಪುಷ್ಟಳಾದ ಆ ಮಹಾದೇವಿ ಕಾತ್ಯಾಯಿನಿಯು ತನ್ನ ಮೂರು ಕಣ್ಣುಗಳನ್ನು ತೆರೆದು ಆನಂದದಿಂದ ಅಟ್ಟಹಾಸಗೈದಳು. ಇಂದ್ರನೇ ಮೊದಲಾದ ದೇವತಾ ಧುರೀಣರು ಅವಳನ್ನು ಹೊಗಳಿ ಹಾಡಿದರು. ವಿಷ್ಣು, ಮಹಾದೇವ, ಚಂದ್ರ, ಅಗ್ನಿ, ವಾಯು, ಸೂರ್ಯರೂ ಅವಳ ಆ ಪ್ರಾರ್ಥನಾ ಪದ್ಯಕ್ಕೆ ದನಿ ಕೂಡಿಸಿದರು. ದೇವತೆಗಳಿಂದ ಪೂಜಿತಳಾದ ಕಾತ್ಯಾಯಿನಿದೇವಿಗೆ ನಮಸ್ಕಾರ. ಯೋಗದಿಂದ ಪರಿಶುದ್ಧವಾದ ಶರೀರವುಳ್ಳ ಪವಿತ್ರಮೂರ್ತಿಗೆ ನಮ್ಮ ವಂದನೆ.

ನಿದ್ರೆಯ ಸ್ವರೂಪದಿಂದ ಪ್ರಪಂಚವನ್ನೆಲ್ಲಾ ವ್ಯಾಪಿಸಿ ಲೋಕಕ್ಕೆಲ್ಲ ಹಸಿವು ಬಾಯಾರಿಕೆ, ನಾಚಿಕೆ, ಅಂಜಿಕೆಗಳನ್ನು ಕೊಡುವ ಕಾಂತಿರೂಪಿಣಿಯಾದ ನಿನಗೆ ನಮಸ್ಕಾರ ವಿರಲಿ. ಶ್ರದ್ಧೆ, ಸ್ಮರಣ, ಅಭಿವೃದ್ಧಿ, ಕ್ಷಮೆ, ಅನುಕೂಲ, ಶಕ್ತಿ, ಶೌರ್ಯ, ಬುದ್ಧಿ, ಶಾಂತಿ, ಅಜ್ಞಾನ, ಜ್ಞಾನ, ಅನುಭವ ಮುಂತಾದವುಗಳನ್ನು ಪ್ರಾಣಿಗಳಿಗೆ ತಂದುಕೊಟ್ಟು ಪ್ರಪಂಚದ ಭವಿತವ್ಯವನ್ನೇ ರೂಪಿಸುವ ಮಹಾದೇವಿಗೆ ನಮೋನಮಃ. ಹೀಗೆ ಹಿರಿಯ ದೇವತೆಗಳಿಂದ ಹೊಗಳಿ ಹಾಡಲ್ಪಟ್ಟ ಆ ದೇವಿಯು ಹಿಮವಂತನು ಕೊಟ್ಟ ಸಿಂಹವಾಹನವನ್ನು ಏರಿದಳು. ಅನೇಕ ಶೈಲ ಶ್ರೇಣಿಗಳಿಂದ ಮೆರೆಯುವ ವಿಂಧ್ಯ ಮಹಾಪರ್ವತವನ್ನು ಕುರಿತು ನಡೆದಳು. ಆ ವಿಂಧ್ಯಾಚಲದ ಶೃಂಗಗಳು ಮುಗಿಲಿನಷ್ಟೇ ಉತ್ತುಂಗ. ಬಾನೆತ್ತರ ಅವುಗಳಿಗೆ ತೀರ ಹತ್ತಿರ. ಆದರೆ ಹಿಂದಕ್ಕೆ ಅಗಸ್ತ್ಯಮುನಿಯು ಆ ವಿಂಧ್ಯಾದ್ರಿಯ ಉತ್ತುಂಗ ಶೃಂಗಗಳು ಇನ್ನೂ ಮಹೋನ್ನತವಾಗಿ ಬೆಳೆಯದಂತೆ ತಡೆದು ಆಳತೆಯಲ್ಲಿ ಅದುಮಿ ಹಿಡಿದಿಟ್ಟಿದ್ದಾನೆ.

**ನಾರದ :** ಮಹಾತ್ಮರಾದ ಅಗಸ್ತ್ಯರು ವಿಂಧ್ಯಾಚಲದ ಉತ್ತುಂಗ ಶೃಂಗಗಳ ಎತ್ತರವನ್ನು ಕಡಿಮೆಮಾಡಿ ಕುಳ್ಳ ಶಿಖರಗಳನ್ನಾಗಿ ಮಾರ್ಪಡಿಸಲು ಕಾರಣವೇನು? ಯಾರಿಗಾಗಿ ಇದೆಲ್ಲ ಘಟಾಟೋಪ? ಅದರ ಮೂಲ ಕಾರಣವೇನು? ಇದೆಲ್ಲವನ್ನೂ ಶುದ್ಧಸತ್ವರಾದ ತಾವು ಅರುಹಬೇಕು.

**ಪುಲಸ್ತ್ಯ :** ಪೂರ್ವಕಾಲದಲ್ಲಿ ವಿಂಧ್ಯಪರ್ವತವು ಮೇಲೆ ಮೇಲೆ ಬೆಳೆಯುತ್ತ ಹೋಗಿ ಆಕಾಶದಲ್ಲಿ ಗಗನ ಸಂಚಾರಿಯಾದ ಸೂರ್ಯದೇವನ ಗತಿಯೇ ಪ್ರತಿಬದ್ಧವಾಯಿತು.

ಹೀಗೆ ತನ್ನ ನಭದ ನಡೆಗೆ ತಡೆಯಾದನ್ನು ನೋಡಿ ನೊಂದ ನೇಸರನು ನೇರವಾಗಿ ಕೊಡದ ಕೂಸು ಎನಿಸಿದ ಅಗಸ್ತ್ಯ ಮುನಿಗಳ ಬಳಿಗೆ ಬಂದನು. ಆಗ ಅವರು ಹೋಮವನ್ನು ಮಾಡುತ್ತಲಿದ್ದರು. ಅದು ಮುಗಿಯುವವರೆಗೆ ರವಿಯು ಅಲ್ಲಿಯೇ ಕಾದು ಕುಳಿತು ಕೊನೆಗೆ ಅವರನ್ನು ಕೇಳಿಕೊಂಡನು.

ಮುನಿಮಂಡಲದ ಮಹೇಂದ್ರರಂತಿರುವ ಅಗಸ್ತ್ಯ ಮಹರ್ಷಿಗಳೇ, ನಾನು ದೂರದಿಂದ ಬಂದಿದ್ದೇನೆ. ನಿಮ್ಮನ್ನೇ ಶರಣು ಹೊಂದಿದ್ದೇನೆ. ನೀವೀಗ ಪ್ರಪಂಚವನ್ನೇ ಉದ್ಧರಿಸಬೇಕಾಗಿದೆ. ನಾನು ಬೇಡುವ ದಾನವನ್ನು ನೀವು ನೀಡಿರಿ, ಅದರಿಂದ ನಾನು ಸುರವೃಂದದಲ್ಲಿ ನೆಮ್ಮದಿಯಿಂದ ಬಾಳಿ ಬದುಕುವಂತಾಗುತ್ತದೆ.'' ಆದಿತ್ಯನ ಈ ಮಾತುಗಳನ್ನು ಕೇಳಿ ಅಗಸ್ತ್ಯ ಮುನಿಗಳು ಅವನಿಗೆ ವಚನವಿತ್ತರು.

''ದಿವಾಕರ ನಿನ್ನ ಮಾತು ಲೋಕೋಪಯೋಗಿಯಾಗಿರುತ್ತದೆ. ಆದುದರಿಂದ ನಿನ್ನ ಮನಸ್ಸಿನ ಅಪೇಕ್ಷೆಯಂತೆ ನಾನು ದಾನ ಕೊಡುತ್ತೇನೆ. ನಿನ್ನ ಮಾತನ್ನು ನೆಡೆಸಿಕೊಡುತ್ತೇನೆ. ಇಂದಿವರೆಗೆ ನನ್ನ ಬಳಿ ಬೇಡ ಬಂದ ಯಾವ ಯಾಚಕನೂ ಬರಿಗೈಯಿಂದ ಮರಳಿ ಹೋಗಿದ್ದಿಲ್ಲ. ಆದುದರಿಂದ ನೀನಾದರೂ ನಿನಗೆ ಬೇಕಾದುದನ್ನು ಕೇಳು ಕೊಟ್ಟು ಬಿಡುತ್ತೇನೆ.'' ಅಗಸ್ತ್ಯರ ಈ ನುಡಿ ಆದಿತ್ಯನಿಗೆ ಅಮೃತಪ್ರಾಯವಾಗಿತ್ತು. ಅವನು ಶಿರದ ಮೇಲೆ ಕರಜೋಡಿಸಿ ವಿನಯದಿಂದ ಹೇಳಿದನು-

''ಸ್ವಾಮಿ, ಹಿರಿಯ ಗಿರಿಯಾದ ಈ ವಿಂಧ್ಯವು ತನ್ನ ಖರಶಿಖರಗಳಿಂದ ಬೆಳೆಯುತ್ತ ನನ್ನ ಮುಗಿಲು ಪಯಣದ ಮಾರ್ಗವನ್ನೇ ಪ್ರತಿಬಂಧಿಸುತ್ತದೆ. ಆದುದರಿಂದ ಪೂಜ್ಯರಾದ ತಾವು ಆ ಬೆಟ್ಟದ ಬೆಳವಣಿಗೆಯನ್ನು ತಡೆದು ಅದರ ಶೈಲಶಿಖರಗಳನ್ನು ಕುಳ್ಳಗೈಸಲು ಪ್ರಯತ್ನಿಸಬೇಕು.'' ಭಾಸ್ಕರನ ಈ ಬಿನ್ನಹವನ್ನು ಆಲಿಸಿದ ಕೊಡದ ಕುಮಾರ ಅಗಸ್ತ್ಯರು ಆ ಮಾರ್ತಾಂಡನಿಗೆ ಭರವಸೆಯನ್ನಿತ್ತರು.

''ಸೂರ್ಯ ಈ ನಿನ್ನ ಕೆಲಸವು ಆಯಿತೆಂದು ತಿಳಿ ಆ ವಿಂಧ್ಯಪರ್ವತದ ಎತ್ತರವಾದ ಶಿಖರಗಳೆಲ್ಲವೂ ಈಗಲೇ ಕುಳ್ಳಾಗಿವೆ ಎಂದು ಭಾವಿಸು. ನಿನ್ನ ಕಿರಣಗಳಿಂದ ಆ ಮಹಾರಣ್ಯವೂ ಸೋತು ಹೋಗುವಂತೆ ಮಾಡುತ್ತೇನೆ. ನನ್ನ ಪಾದವನ್ನು ಆಶ್ರಯಿಸಿದವರಿಗೆ ವ್ಯಥೆಯುಂಟೆ? ನನಗೆ ಮೊರೆಹೊಕ್ಕ ನಿನಗೆ ವೃಥಾ ಚಿಂತೆ ಏಕೆ?

ಹೀಗೆ ಸೂರ್ಯದೇವನಿಗೆ ಭರವಸೆಯನ್ನು ನೀಡಿ ಅಗಸ್ತ್ಯನು ಆ ಆದಿತ್ಯನನ್ನು ಸ್ತುತಿಸಿದನು. ಭಕ್ತಿಯಿಂದ ಕೊಂಡಾಡಿದನು. ದಂಡಕಾರಣ್ಯವನ್ನು ದಾಟಿ ಆ ಮುದುಕ ಮಹರ್ಷಿಯು ವಿಂಧ್ಯಾಚಲಕ್ಕೆ ನಡೆದು ಬಂದನು. ವಿಂಧ್ಯಾದ್ರಿಯನ್ನು ಸೇರಿದ ಬಳಿಕ ಆ ಮಹಾಮುನಿಯು ಈ ಬಾನೆತ್ತರ ಬೆಟ್ಟವನ್ನು ಕುರಿತು ಮಾತನಾಡಿದನು.

''ಗಿರಿವರ, ದಕ್ಷಿಣದಿಕ್ಕಿನಲ್ಲಿ ನಿನ್ನ ಶೈಲಶ್ರೇಣಿಗಳಾಚೆ ಅತ್ಯಂತ ಪುಣ್ಯಕರವಾದ ಮಹಾತೀರ್ಥ ಒಂದಿದೆ. ನಾನು ಅತ್ಯಂತ ಮುದುಕನಾಗಿದ್ದೇನೆ. ನಿನ್ನ ಈ ತುಂಗ ಶೃಂಗ ಸಂಘಗಳನ್ನು ಉಲ್ಲಂಘಿಸಿ ಆಚೆಗೆ ಹೋಗಲು ಅಶಕ್ತನಾಗಿದ್ದೇನೆ. ಆದುದರಿಂದ ಈಗ ನೀನು ಸ್ವಲ್ಪ ಕುಳ್ಳಗಾಗು.'' ಆ ಮಹಾಮಹರ್ಷಿಯ ಮಾತುಗಳನ್ನು ಕೇಳಿ ವಿಂಧ್ಯಪರ್ವತವು ತನ್ನ ಶೈಲ ಶೃಂಗಗಳ ಎತ್ತರವನ್ನು ಕಡಿಮೆ ಮಾಡಿ ಕುಳ್ಳಗಾಗಿ ನಿಂತಿತು.

ಆ ಮುನಿ ಮನಿಷ್ಟಿಯು ತನ್ನ ಮುದಿವೇಷದಿಂದ ತಾತ್ಪೂರ್ತಿಕವಾಗಿ ತಲೆ ತಗ್ಗಿಸಿ ಗಿಡ್ಡವಾದ ಆ ಗುಡ್ಡವನ್ನು ದಾಟಿ ಈಚೆಗೆ ಬಂದನು. ಬಳಿಕ ಅದಕ್ಕೆ ಹೇಳಿದನು.

''ಗಿರಿರಾಜನೇ, ನಾನು ದಕ್ಷಿಣ ದಿಕ್ಕಿನಲ್ಲಿರುವ ಆ ಮಹಾತೀರ್ಥದಲ್ಲಿ ಮೈತೊಳೆದು ಮಿಂದು ಮತ್ತೆ ನನ್ನ ಅಶ್ರಮಕ್ಕೆ ಮರಳಿ ಬರುವವರೆಗೆ ನೀನು ಬೆಳೆಯತಕ್ಕದ್ದಲ್ಲ. ಒಂದು ವೇಳೆ ನಾನು ಬರುವಷ್ಟರಲ್ಲಿ ನಿನ್ನ ಬೆಟ್ಟದ ತಲೆಮಲೆಗಳು ಬಾನೆತ್ತರ ಬೆಳೆದು ನಿಂತರೆ ನನ್ನ ಮೀರಿದಂತೆ. ಅದು ನನಗೆ ದೊಡ್ಡ ಅವಮಾನ.'' ನಾನು ಶಾಪ ಕೊಡುವೆ.

ಹೀಗೆ ಕಟ್ಟಪ್ಪಣೆ ಮಾಡಿ ಪೂಜ್ಯರಾದ ಆ ಅಗಸ್ತ್ಯ ಮುನಿಗಳು ದಕ್ಷಿಣ ದಿಕ್ಕಿಗೆ ಹೊರಟುಹೋದರು. ಅತ್ತ ಹೋಗಿ ದಕ್ಷಿಣಾ ಪಥವನ್ನೆಲ್ಲ ಆಕ್ರಮಿಸಿದರು. ಅಲ್ಲಿಯೇ ತಮ್ಮ ಒಂದು ರಮ್ಯವಾದ ಆಶ್ರಮವನ್ನು ನಿರ್ಮಿಸಿದರು. ಆ ಎಲೆಮನೆಗೆ ಚಿನ್ನದ ತೋರಣ ಕಟ್ಟಿದರು. ಅಲ್ಲಿ ತಮ್ಮ ಮೆಚ್ಚಿನ ಮಡದಿಯಾದ ಲೋಪಾಮುದ್ರೆಯನ್ನು ತಂದಿಟ್ಟರು. ಹೀಗೆ ದಕ್ಷಿಣದಲ್ಲಿ ಮನೆಮಾಡಿ ಮಡದಿಯನ್ನಿಟ್ಟು ತಾವು ಮುಗಿಲು ಮಾರ್ಗದಿಂದಲೇ ಬೇಕಾದಾಗ ತನ್ನ ಮೊದಲಿನ ಆಶ್ರಮಕ್ಕೆ ಬಂದು ಹೋಗುತ್ತಿದ್ದರು.

ಋತುಕಾಲ ಪರ್ವಕಾಲ ಹಾಗೂ ಪುಣ್ಯ ದಿನಗಳಲ್ಲಿ ಮಾತ್ರ ತಪ್ಪದೇ ತಮ್ಮ ಈ ಹೊಸ ಆಶ್ರಮದಲ್ಲಿ ಇರುತ್ತಿದ್ದರು. ಉಳಿದ ದಿನಗಳಲ್ಲಿ ದಂಡಕಾರಣ್ಯದಲ್ಲಿರುವ ತಮ್ಮ ಮೊದಲಿನ ಆಶ್ರಮದಲ್ಲಿಯೇ ಇದ್ದು ತಪಸ್ಸನ್ನು ಮಾಡುತ್ತಲಿದ್ದರು. ಅಮಿತ ಕಾಂತಿಯುಳ್ಳ ಆ ಅಗಸ್ತ್ಯ ಮುನಿಗಳ ಈ ಯಾತಾಯಾತವು ನಭೋಮಾರ್ಗದಿಂದಲೇ ನಡೆಯುತ್ತಿದ್ದಿತು. ಇದನ್ನು ತಿಳಿಯದ ವಿಂಧ್ಯ ಪರ್ವತವು ತಾನು ಮತ್ತೆ ಬೆಳೆದರೆ ಮಹರ್ಷಿಗೆ ಮರಳಿ ಬರಲು ಅತಂಕ ಉಂಟಾಗಬಹುದೆಂಬ ಭಯದಿಂದ ಬೆಳೆಯದೇ ಕುಗ್ಗಿ ಕುಳ್ಳಾಗಿಯೇ ಉಳಿಯಿತು.

ಹೀಗೆ ಮಹಾಮುನಿ ಅಗಸ್ತ್ಯರಿಂದ ವಿಂಧ್ಯಾಚಲವು ತನ್ನ ಶೈಲಶ್ರೇಣಿಗಳ ಮಲೆತಲೆಗಳನ್ನು ಬಹಳ ಎತ್ತರಕ್ಕೆ ಎತ್ತದೆ, ನಮ್ರವಾಗಿ ಕುಳ್ಳನಾಗಿ ಕೆಳಗೇ ಉಳಿಯಿತು. ಅದರ ಅನಿಮ್ನೋನ್ನತ ಶೃಂಗಾರಗಣದಲ್ಲಿ ಆದುರ್ಗಾದೇವಿಯು ನೆಲೆನಿಂತಳು. ಅವಳ ಉದ್ದೇಶ ದುಷ್ಟದಾನವರ ವಿನಾಶ, ಆದುದರಿಂದಲೇ ಅವಳನ್ನು ಮುನಿಗಳು ಹೊಗಳಿದರು. ದೇವತೆಗಳು ಸ್ತುತಿಸಿದರು. ಸಿದ್ಧರು ಕೊಂಡಾಡಿದರು. ಹಾವುಗಳು ಪ್ರಾರ್ಥಿಸಿದವು. ವಿದ್ಯಾಧರರು ಸ್ತುತಿಸಿದರು. ಎಲ್ಲ ಭೂತಪರಿವಾರದವರು ಕೊಂಡಾಡಿದರು. ಎಲ್ಲ ಅಪ್ಸರೆಯರು ಆ ಕಾತ್ಯಾಯಿನಿಯನ್ನು ಹಾಡಿ ಪಾಡಿ ಸಂತೋಷಪಡಿಸಿದರು. ಹೀಗೆ ಎಲ್ಲರೂ ಆ ಕಾತ್ಯಾಯಿನೀ ದೇವಿಯ ಸೇವೆ ಶುಶ್ರೂಷೆಗಳಿಂದ ತಮ್ಮ ದುಃಖಗಳನ್ನು ಕಳೆದುಕೊಂಡು ಸುಖದಿಂದ ವಾಸಿಸಿದರು.

ವಾಮನ ಮಹಾಪುರಾಣದಲ್ಲಿ ವಿಂಧ್ಯಾಚಲದಗತ್ತನ್ನ ತಗ್ಗಿಸಿದ ಅಗಸ್ತ್ಯರು ಎಂಬ ಹದಿನೆಂಟನೇಯ ಅಧ್ಯಾಯವು ಮುಗಿದುದು

—o—

## ಮಹಿಷಾಸುರ ಕಾತ್ಯಾಯನಿಯರ ಸಮರ ವಿಷ್ಣು ಪಂಜರ — ಅಧ್ಯಾಯ - ೧೯

ವಿಂಧ್ಯಗಿರಿಯ ಶೈಲಗಳಲ್ಲಿ ಶ್ರೇಷ್ಠ. ಅದರ ಶಿಖರದಲ್ಲಿ ಕಾತ್ಯಾಯನೀ ದೇವಿಯ ನಿವಾಸ. ಆ ತಪಸ್ವಿನಿಯಾದ ಮಹಾದೇವಿಯನ್ನು ಚಂಡ ಮುಂಡ ಎಂಬ ಇಬ್ಬರು ದಾನವರು ನೋಡಿದರು. ಚಂಡ ಮುಂಡ ಇಬ್ಬರೂ ಮಹಿಷಾಸುರನ ದೂತರು. ಮಹಿಷಾಸುರನು ದೈತ್ಯದಾನವರಿಗೆಲ್ಲ ಒಡೆಯ. ವಿಂಧ್ಯ ಪರ್ವತದಲ್ಲಿ ಅನಿಂದ್ಯ ಸುಂದರೀ ಕಾತ್ಯಾಯನಿಯನ್ನು ಕಂಡು ಆ ಚಂಡಮುಂಡರಿಬ್ಬರೂ ಬೆಕ್ಕಸ ಬೆರಗಾದರು. ಕೂಡಲೇ ಆ ಶೈಲ ಶಿಖರದಿಂದ ಕೆಳಗಿಳಿದು ಮಹಿಷಾಸುರನ ಬಳಿಗೆ ಬಂದರು ಮತ್ತು ಅವನಿಗೆ ಬಿನ್ನವಿಸಿದರು.

"ಅಸುರರ ಅರಸನೇ, ನೀನೇನೋ ಸುಖಿಯಾಗಿದ್ದೀಯಾ. ಆದರೆ ಈಗ ವಿಂಧ್ಯಾಚಲಕ್ಕೆ ನಡೆ. ಅಲ್ಲಿ ಮಹಾನುಭಾವಳಾದ ಓರ್ವ ದೇವಿ ಇದ್ದಾಳೆ. ಅವಳು ಇನ್ನೂ ಕನ್ಯೆ. ಅವಳ ರೂಪವು ದೇವಸುಂದರಿಯರಿಗಿಂತ ಸುಂದರವಾಗಿದೆ. ಅವಳ ಮುಂಗುರುಳು ತನ್ನ ನೀಲುಮೆಯಿಂದ ಮೋಡಗಳನ್ನು ಗೆದ್ದಿವೆ. ಆ ಚಲುವಿಯ ಮುಖದ ಮುಂದೆ ಚಂದ್ರನೂ ಕೂಡ ಸೋತು ಹೋಗಿದ್ದಾನೆ. ಅವಳ ಆ ಮೂರು ಕಣ್ಣುಗಳು ಅಗ್ನಿಯನ್ನು ಸೋಲಿಸಿವೆ. ಅವಳ ಕಂಠದಿಂದ ಶಂಖವು ಪರಾಜಿತವಾಗಿದೆ. ತುದಿಯಲ್ಲಿ ಕಪ್ಪುಕಾಂತಿಯನಾಂತ ಅವಳ ದುಂಡು ಮೊಲೆಗಳು ಆನೆಯ ಕುಂಭಸ್ಥಳವನ್ನು ಎಂದೋ ಗೆದ್ದಿವೆ. ನೀನು ಪ್ರಪಂಚವನ್ನೇ ಗೆದ್ದ ವೀರ. ನಿನ್ನನ್ನೂ ಗೆಲ್ಲಬೇಕೆಂದು ಆ ಕಾಮನು ಎರಡು ಗಟ್ಟಿ ದುರ್ಗಗಳನ್ನು ಮಾಡಿದಂತಿವೆ ಅವಳ ಆ ಬೊಟ್ಟು ಮೊಲೆಗಳು.

ನಿನ್ನ ವೀರ ವಿಕ್ರಮಗಳು ಕಾಮನಿಗೆ ಗೊತ್ತು. ಅದಕ್ಕಾಗಿಯೇ ಆ ಚಲುವಿಗೆ ಹದಿನೆಂಟು ಬಾಹುಗಳನ್ನು ಮಾಡಿದಂತಿದೆ. ಅವಳಿಗೆ ಒಂದೊಂದು ಭುಜದಲ್ಲಿಯೂ ಒಂದೊಂದು ಅಸ್ತ್ರ. ನಿನ್ನನ್ನು ಸೋಲಿಸುವ ಯಂತ್ರಗಳಂತೆ ಪರಿಘಗಳಂತೆ ಪರಿಪುಷ್ಟವಾಗಿವೆ ಅವು. ಆ ಸುಂದರಿ ಉದರ ತಳದಲ್ಲಿ ಎಡೆಯಲ್ಲಿ ಮೂರು ಕಡಿಗಳು ತರಂಗಗಳಂತೆ ಕಮನೀಯವಾಗಿ ಕಾಣುತ್ತವೆ. ಅದರಲ್ಲಿ ಎಳೆಗೂದಲಿನ ಅಂಕುರವು ಇನ್ನೂ ಚೆಲುವಾಗಿ ಒಪ್ಪುತ್ತದೆ. ನಿನಗೆ ಹೆದರಿದ ಕಾಮನು ಅವಳ ಕುಚ ದುರ್ಗಕ್ಕೆ ಏರಲು ಮಾಡಿದ ಮೂರು ಮೆಟ್ಟಲುಗಳಂತೆ ಮೆರೆಯುತ್ತಲಿವೆ ಅಲ್ಲಿಯ ವಲಿತ್ರಯ. ಆ ತಳೋದರಿಯ ಎದೆಯ ಬದಿಯಿಂದ ಇಳಿದು ಬಂದಂತಿರುವ ಎಳೆಗೂದಲಿನ ಸಾಲು ನಿನಗೆ ಬೆದರಿದ ಕಾಮನ ಬೆವರಿನ ಪ್ರವಾಹದಂತೆ ಹೊಳೆಯುತ್ತದೆ.

ಅವಳ ಆಳವಾದ ಹೊಕ್ಕಳವೂ, ಅದರ ಬಲ ಸುಳಿಯೂ ಕಾಮ ಮಹಾರಾಜನು ಈ ಲಾವಣ್ಯ ಮಂದಿರಕ್ಕೆ ಹಾಕಿದ ಬೀಗಮುದ್ರೆ ಅಥವಾ ಸೀಲಿನಂತೆ ಶೋಭಿಸುತ್ತದೆ. ಆ ಚಿಗರೆಗಣ್ಣಿನ ಚೆಲುವಿಯ ನಡುವಿನ ಹಿಂಬದಿಯ ಸುತ್ತಲು ಒಡ್ಯಾಣವು ಸುತ್ತುವರಿದಿದೆ. ಅದೊಂದು ಕಾಮ ನರೇಶನ ಕೋಟೆಗೋಡೆಯಿಂದ ಭದ್ರವಾದ ದುರ್ಗಮನಗರದಂತೆ ಕಂಗೊಳಿಸುತ್ತದೆ. ಕೂದಲಿಲ್ಲದ ಕೋಮಲವಾದ ಆ ಕುಮಾರಿಯ ದುಂಡುದೊಡೆಗಳ ಶೋಭೆಗೆ ಸಮನಾದದು ಬೇರೆ ಯಾವುದೂ ಇಲ್ಲ. ಜನರ ಪ್ರೇಮವಾಸನೆಯ ನೆಲೆ ನಿಲುಪಿಗಾಗಿ ಕಾಮನು ನಿರ್ಮಿಸಿದ ಸುಕುಮಾರ ನಿಲ್ದಾಣದಂತೆ ಎಸೆಯುತ್ತವೆ ಅವಳ ಆ ಎರಡು ಅಂಕ ಪರ್ಯಂಕಗಳು.

ಮಹಿಷಾಸುರೇಂದ್ರನೇ, ಆ ಮಾನಿನಿಯ ಮಂಡೆಗಳ ಸೌಂದರ್ಯವನ್ನು ಎಷ್ಟೆಂದು ಹೇಳಲಿ! ಇವಳನ್ನು ನಿರ್ಮಿಸಿದ ಬ್ರಹ್ಮನು ತನ್ನ ಸೃಷ್ಟಿಯ ರಮ್ಯತೆಯನ್ನು ನೋಡುವಾಗ ನೋಡಿ ನೋಡಿ ಶ್ರಮಿಸಿ ತನ್ನ ಎರಡೂ ಕೈಗಳನ್ನು ಇಲ್ಲಿ ಊರಿರುವನೋ ಏನೋ ಎಂಬಂತೆ ಶೋಭಿಸುತ್ತವೆ. ದುಂಡಗಿನ ಕೂದಲವಿಲ್ಲದೇ ಕಮನೀಯವಾಗಿ ಕಂಗೊಳಿಸುವ ಅವಳ ಎರಡು ಮೊಳಕಾಲುಗಳು ಜಗತ್ತನ್ನು ಗೆದ್ದ ಕಾಮನ ಬಾಣವನ್ನೂ ಜಯಿಸುವಂತೆ ಮಾಡಲ್ಪಟ್ಟಿವೆ. ಕಮಲಕೋಶದಂತಿರುವ ಅವಳ ಎರಡೂ ಕಾಲುಗಳನ್ನು ಬ್ರಹ್ಮನು ಪ್ರಯತ್ನದಿಂದ ತಿದ್ದಿ ಮುದ್ದಾಗಿ ಮಾಡಿದಂತಿವೆ. ರತ್ನಮಾಲೆಯಂತಿರುವ ಅವಳ ಉಗುರಿನ ಸಾಲು ಗಗನದಲ್ಲಿ ನಕ್ಷತ್ರಮಾಲೆಯಂತೆ ತೋರುತ್ತದೆ.

ಇಂಥ ಕಾಂತ ಕೋಮಲ ಸ್ವರೂಪವುಳ್ಳ ಆ ಕನ್ಯೆಯು ನೋಡಲಿಕ್ಕೇನೋ ಸೌಂದರ್ಯದ ಖಣಿ. ಆದರೆ ಅವಳು ಧರಿಸಿದ ಶಸ್ತ್ರಾಸ್ತ್ರಗಳು ಮಾತ್ರ ಅತ್ಯಂತ ಉಗ್ರವಾಗಿವೆ. ನಾವು ಆ ಮಾನಿನಿಯನ್ನು ಮನದಣಿ ನೋಡಿದೆವು. ಆದರೆ ಅವಳು ಯಾರು ಎಂಬುದು ತಿಳಿಯಲಿಲ್ಲ. ಯಾರ ಮಗಳು ಎಂಬುದು ಗೊತ್ತಾಗಲಿಲ್ಲ. ಅಸುರ ಕುಲದ ಇಂದ್ರನೇ ಒಟ್ಟಾರೆ ನಾವು ಕಂಡ ಹೆಣ್ಣು ನೆಲಕ್ಕೆ ಬಂದಿಳಿದ ಸ್ವರ್ಗದ ಒಂದು ದಿವ್ಯ ರತ್ನ. ಬೇಕಾದರೆ ನೀನೇ ವಿಂಧ್ಯಪರ್ವತದವರೆಗೆ ಹೋಗಿ ಆ ಅನಿಂದ್ಯ ಸುಂದರಿಯನ್ನು ನೋಡು. ಅನಂತರ ನಿನ್ನ ಮನಬಂದಂತೆ, ಸರಿ ಕಂಡಂತೆ ಮಾಡು.''

ಮಹಿಷಾಸುರನು ರುಂಡಮುಂಡರ ಬಾಯಿಂದ ಕಾತ್ಯಾಯನಿಯ ಬಣ್ಣನೆಯನ್ನು ಕೇಳಿದನು. ಅವನ ಮನಸ್ಸಿನಲ್ಲಿ ಕಾಮವಾಸನೆಯು ತಲೆಎತ್ತಿತು. ''ಅವಳು ಇಷ್ಟು ಚೆಲುವೆ ಇದ್ದ ಬಳಿಕ ವಿಚಾರವೇನು?'' ಎಂದು ಆ ದುರುಳನು ದುರಾಲೋಚನೆಯನ್ನು ಮಾಡಿದನು. ಮಾನವರ ಶುಭ ಅಶುಭಗಳನ್ನು ಬ್ರಹ್ಮನು ಮೊದಲೇ ಬರೆದು ನಿಶ್ಚಿತಗೊಳಿಸಿರುತ್ತಾನೆ. ಆ ವಿಧಿ ಲಿಖಿತಕ್ಕೆ ಅನುಸಾರವಾಗಿಯೇ ಎಲ್ಲ ಪ್ರಾಣಿಗಳು ಸ್ವಪ್ರೇರಣೆ ಯಿಂದಾಗಲೀ, ಪರ ಪ್ರಚೋದನೆಯಿಂದಾಗಲಿ ಸಾಗುತ್ತವೆ.

ಅನಂತರ ಆ ದೈತ್ಯಕುಲ ಸಾಮ್ರಾಟನು ನಮುಂಡ, ನಮರ, ಸಚಂಡ, ಬಿಡಾಲ ನೇತ್ರ, ಕಪಿಲ, ಬಾಷ್ಕಲ, ವಿಕ್ಷುರ, ರಕ್ತಬೀಜ ಮೊದಲಾದ ಘೋರ ಆಯುಧಗಳುಳ್ಳ ದೈತ್ಯರನ್ನು ಕರೆದು ಯುದ್ಧಕ್ಕಾಗಿ ಸಿದ್ಧರಾಗಬೇಕೆಂದು ಅಪ್ಪಣೆ ನೀಡಿದನು. 'ಅವನ ಆ ಸೇನಾಪತಿಗಳೆಲ್ಲ ಕದನ ಕಲಿಗಳು, ರಣ ಕರ್ಕಶರು. ತಾವು ಆಕ್ರಮಿಸಿದ ಸ್ವರ್ಗವನ್ನು ತೊರೆದು ವಿಂಧ್ಯಪರ್ವತದ ಬಳಿಗೆ ಬಂದರು. ಆ ಬೆಟ್ಟದ ಬುಡದಲ್ಲಿ ಸೇನಾ ಶಿಬಿರವನ್ನು ಹೂಡಿ ಸಂಗ್ರಾಮಕ್ಕೆ ಸಜ್ಜಾಗಿ ನಿಂತರು. ಅನಂತರ ಮಹಿಷಾಸುರನು ಮಹಾಸುರನ ಮಗನಾದ ದುದುಂಭಿಯನ್ನು ದೇವಿ ಕಾತ್ಯಾಯನಿ ಬಳಿಗೆ ದೂತನನ್ನಾಗಿ ಕಳಿಸಿದನು. ದುಂದುಭಿಯ ದನಿ ದುಂದುಭಿಯನ್ನು ಬಾರಿಸಿದಂತೆ ಇತ್ತು. ದೊಡ್ಡದಾದ ಒಂದು ರಕ್ಕಸರ ಗುಂಪಿಗೆ ಅವನು ಒಡೆಯ. ವೈರಿ ಗಳ ಸೇನೆಯನ್ನೆಲ್ಲ ಪುಡಿಗಟ್ಟುವ ಗಟ್ಟಿತನದ ವೀರ ವಿಕ್ರಮಗಳು ಅವನ ಸೊತ್ತಾಗಿದ್ದವು. ಆ ದುಂದುಭಿಯು ಕಾತ್ಯಾಯನಿ ದೇವಿಯು ಇದ್ದಲ್ಲಿ ಬಂದು ಅಂತರಿಕ್ಷದಲ್ಲಿ ನಿಂತೇ ಮಾತನಾಡಿದನು.

''ಕುಮಾರಿಯೇ, ನಾನು ರಂಭಕುಮಾರ ಮಹಿಷಾಸುರನ ದೂತ. ಸಮರದಲ್ಲಿ ಆ ಅಸುರ ವೀರನಿಗೆ ಸಮರಾರು?''

ಅವನ ನುಡಿಯನ್ನು ಕೇಳಿ ಕಾತ್ಯಾಯನಿಯು ದುಂದುಭಿ ದಾನವನಿಗೆ ಇಂತು ನುಡಿದಳು - ''ದಾನವೇಂದ್ರ, ಇಲ್ಲಿ ಬಾ ಭಯವೇಕೆ? ನಿರ್ಭಯವಾಗಿ ಇತ್ತ ಬನ್ನಿ. ಆ ರಂಭ ಕುಮಾರನು ಏನು ಹೇಳಿದನು? ಅದನ್ನು ನನಗೆ ತಿಳಿಸು. ಆ ರಂಭನ ಮಗನು ಮೋಹ ವಿಲ್ಲದವನು ತಾನೇ!''

ಮಂಗಳಮೂರ್ತಿಯಾದ ಆ ದೇವಿಯ ಆದರದ ನುಡಿ ಕೇಳಿ ದುಂದುಭಿಗೆ ಧೈರ್ಯವಾಯಿತು. ಅವನು ಆಕಾಶದಿಂದ ಕೆಳಗಿಳಿದನು. ದೇವಿಯ ಹತ್ತಿರ ನೆಲದ ಮೇಲೆ ಕುಳಿತನು. ಅಲ್ಲಿಯೇ ಇರುವ ದಿವ್ಯ ಆಸನವನ್ನು ಅಲಂಕರಿಸಿ ಸುಖಾಸೀನರಾದ ಬಳಿಕ ಮಹಿಷಾಸುರನ ಸಂದೇಶವನ್ನು ಅವಳಿಗೆ ತಿಳಿಸಲು ಮೊದಲು ಮಾಡಿದನು.

''ದೇವಿ ಇದು ಮಹಿಷಾಸುರನ ಅಪ್ಪಣೆ. ಎಲ್ಲ ದೇವತೆಗಳೂ ನನ್ನೊಡನೆ ಯುದ್ಧಮಾಡಿ ಸೋತು ಹೋಗಿದ್ದಾರೆ. ಸ್ವರ್ಗ ಭ್ರಷ್ಟರಾಗಿ ಭೂಲೋಕದಲ್ಲಿ ಕಂಡಲ್ಲಿ ಅಂಡಲಿಯುತ್ತಿದ್ದಾರೆ. ನನ್ನಿಂದ ಅವರ ಬಲವೆಲ್ಲವೂ ಉಡುಗಿದಂತಾಗಿದೆ. ಇಂದು ಸ್ವರ್ಗವು ನನ್ನ ಕೈಯಲ್ಲಿದೆ. ಭೂಮಿಯು ನನ್ನ ಅಧೀನದಲ್ಲಿದೆ.

ಅಂತರಿಕ್ಷವು ನನ್ನ ಅಂಕಿತದಲ್ಲಿದೆ. ಪಾತಾಳವೇ ಮೊದಲಾದ ಎಲ್ಲ ಲೋಕಗಳೂ ನನ್ನ ಪಾದಾಕ್ರಾಂತವಾಗಿವೆ. ರಾಜಾಧಿ ರಾಜರೆಲ್ಲರೂ ಈಗ ನನ್ನ ದಾಸಾನುದಾಸರು. ಎಲ್ಲ ಲೋಕಗಳಿಗೂ ನಾನೇ ಒಡೆಯನಾದ್ದರಿಂದ ಸ್ವರ್ಗದ ಇಂದ್ರನೂ ನಾನೇ, ಕೈಲಾಸಪತಿ ರುದ್ರನೂ ನಾನೆ ! ಅಂಬರಮಣಿ ಸೂರ್ಯನೂ ನಾನೇ. ಎಲ್ಲ ಲೋಕಗಳಲ್ಲಿ ಸರ್ವೋತ್ಕೃಷ್ಟನೂ ನಾನೇ. ಸ್ವರ್ಗದಲ್ಲಿಯಾಗಲೀ, ಭೂಲೋಕದಲ್ಲಿಯಾಗಲೀ, ಪಾತಾಳದಲ್ಲಿಯಾಗಲೀ ನನ್ನನ್ನು ಎದುರಿಸುವ ಎದೆಗಾರಿಕೆ ಯಾರಿಗೂ ಇಲ್ಲ. ಎಲ್ಲರೂ ನನಗೆ ಸೋತು ಶರಣಾಗಿದ್ದಾರೆ. ಪ್ರಪಂಚದ ಎಲ್ಲಾ ಸ್ಥಾನಗಳೂ ನನ್ನ ಪ್ರತಾಪದಿಂದ ಗೆಲ್ಲಲ್ಪಟ್ಟು ನನ್ನ ಸೊತ್ತಾಗಿವೆ. ಅಗಲಗಣ್ಣಿನ ಅಂಗನೆಯಾದ ಕಾತ್ಯಾಯನಿ ನಾರಿಯರ ಕುಲದಲ್ಲಿ ನೀನೊಂದು ರತ್ನ. ಮೇಲೆ ನೀನು ಇನ್ನೂ ಕನ್ಯೆ. ನಾನು ನಿನಗಾಗಿಯೇ ಈ ಪರ್ವತಕ್ಕೆ ಬಂದಿದ್ದೇನೆ. ಆದ್ದರಿಂದ ನೀನು ಜಗದೊಡೆಯನಾದ ನನ್ನನ್ನು ಪಡೆದುಕೋ. ನಾನೇ ನಿನಗೆ ಯೋಗ್ಯನಾದ ಪತಿ, ಸಮರ್ಥವಾದ ಪ್ರಭು ಆಗಿರುತ್ತೇನೆ.''

ದುಂದುಭಿ ದಾನವನ ಮುಖಾಂತರ ಮಹಿಷಾಸುರನ ಮನೋಭೀಷ್ಟವನ್ನೂ, ಮಾತನ್ನೂ ಕೇಳಿ ತಿಳಿದ ದುರ್ಗಾದೇವಿಯು ಆ ಮಯ ಪುತ್ರನನ್ನು ಕುರಿತು ಮಾತನಾಡಿದಳು.

''ನೀನು ಹೇಳಿದ್ದು ನಿಜ. ದಾನವ ಸಾಮ್ರಾಟನು ಈ ಪೃಥ್ವಿಮಂಡಲದಲ್ಲಿ ಪ್ರಭಾವಶಾಲಿ ಯಾದ ಪ್ರಭುವಾಗಿ ಇದ್ದುದು ನಿಜ. ರಣರಂಗದಲ್ಲಿ ದೇವತೆಗಳನ್ನೆಲ್ಲ ಅವನು ಸೋಲಿಸಿದ್ದು ಸತ್ಯ ಸಂಗತಿ. ಆದರೆ ದೈತ್ಯರ ನಮ್ಮ ಕನ್ಯೆಯ ವಂಶದಲ್ಲಿ ಒಂದು ಸಂಪ್ರದಾಯವಿದೆ. ಶುಲ್ಕ ಕೊಟ್ಟವರಿಗೆ ಕೊಡುವದು ನಮ್ಮ ಕುಲಧರ್ಮ. ನಮ್ಮ ಮನೆತನದ ಈ ಕನ್ಯಾ ತೆರಿಗೆಯ ಪದ್ಧತಿಯು ಜಗತ್ತಿನಲ್ಲಿ ಪ್ರಸಿದ್ಧವೇ ಆಗಿದೆ. ಆ ನಮ್ಮ ವಂಶದ ಪಣದಂತೆ ಮಹಿಷಾಸುರನು ನನಗೆ ಆ ಕನ್ಯಾ ಶುಲ್ಕವನ್ನು ಕೊಡಮಾಡಿದರೆ ನಾನು ಖಂಡಿತವಾಗಿಯೂ ಅವನನ್ನು ವರಿಸಿ ಪತಿಯನ್ನಾಗಿ ಮಾಡಿಕೊಳ್ಳುವೆನು.''

ಕಾತ್ಯಾಯನಿಯ ಈ ಮಾತನ್ನು ಕೇಳಿ ದುಂದುಭಿಯು ನುಡಿದನು - ತಾವರೆಗಣ್ಣಿನ ದೇವಿಯೇ ನಿನ್ನ ಶುಲ್ಕವು ಯಾವುದು ? ಎಂಥದು ? ಅವನಿಗಾಗಿ ಮಹಿಷಾಸುರನು ತನ್ನ

ತಲೆಯನ್ನೇ ಬಲಿಯಾಗಿ ನೀಡಲು ಸಿದ್ಧನಿದ್ದಾನೆ. ಆದುದರಿಂದ ಹೇಳು, ನಮ್ಮ ಪ್ರಭುವಿಗೆ ಅಶಕ್ಯವಾದ ಶುಲ್ಕವು ಯಾವುದಿದೆ!'' ದೈತ್ಯಧುರೀಣವಾದ ದುಂದುಭಿಯ ಮಾತುಗಳಿಂದ ಆ ದೇವಿಗೆ ನಗೆ ಬಂದಿತು. ಅವಳು ದೊಡ್ಡ ದನಿಯಿಂದ ನಕ್ಕಳು. ಅದು ಪ್ರತಿಧ್ವನಿತವಾಯಿತು. ಆ ದೈತ್ಯನ ನುಡಿ ಯನ್ನು ಕೇಳಿ ಉಪಹಾಸ್ಯಗೈಯುತ್ತ ಆ ದೇವಿಯು ಮಾತನಾಡಿದಳು. ಅದರ ಉದ್ದೇಶ ಚರಾಚರ ಪ್ರಪಂಚದ ಹಿತ, ಎಲ್ಲರ ಕಲ್ಯಾಣ.

''ದಾನವನೇ ನಮ್ಮ ಮನೆತನದ ಕನ್ಯಾ ಶುಲ್ಕವನ್ನು ಕೇಳು. ನಮ್ಮ ಹಿಂದಿನವರು ಈ ವಂಶದ ಕನ್ಯಾ ವಿವಾಹಕ್ಕಾಗಿ ಈ ಶುಲ್ಕವನ್ನು ಕಡ್ಡಾಯವಾಗಿ ಮಾಡಿ ಇಟ್ಟಿದ್ದಾರೆ. ನಮ್ಮ ಕುಲದ ಕನ್ಯೆಯನ್ನು ರಣರಂಗದಲ್ಲಿ ಗೆದ್ದ ವೀರನೇ ಆ ಕನ್ಯೆಗೆ ಪತಿಯಾಗುವನು.'' ದುಂದುಭಿದಾನವನು ದೇವಿಯ ಆ ದಿಟ್ಟ ವಚನವನ್ನು ಕೇಳಿ ಅಲ್ಲಿಂದ ಹೊರಟು ಬಂದನು. ಮಹಿಷಾಸುರನಿಗೆ ಅಲ್ಲಿ ನಡೆದ ಸಂಗತಿ ನುಡಿದ ಮಾತು ಎಲ್ಲವನ್ನೂ ಬಿಡದೇ ಹೇಳಿದನು. ಆಗ ಮಹಾತೇಜಸ್ವಿಯಾದ ಮಹಿಷಾಸುರನು ಎಲ್ಲ ದೈತ್ಯ ಸೇನೆಗೆ ತಾನೇ ಮುಂದಾಳಾಗಿ ಯುದ್ಧಕ್ಕೆ ಹೊರಟನು. ಅವನ ಸೈನಿಕರು ಆ ಗಿರಿ ಶಿಖರವನ್ನೆಲ್ಲ ಹತ್ತಿ ಮುತ್ತಿಮುತ್ತಿಗೆ ಹಾಕಿ ನಿಂತರು.

ಅನಂತರ ವಿಕ್ಷುರ ಎಂಬ ದೈತ್ಯನು ಸೇನಾಪತಿಯಾಗಿ ಯುದ್ಧದ ಉದ್ಯೋಗವನ್ನು ಕೈಕೊಂಡನು. ನಮರ ಎಂಬ ದೈತ್ಯನಿಗೆ ಮುಂಚೂಣಿಯ ಭಾಗದಲ್ಲಿ ನಿಂತು ಸಮರವನ್ನು ಸಾಗಿಸಲು ಅಪ್ಪಣೆ ಮಾಡಿದನು. ಆ ನಮರ ದೈತ್ಯನು ತನಗೆ ಬಂದ ಹೊಸ ಅಧಿಕಾರದಿಂದ ಉತ್ಸಾಹಿತನಾಗಿ ಚತುರಂಗ ಸೈನ್ಯದಿಂದ ಸುಸಜ್ಜಿತನಾಗಿ ಮುನ್ನುಗ್ಗಿದನು. ಸೈನ್ಯದ ಒಂದು ಬಲಿಷ್ಠವಾದ ತುಕಡಿಯನ್ನು ತೆಗೆದುಕೊಂಡು ಸ್ವಯಂ ತಾನೇ ದುರ್ಗಾದೇವಿಯ ಮೇಲೆ ದಾಳಿ ಮಾಡಬೇಕೆಂದು ದ್ರುತಗತಿಯಿಂದ ಓಡಿ ಬಂದನು.

ಆ ದುಷ್ಟದಾನವನ ಸಮರ ಸಂಭ್ರಮ ಹಾಗೂ ಆಗಮನದ ಅಬ್ಬರವನ್ನು ಕಂಡು ಬ್ರಹ್ಮಾದಿ ದೇವತೆಗಳಿಗೂ ತುಸು ಚಿಂತೆಯೆನಿಸಿತು. ಅವರು ಕಾತ್ಯಾಯನಿ ದೇವಿಗೆ ಕದನಕ್ಕೆ ಮುನ್ನ ಕವಚವನ್ನು ಕಟ್ಟಿಕೊಳ್ಳಬೇಕೆಂದು ಸಲಹೆ ಇತ್ತರು. ಆದರೆ ಕಾತ್ಯಾಯನಿ ದೇವಿಯು ಅವರ ಮಾತಿಗೆ ಕಿವಿಗೊಡಲಿಲ್ಲ. ವೈರಿಗಳ ಶಸ್ತ್ರಾಘಾತವನ್ನು ತಡೆಯುವ ಕವಚವನ್ನೂ ತೊಟ್ಟುಕೊಳ್ಳಲಿಲ್ಲ. ದುರ್ಗೆಯು ದೇವತೆಗಳಿಗೆ ಸ್ಪಷ್ಟವಾಗಿ ಹೇಳಿದಳು-

''ದೇವತೆಗಳೇ, ನಾನು ಕವಚವನ್ನು ಕಟ್ಟಲಾರೆ. ನನ್ನೆದುರು ಹೋರಾಡುವ ಬಲ ಯಾವ ದೈತ್ಯಾಧಮನಿಗೆ ಇದೆ!'' ಎಂದು ಧೈರ್ಯದಿಂದ ಹಾಗೇ ನಿಂತಳು. ಆ ಭೀಕರ ಸಂಗ್ರಾಮದಲ್ಲಿ ಕವಚವಿಲ್ಲದೇ ಬರೀ ಮೈಯಿಂದ ನಿಂತ ಆ ಕಾತ್ಯಾಯಿನಿಯ ರಕ್ಷಣೆಗಾಗಿ ವಿಷ್ಣುಪಂಜರ ಸ್ತೋತ್ರವನ್ನು ಮಹಾದೇವರು ಅವಳಿಗೆ ಉಪದೇಶಿಸಿದರು.

ಅಮೋಘವಾದ ಆ ವಿಷ್ಣುಪಂಜರ ಸ್ತೋತ್ರವು ಆ ದುರ್ಗಾದೇವಿಯನ್ನು ಅಕ್ಷತವಾಗಿ ರಕ್ಷಿಸಿತು. ಅದರ ಮಹಿಮೆಯ ಬಲದಿಂದ ದುರ್ಗಾದೇವಿಯು ಯಾವ ದೇವತೆಗಳಿಂದಲೂ ಕೊಲ್ಲಲೂ ಅಶಕ್ಯನಾದ ಮಹಿಷಾಸುರರನ್ನು ಮರ್ದಿಸಿ ಹೊಸೆದು ಹಾಕಿದಳು.

ಹೀಗೆ ದೇವತೆಗಳಲ್ಲಿ ಶ್ರೇಷ್ಠನಾದ ಮಹಾದೇವನು ಆ ವಿಷ್ಣು ಪಂಜರದ ಸ್ತೋತ್ರವನ್ನು ತನ್ನ ಬೊಗಸೆಗಣ್ಣಿನ ಭಾಮಿನಿಗೆ ಉಪದೇಶಿಸಿದರು. ಅದರ ಪ್ರಭಾವದಿಂದ ಆ ಮಹಾದೇವಿಯು ಮಹಿಷಾಸುರನನ್ನು ತನ್ನ ಚರಣಾಘಾತದಿಂದ ಒದೆದು ಕೊಂದಳು.

ನಾರದ ಹೀಗಿದೆ - ಆ ವಿಷ್ಣು ಪಂಜರದ ದಿವ್ಯ ಪ್ರಭಾವ. ಎಲ್ಲ ರಕ್ಷಾಮಂತ್ರಗಳಿಗಿಂತ ಇದು ಮಿಗಿಲಾದದ್ದು ಮತ್ತು ಮಹತ್ವಪೂರ್ಣವಾದದ್ದು ಎಂದು ಎಲ್ಲರೂ ಅದನ್ನು ಹೊಗಳಿ ಹಾಡಿದ್ದಾರೆ. ಬಗೆಯಲ್ಲಿ ಭಗವಂತನನ್ನು ಹೊತ್ತ ಭಕ್ತನ ಬಲವನ್ನು ಕುಗ್ಗಿಸಲು ಈ ಭೂಮಂಡಲದಲ್ಲಿ ಯಾರಿಗೆ ಶಕ್ತಿ ಉಂಟು!

## ಮಹಾದೇವರು ಉಪದೇಶಿಸಿದ ವಿಷ್ಣು ಪಂಜರ ಸ್ತುತಿ

ಪ್ರವಕ್ಷ್ಯಾಮ್ಯಧುನಾ ತ್ವೇತದ್ವೈಷ್ಣವಂ ಪಂಜರಂ ಶುಭಂ ।
ನಮೋ ನಮಸ್ತೇ ದೇವೇಶ ಚಕ್ರಂ ಗೃಹ್ಯ ಸುದರ್ಶನಂ ।
ಪ್ರಾಚ್ಯಾಂ ರಕ್ಷಸ್ವ ಮಾಂ ವಿಷ್ಣೋ ತ್ವಾಮಹಂ ಶರಣಂ ಗತಃ ।
ಗದಾಂ ಕೌಮೋದಕೀಂ ಗೃಹ್ಯ ಪದ್ಮನಾಭಾಮಿತದ್ಯುತೇ ।
ಯಾಮ್ಯಾಂ ರಕ್ಷಸ್ವ ಮಾಮ್ ವಿಷ್ಣೋ ತ್ವಾಮಹಂ ಶರಣಂ ಗತಃ ।
ಪದ್ಮಮಾದಾಯ ಸಗದಂ ನಮಸ್ತೇ ಪುರುಷೋತ್ತಮ ॥
ಪ್ರತೀಚ್ಯಾಂ ರಕ್ಷ ಮಾಂ ವಿಷ್ಣೋ ತ್ವಾಮಹಂ ಶರಣಂ ಗತಃ ।
ಮುಸಲಂ ಶಾತನಂ ಗೃಹ್ಯ ಪುಂಡರೀಕಾಕ್ಷ ರಕ್ಷಮಾಂ ॥
ಉತ್ತರಸ್ಯಾಂ ಜಗನ್ನಾಥ ಭವಂತಂ ಶರಣಂ ಗತಃ ।
ಶಾರ್ಙ್ಗಮಾದಾಯ ಚ ಧನುರಸ್ತ್ರಂ ನಾರಾಯಣಂ ಹರೇ ॥
ನಮಸ್ಕೇ ರಕ್ಷ ರಕ್ಷೋಘ್ನ ಈಶಾನ್ಯಾಂ ಶರಣಂ ಗತಃ ।
ಪಾಂಚಜನ್ಯಂ ಮಹಾಶಂಖಮನುಬೋಧ್ಯ ಚ ಪಂಕಜಂ ।
ಪ್ರಗೃಹ್ಯ ರಕ್ಷ ಮಾಂ ವಿಷ್ಣೋ ಆಗ್ನೇಯ್ಯಾಂ ಯಜ್ಞಸೂಕರ ।
ವರ್ಮ ಸೂರ್ಯಶತಂ ಗೃಹ್ಯ ಖಡ್ಗಂ ಪರ್ವಸಮಂ ತಥಾ ।
ನೈಋತ್ಯಾಂ ಮಾಂ ಚ ರಕ್ಷಸ್ವ ದಿವ್ಯಮೂರ್ತೇ ನೃಕೇಸರಿನ್ ।
ವೈಜಯಂತೀಂ ಪ್ರಗೃಹ್ಯ ತ್ವಂ ಶ್ರೀ ವತ್ಸಂ ಕಂಠಭೂಷಣಂ ॥
ವಾಯುವ್ಯಾಂ ರಕ್ಷಮಾಂ ದೇವ ಅಶ್ವಶೀರ್ಷ ನಮೋಸ್ತುತೇ ।
ವೈನತೇಯಂ ಸಮಾರುಹ್ಯ ಅಂತರಿಕ್ಷೇ ಜನಾರ್ದನ ॥
ಮಾಂ ತ್ವಂ ರಕ್ಷಾಜಿತ ಸದಾ ನಮಸ್ತೇಽಸ್ತ್ವಪರಾಜಿತ ।
ವಿಶಾಲಾಕ್ಷಂ ಸಮಾರುಹ್ಯ ರಕ್ಷ ಮಾಂ ತ್ವಂ ರಸಾತಲೇ ।
ಅಕೂಪಾರ ನಮಸ್ತುಭ್ಯಂ ಮಹಾಮೀನ ನಮೋಸ್ತುತೇ ।
ಕರಶೀರ್ಷಾಂಘ್ರಿ ಸರ್ವೇಷು ತಥಾಷ್ಟ ಬಾಹು ಪಂಜರಂ ।
ಕೃತ್ವಾ ರಕ್ಷಸ್ವ ಮಾಂ ದೇವ ನಮಸ್ತೆ ಪುರುಷೋತ್ತಮ ।
ಏತದುಕ್ತಂ ಭಗವತಾ ವೈಷ್ಣವಂ ಪಂಜರಂ ಮಹತ್ ।

ವಾಮನ ಮಹಾಪುರಾಣದಲ್ಲಿ ಮಹಿಷಾಸುರ ಕಾತ್ಯಾಯನಿಯರ ಸಮರ
ವಿಷ್ಣು ಪಂಜರ ಎಂಬ ಹತ್ತೊಂಬತ್ತನೇಯ ಅಧ್ಯಾಯವು ಮುಗಿದುದು
—೦—

## ಮಹಿಷಾಸುರ ಮರ್ದನ

ಅಧ್ಯಾಯ - ೨೦

**ನಾರದ :** ಕಾತ್ಯಾಯನೀ ದೇವಿಯು ಮನಹಿಷಾಸುರನನ್ನು ಹೇಗೆ ಕೊಂದಳು? ಅವನ ಅನುಚರರನ್ನು ಹೇಗೆ ಮರ್ದಿಸಿದಳು? ಅವನ ವಾಹನವನ್ನು ಹೇಗೆ ನಾಶಗೊಳಿಸಿದಳು ? ಇದೆಲ್ಲವನ್ನು ವಿವರವಾಗಿ ತಿಳಿಸಿರಿ. ಈ ವಿಷಯದಲ್ಲಿ ನನಗೊಂದು ಸಂಶಯವೂ ಮನಸ್ಸಿನಲ್ಲಿ ಕಾಡುತ್ತದೆ. ಸಾಕಷ್ಟು ಶಸ್ತ್ರಾಸ್ತ್ರಗಳಿದ್ದರೂ ಆ ಮಹಾದೇವಿಯು ಈ ಮಹಿಷ ದೈತ್ಯನನ್ನು ಕಾಲಿನಿಂದಲೇ ಒದೆದು ಏಕೆ ಮರ್ದಿಸಿದಳು?

**ಪುಲಸ್ತ್ಯ :** ನಾರದ, ಈ ಕಥೆ ಬಹಳ ಹಳೆಯದು. ದೇವಯುಗದ ಆದಿಕಾಲದಲ್ಲಿಯೇ ಆ ಘಟನೆ ನಡೆಯಿತು. ಅದನ್ನು ಸಾವಧಾನವಾಗಿ ಕೇಳು. ಅದರಿಂದ ಪುಣ್ಯ ಬರುವದು. ಪಾಪ ಕಳೆಯುವದು. ಭೀತಿ ತೊಲಗುವದು. ಕ್ರೋಧಾಂಧನಾದ ಆ ಮಹಿಷಾಸುರನು ಚತುರಂಗ ಬಲ ಸಮೇತನಾಗಿ ಕಾತ್ಯಾಯನಿಯ ಮೇಲೆ ಏರಿ ಬಂದನು. ಇದನ್ನು ದೇವಿಯು ಯದೃಚ್ಛೆಯಿಂದ ನೋಡಿದಳು. ದೇವ ಸಂಘವು ಅವಳ ಬೆಂಬಲಿಗಿದ್ದಿತು. ಕೂಡಲೇ ಅವಳು ಬಿಲ್ಲನ್ನು ಬಾಗಿಸಿ ಬಾಣಗಳ ಮಳೆಗೆರೆದಳು. ಮುಗಿಲಿನಿಂದ ಧಾರಾಕಾರವಾಗಿ ಜಡಿಮಳೆ ಸುರಿದಂತಿತ್ತು ಅವಳ ಸಂತತ ಶರಪಾತ. ದೈತ್ಯ ಸೇನೆಯನ್ನು ಕೊಲ್ಲುವದಕ್ಕಾಗಿ ಬಾಗಿಸಿದ ಬಂಗಾರದ ಹೂಗಳುಳ್ಳ ಆ ದೇವಿಯು ದಿವ್ಯ ಧನುಸ್ಸು ಮೋಡದ ಮಂಚದಲ್ಲಿ ಮೆರೆಯುವ ಮಿಂಚಿನ ಗೊಂಚಲದಂತೆ ಮಿನುಗುತ್ತಿತ್ತು.

ಅವಳ ಹದನವಾದ ಬಾಣಗಳಿಂದ ಕೆಲವು ದೈತ್ಯರು ಮಡಿದರು. ಹಲವರು ಅವಳ ಗದೆಯ ಹೊಡೆತದಿಂದ ನೆಲಕ್ಕೆ ಉರುಳಿದರು. ಅವಳ ಕೈ ಒನಕೆಯ ಏಟ ತಿಂದು ತಾವು ನಿಂತ ತಾಣದಿಂದ ನೆಲಕ್ಕೆ ಉರುಳಿದ ದೈತ್ಯರು ಅನೇಕಾನೇಕ ದೇವಿ ಹಾಗೂ ದೈತ್ಯರ ನಡುವಿನ ಗಂಡು ವ್ಯಕ್ತಿ ಎಂದರೆ ಅವಳ ವಾಹನದ ಸಿಂಹ. ಅದೊಂದು ಯಮನ ಮರಿ. ಅದು ತನ್ನ ನಿಮಿರಿದ ಕೂದಲುಗಳನ್ನು ಕೊಡವಿದರೆ ಸಾಕು. ಅನೇಕ ದೈತ್ಯರು ಸತ್ತು ಬೀಳುತ್ತಿದ್ದರು. ಆ ಸಿಂಹವು ಇದ್ದುದು ಒಂದು. ಆದರೆ ಅದು ಕೊಂದ ದೈತ್ಯರಿಗೆ ಸಂಖ್ಯೆ ಇಲ್ಲ.

ಆ ದೇವಿಯ ಕೈಯಲ್ಲಿ ವಜ್ರದಿಂದ ಕೆಲವರು ಹೊಡೆತ ತಿಂದು ಹತರಾಗಿ ಬಿದ್ದರು. ಹಲವು ದಾನವರ ಎದೆಗಳು ಶಕ್ತಿ ಆಯುಧಗಳಿಂದ ಸೀಳಲ್ಪಟ್ಟವು. ಎಷ್ಟೋ ದೈತ್ಯರ ಕುತ್ತಿಗೆಗಳೇ ಕತ್ತರಿಸಲ್ಪಟ್ಟದ್ದವು. ದೇವಿಯ ಕೈ ನೇಗಿಲದಿಂದ ಅವಳ ಕೈ ಕೊಡಲಿಯಿಂದ ಎರಡು ತುಂಡಾಗಿ ಬಿದ್ದ ರಾಕ್ಷಸರೂ ಅಸಂಖ್ಯ. ಅವಳ ಬಡಿಗೆ ಬೀಸಿ ಹಲವರ ತಲೆ ಒಡೆಯಿತು. ಹಲವಾರು ರಕ್ಕಸರ ದೇಹದ ಆಯಕಟ್ಟಿನ ಸ್ಥಳಗಳು ಅವಳು ಬೀಸಿದ ಚಕ್ರದಿಂದ ಛಿನ್ನವಿಚ್ಛಿನ್ನವಾದವು. ಕೆಲವರು ಬಿದ್ದರು. ಹಲವರ ರುಂಡಮುಂಡ ಗಳು ಎದ್ದವು. ಎಷ್ಟೋ ಜನರು ಆ ರಣ ಕಣವನ್ನು ಬಿಟ್ಟು ದೂರ ಸರಿದರು. ಹೀಗೆ ಕಾತ್ಯಾಯನಿಯ ಕರಾಳವಾದ ರುದ್ರರೂಪದಿಂದ ಹೊಡೆಯಲ್ಪಟ್ಟ ಆ ದಾನವರು ಅವಳು ಒಂದು ಕಾಳ ರಾತ್ರಿ ಎಂದು ತಿಳಿದು ಭಯಭ್ರಾಂತರಾಗಿ ಓಡ ತೊಡಗಿದರು.

ಸೇನಾಪತಿ ವಿಕ್ಷುರನು ಹತನಾಗಿ ದುರ್ಗೆಯು ಅಲ್ಲಿಯೇ ಕಣ್ಣೆದುರು ನಿಂತುದನ್ನು ಉನ್ಮತ್ತ ಆನೆಯ ಮೇಲೆ ಸವಾರಿಯಾದ ನಮದನು ನೋಡಿದನು. ಅವನು ವೇಗದಿಂದ

ಒಂದು ದೇವಿಯ ಮೇಲೆ ಶಕ್ತಿ ಆಯುಧವನ್ನು ಪ್ರಯೋಗಿಸಿದನು. ಅವಳ ವಾಹನವಾದ ಸಿಂಹದ ಮೇಲೆ ಹದನವಾದ ತನ್ನ ತ್ರಿಶೂಲವನ್ನು ಬೀಸಿದನು.

ಆ ಯುದ್ಧದಲ್ಲಿ ಕಾತ್ಯಾಯಿನಿಯನ್ನು ಪ್ರಹರಿಸಲು ನಮರಾಸುರನು ಬಹಳ ವೇಗದಿಂದ ದೇವಿಯ ಮೇಲೆ ಶಕ್ತ್ಯಾಯುಧವನ್ನು ಎಸೆದನು. ಅವಳ ವಾಹನವಾದ ಸಿಂಹದ ಮೇಲೆ ತ್ರಿಶೂಲವನ್ನು ಬೀಸಿದನು. ಆಗ ಬಿರುಸಿನಿಂದ ಬಂದ ಆ ಎರಡೂ ಭೀಕರ ಆಯುಧಗಳು ದೇವಿಯ ಹುಂಕಾರ ಮಾತ್ರದಿಂದಲೇ ಅರೆಚಣದಲ್ಲಿ ಉರಿದು ಬೂದಿಯಾದವು. ಆಗ ನಮರನ ವಾಹನವಾದ ಮದ್ದಾನೆಯು ದೇವಿಯ ಸಿಂಹವಾಹನ ವನ್ನು ಸೊಂಡೆಯಿಂದ ನಡುವಿನಲ್ಲಿ ಬಿಗಿಯಾಗಿ ಹಿಡಿದುಕೊಂಡಿತು. ಆಗ ದೇವಿಯ ವಾಹನವಾದ ಆ ಸಿಂಹವು ಒಮ್ಮೆಲೇ ಮೇಲಕ್ಕೆ ಹಾರಿತು. ಆನೆಯ ಮೇಲೆ ಕುಳಿತ ನಮರ ದೈತ್ಯನನ್ನು ತನ್ನ ಕೈ ಉಗುರಿನಿಂದ ಹೊಡೆದು ಕೊಂದಿತು. ಅವನ ತಲೆಯನ್ನು ತಂದು ತನ್ನ ಒಡತಿಗೆ ಒಪ್ಪಿಸಿತು. ಆ ರಣರಂಗದಲ್ಲಿ ರೋಷ ಕಷಾಯಿತಳಾದ ಆ ಕಾಳೀದೇವಿಯು ಎಡಗೈಯಲ್ಲಿ ಆ ನಮರ ದೈತ್ಯನ ದೇಹವನ್ನು ಹಿಡಿದು ಖಡ್ಗದಿಂದ ಬಡೆದು ವಗಾರಿಯಂತೆ ಬಾರಿಸಿದಳು. ರಣಭೈರವಿಯಂತಿದ್ದ ಆ ಕಾತ್ಯಾಯನಿ ದೇವಿಯು ಈ ಸಮರದಲ್ಲಿ ತನಗೆ ಈ ನಮರ ಎಂಬ ಹೊಸವಾದ್ಯವು ದೊರೆತದ್ದಕ್ಕಾಗಿ ಅತ್ಯಾನಂದ ಎನಿಸಿ ಅಟ್ಟಹಾಸ ಗೈದಳು.

ಹೀಗೆ ನಮರ ಎಂಬ ಸಮರ ವಾದ್ಯವನ್ನು ಬಾರಿಸಿ ಬಾರಿಸಿ ಹರ್ಷೋದ್ರಿಕ್ತಳಾದ ದೇವಿಯು ಉತ್ಸಾಹದಿಂದ ಅಟ್ಟಹಾಸ ಗೈದಳು. ಅವಳ ಆ ಉಪಹಾಸ ಗರ್ಭಿತವಾದ ಭೀಕರ ನಗೆಯಿಂದ ಬಗೆ ಬಗೆಯ ಭೂತಗಳು ಮೈದಾಳಿ ನಿಂತವು. ಹುಲಿಯ ಮೋರೆಯ ಪ್ರಾಣಿಗಳು ಕೆಲವು. ತೋಳದ ಆಕಾರದವು ಹಲವು. ಕೆಲವಕ್ಕೆ ಕುದುರೆಯ ಮೋರೆ. ಹಲವಕ್ಕೆ ಕೋಣದಂತೆ ಗೋಣು. ಹಂದಿಯ ಮೋರೆಯವರೂ ಹಲವರು. ಇಲಿ ಕುಕ್ಕುಟದ ಮೂತಿಯವರು ಅನೇಕರು. ಆಡು, ಎತ್ತು, ಕುರಿಗಳಂತೆ ವಿಕಾರಮುಖದ ಉಗ್ರ ಆಕಾರದ ಅಸಹ್ಯ ರೂಪದ ಅನೇಕ ಬಗೆಯ ಭೂತ ಪ್ರೇತ ಪಿಶಾಚಿ ಪ್ರಾಣಿಗಳು ತರತರಹದ ಆಯುಧಗಳನ್ನು ಹೊತ್ತು ನಿಂತರು.

ಅವರಲ್ಲಿ ಕೆಲವರು ಹಾಡುತ್ತಿದ್ದರು. ಉಳಿದವರು ಕುಣಿಯುತ್ತಿದ್ದರು. ಕೆಲವರು ಅಟ್ಟಹಾಸ ಗೈಯುತ್ತಿದ್ದರು. ಆಟದ ಹುಚ್ಚು ಕೆಲವರಿಗೆ. ಡೋಲು ಬಡಿಯುವವರು ಕೆಲವರು. ಉಳಿದವರೆಲ್ಲ ಈ ಅಂಬಿಕೆಯನ್ನು ಹೊಗಳುತ್ತಿದ್ದರು. ಇಂಥ ಭೂತಗಣದೊಂದಿಗೆ ಕಾತ್ಯಾಯನೀದೇವಿಯು ಆ ರಾಕ್ಷಸರ ಸೈನ್ಯದ ತುಂಬ ಓಡಾಡಿ ದಾನವರ ಬಲವನ್ನೆಲ್ಲ ಕಡಿದು ಕೊಚ್ಚಿ ಹಾಕಿದಳು. ಒಣಹುಲ್ಲಿನ ಮೆದೆಯ ಮೇಲೆ ಬರಸಿಡಿಲು ಎರಗಿದಂತಾಗಿತ್ತು. ನಮರ ಸೇನಾಪತಿಯು ಮಣ್ಣುಮುಕ್ಕಿದ ಮೇಲೆ ಅನೇಕ ವೀರರು ದೇವಿಯ ಕೋಪಕ್ಕೆ ತುತ್ತಾಗಿ ಪ್ರಾಣಗಳಿಗೆ ಎರವಾದರು. ಅಳಿದುಳಿದ ಸೇನೆಗೆ ಚಿಕ್ಷುರ ಎಂಬ ಸೇನಾಪತಿಯು ಧುರೀಣನಾಗಿ ದೇವಿಯ ಜೊತೆಗೆ ಯುದ್ಧವನ್ನು ಮುಂದುವರೆಸಿದನು. ಬಿಲ್ಲನ್ನು ಠೇಂಕರಿಸಿ ಹೆದೆ ಏರಿಸಿ ಬಾಣಗಳ ಸೂಡುಗಳನ್ನು ಮೇಘದಂತೆ ದೇವಿಯ ಮೇಲೆ ಸುರಿಸಿದನು. ಅವುಗಳನ್ನೆಲ್ಲ ಕಾತ್ಯಾಯನಿಯು ತನ್ನ ಹದನವಾದ ಬಾಣಗಳಿಂದ ಕಡಿದೊಗೆದು ಬಂಗಾರದ ಗರಿಹಚ್ಚಿದ ಮೇಲೆ ಹದಿನಾರು

ಬಾಣಗಳನ್ನು ಪ್ರಯೋಗಿಸಿ ದಳು. ದಾನವ ಸೇನೆಯು ಚತುರಂಗಬಲದ ಒಂದೊಂದು ಅಂಗವನ್ನು ಸಂಪೂರ್ಣವಾಗಿ ಭಂಗಗೊಳಿಸಲು ದೇವಿಯ ನಾಲ್ಕು ನಾಲ್ಕು ಬಾಣಗಳೇ ಸಮರ್ಥವಾಗಿದ್ದವು. ಹೀಗೆ ಹದಿನಾರು ಬಾಣಗಳಿಂದ ದಾನವ ಸೇನೆಯ ಆನೆಯ ಬಲವನ್ನು ಅಳಿದು, ಕುದುರೆಯ ಸವಾರರನ್ನೆಲ್ಲ ಸಂಹರಿಸಿ, ರಥಿಕರ ಪಡೆಯನ್ನು ಪುಡಿಪುಡಿ ಮಾಡಿ ಕಾಲಾಳುಗಳನ್ನೆಲ್ಲ ಕಬಳಿಸಿ ಕೊಂದು ಹಾಕಿದಳು ಆ ಕಾತ್ಯಾಯನೀದೇವಿ.

ಮತ್ತೊಂದು ಬಾಣದಿಂದ ದೇವಿಯು ಚಿಕ್ಷುರ ಸೇನಾಪತಿಯ ತೇರಿನ ಕಳಸವನ್ನು ಹೊಡೆದುರುಳಿಸಿದಳು. ಇನ್ನೊಂದರಿಂದ ಸಾರಥಿಯನ್ನು ಕೊಂದಳು. ಮಗದೊಂದರಿಂದ ಅವನ ಬಿಲ್ಲು ಬಾಣಗಳನ್ನು ತುಂಡರಿಸಿ ಚೆಲ್ಲಿದಳು. ಬಿಲ್ಲು ಮುರಿದು ಬಿದ್ದ ಬಳಿಕ ವೀರವಾದ ಚಿಕ್ಷುರನು ಖಡ್ಗ ಗುರಾಣಿಯನ್ನು ಹಿಡಿದು ನಿಂತನು. ಅವೆರಡನ್ನೂ ಕೂಡಲೇ ಕಾತ್ಯಾಯನಿಯು ನಾಲ್ಕು ಬಾಣಗಳಿಂದ ಕಡಿದು ಹಾಕಿದಳು.

ಅನಂತರ ಆ ದಾನವನು ಧೈರ್ಯಗುಂದದೆ ಶೂಲವನ್ನು ಎತ್ತಿ ಆ ದೇವಿಯನ್ನು ಅಟ್ಟಿಸಿಕೊಂಡು ಬಂದನು. ನರಿಯ ಮರಿ ಸಿಂಹವನ್ನು ಬೆನ್ನಟ್ಟಿ ಬಂದಂತೆ ಇತ್ತು. ದೇವಿಗೆ ಕೋಪ ಬಂದಿತು. ಅವಳು ಕೂಡಲೇ ಐದು ಬಾಣಗಳನ್ನು ಬಿಟ್ಟಳು. ಆ ಸೇನಾಪತಿಯ ಎರಡು ಕೈ, ಎರಡು ಕಾಲು, ಒಂದು ತಲೆ ಈ ಪಂಚಾಂಗಗಳು ಕತ್ತರಿಸಿ ಬಿದ್ದವು. ಆ ದೈತ್ಯ ಪಂಚತ್ವವನ್ನು ಹೊಂದಿದನು. ಅನಂತರ ಉಗ್ರಾಸ್ಯ ಎಂಬ ವೀರ ಸೇನಾಪತಿಯ ಪಾಳಿ. ಅವನಿಗೆ ಬೆಂಬಲ ಕರಾಲಾಸ್ಯ. ಇವರೀರ್ವರನ್ನು ಮುಂದೆ ಮಾಡಿಕೊಂಡು ಬಾಷ್ಕಲ, ಉದ್ಧತ, ದರ್ದುರ, ದುರ್ಮುಖ, ಬಿಡಾಲಾಕ್ಷ ಮೊದಲಾದ ಬಲಿಷ್ಠರಾದ ಅಸಂಖ್ಯ ದೈತ್ಯರು ವಿವಿಧ ಆಯುಧಗಳನ್ನು ಕೈಯಲ್ಲಿ ಹಿಡಿದು ಒಮ್ಮೆಲೆ ದೇವಿಯ ಮೇಲೆ ಏರಿಬಂದರು.

ಅವರ ಈ ಸಾಮೂಹಿಕ ಆಕ್ರಮಣದ ಉಪಕ್ರಮವನ್ನು ನೋಡಿ ಕಾತ್ಯಾಯನಿಯು ಕಂಗೆಡಲಿಲ್ಲ, ಕಾತರಳೂ ಆಗಲಿಲ್ಲ. ಅವಳು ನಿಶ್ಚಿಂತೆಯಿಂದ ಕೈಯಲ್ಲಿ ವೀಣೆಯನ್ನು ತೆಗೆದುಕೊಂಡು ಅದರ ತಂತಿಯನ್ನು ಮಿಡಿಯತೊಡಗಿದಳು. ನಿರ್ಭಯವಾಗಿ ನಗುತ್ತ ಇನ್ನೊಂದು ಕೈಯಿಂದ ಡಮರವನ್ನು ಬಾರಿಸತೊಡಗಿದಳು. ಅವಳು ಆ ರುದ್ರ ವೀಣೆಯ ತಂತಿಯನ್ನು ಮಿಡಿ ಮಿಡಿದಂತೆ ಮತ್ತೂ ಡಮರುವನ್ನೂ ಹುಮ್ಮಸದಿಂದ ಬಾರಿಸಿದಂತೆ ಅವಳ ಬೆಂಬಲಿಗರಾದ ಭೂತಪರಿವಾರವು ಅಟ್ಟಹಾಸದೊಂದಿಗೆ ಕುಣಿಯತೊಡಗಿತು.

ಆಗ ಆ ಎಲ್ಲ ದೈತ್ಯರು ಸರಸ್ವತಿಯಂತೆ ವೀಣಾಪಾಣಿಯಾದ ಕಾತ್ಯಾಯನಿಯ ಮೇಲೆ ತಮ್ಮ ಶಸ್ತ್ರಾಸ್ತ್ರಗಳನ್ನು ಬೀಸಿದರು. ಕೂಡಲೇ ಆ ಮಹಾದೇವಿಯು ತನ್ನ ಸಿಂಹದಿಂದ ಜಿಗಿದು ಎಲ್ಲ ದೈತ್ಯರ ಕೂದಲುಗಳನ್ನು ಕೈಯಲ್ಲಿ ಹಿಡಿದುಕೊಂಡು ಬೆಟ್ಟದ ತುದಿಗೆ ಹಾರಿ ಅಲ್ಲಿ ನಿಂತು ಕುಣಿಯತೊಡಗಿ ದಳು. ಅವಳ ರುದ್ರವೀಣೆಯ ತಂತಿಗಳು ಮಸಣರಾಗವನ್ನು ನುಡಿಸುತ್ತಲೇ ಇದ್ದವು.

ಹೀಗೆ ಎಲ್ಲ ದೈತ್ಯರ ಪಂಚಪ್ರಾಣಗಳನ್ನೇ ಅಪೋಶನ ಮಾಡಹೊರಟ ಆ ಮಹಾದೇವಿಗೆ ಎಲ್ಲ ಬಲಿಷ್ಠರಾದ ದೈತ್ಯವೀರರು ಬಲಿಯಾದರು. ಅವರ ಶಸ್ತ್ರಾಸ್ತ್ರಗಳೆಲ್ಲ ಮಣ್ಣುಪಾಲಾದವು. ನೆಲದ ಮೇಲೆ ಶವಗಳು ಉರುಳಿದವು.

ರಾಕ್ಷಸಕುಲದ ಈ ಅದ್ಭುತ ಸಂಹಾರವನ್ನು ಕಂಡು ಮಹಿಷಾಸುರನ ಕೋಪ ಕೆರಳಿತು. ಮಹಾಬಲಿಷ್ಠನಾದ ಆ ಕೋಣನು ತನ್ನ ಗೊರಸಿನ ತುದಿಯಿಂದಲೇ ಹೊಡೆದು ಭೂತಗಳನ್ನು ಓಡಿಸಿದನು. ಅವನ ಬಾಯಿಯಿಂದಲೂ, ಬಾಲದಿಂದಲೂ ಉಸುರಿನಿಂದಲೂ, ಶಕ್ತಿಯಿಂದಲೂ ಹೊಡೆತ ತಿಂದು ಅನೇಕ ಭೂತಗಳ ಗುಂಪು ಪಲಾಯನ ಹೇಳಿತು.

ಆ ಮಹಿಷಾಸುರನು ಅಳಿದುಳಿದ ಆ ಭೂತಗಣಗಳನ್ನು ತನ್ನ ಕೊಂಬಿನ ತುದಿಯಿಂದ ಹೊಡೆದು ಹಾಕಿ ದೇವಿಯ ವಾಹನವಾದ ಸಿಂಹವನ್ನು ಕೊಲ್ಲಲು ಧಾವಿಸಿ ಬಂದನು. ಅದನ್ನು ಕಂಡು ಅಂಬಾದೇವಿಗೆ ತುಂಬ ಕೋಪ ಬಂದಿತು. ಇದ್ದಲ್ಲಿಂದಲೇ ಆ ದೈತ್ಯನನ್ನು ದಬ್ಬಿಬಿಟ್ಟಳು. ಇದರಿಂದ ಕೆರಳಿ ಹೋದ ಆ ಕೋಣ ದೈತ್ಯನು ಕ್ರೋಧಾಂಧನಾಗಿ ತನ್ನ ಚೂಪಾದ ಕೋಡುಗಳಿಂದ ಗಿರಿಯ ಮೇಲೆ ಗುದ್ದಿದನು. ಗುಡ್ಡ ಒಡೆಯಿತು. ಭೂಮಿ ಬಿರಿಯಿತು. ಸಮುದ್ರಗಳು ಕುದಿದು ಕೆಡೆದವು. ಮೋಡಗಳು ಗುಡುಗುಡುಸಿದವು. ಆ ಭೀಕರ ಆಕಾರದ ದೈತ್ಯನು ದುರ್ಗಾದೇವಿಯನ್ನು ಎದುರಿಸಲು ಅವಳೆದುರು ಧಾವಿಸಿದನು.

ಆಗ ಆ ಮಹಾದೇವಿಯು ಆ ದುಷ್ಟ ದೈತ್ಯನನ್ನು ಪಾಶದಿಂದ ಬಿಗಿದಳು. ಕೂಡಲೇ ಆ ದಾನವನು ತನ್ನ ಮಾಯೆಯಿಂದ ಮದ್ದಾನೆಯ ರೂಪದಲ್ಲಿ ತನ್ನ ಮೈಯನ್ನೂ ಮಾರ್ಪಡಿಸಿಕೊಂಡನು. ಆಗ ದೇವಿಯು ಮಸ್ತಿಗೇರಿದ ಆ ಮದ್ದಾನೆಯ ಮುಂದಿನ ಸೊಂಡೆಯನ್ನೇ ಕತ್ತರಿಸಿ ಹಾಕಿದಳು. ಆಗ ಆ ದಾನವನು ಒಡನೆಯೇ ತನ್ನ ಮೊದಲಿನ ಮಹಿಷರೂಪವನ್ನೇ ಹೊಂದಿ ಹೋರಾಡಲು ಅಣಿಯಾಗಿ ನಿಂತುಕೊಂಡನು.

ಅದನ್ನು ನೋಡಿ ಆ ಭವಾನಿಯು ತನ್ನ ಶೂಲಾಯುಧವನ್ನು ಆ ಕೋಣನ ಮೇಲೆ ತೂರಿದಳು. ಅದು ನೆಲದ ಮೇಲೆ ಮುರಿದು ಬಿದ್ದಿತು. ಅನಂತರ ಅವಳು ಬೆಂಕಿ ಕಾರುವ ಶಕ್ತಿ ಆಯುಧವನ್ನೂ ಪ್ರಯೋಗಿಸಿದಳು.

ಆದರದೂ ತುದಿ ಮುರಿದು ನೆಲಕ್ಕೆ ಬಿದ್ದಿತು. ಆಗ ದೇವಿಯು ವಿಷ್ಣುಚಕ್ರವನ್ನು ಅವನ ಮೇಲೆ ತೂರಿಬಿಟ್ಟಳು. ಹಿಂದೆ ದಾನವ ಕುಲದ ಕಗ್ಗೊಲೆಗೈದ ಆ ಚಕ್ರವೂ ಇಂದು ಮೊಂಡಾಗಿ ಕೆಲಸಕ್ಕೆ ಬಾರದಾಯಿತು ಮತ್ತು ಅವಳು ಕೋಣಾಸುರನ ಮೇಲೆ ಬೀಸಿದ ಕುಬೇರನ ಗದೆಯು ಪುಡಿಪುಡಿಯಾಗಿ ಉದುರಿತು. ದೇವಿಯು ಪ್ರಯೋಗಿಸಿದ ವರುಣಪಾಶವೂ ಕೂಡ ಆ ಕೋಣ ಖೂಳನ ಕೋಡಿನ ತುದಿಯ ಪ್ರಹಾರದಿಂದ ಮತ್ತೂ ಕಾಲಿನ ಗೊರಸುಗಳ ಹೊಡೆತದಿಂದ ಹರಿದು ತುಂಡಾಯಿತು. ದೇವಿಯು ಪ್ರಯೋಗಿಸಿದ ಯಮದಂಡವೂ ಕೂಡ ಆ ಕೆರಳಿದ ಕೋಣದಿಂದ ಕಡಿದು ತುಂಡು ತುಂಡಾಗಿ ಮಾಡಲ್ಪಟ್ಟಿತು. ದೇವೇಂದ್ರನ ಭಯಂಕರವಾದ ವಜ್ರಾಯುಧವೂ ಕೂಡ ಆ ದೈತ್ಯನ ಮೈಗೆ ಬಡಿದು ಮೆತ್ತಗಾಗಿಹೋಯಿತು.

ಆಗ ದುರ್ಗಾದೇವಿಯು ತನ್ನ ವಾಹನವಾದ ಸಿಂಹವನ್ನು ಬಿಟ್ಟು ಒಮ್ಮೆಲೇ ಹಾರಿ ಆ ಮಹಿಷಾಸುರನ ಬೆನ್ನಮೇಲೆಯೇ ಹೋಗಿ ಹತ್ತಿಕುಳಿತಳು.

ತನ್ನ ಡುಬ್ಬಕ್ಕೆ ಅಡರಿ ತನ್ನ ಬೆನ್ನ ಸವಾರಿ ಮಾಡಹೊರಟ ಆ ಕಾತ್ಯಾಯನಿಯ ಸಾಹಸವನ್ನು ಕಂಡು ಮಹಿಷಾಸುರನಿಗೆ ಭಾರಿ ಅವಮಾನದಿಂದ ಆಘಾತವಾದಂತಾಯಿತು.

ವೀರ್‍ಯದ ಮದದಿಂದ ಕೊಬ್ಬಿದ ಆ ಕೋಣ ದೈತ್ಯನು ಬೆನ್ನ ಮೇಲೆ ಕುಳಿತ ಭವಾನಿಯನ್ನು ಬೀಳಿಸಬೇಕೆಂದು ಮನಬಂದಂತೆ ಕುಣಿದನು. ಕಂಡಕಂಡಂತೆ ಕುಪ್ಪಳಿಸಿದನು. ಹಿಂದೆ ಮುಂದೆ ನೆಗೆದಾಡಿದನು. ಮೇಲೆ ಕೆಳಗೆ ಜಿಗಿದಾಡಿದನು. ಎಡ ಬಲಗಳಲ್ಲಿ ಮರಳಿ ಹೊರಳಿ ತಿರುವು ಮುರುವು ಆಗಿ ಹಾಲಾಗಿ ಹರಿದಾಡಿದನು. ಏನಾದರೂ ದೇವಿಯು ತನ್ನ ಹಿಡಿತವನ್ನು ಸಡಲಿಸಲಿಲ್ಲ. ಹೂವಿನಂತೆ ಹಗುರವಾದ ತನ್ನ ಕೆಂಗಾಲುಗಳಿಂದ ಅವನನ್ನು ಅದುಮಿದಳು. ನೀರಿನಲ್ಲಿ ತೊಯ್ದ ತೊಗಲನ್ನು ಹದಗೊಳಿಸುವಂತೆ ಆ ದೈತ್ಯನ ದೇಹವನ್ನು ಕುಳಿತಲ್ಲಿಯೇ ಹತ್ತಿಕ್ಕಿ ಹಣ್ಣು ಮಾಡಿದಳು.

ಆ ಕೋಣ ರಾಕ್ಷಸನ ದೊಡ್ಡ ದೇಹವು ಒಂದು ಗುಡ್ಡದ ಪ್ರಮಾಣ ಇದ್ದಿತು. ಆದರೂ ಕುಸುಮ ಕೋಮಲೆಯಾದ ಆ ಕಾತ್ಯಾಯನಿ ಕಾಲಿನ ತುಳಿತದಿಂದ ಆ ದೈತ್ಯಾಧಮನ ಶಕ್ತಿ ಎಲ್ಲವೂ ಕ್ಷೀಣವಾಗಿ ಹೋಯಿತು.

ಅನಂತರ ದೇವಿಯು ತನ್ನ ಕೈಯಲ್ಲಿಯ ತ್ರಿಶೂಲದಿಂದ ಆ ಮಹಿಷಾಸುರನ ಕೊರಳನ್ನು ಕತ್ತರಿಸಿದಳು. ಕೂಡಲೇ ಆ ದೈತ್ಯದೇಹದಿಂದ ಖಡ್ಗವನ್ನು ಹಿರಿದು ಒಬ್ಬ ಮನುಷ್ಯನು ಹೊರಬಂದನು. ಅವನನ್ನು ಕಂಡಕೂಡಲೇ ದೇವಿಯು ಎದೆಗೆ ಒಂದು ಏಟು ಕೊಟ್ಟು ಕೂದಲ ಹಿಡಿದು ಮೇಲೆತ್ತಿ ಖಡ್ಗದಿಂದ ಅವನ ತಲೆಯನ್ನು ಕತ್ತರಿಸಿದಳು. ಇದನ್ನು ನೋಡಿ ದೈತ್ಯರೆಲ್ಲ ಹೌಹಾರಿ ಹಾಹಾಕಾರ ಮಾಡಿದರು.

ದೇವತೆಗಳು ಕಾತ್ಯಾಯನೀ ದೇವಿಯ ಈ ಗೆಲುವನ್ನು ಕಂಡು ಗುಂಪುಗೂಡಿ ಹೊಗಳಿ ಹಾಡತೊಡಗಿದರು. ಹೀಗೆ ಸುರರು ಸಿದ್ಧರು ಮುಂತಾದವರಿಂದ ಸ್ತುತಿಸಲ್ಪಡುವ ಆ ಕಾತ್ಯಾಯನಿಯು ಎಲ್ಲ ಜಗತ್ತಿನಲ್ಲಿ ಸುಪ್ರತಿಷ್ಠಿತವಾದ ಶ್ರೀಮನ್ ನಾರಾಯಣನ ಒಂದು ವಿಶೇಷ ಶಕ್ತಿ ಸ್ವರೂಪಿಣಿಯಾಗಿ ಬೆಳಗಿದಳು. ನಿಜವಾಗಿಯೂ ಅತ್ಯಂತ ಸುಂದರಿಯಾದ ಆ ದೇವಿಯು ದೈತ್ಯರಿಗೆಲ್ಲ ಘೋರರೂಪಿಣಿಯಾಗಿ ಕಂಡಳು.

ಹೀಗೆ ಎಲ್ಲ ದೇವತೆಗಳೂ ಸ್ತುತಿಸುತ್ತಲಿರುವಾಗ ''ದೇವತೆಗಳ ಹಿತಕ್ಕಾಗಿ ನಾನು ಮತ್ತೆ ಅವತಾರತಾಳಿ ಬರುತ್ತೇನೆ'' ಎಂದು ಹೇಳಿ ಎಲ್ಲ ದೇವತೆಗಳ ನಿರೋಪ ತೆಗೆದುಕೊಂಡು ಆ ದೇವಿಯು ಶಂಕರನ ಪಾದ ಮೂಲವನ್ನು ಸೇರಿದಳು.

ವಾಮನ ಮಹಾಪುರಾಣದಲ್ಲಿ ಮಹಿಷಾಸುರ ಮರ್ದನ ಎಂಬ
ಇಪ್ಪತ್ತನೇಯ ಅಧ್ಯಾಯವು ಮುಗಿದುದು



## ಸಂವರಣನ ಪ್ರಣಯ

## ಅಧ್ಯಾಯ - ೨೧

**ನಾರದ :** ಪುಲಸ್ತ್ಯರೇ ಕಾತ್ಯಾಯನಿ ದೇವಿಯ ಮರು ಅವತಾರ ಸಮಾಚಾರವನ್ನು ತಿಳಿಸಿರಿ. ಆ ದೇವಿಯು ಮತ್ತೆ ಜನಿಸಿ ಬಂದ ಸಮಾಚಾರವನ್ನು ಕೇಳಬೇಕೆಂದು ನನಗೆ ಬಹಳ ಕುತೂಹಲವಿದೆ. ವಿವರವಾಗಿ ಅರುಹಿರಿ.

**ಪುಲಸ್ತ್ಯ :** ನಾರದಮುನಿಯೇ, ಆ ಮಹಾದೇವಿಯು ಶುಂಭಾಸುರನನ್ನು ಸಂಹರಿಸುವದಕ್ಕಾಗಿ ಮತ್ತೂ ಪ್ರಪಂಚದ ಜನರಿಗೆ ಹಿತಗೈಯುವ ಉದ್ದೇಶದಿಂದ ಪುನಃ ಸಂಭೂತಳಾದ ಕಥೆಯನ್ನು ಹೇಳುತ್ತೇನೆ. ಕೇಳು-

''ಹಿಮವಂತನ ಮಗಳಾದ ಉಮಾದೇವಿಯು ಶಂಕರನನ್ನು ವಿವಾಹವಾದದ್ದು ಸರಿಯಷ್ಟೇ? ಹಿಮಶೈಲದಿಂದ ಜನಿಸಿದ ಅವಳಿಗೆ ಕೌಶಿಕೀ ಎಂದು ಹೆಸರಾಗಿ ಮತ್ತೆ ಸಂಭವಿಸಿ ವಿಂಧ್ಯಪರ್ವತಕ್ಕೆ ಹೋಗಿ ಭೂತಗಣದಿಂದ ಕೂಡಿಕೊಂಡು ಶುಂಭ ನಿಶುಂಭ ಎಂಬ ದೈತ್ಯರನ್ನು ತನ್ನ ಆಯುಧಗಳಿಂದ ಸಂಹರಿಸುವಳು.''

**ನಾರದ** : ಪೂಜ್ಯರೇ, ಹಿಂದೆ ದಕ್ಷನ ಮಗಳಾದ ಸತೀದೇವಿಯು ಮತ್ತೆ ಹಿಮಾಲಯದ ಹೊಟ್ಟೆಯಿಂದ ಹುಟ್ಟಿದ್ದನ್ನು ತಾವು ನನಗೆ ತಿಳಿಸಿದಿರಿ. ಆದರೆ ಆ ಪಾರ್ವತೀ ದೇವಿಯು ಕೋಶದಿಂದ ಜನಿಸಿ ಕೌಶಕೀ ಹೇಗಾದಳು. ಅವಳು ಶುಂಭನನ್ನು ಕೊಂದುದೆಂತು? ವೀರದಾನವರಾದ ಆ ನಿಶುಂಭನನ್ನು ನಾಶ ಮಾಡಿದ್ದೆಂತು? ಈ ಶುಂಭ ನಿಶುಂಭರು ಯಾರ ಮಕ್ಕಳು, ಇದೆಲ್ಲವನ್ನು ತಾವು ನನಗೆ ಯಥಾರ್ಥವಾಗಿ ಹೇಳಬೇಕು. ನಿಮ್ಮ ದಯೆಯಿಂದ ನಾನು ಆ ದೇವಿಯ ದಿವ್ಯವಾದ ಚರಿತ್ರೆಯನ್ನು ಕೇಳಿದ್ದೇನೆ. ಈಗ ಆ ಪಾರ್ವತೀದೇವಿಯ ಪುನಃ ಸಂಭವದ ಸಂಗತಿಯನ್ನು ವಿಸ್ತಾರವಾಗಿ ನಿರೂಪಿಸಿರಿ.

**ಪುಲಸ್ತ್ಯ** : ಪಾರ್ವತಿದೇವಿಯ ಆ ಹೊಸಹುಟ್ಟಿನ ಕಥೆಯನ್ನು ನಿನಗೆ ಚೆನ್ನಾಗಿ ಹೇಳುತ್ತೇನೆ. ಕುಮಾರಸ್ವಾಮಿಯ ಉತ್ಪತ್ತಿಯ ವೃತ್ತಾಂತವನ್ನೂ ತಿಳಿಸುತ್ತೇನೆ. ಅವಧಾನವಿಟ್ಟು ಆಲಿಸು. ಪೂರ್ವಕಾಲದಲ್ಲಿ ದಕ್ಷಯಜ್ಞದ ದುರಂತದಲ್ಲಿ ಸತೀದೇವಿಯು ಮರಣ ಹೊಂದಿದಳು. ಆಗ ರುದ್ರನು ಮೊದಲಿನ ತನ್ನ ಬ್ರಹ್ಮಚರ್ಯ ವ್ರತಕ್ಕೆ ಮರಳಿದಂತಾಗಿತ್ತು. ಆದರೆ ಒಮ್ಮೆ ಮದುವೆ ಆಗಿಹೋದದ್ದರಿಂದ ಅವನು ಬ್ರಹ್ಮಚಾರಿ ಅಲ್ಲ. ಮಡದಿ ಸತ್ತದ್ದರಿಂದ ಗೃಹಸ್ಥಾಶ್ರಮಿ ಅಲ್ಲ, ಹಾಗಾದರೆ ಅವನ ಆಶ್ರಮ ಯಾವುದು? ಇದೂ ಅಲ್ಲ, ಅದೂ ಅಲ್ಲ. ನೀಲಕಂಠನು ನಿರಾಶ್ರಮಿಯಾಗಿಯೇ ನಿಲ್ಲಬೇಕಾಯಿತು. ಆಗ ಅವನು ಘೋರ ತಪಸ್ಸನ್ನು ಮಾಡಬೇಕೆಂದು ಸಂಕಲ್ಪಿಸಿದನು.

ಇಷ್ಟು ದಿನಗಳವರೆಗೆ ಮಹಾದೇವನೇ ಸೇನಾಪತಿಯಾಗಿದ್ದನು. ದೇವತೆಗಳಿಗೆ ದಾನವರ ಗರ್ವವನ್ನು ಅಡಗಿಸಲು ಸಮರ್ಥನೆಂದರೆ ಆ ಶಂಕರನೊಬ್ಬನೇ. ಅವನು ಇಂದು ದೇವಸೇನೆಯ ಸೇನಾಪತಿತ್ವವನ್ನು ತೊರೆದು ಶಿವರೂಪಿಯಾಗಿ ಸಮಾಧಿಯಲ್ಲಿ ಕುಳಿತನು. ಸೇನಾಪತಿಯಾದ ಶಂಕರನಿಲ್ಲದ ದೇವತೆಗಳ ಸೇನೆಯು ಬಹಳ ಅನಾಥವಾಯಿತು. ಇದನ್ನು ತಿಳಿದ ದಾನವರ ದೊರೆ ನಿಶುಂಭನು ಸ್ವರ್ಗವನ್ನು ಆಕ್ರಮಿಸಿದನು. ಸುರರನ್ನೆಲ್ಲ ಸೋಲಿಸಿದನು. ದೀನ ದೇವತೆಗಳು ಶ್ರೀಹರಿಗೆ ಮೊರೆಹೊಕ್ಕರು. ಆ ಸುರರ ಒಡೆಯನನ್ನು ಕಾಣಬೇಕೆಂದು ಶ್ವೇತ ದ್ವೀಪಕ್ಕೆ ಬಂದರು. ಆ

ಧವಳ ದ್ವೀಪದಲ್ಲಿ ಚಕ್ರ ಗದೆಗಳನ್ನು ಧರಿಸಿದ ಹರಿಯು ರಾಜಹಂಸದಂತೆ ಕಂಗೊಳಿಸುತ್ತಿದ್ದಾನೆ. ಅವನ ಚರಣಗಳಿಗೆ ಎಲ್ಲ ದೇವತೆಗಳೂ ಶರಣ ಹೋದರು. ಭಗವಂತನು ಅವರನ್ನು ನೋಡಿದನು. ಶರಣು ಬಂದ ಸುವೃಂದದ ಮುಂದೆ ಪುರಂದರ ನಿಂತುಕೊಂಡಿದ್ದಾನೆ. ಆಗ ನಾರಾಯಣ ನಸು ನಕ್ಕು ನುಡಿದ. ಮೋಡ ಗುಡುಗಿದಂತೆ ಗಂಭೀರವಾಗಿತ್ತು ಆ ಪುರುಷೋತ್ತಮನ ದನಿ-

''ದೈತ್ಯರ ದೊರೆಯಾದ ದುಷ್ಟ ನಿಶುಂಭನು ನಿಮ್ಮನ್ನೆಲ್ಲ ಸೋಲಿಸಿದನಷ್ಟೇ! ಅದಕ್ಕಾಗಿಯೇ ನೀವೆಲ್ಲರೂ ಕೂಡಿ ಈಗ ನನ್ನ ಕಡೆಗೆ ಬಂದಿದ್ದೀರಿ. ಸುರಶ್ರೇಷ್ಠರೇ, ಈಗ ನಾನು ಹೇಳುವದು ನಿಮ್ಮ ಹಿತಕ್ಕಾಗಿ. ನನ್ನ ಮಾತಿನಂತೆ ನೀವು ನಡೆಯಿರಿ. ಗೆಲುವು ನೀವು ಇದ್ದಲ್ಲಿ ಒಲಿದುಬರುತ್ತದೆ. ದೇವತಾಗಣದಲ್ಲಿ ಅಗ್ನಿಷ್ವಾತ್ತ ಎಂಬ ಹೆಸರಿನ ಪಿತೃಗಳು ಪ್ರಸಿದ್ಧರಾಗಿರುತ್ತಾರೆ. ಅವರ ಮಾನಸ ಕನ್ಯೆಯೇ ಮೇನಾ ಎಂಬ ಹೆಸರಿನ ದೇವತೆ. ಒಳ್ಳೇ ಪವಿತ್ರವಾದ ತಿಥಿ ಯಂದು ಆ ಮಾನಸದೇವಿಯನ್ನು ನೀವು ಭಕ್ತಿಯಿಂದ ಆರಾಧಿಸಿರಿ. ಮಹಾಪ್ರಯೋಜನ ಉದ್ದೇಶದಿಂದ ಈ ಹಿಮಾಲಯ ಪರ್ವತವನ್ನು ಮದುವೆಯಾಗು ಎಂದು ಪ್ರಾರ್ಥಿಸಿರಿ. ನಿಮ್ಮ ಬಿನ್ನಹದಂತೆ ಆ ಪಿತೃಗಳ ಮಾನಸ ಕನ್ಯೆಯು ಪರ್ವತೋತ್ತಮನ ಪತ್ನಿಯಾದ ಬಳಿಕ ಆ ದಾಕ್ಷಾಯಣಿಯು ಅವಳ ಹೊಟ್ಟೆಯಿಂದ ಹುಟ್ಟಿ ಬರುವಳು. ದಕ್ಷನ ಮೇಲಿನ ಕೋಪದಿಂದ ಮಲವನ್ನು ಬಿಡದಂತೆ ಮೈಯನ್ನೇ ಬಿಟ್ಟು ಸುಟ್ಟುಹಾಕಿದ ಆ ಸತೀದೇವಿಯು ಈ ಹಿಮಾಲಯದ ಮಡದಿ ಮೇನೆಯಿಂದ ಮರಳಿ ಮೈದಾಳಿ ಬರುವಳು. ಮುಂದೆ ಅವಳನ್ನು ಶಂಕರನು ವರಿಸುವನು. ಅನಂತರ ಶಿವನ ತೇಜಸ್ಸಿನಿಂದ ಆ ಮಹಾ ತಾಯಿಯು ಒಬ್ಬ ಗಂಡುಮಗುವನ್ನೂ ಪ್ರಸವಿಸುವಳು.

ಆ ಪಾರ್ವತೀ ಪುತ್ರನೇ ಅಸುರರ ಇಂದ್ರನಾದ ಶಂಭುವನ್ನೂ ಕೊಂದುಹಾಕು ವನು. ಅವನ ಪರಿವಾರವನ್ನೂ ಕೊಚ್ಚಿಹಾಕುವನು. ಆದುದರಿಂದ ನೀವೆಲ್ಲರೂ ಕುರುಕ್ಷೇತ್ರಕ್ಕೆ ಹೋಗಿರಿ. ನಿಜವಾಗಿಯೂ ಅದು ಒಂದು ದೊಡ್ಡ ದೊಡ್ಡ ಫಲಗಳನ್ನು ನೀಡುವ ಪುಣ್ಯಕ್ಷೇತ್ರ. ಅಲ್ಲಿರುವ ಪೃಥೂದಕ ಎಂಬ ತೀರ್ಥದಲ್ಲಿ ಪಿತೃಗಳನ್ನೂ ಪೂಜಿಸಿರಿ. ಆ ಪಿತೃಗಳು ನಾಶರಹಿತರು. ನೀವು ನಿಜವಾಗಿಯೂ ನಿಮ್ಮ ವೈರಿಗಳು ನಾಶ ಹೊಂದಲಿ ಎಂದು ಬಯಸುತ್ತಿದ್ದರೆ ಆ ಪುಣ್ಯ ಕ್ಷೇತ್ರವಾದ ಕುರುಕ್ಷೇತ್ರಕ್ಕೆ ಹೋಗಿ ಅಲ್ಲ ದೊಡ್ಡ ದಿನದಂದು ಶಂಕರನನ್ನೂ ಆರಾಧಿಸಿರಿ. ವೈರಿಗಳ ಪರಾಭವಕ್ಕಾಗಿ ಪ್ರಾರ್ಥಿಸಿರಿ. ಶಂಕರನನ್ನೇ ನಮ್ಮ ಒಡೆಯ ಎಂದು ಪೂಜಿಸಿರಿ.'' ವಾಸುದೇವನು ಮೇಲಿನಂತೆ ನುಡಿಯಲು ಇಂದ್ರಾದಿ ದೇವತೆಗಳು ಕೈಮುಗಿದು ಕೇಳಿಕೊಂಡರು.

**ದೇವತೆ :** ''ಭಗವಾನ್ ನೀನು ಹೇಳಿದ ಆ ಕುರುಕ್ಷೇತ್ರ ಯಾವದು ? ಪುಣ್ಯಕರವಾದ ಪೃಥೂದಕ ತೀರ್ಥವು ಅಲ್ಲಿಯೇ ಇರುವದಷ್ಟೇ? ಆ ತೀರ್ಥದ ಹುಟ್ಟು ಹರವುಗಳನ್ನು ತಿಳಿಸಿರಿ.

ನೀವು ತಿಥಿಗಳಲ್ಲಿ ಶ್ರೇಷ್ಠವಾದ ತಿಥಿಯೆಂದರೆ ಮಹಾತಿಥಿ. ಅಂದು ದಿವಂಗತರಾದ ಪಿತೃಗಳನ್ನು ನೀರಿನಿಂದ ಪೂಜಿಸಲೇಬೇಕು ಎಂದು ಹೇಳಿದಿರಿ. ಅಂಥ ಪುಣ್ಯಕರವಾದ ಮಹಾ ತಿಥಿಯು ಯಾವುದು? ಅದನ್ನು ನಮಗೆ ತಿಳಿಸಿರಿ.'' ಕೈಟಭಾಸುರನನ್ನು ಮರ್ದಿಸಿದ ಮುರ ವೈರಿಯು ಕುರುಕ್ಷೇತ್ರದ ಉತ್ಪತ್ತಿಯ ಕಥೆಯನ್ನು ದೇವತೆಗಳನ್ನು ಉದ್ದೇಶಿಸಿ ಹೇಳಿದನು.

**ಶ್ರೀಹರಿ :** ಕೃತಯುಗದ ಪ್ರಾರಂಭದ ಕಾಲ. ಚಂದ್ರವಂಶದಲ್ಲಿ ಋಕ್ಷ ಎಂಬ ಒಬ್ಬ ಅರಸು ಜನಿಸಿದನು. ಅವನು ಬಹಳ ಬಲಿಷ್ಠ. ಆ ಋಕ್ಷರಾಜನ ಮಗನೇ ಸಂವರಣ. ಅವನು ಇನ್ನೂ ಬಾಲಕನಾಗಿರುವಾಗಲೇ ಅವನ ತಂದೆಯು ತನ್ನ ಆ ಎಳೆ ಮಗನನ್ನು ಸಾಮ್ರಾಜ್ಯದ ಗದ್ದುಗೆಯ ಮೇಲೆ ಕೂಡಿಸಿದನು. ಪಟ್ಟಾಭಿಷೇಕವೂ ಆಗಿಹೋಯಿತು. ಆ ಸಂವರಣನು ಬಾಲ್ಯದಿಂದಲೂ ಧರ್ಮದಲ್ಲಿ ಶ್ರದ್ಧಾಳು. ಅವನು ಯಾವಾಗಲೂ ನನ್ನ ಭಕ್ತ. ಆ ಸಂವರಣ ರಾಜನಿಗೆ ವರುಣಪುತ್ರರಾದ ವಶಿಷ್ಠರೇ ಪುರೋಹಿತರು. ಆ ಮಹಾನುಭಾವರು ಈ ರಾಜಕುಮಾರನಿಗೆ ಎಲ್ಲ ವೇದ ವೇದಾಂಗಗಳ ಪಾಠ ಹೇಳಿದರು.

ಒಂದು ದಿನ ಅನಧ್ಯಾಯ. ಅಂದು ಅವನಿಗೆ ಗುರುಗಳಲ್ಲಿ ಪಾಠವಿರಲಿಲ್ಲ. ಆದುದುರಿಂದ ಅವನು ರಾಜ್ಯದ ಸರ್ವ ವ್ಯವಹಾರಗಳನ್ನು ನೋಡಿಕೊಳ್ಳಬೇಕೆಂದು ವಶಿಷ್ಠರಿಗೆ ಭಿನ್ನಹ ಮಾಡಿಕೊಂಡನು. ಆ ತಪೋನಿಧಿಗಳ ಮೇಲೆ ಕಾರ್ಯಭಾರವನ್ನೆಲ್ಲ ಒಪ್ಪಿಸಿ ಅರಣ್ಯಕ್ಕೆ ಬೇಟೆಗೆ ಹೋದನು. ಅರಣ್ಯದಲ್ಲಿ ಒಂದು ಚಿಗರೆಯನ್ನು ಅಟ್ಟಿಸಿಕೊಂಡು ವೈಭ್ರಾಜ ಎಂಬ ವನಕ್ಕೆ ಬಂದನು. ತೇಜಿಯನ್ನೂ ಏರಿ ಏಕಾಕಿಯಾಗಿ ಆ ಏಕಾಂತ ವನಾಂತರದಲ್ಲಿ ಸಂಚರಿಸುವ ಆ ರಾಜಕುಮಾರನು ಅಲ್ಲಿಯ ವನಶ್ರೀಯನ್ನು ಕಂಡು ಉನ್ಮಾದಗೊಂಡನು. ಆಗ ಅಲ್ಲಿ ಆರೂ ಋತುಗಳ ಎಲ್ಲ ತರಹದ ಹೂಗಳು ಅರಳಿ ನಿಂತಿದ್ದವು. ಅದೊಂದು ಸುಗಂಧದ ಸುಗ್ಗಿ. ನೋಡಿದಲ್ಲೆಲ್ಲ ಕುಸುಮ ಸಾಮ್ರಾಜ್ಯ, ಉಸಿರೆಳೆದಲ್ಲೆಲ್ಲ ಸುಗಂಧ ಸೌರಭ, ಕಂಡಷ್ಟೂ ಕಣ್ಣಿಗೆ ತೃಪ್ತಿ ಇಲ್ಲ, ಮೂಸಿದಷ್ಟೂ ಮೂಗಿಗೆ ತೃಪ್ತಿ ಇಲ್ಲ. ಆ ವನ ಗರ್ಭದಲ್ಲಿ ಹೊಂದಾವರೆಗಳು ಹೂತು ನಿಂತಿದ್ದವು. ಕನ್ನೈದಿಲೆಗಳು ಬಿರಿದಿದ್ದವು. ಕಲ್ಹಾರುಗಳು ಅರಳಿದ್ದವು. ಪದ್ಮಗಳು ಪಕಳೆದೆರೆದಿದ್ದವು.

ಸುಂದರವಾದ ಆ ವನಕಂದರದಲ್ಲಿ ದೇವಕನ್ನಿಕೆಯರೂ, ಅಪ್ಸರೆಯರೂ ಆಟವಾಡುತ್ತಿದ್ದರು. ಕ್ರೀಡಾಸಕ್ತರಾದ ಕಾಮಿನಿಯರ ನಡುವೆ ಸಂವರಣನು ಓರ್ವ ಕನ್ಯೆಯನ್ನು ಕಂಡನು. ಅಲ್ಲಿ ನೆರೆದ ಸುರಸುಂದರಿಯರಿಗೆಲ್ಲರಿಗೂ ಮಿಗಿಲಾಗಿತ್ತು ಅವಳ ಚೆಲುವುಚಾರಿಮೆ, ಅವಳನ್ನು ಕಂಡುದೊಂದೇ ತಡ ಆ ಅರಸನು ಕಾಮ ಬಾಣಗಳಿಗೆ ಗುರಿಯಾದ ಆ ಕನ್ಯೆಗೂ ಅಷ್ಟೇ ಸಂವರಣವನ್ನು ನೋಡಿದ್ದೊಂದೇ ನೆಪ. ಅವಳ ಹೃದಯವು ಹೂಬಾಣನ ಶರಘಾತದಿಂದ ಗಾಸಿಗೊಂಡಿತು. ಅವರಿಬ್ಬರೂ ಪರಸ್ಪರ ನೋಡಿ ಮದನನ ಬಾಣಕ್ಕೆ ಗುರಿಯಾದರು. ರಾಜನ ಆಸನ ಅಲುಗಾಡಿತು. ಅವನು ಕುದುರೆಯ ಮೇಲಿಂದ ಬಿದ್ದುಬಿಟ್ಟನು. ಬಯಸಿದಾಗ ಬೇಕಾದ ರೂಪವನ್ನು ತೆಗೆದುಕೊಳ್ಳಬಲ್ಲ ಹಿರಿಯ ಗಂಧರ್ವರು ಅವನ ಬಳಿಗೆ ಬಂದರು. ಮೂರ್ಛಾಕ್ರಾಂತನಾದ ಮಹಾರಾಜನಿಗೆ ಆ ಕಾಮರೂಪಿಗಳಾದ ಗಂಧರ್ವರು ತಣ್ಣೀರು ಚಿಮುಕಿಸಿ ತಂಗಾಳಿ ಬೀಸಿದರು. ಅರೆಚಣದಲ್ಲಿ ರಾಜನಿಗೆ ತಿಳಿವು ತಿರುಗಿತ್ತು. ಪ್ರಜ್ಞೆ ಬಂದಿತು.

೨೮೬. ಸೋಮವಂಶೋದ್ಭವೋ ರಾಜಾ ಋಕ್ಷೋ ನಾಮ ಮಹಾಬಲಃ।
ಕೃತಸ್ಯಾದೌ ಸಮಭವದೃಕ್ಷಾತ್ಸಂವರಣೋಽಭವತ್ ।

೨೮೭. ಸ ಚ ಪಿತ್ರಾ ನಿಜೇ ರಾಜ್ಯೇ ಬಾಲ ಏವಾಭಿಷೇಚಿತಃ ।
ಬಾಲ್ಯೇಽಪಿ ಧರ್ಮನಿರತೋ ಮದ್ಭಕ್ತಶ್ಚ ಸದಾಭವತ್ ।

೨೮೮. ಪುರೋಹಿತಸ್ತು ತಸ್ಯಾಸೀದ್ವಸಿಷ್ಠೋ ವರುಣಾತ್ಮಜಃ ।
ಸ ತಮಧ್ಯಾಪಯಾಮಾಸ ಸಾಂಗಾನ್ವೇದಾನುದಾರಧೀಃ ॥

೨೮೯. ತತೋ ಜಗಾಮ ಚಾರಣ್ಯೇ ತ್ವನಧ್ಯಾಯೇ ನೃಪಾತ್ಮಜಃ ।
ಸರ್ವಕರ್ಮಸು ನಿಕ್ಷಿಪ್ಯ ವಸಿಷ್ಠಂ ತಪಸಾಂ ನಿಧಿಂ ।

೨೯೦. ತತೋ ಮೃಗಸ್ಯ ವ್ಯಾಕ್ಷೇಪಾದೇಕಾಕೀ ವಾಜಿನಾ ವನಂ ।
ವೈಭ್ರಾಜಂ ಚ ಜಗಾಮಾಥ ಮನೋನ್ಮಾದೇನ ತನ್ಮನೇ ।

೨೯೧. ತತಸ್ತು ಕೌತುಕಾವಿಷ್ಟಃ ಸರ್ವರ್ತುಕುಸುಮೇ ವನೇ ।
ಅವಿತೃಪ್ತಃ ಸುಗಂಧಸ್ಯ ಸಮಂತಾದ್ವ್ಯಚರದ್ವನಂ ।

೨೯೨. ಸ ವನಾಂತಂ ದದರ್ಶಾಥ ಪುಲ್ಲಕೋಕನದಾವೃತಂ ।
ಕಲ್ಹಾರ ಪದ್ಮಕುಮುದೈಃ ಕಮಲೇಂದೀವರೈರಪಿ ।

೨೯೩. ತತ್ರ ಕ್ರೀಡಂತಿ ಸತತಮಪ್ಸರೋಽಮರ ಕನ್ಯಕಾಃ ।
ತಾಸಾಂ ಮಧ್ಯೇ ದದರ್ಶಾಥ ಕನ್ಯಾಂ ಸಂವರಣೋಽಧಿಕಾಂ ॥

೨೯೪. ದರ್ಶನಾದೇವ ಚ ನೃಪಃ ಕಾಮಮಾರ್ಗಣ ಪೀಡಿತಃ ।
ತಥಾ ಸಾ ತಂ ಸಮೀಕ್ಷ್ಯೈವ ಕಾಮಬಾಣಾತುರಾಽಭವತ್

೨೯೫. ಉಭೌ ತೌ ಪೀಡಿತೌ ಮೋಹಂ ಜಗ್ಮತುಃ ಕಾಮಮಾರ್ಗಣೈಃ।
ರಾಜಾ ಚಲಾಸನೋ ಭೂಮ್ಯಾಂ ನಿಪಪಾತ ತುರಂಗಮಾತ್ ।

೨೯೬. ತಮಭ್ಯೇತ್ಯ ಮಹಾತ್ಮಾನೋ ಗಂಧರ್ವಾಃ ಕಾಮರೂಪಿಣಃ ।
ಸಿಕ್ಷಿಚುರ್ವಾರಿಣಾ ತೇನ ಲಬ್ಧಸಂಜ್ಞೋಽಭವತ್ಕ್ಷಣಾತ್ ॥

೨೯೭. ಸಾ ಚಾಪ್ಸರೋಭಿರುತ್ಪಾಟ್ಯ ನೀತಾ ಪಿತೃಕುಲಂ ನಿಜಂ ।
ತಾಭಿರಾಶ್ವಾಸಿತಾ ಚಾಪಿ ಮಧುರೈರ್ವಚನಾಂಬುಭಿಃ ॥

೨೯೮. ಸ ಚಾಪ್ಯಾರುಹ್ಯ ತುರಗಂ ಪ್ರತಿಷ್ಠಾನಂ ಪುರೋತ್ತಮಂ ।
ಗತಸ್ತು ಮೇರುಶಿಖರಂ ಕಾಮಚಾರೀ ಯಥಾಮರಃ ।

೨೯೯. ಯದಾ ಪ್ರಭೃತಿ ಚಾದೃಷ್ಟಾ ಚಕ್ಷುಷಾ ತಪತೀ ಗಿರೌ ।
ತದಾ ಪ್ರಭೃತಿ ನಾಶ್ನಾತಿ ದಿವಾ ಸ್ವಪಿತಿ ವಾ ನಿಶಿ ।

೩೦೦. ತತಃ ಸರ್ವವಿದವ್ಯಗ್ರೋ ವಿಧಿತ್ವಾ ವರುಣಾತ್ಮಜಃ ।
ತಪತೀತಾಪಿತಂ ವೀರಂ ಪಾರ್ಥಿವಂ ತಪಸಾಂ ವಿಧಿಃ ।

೩೦೧. ಸಮುತ್ಪತ್ಯ ಮಹಾಯೋಗೀ ಗಗನಂ ರವಿ ಮಂಡಲಂ ।
ವಿವೇಶ ದೇವಂ ತಿಗ್ಮಾಂಶುಂ ದದರ್ಶ ಸ್ಯಂದನೇ ಸ್ಥಿತಂ ॥

೩೦೨. ತಂ ದೃಷ್ಟ್ವಾ ಭಾಸ್ಕರಂ ದೇವಂ ನನಾಮ ದ್ವಿಜಸತ್ತಮಃ ।
ಪ್ರತಿಪ್ರಣಮಿತಶ್ಚಾಸೌ ಭಾಸ್ಕರೇಣಾಪ್ಯಸಾ ಋಷಿಃ ।

೩೦೩. ಜ್ವಲಜ್ಜಟಾಕಲಾಪೋಽಸೌ ದಿವಾಕರ ಸಮೀಪಗಃ ।
ಶೋಭತೇ ವಾರುಣಿಃ ಶ್ರೀಮಾನ್ ದ್ವಿತೀಯ ಇವ ಭಾಸ್ಕರಃ ।

೩೦೪. ತತಸ್ಸಂಪೂಜಿತೋಽರ್ಘಾದ್ಯೈಃ ಭಾಸ್ಕರೇಣ ತಪೋಧನಃ ।
ಪೃಷ್ಟಶ್ಚಾಗಮನೇ ಹೇತುಂ ಪ್ರತ್ಯುವಾಚ ದಿವಾಕರಂ ॥

೩೦೫. ಸಮಾಯಾತೋಽಸ್ಮಿ ದೇವೇಶ ಯಾಚಿತುಂ ತ್ವಾಂ ಮಹಾದ್ಯುತೇ।
ಸುತಾಂ ಸಂವರಣಸ್ಯಾರ್ಥೇ ತ್ವಂ ಚ ತಾಂ ದಾತುಮರ್ಹಸಿ ॥

ಇತ್ತ ಆ ಕನ್ಯೆಯದಾದರೂ ಇದೇ ಅವಸ್ಥೆ. ರಾಜಕುಮಾರನನ್ನು ಕಂಡು ಅವನ ಸೌಂದರ್ಯಕ್ಕೆ ಮಾರುಹೋದ ಆ ರಾಜಕುವರಿಯನ್ನು ಅವಳ ತಂದೆಯ ಮನೆಗೆ ಕರೆದೊಯ್ದರು. ಆ ಅಪ್ಸರೆಯರು ಸವಿ ನುಡಿಗಳಿಂದ ಅವಳನ್ನು ಸಂತೈಸಿದರು. ಪ್ರಜ್ಞೆ ಬಂದ ಬಳಿಕ ದೊರೆಯು ಕುದುರೆಯನ್ನೇರಿ ಪ್ರತಿಷ್ಠಾನ ಪಟ್ಟಣಕ್ಕೆ ಬಂದನು. ಮನ 'ಬಂದತ್ತ ನಡೆಯಬಲ್ಲ ಆ ಮಹಾರಾಜನು ಸ್ವೈರಸಂಚಾರಗೈಯುತ್ತ ಮೇರುಪರ್ವತದ ಶಿಖರವನ್ನು ಏರಿದನು. ಸಂವರಣನು ಆ ಕಾಡಿನಲ್ಲಿ ಕಂಡ ಕನ್ಯೆ ತಪತೀ. ಅವಳನ್ನು ನೋಡಿದಂದಿನಿಂದ ರಾಜನಿಗೆ ಹಗಲು ಊಟವಿಲ್ಲ, ರಾತ್ರಿ ನಿದ್ದೆ ಇಲ್ಲ. ರಾಜಕುಮಾರನ ಈ ಪ್ರಣಯದ ಸಮಾಚಾರವು ಗುರು ವಶಿಷ್ಠರಿಗೆ ಗೊತ್ತಾಯಿತು. ಅವರು ಸರ್ವಜ್ಞರಲ್ಲವೇ ? ಆ ತಪೋನಿಧಿಗಳಿಗೆ ತಮ್ಮ ಶಿಷ್ಯ ರಾಜಕುಮಾರನು ತಪತಿ ಗಾಗಿ ಎಷ್ಟು ತಾಪಪಡುತ್ತಿದ್ದಾನೆಂದು ತಿಳಿದುಬಂದಿತು.

ಅವರು ಒಮ್ಮೆಲೇ ಮೇಲೆ ಹಾರಿದರು. ಮುಗಿಲಿಗೇ ಸಾರಿದರು. ಒಮ್ಮೆಲೇ ಮಾರ್ತಂಡ ಮಂಡಲಕ್ಕೆ ಏರಿದರು. ಆ ಸೂರ್ಯ ಮಂಡಲದಲ್ಲಿ ಹೊಂದೇರಿನಲ್ಲಿ ಕುಳಿತ ಸೂರ್ಯನ ಬಳಿಗೆ ಬಂದರು. ಭಗವಾನ್ ಭಾಸ್ಕರನಿಗೆ ಸಾಷ್ಟಾಂಗ ನಮಸ್ಕಾರ ಮಾಡಿದರು. ತಿರುಗಿ ಸೂರ್ಯನ ಬಳಿಗೆ ಬಂದು ನಿಂತಾಗ ಇಬ್ಬರು ಸೂರ್ಯರು ಸಮ್ಮಿಲಿತರಾದಂತಿತ್ತು.

ಸೂರ್ಯದೇವನು ತಪೋನಿಧಿ ವಶಿಷ್ಠರನ್ನು ಎಲ್ಲ ವಿಧವಾದ ಪೂಜೆಗಳಿಂದ ಅರ್ಚಿಸಿದನು. ಆಗ ಸೂರ್ಯನು ಅವರ ಆಗಮನದ ಕಾರಣ ಕೇಳಿದನು. ಅದಕ್ಕೆ ವಸಿಷ್ಠರ ಉತ್ತರವು ಇಂತಿದ್ದಿತು- ''ದೇವತಾಧುರೀಣನಾದ ತೇಜೋಮೂರ್ತಿಯೇ, ನಾನು ಕನ್ಯಾರ್ಥಿಯಾಗಿ ನಿನ್ನ ಬಳಿಗೆ ಬಂದಿದ್ದೇನೆ. ರಾಜಕುಮಾರ ಸಂವರಣನಿಗೆ ನಿನ್ನ ಮಗಳನ್ನು ಕೊಟ್ಟು ಮದುವೆ ಮಾಡು''.

೩೦೬. ತತೋ ವಸಿಷ್ಠಾಯ ದಿವಾಕರೇ ।
ನಿವೇದಿತಾ ಸಾ ತಪತೀ ತನೂಜಾ ।
ಗೃಹಾಗತಾಯ ದ್ವಿಜ ಪುಂಗವಾಯ ।
ರಾಜ್ಞೋಽರ್ಥತಸ್ಸಂವರಣಸ್ಯ ಚೈವ ।

೩೦೭. ಸಾವಿತ್ರಮಾಸಾದ್ಯವಚೋ ವಸಿಷ್ಠಃ ।
ಸ್ವಮಾಶ್ರಮಂ ಪುಣ್ಯಮುಪಾಜಗಾಮ
ಸಾ ಚಾಪಿ ಸಂಸ್ಮೃತ್ಯ ನೃಪಾತ್ಮಜಂ ತಂ
ಕೃತಾಂಜಲಿ ರ್ವಾರುಣಿಮಾಹ ದೇವೀ ।

ತಪತ್ಯುವಾಚ

೩೦೮. ಬ್ರಹ್ಮನ್ಮಯಾ ಖೇದಮುಪೇತ್ಯ ಯೋ ಹಿ ।
ಸಹಾಪ್ಸರೋಭಿಃ ಪರಿಚಾರಿಕಾಭಿಃ ।
ದೃಷ್ಟೋಹ್ಯರಣ್ಯೇಽ ಮರಗರ್ಭತುಲ್ಯೋ ।
ನೃಪಾತ್ಮಜೋ ಲಕ್ಷಣ ತೋಽಪಿ ಜಾನೇ ।

೩೦೯. ಪಾದೌ ಶುಭೌ ಚಕ್ರಗದಾಸಿಚಿಹ್ನೌ ।
ಜಂಘೇ ತಥೋರೂ ಕರಿಹಸ್ತತುಲ್ಯಾ ।
ಕಟಿರ್ಯಥಾ ಕೇಸರಿಣಸ್ತಥೈವ ।
ಕ್ಷಾಮಂ ಚ ಮಧ್ಯಂ ತ್ರಿವಲೀ ನಿಬದ್ಧಂ ।

೩೧೦. ಗ್ರೀವಾಸ್ಯ ಶಂಖಾಕೃತಿ ಮಾದಧಾತಿ ।
ಭುಜೌ ಚ ಪೀನೌ ಕಠಿಣೌ ಸುದೀರ್ಘೌ ।
ಹಸ್ತೌ ತಥಾ ಪದ್ಮದಲೋದ್ಭವಾಂಕೌ ।
ಛತ್ರಾಕೃತಿಸ್ತಸ್ಯ ಶಿರೋ ವಿಭಾತಿ ।

೩೧೧. ನೀಲಾಶ್ಚ ಕೇಶಾಃ ಕುಟಿಲಾಶ್ಚ ತಸ್ಯ ।
ಕರ್ಣೌ ಸಮಾಂಸೌ ಸುಸಮಾ ಚ ನಾಸಾ ।
ದೀರ್ಘಾಶ್ಚ ತಸ್ಯಾಂಗುಲಯಃ ಸುಪರ್ವಾಃ ।
ಪದ್ಭ್ಯಾಂ ಕರಾಭ್ಯಾಂ ದಶನಾಶ್ಚ ಶುಭ್ರಾಃ ॥

೩೧೨. ಸಮುನ್ನತಃ ಷಡ್ಭಿರುದಾರ ವೀರ್ಯಾಃ ।
ತ್ರಿಭಿರ್ಗಭೀರಃ ತ್ರಿಷು ಚ ಪ್ರಲಂಬಃ ॥
ರಕ್ತಸ್ತಥಾ ಸಪ್ತಸು ರಾಜಪುತ್ರಃ
ಕೃಷ್ಣಶ್ಚತುರ್ಭಿಃ ತ್ರಿಭಿರಾನತೋಽಪಿ ।

ಆಗ ಆ ಸವಿತೃದೇವನು ವಶಿಷ್ಠರಿಗೆ ತನ್ನ ಮಗಳಾದ ತಪತಿಯನ್ನು ಒಪ್ಪಿಸಿದನು. ರಾಜಕುಮಾರ ಸಂವರಣನ ಸಲುವಾಗಿ ತನ್ನ ಮನೆವರೆಗೆ ಬಂದ ವಶಿಷ್ಠರ ಮೇಲೆ ಅವನಿಗೆ ಪೂರ್ಣಶ್ರದ್ಧೆ ಇದ್ದಿತು. ದಿವಾಕರನ ಸಮ್ಮತಿ ಪಡೆದು ಕನ್ಯೆಯನ್ನು ಕರೆದುಕೊಂಡು ತಮ್ಮ ಆಶ್ರಮಕ್ಕೆ ತಿರುಗಿ ಬಂದರು ವಸಿಷ್ಠರು. ಸೂರ್ಯಕುಮಾರಿಯಾದ ಆ ತಪತೀ ದೇವಿಯು ಕೈಮುಗಿದು ವಶಿಷ್ಠರಿಗೆ ಹೇಳಿದಳು. ಅವಳ ಮನಸ್ಸು ಸಂವರಣನನ್ನೇ ಕನವರಿಸುತ್ತಿತ್ತು.

**ತಪತಿ :** ಬ್ರಹ್ಮರ್ಷಿಗಳೇ, ನಾನು ಇಷ್ಟೆಲ್ಲ ಕಷ್ಟಪಟ್ಟದ್ದು ಆ ಸಂವರಣ ಮಹಾರಾಜನ ಸಲುವಾಗಿ. ಅಪ್ಸರೆ ಹಾಗೂ ಸೇವಕಿಯರೊಡನೆ ನಾನು ಅರಣ್ಯಕ್ಕೆ ಹೋದಾಗ ಅವನನ್ನು ಕಂಡೆ. ದೈವೀಕುಲದಲ್ಲಿ ಜನಿಸಿದವರ ದಿವ್ಯಲಕ್ಷಣಗಳು ಅವನಲ್ಲಿವೆ. ಅವನ ಇತರ ಒಳ್ಳೇ ಲಕ್ಷಣಗಳನ್ನು ಕೂಡಾ ನಾನು ಚೆನ್ನಾಗಿ ಬಲ್ಲೆ. ಮಹಾಪುರುಷರ ಲಕ್ಷಣಗಳು ಅವನಲ್ಲಿವೆ. ಅವನ ಚರಣಗಳು ಚಕ್ರ, ಗದಾ, ಖಡ್ಗ ಮೊದಲಾದ ಚಿನ್ಹಗಳಿಂದ ಚಾರುತರವಾಗಿವೆ. ಮೊಣಕಾಲು ಮತ್ತು ತೊಡೆಗಳು ಆನೆಯ ಸೊಂಡೆಯಂತಿವೆ. ಸಿಂಹದ ನಡುವಿನಂತೆ ಸಣ್ಣದಾದ ಮಧ್ಯ ಭಾಗದಲ್ಲಿ ಮೂರು ಕಡಿಗಳು ಒಪ್ಪುತ್ತವೆ. ಅವನ ಕೊರಳು ಶಂಖದ ಆಕಾರದಿಂದ ಶೋಭಿಸುತ್ತದೆ. ನೀಳ ತೋಳುಗಳೂ ಪರಿಪುಷ್ಟವಾಗಿಯೂ ಕಠಿಣವಾಗಿಯೂ ಇರುತ್ತವೆ. ಎರಡು ಕೈಗಳು ಕಮಲದ ದಳದ ಚಿನ್ಹದಿಂದ ಅಂಕಿತವಾಗಿದೆ. ತಲೆಯು ಛತ್ರದ ಆಕಾರದಿಂದ ಕಂಗೊಳಿಸುತ್ತದೆ.

ಕಪ್ಪಾದ ಗುಂಗುರುಗೂದಲು, ಸುಳಿಗಿವಿ, ಉನ್ನತ ಭುಜ, ನಿಡಿದಾದ ಮೂಗು, ನೀಳ ಬೆರಳು, ಹೊಳೆಯುವ ಹಲ್ಲು ಇವೆಲ್ಲವೂ ಜ್ಯೋತಿಷ್ಯ ಶಾಸ್ತ್ರದಲ್ಲಿ ಹೇಳಿದ ಮಹಾಪುರುಷರ ಲಕ್ಷಣಗಳಿಗೆ ಅನುಗುಣವಾಗುತ್ತವೆ. ಲಕ್ಷಣ ಶಾಸ್ತ್ರದಲ್ಲಿ ಹೇಳಿದಂತೆ ಅವನ ಹೊಟ್ಟೆ, ಎದೆ, ಮೂಗು, ಭುಜ, ಎರಡು ಪಾರ್ಶ್ವ ಇವು ಆರು ಉನ್ನತವಾಗಿ ಎದ್ದು ಕಾಣುತ್ತವೆ. ಧ್ವನಿ, ಶಕ್ತಿ ಮತ್ತು ಹೊಕ್ಕಳ ಇವು ಮೂರು ಗಂಭೀರವಾಗಿವೆ. ಹುಬ್ಬು ತೋಳು ಮತ್ತು ಕೆಳಭಾಗ ಇವು ಮೂರು ಉದ್ದವಾಗಿರುತ್ತವೆ.

೩೧೩. ದ್ವಾಭ್ಯಾಂಚ ಶುಕ್ಲಃ ಸುರಭಿಶ್ಚತುರ್ಭಿಃ
ಸಂತ್ಯೇವ ಪದ್ಮಾನಿ ದಶೈವ ಚಾಸ್ಯ ।
ವೃತಸ್ಸ ಭರ್ತಾ ಭಗವಾನ್‌ಹಿ ಪೂರ್ವಂ ।
ತಂ ರಾಜ ಪುತ್ರಂ ಪರಮಂ ವಿಚಿಂತ್ಯ ॥

೩೧೪. ದದಸ್ವ ಮಾಂ ನಾಥ ತಪಸ್ವಿಮುಖ್ಯ
ಗುಣೋಪಪನ್ನಾಯ ಸಮೀಹಿತಾಯ ।
ಸ್ನೇಹಾತ್ಮಕಾಮಂ ಪ್ರವದಂತಿ ಸಂತೋ ।
ದಾತುಂ ತಥಾನ್ಯಸ್ಯ ವಿಭೋ ಕ್ಷಮಸ್ವ ।

ದೇವ ದೇವ ಉವಾಚ

೩೧೫. ಇತ್ಯೇವ ಮುಕ್ತಸ್ಸವಿತುಶ್ಚ ಪುತ್ರ್ಯಾ
ಋಷಿಸ್ತದಾ ಧ್ಯಾನಪರೋ ಬಭೂವ
ಜ್ಞಾನೇ ತಮೇವರ್ಕ್ಷಸುತಂ ಸಕಾಮಂ ।
ಮುದಾ ಯತೋ ವಾಕ್ಯಮಿದಂ ಜಗಾದ ।

ಅಂಗಾಲು, ಅಂಗೈ, ಕಡೆಗಣ್ಣು, ಉಗುರು, ದವಡೆಗಳ ಭಾಗ, ನಾಲಿಗೆ, ತುಟಿ ಇವು ಏಳು ಬಣ್ಣಗಳಿಂದ ಹೊಳೆಯುತ್ತಲಿವೆ. ಕೂದಲು, ಹುಬ್ಬು, ಕಣ್ಣುಗುಡ್ಡೆ ಇವು ನಾಲ್ಕು ಕಪ್ಪಾಗಿರುತ್ತವೆ. ಎದೆ, ಮೊಲೆ, ಪಾದರೇಖೆ ಇವು ಮೂರು ನಮ್ರವಾಗಿರುತ್ತವೆ. ಇದರಂತೆ

ಅವನ ದೇಹದಲ್ಲಿ ಸಾಮುದ್ರಿಕ ಶಾಸ್ತ್ರದಲ್ಲಿ ಹೇಳಿದಂತೆ ಎರಡು ಅವಯವಗಳು ಬೆಳ್ಳಗೆ, ನಾಲ್ಕು ಸುಗಂಧಿ, ಹತ್ತು ಕಮಲದಾಕಾರದಿಂದ ರಮಣೀಯವಾಗಿವೆ. ಹಲ್ಲು, ಮತ್ತು ಕಣ್ಣು ಎರಡು ಶುಭ್ರ ವರ್ಣದಿಂದ ಬೆಳಗುತ್ತಲಿವೆ. ಸುಗಂಧಿ ನಾಲ್ಕು ಎಂದರೆ ಮುಖ, ಉಸಿರು, ಕಂಕುಳ, ಬೆವರು. ಕಮಲದಂತಿರುವ ಹತ್ತು ಶಾರೀರ ಘಟಕಗಳೆಂದರೆ ನಾಲಿಗೆ, ಮೇಲುದುಟಿ, ಮುಖ, ಕಂಗಳು, ದವಡೆ, ಒಳಭಾಗ, ಎರಡೂ ಮೊಲೆಗಳು, ಉಗುರು, ಕೈಕಾಲು ಇವು ಕಮಲದ ಕಾಂತಿಯನಾಂತು ಕಂಗೊಳಿಸುತ್ತವೆ.

ಈ ಎಲ್ಲ ಸಾಮುದ್ರಿಕ ಶಾಸ್ತ್ರದಲ್ಲಿ ಹೇಳಿದ ಲಕ್ಷಣಗಳನ್ನು ನೋಡಿ ಇವನೊಬ್ಬ ಮಹಾಪುರುಷ ಮತ್ತೂ ಭಾಗ್ಯಶಾಲಿಯಾದ ಮಹಾನುಭಾವ ಎಂದು ಆ ರಾಜಪುತ್ರನನ್ನು ತಿಳಿದು ನಾನು ಮನಸ್ಸಿನಿಂದ ವರಿಸಿದ್ದೇನೆ. ತಪೋಧನರಲ್ಲಿ ಸರ್ವಶ್ರೇಷ್ಠರಾದ ವಶಿಷ್ಠ ಮುನಿಗಳೇ, ಈಗ ನಾನು ಹೇಳಿದ ಮಹಾಪುರುಷ ಲಕ್ಷಣಗಳಲ್ಲದೇ ಆ ರಾಜಕುಮಾರನಲ್ಲಿ ತಾಪಸೋತ್ತಮರ ಸದ್ಗುಣ ಗಳೆಲ್ಲವೂ ಅಪರೂಪವಾಗಿ ಒಗ್ಗೂಡಿವೆ. ಈ ಅವನ ಗುಣಗಳಿಗೆ ಲುಬ್ಧಳಾಗಿಯೇ ನಾನು ಅವನಿಗೆ ಮನಸೋತು ಮಾರುಹೋದದ್ದು. ತಾವೇನೋ ನನ್ನನ್ನು ಬೇಕಾದಲ್ಲಿ ಬೇಕಾದವರಿಗೆ ಕೊಡಲು ಸ್ವತಂತ್ರರೇ ಸರಿ. ಆದರೆ ಪ್ರೀತಿಯಿಂದ ಒಲಿದು ವರಿಸಿದ ವರನಿಗೇ ಕೊಡುವದು ವಿಹಿತ ಮತ್ತೂ ಹಿತ ಎಂದು ದೊಡ್ಡವರು ಹೇಳುತ್ತಾರೆ. ಆದುದರಿಂದ ನಾನು ಗುಣಗಳನ್ನು ಮೆಚ್ಚಿ ವರಿಸಿದ ಆ ಸಂವರಣ ರಾಜಕುಮಾರನಿಗೇ ನನ್ನನ್ನು ಕೊಡಬೇಕು ಎಂದು ಬಾಗಿ ಬೇಡಿಕೊಳ್ಳುತ್ತೇನೆ.''

ಸೂರ್ಯಕುಮಾರಿಯ ಈ ನಲುಮೆಯ ನುಡಿಗಳನ್ನು ಕೇಳಿ ವಶಿಷ್ಠ ಋಷಿಗಳು ಧ್ಯಾನ ದೃಷ್ಟಿಯಿಂದ ಅಂತರ್ಮುಖಿಗಳಾದರು. ತಮ್ಮ ಶಿಷ್ಯನಾದ ಋಕ್ಷರಾಜನ ಮಗನಾದ ಸಂವರಣನು ಕಾಮಿಸಿದ ಕಾಮಿನಿ ಇವಳೇ. ಈ ತಪತಿಯು ಒಲಿದು ವರಿಸಿದ ವರ ಆ ಸಂವರಣನೇ. ಇವೆರಡೂ ಅನುರೂಪ ಜೋಡಿ ಎಂದು ಅವರ ಒಳಗಣ್ಣಿಗೆ ಹೊಳೆದು ತಿಳಿದು ಅವರಿಗೆ ಆನಂದವಾಯಿತು. ಅವರು ಹೀಗೆ ಆ ದಿವಾಕರದುಹಿತೆಗೆ ಹೇಳಿದರು.

೩೧೬. ಸ ಏವ ಪುತ್ರಿ ಕ್ಷಿತಿಪಾತ್ಮಜಸ್ತ್ವಯಾ ।
ದೃಷ್ಟಃ ಪುರಾ ಕಾಮಯಸೇ ಯಮದ್ಯ ।
ಸ ಏಷ ಚಾಯಾತಿ ಮಮಾಶ್ರಮಂ ವೈ ।
ಋಕ್ಷಾತ್ಮಜಸ್ಸಂವರಣೋಹಿ ನಾಮ್ನಾ ।

೩೧೭. ಅಥಾಜಗಾಮೈವ ನೃಪಸ್ಯ ಪುತ್ರಃ
ತದಾಶ್ರಮಂ ಬ್ರಾಹ್ಮಣ ಪುಂಗವಸ್ಯ
ದೃಷ್ಟ್ವಾ ವಶಿಷ್ಠಂ ಪ್ರಣಿಪತ್ಯ ಮೂರ್ಧ್ನಾ ।
ಸ್ಥಿತಾಂ ತ್ವಪಶ್ಯತ್ತಪತೀಂ ನರೇಂದ್ರಃ ।

೩೧೮. ದೃಷ್ಟ್ವಾ ಚ ತಾಂ ಪದ್ಮ ವಿಶಾಲ ನೇತ್ರಾಂ ।
ಸಂದೃಷ್ಟಪೂರ್ವೇಯಮಿತಿ ವ್ಯಚಿಂತಯತ್ ।
ಪಪ್ರಚ್ಛ ಕೇಯಂ ಲಲನಾ ದ್ವಿಜೇಂದ್ರ ।
ಸ ವಾರುಣಿಃ ಪ್ರಾಹ ನರಾಧಿಪೇಂದ್ರಂ

೩೧೯. ಇಯಂ ವಿವಸ್ವದ್ದುಹಿತಾ ನರೇಂದ್ರ ।
ನಾಮ್ನಾ ಪ್ರಸಿದ್ಧಾ ತಪತೀ ಪೃಥಿವ್ಯಾಂ ।
ಮಯಾ ತವಾರ್ಥಾಯ ದಿವಾಕರೋರ್ಥಿತಃ ।
ಪ್ರಾದಾನ್ನಯಾತ್ವಾಶ್ರಮಮಾಹಿತೇಯಂ ।

೩೨೦. ತಸ್ಮಾತ್ಸಮುತ್ತಿಷ್ಠ ನರೇಂದ್ರ ದೇವ್ಯಾಃ
ಪಾಣಿಂ ತಪತ್ಯಾ ವಿಧಿವದ್ಗ್ರಹಾಣ
ಇತ್ಯೇವಮುಕ್ತೋ ನೃಪತಿಃ ಪ್ರಹೃಷ್ಟೋ ।
ಜಗ್ರಾಹ ಪಾಣಿಂ ವಿಧಿವತ್ತಪತ್ಯಾಃ ।

೩೨೧. ಸಾ ತಂ ಪತಿಂ ಪ್ರಾಪ್ಯ ಮನೋಭಿರಾಮಂ ।
ಸೂರ್ಯಾತ್ಮಜಾ ಶಕ್ರಸಮ ಪ್ರಭಾವಂ ।
ರೇಮೇ ಚ ತೇನೈವ ಗೃಹೋತ್ತಮೇಷು ।
ಯಥಾ ಮಹೇಂದ್ರೇಣ ಪುಲೋಮಜಾ ದಿವಿ

"ಸೂರ್ಯಪುತ್ರಿ, ನೀನು ಒಬ್ಬ ರಾಜಕುಮಾರನನ್ನು ಕಂಡಕೂಡಲೇ ಅವನ ರೂಪಕ್ಕೆ ಮನಸೋತು ಮೆಚ್ಚಿ ಮೋಹಿಸಿದ್ದಿಯಲ್ಲವೇ ? ಅಕೋ! ಅಲ್ಲಿ ನೋಡು. ಆ ತರುಣನೇ ಇಲ್ಲಿಗೆ ನಡೆದು ಬರುತ್ತಿದ್ದಾನೆ. ಅವನು ಋಕ್ಷ ರಾಜನ ಮಗ. ಹೆಸರು ಸಂವರಣ."

ಅಷ್ಟರಲ್ಲಿ ಆ ಬ್ರಾಹ್ಮಣೋತ್ತಮರ ಆಶ್ರಮಕ್ಕೆ ಅವರು ಹೇಳಿದ ಅರಸು ಮಗ ಬಂದನು. ವಶಿಷ್ಠರನ್ನು ಕಂಡ ಕೂಡಲೇ ಅವನ ಹಣೆ ಮಣಿಯಿತು. ತಲೆ ತಗ್ಗಿತು. ಗುರುಗಳಿಗೆ ನಮಿಸಿ ನಿಂತ ಅವನಿಗೆ ಅಲ್ಲಿಯೇ ನಿಂತ ತಪನ ತನುಜಳಾದ ತಪತಿಯು ಕಣ್ಣಿಗೆ ಬಿದ್ದಳು. ತಾವರೆಗಣ್ಣಿನ ತುಂಬುಮೊಗದ ಆ ತರಳೆಯನ್ನು ಹಿಂದೊಮ್ಮೆ ತಾನು ಎಲ್ಲಿಯೋ ನೋಡಿದ್ದು ನೆನಪಾಯಿತು. ಆ ರಾಜಕುಮಾರನು ವಶಿಷ್ಠರಿಗೆ ಕೇಳಿದನು.

"ದ್ವಿಜವರ್ಯರೇ, ಇಲ್ಲಿರುವ ಈ ಲಲನೆ ಯಾರು?"

ಆಗ ವಶಿಷ್ಠರು ಅರಸು ಕುಲದ ಇಂದ್ರನಾದ ಆ ಸಂವರಣನಿಗೆ ಹೇಳಿದರು- "ನರನಾಥ, ಇವಳು ಸೂರ್ಯದೇವನ ಮಗಳು. ತಪತೀ ಎಂದು ಇವಳ ಹೆಸರು. ಪೃಥ್ವೀಮಂಡಲದಲ್ಲಿ ಇವಳು ಪ್ರಸಿದ್ಧಳಾಗಿದ್ದಾಳೆ.

ಇವಳನ್ನು ನಿನಗಾಗಿ ಕೊಡಬೇಕೆಂದು ನಾನು ದಿನಮಣಿಯನ್ನು ಕೇಳಿಕೊಂಡೆ. ಆದಿತ್ಯನು ಅದಕ್ಕೆ ಒಪ್ಪಿ ತನ್ನ ಈ ಕುಮಾರಿಯನ್ನು ನಿನಗೆ ಧಾರೆ ಎರೆದುಕೊಡಲು ನನಗೆ ಒಪ್ಪಿಸಿದ್ದಾನೆ. ನಾನು ಇವಳನ್ನು ಆ ಮಾರ್ತಂಡಮಂಡಲದಿಂದ ಮಹೀಮಂಡಲ ದಲ್ಲಿರುವ ಈ ನನ್ನ ಆಶ್ರಮಕ್ಕೆ ಕರೆತಂದಿದ್ದೇನೆ. ಆದುದರಿಂದ ಅರಸರ ಇಂದ್ರನೇ ಕೇಳು. ಈ ತಪತೀ ದೇವಿಯನ್ನು ವಿಧಿಪೂರ್ವಕವಾಗಿ ನೀನು ವರಿಸು. ಪಾಣಿಗ್ರಹಣ ಮಹೋತ್ಸವವು ಸಾಂಗವಾಗಿ ನೆರವೇರಲಿ." ಮಹರ್ಷಿಗಳ ಈ ಮಾತುಗಳನ್ನು ಕೇಳಿ ಸಂವರಣನ ಹೃದಯದಲ್ಲಿ ಹಿಗ್ಗು ಗರಿಗೆದರಿತು. ಗುರುಗಳ ಆದೇಶದಂತೆ ಅವನು ಶಾಸ್ತ್ರೋಕ್ತವಾಗಿ ಆ ಸೂರ್ಯ ಕುಮಾರೀ ತಪತೀ ದೇವಿಯನ್ನು ಮದುವೆಯಾದನು.

ತಪತಿಗೆ ಪರಮಾನಂದ. ಅವಳಿಗೆ ತಾನು ಮೆಚ್ಚಿದ ಮನದನ್ನನೊಂದಿಗೇ ಮದುವೆಯಾಗಿದ್ದಿತು. ತನ್ನ ಆ ನೆಚ್ಚಿನ ನಲ್ಲ ಇಂದ್ರನಿಗೆ ಕಡಿಮೆ ಅಲ್ಲ ಎಂದು ತಿಳಿದು ಅವಳಿಗೆ ಪೂರ್ಣತೃಪ್ತಿ. ಆ ತನ್ನ ಎದೆಯರಸನೊಂದಿಗೆ ರಮಣೀಯವಾದ ಅರಮನೆ ಸಿರಿಮನೆಗಳಲ್ಲಿ ಆನಂದದಿಂದ ವಿಹರಿಸಿದಳು. ಸ್ವರ್ಗದಲ್ಲಿಯ ಶಚೀ ಸುರೇಂದ್ರರ ಜೋಡಿಯಂತೆ ಇತ್ತು ನೆಲದ ಮೇಲಿನ ಈ ನಲ್ಲ ನಲ್ಲೆಯರ ಜೋಡಿ.

ವಾಮನ ಮಹಾಪುರಾಣದಲ್ಲಿ ಸಂವರಣನ ಪ್ರಣಯ ಎಂಬ ಇಪ್ಪತ್ತೊಂದನೇಯ ಅಧ್ಯಾಯವು ಮುಗಿದುದು.



## ಕುರುಕ್ಷೇತ್ರದ ಮಹಿಮೆ

**ಅಧ್ಯಾಯ - ೨೨**

೩೨೨. ತಸ್ಯಾಂ ತಪತ್ಯಾಂ ನರಸತ್ತಮೇನ ।
ಜಾತಃ ಸುತಃ ಪಾರ್ಥಿವಲಕ್ಷಣಸ್ತು ।
ಸ ಜಾತಕರ್ಮಾದಿಭಿರೇವ ಸಂಸ್ಕೃತೋ ।
ಹ್ಯವರ್ಧತಾಜ್ಯೇನ ಹುತೋ ಯಥಾಗ್ನಿಃ ।

೩೨೩. ಕೃತಂಚಕ ಚೂಡಾಶರಣಂ ತು ದೇವಾ ।
ವಿಪ್ರೇಣ ಮಿತ್ರಾವರುಣಾತ್ಮಜೇನ ।
ನವಾಬ್ದಕಸ್ಯ ವ್ರತಬಂಧನಂಚ ।
ವೇದೇ ಚ ಶಾಸ್ತ್ರೇ ವಿಧಿಪಾರಗೋಽಭೂತ್ ॥

೩೨೪. ತತಶ್ಚತುಷ್ಷಡ್ಭಿರಪೀಹ ವರ್ಷೈಃ
ಸರ್ವಜ್ಞತಾಮಭ್ಯಗಮತ್ತದಾಸೌ ॥
ಖ್ಯಾತಃ ಪೃಥ್ವಿವ್ಯಾಂ ಪುರುಷೋತ್ತಮೋಽಸೌ ।
ನಾಮ್ನಾ ಕುರುಃ ಸಂವರಣಸ್ಯ ಪುತ್ರಃ

೩೨೫. ತತೋ ನರಪತಿರ್ದೃಷ್ಟ್ವಾ ಪುತ್ರಂ ತಂ ಷೋಡಶಾಬ್ದಿಕಂ ।
ದಾರಕ್ರಿಯಾರ್ಥ ಮಕರೋದ್ಯತ್ನಂ ಶುಭಕುಲೇ ತತಃ ।

೩೨೬. ಸೌದಾಮ್ನೀಂಚ ಸುದಾಮ್ನಸ್ತು ಸುತಾಂ ರೂಪಾಧಿಕಾಂ ನೃಪಃ
ಕುರೋರರ್ಥಾಯ ವೃತವಾನ್ಸಪ್ರಾದಾತ್ಕುರ ವೇಽಪಿ ತಾಂ ।

೩೨೭. ಸತಾಮ ನೃಪಸುತಾಂ ಲಬ್ಧ್ವಾ ಸ್ವಧರ್ಮಾನವಿರೋಧಯನ್ ।
ರೇಮೇ ತನ್ವಾ ಸಹ ತಯಾ ಪೌಲೋಮ್ಯಾ ಮಘವಾನಿವ

**ಶ್ರೀವಿಷ್ಣು :** ಆ ತಪತೀದೇವಿಯಲ್ಲಿ ವರಕುಲದ ದೊರೆ ಸಂವರಣನಿಗೆ ಒಂದು ಗಂಡು ಮಗು ಜನಿಸಿತು. ಚಕ್ರವರ್ತಿಯ ಚಾರುತರ ಲಕ್ಷಣಗಳೆಲ್ಲವೂ ಎದ್ದು ಕಾಣುತ್ತಿದ್ದವು. ಆ ಸುಕುಮಾರನಾದ ರಾಜಕುಮಾರನಲ್ಲಿ ಜಾತಕರ್ಮ ಮೊದಲಾದ ವೇದೋಕ್ತ ಸಂಸ್ಕಾರಗಳನ್ನು ಮಾಡಿದ ಬಳಿಕಂತೂ ಕೇಳುವದೇನು! ತುಪ್ಪ ಹೊಯ್ದ ಹೋಮಾಗ್ನಿಯಂತೆ ಇಮ್ಮಡಿಸಿತು ಅವನ ಮೈಮಿಂಚು.

ಮಿತ್ರಾವರುಣರ ಮಕ್ಕಳಾದ ವಶಿಷ್ಠರು ಅವನಿಗೆ ಸಕಾಲದಲ್ಲಿ ಚೂಡಾಕರ್ಮವನ್ನು ಮಾಡಿಸಿದರು. ಒಂಭತ್ತು ವರ್ಷ ತುಂಬುವದರೊಳಗಾಗಿ ಆ ರಾಜಕುಮಾರನಿಗೆ ಉಪನಯನ ಮಹೋತ್ಸವವನ್ನು ಮಾಡಿ ವ್ರತ ಬಂಧನವಾಯಿತು. ಸ್ವಯಂ ವಶಿಷ್ಠರೇ ಅವನಿಗೆ ಪಾಠ ಹೇಳಿದರು. ವೇದಗಳನ್ನು ಕಲಿಸಿದರು. ಶಾಸ್ತ್ರಗಳನ್ನು ಅಧ್ಯಯನ ಮಾಡಿಸಿದರು. ವೈದಿಕ ವಿದ್ಯೆಯಲ್ಲಿ ತಲಸ್ಪರ್ಶಿಯಾಗಿತ್ತು ಅವನ ಪಾಂಡಿತ್ಯ. ಹತ್ತು ವರ್ಷಗಳಲ್ಲಿ ಅವನೊಬ್ಬ ಸರ್ವಜ್ಞಮೂರ್ತಿಯಾಗಿ ರೂಪಗೊಂಡ. ಜ್ಞಾನದ ತವರುನಿಧಿಯಾದ. ಆ ಪುರುಷೋತ್ತಮನು ತನ್ನ ಎಳೆಮೆಯಲ್ಲಿಯೇ ಪೃಥ್ವೀಮಂಡಲದಲ್ಲಿ ಪ್ರಖ್ಯಾತಿಯನ್ನು ಪಡೆದ. ಇಂಥ ಈ ಸಂವರಣ ಪುತ್ರನ ಹೆಸರು ಕುರು ಎಂದು ಇದ್ದಿತು.

ಆ ಕುರು ಕುಮಾರನು ಹದಿನಾರು ವರ್ಷದವನಾದನು. ಆಗ ಅವನ ತಂದೆ ಸಂವರಣನು ಮಗನ ಮದುವೆಯ ಉದ್ಯೋಗವನ್ನು ಮಾಡಿದನು. ಒಳ್ಳೇ ಕುಲದಿಂದ ಒಳ್ಳೇ ಹೆಣ್ಣನ್ನು ತರಬೇಕೆಂದು ಅವನ ವಿಚಾರ. ಅದಕ್ಕಾಗಿ ಅವನು ತುಸು ಯತ್ನ ಮಾಡಬೇಕಾಯಿತು. ಕೊನೆಗೆ ಸುದಾಮನ ಮಗಳಾದ ಸೌದಾಮಿನಿಯು ತನ್ನ ಮಗ ಕುರುವಿಗೆ ಯೋಗ್ಯ ಕನ್ಯೆ ಎಂದು ಸಂವರಣನಿಗೆ ಎನಿಸಿತು. ಅವಳಿಗೆ ಮಿಗಿಲಾದ ಚೆಲುವೆಯರು ಆ ಕಾಲದಲ್ಲಿ ಇರಲಿಲ್ಲ. ಕುರು ಕುಮಾರನಿಗಾಗಿ ಸಂವರಣನು ಸುದಾಮನನ್ನು ಕನ್ಯೆ ಕೊಡಲು ಕೇಳಿದನು. ಆನಂದದಿಂದ ತನ್ನ ಮಗಳನ್ನು ಕುರುರಾಜನಿಗೆ ಇತ್ತು ಸುದಾಮನು ಮದುವೆ ಮಾಡಿಕೊಟ್ಟನು.

ರಾಜಕುಮಾರಿಯಾದ ಸೌದಾಮಿನಿಯ ಕೈ ಹಿಡಿದು ಕುರುಕುಮಾರನು ವಯೋನುಗುಣವಾದ ವಿವಿಧ ಕೇಳಿ ವಿಹಾರವನ್ನು ಮಾಡಿದನು. ಆದರೆ ಅವನ ವಿಹಾರ ವಿಲಾಸಗಳೆಲ್ಲವೂ ಧರ್ಮಕ್ಕೆ ಅವಿರುದ್ಧವಾಗಿದ್ದವು. ಶಚಿಯೊಡನೆ ಸುರನಾಥನು ವಿಹರಿಸುವಂತೆ ಆ ಮಾನಿನಿಯೊಂದಿಗೆ ರಾಜಕುಮಾರನ ಮಧುಚಂದ್ರ ವಿಹಾರವು ನಡೆದಿತ್ತು.

೩.೨೮. ತತೋ ನರಪತಿಃ ಪುತ್ರಂ ರಾಜ್ಯಭಾರಕ್ಷಮಂ ಬಲೀ ।
ವಿದಿತ್ವಾ ಯೌವರಾಜ್ಯಾಯ ವಿಧಾನೇನಾಭ್ಯಷೇಚಯತ್ ॥

೩.೨೯. ತತೋ ರಾಜ್ಯೇಭಿಷಿಕ್ತಸ್ತು ಕುರುಃ ಪಿತ್ರಾ ನಿಜೇ ಪದೇ ।
ಸ ಪಾಲಯಾಮಾಸ ಮಹೀಂ ಪುತ್ರವಚ್ಚ ಪ್ರಜಾಃ ಸ್ವಯಂ ॥

೩.೩೦. ಸ ಏವ ಕ್ಷೇತ್ರಪಾಲೋಭೂತ್ಪಶುಪಾಲಸ್ಸ ಏವ ಹಿ ।
ಸ ಏವ ರಾಜಪಾಲಶ್ಚ ಅಜಾಪಾಲೋ ಮಹಾಬಲಃ ॥

೩.೩೧. ತತೋಽಸ್ಯ ಬುದ್ಧಿರುತ್ಪನ್ನಾಹ್ಯಸ್ಮಿನ್ ಲೋಕೇ ಗರೀಯಸೀ ।
ಯಾವತ್ಕೀರ್ತಿ ಸ್ಸುಸಂಸ್ಥಾ ಹಿ ತಾವದ್ವಾಸಸ್ತ್ವಯಾ ಸಹ ॥

೩.೩೨. ಅಸ್ತ್ವೇವಂ ನೃಪತಿಶ್ರೇಷ್ಠೋ ಯಥಾತಥ್ಯಮಮನ್ಯತ ।
ವಿಚಚಾರ ಮಹೀಂ ಸರ್ವಾಂ ಕೀರ್ತ್ಯರ್ಥಂ ತು ನರಾಧಿಪಃ ॥

೩.೩೩. ತತೋ ದ್ವೈತವನಂ ನಾಮ ಪುಣ್ಯಂ ಲೋಕಚರೋ ವಶೀ ॥
ತದಾಸಾವತಿಸಂತುಷ್ಟೋ ವಿವೇಶಾಭ್ಯಂತರಂ ತತಃ ॥

೩೩೪. ತತ್ರ ದೇವೀಂ ದದರ್ಶಾಥ ಪುಣ್ಯಾಂ ಪಾಪವಿಮೋಚನೀಂ ।
ಪ್ಲಕ್ಷಜಾಂ ಬ್ರಹ್ಮಣಃ ಪುತ್ರೀಂ ಹರಿಜಿಹ್ವಾಂ ಸರಸ್ವತೀಂ ॥

ಅವನು ಇನ್ನೂ ದೊಡ್ಡವನಾದ. ರಾಜ್ಯದ ಭಾರವನ್ನೆಲ್ಲ ಹೊರಲು ತಕ್ಕ ದಕ್ಷತೆ ಸಾಮರ್ಥ್ಯ ಅನುಭವಗಳು ಆ ರಾಜಕುಮಾರನಲ್ಲಿ ತುಳುಕುತ್ತಿದ್ದವು. ಇದನ್ನು ತಿಳಿದು ಸಂವರಣ ಮಹಾರಾಜನು ತನ್ನ ಆ ಮಗನನ್ನು ಯೌವ ರಾಜ್ಯದ ಗದ್ದುಗೆಯ ಮೇಲೆ ಪಟ್ಟಾಭಿಷೇಕ ಗೈದನು. ಯುವರಾಜನಾದ ಆ ಕುರು ಕುಮಾರನು ಪ್ರಜೆಗಳನ್ನು ಪುತ್ರರಂತೆ ಪಾಲಿಸಿದನು. ಮೇದಿನಿಯನ್ನು ಮಾತೆಯಂತೆ ರಕ್ಷಿಸಿದನು. ತನ್ನ ಆ ಕುರು ರಾಜ್ಯದಲ್ಲಿ ಕ್ಷೇತ್ರಪಾಲನಾಗಿ ಹೊಲ ನೆಲಗಳ ಅಭಿವೃದ್ಧಿಯಾಗಿ ಸಾಕಷ್ಟು ಧಾನ್ಯ ಬೆಳೆಯುವಂತೆ ಮಾಡಿದನು. ಸ್ವಯಂ ಪಶುಪಾಲನಾಗಿ ರಾಜ್ಯದ ಪಶುಧನವನ್ನು ಸಮೃದ್ಧಿಗೊಳಿಸಿದನು. ಕಂಬಳಿಗೆ ಉಣ್ಣೆ, ಕುಡಿಯಲು ಹಾಲು, ಹೊಲ ಗಳಿಗೆ ಗೊಬ್ಬರ ಒದಗಿಸುವ ಆಡು ಕುರಿಗಳ ಹಿಂಡುಗಳನ್ನು ಅಲ್ಲಲ್ಲಿ ವ್ಯವಸ್ಥಿತವಾಗಿ ಬೆಳೆಯುವಂತೆ ಮಾಡಿ ಸ್ವಯಂ ಅಜಪಾಲ ಎನಿಸಿದನು. ರಾಷ್ಟ್ರದ ಬೇರೆ ಬೇರೆ ನಿಟ್ಟು ನಾಡುಗಳ ಒಡೆಯರಾದ ಸಾಮಂತ ಭೂಪಾಲರಿಗೆಲ್ಲ ಏಕ ಮಾತ್ರ ಶಾಸಕನಾಗಿ ರಾಜಪಾಲ ಅಥವಾ ಸಾರ್ವಭೌಮ ಎನಿಸಿದನು.

ಹೀಗೆ ಸುಖ ಸಂತೋಷಗಳಿಂದ ರಾಜ್ಯವಾಳುವ ಆ ಕುರು ಭೂಪಾಲನಿಗೆ ಒಂದು ವಿಚಾರ ಬಂದಿತು. ಈ ಪ್ರಪಂಚದಲ್ಲಿ ಒಳ್ಳೆ ಹೆಸರು ಅರ್ಥಾತ್ ಮಿಗಿಲಾದ ಕೀರ್ತಿಯೇ ಸರ್ವಶ್ರೇಷ್ಠ ವಾಗಿದೆ. ಕೀರ್ತಿಯು ಎಲ್ಲೆಡೆಗೆ ಪಸರಿಸಿ ಯಶೋಭಾಸುರನಾಗಿ ಇರುವವರೆಗೆ ಮಾತ್ರ ಈ ಭೂತಳದಲ್ಲಿ ಇರಬೇಕು. ರಾಜೇಶ್ವರನ ಈ ವಿಚಾರಧಾರೆ ಯೋಗ್ಯವೂ ಯಥಾರ್ಥವೂ ಆಗಿದ್ದಿತು. ಹೀಗೆ ವಿಚಾರಿಸಿ ಆ ನೃಪಶ್ರೇಷ್ಠನು ಕೀರ್ತಿ ಬರುವ ಕಾರ್ಯಗಳನ್ನು ಮಾಡುತ್ತ ಮೇದಿನಿಯ ತುಂಬ ಸಂಚರಿಸಿದನು. ಇಂದ್ರಿಯಗಳನ್ನು ಗೆದ್ದು ಲೋಕ ಸಂಚಾರ ಕೈಕೊಂಡ ಆ ಮಹಾರಾಜನು ಪವಿತ್ರ ವಾದ ದ್ವೈತವನ ಎಂಬ ಪುಣ್ಯಾರಣ್ಯಕ್ಕೆ ಬಂದನು. ಆ ಬನವನ್ನು ಕಂಡು ಅವನಿಗೆ ಅತ್ಯಂತ ಸಂತೋಷವಾಯಿತು. ಹರ್ಷ ಭರಿತನಾಗಿ ಅವನು ಆ ವಿಪಿನ ಗರ್ಭದಲ್ಲಿ ಒಳನಡೆದನು. ಆ ಏಕಾಂತ ವನಾಂತರದಲ್ಲಿ ಬ್ರಹ್ಮದೇವರ ಪ್ಯೆಯಿಂದ ಹರಿದು ಬಂದ ಪ್ಲಕ್ಷಜಾ ಎಂಬ ಹೊಳೆ ಪ್ರವಹಿಸುತ್ತಿತ್ತು. ಸರಸ್ವತೀ ನದಿಯೂ ಹರಿಯುತ್ತಿತ್ತು. ಹರಿಜಿಹ್ವಾ ಎಂಬ ಮಗದೊಂದು ಹಿರಿತೊರೆಯು ಜುಳು ಜುಳು ಮಂಜುಳನಾದದೊಂದಿಗೆ ಹರಿಯುತ್ತಿತ್ತು.

೩೩೫. ಸುದರ್ಶನಸ್ಯ ಜನನೀಂ ಹ್ರದಂ ಕೃತ್ವಾ ಸುವಿಸ್ತೃತಂ ।
ತಸ್ಯಾಸ್ತ್ವಜ್ವಲಮಾಸಾದ್ಯ ಸ್ನಾತ್ವಾ ಪ್ರೀತೋಽಭವನ್ನೃಪಃ ।
೩೩೬. ಸಮಾಜಗಾಮ ಚ ಪುನಃ ಬ್ರಹ್ಮಣೋ ವೇದಿಮುತ್ತರಾಂ ।
ಸಮನ್ತ ಪಂಚಕಂ ನಾಮ ಧರ್ಮಸ್ಥಾನಮನುತ್ತಮಂ ॥
೩೩೭. ಆಸಮಂತಾತ್ ಯೋಜನಾನಿ ಪಂಚ ಪಂಚಚ ಸರ್ವತಃ ।

ದೇವಾ ಊಚುಃ

೩೩೮. ಕಿಮನ್ಯಾ ವೇದಯೋ ದೇವ ಬ್ರಹ್ಮಣಃ ಪುರುಷೋತ್ತಮ
ಯೇನೋತ್ತರ ತಯಾ ವೇದೀ ಗದಿತಾ ಸರ್ವಪಂಚಕೇ ॥

## ಹರಿರುವಾಚ

೩೩೯. ವೇದಯೋ ಲೋಕನಾಥಸ್ಯ ಪಂಚ ಧರ್ಮಸ್ಯ ಸರ್ವತಃ ।

೩೪೦. ಯಾಸು ಚೇಷ್ಟಂ ಸುರೇಶೇನ ಲೋಕನಾಥೇನ ಶಂಭುನಾ ।
ಪ್ರಯಾಗೋ ಮಧ್ಯಮಾ ವೇದಿಃ ಪೂರ್ವಾ ವೇದಿರ್ಗಯಾ ಶಿರಃ ॥

೩೪೧. ವಿರಜಾ ದಕ್ಷಿಣಾ ವೇದಿಃ ಅನಂತ ಫಲದಾಯಿನೀ ।
ಪ್ರತೀಚೀ ಪುಷ್ಕರಾವೇದಿಸ್ತ್ರಿಭಿಃ ಕುಂಡೈರಲಂಕೃತಾ ।

೩೪೨. ಸ್ಯಮಂತ ಪಂಚಕೇ ಚೋಕ್ತಾ ವೇದಿರೇವೋತ್ತರಾ ತಥಾ ।
ತದಮನ್ಯತ ರಾಜರ್ಷಿರಿದಂ ಕ್ಷೇತ್ರಂ ಮಹಾಫಲಂ ॥

೩೪೩. ಕರಿಷ್ಯಾಮಿ ಕೃಷಿಷ್ಯಾಮಿ ಸರ್ವಾನ್ಕಾಮಾನ್ಯಥೇಪ್ಸಿತಂ ।
ಇತಿ ಸಂಚಿಂತ್ಯ ಮನಸಾ ತ್ಯಕ್ತ್ವಾ ಸ್ಯಂದನಮುತ್ತಮಂ ।

ಮಹಾರಾಜನು ಆ ನಾಡಿನ ಜನರಿಗೆಲ್ಲ ಉಪಯೋಗವಾಗುವಂತೆ ಈ ಮೂರು ಹೊಳೆಗಳ ನೀರುಗಳನ್ನು ಒಂದೆಡೆಗೆ ಶೇಖರಿಸಿ ಸುದರ್ಶನ ಎಂಬ ಒಂದು ದೊಡ್ಡ ಜಲಾಶಯವನ್ನು ನಿರ್ಮಿಸಿದನು. ಆ ಹೊಸ ಸರೋವರ ನೀರಿನಲ್ಲಿ ಸ್ನಾನ ಮಾಡಿದನು. ಮಹಾರಾಜನ ಮನಸ್ಸಿಗೆ ತೃಪ್ತಿಯಾಯಿತು. ತಣಿವು ತೋರಿತ್ತು.

ಅಲ್ಲಿಂದ ಅವನು ಬ್ರಹ್ಮವೇದಿ ಎಂಬಲ್ಲಿಗೆ ಬಂದು ಅಲ್ಲಿಂದ ಉತ್ತರಕ್ಕೆ ಸ್ಯಮಂತ ಪಂಚಕಕ್ಕೆ ಐತಂದನು. ಅದು ಒಂದು ಶ್ರೇಷ್ಠವಾದ ಧರ್ಮಸ್ಥಳವಾಗಿದ್ದಿತ್ತು. ಅದು ಐದೈದು ಯೋಜನ ಅಗಲ ಉದ್ದಳತೆ ಯುಳ್ಳ ವಿಸ್ತಾರವಾದ ಪ್ರದೇಶವಾಗಿದ್ದಿತು. ಅದಕ್ಕೆ ಉತ್ತರ ವೇದಿ ಎಂದು ಹೆಸರಿದ್ದಿತು.

**ದೇವತೆಗಳು:** ಭಗವಾನ್ ಪುರುಷೋತ್ತಮನೇ, ಈ ಸ್ಯಮಂತಪಂಚಕವು ಬ್ರಹ್ಮದೇವರ ಉತ್ತರವೇದಿ ಎಂದು ತಾವು ಹೇಳಿದಿರಿ. ಆ ಬ್ರಹ್ಮನ ಉಳಿದ ಬೇರೆ ವೇದಿಗಳು ಯಾವುವು?

**ಹರಿ :** ಒಟ್ಟು ಬ್ರಹ್ಮದೇವರ ವೇದಿಕೆಗಳು ಐದು. ಈ ಪಂಚ ವೇದಿಕೆಗಳಲ್ಲಿಯೂ ದೊಡ್ಡ ದೊಡ್ಡ ಯಜ್ಞ ಸಮಾರಂಭಗಳು ನಡೆದಿದ್ದರಿಂದ ಇವು ಪಂಚ ವೇದಿಕೆಗಳೆಂದು ಪ್ರಪಂಚದಲ್ಲಿ ಪ್ರಸಿದ್ಧಿ ಪಡೆದಿವೆ. ಜಗದೊಡೆಯನಾಗಿ ಮಹಾದೇವ ಎನಿಸಿದ ಶಂಕರನೂ ಈ ವೇದಿಕೆಗಳಲ್ಲಿ ಯಜ್ಞ ಮಾಡಿದನು. ಪ್ರಯಾಗ ಕ್ಷೇತ್ರವು ಮಧ್ಯಮವೇದಿಕಾ ಎನಿಸುವದು. ಗಯಾಶಿರ ಕ್ಷೇತ್ರವು ಪೂರ್ವವೇದಿಕೆ. ಅನಂತ ಫಲವನ್ನು ನೀಡುವ ವಿರಜಾ ನದಿಯೇ ದಕ್ಷಿಣ ವೇದಿಕೆ. ಮೂರು ಕುಂಡಗಳಿಂದ ಅಲಂಕರಿಸಲ್ಪಟ್ಟ ಪುಷ್ಕರ ಕ್ಷೇತ್ರವೇ ಪಶ್ಚಿಮ ವೇದಿಕೆ. ಈ ಮೊದಲು ನಾನು ಹೇಳಿದ ಸ್ಯಮಂತ ಪಂಚಕವೇ ಉತ್ತರ ವೇದಿಕೆ.

ಆ ಉತ್ತರ ವೇದಿಕೆ ಅರ್ಥಾತ್ ಸ್ಯಮಂತ ಪಂಚಕವನ್ನು ನೋಡಿ ಕುರು ಮಹಾರಾಜನಿಗೆ ಮನಸ್ಸು ಪ್ರಸನ್ನವಾಗಿದ್ದಿತು. "ಇದು ಮಹಾಕ್ಷೇತ್ರ. ಇದರಿಂದ ಮಹಾಪುಣ್ಯ ಜನರಿಗೆ ದೊರಕುವಂತೆ ಮಾಡಬೇಕು. ಇದು ಒಂದು ಪುಣ್ಯಕ್ಷೇತ್ರ. ಕ್ಷೇತ್ರ ಎಂದರೆ ಹೊಲ. ಈ ಪುಣ್ಯದ ಹೊಲದಲ್ಲಿ ಪುರುಷಾರ್ಥಗಳನ್ನೇ ಉತ್ತಿ ಬಿತ್ತಿ ಬೆಳೆ ಬರುವಂತೆ ಮಾಡುವೆನು" ಎಂದು ಮನಸ್ಸಿನಲ್ಲಿಯೇ ಸಂಕಲ್ಪಗೈದನು.

ತನ್ನ ದಿವ್ಯವಾದ ರಥವನ್ನು ಬಿಟ್ಟು ಅಲ್ಲಿಯೇ ನಿಂತುಕೊಂಡನು. ಮೈಮುರಿದು ದುಡಿದನು. ಆ ಪವಿತ್ರ ತೀರ್ಥದಲ್ಲಿ ಮಿಂದು ಬಂದ ಆ ರಾಜಾಧಿರಾಜನು ಮಹಾಕಾರ್ಯ ವನ್ನು ಕೈಕೊಂಡನು. ಮಹಾದೇವರ ಎತ್ತನ್ನು ಬೇಡಿ ತಂದನು. ಯಮನ ಕೋಣವನ್ನು ಹಿಡಿದುಕೊಂಡು ಬಂದನು. ದೇವೋತ್ತಮರ ವಾಹನವಾದ ಆ ಎತ್ತು ಕೋಣ ಎರಡನ್ನೂ ಒಂದು ನೊಗಕ್ಕೆ ಹೂಡಿದನು. ಒಂದು ಚಿನ್ನದ ನೇಗಿಲನ್ನು ಮಾಡಿಸಿ ತಾನೇ ಆ ಹೊಲವನ್ನು ಹರಗಲು ಉಪಕ್ರಮಿಸಿದನು.

೩೪೪. ಚಕ್ರೇ ಕೀರ್ತ್ಯರ್ಥಮತುಲಂ ಸ್ಥಾನಂ ತತ್ಪಾರ್ಥಿವರ್ಷಭಃ ॥
ಕೃತ್ವಾ ಸೀರಂ ಸಸೌವರ್ಣಂ ಗೃಹ್ಯ ರುದ್ರವೃಷಂ ಪ್ರಭುಃ ॥

೩೪೫. ವೋಢಾರಂ ಯಾಮ್ಯಮಹಿಷಂ ಸ್ವಯಂ ಕರ್ಷಿತು ಮುದ್ಯತಃ ।
ತಂ ಕರ್ಷಂತಂ ನರವರಂ ಸಮಭ್ಯೇತ್ಯ ಶತಕ್ರತುಃ ॥

೩೪೬. ಪ್ರೋವಾಚ ರಾಜನ್ ಕಿಮಿದಂ ಭವಾನ್ ಕರ್ತುಮಿಹೋದ್ಯತಃ ।
ರಾಜಾಬ್ರವೀತ್ಸುರವರಂ ತಪಃ ಸತ್ಯಂ ಕ್ಷಮಾಂ ದಯಾಂ ।

೩೪೭. ಕೃಷಾಮಿ ಶೌಚದಾನೇ ಚ ಯೋಗಂ ಚ ಬ್ರಹ್ಮಚಾರಿಣಾಂ ।
ತಂ ಚೋವಾಚ ಹರಿರ್ದೇವಃ ಕಸ್ಮಾದ್ಬೀಜಂ ನರೇಶ್ವರ ॥

೩೪೮. ಲಬ್ಧಂ ತ್ವಯೇತಿ ಸಾಹನೌ ಹ್ಯವಹಸ್ಯ ಗತಸ್ತತಃ ।
ಗತೇಽಪಿ ಶಕ್ರೇ ನೃಪತಿರಹನ್ಯಹನಿ ಸೀರಧೃಕ್ ॥

೩೪೯. ಕೃಷತೇನ್ಯತ್ಸಮಂತಾಚ್ಚ ಸಪ್ತಕ್ರೋಶಾನ್ಮಹೀಪತಿಃ
ತತೋಹಮಬ್ರವಂ ಗತ್ವಾ ಕುರೋ ಕಿಮಿದಮಿತ್ಯಥ ।

ಆ ದಿವ್ಯ ಕ್ಷೇತ್ರವನ್ನು ಊಳುತ್ತಲಿರುವ ದೊರೆಯನ್ನು ನೋಡಿ ಸಾಕ್ಷಾತ್ ದೇವೇಂದ್ರನೇ ಅಲ್ಲಿಗೆ ಬಂದನು. ''ರಾಜನೇ, ಇದೇನು ನೀನು ಮಾಡಹೊರಟಿರುವೆ! ಇದರ ಉದ್ದೇಶವೇನು?'' ಎಂದು ಕೇಳಿದನು.

ಆ ಸುರವರನಿಗೆ ಕುರುರಾಜ ಕೊಟ್ಟ ಉತ್ತರವು ಮಾರ್ಮಿಕವಾಗಿದ್ದಿತು.

''ಸುರೇಶ್ವರ! ತಪಸ್ಸು, ಸತ್ಯ, ಕ್ಷಮೆ, ದಯೆ, ಸುಚಿತ್ವ, ಯೋಗ, ದಾನ, ಬ್ರಹ್ಮಚರ್ಯ ಮುಂತಾದ ಸದ್ಗುಣಗಳ ಬೆಳೆಯನ್ನು ನಾನು ಬೆಳೆಯಬೇಕಾಗಿದೆ. ಈ ಗುಣಗಳನ್ನು ಇಲ್ಲಿ ಉತ್ತಿಬಿತ್ತಿ ಬೆಳೆ ಮಾಡುವದಕ್ಕಾಗಿ ನಾನು ಈ ಕ್ಷೇತ್ರವನ್ನು ಉಳುವ ಕಾರ್ಯ ಕೈಕೊಂಡಿದ್ದೇನೆ.''

''ನರೇಶ್ವರ, ಈ ಧರ್ಮದ ಬೆಳೆಗೆ ನೀನು ಬೀಜವನ್ನು ಎಲ್ಲಿಂದ ತಂದಿರುವೆ? ಇಂಥ ಪುಣ್ಯದ ಬೆಳೆಗೆ ನಿನಗೆ ಬೀಜ ಕೊಟ್ಟವರು ಯಾರು?''

ದೇವೇಂದ್ರನ ಈ ಪ್ರಶ್ನಾರ್ಥಕ ಮಾತಿನ ಹಿನ್ನೆಲೆಯಲ್ಲಿ ಅಣಕವು ಎದ್ದು ಕಾಣುತ್ತಿತ್ತು. ಅವನ ಈ ಉಪಹಾಸ ಗರ್ಭಿತ ವಚನವನ್ನು ಕೇಳಿಯೂ ಮಹಾರಾಜನು ತನ್ನ ಪ್ರಯತ್ನವನ್ನು ಬಿಡಲಿಲ್ಲ. ಹಗಲಿರುಳೂ ನೇಗಿಲ ಹಿಡಿದು ಆ ಹೊಲವನ್ನು ಹರಗುತ್ತಲೇ

ಇದ್ದನು. ಆ ಸಮಂತ ಪಂಚಕದ ಸುತ್ತುಮುತ್ತಲಿನ ಏಳೂ ಕ್ರೋಶದಷ್ಟು ನೆಲವನ್ನು ತನ್ನ ಚಿನ್ನದ ನೇಗಿಲಿನಿಂದ ಉಳುವ ಕೆಲಸವನ್ನು ಎಡೆಬಿಡದೇ ನಡೆಸಿದನು. ಕೊನೆಗೆ ಒಂದು ದಿನ ಸ್ವಯಂ ನಾರಾಯಣನಾದ ನಾನೇ ಅಲ್ಲಿಗೆ ಹೋದೆ. ಆ ಕುರುರಾಜನನ್ನು ಕೇಳಿದೆ, ''ಕುರು, ನೀನು ಇದೇನನ್ನು ಮಾಡುತ್ತಲಿರುವೆ?''

ಕುರುವಿನ ಉತ್ತರ ಸಿದ್ಧವಿತ್ತು, ''ತಪ, ಸತ್ಯ, ಕ್ಷಮೆ, ದಯೆ, ಶುಚಿತ್ವ, ದಾನ, ಯೋಗ, ಬ್ರಹ್ಮಚರ್ಯ, ಈ ಎಂಟು ಧರ್ಮಗಳನ್ನು ನಾನು ಇಲ್ಲಿ ಬೆಳೆಯಬೇಕೆಂದು ಮಾಡಿದ್ದೇನೆ. ಅದಕ್ಕಾಗಿಯೇ ಈ ನನ್ನ ಎಲ್ಲ ಪ್ರಯತ್ನ.''

೩೫೦. **ತದಾಷ್ಟಾಂಗಂ ಮಹಾಧರ್ಮಂ ಸಮಾಖ್ಯಾತಂ ನೃಪೇನ ಹಿ ।**
**ತತೋ ಮಯಾಸ್ಯ ಗದಿತಂ ನೃಪ ಬೀಜಂ ಕ್ವ ತಿಷ್ಠತಿ ॥**

೩೫೧. **ಸ ಚಾಹ ಮಮ ದೇಹಸ್ಥಂ ಬೀಜಂ ತಮಹಮಬ್ರುವಂ ।**
**ದೇಹ್ಯಹಂ ವಾಪಯಿಷ್ಯಾಮಿ ಸೀರಂ ಕೃಷತು ವೈ ಭವಾನ್ ।**

೩೫೨. **ತತೋ ನೃಪತಿನಾ ಬಾಹುರ್ದಕ್ಷಿಣಃ ಪ್ರಸೃತಃ ಕೃತಃ**
**ಪ್ರಸೃತಂ ತಂ ಭುಜಂ ದೃಷ್ಟ್ವಾ ಮಹಾಚಕ್ರೇಣ ವೇಗತಃ**

೩೫೩. **ಸಹಸ್ರಧಾ ಪ್ರಚಿಚ್ಛೇದ ಯಸ್ಮಾದೇಕ ಭುಜೋಽಭವತ್ ।**
**ತತಸ್ಸವ್ಯೋ ಭುಜೋ ರಾಜ್ಞಾ ದತ್ತಶ್ಛಿನ್ನೋಽ ಪ್ಯಸೌ ಮಯಾ ।**

೩೫೪. **ತಥೈವೋರುಯುಗಂ ಪ್ರಾದಾತ್ ಮಯಾ ಛಿನ್ನೌ ಚ ತಾವುಭೌ।**
**ತತಸ್ಸ ಮೇ ಶಿರಃ ಪ್ರಾದಾತ್ತೇನ ಪ್ರೀತೋಽಸ್ಮಿ ತಸ್ಯ ಚ ॥**

**ನಾರಾಯಣ** : ಮಹಾರಾಜ, ಈ ಅಷ್ಟಾಂಗಯುಕ್ತವಾದ ಮಹಾ ಧರ್ಮವನ್ನು ಬೆಳೆಯಬೇಕಾದರೆ ಬೀಜ ಬೇಡವೇ! ಎಲ್ಲಿವೆ ಆ ಬೀಜ!'' ನಾನು ಹೇಳಿದ ಈ ಪ್ರಶ್ನೆಗೆ ಕುರುರಾಜನು ಕೊಟ್ಟ ಉತ್ತರ ನಿಜವಾಗಿಯೂ ಕೌತುಕಪೂರ್ಣವಾಗಿತ್ತು. ಅವನು ಧೈರ್ಯತುಂಬಿ ಹೇಳಿದನು. ಅವನು ಉಚ್ಚರಿಸಿದ ಒಂದೊಂದು ಅಕ್ಷರದಲ್ಲಿಯೂ ಆತ್ಮವಿಶ್ವಾಸದ ಕೆಚ್ಚು ಧರ್ಮಶ್ರದ್ಧೆಯೊಂದಿಗೆ ತುಂಬಿ ಸೂಸುತ್ತಿತ್ತು.

''ಭಗವಾನ್ ಆ ಎಂಟು ಧರ್ಮದ ಬೀಜಗಳು ಈ ನನ್ನ ದೇಹದಲ್ಲಿಯೇ ಇರುತ್ತವೆ. ಅವುಗಳನ್ನೇ ನಾನು ಈ ಕ್ಷೇತ್ರದಲ್ಲಿ ಬಿತ್ತಬೇಕೆಂದು ಮಾಡಿದ್ದೇನೆ.''

ಆಗ ನಾನು ಆ ರಾಜನಿಗೆ ಹೇಳಿದೆ -

''ಹಾಗಾದರೆ ಆ ಬೀಜವುಳ್ಳ ನಿನ್ನ ದೇಹವನ್ನು ನನ್ನ ಕೈಯಲ್ಲಿ ಕೊಡು. ನೀನು ಈ ಹೊಲವನ್ನು ನೇಗಿಲದಿಂದ ಉಳುತ್ತ ನಡೆ, ನಾನು ಬೀಜ ಉದುರಿಸುತ್ತೇನೆ.''

ಆಗ ಕೂಡಲೇ ಮಹಾರಾಜನು ನನ್ನ ಎದುರು ತನ್ನ ಬಲದೋಳನ್ನು ಚಾಚಿದನು. ಆಗ ನಾನು ನನ್ನ ಸುದರ್ಶನ ಚಕ್ರವನ್ನು ವೇಗದಿಂದ ತಿರುಗಿಸಿ ಮುಂದುಮಾಡಿದ ಆ ಮಹಾರಾಜನ ತೋಳನ್ನು ಕತ್ತರಿಸಿ ಹಾಕಿದೆನು. ಆ ಮಹಾಚಕ್ರದ ಹೊಡೆತದಿಂದ ಅವನ ತೋಳು ಸಾವಿರ ಹೋಳಾಯಿತು. ಅದರಿಂದ ಆ ಮಹಾರಾಜನು ವಿಚಲಿತನಾಗದೇ ತನ್ನ

ಎಡದೋಳನ್ನು ಮುಂದೆ ಮಾಡಿದನು. ಅದನ್ನು ಕೂಡ ನಾನು ನನ್ನ ವಿಷ್ಣು ಚಕ್ರದಿಂದ ಕಡಿದು ಚೂರುಚೂರು ಮಾಡಿದೆ. ಅನಂತರ ಅವನು ನೀಡಿದ ಎರಡೂ ನಿಡುದೊಡೆಗಳು ನನ್ನ ಚಕ್ರದಿಂದ ಕತ್ತರಿಸಲ್ಪಟ್ಟವು.

ಕೊನೆಗೆ ಆ ಕುರುರಾಜನು ತನ್ನ ಕುತ್ತಿಗೆಯನ್ನೇ ಕತ್ತರಿಸಲಿಕ್ಕಾಗಿ ನನ್ನ ಮುಂದೆ ಚಾಚಿದನು. ಅವನ ಆತ್ಮ ಬಲಿದಾನದ ಆ ಸಾಹಸವನ್ನು ಕಂಡು ನಾನು ಸುಪ್ರೀತನಾದೆ. ಸಂತೋಷದಿಂದ ಅವನಿಗೆ ''ನಾನು ಪ್ರಸನ್ನವಾಗಿದ್ದೇನೆ. ನಿನಗೆ ಬೇಕಾದ ವರ ಕೇಳು ಕೊಡುತ್ತೇನೆ'' ಎಂದು ತಿಳಿಸಿದೆ.

ಆಗ ಕುರುರಾಜನು ಕೈಜೋಡಿಸಿ ವರವನ್ನು ಕೇಳಿಕೊಂಡನು.

೩೫೫. ವರದೋಸ್ಮೀತ್ಯಥೇತ್ಯುಕ್ತೇ ಕುರುರ್ವರಮಯಾಚತ ।
ಯಾವದೇತನ್ಮಯಾ ಕೃಷ್ಟಂ ಧರ್ಮಕ್ಷೇತ್ರಂ ತದಸ್ತು ವಃ ।

೩೫೬. ಸ್ನಾತಾನಾಂ ಮೃತಾನಾಂ ಚ ಮಹಾಪುಣ್ಯ ಫಲಂ ತ್ವಿಹ ।
ಉಪವಾಸಶ್ಚ ದಾನಂ ಚ ಸ್ನಾನಂ ಜಪ್ಯಂ ಚ ಮಾಧವ ॥

೩೫೭. ಹೋಮಯಜ್ಞಾದಿಕಂ ಚಾನ್ಯಚ್ಛುಭಂ ವಾಪ್ಯಶುಭಂ ವಿಭೋ ।
ತ್ವತ್ಪ್ರಸಾದಾದ್ಧೃಷೀಕೇಶ ಶಂಖ ಚಕ್ರ ಗದಾಧರ ॥

೩೫೮. ಅಕ್ಷಯಂ ಪ್ರವರೇ ಕ್ಷೇತ್ರೇ ಭವತ್ವತ್ರ ಮಹಾಫಲಂ ।
ತಥಾ ಭವಾನ್ ಸುರೈಸ್ಸಾರ್ಧಂ ಸಮಂ ದೇವೇನ ಶೂಲಿನಾ ।

೩೫೯. ವಸಾತ್ರ ಪುಂಡರೀಕಾಕ್ಷ ಮನ್ನಾಮವ್ಯಂಜಕೇಽಚ್ಯುತ
ಇತ್ಯೇವ ಮುಕ್ತಸ್ತೇನಾಹಂ ರಾಜ್ಞಾ ಬಾಢಮುವಾಚ ತಂ ।

೩೬೦. ತಥಾ ಚ ತ್ವಂ ದಿವ್ಯವಪುರ್ಭವ ಭೂಯೋ ಮಹೀಪತೇ ।
ತಥಾಂತಕಾಲೇ ಮಯ್ಯೇವ ಲಯಮೇಷ್ಯಸಿ ಸುವ್ರತ ॥

೩೬೧. ಶಾಶ್ವತೀ ತವ ಕೀರ್ತಿಶ್ಚ ಭವಿಷ್ಯತಿ ನ ಸಂಶಯಃ ।
ತತ್ರ ವೈ ಯಾಜಕೋ ಯಜ್ಞಾನ್ಯಜಿಷ್ಯತಿ ಸಹಸ್ರಶಃ

## ಪುಲಸ್ತ್ಯ ಉವಾಚ

೩೬೨. ತಸ್ಯ ಕ್ಷೇತ್ರಸ್ಯ ರಕ್ಷಾರ್ಥಂ ದದೌ ಸ ಪುರುಷೋತ್ತಮಃ ।
ಯಕ್ಷಂ ಚ ಚಂದ್ರನಾಮಾನಂ ವಾಸುಕಿಂ ಚಾಪಿ ಪನ್ನಗಂ ॥

೩೬೩. ವಿದ್ಯಾಧರಂ ಶಂಕುಕರ್ಣಂ ಸುಕೇಶಂ ರಾಕ್ಷಸೇಶ್ವರಂ ।
ಅಜಾವನಂ ಚ ನೃಪತಿಂ ಮಹಾದೇವಂ ಚ ಪಾವಕಂ ।

೩೬೪. ಏತಾನಿ ಸರ್ವತೋಽಭ್ಯೇತ್ಯ ರಕ್ಷಂತಿ ಕುರುಜಾಂಗಲಂ ।
ಅಮೀಷಾಂ ಬಲಿನೋಽನ್ಯೇ ಚ ಭೃತ್ಯಾಶ್ಚೈವಾನುಯಾಯಿನಃ

೩೬೫. ಅಷ್ಟೌ ಸಹಸ್ರಾಣಿ ಧನುರ್ಧರಾಣಾಂ ।
ನಿವಾರಯಂತೀಹ ಸುದುಷ್ಕೃತಾನ್ ವೈ ॥
ಸ್ನಾತುಂ ವ ಯಚ್ಛಂತಿ ಮಹೋಗ್ರರೂಪಾ
ಸ್ತ್ವನ್ಯಸ್ಯ ತೇ ವೀರ ಚರಾಚರಾಣಾಮ್ ॥

**ಕುರು :** ಮಹಾಪ್ರಭು, ನಾನು ಈವರೆಗೆ ಉತ್ತಿರುವ ಭೂಮಿ ಎಲ್ಲವೂ ಧರ್ಮಕ್ಷೇತ್ರವಾಗಲಿ. ಇಲ್ಲಿ ಸ್ನಾನ ಮಾಡಿದವರಿಗೆ ಸದ್ಗತಿಯಾಗಲಿ, ಮರಣ ಹೊಂದಿದವರಿಗೆ ಮಹತ್ತರ ಪುಣ್ಯವು ದೊರಕಲಿ. ಈ ಕ್ಷೇತ್ರದಲ್ಲಿ ಮಾಡಿದ ದಾನ, ಸ್ನಾನ, ಜಪ, ತಪ, ಹೋಮ, ಹವನ, ವ್ರತ, ಉಪವಾಸ, ಶುಭ, ಅಶುಭ ಯಾವದೇ ಕಾರ್ಯವಿದ್ದರೂ ನಿನ್ನ ಅನುಗ್ರಹದಿಂದ ಅಕ್ಷಯ ಫಲದಾಯಕವು ಆಗಲಿ.

ಹೃಷೀಕೇಶನೇ, ಈ ದಿವ್ಯ ಕ್ಷೇತ್ರದಲ್ಲಿ ನೀನು ಮಹಾದೇವರಿಂದಲೂ ಉಳಿದ ದೇವತೆಗಳಿಂದಲೂ ಕೂಡಿಕೊಂಡು ವಾಸಮಾಡು. ಶಂಖ, ಚಕ್ರ, ಗದೆಗಳನ್ನು ಧರಿಸಿದ ತಾವರೆಗಣ್ಣನ ಅಚ್ಯುತನೇ, ಈ ದಿವ್ಯ ಕ್ಷೇತ್ರವು ಇನ್ನು ಮುಂದೆ ನನ್ನ ಹೆಸರನ್ನು ಸೂಚಿಸುವಂತಾಗಲಿ ಮತ್ತು ಮಹಾಫಲವನ್ನು ಪ್ರದಾನ ಮಾಡುವ ಶ್ರೇಷ್ಠ ತೀರ್ಥವಾಗಲಿ'' ಎಂದು ಬಿನ್ನವಿಸಿದನು. ಅವನ ಭಕ್ತಿಯ ಬಿನ್ನಹಕ್ಕೆ ಸಮ್ಮತಿಯನ್ನು ಕೊಟ್ಟು ಅವನಿಗೆ ನಾನು ಹೇಳಿದೆ.

''ಮಹಾರಾಜನೇ, ನೀನು ಇನ್ನು ದಿವ್ಯ ದೇಹವನ್ನು ಧರಿಸು. ಅಂತ್ಯ ಕಾಲದಲ್ಲಿ ನನ್ನನ್ನು ಧ್ಯಾನಮಾಡಿ ನನ್ನಲ್ಲೇ ಲೀನನಾಗುವಿ. ನಿನ್ನ ಕೀರ್ತಿಯು ಶಾಶ್ವತವಾಗುವದು. ಈ ನಿನ್ನ ಕುರುಕ್ಷೇತ್ರ ಎಂದು ಹೆಸರಾಗುವ ಧರ್ಮಕ್ಷೇತ್ರದಲ್ಲಿ ಅನೇಕಾನೇಕ ಯಾಜ್ಞಿಕರು ಸಾವಿರಾರು ಯಜ್ಞಗಳನ್ನು ಮಾಡುವರು.

**ಪುಲಸ್ತ್ಯ :** ಈ ಕ್ಷೇತ್ರದ ರಕ್ಷಣೆಗಾಗಿ ಆ ಪರಮಾತ್ಮನು ಚಂದ್ರ ಎಂಬ ಹೆಸರಿನ ಯಕ್ಷನನ್ನೂ, ವಾಸುಕಿ ಎಂಬ ಹಾವನ್ನೂ, ಶಂಕು ಕರ್ಣ ಎಂಬ ವಿದ್ಯಾಧರನನ್ನೂ ಸುಕೇಶ ಎಂಬ ಹೆಸರಿನ ದಾನವ ದೊರೆಯನ್ನೂ, ಅಜಾವನ ಎಂಬ ಹೆಸರಿನ ಮಹಾರಾಜನನ್ನೂ, ಮಹಾದೇವ ಎಂಬ ಅಗ್ನಿಯನ್ನೂ, ಪಾಲಕರನ್ನಾಗಿ ಇಟ್ಟನು. ಇವರೆಲ್ಲರೂ ಆ ಕುರುಜಾಂಗಲ ಕ್ಷೇತ್ರವನ್ನು ಎಲ್ಲ ಕಡೆಯಿಂದಲೂ ನಿಂತುಕೊಂಡು ರಕ್ಷಿಸುತ್ತಾರೆ. ಇವರ ಬೆಂಬಲಕ್ಕಾಗಿ ಇನ್ನೂ ಅನೇಕ ಸೇವಕರೂ ಅನುಯಾಯಿಗಳೂ ರಕ್ಷಣಾಕಾರ್ಯಕ್ಕಾಗಿ ಸನ್ನದ್ಧರಾಗಿ ನಿಂತಿದ್ದಾರೆ. ಎಂಟು ಸಾವಿರ ವೀರರು ಬಿಲ್ಲು ಬಾಣ ಹಿಡಿದು ಪಾಪಿಗಳನ್ನು ತಡೆಯುತ್ತಾರೆ. ಚರಾಚರ ಪ್ರಪಂಚದಲ್ಲಿಯೇ ಅತ್ಯಂತ ಉಗ್ರವಾದ ರೂಪವುಳ್ಳ ಆ ವೀರರು ಬೇರಾರನ್ನೂ ಅಲ್ಲಿ ಸ್ನಾನಕ್ಕೆ ಬಿಡುವದಿಲ್ಲ. ಈ ಕ್ಷೇತ್ರದ ನಟ್ಟ ನಡುವೆ ಪೃಥೂದಕ ಎಂಬ ಸರೋವರವಿರುತ್ತದೆ. ಆ ಸರಸ್ಸು ಪಾಪಗಳನ್ನು ಕಳೆಯುತ್ತದೆ. ಪುಣ್ಯವನ್ನು ಕೊಡುತ್ತದೆ. ಕಲ್ಯಾಣವನ್ನುಂಟು ಮಾಡುತ್ತದೆ.

೩೬೬. ತಸ್ಯೈಽವ ಮಧ್ಯೇ ಬಹು ಪುಣ್ಯಯುಕ್ತಂ ।
ಪೃಥೂದಕಂ ಪಾಪಹರಂ ಶಿವಂ ಚ ॥

೩೬೭. ಪುಣ್ಯಾ ನದೀ ಪ್ರಾಙ್ಮುಖತಾಂ ಪ್ರಯಾತಾ
ಜಲೌಘಯುಕ್ತಸ್ಯ ಸುತಾ ಜಲಾಢ್ಯಾ ॥

೩೬೮. ಪೂರ್ವಂ ನದೀಯಂ ಪ್ರಪಿತಾಮಹೇನ ।
ಸೃಷ್ಟಾ ಸಮಂ ಭೂತಗಣೈಃ ಸಮಸ್ತೈಃ ॥

೩೬೯. ಮಹೀಜಲಂ ವನ್ಹಿ ಸಮೀರಮೇವ ।
ಖಂ ತ್ವೇವಮಾದೌ ವಿಬಭೌ ಪೃಥೂದಕಮ್ ॥

೩೭೦. ಸರ್ವೇ ತಥಾ ತೋಯಧಯೋ ಮಹಾಂತ
ಸ್ತೀರ್ಥಾನಿ ನದ್ಯಃ ಸ್ರವಣಾಃ ಸರಂಸಿ ॥
ಸನ್ನಿರ್ಮಿತಾನೀಹ ಮಹಾಭುಜೇನ ।
ಸದೇವ ಮಾರ್ಗಃ ಸಲಿಲಂ ಹಿ ತೇಷು ।

೩೭೧. ಸರಸ್ವತೀ ದೃಷದ್ವತ್ಯೋರಂತರೇ ಕುರುಜಾಂಗಲೇ ।
ಮುನಿಪ್ರವರ ಮಾಸೀನಂ ಪುರಾಣಂ ಲೋಮಹರ್ಷಣಂ ।
ಅಪೃಚ್ಛಂತ ದ್ವಿಜವರಾಃ ಪ್ರಭವಂ ಸುರಸತ್ತಮಾಃ ।

### ಋಷಯ ಊಚಃ

೩೭೨. ಪ್ರಮಾಣಂ ಸರಸೋ ಬ್ರೂಹಿ ತೀರ್ಥಾನಾಂ ಚ ವಿಶೇಷತಃ ।
ದೇವತಾನಾಂ ಚ ಮಾಹಾತ್ಮ್ಯಂ ಉತ್ಪತ್ತಿಂ ವಾಮನಸ್ಯ ಚ ।

೩೭೩. ಏತಚ್ಛ್ರುತ್ವಾ ವಚಸ್ತೇಷಾಂ ತಾನ್ದ್ವಿಜಾನ್ ಲೋಮಹರ್ಷಣಃ ।
ಪ್ರಣಿಪತ್ಯ ಪುರಾಣರ್ಷಿಮಿದಂ ವಚನಮಬ್ರವೀತ್ ।

### ಲೋಮಹರ್ಷಣ ಉವಾಚ

೩೭೪. ಬ್ರಹ್ಮಾಣಮೀಶಂ ಕಮಲಾಸನಸ್ಥಂ ।
ವಿಷ್ಣುಂ ಚ ಲಕ್ಷ್ಮೀಸಹಿತಂ ತಥೈವ ॥
ರುದ್ರಂ ಚ ದೇವಂ ಪ್ರಣಿಪತ್ಯ ಮೂರ್ಧ್ನಾ ।
ತೀರ್ಥಂ ವರಂ ಬ್ರಹ್ಮಸರಃ ಪ್ರವಕ್ಷ್ಯೇ ॥

ಈ ಸರೋವರದಿಂದ ಒಂದು ಪುಣ್ಯನದಿಯು ಪ್ರವಾಹದಿಂದ ವೇಗಗೂಡಿ ಪೂರ್ವಾಭಿಮುಖವಾಗಿ ಹರಿಯುತ್ತದೆ. ಈ ನದಿಯು ಪ್ರಪಂಚದ ಮುತ್ತಜ್ಜನಾದ ಬ್ರಹ್ಮನಿಂದ ಪೂರ್ವಕಾಲದಲ್ಲಿಯೇ ಸಕಲ ಪ್ರಾಣಿಗಳೊಂದಿಗೆ ನಿರ್ಮಿಸಲ್ಪಟ್ಟಿತು. ಭೂಮಿ, ನೀರು, ಬೆಂಕಿ, ಗಾಳಿ, ಆಗಸ, ಎಂಬ ಪಂಚ ಮಹಾಭೂತಗಳಿಂದ ನಿರ್ಮಿತವಾದ ಈ ನದಿಯೂ ಇದಕ್ಕೆ ಕಾರಣವಾದ ಪೃಥೂದಕವೂ ಮೊದಲಿನಿಂದಲೂ ಪ್ರಸಿದ್ಧವಾಗಿವೆ.

ಹೀಗೆ ಪ್ರಪಂಚದಲ್ಲಿಯ ಸಾಗರಗಳೂ, ನದಿಗಳೂ ದೊಡ್ಡ ದೊಡ್ಡ ತೀರ್ಥಗಳೂ ಝರಿ ಸರೋವರಗಳೂ, ಸಜ್ಜನರ ಉಪಯೋಗಕ್ಕಾಗಿ ಶ್ರೀಮನ್ನಾರಾಯಣನಿಂದ ನಿರ್ಮಾಣಗೊಂಡಿವೆ. ಇವುಗಳ ನೀರು ಸತ್ಪುರುಷರಿಗೆ ದಿವ್ಯಗತಿ ಹೊಂದಲು ದೇವಮಾರ್ಗ ಎನಿಸಿದೆ. ಪೂರ್ವಕಾಲದಲ್ಲಿ ಸರಸ್ವತೀ ದೃಷದ್ವತೀ ಎಂಬ ಈ ಎರಡು

ನದಿಗಳ ನಡುವಿನ ಕುರುಜಾಂಗಲ ಪ್ರದೇಶದಲ್ಲಿ ತಪಂಗೈಯ್ಯುತ್ತಿದ್ದ ಪುರಾಣಮುನಿ ಲೋಮಹರ್ಷಣರಿಗೆ ಬ್ರಾಹ್ಮಣರು ಬಂದು ಕೇಳಿದರು.

**ಬ್ರಾಹ್ಮಣರು :** ಮಹರ್ಷಿಗಳೇ, ಈ ಸರೋವರದ ಉದ್ದಳತೆ ಪ್ರಮಾಣ ಎಷ್ಟು? ಮತ್ತು ಇಲ್ಲಿಯ ತಿರ್ಥಗಳ ಹಾಗೂ ದೇವತೆಗಳ ಮಹಿಮೆ ಏನು? ನಮಗೆ ತಿಳಿಸಿರಿ. ಶ್ರೀವಾಮನ ದೇವರ ಪ್ರಾದುರ್ಭಾವದ ವೃತ್ತಾಂತವನ್ನೂ ನಮಗೆ ತಿಳಿಸಬೇಕು.''

ಬ್ರಾಹ್ಮಣರ ಈ ಪ್ರಶ್ನೆ ಗರ್ಭಿತವಾದ ಮಾತುಗಳನ್ನು ಕೇಳಿ ಲೋಮಹರ್ಷಣರು ಪುರಾಣ ಪ್ರಣೇತರಾದ ಮಹರ್ಷಿ ವೇದವ್ಯಾಸರನ್ನು ನಮಿಸಿ ನುಡಿದರು. ''ತಾವರೆಯ ಗದ್ದುಗೆಯ ಮೇಲೆ ಕುಳಿತ ಬ್ರಹ್ಮದೇವನನ್ನೂ ಮತ್ತು ಲಕ್ಷ್ಮೀದೇವಿ ಯೊಂದಿಗೆ ಒಡಗೂಡಿದ ಶ್ರೀಮಹಾವಿಷ್ಣುವನ್ನೂ, ಮಹಾದೇವರನ್ನೂ ನಾನು ತಲೆಬಾಗಿ ನಮಿಸಿ ,ತೀರ್ಥಗಳಲ್ಲಿ ಶ್ರೇಷ್ಠವಾದ ಈ ಬ್ರಹ್ಮ ಸರೋವರ ವೃತ್ತಾಂತವನ್ನು ಹೇಳುತ್ತೇನೆ.

೩೭೫. ರಂತುಕಾದೌಜಸಂಚಾಪಿ ಪಾವನಾಚ್ಚ ಚತುರ್ಮುಖಂ ॥
ಸರಸ್ಸನ್ನಿಹಿತಂ ಪ್ರೋಕ್ತಂ ಬ್ರಹ್ಮಣಾ ಪೂರ್ವಮೇವ ತು ॥

೨೭೬. ಕಲಿದ್ವಾಪರಯೋರ್ಮಧ್ಯೇ ವ್ಯಾಸೇನ ಚ ಮಹಾತ್ಮನಾ
ಸರಃ ಪ್ರಮಾಣಂ ಯತ್ಪ್ರೋಕ್ತಂ ತಚ್ಛೃಣ್ವಂತು
ದ್ವಿಜೋತ್ತಮಾಃ ॥

೨೭೭. ವಿಶ್ವೇಶ್ವರಾದ್ಧಸ್ತಿಪುರಂ ತಥಾ ಕನ್ಯಾ ಜರದ್ಗವೀ
ಯಾವದೋಘವತೀ ಪ್ರೋಕ್ತಾ ತಾವತ್ಸನ್ನಿಹಿತಂ ಸರಃ ॥

೨೭೮. ಮಯಾ ಶ್ರುತಂ ಪ್ರಮಾಣಂ ತು ಕಥ್ಯಮಾನಂ ತು ವಾಮನಂ
ತಚ್ಛೃಣುಧ್ವಂ ದ್ವಿಜವರಾಃ ಪುಣ್ಯಂ ವೃದ್ಧಿಕರಂ ಮಹತ್ ॥

೨೭೯. ವಿಶ್ವೇಶ್ವರಾದ್ದೇವವರಾತ್ಪಾವನೀ ಚ ಸರಸ್ವತೀ ।
ಸರಃ ಸನ್ನಿಹಿತಂ ಪ್ರೋಕ್ತಂ ಸಮಂತಾದರ್ಧಯೋಜನಂ ।

೨೮೦. ಏತದಾಶ್ರಿತ್ಯ ದೇವಾಶ್ಚ ಋಷಯಶ್ಚ ಸಮಾಗತಾಃ ।
ಸೇವಂತೇ ಮುಕ್ತಿಕಾಮಾರ್ಥಂ ಸ್ವರ್ಗಾರ್ಥಂ ಚಾಪರೇ ಸ್ಥಿತಾಃ ॥

೨೮೧. ಬ್ರಹ್ಮಣಾ ಸೇವಿತಮಿದಂ ಸೃಷ್ಟಿಕಾಮೇನ ಯೋಗಿನಾ ।
ವಿಷ್ಣುನಾ ಸ್ಥಿತಿಕಾಮೇನ ಹರಿರೂಪೇಣ ಸೇವಿತಂ ॥

೨೮೨. ರುದ್ರೇಣ ಚ ಸರೋಮಧ್ಯಂ ಪ್ರವಿಷ್ಟೇನ ಮಹಾತ್ಮನಾ ।
ಸೇವ್ಯ ತೀರ್ಥಂ ಮಹಾತೇಜಾಃ ಸ್ಥಾಣುತ್ವಂ
ಪ್ರಾಪ್ತವಾನ್‌ಹರಃ ॥

೩೮೩. ಅದ್ಯೈಷಾ ಬ್ರಹ್ಮಣೋ ವೇದೀ ತತೋ ರಾಮಹ್ರದಃ ಸ್ಮೃತಃ
ಕರಣಾ ಚ ಯತಃ ಕೃಷ್ಟಂ ಕುರು ಕ್ಷೇತ್ರಂ ತತಃ ಸ್ಮೃತಮ್ ॥

೩೮೪. ತರಂತು ಕಾರಂತುಕಯೋರ್ಯದಂತರಂ
ಯದಂತರಂ ರಾಮಹ್ರದಸ್ಯ ಪಂಚಕಾತ್ ॥
ಏತತ್ಕುರು ಕ್ಷೇತ್ರ ಸಮಂತ ಪಂಚಕಂ
ಪಿತಾಮಹಸ್ಯೋತ್ತರ ವೇದಿರುಚ್ಯತೇ ।

ಬ್ರಹ್ಮದೇವರ ಅಭಿಪ್ರಾಯದಂತೆ ಈ ಸರೋವರವು ರಂತುಕ ದೇಶದಿಂದ ಓಜಸ ಭಾಗದವರೆಗೆ ಪಾವನ ಪ್ರದೇಶದಿಂದ ಚತುರ್ಮುಖ ಭೂಖಂಡದವರೆಗೆ ಹಬ್ಬಿ ಹಮ್ಮಿದೆ. ಕಲಿದ್ವಾಪರಗಳ ಸಂಧಿ ಕಾಲದಲ್ಲಿ ಅವತರಿಸಿದ ಭಗವಾನ್ ವೇದವ್ಯಾಸರು ''ವಿಶ್ವೇಶ್ವರ ಕ್ಷೇತ್ರದಿಂದ ಹಸ್ತಿನಾವತಿಯವರೆಗೂ ಜರದ್ಗವೀ ನದಿಯು ಉಗಮ ಸ್ಥಾನದಿಂದ ಹರಿದು ಹೊಮ್ಮಿ ಪ್ರವಾಹ ಪೂರ್ಣವಾದ ಓಘವತಿ ನದಿಯಾಗಿ ಚಾಚಿದ ಪ್ರದೇಶದ ವರೆಗೂ ಈ ಸರೋವರದ ವ್ಯಾಪ್ತಿ ಇದೆ'' ಯೆಂದು ಹೇಳಿದ್ದಾರೆ. ವಾಮನನಿಂದ ನಾನು ಕೇಳಿದಂತೆ ವಿಶ್ವೇಶ್ವರ ಕ್ಷೇತ್ರದಿಂದ ಪವಿತ್ರ ಸರಸ್ವತೀ ನದಿಯು ಪ್ರವೇಶಿಸುವ ಪ್ರದೇಶದ ಸುತ್ತುಮುತ್ತು ಅರ್ಧ ಯೋಜನ ಈ ಸರೋವರವು ವ್ಯಾಪಿಸಿದೆ.

ದೇವತೆಗಳೂ, ಋಷಿಗಳೂ ಮುಕ್ತಿಗಾಗಿ ಈ ಪಾವನತೀರ್ಥ ಕ್ಷೇತ್ರಕ್ಕೆ ಬಂದು ಭಗವಂತನ ಸೇವಾರಾಧನ ಮಾಡುತ್ತಾರೆ. ಉಳಿದವರು ಇಲ್ಲಿದ್ದು ಸ್ವರ್ಗಸಾಧನೆ ಮಾಡಿಕೊಳ್ಳುತ್ತಾರೆ. ಜಗತ್ತನ್ನು ಸೃಷ್ಟಿ ಮಾಡಬಯಸಿದ ಬ್ರಹ್ಮನೂ, ಪಾಲನ ಮಾಡಬಯಸಿದ ವಿಷ್ಣುವೂ ಇದನ್ನು ಸೇವಿಸಿದ್ದಾರೆ. ರುದ್ರನು ಈ ಸರಸಿಯ ಮಧ್ಯದಲ್ಲಿ ಪ್ರವೇಶಿಸಿ ಇದನ್ನು ಸೇವಿಸಿ ಸ್ಥಾಣುತ್ವವನ್ನು ಹೊಂದಿದನು.

ಮೊದಲು ಬ್ರಹ್ಮವೇದೀ, ನಂತರ ಪರಶುರಾಮ ಸರೋವರ. ಅದರ ಮುಂದೆ ಕುರುರಾಜನು ಹರಗಿದ್ದರಿಂದ ಕುರುಕ್ಷೇತ್ರವೆಂದು ಪ್ರಸಿದ್ಧವಾದ ಈ ದೇಶವಿದೆ. ತರಂತುಕ ಅರಂತುಕ ಎಂಬ ದೇಶಗಳ ನಡುವಿನ ದಕ್ಷಿಣೋತ್ತರವಾಗಿ ಪರಶುರಾಮ ಹ್ರದದಿಂದ ಸ್ಯಮಂತ ಪಂಚಕದವರೆಗಿನ ಪ್ರದೇಶವೆಲ್ಲವೂ ಕುರುಕ್ಷೇತ್ರ ಎಂದು ಪ್ರಥಿತವಾಗಿದೆ.

ವಾಮನ ಮಹಾಪುರಾಣದಲ್ಲಿ ಕುರುಕ್ಷೇತ್ರದ ಮಹಿಮೆ ಎಂಬ
ಇಪ್ಪತ್ತೆರಡನೆಯ ಅಧ್ಯಾಯವು ಮುಗಿದುದು

—o—

ಸಿರಿಯ ಆಗಮನ

ಅಧ್ಯಾಯ - ೨೩

## ಋಷಯ ಊಚುಃ

೩೮೫. ಬ್ರೂಹಿ ವಾಮನ ಮಾಹಾತ್ಮ್ಯ ಮುತ್ಪತ್ತಿಂ ಚ ವಿಶೇಷತಃ ।
ಯಥಾ ಬಲಿರ್ನಿಯಮಿತೋ ದತ್ತಂ ರಾಜ್ಯಂ ಶತಕ್ರತೋಃ ।

## ಲೋಮಹರ್ಷಣ ಉವಾಚ

೩೮೬. ಶೃಣ್ವಂತ ಮುನಯಃ ಪ್ರೀತಾ ವಾಮನಸ್ಯ ಮಹಾತ್ಮನಃ ।
ಉತ್ಪತ್ತಿಂ ಚ ಪ್ರಭಾವಂ ಚ ನಿವಾಸಂ ಕುರುಜಾಂಗಲೇ ।

೩೮೭. ತಥೈವ ವಂಶಂ ದೈತ್ಯಾನಾಂ ಶೃಣ್ವಂತು ದ್ವಿಜಸತ್ತಮಾಃ ।
ಯಸ್ಮಿನ್ ವಂಶೇ ಸಮಭವದ್ಬಲಿರ್ವೈರೋಚನಿಃ ಪುರಾ ।

೩೮೮. ದೈತ್ಯಾನಾಮಾದಿ ಪುರುಷೋ ಹಿರಣ್ಯಕಶಿಪುರ್ಭವತ್ ।
ತಸ್ಯ ಪುತ್ರೋ ಮಹಾತೇಜಾಃ ಪ್ರಹ್ಲಾದೋ ನಾಮ ದಾನವಃ ।

೩೮೯. ತಸ್ಮಾದ್ವಿರೋಚನೋ ಜಜ್ಞೇ ಬಲಿರ್ಜಜ್ಞೇ ವಿರೋಚನಾತ್ ।
ಹತೇ ಹಿರಣ್ಯಕಶಪೌ ದೇವಾನುತ್ಸಾದ್ಯ ಸರ್ವತಃ ।

೩೯೦. ರಾಜ್ಯಂ ಕೃತಂ ಚ ತೇನೇಷ್ಟಂ ತ್ರೈಲೋಕ್ಯೇ ಸಚರಾಚರೇ ।
ಕೃತಯಜ್ಞೇಷು ದೈತ್ಯೇಷು ತ್ರೈಲೋಕ್ಯೆ ದೈತ್ಯತಾಂ ಗತೇ ।

೩೯೧. ಜಯೇ ತಥಾ ಬಲವತೋರ್ಮಯ ಶಂಬರಯೋ ಸ್ತಥಾ ।
ಶುದ್ಧಾಸು ದಿಕ್ಷು ಸರ್ವಾಸು ಪ್ರವೃತ್ತೇ ಧರ್ಮಕರ್ಮಣಿ ॥

೩೯೨. ಸಂಪ್ರವೃತ್ತೇ ದೈತ್ಯಪಥೇ ಅಯನಸ್ಥೇ ದಿವಾಕರೇ ।
ಪ್ರಲ್ಹಾದ ಶಂಬರಮಯ್ಯೈರನುರಾಗೇಣ ಚೈವ ಹಿ ॥

೩೯೩. ದಿಕ್ಷು ಸರ್ವಾಸು ಗುಪ್ತಾಸು ಗಗನೇ ದೈತ್ಯಪಾಲಿತೇ ।
ವೇದೇಷು ಮುಖಶೋಭಾಂ ಚ ಸ್ವರ್ಗಸ್ಥಾಂ ದರ್ಶಯತ್ಸು ಚ ।

ಸರೋವರದ ಮಹತ್ವವನ್ನು ಕೇಳಿದ ನಂತರ ಮತ್ತೆ ಕುತೂಹಲಿಗಳಾದ ಮಹರ್ಷಿಗಳು ಲೋಮಹರ್ಷಣರನ್ನು ಪ್ರಶ್ನೆ ಮಾಡುತ್ತಲಿರುವರು.

**ಋಷಿಗಳು :** ಋಷಿವರ್ಯರೇ, ನಮ್ಮ ಮೇಲೆ ಅನುಗ್ರಹಪೂರ್ವಕವಾಗಿ ವಾಮನಾವತಾರದ ಮಾಹಾತ್ಮ್ಯವನ್ನು ತಿಳಿಸಿರಿ. ನಮಗೆ ವಿಶೇಷವಾಗಿ ಕುತೂಹಲವು. ಪ್ರಶಾಂತ ಮೂರ್ತಿ ವಾಮನ ದೇವರು ಬಲಿ ಚಕ್ರವರ್ತಿಯನ್ನು ಹೇಗೆ ನಿಯಮನ ಮಾಡಿದರು? ಮತ್ತು ಇಂದ್ರನಿಗೆ ಮತ್ತೆ ಹೇಗೆ ರಾಜ್ಯ ಪ್ರಾಪ್ತಿಯಾಯಿತು? ಎಂಬುದನ್ನು ವಿಶದಪಡಿಸಿರಿ.

**ಲೋಮಹರ್ಷಣ :** ಮಹತ್ವಶಾಲಿಯಾದ ವಾಮನ ದೇವರ ಉತ್ಪತ್ತಿಯು ಕುರುದೇಶದಲ್ಲಿ ಹೇಗೆ ಆಯಿತು ? ಆತನ ಪ್ರಭಾವವು ಹೇಗೆ ಪರಿಣಾಮಕಾರಿಯಾಯಿತು

ಎಂಬುದನ್ನು ನಾನು ಹೇಳುತ್ತೇನೆ. ನೀವು ಸಂತುಷ್ಟಚಿತ್ತರಾಗಿ ಆಲಿಸಿರಿ. ಹೇ ಬ್ರಾಹ್ಮಣ ಶ್ರೇಷ್ಠರೇ, ಯಾವ ಕುಲದಲ್ಲಿ ವಿರೋಚನನ ಮೊಮ್ಮಗನಾದ ಬಲಿಚಕ್ರವರ್ತಿಯು ಜನಿಸಿದನೋ ಆ ದೈತ್ಯ ಕುಲದ ವಿಸ್ತಾರವನ್ನು ಹೇಳುತ್ತೇನೆ. ನೀವೆಲ್ಲರೂ ಸಾವಧಾನರಾಗಿ ಕೇಳಿರಿ. ದೈತ್ಯರ ಕುಲಕ್ಕೆ ಆದಿ ಪುರುಷನಾದ ಹಿರಣ್ಯಕಶಿಪುವಿನ ಮಗನೇ ಭಕ್ತಾಗ್ರಗಣ್ಯನಾದ ಪ್ರಲ್ಹಾದನು. ಆತನ ಪುತ್ರನೇ ವಿರೋಚನನು. ಆ ವಿರೋಚನನ ಮಗನು ಬಲಿ ಚಕ್ರವರ್ತಿಯು. ಹಿರಣ್ಯಕಶಿಪುವಿನ ಮರಣಾನಂತರದಲ್ಲಿ ಬಲಿಯು ದೇವತೆಗಳೆಲ್ಲರನ್ನು ಎಲ್ಲ ರೀತಿಯಿಂದ ಸದೆ ಬಡಿದು ಭೂಮಂಡಲದಲ್ಲೆಲ್ಲ ತನ್ನ ಆಧಿಪತ್ಯವು ನಡೆಯುವಂತೆ ಮಾಡಿದನು. ಎಲ್ಲೆಡೆಯಲ್ಲಿ ದೈತ್ಯರ ಪ್ರಾಬಲ್ಯವಾಯಿತು. ದೈತ್ಯರೆಲ್ಲರೂ ದೊಡ್ಡ ಯಜ್ಞ ಯಾಗಾದಿಗಳನ್ನು ಮಾಡಿದರು. ಮಯ ಶಂಬರ ಮೊದಲಾದವರ ಪ್ರಾಬಲ್ಯವು ಬೆಳೆಯ ತೊಡಗಿತು. ದಿಗ್ದೇಶಗಳಲ್ಲೆಲ್ಲ ಧರ್ಮಕಾರ್ಯಗಳು ಪ್ರವೃತ್ತವಾಗುತ್ತಿದ್ದವು. ಸ್ವತಃ ಸೂರ್ಯನೂ ಸಹ ದೈತ್ಯರಿಗೆ ಅನುಕೂಲವಾದನು. ದೇವಭಕ್ತರಾದ ಪ್ರಲ್ಹಾದ, ಶಂಬರ ಮೊದಲಾದವರು ಹಾಕಿ ಕೊಟ್ಟಿರುವ ಧರ್ಮಮಾರ್ಗದಲ್ಲಿಯೇ ಭೂಮಂಡಲದಲ್ಲಿ ಎಲ್ಲ ಜನರು ನಡೆಯತೊಡಗಿದರು. ಯಜ್ಞಯಾಗಗಳ ಪ್ರಾಬಲ್ಯ ಬೆಳೆಯತೊಡಗಿತು. ಎಲ್ಲ ಜನರು ವೇದ ಪ್ರತಿಪಾದ್ಯವಾದ ಸ್ವರ್ಗದ ಸುಖಕ್ಕೆ ಮಾರುಹೋದಂತಾಯಿತು.

೩೯೪. ಪ್ರಕೃತಿಸ್ಥೇ ತತೋ ಲೋಕೇ ವರ್ತಮಾನೇ ಚ ಸತ್ಪಥೇ ।
ಅಭಾವೇ ಸರ್ವಪಾಪಾನಾಂ ಧರ್ಮಭಾವೇ ಸದೋತ್ಥಿತೇ ।

೩೯೫. ಚತುಃಪಾದೇ ಸ್ಥಿತೇ ಧರ್ಮೇ ಹ್ಯಧರ್ಮೇ ಪಾದವಿಗ್ರಹೇ ।
ಪ್ರಜಾಪಾಲನ ಯುಕ್ತೇಷು ಭ್ರಾಜಮಾನೇಷು ರಾಜಸು ।
ಸ್ವಧರ್ಮಯುಕ್ತೇಷು ತಥಾ ಸರ್ವೇಷ್ವಾಶ್ರಮವಾಸಿಷು ।

೩೯೬. ಅಭಿಷಿಕ್ತೋಽಸುರೈಸ್ಸರ್ವೈಃ ದೈತ್ಯರಾಜ್ಯೇ ಬಲಿಸ್ತದಾ ।
ಹೃಷ್ಟೇಷ್ವಸುರಸಂಘೇಷು ನದಸ್ಸು ಮುದಿತೇಷು ಚ ।

೩೯೭. ಅಥಾಭ್ಯುಪಗತಾ ಲಕ್ಷ್ಮೀಃ ಬಲಿಂ ಪದ್ಮಾಂತರ ಪ್ರಭಾ ।
ಪದ್ಮೋದ್ಯತಕರಾ ದೇವೀ ವರದಾ ಸುಪ್ರವೇಶಿನೀ ।

ಶ್ರೀರುವಾಚ

೩೯೮. ಬಲೇ ಬಲವತಾಂ ಶ್ರೇಷ್ಠ ದೈತ್ಯರಾಜ ಮಹಾದ್ಯುತೇ ।
ಪ್ರೀತಾಸ್ಮಿ ತವ ಭದ್ರಂ ತೇ ದೇವರಾಜಪರಾಜಯೇ ।

೩೯೯. ಯತ್ತ್ವಯಾ ಯುಧಿ ವಿಕ್ರಮ್ಯ ದೇವರಾಜಃ ಪರಾಜಿತಃ ।
ದೃಷ್ಟ್ವಾತೇ ಪರಮಂ ಸತ್ವಂ ತತೋಽಹಂ ಸ್ವಯಮಾಗತಾ ॥

೪೦೦. ನಾಶ್ಚರ್ಯಂ ದಾನವವ್ಯಾಘ್ರ ಹಿರಣ್ಯಕಶಿಪೋಃ ಕುಲೇ ।
ಪ್ರಸೂತಸ್ಯಾಸುರೇಂದ್ರಸ್ಯ ತವ ಕರ್ಮೇದಮೀದೃಶಂ ।

೪೦೧. ವಿಶೇಷಿತಸ್ತ್ವಯಾ ರಾಜನ್ ದೈತ್ಯೇಂದ್ರಃ ಪ್ರಪಿತಾಮಹಃ ।
ಯೇನ ಯುಕ್ತಂ ಹಿ ನಿಖಿಲಂ ತ್ರೈಲೋಕ್ಯಮಿದಮವ್ಯಯಂ ॥

೪೦೨. ಏವಮುಕ್ತ್ವಾ ತು ಸಾ ದೇವೀ ಲಕ್ಷ್ಮೀರ್ದೈತ್ಯನೃಪಂ ಬಲಿಂ ।
ಪ್ರವಿಷ್ಟಾ ವರದಾ ಸೇವ್ಯಾ ಸರ್ವದೇವಮನೋರಮಾ ॥

೪೦೩. ತುಷ್ಟಾಶ್ಚ ದೇವ್ಯಃ ಪ್ರವರಾಃ ಹ್ರೀಃ ಕೀರ್ತಿರ್ದ್ಯುತಿರೇವ ಚ ।
ಪ್ರಭಾ ಧೃತಿಃ ಕ್ಷಮಾ ಶಕ್ತಿಃ ಬುದ್ಧಿರ್ದಿವ್ಯ ಮಹಾಮತಿಃ ।

೪೦೪. ಶ್ರುತಿರ್ವಿದ್ಯಾ ಸ್ಮೃತಿಃ ಕೀರ್ತಿಃ ಶಾಂತಿಃ ಪುಷ್ಟಿಸ್ತಥಾ ಕ್ರಿಯಾ ।
ಸರ್ವಾಶ್ಚಾಪ್ಸರಸೋ ದಿವ್ಯಾ ನೃತ್ತಗೀತವಿಶಾರದಾಃ ।

೪೦೫. ಪ್ರಪದ್ಯಂತೇ ತು ದೈತ್ಯೇಂದ್ರ ತ್ರೈಲೋಕ್ಯಂ ಸಚರಾಚರಂ ।
ಪ್ರಾಪ್ತಮೈಶ್ವರ್ಯಮತುಲಂ ಬಲಿನಾ ಬ್ರಹ್ಮವಾದಿನಾ ॥

ಎಲ್ಲರಲ್ಲಿಯೂ ಧರ್ಮವು ಜಾಗ್ರತವಾದುದರಿಂದ ಪಾಪಗಳ ಸರ್ವಥಾ ಅಭಾವವಾಗಿರುವದರಿಂದ ಆಗಿನ ಕಾಲದಲ್ಲಿ ಧರ್ಮವು ತನ್ನ ನಾಲ್ಕು ಕಾಲುಗಳ ಆಧಾರದ ಮೇಲೆ ನಿಲ್ಲುವಂತಾಯಿತು. ರಾಜರೆಲ್ಲರೂ ತಮ್ಮ ಪ್ರಜೆಗಳನ್ನು ಮಕ್ಕಳಂತೆ ರಕ್ಷಿಸುವದರಲ್ಲಿ ತತ್ಪರರಾದರು. ಎಲ್ಲ ವರ್ಣಾಶ್ರಮದ ಜನರು ತಮ್ಮ ತಮ್ಮ ವರ್ಣಾಶ್ರಮೋಚಿತ ಕಾರ್ಯಗಳಲ್ಲಿ ತೊಡಗಿದರು. ಇಂಥ ಸುಸಮಯದಲ್ಲಿ ಎಲ್ಲ ದೈತ್ಯರು ಕೂಡಿ ಬಲಿಯನ್ನು ತಮ್ಮ ರಾಜ್ಯದಲ್ಲಿ ಅಭಿಷೇಚಿಸಿದರು. ದೈತ್ಯರೆಲ್ಲರೂ ಪರಮಸಂತುಷ್ಟ ಚಿತ್ತರಾದವರಾದರು. ಈ ಸಂದರ್ಭದಲ್ಲಿ ಕಮಲದ ಮಧ್ಯಭಾಗದಂತೆ ಶುಭ್ರಳಾದ ಲಕ್ಷ್ಮೀದೇವಿಯು ಕೈಯಲ್ಲಿ ಪದ್ಮವನ್ನು ಧರಿಸಿಕೊಂಡು ಬಲಿಚಕ್ರವರ್ತಿಯ ಎದುರಿನಲ್ಲಿ ಪ್ರತ್ಯಕ್ಷಳಾಗಿ ಹೀಗೆಂದಳು.

## ಲಕ್ಷ್ಮೀಃ ಉವಾಚ

**ಲಕ್ಷ್ಮೀ :** ಬಲವಂತರಲ್ಲಿ ಅಧಿಕನಾದ ದೈತ್ಯ ಚಕ್ರವರ್ತಿಯಾದ ಬಲಿರಾಜನೇ, ದೇವೇಂದ್ರನನ್ನು ಜಯಿಸಿದ ನಿನ್ನ ಸಾಹಸಕ್ಕೆ ನಾನು ಮೆಚ್ಚಿರುವೆನು. ಅದಕ್ಕಾಗಿ ನಾನೇ ಸ್ವತಃ ನಿನ್ನ ಹತ್ತಿರಕ್ಕೆ ಬಂದಿರುವೆನು. ಹಿರಣ್ಯಕಶಿಪುವಿನ ಕುಲದಲ್ಲಿ ಜನಿಸಿದ ನಿನಗೆ ದೇವತೆಗಳನ್ನೆಲ್ಲ ಆಕ್ರಮಿಸಿ ಜಯಿಸುವುದು ಆಶ್ಚರ್ಯ ಸಂಗತಿ ಏನಲ್ಲ. ಆದರೆ ನೀನು ನಿನ್ನ ಅಜ್ಜನಾದ ದೈತ್ಯಶ್ರೇಷ್ಠನೆನ್ನಿಸಿದ ಪ್ರಲ್ಹಾದನನ್ನು ಮೀರಿ ಮೂರು ಲೋಕದಲ್ಲಿಯೇ ಪ್ರಸಿದ್ಧಿಯನ್ನು ಪಡೆದುದು ಆಶ್ಚರ್ಯದ ಸಂಗತಿ.'' ಹೀಗೆ ಅನ್ನುತ್ತ ತನ್ನ ಪರಿವಾರ ಸಮೇತಳಾದ ಲಕ್ಷ್ಮೀದೇವಿಯು ಬಲಿಚಕ್ರವರ್ತಿಯ ರಾಜ್ಯದಲ್ಲಿ ಪ್ರವೇಶವನ್ನು ಹೊಂದಿದಳು. ಅಂದಿನಿಂದ ಬಲಿಚಕ್ರವರ್ತಿಯ ಕೀರ್ತಿಯ ಪ್ರಖರಕಿರಣವು ಎಲ್ಲ ಕಡೆಯಲ್ಲಿ ಹಬ್ಬಿತು. ಕಾಂತಿ, ಧೈರ್ಯ, ಕ್ಷಮೆ, ಬುದ್ಧಿವಂತಿಕೆ, ಶಾಸ್ತ್ರನಿಷ್ಠೆ, ಶಾಂತಿ, ಪುಷ್ಟಿ, ಎಲ್ಲ ಉತ್ತಮೋತ್ತಮ ಗುಣಗಳು ಮತ್ತು ನೃತ್ಯಗೀತಗಳಲ್ಲಿ ನಿಪುಣೆಯರಾದ ಅಪ್ಸರೆಯರು ಬಲಿಚಕ್ರವರ್ತಿಯನ್ನು ಒಲಿದು ಬಂದರು.

ವಾಮನ ಮಹಾಪುರಾಣದಲ್ಲಿ ಸಿರಿಯ ಆಗಮನ ಎಂಬ ಇಪ್ಪತ್ತಮೂರನೇಯ ಅಧ್ಯಾಯವು ಮುಗಿದುದು.

—o—

## ಬ್ರಹ್ಮದೇವರ ದರ್ಶನ

ಅಧ್ಯಾಯ - ೨೪

೪೦೬. ದೇವಾನಾಂ ಬ್ರೂಹಿ ಮೇ ಕರ್ಮ ಯುದ್ವೃತ್ತಾಸ್ತೇ ಪರಾಜಿತಾಃ।
ಕಥಂ ದೇವಾಧಿದೇವೋಽಸೌ ವಿಷ್ಣುರ್ವಾಮನತಾಂ ಗತಃ ।

೪೦೭. ಬಲಿಸಂಸ್ಥಂ ಚ ತ್ರೈಲೋಕ್ಯಂ ದೃಷ್ಟ್ವಾ ದೇವಃ ಪುರಂದರಃ ।
ಮೇರುಸಂಸ್ಥ ಯಯೌ ಶಕ್ರಃ ಸ್ವಮಾತುರ್ನಿಲಯಂ ಶುಭಂ ॥

೪೦೮. ಸಮೀಪಂಪ್ರಾಪ್ಯ ಮಾತುಶ್ಚ ಕಥಯಾಮಾಸ ತಾಂ ಗಿರಂ ।
ಆದಿತ್ಯಾಶ್ಚ ರಣೇ ಸರ್ವೇ ದಾನವೇನ ಪರಾಜಿತಾಃ ।

೪೦೯. ಯದ್ಯೇವಂ ಪುತ್ರ ಯುಷ್ಮಾಭಿರ್ನಶಕ್ಯೋ ಹಂತುಮಾಹವೇ ।
ಬಲಿರ್ವಿರೋಚನಸುತಃ ಸರ್ವೈಶ್ಚೈವ ಮರುದ್ಗಣೈಃ ॥

೪೧೦. ಸಹಸ್ರಶಿರಸಾ ಶಕ್ಯಂ ಕೇವಲಂ ಹಂತುಮೇವ ಹಿ ।
ತೇನೈಕೇನ ಸಹಸ್ರಾಕ್ಷ ಹಂತುಂ ನಾನ್ಯೇನ ಶಕ್ಯತೇ ॥

೪೧೧. ತದ್ವತ್ಪೃಚ್ಛಾಧ್ಯ ಪಿತರಂ ಕಶ್ಯಪಂ ಬ್ರಹ್ಮವಾದಿನಮ್ ।
ಪರಾಜಯಾರ್ಥಂ ದೈತ್ಯಸ್ಯ ಬಲೇಸ್ತಸ್ಯ ಮಹಾತ್ಮನಃ ॥

೪೧೨. ತತೋ ದೇವಾಸ್ಸಹಸುರಾಃ ಸಂಪ್ರಾಪ್ತಾಃ ಕಾಶ್ಯಪಾಂತಿಕಂ ।
ತತ್ರಾಪಶ್ಯಂಶ್ಚ ಮಾರೀಚಂ ಮುನಿಂ ದೀಪ್ತ ತಪೋನಿಧಿಂ ॥

೪೧೩. ಆದ್ಯಂ ದೇವಗುರುಂ ದಿವ್ಯಂ ಪ್ರದೀಪ್ತಂ ಬ್ರಹ್ಮತೇಜಸಾ ।
ತೇಜಸಾ ಭಾಸ್ಕರಾಕಾರಂ ಸ್ಥಿತಮಗ್ನಿಶಿಖೋಪಮಂ ॥

೪೧೪. ಅಥ ಪ್ರಣಮ್ಯ ತೇ ದೇವಾಃ ಸಹಾದಿತ್ಯಾಃ ಸುರರ್ಷಭಾಃ ।
ಊಚುಃ ಪ್ರಾಂಜಲಯಸ್ಸರ್ವೇ ಬ್ರಹ್ಮಣ್ಯಾಃ ಶಿವಮಾನಸಾಃ ॥

೪೧೫. ಅಜೇಯೋ ಯುಧಿ ಶಕ್ರೇಣ ಬಲಿರ್ದೈತ್ಯೋ ಬಲಾಧಿಕಃ ।
ತಸ್ಮಾದ್ವಿಧತ್ತ ನಃ ಶ್ರೇಯೋ ದೇವಾನಾಂ ಪುಷ್ಟಿವರ್ಧನಂ
ಶ್ರುತ್ವಾ ತು ವಚನಂ ತೇಷಾಂ ಪುತ್ರಾಣಾಂ ಕಶ್ಯಪಃ ಪ್ರಭುಃ।

೪೧೬. ಕುರುಧ್ವಂ ಗಮನೇ ಬುದ್ಧಿಂ ಬ್ರಹ್ಮಲೋಕಾಯ ಲೋಕಕೃತ್
ಕಥಯಿಷ್ಯತ್ಯುಪಾಯಂ ವೋ ಯಥಾ ಜೇಷ್ಯಥ ದೈತ್ಯಪಂ ।

೪೧೭. ಶಕ್ರ ಗಚ್ಛಾಮ ಸದನಂ ಬ್ರಹ್ಮಣಃ ಪರಮಾದ್ಭುತಂ ।
ಯಥಾ ಪರಾಜಯಂ ಸರ್ವೇ ಬ್ರಹ್ಮಣಃ ಖ್ಯಾತುಮುದ್ಯತಾಃ ।

೪೧೮. ಸಹಾದಿತ್ಯಾಸ್ತತೋ ಯಾತಾಃ ದೇವಾಃ ಕಾಶ್ಯಪಮಾಶ್ರಮಂ ।
ಪ್ರಸ್ಥಿತಾ ಬ್ರಹ್ಮಸದನಂ ಬ್ರಹ್ಮರ್ಷಿಗಣ ಸೇವಿತಂ ॥

ಋಷಿಗಳು ಮತ್ತು ರೋಮಹರ್ಷಣರಿಗೆ ಪ್ರಶ್ನೆ ಮಾಡುತ್ತಾರೆ. ''ರೋಮಹರ್ಷಣರೇ, ಬಲಿಚಕ್ರವರ್ತಿಯಿಂದ ಪರಾಜಿತರಾದ ದೇವತೆಗಳು ಏನು ಮಾಡಿದರು? ಮತ್ತು ದೇವಾಧಿದೇವನಾದ ಪರಮಾತ್ಮನು ಏತಕ್ಕೆ ಮತ್ತು ಹೇಗೆ ವಾಮನರೂಪವನ್ನು ಪಡೆದನು?

**ರೋಮಹರ್ಷಣ :** ದೇವೇಂದ್ರನು, ಮೂರು ಲೋಕದಮೇಲೆ ಬಲಿಚಕ್ರವರ್ತಿಯ ಆಧಿಪತ್ಯವು ಆದನಂತರ ಖಿನ್ನನಾಗಿ ಮೇರುಪರ್ವತದ ಮಧ್ಯದಲ್ಲಿಯ ತನ್ನ ತಾಯಿಯ ಮನೆಗೆ ತೆರಳಿದನು. ತಾಯಿಯ ಸನಿಹದಲ್ಲಿ ಬಂದು ದೇವತೆಗಳೆಲ್ಲರೂ ತಾವು ಪರಾಜಿತರಾದ ಸಾದ್ಯಂತ ವರ್ತಮಾನವನ್ನು ವೇದ್ಯಪಡಿಸಿದರು.

**ಅದಿತಿಯು :** ಎಲ್ಲ ಮರುದ್ಗಣಗಳಿಂದೊಡಗೂಡಿದ ನೀವು, ಯುದ್ಧದಲ್ಲಿ ಬಲಿಚಕ್ರವರ್ತಿಯನ್ನು ನಾಶಮಾಡಲು ಅಸಮರ್ಥರಾದ ಮೇಲೆ ಆತನನ್ನು ನಾಶಮಾಡಲು ಸಹಸ್ರಶೀರ್ಷನಾದ ಆ ಪರಮಾತ್ಮನು ಸಮರ್ಥನಾಗಿರುವನು. ಆ ಕಾರ್ಯ ಸಿದ್ಧವಾಗಬೇಕಾದರೆ ದೈತ್ಯರನ್ನು ಪರಾಜಯಗೊಳಿಸುವ ಉಪಾಯವನ್ನು ಕಂಡುಹಿಡಿಯಲು ಬ್ರಹ್ಮವಾಯ್ವಾದಿಗಳೆಲ್ಲರೂ ಕಶ್ಯಪ ಋಷಿಗಳ ಹತ್ತಿರಕ್ಕೆ ಹೋಗಿರಿ'' ಎಂದು ಅದಿತಿದೇವತೆಯು ಹೇಳಿದಳು. ಅದಿತಿದೇವಿಯ ಆಜ್ಞೆ ಪಡೆದ ನಂತರ ಎಲ್ಲ ದೇವತೆಗಳು ಕಶ್ಯಪ ಋಷಿಯ ಹತ್ತಿರ ಪ್ರಾಪ್ತರಾದರು. ಕಶ್ಯಪ ಮಹರ್ಷಿಗಳು ಪ್ರಖರವಾದ ಬ್ರಹ್ಮ ತೇಜಸ್ಸಿನಂತೆ ರಾರಾಜಿಸುವರು. ಅಗ್ನಿಶಿಖೆಯಂತೆ ಮತ್ತು ಸೂರ್ಯನ ಪ್ರಖರವಾದ ತೇಜಸ್ಸಿನಂತೆ ತೇಜೋವಂತರೂ, ನಾರುಬಟ್ಟೆ ಧರಿಸಿ, ಕೃಷ್ಣಾಜಿನವನ್ನು ಹೊತ್ತುಕೊಂಡಿರುವದರಿಂದ ಸಾತ್ವಿಕವಾದ ತೇಜಸ್ಸಿನಿಂದ ಕೂಡಿದವರೂ ಆಗಿದ್ದರು. ಇಂಥ ಮಹರ್ಷಿಗಳನ್ನು ಪ್ರಣಮಿಸಿ ಆದಿತ್ಯರಿಂದೊಡಗೂಡಿದ ದೇವತೆಗಳು ವಿಜ್ಞಾಪಿಸಿಕೊಂಡರು - ''ಅತ್ಯಂತ ಬಲಶಾಲಿ ಯಾದ ಬಲಿಯನ್ನು ಯುದ್ಧದಲ್ಲಿ ಇಂದ್ರನು ಗೆಲ್ಲಲು ಸಮರ್ಥವಾಗಿರುವನು. ಆದುದರಿಂದ ದೇವತೆಗಳಾದ ನಮಗೆಲ್ಲ ಮಂಗಲವಾಗುವಂತಹ ಉಪಾಯವನ್ನು ತಾವು ಹೇಳಿಕೊಡಬೇಕು'' ಎಂದು ಹೇಳಿರುವ ಪುತ್ರರ ಮಾತನ್ನು ಕೇಳಿ ಕಶ್ಯಪ ಮಹರ್ಷಿಗಳು ಇಂತೆಂದರು. ''ನೀವು ಬ್ರಹ್ಮಲೋಕಕ್ಕೆ ಹೋಗುವ ಮನಸ್ಸು ಮಾಡಿರಿ, ಸಮಸ್ತ ಬ್ರಹ್ಮಾಂಡವನ್ನು ಸೃಜಿಸಿದ ಆತನು ನಿಮಗೆ ತಕ್ಕ ಉಪಾಯವನ್ನು ಹೇಳುವನು.''

೪೯. ತೇ ಮುಹೂರ್ತೇನ ಸಂಪ್ರಾಪ್ತಾ ಬ್ರಹ್ಮಲೋಕಂ ಸುವರ್ಚಸಃ ।
ದಿವ್ಯೈಃ ಕಾಮಗಮೈರ್ಯಾನೈರ್ಯಥಾರ್ಹೈಃ ಸುಮಹಾಬಲೈಃ

೫೦. ಬ್ರಹ್ಮಾಣಂ ಪ್ರಷ್ಟುಮಿಚ್ಛಂತಸ್ತಪೋರಾಶಿಂ ತಮವ್ಯಯಂ ।
ಅಧ್ಯಗಚ್ಛಂತ ವಿಸ್ತೀರ್ಣಾಂ ಬ್ರಹ್ಮಣಃ ಪರಮಾಂ ಸಭಾಂ ॥

೫೧. ಷಟ್‌ಪದೋದ್ಗೀತಮಧುರಾಂ ಸಾಮಗೈಸ್ಸಮುದೀರಿತಾಂ ।
ಶ್ರೇಯಸ್ಕರೀಮಮಿತ್ರಘ್ನೀಂ ದೃಷ್ಟ್ವಾ ಸಂಜಹೃಷುಸ್ತದಾ ॥

೫೨. ಜಪಹೋಮಪರಾನ್ಮುಖ್ಯಾನ್ ದದೃಶುಃ ಕಾಶ್ಯಪಾತ್ಮಜಾಃ
ತಸ್ಯಾಂ ಸಭಾಯಾಮಾಸ್ತೇ ಸ ಬ್ರಹ್ಮಾ ಲೋಕ ಪಿತಾಮಹಃ

೪೨೩. ಚರಾಚರಗುರುಃ ಶ್ರೀಮಾನ್ವಿದ್ಯಯಾ ದೇವಮಾಯಯಾ ।
ಉಪಾಸತೇಯಂ ತತ್ರೈವ ಪ್ರಜಾನಾಂ ಪತಯೋ ವಿಭುಂ ॥

೪೨೪. ದಕ್ಷಃ ಪ್ರಚೇತಾ ಪುಲಹೋ ಮರೀಚಿಶ್ಚ ದ್ವಿಜೋತ್ತಮಾಃ ।
ಭೃಗುರತ್ರಿರ್ವಸಿಷ್ಠಶ್ಚ ಗೌತಮೋ ನಾರದಸ್ತಥಾ ।

೪೨೫. ವಿದ್ಯಾಸ್ತಥಾಂತರಿಕ್ಷಂ ಚ ವಾಯುಸ್ತೇಜೋ ಜಲಂ ಮಹೀ ।
ಶಬ್ದಃ ಸ್ಪರ್ಶಶ್ಚ ರೂಪಂ ಚ ರಸೋ ಗಂಧಸ್ತಥೈವ ಚ

೪೨೬. ದಿವಾಕರಶ್ಚ ಸೋಮಶ್ಚ ದಿನಂ ರಾತ್ರಿಸ್ತಥೈವ ಚ ।
ಅರ್ಧಮಾಸಾಶ್ಚ ಮಾಸಾಶ್ಚ ಋತವಃ ಷಟ್ ಚ ಸಂಸ್ಥಿತಾಃ ।

೪೨೭. ತಾಂ ಪ್ರವಿಶ್ಯ ಸಭಾಂ ದಿವ್ಯಾಂ ಬ್ರಹ್ಮಣಸ್ಸರ್ವಕಾಮದಾಂ ।
ಕಶ್ಯಪಃ ತ್ರಿದಶೇಶಶ್ಚ ಪುತ್ರೋ ಧರ್ಮಭೃತಾಂ ವರಃ ॥

೪೨೮. ಬ್ರಹ್ಮಾಣಂ ಪ್ರಾಪ್ಯ ತೇ ಸರ್ವೇ ಪರಮಾಸನಮಾಸ್ಥಿತಂ ।
ಶಿರೋಭಿಃ ಪ್ರಣತಾ ದೇವಂ ದೇವಾ ಬ್ರಹ್ಮರ್ಷಿಭಿಸ್ಸಹ

೪೨೯. ತತಸ್ಸಂಸ್ಪೃಶ್ಯ ಚರಣೌ ನಿಯತಾಃ ಪರಮಾತ್ಮನಃ ।
ವಿಮುಕ್ತಾಸ್ಸರ್ವಪಾಪೇಭ್ಯಃ ಸರ್ವೇ ವಿಗತ ಕಲ್ಮಷಾಃ

೪೩೦. ದೃಷ್ಟ್ವಾತು ತಾನ್ ಸುರಾನ್ ಸರ್ವಾನ್ ಕಾಶ್ಯಪೇನ ಸಹಾಗತಾನ್।
ಆಹ ಬ್ರಹ್ಮಾ ಮಹಾತೇಜಾಃ ದೇವಾನಾಂ ಪ್ರಭುರೀಶ್ವರಃ

ಆತನ ಸಲಹೆಯಂತೆ ನೀವು ದೈತ್ಯಶ್ರೇಷ್ಠನಾದ ಬಲಿಚಕ್ರವರ್ತಿಯನ್ನು ಗೆಲ್ಲಲು ಸಮರ್ಥರಾಗಿರುವಿರಿ. ಇಂದ್ರನೇ, ನಾವೆಲ್ಲರು ಬ್ರಹ್ಮದೇವರ ಆಸ್ಥಾನಕ್ಕೆ ಹೋಗೋಣ ಎಂದು ದೇವತೆಗಳೆಲ್ಲರೂ ಕಶ್ಯಪ ಋಷಿಗಳ ಆಜ್ಞೆ ಪಡೆದು ಬ್ರಹ್ಮಸದನಕ್ಕೆ ಹೊರಡುವವರಾದರು. ಅಲಂಕೃತವಾದ ವೇಗವೆತ್ತರವಾದ ವಾಹನಗಳಿಂದ ಅವರು ತಪೋನಿಧಿಯಾದ ಬ್ರಹ್ಮದೇವರ ಹತ್ತಿರಕ್ಕೆ ಪ್ರಾಪ್ತರಾದರು. ಬ್ರಹ್ಮದೇವರ ವಿಸ್ತೃತವಾದ ಸಭಾಮಂದಿರದಲ್ಲಿ ಸುಮಧುರ ಸಂಗೀತ ಕೇಳಿಬರುತ್ತಲಿತ್ತು. ಸಾಮವೇದದ ಸುಂದರ ನಿನಾದ ಸುತ್ತಲೂ ಪ್ರಸರಿಸುತ್ತಲಿದ್ದಿತು. ಋಗ್ವೇದತಜ್ಞರು ಪದ, ಕ್ರಮ ನಿಯಮಕ್ಕನುಸರಿಸಿ ಋಗ್ವೇದದ ಪಾಠವನ್ನು ನಡೆಯಿಸಿದ್ದರು. ವೇದಾರ್ಥದ ವಿಚಾರವು ಪರಸ್ಪರ ಪಂಡಿತರಲ್ಲಿ ಪ್ರಚಲಿತವಿದ್ದಿತು. ಯಜ್ಞವಿಧಾನ, ಶಿಕ್ಷಾ, ಛಂದಸ್ಸು ಮೊದಲಾದ ವೇದಾಂಗಗಳ ತಜ್ಞರು ಮತ್ತು ಹಲವಾರು ದಾರ್ಶನಿಕರು ತತ್ವಾರ್ಥಚಿಂತನೆಯ ನಿಮಿತ್ತ ಚರ್ಚೆ ನಡೆಯಿಸುತ್ತಿದ್ದರು. ಜಪ ಹೋಮಗಳ ಸಂಭ್ರಮ ಮತ್ತೊಂದೆಡೆಯಲ್ಲಿ ನಡೆದಿತ್ತು. ಇಂತು ಕಾರ್ಯಕ್ರಮಗಳಿಂದೊಡಗೂಡಿದ ಮಹಾಸಭೆಯಲ್ಲಿ ಚರಾಚರ ವಸ್ತುಗಳಿಗೆ ನಿಯಾಮಕನಾದ ಬ್ರಹ್ಮದೇವನು ಸುಂದರವಾದ ಆಸನದ ಮೇಲೆ ವಿರಾಜಮಾನನಾಗಿದ್ದನು.

ದಕ್ಷ, ಪ್ರಚೇತಸ, ಪುಲಹ, ಮರೀಚಿ, ಭೃಗು, ವಸಿಷ್ಠ, ಗೌತಮ, ನಾರದ ಮೊದಲಾದ ಋಷಿಗಳು ಮತ್ತು ವಿದ್ಯೆ, ಅಂತರಿಕ್ಷ, ವಾಯು, ತೇಜಸ್ಸು, ಭೂಮಿ ಮೊದಲಾದವರು ಅಲ್ಲದೆ ಪ್ರಕೃತಿ ವಿಕಾರಗಳಾದ ಶಬ್ದಸ್ಪರ್ಶಾದಿ ತನ್ಮಾತ್ರಾಗುಣಗಳು ಸಾಂಗೋಪಾಂಗವಾದ ವೇದಾಧಿಪತಿಗಳು ಬ್ರಹ್ಮದೇವನನ್ನು ಉಪಾಸಿಸುತ್ತಲಿದ್ದರು. ಧರ್ಮಾರ್ಥ ಕಾಮಕ್ರೋಧಗಳು, ಶುಕ್ರ, ಬೃಹಸ್ಪತಿ, ಬುಧ ಮೊದಲಾದ ಗ್ರಹಗಳು ಮರುದ್ಗಣದವರು, ವಸುಗಳು, ವಿಶ್ವಕರ್ಮನು, ಸೂರ್ಯ ಚಂದ್ರರು ಎಲ್ಲರೂ ಎಲ್ಲ ತೆರನಾದ ಬಾಹ್ಯ ಮತ್ತು ಆಂತರಿಕ ಶೋಭೆಯಿಂದ ಒಡಗೂಡಿದ ಸಭೆಯಲ್ಲಿ ಪ್ರವೇಶಿಸಿ, ಬ್ರಹ್ಮದೇವರನ್ನು ಸಂದರ್ಶಿಸಿ, ತಲೆತಗ್ಗಿಸಿ ನಮಸ್ಕರಿಸಿ, ಬ್ರಹ್ಮದೇವನ ಚರಣಸ್ಪರ್ಶ ಮಾಡಿ ತಮ್ಮನ್ನು ಕೃತಾರ್ಥರನ್ನಾಗಿಯೂ, ಪುನೀತರನ್ನಾಗಿಯೂ ಮಾಡಿಕೊಂಡರು. ಹೀಗೆ ವಿನಯನಮ್ರರಾಗಿ ಆಗಮಿಸಿದ ಕಶ್ಯಪ ಋಷಿಗಳಿಂದ ಕೂಡಿದ ದೇವತೆಗಳನ್ನು ನೋಡಿ ದೇವತೆಗಳಲ್ಲಿ ಶ್ರೇಷ್ಠನಾದ ಮತ್ತು ತೇಜೋಮೂರ್ತಿಯಾದ ಬ್ರಹ್ಮದೇವನು ಇಂತೆಂದನು.

ವಾಮನ ಮಹಾಪುರಾಣದಲ್ಲಿ ಬ್ರಹ್ಮದೇವರ ದರ್ಶನ ಎಂಬ ಇಪ್ಪತ್ನಾಲ್ಕನೇಯ ಅಧ್ಯಾಯವು ಮುಗಿದುದು



## ಕಶ್ಯಪರಿಗೆ ವರ-ದೇವತೆಗಳಿಗೆ ಹರ್ಷ

**ಅಧ್ಯಾಯ - ೨೫**

೪೩೧. ಯದರ್ಥಮಿಹ ಸಂಪ್ರಾಪ್ತಾ ಭವಂತಃ ಸರ್ವ ಏವ ಹಿ ।
ಚಿಂತಯಾಮ್ಯಹಮವ್ಯಗ್ರಮೇತದರ್ಥಂ ಮಹಾಬಲಾಃ ॥

೪೩೨. ಭವಿಷ್ಯತಿ ಚ ವಸ್ಸರ್ವಂ ಕಾಂಕ್ಷಿತಂ ಯತ್ಸುರೋತ್ತಮಾಃ ।
ಬಲೇರ್ದಾನವಮುಖ್ಯಸ್ಯ ಯೋಽಸ್ಯ ಜೇತಾ ಭವಿಷ್ಯತಿ ॥

೪೩೩. ನ ಕೇವಲಂ ಸುರಾರೀಣಾಂ ಗತಿರ್ಮಮ ಸ ವಿಶ್ವಕೃತ್ ।
ತ್ರೈಲೋಕ್ಯಸ್ಯಾಪಿ ನೇತಾ ಚ ದೇವಾನಾಮಪಿ ಸ ಪ್ರಭುಃ ॥

೪೩೪. ಯಃ ಪ್ರಭು ಸ್ಸರ್ವಲೋಕಾನಾಂ ವಿಶ್ವಂಯಶ್ಚ ಸನಾತನಂ ।
ಪೂರ್ವಜಂ ಯಂ ಮಮ ಪ್ರಾಹುರಾದಿದೇವಂ ಸನಾತನಂ ॥

೪೩೫. ತಂ ದೇವಾಶ್ಚ ಮಹಾತ್ಮನಂ ನ ವಿದುಃ ಕೋಽಸ್ಯಸಾವಿತಿ ।
ದೇವಾನಸ್ಮಾಂಶ್ಚ ವಿಶ್ವಂ ಚ ಸ ವೇತ್ತಿ ಪುರುಷೋತ್ತಮಃ ।

೪೩೬. ತಸ್ಯೈವತು ಪ್ರಸಾದೇನ ಪ್ರವಕ್ಷ್ಯೇ ಪರಮಾಂ ಗತಿಂ ।
ಯದಿ ಯೋಗಂ ಸಮಾಸ್ಥಾಯ ತಪಶ್ಚರತಿ ದುಶ್ಚರಂ ।

೪೩೭. ಕ್ಷೀರೋದಸ್ಯೋತ್ತರೇ ಕೂಲೇ ಉದೀಚ್ಯಾಂ ದಿಶಿ ವಿಶ್ವಕೃತ್ ।
ತತಃ ಶ್ರೋಷ್ಯಥ ಸಂಘುಷ್ಟಾಂ ಮೇಘ ಗಂಭೀರನಿಸ್ವನಾಂ ॥

೪೩೮. ರಕ್ತಾಂ ಪುಷ್ಪಾಕ್ಷರಾಂ ರಮ್ಯಾಮಭಯಾಂ ಸರ್ವದಾ ಶಿವಾಂ ।
ವಾಣೀಂ ಪರಮ ಸಂಸ್ಕಾರಾಂ ವದತಾಂ ಬ್ರಹ್ಮವಾದಿನಾಂ ।

೪೩೯. ದಿವ್ಯಾಂ ಸತ್ಯಾಕರಾಂ ಸತ್ಯಾಮ್ ಸರ್ವಕಲ್ಮಷನಾಶಿನೀಂ ।
ಸರ್ವದೇವಾಧಿದೇವಶ್ಚ ತತೋಽಸೌ ಭವಿತಾತ್ಮನಾ ॥

೪೪೦. ತದ್ವ್ರತಸ್ಯ ಸಮಾಪ್ತ್ಯಾಂತು ಯೋಗವ್ರತ ವಿಸರ್ಜನೇ ।
ಅಮೋಘಂ ತಸ್ಯ ದೇವಸ್ಯ ವಿಶ್ವತೇಜೋ ಮಹಾತ್ಮನಃ ।

೪೪೧. ಕಶ್ಯಪಾಯ ವ ರಂ ದೇವಾ ದದಾಮಿ ವರದ ಸ್ಥಿತಾಃ ।
ಸ್ವಾಗತಂ ಚ ಸುರಶ್ರೇಷ್ಠಾ ಮತ್ಸಮೀಪಮುಪಾಗತಾಃ ॥

**ಬ್ರಹ್ಮದೇವನು** : ನೀವೆಲ್ಲರೂ ಏತಕ್ಕೋಸ್ಕರವಾಗಿ ಇಲ್ಲಿಗೆ ಬಂದಿರುವಿರಿ ಎಂಬ ವಿಷಯವನ್ನು ಸಾವಧಾನವಾಗಿ ನಾನು ಆಲೋಚಿಸುತ್ತಿರುವೆನು. ಎಲೋ ದೇವತಾ ಶ್ರೇಷ್ಠರುಗಳಿರಾ, ನಿಮ್ಮ ಇಚ್ಛಿತವು ಸಂಪೂರ್ಣವಾಗಿ ಸಿದ್ಧಿಸುವದರಲ್ಲಿ ಸಂದೇಹವಿಲ್ಲ.

ಈ ದೈತ್ಯಶ್ರೇಷ್ಠನಾದ ಬಲಿ ಚಕ್ರವರ್ತಿಯನ್ನು ಸೋಲಿಸುವವನು ಅವಶ್ಯವಾಗಿ ಜನಿಸುವನು. ಆತನು ದೈತ್ಯರಿಗಷ್ಟೇ ಅಲ್ಲದೇ ಈ ಮೂರು ಲೋಕಕ್ಕೂ ನನಗೂ ಮತ್ತು ಇನ್ನುಳಿದ ದೇವತೆಗಳಿಗೂ ಆತನೇ ಪ್ರಭುವಾಗಿರುವನು. ಯಾವಾತನು ಎಲ್ಲ ಲೋಕಗಳಿಗೂ ಅಧಿನಾಯಕನೋ, ಯಾವನು ಸಮಸ್ತವನ್ನು ಸೃಷ್ಟಿಸಿದ ನನ್ನ ಉದಯಕ್ಕೂ ಕಾರಣೀಭೂತನೋ ಅಂಥ ಸನಾತನ ಪುರುಷನನ್ನು ಸರಿಯಾದ ರೀತಿಯಲ್ಲಿ ತಿಳಿಯಲು ಯಾರು ತಾನೆ ಸಮರ್ಥರಾದಾರು? ಆದರೆ ಆತನು ಮಾತ್ರ ದೇವತೆಗಳನ್ನೂ, ತನ್ನನ್ನೂ ಸಮಸ್ತ ವಿಶ್ವವನ್ನೂ, ಸಾಕಲ್ಯೇನ ತಿಳಿಯಲು ಸಮರ್ಥನು. ಆತನ ಅನುಗ್ರಹ ಬಲದಿಂದಲೇ ನಿಮಗೆ ನಾನು ಪರಮ ಶ್ರೇಷ್ಠವಾದ ವಿಷಯವನ್ನು ಹೇಳುತ್ತೇನೆ. ಒಂದು ವೇಳೆ ಕಶ್ಯಪ ಋಷಿಗಳು ಯೋಗ ಸಮಾಧಿಸ್ಥರಾಗಿ ತಪಸ್ಸನ್ನಾಚರಿಸಿದರೆ ಕ್ಷೀರಸಮುದ್ರದ ಉತ್ತರ ದಂಡೆಯಲ್ಲಿ ಮೇಘಗಂಭೀರವಾದ ಬ್ರಹ್ಮವಾದಿಗಳ ಸಮ್ಮತವಾದ ಒಂದು ವಾಣಿಯು ಉದ್ಭವಿಸುವದು. ಅದು ಏನೆಂದರೆ ''ಎಲ್ಲ ದೇವಾಧಿದೇವತೆಗಳ ಅಧಿನಾಯಕನಾದ ಪರಮಾತ್ಮನು ಉದ್ಭವಿಸಿ ಬರುವನು. ಆ ಕಶ್ಯಪ ಮಹರ್ಷಿಗಳ ತಪಸ್ಸಿನ ಸಮಾಪ್ತಿಯ ನಂತರ ಆ ಮಹಾ ಮಹಿಮನಾದ ಪರಮಾತ್ಮನ ದಿವ್ಯ ತೇಜಸ್ಸು ಉದಿಸಿ ಆದೇಶ ಕೊಡುವದು. ''ಹೇ ದೇವತೆಗಳೇ, ನಿಮಗೆ ಸ್ವಾಗತವಿರಲಿ. ಕಶ್ಯಪರಿಗೆ ನಾನು ವರವನ್ನು ಕೊಡುವೆನು'' ಎಂಬ ದೈವೀ ವಾಣಿಯನ್ನು ಕೇಳಿದಾಕ್ಷಣ ಅದಿತಿ ಕಶ್ಯಪರು ದೇವರಿಂದ ವರವನ್ನು ಪಡೆದರು. ''ನೀನೇ ನಮಗೆ ಪುತ್ರನಾಗಿ ಜನಿಸು'' ಎಂದು ಅದಿತಿ ಕಶ್ಯಪರು ವರ ಕೇಳಿಕೊಂಡರು. ''ಹಾಗೇ ಆಗಲಿ'' ಎಂದು ದೇವರು ಉತ್ತರ ಕೊಟ್ಟನಲ್ಲದೆ ದೇವತೆಗಳಿಗೂ ಯಥೋಚಿತ ಸಮಾಧಾನವನ್ನು ಮಾಡಿ ಅವರೆಲ್ಲರನ್ನೂ ಬೀಳ್ಕೊಂಡನು. ದೇವರಿಂದ ವರಪಡೆದ ದೇವತೆಗಳು ಆತನ ಅಜ್ಞೆಯ ಮೇರೆಗೆ ಸಂತುಷ್ಟ ಚಿತ್ತರಾದವರಾಗಿ ತಮ್ಮ ತಮ್ಮ ಸ್ಥಳಗಳಿಗೆ ತೆರಳಿದರು. ಅನಂತರ ದೇವತೆಗಳು ಶ್ವೇತದ್ವೀಪದ ಪಶ್ಚಿಮ ಭಾಗದಲ್ಲಿ ಇರುವ ಕ್ಷೀರ ಸಮುದ್ರ ದಂಡೆಯಲ್ಲಿ ಕೂಡಲೇ ಬಂದು ಆಸೀನರಾದರು. ಅನಂತರ ಬ್ರಹ್ಮದೇವರ ಆಜ್ಞೆಯಂತೆ ಸಾಗರ, ಪರ್ವತ ಮತ್ತು ನದಿಗಳನ್ನು ಕ್ರಮವಾಗಿ ದಾಟಿ ಎಲ್ಲ ಸತ್ವಗಳಿಂದಲೂ ವಿದೂರವಾದ, ಘೋರವಾದ ಅಂಧಕಾರವನ್ನು ಕಂಡರು. ಸೂರ್ಯನ ಕಿರಣಗಳ ಸಂಪರ್ಕವಿಲ್ಲದ ಅಮೃತಮಯವಾದ ಆ ಸ್ಥಾನವನ್ನು ಪಡೆದು

ಮಹಾತ್ಮರಾದ ಕಶ್ಯಪ ಮಹರ್ಷಿಗಳು ತಪಸ್ಸಿನ ಸಲುವಾಗಿ ವ್ರತ ದೀಕ್ಷೆಯನ್ನು ಪಡೆದು ಆ ದೇವಾಧಿದೇವನ ಸಂಪ್ರೀತಿಯ ಸಲುವಾಗಿ ಸಹಸ್ರ ವರ್ಷಗಳ ಪರ್ಯಂತರ ಅಖಂಡವಾದ ಬ್ರಹ್ಮಚರ್ಯದಿಂದ ತಪಸ್ಸನ್ನು ಆಚರಿಸಿದನು. ಆತನನ್ನು ಅನುಸರಿಸಿದ ದೇವತೆಗಳೂ ತಪಸ್ಸನ್ನಾಚರಿಸಿದರು. ಕಶ್ಯಪ ಮಹರ್ಷಿಗಳು ದೇವರ ಪ್ರೀತ್ಯರ್ಥವಾಗಿ ಪರಮ ಮಂಗಲಕರವಾದ ಸ್ತೋತ್ರವನ್ನು ಮಾಡಿದರು. ಆ ಸ್ತೋತ್ರವು ಪ್ರಸಿದ್ಧವಾದುದು ಇದೆ.

೪೪೨. ತತೋದಿತಿಃ ಕಶ್ಯಪಶ್ಚ ಗೃಹ್ಣೀಯಾತಾಂ ವರಂ ತದಾ ।
ಪ್ರಣಮ್ಯ ಶಿರಸಾ ಪಾದೌ ತಸ್ಮೈ ದೇವಾಯ ಧೀಮತೇ ॥

೪೪೩. ಭಗವಾನೇವ ನಃ ಪುತ್ರೋ ಭವತ್ವಿತಿ ಪ್ರಸೀದ ನಃ ।
ಉಕ್ತಶ್ಚ ಪರಯಾ ವಾಚಾ ತಥಾಸ್ತ್ವಿತಿ ಸ ವಕ್ಷ್ಯತಿ ।

೪೪೪. ದೇವಾ ಬ್ರುವಂತು ತೇ ಸರ್ವೇ ಕಶ್ಯಪೋದಿತಿರೇವ ಚ ।
ತಥಾಸ್ತ್ವಿತಿಚ ಶ್ರೀಮಾನ್ವಕ್ಷ್ಯತೇ ಸರ್ವಲೋಕಕೃತ್ ।

೪೪೫. ತಸ್ಮಾದ್ದೇವಾದ್ಗೃಹೀತ್ವೈವಂ ವರಂ ತ್ರಿದಶಸತ್ತಮಾಃ ।
ಕೃತಕೃತ್ಯಾಸ್ತತಃ ಸರ್ವೇ ಗಚ್ಛದ್ವಂ ಸ್ವಂಸ್ವಮಾಲಯಂ
ತಥಾಸ್ತ್ವಿತಿ ಸುರಾಸ್ಸರ್ವೇ ಪ್ರಣಮ್ಯ ಶಿರಸಾ ಪ್ರಭುಂ ॥

೪೪೫. ಶ್ವೇತದ್ವೀಪಂ ಸಮುದ್ದಿಶ್ಯ ಗತಾಃ ಸೌಮ್ಯಾಂ ದಿಶಂ ಪ್ರತಿ ।
ತೇ ಚಿರೇಣೈವ ಸಂಪ್ರಾಪ್ತಾಃ ಕ್ಷೀರೋದ ಸರಿತಾಂ ಪತಿಂ ।

೪೪೬. ಯಥಾದಿಷ್ಟಂ ಭಗವತಾ ಬ್ರಹ್ಮಣಾ ಸತ್ಯವಾದಿನಾ ।
ತೇ ಕ್ರಾಂತ್ವಾ ಸಾಗರಾನ್ಸರ್ವಾನ್ಪರ್ವತಾಂಶ್ಚ ಸಕಾನನಾನ್ ।

೪೪೭. ನದೀಶ್ಚ ವಿವಿಧಾಃ ಪುಣ್ಯಾಃ ಪೃಥಿವ್ಯಾಂ ತೇ ಸುರೋತ್ತಮಾಃ ।
ಅಪಶ್ಯಂತ ತಮೋ ಘೋರಂ ಸರ್ವಸತ್ವ ವಿವರ್ಜಿತಂ ।

೪೪೮. ಅಭಾಸ್ಕರ ಮರ್ಯಾದಂ ತಮಸಾ ಸರ್ವತೋ ವೃತಂ ।
ಅಮೃತಂ ಸ್ಥಾನಮಾಸಾದ್ಯ ಕಶ್ಯಪೇನ ಮಹಾತ್ಮನಾ ।

೪೪೯. ದೀಕ್ಷಿತ್ವಾ ಕಶ್ಯಪೋ ದಿವ್ಯಂ ವ್ರತಂ ವರ್ಷಸಹಸ್ರಕಂ ।
ಪ್ರಸಾದಾರ್ಥಂ ಸುರೇಶಾಯ ತಸ್ಮೈ ಯೋಗಾಯ ಧೀಮತೇ ॥

೪೫೦. ನಾರಾಯಣಾಯ ದೇವಾಯ ಸಹಸ್ರಾಕ್ಷಾಯ ಭೂತಯೇ ।
ಬ್ರಹ್ಮಚರ್ಯೇಣ ಮೌನೇನ ಸ್ಥಾನವೀರಾಸನೇನ ಚ ॥

೪೫೧. ಕ್ರಮೇಣ ಚ ಸುರಾಸ್ಸರ್ವೇ ತಪೋಯೋಗಂ ಸಮಾಸ್ಥಿತಾಃ ।
ಕಶ್ಯಪಸ್ತತ್ರ ಭಗವಾನ್ ಪ್ರಸಾದಾರ್ಥಂ ಮಹಾತ್ಮನಃ ॥

ವಾಮನ ಮಹಾಪುರಾಣದಲ್ಲಿ ಕಶ್ಯಪರಿಗೆ ವರ-ದೇವತೆಗಳಿಗೆ ಹರ್ಷ ಎಂಬ
ಇಪ್ಪತ್ನಾಲ್ಕನೇಯ ಅಧ್ಯಾಯವು ಮುಗಿದುದು

—o—

## ಕಶ್ಯಪರ ಪ್ರಾರ್ಥನೆ

ಅಧ್ಯಾಯ - ೨೬

### ಓಂ ನಮೋ ಭಗವತೇ ವಾಸುದೇವಾಯ

ಏಕಶೃಂಗ ವೃಷಸಿಂಧೋ ವೃಷಾಕಪೇ ಸುರವೃಷ ಅವಾದಿಸಂಭವ ರುದ್ರ ಕಪಿಲ ವಿಶ್ವಕ್ಸೇನ ಸರ್ವಭೂತಪತೇ ಧ್ರುವ ಧರ್ಮ ವೈಕುಂಠ ವೃಷಾವರ್ತ ಅನಾದಿಮಧ್ಯನಿಧನ ಧನಂಜಯ ಶುಚಿಶ್ರವ ಪೃಶ್ನಿತೇಜಃ ನಿಜಜಯ ಅಮೃತಶಯ.

ಸನಾತನ ತ್ರಿಧಾಮನ್ ತುಷಿತ ಮಹಾತತ್ವ ಲೋಕನಾಥ ಪದ್ಮನಾಭ ವಿರಿಂಚೇ ಬಹುರೂಪ ಅಕ್ಷಯ ಅಕ್ಷರ ಹವ್ಯಭುಕ್ ಖಂಡಪರಶೋ ಶಕ್ರ ಮುಂಜಕೇಶ ಹಂಸ ಮಹಾದಕ್ಷಿಣ ಹೃಷೀಕೇಶ ಸೂಕ್ಷ್ಮ ಮಹಾನಿಯಮಧರ ವಿರಜಃ ಲೋಕಪ್ರತಿಷ್ಠ ಅರೂಪ ಅಗ್ರಜ ಧರ್ಮಜ ಧರ್ಮನಾಭ ಹವ್ಯಬುಕ್ ಗಭಸ್ತಿನಾಥ ಶತಕ್ರತುನಾಥ ಚಂದ್ರರಥ ಸೂರ್ಯತೇಜಃ ಸಮುದ್ರವಾಸಃ ಅಜ ಸಹಸ್ರಶಿರಃ ಸಹಸ್ರಪಾದ

ಅಯೋಮುಖ ಮಹಾಪುರುಷ ಪುರುಷೋತ್ತಮ ಸಹಸ್ರಬಾಹೋ ಸಹಸ್ರಮೂರ್ತೇ ಸಹಸ್ರಾಸ್ಯ ಸಹಸ್ರಸಂಭವ ವಿಶ್ವಂತ್ವಾಮಾಹುಃ ಅಗ್ರ್ಯ ಮಖೇಷು ಪ್ರಾಶಿತಾರಂ ಶತಧಾರಂ ಸಹಸ್ರಧಾರಂ ಬಭೂವ, ಭೂವಂದ್ಯ ಭೂನಾಥ ಭೃಗುಶ್ವಾಸಿ ಧರ್ಮೋಽಸಿ ಹೋತಾ ಪೋತಾ ಹಂತಾ ಮಂತಾ ನೇತಾ ಹೋಮಹೇತು ಸ್ತ್ವಮೇವ ಅಗ್ರ್ಯಶ್ಚಧಾಮ್ನಾ ತ್ವಮೇವ.

ಋಗ್ಭಿಃ ಸುಭಾಂಡಿಜ್ಯೋಽಸಿ ಸುಮೇಧೋಽಸಿ ಸಮಿಧಃ ತ್ವಮೇವ ಪತಿರ್ಗತಿರ್ದಾತಾ ತ್ವಮಸಿ ಮೋಕ್ಷೋಽಸಿ ಯೋಗ್ಯೋಽಸಿ ಧಾತಾ ಪರಮಯಜ್ಞೋಽಸಿ ಸೋಮೋಽಸಿ ದೀಕ್ಷಿತೋಽಸಿ ವಿಶ್ವಮಸಿ ಸ್ಥವಿರ ಹಿರಣ್ಯಗರ್ಭ ನಾರಾಯಣ ತ್ರಿನಯನ ಆದಿವರ್ಣ ಆದಿತ್ಯತೇಜಃ ಮಹಾಪುರುಷ ಪುರುಷೋತ್ತಮ ಆದಿದೇವ ಭೂಮಿಕ್ರಮ ತ್ರಿವಿಕ್ರಮ ಪ್ರಭಾಕರ ಶಂಭೋ ಸ್ವಯಂಭೂಃ ಭೂತಾದಿಮಹಾ ಭೂತೋಽಸಿ.

ವಿಶ್ವಭೂತ ವಿಶ್ವಂ ತ್ವಮೇವ ವಿಶ್ವಗೋಪ್ತಾಸಿ ಪವಿತ್ರಮಸಿ ವಿಶ್ವ ಭವ ಊರ್ಧ್ವಕರ್ಮನ್ ಅಮೃತ ದಿವಸ್ಪತೆ ವಾಚಸ್ಪತೆ ಘೃತಾರ್ಚಿ ಅನಂತ ಕರ್ಮವಂಶ ಪ್ರಾಗ್ವಂಶಧೀಃ ತ್ವಮಶ್ವಮೇಧಃ ವರಾರ್ಥಿನಾಂ ವರದೋಽಸಿ ತ್ವಂ

ಚತುರ್ಭಿಶ್ಚ ಚತುರ್ಭಿಶ್ಚ ದ್ವಾಭ್ಯಾಂ ಪಂಚಭಿರೇವಚ । ಹೂಯತೇಚ ಪುನರ್ದ್ವಾಭ್ಯಾಂ ತುಭ್ಯಂ ಹೋತ್ರಾತ್ಮನೇ ನಮಃ

### ಓಂ ನಮೋ ಭಗವತೇ ವಾಸುದೇವಾಯ

ಷಡ್ಗುಣ್ಯೈಶ್ವರ್ಯಸಂಪನ್ನನೂ ಸರ್ವತ್ರ ವ್ಯಾಪ್ತನೂ, ಗುಣಪೂರ್ಣತ್ವವಾಚಕವಾದ ಓಂಕಾರ ಶಬ್ದವಾಚ್ಯನೂ ಆದ ಆ ಪರಮಾತ್ಮನಿಗೆ ನನ್ನ ನಮಸ್ಕಾರವಿರಲಿ. **ಏಕಶೃಂಗ** ಸರ್ವೋನ್ನತವಾದವನೇ, **ವೃಷಸಿಂಧೋ** ಸುಕೃತಗಳಿಗೆ ಸಮುದ್ರದಂತೆ ಆಶ್ರಯನಾಗಿ ನಿಂತಿರುವವನೇ, **ವೃಷಾಕಪೇ** ಧರ್ಮವರಾಹ ರೂಪನೇ ಸುರವೃಷ, ಸುರಶ್ರೇಷ್ಠನೇ ಅಥವಾ ಸುರರೆಲ್ಲರಿಗೂ ಅಗ್ರೇಸರನೇ **ಅನಾದಿ ಸಂಭವ** ಶಾಶ್ವತನೇ **ರುದ್ರ** ಜಗನ್ನಿಗ್ರಹಕ್ಕೆ ತಕ್ಕ ಉಗ್ರತೆಯುಳ್ಳವನೇ ಅಥವಾ ನಿಗ್ರಹಾಧಿಕಾರವುಳ್ಳ ರುದ್ರನಿಗೂ ಅಂತರ್ಯಾಮಿ

ಯಾಗಿರುವವನೇ **ಕಪಿಲ** ಶ್ಯಾಮಮೂರ್ತಿಯೇ ಅಥವಾ ಯೋಗನಿಷ್ಠನಾದ ಕಪಿಲ ರೂಪಿಯೇ **ವಿಷ್ವಕ್ಸೇನ,** ದಾನವರ ಸೈನ್ಯವನ್ನು ನಾನಾ ಮುಖವಾಗಿ ಓಡಿಸುವವನೇ ಅಥವಾ ಎಲ್ಲಾ ಕಡೆಯಲ್ಲಿಯೂ ವಿಸ್ತಾರ ಹೊಂದಿರುವ ಅಧಿಕಾರ ವರ್ಗವುಳ್ಳವನೇ **ಸರ್ವ ಭೂತಪತೇ** ಸರ್ವ ಪ್ರಾಣಿಗಳಿಗೂ ರಕ್ಷಕನಾಗಿರುವವನೇ **ಧ್ರುವ** ನಿತ್ಯನೇ ಧರ್ಮ ಜಗದ್ಧಾರಕನೇ **ವೈಕುಂಠ** ತಡೆಯಿಲ್ಲದ ವ್ಯಾಪಾರವುಳ್ಳವನೇ **ವೃಷಾವರ್ತ** ಸುಳಿಗಳಂತೆ ಅಪರಿಮಿತವಾಗಿರುವ ಪುಣ್ಯರಾಶಿಗೆ ಆಶ್ರಯಯದಾತನೇ,

**ಅನಾದಿ ಮಧ್ಯನಿಧನ** ಆದಿ ಮಧ್ಯಾಂತರಹಿತನೇ (ಅಂದರೆ ಕಾಲಪರಿಚ್ಛೇದವಿಲ್ಲದವನೆಂದರ್ಥ) **ಧನಂಜಯ** ಅರ್ಥ ತೃಷ್ಣೆಯನ್ನು ಜಯಿಸಿರುವವನೇ (ಅಂದರೆ ಸಮಸ್ತವಾದ ಇಷ್ಟಾರ್ಥಗಳ ಪರಿಪೂರ್ತಿಯುಳ್ಳವನೆಂದರ್ಥ) **ಶುಚಿಶ್ರವ** ಪರಿಶುದ್ಧವಾದ ಕೀರ್ತಿಯುಳ್ಳವನೇ **ಪ್ರಶ್ನಿತೇಜಃ** ಪ್ರಶ್ನಿಯ ಗರ್ಭದಲ್ಲಿ ಜನಿಸಿ ಮಹಾತೇಜಸ್ಸುವುಳ್ಳವನೇ ನಿಜಜಯ ಸ್ವಾಧೀನವಾದ ಜಗದ್ವಿಜಯಶಾಲಿಯೇ **ಅಮೃತಶಯ** ಭಾವವಿಕಾರವಿಲ್ಲದ ಅಪ್ರಾಕೃತ ನಿತ್ಯ ವಿಭೂತಿವಾಸಿಯೇ.

**ಸನಾತನ** ಶಾಶ್ವತಮೂರ್ತಿಯೇ **ತ್ರಿಧಾಮನ್** ಶ್ವೇತದ್ವೀಪ ಅನಂತಾಸನ ವೈಕುಂಠ ಎಂಬ ಮೂರು ವಾಸಸ್ಥಾನವುಳ್ಳವನೇ **ತುಷಿತ** ಸದಾ ಸಂತುಷ್ಟಮೂರ್ತಿಯೇ **ಮಹಾತತ್ವ** ಮಹಾಸ್ವರೂಪನೇ ಅಥವಾ ಪ್ರಮೇಯ ವಸ್ತುಗಳಲ್ಲೆಲ್ಲಾ ಉತ್ಕೃಷ್ಟನೇ ಅಥವಾ ಮಹತ್ವದ ತತ್ವಗಳನ್ನೊಗೊಂಡಿರುವ ಸರ್ವವ್ಯಾಪಕ ಮೂರ್ತಿಯೇ **ಲೋಕನಾಥ** ಸರ್ವಲೋಕ ರಕ್ಷಕನೇ **ಪದ್ಮನಾಭ** ಲೋಕಪಿತೃವಾದ ಬ್ರಹ್ಮನಿಗೂ ಉತ್ಪತ್ತಿಸ್ಥಾನವಾದ ನಾಭಿಪದ್ಮವುಳ್ಳವನೇ **ವಿರಿಂಚೀ**ಚತುರ್ಮುಖಾಂತರ್ಯಾಮಿಯೇ **ಬಹುರೂಪ** ವಿಶ್ವರೂಪಿಯೇ.

**ಅಕ್ಷಯ** ನಾಶರಹಿತನೇ ಅಕ್ಷರ ಕುಂದಿಲ್ಲದ ಸ್ವಭಾವವುಳ್ಳವನೇ **ಹವ್ಯಬುಕ್** ದೇವತೋದ್ದೇಶಕ ದ್ರವ್ಯದಿಂದ ಪ್ರೀತಿ ಹೊಂದುವವನೇ **ಖಂಡಪರಶೋ** ತೀಕ್ಷ್ಣವಾದ ಆಯುಧವುಳ್ಳವನೇ ಅಥವಾ ತ್ರಿನೇಂತ್ರಾತರ್ಯಾಮಿಯೇ **ಶಕ್ತ** ಸಮರ್ಥನೇ **ಮುಂಜಕೇಶ** ಮೃದುವಾದ ಕೇಶವುಳ್ಳವನೇ ಅಥವಾ ಅಜ್ಞಾನನಾಶಕನೇ **ಹಂಸ** ಸರ್ವ ವ್ಯಾಪಕನೇ **ಮಹಾದಕ್ಷಿಣ** ಸರಳ ಸ್ವಭಾವನೇ **ಹೃಷೀಕೇಶ** ಸರ್ವೇಂದ್ರಿಯಗಳಿಗೂ ನಿಯಾಮಕನೇ **ಸೂಕ್ಷ್ಮ,** ಸರ್ವಪದಾರ್ಥಗಳಲ್ಲೂ ಅಂತರ್ಯಾಮಿಯಾಗಿರುವವನೇ **ಮಹಾನಿಯಮಧರ** ತಪಶ್ಶಾಲಿಯೇ ವಿರಜಃ ರಜೋಗುಣ ರಹಿತನೇ **ಲೋಕ ಪ್ರತಿಷ್ಠ,** ಲೋಕಸ್ಥಿತಿಗೆ ಆಧಾರವಾಗಿರುವವನೇ **ಅರೂಪ** ಪ್ರಾಕೃತ ರೂಪರಹಿತನೇ **ಅಗ್ರಜ,** ಸರ್ವಜ್ಯೇಷ್ಠನೇ ಧರ್ಮಜ, ಧರ್ಮಾಧೀನವಾದ ಆವಿರ್ಭಾವವುಳ್ಳವನೇ **ಧರ್ಮನಾಭ** ಧರ್ಮ ಪ್ರಚಾರಕ್ಕೆ ಆಶ್ರಯದಾತನೇ **ಗಭಸ್ತಿನಾಥ** ಅಪ್ರಾಕೃತ ದಿವ್ಯ ರಶ್ಮಿಗಳಿಗೆ ನಿಯಾಮಕನೇ **ಶತಕ್ರತುನಾಥ** ಇಂದ್ರನಿಗೂ ಸ್ವಾಮಿಯಾಗಿರುವವನೇ **ಚಂದ್ರರಥ** ಚಂದ್ರನೆಂಬ ಚಕ್ರವುಳ್ಳ ಜಗದ್ರಥಶಾಲಿಯೇ **ಸೂರ್ಯತೇಜಃ** ಸೂರ್ಯರೂಪವುಳ್ಳ ತೇಜಸ್ಸುವುಳ್ಳವನೇ ಅಥವಾ ಸರ್ವಪ್ರೇರಕವಾದ ತೇಜಸ್ಸುವುಳ್ಳವನೇ **ಸಮುದ್ರವಾಸಃ** ಜಗತ್ತೆಂಬ ಶರೀರದಲ್ಲಿ ಸಮುದ್ರವೆಂಬ **ವಸ್ತ್ರ**ವನ್ನು ಹೊಂದಿರುವವನೇ **ಅಜ** ಉತ್ಪತ್ತಿ ಇಲ್ಲದವನೇ **ಸಹಸ್ರಶಿರಃ** ಸಹಸ್ರಪಾದ ವಿಶ್ವರೂಪಿಯಾಗಿರುವವನೇ **ಅಯೋಮುಖ** ತೀಕ್ಷ್ಣ ಸ್ವಭಾವವುಳ್ಳವನೇ ಮಹಾಪುರುಷ, **ಪುರುಷೋತ್ತಮ** ಸರ್ವಾಂತರ್ಯಾಮಿಯಾದ ಪುರುಷಾಗ್ರಗಣ್ಯನೇ **ಸಹಸ್ರ**

**ಬಾಹೋ ಸಹಸ್ರಮೂರ್ತೇ ಸಹಸ್ರಾಸ್ಯ ಸಹಸ್ರಸಮ್ಭವ** ವಿರಾಟ್ ಪುರುಷ ನಾಗಿಯೂ ಸರ್ವವ್ಯಾಪಿಯಾಗಿಯೂ ಅನೇಕಾವತಾರಶಾಲಿಯಾಗಿಯೂ ಇರುವವನೇ **ವಿಶ್ವಂತ್ವಾಮಾಹುಃ** ನಿನ್ನನೇ ಪ್ರಪಂಚರೂಪಿಯನ್ನಾಗಿ ಹೇಳುವರು **ಪುಷ್ಪಹಾಸ ಚರಮ ತ್ವಮೇವೌಷಟ್** ಕುಸುಮದಂತೆ ಕೋಮಲವಾದ ಹಾಸವುಳ್ಳವನೇ ಕೊನೆಯಲ್ಲಿ ನಿಲ್ಲುವನೆ ನೀನೇ **ವೌಷಟ್** ಎಂಬ ಹೊಸ ಸಾಧನವಾದ ಮಂತ್ರರೂಪವಾಗಿರುತ್ತೀಯೆ. (ಇಲ್ಲಿ ಮಂತ್ರ ಉಪಚಾರದಿಂದ) ವಷಟ್ಕಾ ರಂತ್ವಾಮಾಹುಃ ನೀನೇ ವಷಟ್ಕಾರ ರೂಪನಾಗಿರುವೆ ಎಂದು ವೇದಗಳು ಹೇಳುತ್ತಿವೆ. **ಅಗ್ರ್ಯಮಖೇಷು ಪ್ರಾಶಿತಾರಂ, ಶತಧಾರಂ, ಸಹಸ್ರಧಾರಂ, ಬಭೂವ** ಯಜ್ಞದಲ್ಲಿ ಆಹುತಿಯನ್ನು ಸ್ವೀಕರಿಸುವ ವಿಶ್ವರೂಪಿಯು ನೀನೇ ಆಗಿದ್ದೀಯೆ.

**ಭೂವಂದ್ಯ** ಭೂದೇವಿಯಿಂದ ಪೂಜಿಸಲ್ಪಡತಕ್ಕವನೇ **ಭೂನಾಥ** ಭೂಮಿಗೆ ಒಡೆಯನೇ ಭೃಗುಪುತ್ರ ಭಾರ್ಗವರೂಪಿಯೇ **ವೇದವೇದ್ಯ** ವೇದಪ್ರಮಾಣ ಗೋಚರನೇ **ಬ್ರಹ್ಮಶಯ** ಜಗತ್ ಸೃಷ್ಟಿಗಾಗಿ ಬೃಹದಾಕಾರವುಳ್ಳ ಪ್ರಕೃತಿಯನ್ನು ಅಧಿಷ್ಠಾನ ಮಾಡಿಕೊಂಡಿರುವವನೇ **ಬ್ರಾಹ್ಮಣ** ಬ್ರಹ್ಮಜ್ಞಾನಿಗಳಿಗೆ ಪ್ರಿಯನೇ ನೀನೇ ದ್ಯುಲೋಕ ವಾಗಿ ತೋರುತ್ತಿದ್ದೀಯೆ. **ಮಾತರಿಶ್ವಾಸಿ ಧರ್ಮೋಽಸಿ** ವಾಯುವಿಗೂ ಯಮನಿಗೂ ಅಧಿಷ್ಠಾನ ದೇವತೆಯಾಗಿದ್ದುಕೊಂಡು ಅವರ ವ್ಯಾಪಾರಕ್ಕೂ ವಾಯುವಿಗೂ ಯಮನಿಗೂ ಅಧಿಷ್ಠಾನ ದೇವತೆಯಾಗಿದ್ದುಕೊಂಡು ಅವರ ವ್ಯಾಪಾರಕ್ಕೂ ನಿಯಾಮಕನಾಗಿದ್ದೀಯೆ **ಹೋತಾ ಪೋತಾ, ಹಂತಾ, ಮಂತಾ, ನೇತಾ ಹೋಮ ಹೇತು ಸ್ತ್ವಮೇವ ಹೋತಾ ಪೋತಾ** ಎಂಬ ಋತ್ವಿಕ್ ಸ್ವರೂಪನಾಗಿಯೂ ಹೋಮಕರಣ ಸ್ವರೂಪನಾಗಿಯೂ ಅಗ್ರ್ಯಶ್ಚ ಧಾಮಾತ್ವಮೇವ.

ಯಜ್ಞದಲ್ಲಿರುವ ಮಹಾತೇಜಸ್ವಿಯಾದ ಅಗ್ನಿ ಸ್ವರೂಪನೂ ನೀನೆ ಆಗಿರುತ್ತೀಯೆ **ಋಗ್ಭಿಃ ಸುಭಾಂಡ ಇಜ್ಯೋಸಿ ಸುಮೇಧೋಽಸಿ ಸಮಿಧಃ** ತ್ವಮೇವ ಋಕ್ಕುಗಳೆಂಬ ಆಭರಣ ಗಳಿಂದ ಪಾತ್ರರೂಪಿಯಾದ ನೀನೆ (ವೇದಮಂತ್ರಮಯನೆಂದು ತಾತ್ಪರ್ಯ) ಯಾಗ ವೆಂಬ ಪೂಜೆಗೆ ಉದ್ದೇಶವಾಗಿರುತ್ತೀಯೆ. ಅಪ್ರಹತಿಹತ ಪ್ರತಿಭಾಶಾಲಿಯಾದ ನೀನೇ ಸಮಿತ್ಸ್ವರೂಪನೂ ಆಗಿದ್ದೀಯೇ.

**ಪತಿಃ** ರಕ್ಷಕನೂ **ಗತಿಃ** ಪ್ರಾಪ್ಯನೂ ದಾತಾ ಪುರುಷಾರ್ಥಪ್ರದನೂ ನೀನೇ ಆಗಿದ್ದೀಯೆ. ಮೋಕ್ಷಪ್ರದನಾದುದರಿಂದ ಮೋಕ್ಷ ರೂಪ ಪುರುಷಾರ್ಥ ಸ್ವರೂಪನೂ ಅದಕ್ಕೆಸಾಧಕವಾದ ಯೋಗಸ್ವರೂಪನೂ ನೀನೇ ಆಗಿದ್ದೀಯೇ. **ಸೃಜಸಿ** ಸೃಷ್ಟಿಸುತ್ತಿಯೇ. **ಧಾತಾ** ಸೃಷ್ಟವಾದ ಜಗತ್ತಿಗೆ ಧಾರಕನಾಗಿಯೂ ಇರುತ್ತೀಯೆ. ಯಜ್ಞಸ್ವರೂಪನೂ ಸೋಮ ಸ್ವರೂಪನೂ ದೀಕ್ಷಿತನೂ ದಕ್ಷಿಣೆಯೂ ಹಾಗೂ ಸಮಸ್ತ ಪ್ರಪಂಚವೂ ನೀನೇ ಆಗಿದ್ದೀಯೆ. **ಸ್ಥವಿರ** ಸರ್ವರಿಗಿಂತ ಹಿರಿಯನೇ (ವೃದ್ಧನೇ) **ಹಿರಣ್ಯಗರ್ಭ** ಹಿರಣ್ಯ ಗರ್ಭಾಂತರ್ಯಾಮಿಯೇ ಅಥವಾ ಭೂಮ್ಯಂತರ್ಯಾಮಿಯೇ **ನಾರಾಯಣ** ಎಲ್ಲಾ ಚೇತನಾಚೇತನ ವರ್ಗಕ್ಕೂ ಗಂತವ್ಯಸ್ಥಾನನೇ ಅಥವಾ ಪ್ರೇರಕರನೇ **ತ್ರಿನಯನ** ರುದ್ರಾಂತರ್ಯಾಮಿಯೇ ಅಥವಾ ನರಸಿಂಹಾವತಾರ ಶಾಲಿಯೇ **ಆದಿವರ್ಣ** ಅಕ್ಷರಗಳಲ್ಲಿ ಮೊದಲನೆಯದಾದ ಅಕಾರ ಸ್ವರೂಪನೇ (ಅಕ್ಷರಾಣಾಮಕಾರೋಸ್ಮಿ ಎಂದು ಗೀತಾ ವಚನವಿದೆ) **ಆದಿತ್ಯತೇಜಃ** ಅನೇಕ ಸೂರ್ಯ ಪ್ರಕಾಶನೇ **ಆದಿದೇವ**

**ಭೂಮಿಕ್ರಮ ಮಹಾಪುರುಷ** ಮಹಾಪುರುಷನಾಗಿಯೂ ಜಗತ್ಕಾರಣನಾಗಿಯೂ ಭೂಮಿಯೆಲ್ಲವನ್ನೂ ಪಾದದಿಂದ ಆಕ್ರಮಿಸಿದ ಪರಮಾತ್ಮನೇ.

**ತ್ರಿವಿಕ್ರಮ** ಮೂರು ವಿಧವಾದ ಪಾದನ್ಯಾಸವುಳ್ಳ **ಪ್ರಭಾಕರನೇ** ಅಪ್ರಾಕೃತವಾದ ಕಾಂತಿಗೆ ಆಶ್ರಯನೇ **ಶಂಭೋ** ಸುಖವನ್ನು ಕೊಡುವವನೇ **ಸ್ವಯಂಭೂಃ** (ಕರ್ಮ ಸಂಬಂಧವಿಲ್ಲದೆ) ಸ್ವಸಂಕಲ್ಪದಿಂದ ಆವಿರ್ಭಾವ ಹೊಂದಿದವನೇ **ಭೂತಾದಿ ಮಹಾಭೂತೋಸಿ** ಪಂಚತನ್ಮಾತ್ರೆಗಳು ಮಹಾಭೂತಗಳೂ ನೀನೇ ಆಗಿದ್ದೀಯೆ. **ವಿಶ್ವಭೂತ ವಿಶ್ವಂತ್ವಮೇವ** ವಿಶ್ವವೆಲ್ಲವೂ ನಿನ್ನ ಆಕಾರವಾಗಿದೆ. (ಕಾರ್ಯ ಕಾರಣಗಳ ಅಭೇದದೃಷ್ಟಿಯಿಂದ ಈ ರೀತಿ ವ್ಯವಹಾರ) **ವಿಶ್ವಗೋಪ್ತಾಸಿ** ವಿಶ್ವರಕ್ಷಕನೂ ನೀನೇ ಆಗಿದ್ದೀಯೇ. ಇಲ್ಲಿ ನಿಮಿತ್ತ ಕಾರಣಾವಸ್ಥೆಯಲ್ಲಿದ್ದ ಪರಮಾತ್ಮನು ಸಂಕಲ್ಪ ಮಾತ್ರದಿಂದ ಜಗದ್ರೂಪನಾದ ಕಾರ್ಯವ್ಯವಸ್ಥೆಯನ್ನು ಮಾಡಿದ ಮೇಲೆ ಅಂತರ್ಯಾಮಿ ರೂಪದಿಂದ ಸರ್ವಚೇತನರಿಗೂ ನಿಯಾಮಕವಾಗಿ ನಿಂತು ''ಮತ್ತಃಸ್ಮೃತಿಃಜ್ಞಾನಮಪೋಹನಂ ಚ'' ಎಂಬ ಗೀತಾವಚನಾನುಸಾರವಾಗಿ ರಕ್ಷಕನಾಗಿಯೂ ಇರುತ್ತಾನೆ ಎಂದು ಹೇಳಿದೆ. ಜೀವಾಂತರ್ಯಾಮಿಯಾಗಿರುವ ಪರಮಾತ್ಮ ಸ್ವರೂಪಕ್ಕೆ ಕರ್ಮ ಸಂಬಂಧದಿಂದ ಜೀವನಿಗೆ ಇರುವಂಥ ಕರ್ಮವಾಸನಾ ಸಂಬಂಧದಿಂದುಂಟಾದ ಅಪವಿತ್ರತೆಯನ್ನು ಆಶಂಕಿಸಿ ಅದಕ್ಕೆ ಉತ್ತರವಾಗಿ ಪವಿತ್ರಮಸಿ ಎಂದು ಹೇಳಿದಂತಾಯಿತು. **ವಿಶ್ವಭವವಿಶೋತ್ಪತ್ತಿ** ಕಾರಣನೇ ಊರ್ಧ್ವಕರ್ಮನ್ ಸರ್ವೋತ್ತರವಾದ ವ್ಯಾಪಾರವುಳ್ಳವನೇ ಅಥವಾ ಕರ್ಮಸಂಬಂಧದಿಂದ ಬೇರೆಯಾಗಿರುವವನೇ **ಅಮೃತ** ಮರಣ ಸ್ವಭಾವವಿಲ್ಲದವನೇ **ದಿವಸ್ಪತೇ** ಸ್ವರ್ಗಲೋಕಕ್ಕೂ ಅಧಿಪತಿಯಾಗಿರುವವನೇ **ವಾಚಸ್ಪತೆ** ವಾಣಿಗೂ ಅಧಿಪತಿಯಾಗಿರುವವನೇ **ಘೃತಾರ್ಚಿ** ಉಜ್ವಲವಾದ ತೇಜಸ್ಸುವುಳ್ಳವನೇ **ಅನಂತ ಕರ್ಮವಂಶ** ಅಪರಿಮಿತವಾದ ಕರ್ಮ ಪ್ರವಾಹದಿಂದುಂಟಾದ ಜಗದ್ವಂಶವುಳ್ಳವನೇ **ಪ್ರಾಗ್ವಂಶಧೀಃ** ಪುರಾತನವಾದ ಸರ್ವ ವಂಶಗಳನ್ನೂ ತಿಳಿದಿರುವವನೇ **ತ್ವಮಶ್ವಮೇಧಃ** ಅಶ್ವಮೇಧವೆಂಬ ಮಹಾಯಜ್ಞವೂ ನೀನೇ ಆಗಿದ್ದಿಯೇ. ಯಜ್ಞಾದಿಗಳಿಂದ ಹೊಂದುವ ಫಲವೂ ನಿನ್ನ ಸಂಕಲ್ಪದಿಂದಲೇ ಎಂದು ತಾತ್ಪರ್ಯ **ವರಾರ್ಥಿನಾಂ ವರದೋಸಿತ್ವಮ್** ವರವನ್ನು ಅಪೇಕ್ಷಿಸುವವರಿಗೆ ನೀನೇ ವರಪ್ರದನೂ ಆಗಿದ್ದೀಯೆ.

**ಚತುರ್ಭಿಶ್ಚ ಚತುರ್ಭಿಶ್ಚ** ಎಂಬ ಈ ಶ್ಲೋಕದಿಂದ ಯಜಮಾನಸ್ವರೂಪನೂ ನೀನೇ ಆಗಿದ್ದಿಯೇ ಎಂಬುದನ್ನು ಶ್ರೌತ ಶಾಸ್ತ್ರ ಪ್ರಕ್ರಿಯೆಯಿಂದಲೂ ನಿರೂಪಿಸುತ್ತಾರೆ. ಯಜ್ಞದಲ್ಲಿ ಹೋಮಕ್ಕೆ ಸಾಧನವಾದ ಕೆಲವು ಮಂತ್ರಗಳು ಒಟ್ಟಾಗಿ ಹದಿನೇಳು ಅಕ್ಷರಗಳಾಗುತ್ತವೆ. ಈ ಅಕ್ಷರಗಳು ಐದು ಮಂತ್ರಗಳೆಂದು ಮೀಮಾಂಸ ಶಾಸ್ತ್ರದಲ್ಲಿ ಪರಿಗಣಿಸಲ್ಪಟ್ಟಿವೆ. ಈ ಮಂತ್ರಗಳಿಂದ ಯಜಮಾನನು ಹೋಮವನ್ನು ಮಾಡಬೇಕು. ಯಜ್ಞದಲ್ಲಿ ಅಧ್ವರ್ಯುವೇ ಹೋಮಮಾಡುತ್ತಾನೆ. ಆದರೆ ನಮ್ಮ ಎಂಬ ಸಾತ್ವಿಕ ತ್ಯಾಗದಿಂದ ಯಜಮಾನನೇ ಫಲಕ್ಕೆ ಸ್ವಾಮಿಯಾಗುತ್ತನಾದುದರಿಂದ ಅವನೇ ಕರ್ತೃವೆಂದು ಶಾಸ್ತ್ರ ಮರ್ಯಾದೆ. ಈ ಮಂತ್ರಗಳು ಕ್ರಮವಾಗಿ ನಾಲ್ಕು, ನಾಲ್ಕು, ಎರಡು ಐದು ಎರಡು, ಈ ರೀತಿ ಅಕ್ಷರಸಂಖ್ಯೆಯಲ್ಲಿರುತ್ತವೆ. ಆ ಮಂತ್ರಗಳು ''ಅಶ್ರಾಯ ಅಸ್ತುಶ್ರೌಷಟ್, ಯಜ, ಯೇಯಜಾಮಹೆ ಶ್ರೌಷಟ್'' ಎಂಬ ಆನುಪೂರ್ವಿಯುಳ್ಳವುಗಳು. ಇವುಗಳಲ್ಲಿ

ಅರ್ಧಾಕ್ಷರವಾದ ಟಕಾರವನ್ನು ಬಿಟ್ಟರೆ ಮೇಲ್ಕಂಡ ಅಕ್ಷರ ಸಂಖ್ಯೆಯು ಲಭಿಸುತ್ತದೆ. ಈ ಮಂತ್ರಗಳಿಂದ ಹೋಮ ಮಾಡುವ ಯಜಮಾನ ಸ್ವರೂಪನೂ ನೀನೇ ಆಗಿದ್ದೀಯ ಎಂದು ಅರ್ಥ. ಇಲ್ಲಿ ಹೋತ್ರಾತ್ಮನೇ ಎಂಬಲ್ಲಿ ಹೋತೃ ಶಬ್ದವು ಹೋತೃಗಣದಲ್ಲಿ ಮುಖ್ಯನಾದ ಯಜಮಾನನನ್ನು ಬೋಧಿಸುತ್ತದೆ. ಹೀಗೆ ಸರ್ವವೂ ಬ್ರಹ್ಮಾತ್ಮಕವೆಂಬ ಸ್ತುತಿಯಿಂದ ಜಗತ್ತನ್ನೆಲ್ಲವೂ ಪರಮಾತ್ಮನ ಶರೀರವೆಂದೂ ಅವನೇ ನಿಯಾಮಕನೆಂದೂ ನಿರೂಪಿಸಿದಂತಾಯಿತು.

ವಾಮನ ಮಹಾಪುರಾಣದಲ್ಲಿ ಕಶ್ಯಪರ ಪ್ರಾರ್ಥನೆ ಎಂಬ ಇಪ್ಪತ್ತಾರನೇಯ ಅಧ್ಯಾಯ ಮುಗಿದುದು.



## ದೇವಮಾತೆಯ ತಪಸ್ಸು

**ಅಧ್ಯಾಯ - ೨೭**

### ಲೋಮಹರ್ಷಣ ಉವಾಚ

೪೫೨. ನಾರಾಯಣಸ್ತು ಭಗವಾನ್ ಶ್ರುತ್ವೈವಂ ಪರಮಂ ಸ್ತವಂ ।
ಬ್ರಹ್ಮಜೇನ ದ್ವಿಜೇಂದ್ರೇಣ ಕಾಶ್ಯಪೇನ ಸಮೀರಿತಂ ॥

೪೫೩. ಉವಾಚ ವಚನಂ ಸಮ್ಯಕ್ತುಷ್ಟಃ ಪುಷ್ಟ ಪದಾಕ್ಷರಂ ।
ಶ್ರೀಮಾನ್ಪ್ರೀತಮಾನಾ ದೇವೋ ಯದ್ವದೇತ್ಪ್ರಭುರೀಶ್ವರಃ ॥

೪೫೪. ವರಂ ವೃಣುಧ್ವಂ ಭದ್ರಂ ವೋ ವರದೋಽಸ್ಮಿ ಸುರೋತ್ತಮಾಃ

### ಕಾಶ್ಯಪ ಉವಾಚ

೪೫೫. ಸುಪ್ರೀತೋಸಿ ಸುರಶ್ರೇಷ್ಠ ಸರ್ವೇಷಾಮೇವ ನಿಶ್ಚಯಾತ್ ।

೪೫೬. ವಾಸವಸ್ಯಾನುಜೋ ಭ್ರಾತಾ ಜ್ಞಾತೀನಾಂ ನಂದವರ್ಧನಃ ।
ಅದಿತ್ಯಾ ಅಪಿ ಚ ಶ್ರೀಮಾನ್ ಭಗವಾನಸ್ತು ವೈ ಸುತಃ

೪೫೭. ಅದಿತಿರ್ದೇವಮಾತಾ ಚ ಏತಮೇವಾರ್ಥಮುತ್ತಮಂ ।
ಪುತ್ರಾರ್ಥಂ ವರದಂ ಪ್ರಾಹ ಭಗವಂತಂ ವರಾರ್ಥಿನೀ

### ದೇವಾ ಊಚುಃ

೪೫೮. ನಿಶ್ರೇಯಸಾರ್ಥಂ ಸರ್ವೇಷಾಂ ದೇವತಾನಾಂ ಮಹೇಶ್ವರಃ ।
ತ್ರಾತಾ ಭರ್ತಾ ಚ ದಾತಾ ಚ ಶರಣಂ ಭವ ನಃ ಸದಾ

''ಷಡ್ಗುಣೈಶ್ವರ್ಯ ಸಂಪನ್ನರಾದ ಶ್ರೀಮನ್ನಾರಾಯಣನು ಬ್ರಹ್ಮಕುಮಾರನಾದ ಬ್ರಾಹ್ಮಣೋತ್ತಮ ಕಶ್ಯಪ ಮುನಿ ಹೇಳಿದ - ಈ ದಿವ್ಯಸ್ತೋತ್ರವನ್ನು ಕೇಳಿದನು. ಆ ಪ್ರಾರ್ಥನಾ ಪದ್ಯದಲ್ಲಿ ಒಂದೊಂದು ಅಕ್ಷರವೂ ಭಾವ ಸಂಪತ್ತಿನಿಂದ ತುಂಬಿ ತುಳುಕುತ್ತಿತ್ತು. ಅದರಿಂದ ಭಗವಂತನಿಗೆ ಅತ್ಯಂತ ಸಂತೋಷವಾಯಿತು. ಲಕ್ಷ್ಮೀ ಪತಿಯಾದ ಆ ದೇವರು ಸಂತಸದುಂಬಿದ ಮನಸ್ಸಿನಿಂದ ಮಾತನಾಡಿದರು. ಸರ್ವತಂತ್ರ ಸ್ವತಂತ್ರನಾದ ಪ್ರಭುವಿಗೆ ಯೋಗ್ಯವಾಗಿತ್ತು ಆ ಮಾತು.

"ದೇವಾಧಿ ದೇವತೆಗಳೇ, ನಿಮಗೆ ಕಲ್ಯಾಣವಾಗಲಿ. ನೀವು ಬಯಸಿದ ವರವನ್ನು ಕೊಡುತ್ತೇನೆ. ವರವನ್ನು ಕೇಳಿಕೊಳ್ಳಿರಿ."

**ಕಶ್ಯಪ :** "ನಿಜವಾದ ದೇವಾಧಿದೇವನು ನೀನೇ ಆಗಿರುವಿ. ಎಲ್ಲ ದೇವತೆಗಳ ಮೇಲೆ ನಿಜವಾಗಿಯೂ ಇಂದು ನೀನು ಸುಪ್ರೀತನಾಗಿರುವಿ. ಪ್ರಸನ್ನನಾದ ನೀನು ಈ ದೇವತೆಗಳಿಗೆ ಈ ಒಂದು ವರವನ್ನು ಕೊಡು. ಭಗವಾನ್, ನೀನು ದೇವೇಂದ್ರನ ತಮ್ಮನಾಗಿ ಅದಿತಿದೇವತೆಯ ಮಗನಾಗಿ ಅವತರಿಸ ಬೇಕು. ಬಂಧು ಬಾಂಧವರ ಆನಂದವು ಇದರಿಂದ ಇಮ್ಮಡಿಸಲಿ. ಇದಕ್ಕಾಗಿಯೇ ದೇವಮಾತೆಯಾದ ಅದಿತಿಯು ಭಗವಂತನಾದ ನಿನ್ನನ್ನು ಬೇಡಿಕೊಳ್ಳುತ್ತಲಿದ್ದಾಳೆ. ಬೇಡಿದ ವರವನ್ನು ನೀಡುವ ನೀನು ಪುತ್ರರೂಪ ವರವನ್ನು ಪ್ರಾರ್ಥಿಸುವ ಅವಳಿಗೆ ಈ ವರವನ್ನಿತ್ತು ಅನುಗ್ರಹಿಸು." ಎಲ್ಲ ದೇವತೆಗಳೂ ಕೂಡ ಭಗವಂತನಿಗೆ ಬಿನ್ನವಿಸಿದರು -

"ಭಗವನ್, ನಮ್ಮೆಲ್ಲ ದೇವತೆಗಳಿಗೂ, ಎಲ್ಲ ಪ್ರಪಂಚಕ್ಕೂ ನೀನೇ ಒಡೆಯ ಈಶ್ವರ. ಅದಕ್ಕಾಗಿ ನಿನಗೆ 'ಮಹೇಶ್ವರ' ಎಂಬ ಹೆಸರು. ಎಲ್ಲ ಸಚ್ಚೇತನರಿಗೆ ಮೋಕ್ಷವನ್ನು ಕರುಣಿಸುವ ಮಹಾಪ್ರಭು ನೀನೇ ಆಗಿರುವಿ. ಎಲ್ಲರನ್ನು ರಕ್ಷಿಸುವವ ನೀನು, ಪೋಷಿಸುವವ ನೀನು. ಬಯಸಿದ್ದನ್ನೆಲ್ಲ ನೀಡುವವ ನೀನು ಸ್ವಾಮಿನ್, ಇಂಥ, ನೀನು ನಮಗೆ ಯಾವಾಗಲೂ ರಕ್ಷಕನಾಗಿ ಇರು. ನಾವು ನಿನ್ನನ್ನೇ ಮೊರೆ ಹೊಕ್ಕಿದ್ದೇವೆ."

## ಲೋಕಮಹರ್ಷಣ ಉವಾಚ:

೪೫೯. ತತಸ್ತಾನಬ್ರವೀದ್ವಿಷ್ಣುಃ ದೇವಾಂ ಸ್ತಾನ್ಸ್ವಯಮೇವ ಚ ।
ಸರ್ವೇಷಾಮೇವ ಯುಷ್ಮಾಕಂ ಯೇ ಭವಿಷ್ಯಂತಿ ಶತ್ರವಃ ।
ಮುಹೂರ್ತಮಪಿ ತೇ ಸರ್ವೇ ನ ಸ್ಥಾಸ್ಯಂತಿ ಮಮಾಗ್ರತಃ ॥

೪೬೦. ಹತ್ವಾಸುರಗಣಾನ್ಸರ್ವಾನ್ಯಜ್ಞ ಭಾಗಾಗ್ರ ಭೋಜಿನಃ ।
ಹವ್ಯಾದಾಂಶ್ಚ ಸುರಾನ್ಸರ್ವಾನ್ಕವ್ಯಾದಾಂಶ್ಚ ಪಿತೃನಪಿ ॥

೪೬೧. ಕರಿಷ್ಯೇ ವಿಬುಧಶ್ರೇಷ್ಠಾಃ ಪಾರಮೇಷ್ಠ್ಯೇನ ಕರ್ಮಣಾ ।
ಯಥಾಯಾತೇನ ಮಾರ್ಗೇಣ ನಿವರ್ತಧ್ವಂ ಸುರೋತ್ತಮಾಃ ॥

೪೬೨. ಏವಮುಕ್ತೇತು ದೇವೇನ ವಿಷ್ಣುನಾ ಪ್ರಭವಿಷ್ಣುನಾ ।
ತತಃ ಪ್ರಹೃಷ್ಟಮನಸಃ ಪೂಜಯಂತಿ ಸ್ಮ ತಂ ಪ್ರಭುಂ ॥

೪೬೩. ವಿಶ್ವೇದೇವಾ ಮಹಾತ್ಮಾನಃ ಕಶ್ಯಪೋಽದಿತಿರೇವ ಚ ।
ನಮಸ್ಕೃತ್ಯ ಸುರೇಶಾಯ ತಸ್ಮೈ ದೇವಾಯ ರಂಹಸಾ ॥

೪೬೪. ಪ್ರಯಾತಾಃ ಪ್ರಾಗ್ದಿಶಂ ಸರ್ವೇವಿಪುಲಂ ಕಶ್ಯಪಾಶ್ರಮಂ ।
ತೇ ಕಶ್ಯಪಾಶ್ರಮಂ ಗತ್ವಾ ಕುರುಕ್ಷೇತ್ರ ವನಂ ಮಹತ್ ॥

೪೬೫. ಸಂಪ್ರಸಾದ್ಯಾದಿತಿಂ ತತ್ರ ತಪಸೇ ತಾಂ ನ್ಯಯೋಜಯನ್ ।
ಸಾ ಚಚಾರ ತಪೋ ಘೋರಂ ವರ್ಷಾಣಾಮಯುತಂ ತದಾ ।

೪೬೬.ತಸ್ಯಾ ನಾಮ್ನಾ ವನಂ ದಿವ್ಯಂ ಸರ್ವಕಾಮಪ್ರದಂ ಶುಭಂ ।
ಆರಾಧನಾಯ ಕೃಷ್ಣಸ್ಯ ವಾಗ್ಯತಾ ವಾಯು ಭೋಜನಾಃ ।

೪೬೭.ದೈತ್ಯೈ ರ್ನಿರಾಕೃತಾನ್ ದೃಷ್ಟ್ವಾ ಸಭಯಾನ್ನೃಷಿ ಸತ್ತಮಾನ್ ॥

**ಲೋಮಹರ್ಷಣ :** ಅನಂತರ ಸಾಕ್ಷಾತ್ ಶ್ರೀವಿಷ್ಣುವು ಸ್ವಯಂ ಆ ದೇವತೆಗಳನ್ನು ಉದ್ದೇಶಿಸಿ ಮಾತನಾಡಿದನು. ''ನಿಮ್ಮೆಲ್ಲ ದೇವತೆಗಳಿಗೆ ಶತ್ರುಗಳಾದವರು ನನ್ನ ಎದುರು ಒಂದುಗಳಿಗೆ ಹೊತ್ತು ಕೂಡ ನಿಲ್ಲಬಾರದು. ದೇವತೆಗಳಿಗೆ ಯಜ್ಞ ಭಾಗವನ್ನು ಬಲಾತ್ಕಾರದಿಂದ ಕಸಿದುಕೊಂಡು ಭೋಗಿಸುತ್ತಿರುವ ದೈತ್ಯರನ್ನು ನಾನು ಸಂಹರಿಸುತ್ತೇನೆ. ದೇವತೆಗಳಿಗೆ ಹವ್ಯ ಭಾಗವು ಪಿತೃಗಳಿಗೆ ಕವ್ಯಭಾಗವೂ ಇನ್ನು ಮುಂದೆ ನಿರಾಂತಕವಾಗಿ ದೊರಕುವಂತೆ ಮಾಡುತ್ತೇನೆ. ಇದೇ ನನ್ನ ಭಗವದ್ವ್ಯಾಪಾರ. ಆದುದರಿಂದ ದೇವೋತ್ತಮರೇ, ನೀವು ನಿಶ್ಚಿಂತರಾಗಿ ಬಂದ ಮಾರ್ಗದಿಂದ ಮರಳಿ ಮನೆಗೆ ತೆರಳಿರಿ.''

ಸರ್ವ ಸಮರ್ಥನಾದ ಶ್ರೀವಿಷ್ಣುವು ಈ ರೀತಿಯಾಗಿ ಮಾತನಾಡಿದ ಬಳಿಕ ಎಲ್ಲ ದೇವತೆಗಳಿಗೂ ಅತ್ಯಾನಂದವಾಯಿತು. ಅವರೆಲ್ಲರೂ ಪ್ರಸನ್ನ ಮನಸ್ಸಿನಿಂದ ಆ ಮಹಾಪ್ರಭುವನ್ನು ಪೂಜಿಸಿದರು. ಮಹಾತ್ಮರಾದ ವಿಶ್ವೇದೇವತೆಗಳೂ ಕಶ್ಯಪರೂ ಅದಿತಿ ದೇವಿಯೂ ಸುರಶ್ರೇಷ್ಠನಾದ ಆ ಭಗವಂತನಿಗೆ ನಮಸ್ಕರಿಸಿದರು. ಅಲ್ಲಿಂದ ಅವರೆಲ್ಲರೂ ಮೂಡಲ ದಿಕ್ಕಿಗೆ ಅಭಿಮುಖವಾಗಿ ಹೊರಟರು. ಕುರುಕ್ಷೇತ್ರದ ವನದಲ್ಲಿ ಇರುವ ಕಶ್ಯಪ ಮುನಿಗಳ ಆಶ್ರಮಕ್ಕೆ ಬಂದರು. ಅಲ್ಲಿ ಎಲ್ಲರೂ ಅದಿತಿ ದೇವಿಯನ್ನು ಬಿನ್ನವಿಸಿ ಸಂತೋಷಗೊಳಿಸಿದರು. ತಪೋನುಷ್ಠಾನವನ್ನು ಕೈಕೊಳ್ಳಬೇಕೆಂದು ಅವಳ ಮನಸ್ಸನ್ನು ಒಲಿಸಿದರು. ಅನಂತರ ಆ ಅದಿತಿದೇವಿಯು ಘೋರ ತಪಸ್ಸನ್ನು ಕೈಕೊಂಡಳು.

ಹತ್ತು ಸಾವಿರ ವರ್ಷಗಳವರೆಗೆ ಸಾಗಿತ್ತು ಅವಳ ಉಗ್ರ ತಪೋನುಷ್ಠಾನ. ಆ ಅದಿತಿಯು ನಿಂತು ತಪವನ್ನಾಚರಿಸಿದ ಈ ದಿವ್ಯ ವನವು 'ಅದಿತಿವನ' ಎಂದು ಹೆಸರಾಯಿತು. ಅಲ್ಲಿ ನಿಂತು ತಪಸ್ಸು ಮಾಡುವವರ ಮನೋರಥಗಳೆಲ್ಲವೂ ಪೂರ್ಣವಾಗುತ್ತಿದ್ದವು. ಆದುದರಿಂದಲೇ ಕಲ್ಯಾಣಕರವೂ ಕಾಮಪ್ರದವೂ ಆದ ಈ ಅದಿತಿವನದಲ್ಲಿ ಅನೇಕ ಮುನಿಗಳು ಇದ್ದು ಶ್ರೀ ಕೃಷ್ಣನನ್ನು ಆರಾಧಿಸುತ್ತಿದ್ದರು. ಅವರ ಮಾತು ಮಿತ. ಗಾಳಿಯೇ ಅವರ ಆಹಾರ. ಇಂಥ ಮಹಾ ಮಹಾ ಋಷಿಮುನಿಗಳೆಲ್ಲರನ್ನು ದುಷ್ಟ ದೈತ್ಯರು ಹಿಂಸೆಪಡಿಸಿದರು. ರಕ್ಕಸರ ಈ ವಿಚಿತ್ರ ಹಿಂಸೆಯಿಂದ ಹೌಹಾರಿ ಹೋದುದನ್ನು ಕಂಡು ಅದಿತಿದೇವಿಗೆ ಬಹಳ ಕೆಡುಕೆನಿಸಿತು. ತನ್ನ ಮಕ್ಕಳಾದ ದೇವತೆಗಳು ಋಷಿಗಳಿಗೆ ಒದಗಿ ಬಂದ ಈ ರಾಕ್ಷಸ ತಾಪವನ್ನು ಕಳೆಯಲು ಅಸಮರ್ಥರಾದುದನ್ನು ನೋಡಿ ಅವಳಿಗೆ ತನಗೆ ಮಕ್ಕಳಿದ್ದರೂ ಇಲ್ಲದಂತೆಯೇ ಎನಿಸಿತು. ಅವಳು ತನ್ನನ್ನು ಬಂಜೇ ಎಂದೇ ಬಗೆದು ಭಗವಂತನಿಗೆ ಬಾಗಿ ಬೇಡಿಕೊಂಡಳು. ಪರಮಾತ್ಮನಿಗೆ ಪ್ರೀತಿಕರವಾದ ವಚನ ರಚನೆಗಳಿಂದ ಅವನನ್ನು ಕೊಂಡಾಡಿ ಸಂತೋಷಪಡಿಸಿದಳು. ಭಕ್ತವತ್ಸಲನೂ, ಮೊರೆ ಹೊಕ್ಕವರನ್ನು ಪೊರೆಯುವವನೂ, ದೇವದೈತ್ಯರ ಅಂತರ್ಯಾಮಿಯಾಗಿ ಅವರೆಲ್ಲರನ್ನು ನೇಮಿಸುವವನೂ ಹಾಗೂ ಪ್ರಪಂಚದ ಸೃಷ್ಟಿಸ್ಥಿತಿ ಸಂಹಾರ ಕಾರಣನೂ ಆದ ಶ್ರೀ ವಿಷ್ಣುವನ್ನು ನಮಸ್ಕರಿಸಿ ಪ್ರಾರ್ಥನೆ ಮಾಡಿಕೊಂಡಳು.

ವೃಥಾ ಪುತ್ರಾಹಮಿತಿಸಾ ನಿರ್ವೇದಾತ್ಪ್ರಣತಾ ಹರಿಮ್ ॥

೪೬೮. ತುಷ್ಟಾವ ವಾಗ್ಭರಿಷ್ಟಾಭಿಃ ಸ್ತುತಿಭಿಸ್ತಾ ತಪೋಧನಾ ।
ಶರಣ್ಯಂ ಶರಣಂ ವಿಷ್ಣುಂ ಪ್ರಣತಂ ಭಕ್ತವತ್ಸಲಂ ॥
ದೇವದೈತ್ಯಮಯಂ ಚಾದಿಮಧ್ಯಮಾಂತಸ್ವರೂಪಿಣಂ ॥

## ಅದಿತಿರುವಾಚ

೪೬೯. ನಮಃ ಕೃತ್ಯಾರ್ತಿನಾಶಾಯ ನಮಃ ಪುಷ್ಕರಮಾಲಿನೇ ।
ನಮಃ ಪರಮ ಕಲ್ಯಾಣ ಕಲ್ಯಾಣಾಯಾದಿವೇಧಸೇ ॥

೪೭೦. ನಮಃ ಪಂಕಜನೇತ್ರಾಯ ನಮಃ ಪಂಕಜನಾಭಯೇ ।
ನಮಃ ಪಂಕಜ ಸಂಭೂತಿ ಸಂಭವಾಯಾತ್ಮಯೋನಯೇ ॥

೪೭೧. ಶ್ರಿಯಃ ಕಾಂತಾಯ ದಾಂತಾಯ ದಾಂತದೃಶ್ಯಾಯ ಚಕ್ರಿಣೇ ।
ನಮಃ ಪದ್ಮಾದಿಹಸ್ತಾಯ ನಮಃ ಕನಕವಾಸಸೇ ॥

೪೭೨. ತಥಾತ್ಮ ಜ್ಞಾನಯಜ್ಞಾಯ ಯೋಗಿಚಿಂತ್ಯಾಯ ಯೋಗಿನೇ ।
ನಿರ್ಗುಣಾಯ ವಿಶೇಷಾಯ ಹರಯೇ ಬ್ರಹ್ಮರೂಪಿಣೇ ॥

## ಅದಿತಿ ಉವಾಚ

ಮಂತ್ರ ಮಾಟಗಳಿಂದ ಜನರಿಗೆ ಪೀಡೆ ಕೊಡುವ ದುರುಳರನ್ನೂ, ಅವರಿಂದ ಸಜ್ಜನರಿಗೆ ಉಂಟಾಗುವ ದುಃಖವನ್ನೂ ನಾಶಮಾಡುವ ಶ್ರೀಹರಿಗೆ ನಮಸ್ಕಾರ. ತಾವರೆ ಹೂಗಳ ಹಾರ ಧರಿಸಿದ ಹರಿಗೆ ವಂದನೆ. ಎಲ್ಲ ಮಂಗಳಗಳಿಗೂ ಮಂಗಲ ಸ್ವರೂಪನಾದ ಮೂಲ ಬ್ರಹ್ಮನಿಗೆ ನಾನು ನಮಿಸುವೆ. ಹೊಂದಾವರೆಯಂತೆ ಸುಂದರ ಕಣ್ಣುಳ್ಳ ಪರಮಾತ್ಮನೇ ನಮೋ ನಮಃ. ಹೊಕ್ಕಳದಲ್ಲಿ ಕಮಲವು ಅರಳಿದ ಪದ್ಮನಾಭನಿಗೆ ಪ್ರಣಾಮ. ನಾಲ್ಕು ಮೊಗದ ಬ್ರಹ್ಮನನ್ನು ಹುಟ್ಟಿಸಿದ ಹರಿಗೆ ನನ್ನ ನಮನ. ಸ್ವಯಂಭೂ ಶ್ರೀಹರಿಗೆ ಸಾಷ್ಟಾಂಗ ನಮಸ್ಕಾರ.

ಸಿರಿದೇವಿಯ ಅರಸನಾದ ಆ ಪರಮಾತ್ಮನೇ, ನೀನೇ ಎಲ್ಲ ಇಂದ್ರಿಯಗಳಿಗೂ ಇಂದ್ರಿಯಾಭಿಮಾನಿ ದೇವತೆಗಳಿಗೂ ಒಡೆಯನಾಗಿರುವಿ. ಹತ್ತೂ ಇಂದ್ರಿಯಗಳನ್ನು ಅಂಕಿತದಲ್ಲಿ ಇಟ್ಟುಕೊಂಡವರು ಮಾತ್ರ ನಿನ್ನನ್ನು ಕಾಣಬಲ್ಲರು. ನಾಲ್ಕು ಕೈಗಳಲ್ಲಿ ಚಕ್ರ, ಗದಾ, ಪದ್ಮಗಳನ್ನೂ ಧರಿಸಿದ ಚಕ್ರಧರನಾದ ನಿನಗೆ ಪ್ರಣಾಮ. ಪಿತಾಂಬರನಿಗೆ ನಮಸ್ಕಾರ. ಅಧ್ಯಾತ್ಮ ಜ್ಞಾನರೂಪವಾದ ಯಜ್ಞದಿಂದ ನಿನ್ನನ್ನು ಹೊಂದಬಹುದು. ಯೋಗೀಶ್ವರನಾದ ನಿನ್ನನ್ನು ಭಕ್ತಿಯೋಗಿಗಳು, ಕರ್ಮಯೋಗಿಗಳು, ಜ್ಞಾನಯೋಗಿಗಳೂ, ಸಂತತ ಚಿಂತನದಿಂದ ಆರಾಧಿಸುವರು. ಯೋಗೀಶ್ವರನೂ ನೀನೇ ಆಗಿರುವಿ. ಪ್ರಾಕೃತ ಗುಣ ರಹಿತನೂ, ಸರ್ವೋತ್ತಮನೂ, ಸಾಕ್ಷಾತ್ ಬ್ರಹ್ಮಸ್ವರೂಪಿಯೂ ಆದ ಇಂಥ ಶ್ರೀಹರಿಗೆ ವಂದನೆ.

೪೭೩. ಜಗತ್ಸಂತಿಷ್ಠತೇ ಯತ್ರ ಜಗತೋ ಯೋ ನ ದೃಶ್ಯತೇ ।
ನಮಃ ಸ್ಥೂಲಾತಿಸೂಕ್ಷ್ಮಾಯ ತಸ್ಮೈ ದೇವಾಯ ಶಾರ್ಙ್ಗಿಣೇ

೪೭೫. ಯಂ ನ ಪಶ್ಯಂತಿ ಪಶ್ಯನ್ತೋ ಜಗದಪ್ಯಖಿಲಂ ನರಾಃ ।
ಅಪಶ್ಯದ್ಭಿರ್ಜಗದ್ಯಶ್ಚ ದೃಶ್ಯತೇ ಹೃದಿ ಸಂಸ್ಥಿತಃ ॥

೪೭೬. ಬಹಿರ್ಜ್ಯೋತಿರಲಕ್ಷ್ಯೋ ಯೋ ಲಕ್ಷ್ಯತೇ ಜ್ಯೋತಿಷಃ ಪರಃ ।
ಯಸ್ಮಿನ್ನೇವ ಯತಶ್ಚೈವ ಯಸ್ಯೈತದಖಿಲಂ ಜಗತ್

೪೭೭. ತಸ್ಮೈ ಸಮಸ್ತ ಜಗತಾಂ ಸುನಾಥಾಯ ನಮೋನಮಃ ।
ಆದ್ಯಃ ಪ್ರಜಾಪತಿರ್ಯಸ್ತು ಪಿತೃಣಾಂ ಯಃ ಪರಃ ಪತಿಃ ॥
ಪತಿಃ ಸುರಾಣಾಂ ಯಃ ತಸ್ಮೈ ನಮಃ ಕೃಷ್ಣಾಯ ವೇಧಸೇ

೪೭೫. ಯಃ ಪ್ರವೃತ್ತೈರ್ನಿವೃತ್ತೈಶ್ಚ ಕರ್ಮಭಿಸ್ತು ವಿರಜ್ಯತೇ ।
ಸ್ವರ್ಗಾಪವರ್ಗ ಫಲದೋ ನಮಸ್ತಸ್ಮೈ ಗದಾಭೃತೇ

೪೭೯. ಯಶ್ಚಿಂತ್ಯಮಾನೋ ಮನಸಾ ಸದ್ಯಃ ಪಾಪಂ ವ್ಯಪೋಹತಿ ।
ನಮಸ್ತಸ್ಮೈ ವಿಶುದ್ಧಾಯ ಪರಸ್ಮೈ ಹರಿಮೇಧಸೇ

೪೮೦. ಯಂ ಪಶ್ಯಂತ್ಯಖಿಲಾಧಾರಮೀಶಾನಮಜಮವ್ಯಯಂ ।
ನ ಪುನರ್ಜನ್ಮ ಮರಣಂ ಪ್ರಾಪ್ನುವಂತಿ ನಮಾಮಿ ತಂ

ಚರಾತ್ಮಕವಾದ ಈ ಪ್ರಪಂಚವೆಲ್ಲವೂ ನಿನ್ನನ್ನೇ ಆಧರಿಸಿಕೊಂಡು ನಿಂತಿದೆ. ಆದರೆ ಈ ಜಗತ್ತಿನ ಹೊರ ಕಣ್ಣಿಗೆ ನೀನು ಕಾಣುವುದಿಲ್ಲ. ನೀನು ಮಹತೋ ಮಹೀಯನೂ ಹೌದು. ಅಣೋರಣೀಯನೂ ಅಹುದು. ಜಗತ್ತಿನ ಹುಟ್ಟು, ಇರವು, ಅಳಿವು, ಉಳಿವುಗಳೆಲ್ಲ ನಿನಗೆ ಆಟ. ಇಂಥ ಪ್ರಪಂಚದ ಆಟವಾಡುವ ಶಾಂರ್ಗಪಾಣಿ ಯಾದ ನಿನಗೆ ನಮೋನಮಃ. ಜಗತ್ತನ್ನೆಲ್ಲ ನೋಡಬಲ್ಲ ಬಲ್ಲಿದರೂ ಕೂಡ ನಿನ್ನನ್ನು ಮಾತ್ರ ಕಾಣಲಾರರು. ಆದರೆ ಹೊರ ಜಗತ್ತನ್ನ ಕಾಣಲಪೇಕ್ಷಿಸದೇ ಅಂತರ್ಮುಖಿಗಳಾದ ಮುನಿ ಮಹರ್ಷಿಗಳ ಒಳಗಣ್ಣಿಗೆ ನೀನು ಗೋಚರನಾಗುವಿ. ನೀನು ಇರುವದೇ ಅಂಥವರ ಹೃದಯದಲ್ಲಿ ತಾನೇ!

ಬಾಹ್ಯ ಜ್ಯೋತಿ ಎನಿಸಿದ ಸೂರ್ಯ, ಚಂದ್ರ, ದೀಪ ಮುಂತಾದವುಗಳ ಸಹಾಯ ದಿಂದ ನಿನ್ನನ್ನು ಯಾರೂ ಕಾಣಲರಿಯರು. ಈ ಎಲ್ಲ ಜ್ಯೋತಿಗಳಿಗೆ ಅತೀತನಾದ ಪರಂ ಜ್ಯೋತಿಯೇ ನೀನು. ಈ ವಿಶ್ವವೆಲ್ಲವೂ ಪ್ರಳಯ ಕಾಲದಲ್ಲಿ ನಿನ್ನಲ್ಲಿಯೇ ಸೂಕ್ಷ್ಮ ರೂಪದಿಂದ ಇದ್ದಿತು. ಸೃಷ್ಟಿ ಕಾಲದಲ್ಲಿ ನಿನ್ನಿಂದಲೇ ಹುಟ್ಟಿ ಹೊರಬಂದಿತು. ಈಗ ನಿನ್ನ ಪಾಲನೆಯಲ್ಲಿಯೇ ಬದುಕಿ ಉಳಿದಿದೆ. ಯಾವಾಗಲೂ ನಿನ್ನ ಅಧೀನವಾಗಿಯೇ ಇದೆ.

ಇಂಥ ಸಮಸ್ತ ಪ್ರಪಂಚಕ್ಕೂ ಏಕ ಮಾತ್ರ ಒಡೆಯನಾದ ಜಗನ್ನಾಥನೇ, ನಿನಗೆ ನಮೋನಮಃ. ಪ್ರಪಂಚದ ಆದಿ ಬ್ರಹ್ಮನೂ ನೀನೇ, ಎಲ್ಲ ಪಿತೃ ದೇವತೆಗಳಿಗೆ ಪರಾತ್ಪರ ಅಧಿದೇವತೆಯೂ ನೀನೇ. ಸಕಲ ಗುಂಪಿಗೆ ಒಡೆಯನು ನೀನೇ, ಇಂಥ ಕೃಷ್ಣರೂಪಿ ಪರಬ್ರಹ್ಮ ನಿನಗೆ ನನ್ನ ನಮಸ್ಕಾರ. ಪ್ರವೃತ್ತಿಕರ್ಮ ನಿವೃತ್ತಿ ಕರ್ಮಗಳ ಲೇಪವಿಲ್ಲದ, ವಿಧಿ ನಿಷೇದ ರಹಿತನಾದ ಸರ್ವಕರ್ಮಗಳನ್ನೂ ನಿನ್ನಲ್ಲಿಯೇ ಸಮರ್ಪಿಸಿದ, ನಿಷ್ಕಾಮಕರ್ಮಿಗಳಿಗೆ ಮೋಕ್ಷವನ್ನು ಸಕಾಮಿಗಳಿಗೆ ಸ್ವರ್ಗವನ್ನೂ ನೀಡುವ ಗದಾಧರನಾದ ನಿನಗೆ ನಮಸ್ಕಾರ.

ಮನದಲ್ಲಿ ನೆನೆದರೆ ಸಾಕು, ನೆನೆದವರ ಪಾಪವನ್ನೆಲ್ಲ ನಾಶಮಾಡುವ ಪರಿಶುದ್ಧ ಸ್ವರೂಪನಾದ ಪರಾತ್ಪರ ಪರಮಾತ್ಮ ಶ್ರೀಹರಿಗೆ ನನ್ನ ನಮಸ್ಕಾರ. ನೀನು ಜಗತ್ತಿಗೆ ಆಧಾರ. ಪ್ರಪಂಚಕ್ಕೆ ಒಡೆಯ. ಹುಟ್ಟು ಸಾವು ಇಲ್ಲದವ ಎಂದು ತಿಳಿದವರಿಗೆ ಹುಟ್ಟು ಇಲ್ಲ. ಸಾವೂ ಇಲ್ಲ. ಅಂಥವರು ನಿನ್ನ ಪರಮ ಪದವನ್ನು ಹೊಂದಿ ಉಧ್ಧೃತರಾಗುವರು. ಅಂಥ ನಿನಗೆ ನಮಸ್ಕಾರ.

೪೮೧. ಯೋ ಯಜ್ಞೈರ್ಯಜ್ಞ ಪುರುಷ ಇಜ್ಯತೇ ಯಜ್ಞಮಾಸ್ಥಿತಃ ।
ತಂ ಯಜ್ಞಪುರುಷಂ ವಿಷ್ಣುಂ ನಮಾಮಿ ಪ್ರಭುಮೀಶ್ವರಂ ॥

೪೮೨. ಗೀಯತೇ ಸರ್ವ ವೇದೇಷು ವೇದವಿದ್ಭಿಃ ವಿದಾಂಪತಿಃ ।
ಯಸ್ತಸ್ಮೈ ವೇದವೇದ್ಯಾಯ ವಿಷ್ಣವೇ ಜಿಷ್ಣವೇ ನಮಃ ॥

೪೮೩. ಯತೋ ವಿಶ್ವಂ ಸಮುದ್ಭೂತಂ ಯಸ್ಮಿನ್ ಪ್ರಲಯಮೇಷ್ಯತಿ।
ವಿಶ್ವೋದ್ಭವ ಪ್ರತಿಷ್ಠಾಯ ನಮಸ್ತಸ್ಮೈ ಮಹಾತ್ಮನೇ ॥

೪೮೪. ಬ್ರಹ್ಮಾದಿಸ್ತಂಬ ಪರ್ಯಂತಂ ವ್ಯಾಪ್ತಂ ಯೇನ ಚರಾಚರಂ ।
ಮಾಯಾಜಾಲಂ ಸಮುನ್ನದ್ಧಂ ತಮುಪೇಂದ್ರಮ್
ನಮಾಮ್ಯಹಮ್ ॥

೪೮೫. ಯಸ್ತ್ವಾತೀಯಸ್ವರೂಪಸ್ಥೋ ಬಿಭರ್ತ್ಯಖಿಲಮೀಶ್ವರಃ ।
ವಿಶ್ವಂ ವಿಶ್ವಪತಿಂ ವಿಷ್ಣುಂ ತಂ ನಮಾಮಿ ಪ್ರಜಾಪತಿಂ ।

೪೮೬. ಮೂರ್ತಂ ತಮೋಽಸುರಮಯಂ ತ್ವದ್ವಿನಾ ವಿನಿಹಂತಿ ಯಃ ।
ರಾತ್ರಿಜಂ ಸೂರ್ಯರೂಪೀ ಚ ತಮುಪೇಂದ್ರಂ ನಮಾಮ್ಯಹಮ್ ॥

೪೮೭. ಯಸ್ಯಾಕ್ಷಿಣೀ ಚಂದ್ರಸೂರ್ಯೌ ಸರ್ವಲೋಕೇ ಶುಭಾಶುಭಂ ।
ಪಶ್ಯತಃ ಕರ್ಮ ಸತತಂ ತಮುಪೇಂದ್ರಂ ನಮಾಮ್ಯಹಂ

ನೀನು ಯಜ್ಞ ಪುರುಷ. ಯಜ್ಞಗಳಲ್ಲಿ ಮಂತ್ರಗಳಿಂದ ಆಹೂತರಾದ ಇಂದ್ರ ಅಗ್ನಿ ಮುಂತಾದ ದೇವತೆಗಳಲ್ಲಿ ನಿಂತು ಆಹುತಿಯನ್ನು ಸ್ವೀಕರಿಸಿ ಯಜ್ಞದ ಫಲವನ್ನು ನೀಡುವವನು ನೀನೇ ಆದುದರಿಂದಲೇ ಮಹಾಪ್ರಭುವಾದ ಶ್ರೀ ವಿಷ್ಣುವಿಗೆ ಯಜ್ಞ ಪುರುಷ ಎಂದು ಕರೆಯುತ್ತಾರೆ. ಇಂಥ ಪರಮೇಶ್ವರನಾದ ನಿನಗೆ ನಮಸ್ಕಾರ.

ವೇದ ಬಲ್ಲವರು ಹೊಗಳುವದು ನಿನ್ನನ್ನೇ. ಎಲ್ಲ ವೇದಗಳೂ ಹಾಡುವದು ನಿನ್ನನ್ನೇ ಜ್ಞಾನಿಗಳಿಗೆಲ್ಲ ನೀನೇ ಗತಿ. ವೇದ ಪ್ರತಿಪಾದ್ಯನು ನೀನೇ. ನಿನಗೆ ಯಾವಾಗಲೂ ಗೆಲವು, ವಿಶ್ವದ ತುಂಬ ನಿನ್ನ ವ್ಯಾಪ್ತಿ. ಇಂಥ ನಿನಗೆ ವಂದನೆ.

ಜಗತ್ತು ಹುಟ್ಟಿದ್ದು ನಿನ್ನಿಂದ. ಬಾಳುವದು ನಿನ್ನಿಂದ, ಅಳಿಯುವುದು ನಿನ್ನಿಂದ. ಅದಕ್ಕಾಗಿಯೇ ನೀನು ಮಹಾತ್ಮಾ ಪರಮಾತ್ಮ. ಚತುರ್ಮುಖ ಬ್ರಹ್ಮನಿಂದ ಮೊದಲು ಮಾಡಿ ಕ್ಷುಲ್ಲ ಹುಲ್ಲು ಹುಳದವರೆಗೆ ಚರಾಚರ ಪ್ರಪಂಚವನ್ನೆಲ್ಲ ವ್ಯಾಪಿಸಿದವನು ನೀನೇ. ನಿನ್ನ ಇಚ್ಛಾಶಕ್ತಿಯು ಹೆಣೆದ ಜಾಲದಲ್ಲೇ ಈ ವಿರಾಟ್ ವಿಶ್ವವೆಲ್ಲ ವೂತಲೆಎತ್ತಿ ನಿಂತಿದೆ. ಇಂದ್ರನಿಗೆ

ನಿಯಾಮಕನಾದ ನೀನು ಉಪೇಂದ್ರ ಎಂದು ಕರೆಯಲ್ಪಟ್ಟಿರುವೆ. ನಿನಗೆ ನಾನು ವಂದಿಸುವೆ. ಜಗತ್ತನ್ನು ಸೃಷ್ಟಿ ಮಾಡುವವ ಬ್ರಹ್ಮ. ಸಂಹಾರ ಮಾಡುವವ ಶಿವ. ಸಂರಕ್ಷಣೆ ಮಾಡುವವ ವಿಷ್ಣು. ಇವರಲ್ಲಿ ಮೂರನೇಯವನಾದ ನೀನು ಈ ಪ್ರಪಂಚವನ್ನೆಲ್ಲ ಹೊತ್ತು ನಡೆಸುವಿ. ಒಳಹೊಕ್ಕು ಸಂರಕ್ಷಿಸುವಿ. ಆದುದರಿಂದಲೇ ನೀನು ವಿಶ್ವ ಎಂದು ಕರೆಯಲ್ಪಡುವಿ. ವಸ್ತುತಸ್ತು ನೀನು ವಿಶ್ವಪತಿ ಪ್ರಜಾಪತಿ. ಇಂಥ ಶ್ರೀವಿಷ್ಣುವೇ ನಿನಗೆ ನನ್ನ ನಮಸ್ಕಾರ.

ರಾತ್ರಿ ಕಾಲದಲ್ಲಿ ಲೋಕವನ್ನೆಲ್ಲ ಕಬಳಿಸುವ ಕತ್ತಲೆಯನ್ನು ಸೂರ್ಯನ ರೂಪದಿಂದ ನೀನೇ ಕಳೆಯುವಿ. ಅದು ಮೂರ್ತ ತಮಸ್ಸು. ಆದರೇ ದುಷ್ಟ ದೈತ್ಯರು ಮೂರ್ತಿಮಂತ ಕಗ್ಗತ್ತಲೆ. ಈ ಅಸುರರೂಪ ತಿಮಿರವನ್ನು ನಾಶಮಾಡುವ ಸೂರ್ಯನಾರಾಯಣನೇ ನೀನು. ಇಂಥ ಉಪೇಂದ್ರನಾದ ನಿನಗೆ ನನ್ನ ನಮಸ್ಕಾರ. ಚಂದ್ರ ಸೂರ್ಯರು ನಿನ್ನ ಎರಡು ಕಣ್ಣುಗಳಿದ್ದಂತೆ. ಸರ್ವ ಲೋಕಗಳಲ್ಲಿ ನಡೆಯುವ ಒಳ್ಳೇ ಅಥವಾ ಕೆಟ್ಟ ಕಾರ್ಯಗಳನ್ನೆಲ್ಲ ನೀನು ಯಾವಾಗಲೂ ಈ ದಿವ್ಯ ಚಕ್ಷುಗಳಿಂದ ನೋಡುತ್ತಲೇ ಇರುವಿ. ಸರ್ವಜ್ಞನಾದ ಉಪೇಂದ್ರನೇ ನಿನಗೆ ನನ್ನ ನಮಸ್ಕಾರ.

**೪೮೮. ಯಸ್ಮಿನ್ ಸರ್ವೇಶ್ವರೇ ನಿತ್ಯಂ ಸತ್ಯಮೇತನ್ಮಯೋದಿತಂ ।**
**ನಾನೃತಂ ತಮಹಂ ವಿಷ್ಣುಂ ನಮಾಮಿ ಪ್ರಭುಮವ್ಯಯಮ್ ॥**

**೪೮೯. ಯದೇತತ್ ಸತ್ಯಮುಕ್ತಂ ಮೇ ಭೂಯಾಚ್ಚಾತೋ ಜನಾರ್ದನ।**
**ಸತ್ಯೇನ ತೇನ ಸತತಂ ಪೂರ್ಯಂತಾಂ ಮೇ ಮನೋರಥಾಃ ।**

ಸರ್ವೇಶ್ವರನಾದ ಶ್ರೀಹರಿಯ ವಿಷಯದಲ್ಲಿ ನಾನು ಈವರೆಗೆ ಹೇಳಿದ್ದೆಲ್ಲವೂ ಸತ್ಯವಾಗಿದೆ. ಅದರಲ್ಲಿ ಸ್ವಲ್ಪವೂ ಸುಳ್ಳಿಲ್ಲ. ಅಂಥ ನಿತ್ಯ ಸತ್ಯ ಸ್ವರೂಪಿಯೂ ಮಹಾಪ್ರಭುವೂ ನಾಶರಹಿತನೂ ಆದ ಶ್ರೀವಿಷ್ಣುವನ್ನು ನಾನು ನಮಿಸುತ್ತೇನೆ.

ಜನಾರ್ಧನನೇ, ನಾನು ಮಾಡಿದ ಈ ನಿನ್ನ ಸ್ತೋತ್ರವೆಲ್ಲವೂ ಸತ್ಯವಾಗಿದೆ. ಆ ಸತ್ಯದಿಂದ ಸಂತುಷ್ಟನಾದ ನಿನ್ನ ದಯೆಯಿಂದ ನನ್ನ ಮನೋರಥಗಳೆಲ್ಲವೂ ಪೂರ್ಣವಾಗಲಿ.

ಶ್ರೀ ವಾಮನ ಮಹಾಪುರಾಣದಲ್ಲಿ ದೇವಮಾತೆಯ ತಪಸ್ಸು ಎಂಬ ಇಪ್ಪತ್ತೇಳನೆಯ ಅಧ್ಯಾಯವು ಮುಗಿದುದು



## ಮಾತೆಗೆ ಅಭಯದಾನ

**ಅಧ್ಯಾಯ - ೨೮**

### ಲೋಮಹರ್ಷಣ ಉವಾಚ

೪೯೦. ಏವಂ ಸ್ತುತೋಽಥ ಭಗವಾನ್ವಾಸುದೇವ ಉವಾಚ ತಾಂ ।
ಅದೃಶ್ಯ ಸ್ಸರ್ವ ಭೂತಾನಾಂ ತಸ್ಯಾಸ್ಸಂದರ್ಶನೇ ಸ್ಥಿತಃ ।

### ಶ್ರೀ ಭಗವಾನ್ ಉವಾಚ

೪೯೧. ಮನೋರಥಾಂ ಸ್ತ್ವಮದಿತೇ ಯಾನಿಚ್ಛಸ್ಯಭಿವಾಂಛಿತಾನ್ ।
ತಾಂಸ್ತ್ವಂ ಪ್ರಾಪ್ಸ್ಯಸಿ ಧರ್ಮಜ್ಞೇ ಮತ್ಪ್ರಸಾದಾನ್ನ ಸಂಶಯಃ ॥

೪೯೨. ವೃಣು ತ್ವಂ ಚ ಮಹಾಭಾಗೇ ವರೋ ಯಸ್ತೇ ಹೃದಿ ಸ್ಥಿತಃ।
ಮದ್ದರ್ಶನಂ ಹಿ ವಿಫಲಂ ನ ಕದಾಚಿದ್ಭವಿಷ್ಯತಿ ॥

೪೯೩. ಯಶ್ಚೇಹ ಮದ್ವನೇ ಸ್ಥಿತ್ವಾ ತ್ರಿರಾತ್ರಂ ವೈ ಕರಿಷ್ಯತಿ ।
ಸರ್ವೇ ಕಾಮಾಃ ಸಮೃದ್ಧ್ಯಂತೇ ಮನಸಾ ಯಾನಿಹೇಚ್ಛತಿ ॥

೪೯೪. ದೂರಸ್ಥೋಽಪಿ ವನಂ ಯಸ್ತು ಹೃದಿ ತೇ ಸ್ಮರತೇ ನರಃ ।
ಸೋಽಪಿ ಯಾತಿ ಪರಂ ಸ್ಥಾನಂ ಕಿಂ ಪುನರ್ನಿವಸನ್ನರಃ ॥

೪೯೫. ಯಶ್ಚೇಹ ಬ್ರಾಹ್ಮಣಾನ್ಪಂಚ ತ್ರೀನ್ವಾ ದ್ವಾವೇಕಮೇವ ವಾ ।
ಭೋಜಯೇಚ್ಛ್ರದ್ಧಯಾ ಯುಕ್ತಃ ಸ ಯಾತಿ ಪರಮಾಂ ಗತಿಂ॥

### ಅದಿತಿರುವಾಚ

೪೯೬. ಯದಿ ದೇವ ಪ್ರಸನ್ನಸ್ತ್ವಂ ಭಕ್ತ್ಯಾ ಮೇ ಭಕ್ತವತ್ಸಲ ।
ತ್ರೈಲೋಕಾಧಿಪತಿಃ ಪುತ್ರಸ್ತದಸ್ತು ಮಮ ವಾಸವಃ ॥

೪೯೭. ಹೃತಂ ರಾಜ್ಯಂ ಹೃತಶ್ಚಾಸ್ಯ ಯಜ್ಞಭಾಗ ಇಹಾಸುರೈಃ ।
ತ್ವಯಿ ಪ್ರಸನ್ನೇ ವರದ ತತ್ಪ್ರಾಪ್ನೋತು ಸುತೋ ಮಮ

**ಲೋಮಹರ್ಷಣ :** ಅದಿತಿ ದೇವಿಯು ಮಾಡಿದ ಈ ಸ್ತೋತ್ರದಿಂದ ಭಗವಂತನು ಸರ್ವಪ್ರಾಣಿಗಳಿಗೆ ಅದೃಶ್ಯನಾದರೂ ಅವಳಿಗೆ ಮಾತ್ರ ಪ್ರತ್ಯಕ್ಷ ದರ್ಶನ ಕೊಟ್ಟನು. ಅವಳ ಕಣ್ಣೆದುರಿನಲ್ಲಿಯೇ ನಿಂತು ಮಾತನಾಡಿದನು.

''ಧರ್ಮದ ಮರ್ಮವನ್ನು ಅರಿತ ಅದಿತಿಯೇ, ನೀನು ಯಾವ ಯಾವ ಅಪೇಕ್ಷೆಯನ್ನು ಮಾಡಿರುವಿಯೋ ಅವೆಲ್ಲವನ್ನೂ ಹೊಂದುವಿ. ನಾನು ನಿನ್ನ ಮೇಲೆ ಪ್ರಸನ್ನನಾಗಿದ್ದೇನೆ. ನನ್ನ ಪ್ರಸಾದದಿಂದ ನಿನ್ನ ಮನೋರಥಗಳೆಲ್ಲವೂ ಪೂರ್ಣವಾಗುವವು. ಇದರಲ್ಲಿ ಸಂದೇಹವಿಲ್ಲ. ಭಾಗ್ಯವತಿಯೇ, ನಿನ್ನ ಮನಸ್ಸಿನಲ್ಲಿ ಏನು ಅಪೇಕ್ಷೆ ಇದೆ ಕೇಳಿಕೋ. ನನ್ನ ಕಾಣಿಕೆ ಎಂದೂ ವ್ಯರ್ಥವಾಗುವುದಿಲ್ಲ.

ನನ್ನನ್ನು ಸಾಕ್ಷಾತ್ತಾಗಿ ಕಂಡ ನಿನ್ನ ಮನೋರಥವು ಪೂರ್ಣವಾಗುವದು ಮಾತ್ರವಲ್ಲದೇ ಈ ನನ್ನ ವನದಲ್ಲಿ ಮೂರು ರಾತ್ರಿ ಇದ್ದು ನನ್ನ ಸೇವೆ ಮಾಡಿದವರ ಮನೋಭೀಷ್ಟಗಳೆಲ್ಲವೂ ಪೂರ್ಣವಾಗುತ್ತದೆ. ಇಚ್ಛಿಸಿದ್ದೆಲ್ಲವೂ ಈಡೇರುತ್ತದೆ. ದೂರ ದೇಶದಲ್ಲಿದ್ದ ಮಾನವನು ಈ ಅದಿತಿ ವನವನ್ನು ನೆನೆದ ಮಾತ್ರಕ್ಕೆ ದಿವ್ಯ ಗತಿಯನ್ನು ಹೊಂದುತ್ತಾನೆ. ಇದ್ದವರ ಸಿದ್ಧಿಯ ಬಗೆಗೆ ಹೇಳುವದೇನು? ಈ ಕ್ಷೇತ್ರದಲ್ಲಿ ಐದು ಜನ ಬ್ರಾಹ್ಮಣರನ್ನಾಗಲಿ ಅಥವಾ ಮೂರು ಇಲ್ಲವೇ ಎರಡು ಕೊನೆಗೆ ಒಬ್ಬ ಬ್ರಾಹ್ಮಣನಿಗಾದರೂ ಭಕ್ತಿಯಿಂದ ಭೋಜನ ಮಾಡಿಸಿದರೆ ಪರತ್ರ ಸದ್ಗತಿಯನ್ನು ಹೊಂದುವನು.

**ಅದಿತಿ :** ಭಕ್ತವತ್ಸಲನಾದ ಭಗವಂತನೇ, ಲೀಲಾಲೋಲನಾದ ನೀನು ನನ್ನ ಭಕ್ತಿಗೆ ನಿಜವಾಗಿ ಒಲಿದಿದ್ದರೆ ನನ್ನ ಮಗನಾದ ದೇವೇಂದ್ರನು ಮೊದಲಿನಂತೆ ಮೂರು ಲೋಕಕ್ಕೆ ಅಧಿಪತಿಯಾಗಲಿ. ಈಗ ದೈತ್ಯರು ಅವನ ರಾಜ್ಯವನ್ನು ಕಸಿದಿದ್ದಾರೆ. ಅಧಿಕಾರವನ್ನು ಕಿತ್ತುಕೊಂಡಿದ್ದಾರೆ. ಅವರ ಪಾಲಿನ ಯಜ್ಞಭಾಗವನ್ನು ಅಪಹರಿಸಿದ್ದಾರೆ. ಇದೆಲ್ಲವೂ ನಿನ್ನ ಪ್ರಸಾದದಿಂದ ಅವನಿಗೆ ಮರಳಿ ದೊರಕುವಂತಾಗಲಿ.

ಕೇಶವನೇ, ನನ್ನ ಮಗನಾದ ಇಂದ್ರನ ಸಾಮ್ರಾಜ್ಯ ಕಳೆದು ಹೋದದ್ದು ನನಗೆ ಅಷ್ಟು ದುಃಖವಾಗಿಲ್ಲ. ಆದರೆ ನಿನ್ನನ್ನು ನಂಬಿದ ದೇವತೆಗಳಿಗೆ ಸ್ಥಾನಭ್ರಂಶ ಮತ್ತೂ ಪವಿತ್ರವಾದ ಯಜ್ಞಾನ್ನದ ವಿಲೋಪವಾದದ್ದು ನನ್ನ ಮನಸ್ಸಿನಲ್ಲಿ ಬಹಳ ದುಃಖವನ್ನುಂಟು ಮಾಡಿದೆ.

೪೯೮. ಹೃತ ರಾಜ್ಯಂ ನ ದುಃಖಾಯ ಮಮ ಪುತ್ರಸ್ಯ ಕೇಶವ ।
ಪ್ರಸನ್ನದಾಯ ವಿಭ್ರಂಶಃ ಪೀಡಾಂ ಮೇ ಕುರುತೇ ಹೃದಿ ॥

ಭಗವಾನುವಾಚ

೪೯೯. ಕೃತಃಪ್ರಸಾದೋ ಹಿ ಮಯಾ ತವ ದೇವಿ ಯಥೇಪ್ಸಿತಂ ।
ಸ್ವಾಂಶೇನ ಚೈವ ತೇ ಗರ್ಭೇ ಸಂಭವಿಷ್ಯಾಮಿ ಕಶ್ಯಪಾತ್

೫೦೦. ತವ ಗರ್ಭಸಮುದ್ಭೂತಸ್ತತಸ್ತೇ ಯೇ ಸುರಾರಯಃ
ತಾನಹಂ ನಿಹನಿಷ್ಯಾಮಿ ನಿರ್ವೃತಾ ಭವ ನಂದಿನಿ ॥

ಅದಿತಿರುವಾಚ

೫೦೧. ಪ್ರಸೀದ ದೇವ ದೇವೇಶ ನಮಸ್ತೇ ವಿಶ್ವಭಾವನ ।
ನಾಹಂ ತ್ವಾಮುದರೇ ವೋಢುಮೀಶ ಶಕ್ಷ್ಯಾಮಿ ಕೇಶವ
ಯಸ್ಮಿನ್ ಪ್ರತಿಷ್ಠಿತಂ ಸರ್ವಂ ವಿಶ್ವಯೋನಿಸ್ತ್ವಮೀಶ್ವರಃ ॥

ಶ್ರೀ ಭಗವಾನುವಾಚ

೫೦೨. ಅಹಂ ಚ ತ್ವಾಂ ವಹಿಷ್ಯಾಮಿ ಸ್ವಾತ್ಮಾನಂ ಚೈವ ನಂದಿನಿ ।
ನ ಚ ಪೀಡಾಂ ಕರಿಷ್ಯಾಮಿ ಸ್ವಸ್ತಿ ತೇಽಸ್ತು ವ್ರಜಾಮ್ಯಹಂ ॥

## ಲೋಮಹರ್ಷಣ ಉವಾಚ

೫೦೩. ಇತ್ಯುಕ್ತ್ವಾಂತರ್ಹಿತೇ ದೇವೇ ದಿತಿರ್ಗರ್ಭಂ ಸಮಾದಧೇ

೫೦೪. ಗರ್ಭಸ್ಥಿತೇ ತತಃ ಕೃಷ್ಣೇ ಚಚಾಲ ಸಕಲಾ ಕ್ಷಿತಿಃ ।
ಚಕಂಪಿರೇ ಮಹಾಶೈಲಾಃ ಜಗ್ಮುಃ ಕ್ಷೋಭಃ ಮಹಾಬ್ಧಯಃ ।

೫೦೫. ಯತೋ ಯತೋ ದಿತಿರ್ಯಾತಿ ದದಾತಿ ಪದಮುತ್ತಮಮ್
ತತಸ್ತತಃ ಕ್ಷಿತಿಃ ಖೇದಾನ್ನನಾಮ ದ್ವಿಜಪುಂಗವಾಃ

೫೦೬. ದೈತ್ಯಾನಾಮಪಿ ಸರ್ವೇಷಾಂ ಗರ್ಭಸ್ಥೇ ಮಧುಸೂದನೇ ।
ಬಭೂವ ತೇಜಸೋ ಹಾನಿರ್ಯಥೋಕ್ತಂ ಪರಮಾತ್ಮನಾ ॥

**ಶ್ರೀವಿಷ್ಣು :** ದೇವಿ, ನಾನು ನಿನ್ನ ಮೇಲೆ ಸುಪ್ರಸನ್ನನಾಗಿದ್ದೇನೆ. ನಿನ್ನ ಅಪೇಕ್ಷೆಯ ಪೂರ್ತಿಗಾಗಿ ನನ್ನ ಅಭಿನ್ನಾಂಶದಿಂದ ನಿನ್ನ ಗರ್ಭದಲ್ಲಿ ಕಶ್ಯಪ ಕುಮಾರನಾಗಿ ನಾನು ಅವತರಿಸುವೆನು. ನಿನ್ನ ಹೊಟ್ಟೆಯಿಂದ ಹುಟ್ಟಿದ ನಾನು ''ದೇವತೆಗಳ ಶತ್ರು'' ಎಂದು ಯಾರು ಯಾರು ಭೂಮಿಯಲ್ಲಿ ಇರುವವರೋ ಆ ಎಲ್ಲ ಅಸುರರನ್ನು ಸಂಹರಿಸುವೆನು. ನೀನು ನಿಶ್ಚಿಂತಳಾಗು. ಸಂತೋಷದಿಂದ ಇರು.

**ಅದಿತಿ :** ವಿಶ್ವವನ್ನು ರಕ್ಷಿಸುವ ಕೇಶವನೇ, ಪ್ರಸನ್ನನಾಗು. ದೇವತೆಗಳಿಗೆಲ್ಲ ಶಾಸಕನಾದ ದೇವರೆಂದರೆ ನೀನೇ. ವಿಶ್ವಾಧಾರನಾದ ನಿನ್ನನ್ನು ನಾನು ನನ್ನ ಹೊಟ್ಟೆಯಲ್ಲಿ ಹೇಗೆ ಹೊರಲಿ! ಭಗವನ್, ನಿನಗೆ ನನ್ನ ನಮಸ್ಕಾರ. ಅಖಂಡ ಜಗದಂಡ ಮಂಡಲ ವನ್ನೆಲ್ಲ ಹೊತ್ತವನು ನೀನು, ಹುಟ್ಟಿಸಿದವನು ನೀನು. ಇಂಥ ಮಹಾ ಸಮರ್ಥನಾದ ನಿನ್ನನ್ನು ನನ್ನ ಈ ಚಿಕ್ಕ ಉದರದಲ್ಲಿ ನಾನು ಧರಿಸಲು ಶಕ್ತಳಲ್ಲ.

**ಶ್ರೀವಿಷ್ಣು :** ಆನಂದದಾಯಕಳಾದ ಅದಿತಿಯೇ, ನೀನು ನನ್ನನ್ನು ಹೊರುವುದು ಬೇಡ, ನಾನೇ ನಿನ್ನನ್ನು, ನನ್ನನ್ನೂ ಹೊತ್ತು ಹುಟ್ಟುವೆನು. ನಿನಗೆ ತುಸುವೂ ನೋವು ಆಗದಂತೆ ನಿನ್ನಿಂದ ನಾನು ಅವತರಿಸಿ ಬರುವೆನು. ನಿನಗೆ ಕಲ್ಯಾಣವಾಗಲಿ, ನಾನು ಹೋಗಿ ಬರುವೆ.''

**ಲೋಮಹರ್ಷಣ :** ಭಗವಂತನಾದ ಶ್ರೀಹರಿಯು ಇಂತು ನುಡಿದು ಅದಿತಿಯನ್ನು ಸಂತೈಸಿ ಅಲ್ಲಿಯೇ ಅಂತರ್ಧಾನ ಹೊಂದಿದನು. ಮುಂದೆ ಕೆಲವೇ ದಿನಗಳಲ್ಲಿ ಆ ದೇವಮಾತೆಯು ಗರ್ಭ ಧರಿಸಿದಳು. ಶ್ರೀ ಕೃಷ್ಣನು ಅವಳ ಬಸಿರಿನಲ್ಲಿ ಮೂಡಿದಾಗ ಭೂಮಂಡಲವೆಲ್ಲವೂ ಆಕಂಪಿಸಿತು. ಬೆಟ್ಟಗಳು ನಡುಗಿದವು. ದೊಡ್ಡ ದೊಡ್ಡ ಸಮುದ್ರಗಳು ಅಲ್ಲೋಲ ಕಲ್ಲೋಲವಾದವು. ಭಗವಂತನನ್ನು ಬಸಿರಿನಲ್ಲಿ ಹೊತ್ತ ಅದಿತಿದೇವಿಯು ಹೆಜ್ಜೆ ಇರಿಸಿದಲ್ಲೆಲ್ಲ ಭೂಮಿಯು ಬಾಗುತ್ತಿತ್ತು. ನೆಲ ನಮ್ರವಾಗುತ್ತಿತ್ತು. ಬ್ರಾಹ್ಮಣೋತ್ತಮರೇ, ಆ ಮಧುಸೂದನನು ಕಶ್ಯಪಕಾಮಿನಿಯ ಕುಕ್ಷಿಯಲ್ಲಿ ಕಾಣಿಸಿಕೊಂಡ ಕೂಡಲೇ ಸಕಲ ದಾನವರ ತೇಜಸ್ಸು ಕ್ಷೀಣವಾಯಿತು. ಮಾತನ್ನು ಶ್ರೀ ವಿಷ್ಣು ಮೊದಲೇ ಸತ್ಯವಾಗಿ ಹೇಳಿದ್ದನು.

ವಾಮನ ಮಹಾಪುರಾಣದಲ್ಲಿ ಮಾತೆಗೆ ಅಭಯದಾನ ಎಂಬ ಇಪ್ಪತ್ತೆಂಟನೇಯ ಅಧ್ಯಾಯ ಮುಗಿದುದು

—o—

ವಿವೇಕ - ಅವಿವೇಕ

ಅಧ್ಯಾಯ - ೨೯

೫೦೮. ನಿಸ್ತೇಜಸೋಽಸುರಾನ್ ದೃಷ್ಟ್ವಾ ಸಮಸ್ತಾನಸುರೇಶ್ವರಃ ।
ಪ್ರಹ್ಲಾದಮಥ ಪಪ್ರಚ್ಛ ಬಲಿರಾತ್ಮಪಿತಾಮಹಂ ॥

ಬಲಿರುವಾಚ

೫೦೯. ತಾತ ನಿಸ್ತೇಜಸೋ ದೈತ್ಯಾ ನಿರ್ದಗ್ಧಾ ಇವ ವಹ್ನಿನಾ ।
ಕಿಮೇತೇ ಸಹಸೈವಾದ್ಯ ಬ್ರಹ್ಮದಂಡಹತಾ ಇವ ॥

೫೧೦. ದುರಿಷ್ಟಂ ಕಿಂ ನು ದೈತ್ಯಾನಾಂ ಕಿಂ ಕೃತ್ಯಾ ಸುರನಿರ್ಮಿತಾ ।
ನಾಶಾಯೈಷಾ ಸಮುದ್ಭೂತಾ ಯೇನ ನಿಸ್ತೇಜಸೋಽಸುರಾಃ ।

ಲೋಮಹರ್ಷಣ ಉವಾಚ

೫೧೧. ಇತ್ಥಂ ದೈತ್ಯವರಸ್ತೇನ ಪೃಷ್ಟಃ ಪೌತ್ರೇಣ ಬ್ರಾಹ್ಮಣಾಃ ।
ಚಿರಂ ಧ್ಯಾತ್ವಾ ಜಗಾದೈವಮಸುರಂ ತಂ ತದಾ ಬಲಿಂ ॥

ಪ್ರಹ್ಲಾದ ಉವಾಚ

೫೧೨. ಚಲಂತಿ ಗಿರಯೋ ಭೂಮಿರ್ಜಹಾತಿ ಸಹಜಾಂ ಸ್ಥಿತಿಂ ।
ನದ್ಯಃ ಸಮುದ್ರಾಃ ಕ್ಷುಭಿತಾಃ ದೈತ್ಯಾ ನಿಸ್ತೇಜಸಃ ಕೃತಾಃ ॥

೫೧೩. ಸೂರ್ಯೋದಯೇ ಯಥಾಪೂರ್ವಂ ತಥಾ ಗಚ್ಛಂತಿ ನ ಗ್ರಹಾಃ।
ದೇವತಾನಾಂ ಪರಾ ಲಕ್ಷ್ಮೀಃ ಕಾರಣೇ ನಾನುಮೀಯತೇ ॥

೫೧೪. ಮಹದೇತನ್ಮಹಾಬಾಹೋ ಕಾರಣಂ ದಾನವೇಶ್ವರ ।
ನಹ್ಯಲ್ಪಮಿತಿ ಮಂತವ್ಯಂ ಕ್ರಿಯಾ ಕಾರ್ಯಾ ಕಥಂಚನ ॥

ಲೋಮಹರ್ಷಣ ಉವಾಚ

೫೧೫. ಇತ್ಯುಕ್ತ್ವಾ ದಾನವಪತಿಂ ಪ್ರಹ್ಲಾದಃ ಸೋಽಸುರೋತ್ತಮಃ ।
ಅತ್ಯರ್ಥಭಕ್ತೋ ದೇವೇಶಂ ಜಗಾಮ ಮನಸಾ ಹರಿಂ

**ಲೋಮಹರ್ಷಣ :** ಅತ್ತ ಅದಿತಿಯ ಹೊಟ್ಟೆಯಲ್ಲಿ ಹರಿಯು ಸನ್ನಿಹಿತನಾದಾಗ ಇತ್ತ ದೈತ್ಯರ ತೇಜೋವಧೆಯಾಯಿತು. ಯಾವ ದಾನವರ ಮುಖದ ಮೇಲೆಯೂ ಕಳೆಕಾಂತಿ ಇಲ್ಲದಂತಾಯಿತು. ಬಲಿಚಕ್ರವರ್ತಿಯು ಇದನ್ನು ಗಮನಿಸಿದ. ತನ್ನ ಅಜ್ಜನಾದ ಪ್ರಹ್ಲಾದನ ಬಳಿಗೆ ಹೋಗಿ ಕೇಳಿದ-

'ಅಜ್ಜನೇ, ನಮ್ಮ ದೈತ್ಯರೆಲ್ಲರೂ ತೇಜೋಹೀನರಾಗಿದ್ದಾರೆ. ಬೆಂಕಿಯಲ್ಲಿ ಬೆಂದಂತೆ ಎಲ್ಲರೂ ಕಳೆಗೆಟ್ಟಿದ್ದಾರೆ. ಬ್ರಹ್ಮದಂಡದಿಂದ ಹೊಡೆತ ತಿಂದವರಂತೆ ಎಲ್ಲ ದಾನವರ ಈ ತೇಜೋವಧೆಗೆ ಕಾರಣವೇನು? ಇದೇನು ದೈತ್ಯರ ದುರಾದೃಷ್ಟವೋ! ಅಥವಾ ದೇವತೆಗಳು

ಮಾಡಿಸಿದ ಮಂತ್ರಮಾಟದ ಪ್ರಭಾವವೋ! ಅಸುರರೆಲ್ಲರನ್ನೂ ನಿಸ್ತೇಜರನ್ನಾಗಿ ಮಾಡಿದ ಆ ಮಾಟ ಹೂಟಗಳು ಯಾವವು? ಇವೆಲ್ಲವೂ ನಮ್ಮ ನಾಶಕ್ಕಾಗಿಯೇ ಉದ್ಭೂತವಾಗಿವೆ.

**ಲೋಮಹರ್ಷಣ :** ಹೀಗೆ ಮೊಮ್ಮಗನಾದ ಬಲಿರಾಜನು ಪ್ರಶ್ನೆ ಕೇಳಿದಾಗ ಅವನ ಪಿತಾಮಹನಾದ ಪ್ರಲ್ಹಾದನು ಬಹಳ ಹೊತ್ತು ಆಲೋಚಿಸಿದನು. ಅನಂತರ ಬಲಿಚಕ್ರವರ್ತಿಯನ್ನು ಕುರಿತು ಇಂತು ನುಡಿದನು.

**ಪ್ರಲ್ಹಾದ :** ಬೆಟ್ಟಗಳು ಚಲಿಸುತ್ತವೆ. ಭೂಮಿಯು ತನ್ನ ಸಹಜವಾದ ಸ್ಥಿರತೆಯನ್ನು ಬಿಟ್ಟು ಕಂಪಿಸುತ್ತದೆ. ನದಿಗಳು ತುಳುಕಾಡುತ್ತವೆ. ಸಾಗರಗಳು ಅಲ್ಲೋಲ ಕಲ್ಲೋಲ ವಾಗಿವೆ. ದಾನವರೆಲ್ಲರೂ ಕಳೆಗೆಟ್ಟು ನಿಸ್ತೇಜರಾಗಿ ಮಾಡಲ್ಪಟ್ಟಿದ್ದಾರೆ. ಸೂರ್ಯೋದಯ ಸಮಯದಲ್ಲಿ ಎಂದಿನಂತೆ ಗ್ರಹಗಳು ಋಜುಮಾರ್ಗದಲ್ಲಿ ಚಲಿಸುವದಿಲ್ಲ. ಇದು ದೇವತೆಗಳಿಗೆ ಭಾಗ್ಯಲಕ್ಷ್ಮಿಯು ಬರುವ ಶುಭ ಚಿನ್ಹವಿರುತ್ತದೆಯೆಂದು ಈ ಎಲ್ಲ ಕಾರಣ ಗಳಿಂದ ತರ್ಕಿಸಬಹುದಾಗಿದೆ.

ಬಲಿಷ್ಠನಾದ ದಾನವರ ದೊರೆಯೇ, ಇದು ಸಣ್ಣ ವಿಷಯವೆಂದು ಉದಾಸೀನ ಮಾಡತಕ್ಕದ್ದಲ್ಲ. ದೈತ್ಯಕುಲಕ್ಕೆ ಇದೊಂದು ದೊಡ್ಡ ಕುತ್ತು. ಮಹಾ ಆಪತ್ತು. ಹೇಗಾದರೂ ಮಾಡಿ ಇದಕ್ಕೆ ಪ್ರತೀಕಾರ ಮಾಡಲೇಬೇಕು.''

ಅಸುರರಲ್ಲಿ ಉತ್ತಮನಾದ ಪ್ರಲ್ಹಾದನು ದೈತ್ಯಕುಲದ ಅಧೀಶನಾದ ಬಲಿರಾಜ ನನ್ನು ಕುರಿತು ಹೀಗೆ ನುಡಿದು, ತನ್ನ ಬಗೆಯಲ್ಲಿ ಭಗವಂತನನ್ನು ಭಕ್ತಿಯಿಂದ ನೆನೆಯ ತೊಡಗಿದನು. ಅವನು ಶ್ರೀಹರಿಯ ಆತ್ಯಂತಿಕ ಏಕಾಂತ ಭಕ್ತನಲ್ಲವೇ!

೫೧೬. ಸ ಧ್ಯಾನಂ ಪ್ರಥಮಂ ಕೃತ್ವಾ ಪ್ರಲ್ಹಾದಸ್ತು ತತೋಽಸುರಃ ।
ತದಂತಶ್ಚ ವಸೂನ್ರುದ್ರಾನಶ್ವಿನೌ ಮರುತಸ್ತಥಾ ॥

೫೧೭. ಸಾಧ್ಯಾನ್ವಿಶ್ವಾಂಸ್ತಥಾ ದೇವಾನ್ಗಂಧರ್ವೋರಗರಾಕ್ಷಸಾನ್ ।
ವಿರೋಚನಂ ಚ ತನಯಂ ಬಲಿಂ ಚಾಸುರನಾಯಕಂ ।

೫೧೮. ಜಂಭಂ ಕುಜಂಭಂ ನರಕಂ ಬಾಣಮನ್ಯಾಂಸ್ತಥಾಸುರಾನ್ ।
ಆತ್ಮಾನಂ ಗಗನಂ ವಾಯುಂ ಮನಸ್ತೋಯಂ ಹುತಾಶನಂ ॥

೫೨೦. ಸಮುದ್ರಾದ್ರಿದ್ರುಮದ್ವೀಪಾನ್ ಸರಾಂಸಿ ಚ ಪಶೂನ್ಮಹೀಂ ।
ವಯೋಮನುಷ್ಯಾನಖಿಲಾಂಸ್ತಥೈವ ಚ ಸರೀಸೃಪಾನ್ ॥

೫೨೧. ಸಮಸ್ತಲೋಕ ಸ್ರಷ್ಟಾರಂ ಬ್ರಹ್ಮಾಣಂ ಭವಮೇವ ಚ ।
ಗ್ರಹನಕ್ಷತ್ರ ತಾರಾದ್ಯಾನ್ನೃಪೀಂಶ್ಚೈವ ಪ್ರಜಾಪತಿಂ ॥

೫೨೨. ಸಂಪಶ್ಯನ್ವಿಸ್ಮಯಾವಿಷ್ಟಃ ಪ್ರಕೃತಿಸ್ಥಃಕ್ಷಣಾತ್ಪುನಃ ।
ಪ್ರಲ್ಹಾದಃ ಪ್ರಾಹ ದೈತ್ಯೇಂದ್ರಂ ಬಲಿಂ ವೈರೋಚನಂ ತದಾ ॥

೫೨೩. ವತ್ಸ ಜ್ಞಾತಂ ಮಯಾ ಸರ್ವಂ ಯದರ್ಥಂ ಭವತಾಮಿಯಂ ।
ತೇಜಸೋ ಹಾನಿರುತ್ಪನ್ನಾ ತಚ್ಛೃಣು ತ್ವಮಶೇಷತಃ ॥

೫೨೪. ದೇವ ದೇವೋ ಜಗದ್ಯೋನಿ ರ್ಜಗದಾದಿರಜಃ ಪ್ರಭುಃ ।
ಅನಾದಿರಾದಿರ್ವಿಶ್ವಸ್ಯ ವರೇಣ್ಯೋ ವರದೋ ಹರಿಃ

ಹೀಗೆ ಆ ರಾಕ್ಷಸರಾಜನಾದ ಪ್ರಲ್ಹಾದನು ಮೊದಲು ಶ್ರೀಹರಿಯನ್ನು ಧ್ಯಾನ ಮಾಡಿದನು. ಅನಂತರ ತನ್ನ ಮನಸ್ಸಿನಲ್ಲಿ ಭಗವಂತನ ಯಥಾರ್ಥ ಸ್ವರೂಪವನ್ನು ಚಿಂತನ ಮಾಡಿದನು. ಆ ಪ್ರಲ್ಹಾದನ ಧ್ಯಾನ ದೃಷ್ಟಿಗೆ ಅದಿತಿದೇವಿಯ ಉದರದಲ್ಲಿ ಮೂಡಿದ ಪರಮಾತ್ಮನ ವಾಮನಾಕೃತಿಯು ಗೋಚರವಾಯಿತು. ಆ ಭಗವಂತನ ಕುಳ್ಳ ಆಕೃತಿಯಲ್ಲಿಯೇ ಅಷ್ಟವಸುಗಳು, ಹನ್ನೊಂದು ರುದ್ರರು, ಮರುದ್ಗಣಗಳು, ಅಶ್ವಿನೀ ಕುಮಾರರೂ ಕಾಣಿಸಿದರು. ಅದರಂತೆ ಸಾಧ್ಯ, ವಿಶ್ವ ಮುಂತಾದ ದೇವತಾಗಣಗಳೂ ಅನೇಕಾನೇಕ ಗಂಧರ್ವ, ನಾಗ ರಾಕ್ಷಸ ಮುಂತಾದವರೂ ಆ ಅದಿತಿ ಗರ್ಭಸ್ಥನಾದ ವಾಮನ ಶರೀರದಲ್ಲಿ ಕಂಡುಬಂದರು. ಇನ್ನೂ ಆಶ್ಚರ್ಯದ ಮಾತೆಂದರೆ ಪ್ರಲ್ಹಾದನ ಮಗನಾದ ವಿರೋಚನನೂ ಅಲ್ಲಿಯೇ ಇದ್ದ. ಈಗ ಅಸುರಕುಲದ ಅರಸನಾದ ಬಲಿಚಕ್ರವರ್ತಿಯೂ ಅಲ್ಲಿಯೇ ನಿಂತಿದ್ದ. ಅವರಲ್ಲದೇ ಜಂಭ, ಕುಜಂಭ, ನರಕಾಸುರ, ಬಾಣಾಸುರ, ಇನ್ನೂ ಅನ್ಯಾನ್ಯ ದೈತ್ಯಕುಲದ ಧುರೀಣರೆಲ್ಲರೂ ಅಲ್ಲಿ ಪ್ರಲ್ಹಾದನ ಒಳಗಣ್ಣಿಗೆ ಕಾಣಿಸಿಕೊಂಡರು. ಇಷ್ಟೇ ಏಕೆ! ಸ್ವಯಂತಾನೂ ಆ ವಾಮನ ದೇಹದಲ್ಲಿ ಇದ್ದದ್ದು ಕಂಡುಬಂದಿತು. ಅಲ್ಲದೆ ಅಲ್ಲಿ ಗಗನವಿದ್ದಿತು. ಗಾಳಿ ಇದ್ದಿತು. ಮನಸ್ಸು, ನೀರು, ಬೆಂಕಿ, ಏನಿಲ್ಲ? ಸಮುದ್ರಗಳು, ಬೆಟ್ಟಗಳು, ಗಿಡಗಳು, ನಡುಗಡ್ಡೆ, ಸರೋವರ, ಪಶುಪಕ್ಷಿ, ಭೂಮಿ, ಹಾವು, ಅಸಂಖ್ಯ ಮಾನವರು, ದಾನವರು....... ಒಂದೇ, ಎರಡೇ, ಹತ್ತೇ, ಸಾವಿರವೇ ಸಮಸ್ತ ಬ್ರಹ್ಮಾಂಡವೇ ಅಲ್ಲಿ ಅಡಕವಾಗಿತ್ತು. ಹದಿನಾಲ್ಕು ಲೋಕಗಳನ್ನು ಸೃಜಿಸುವ ಬ್ರಹ್ಮದೇವರು, ಮಹಾದೇವರು, ವಾಮನ ವಪುಸ್ಸಿನಲ್ಲಿ ವಿರಾಜಮಾನರಾಗಿದ್ದರು. ಗ್ರಹ, ನಕ್ಷತ್ರ, ನೀಹಾರಿಕೆ, ಋಷಿಗಳು ಪ್ರಜಾಪತಿಗಳು ಇತ್ಯಾದಿ ಇತ್ಯಾದಿ. ಕಂಡಂತೆಲ್ಲಾ ಕೌತುಕದ ಕೊನೆಯೇರಿ ನಿಂತ ಪ್ರಹ್ಲಾದನು ಮತ್ತೆ ಮತ್ತೆ ಕಣ್ಣಗಲಿಸಿ ನೋಡಿದನು. ನೋಡಿ ನೋಡಿ ವಿಚಾರಿಸಿದನು. ವಿಚಾರ ನಂತರದಲ್ಲಿ ಅವನಿಗೆ ಸಮಾಧಾನವಾಯಿತು. ಆಗ ಅವನು ಹೊರಗಣ್ಣು ತೆರೆದು ತನ್ನೆದುರು ಕುಳಿತ ಮೊಮ್ಮಗ (ವಿರೋಚನನ ಮಗ) ಬಲಿಚಕ್ರವರ್ತಿಯನ್ನು ಉದ್ದೇಶಿಸಿ ಇಂತು ನುಡಿದನು -

''ವತ್ಸ, ತಿಳಿಯಿತು. ಈಗ ನನಗೆಲ್ಲವೂ ಅರ್ಥವಾಯಿತು. ನಿಮ್ಮೆಲ್ಲ ದೈತ್ಯರ ತೇಜೋಭಂಗಕ್ಕೆ ಸರಿಯಾದ ಕಾರಣವನ್ನು ನಾನು ಈಗ ಕಂಡುಹಿಡಿದಿದ್ದೇನೆ. ಅದನ್ನು ನಿನಗೀಗ ಪೂರ್ತಿಯಾಗಿ ಹೇಳುತ್ತೇನೆ. ಕೇಳು -

''ಬಲಿರಾಜ, ಈ ಪ್ರಪಂಚಕ್ಕೆಲ್ಲ ಮೂಲಕಾರಣನೆಂದರೆ ಸಾಕ್ಷಾತ್ ಶ್ರೀಹರಿ. ಸರ್ವಕಾರಣವಾದ ಅವನಿಗೆ ಮಾತ್ರ ಈ ಪ್ರಪಂಚದ ಹುಟ್ಟು, ಸಾವು, ರಕ್ಷಣೆ, ಮುಂತಾದವುಗಳಿಗೆಲ್ಲ ಅವನೇ ಹೇತುಭೂತನಾಗಿದ್ದಾನೆ. ಮಹಾಪ್ರಭುವಾದ ಅವನು ಎಲ್ಲ ದೇವತೆಗಳಿಗೂ ಪೂಜ್ಯನಾದ ದೇವರು ಎನಿಸಿದ್ದಾನೆ.

೫೨೫. ಪರಾವರಾಣಾಂ ಪರಮಃ ಪರಾಪರವತಾಂ ಗತಿಃ ।
ಪ್ರಭುಃ ಪ್ರಮಾಣಂ ಮಾನಾನಾಂ ಸಪ್ತಲೋಕಗುರೋರ್ಗುರುಃ
ಸ್ಥಿತಿಂ ಕರ್ತುಂ ಜಗನ್ನಾಥೋ ಹ್ಯದಿತ್ಯಾ ಗರ್ಭಗಃ ಪ್ರಭುಃ

೫೨೬. ಪ್ರಭುಃ ಪ್ರಭೂಣಾಂ ಪರಮಃ ಪರಾಣಾಂ
ಅನಾದಿಮಧ್ಯೋ ಭಗವಾನನಂತಃ ।
ತ್ರೈಲೋಕ್ಯಮಂಶೇನ ಸನಾಥಮೇಕಃ ॥
ಕರ್ತುಂ ಮಹಾತ್ಮಾ ದಿತಿಜೋಽವತೀರ್ಣಃ

೫೨೭. ನ ಯಸ್ಯ ರುದ್ರೋ ನ ಚ ಪದ್ಮಯೋನಿಃ
ನೇಂದ್ರೋ ನ ಸೂರ್ಯೇಂದು ಮರೀಚಿಮಿಶ್ರಾಃ ॥
ಜಾನಂತಿ ದೈತ್ಯಾಧಿಪತೇ ಸ್ವರೂಪಂ
ಸ ವಾಸುದೇವಃ ಕಲಯಾವತೀರ್ಣಃ ॥

೫೨೮. ಯಮಕ್ಷರಃ ವೇದವಿದೋ ವದಂತಿ
ವಿಶಂತಿ ಯತ್ರೈವ ವಿಧೂತಪಾಪಾಃ ॥
ಯಸ್ಮಿನ್ಪ್ರವಿಷ್ಟಾ ನ ಪುನರ್ಭವಂತಿ
ತಂ ವಾಸುದೇವಂ ಪ್ರಣಮಾಮಿ ಚಾದ್ಯಂ ॥

೫೨೯. ಭೂತಾನ್ಯಶೇಷಾಣಿ ಯತೋ ಭವಂತಿ
ಯಥೋರ್ಮಯಸ್ತೋಯ ನಿಧೇರಜಸ್ರಂ
ಲಯಂ ಚ ಯಸ್ಮಿನ್ ಪ್ರಲಯೇ ಪ್ರಯಾಂತಿ
ತಂ ವಾಸುದೇವಂ ಪ್ರಣತೋಽಸ್ಮ್ಯಚಿಂತ್ಯಂ ॥

೫೩೦. ರೂಪಂ ಚ ಚಕ್ಷು ರ್ಗ್ರಹಣೇ ತ್ವಗೇಷಾ
ಸ್ಪರ್ಶಗ್ರಹೇಽಥೋ ರಸನಾ ರಸಸ್ಯ
ಘ್ರಾಣಂ ಚ ಗಂಧಗ್ರಹಣೇ ನಿಯುಕ್ತಂ
ತ್ವಗ್ಘ್ರಾಣಚಕ್ಷೂಂಷಿ ನ ತಾನಿ ಯಸ್ಯ

೫೩೧. ಸರ್ವೇಶ್ವರೋವೇದಿತವ್ಯಃ ಸ ಯುಕ್ತ್ಯಾ
ಹ್ಯನಾದಿಮಧ್ಯಂ ತ್ವನಘಂ ಚ ದೇವಂ ।
ನಮಾಮ್ಯಹಂ ತಂ ಹರಿಮೀಶಿತಾರಂ
ಲೋಕೈಕನಾಥಂ ಭವಭೀತಿನಾಶನಂ ॥

ಶರಣು ಹೋಗಲು ಅವನೇ ಯೋಗ್ಯನು. ಬೇಡಿದ ವರ ನೀಡಲು ಅವನೊಬ್ಬನೇ ಸಮರ್ಥನು. ಹಿರಿ, ಕಿರಿ ದೇವತೆಗಳಿಗೆಲ್ಲ ಪರಮ ಉತ್ತಮನೂ, ಗತಿಪ್ರದನೂ ಮಹಾಪ್ರಭುವೂ ಆದ ಅವನು ಸರ್ವಪ್ರಮಾಣಗಳಿಂದಲೂ ವೇದ್ಯನಾಗಿದ್ದಾನೆ. ಸಪ್ತಲೋಕಗಳಿಗೆಲ್ಲ ಗುರುಗಳಾದ ಬ್ರಹ್ಮವಾಯುದೇವರಿಗೆ ಶ್ರೀಹರಿಯೇ ಗುರುವಾಗಿದ್ದಾನೆ. ಇಂಥ ಜಗನ್ನಾಥನಾದ ಶ್ರೀವಿಷ್ಣುವು ಸಂರಕ್ಷಣೆ ಮಾಡುವ ಉದ್ದೇಶದಿಂದ ಅದಿತಿದೇವಿಯ ಗರ್ಭವನ್ನೂ ಈಗ ಪ್ರವೇಶಿಸಿದ್ದಾನೆ. ಪ್ರಪಂಚದ ಪ್ರಭುಗಳೆನಿಸಿದ ಬ್ರಹ್ಮಾದಿ ದೇವತೆಗಳಿಗೂ ಅವನೇ ಮಹಾಪ್ರಭು. ಅವನು ಶ್ರೇಷ್ಠರಲ್ಲಿ ಶ್ರೇಷ್ಠ. ಷಡ್ಗುಣೈಶ್ವರ್ಯ ಸಂಪನ್ನ. ಅವನಿಗೆ ಆದಿ ಇಲ್ಲ. ಮಧ್ಯ ಇಲ್ಲ. ಅಂತವಿಲ್ಲ. ಇಂಥ

ಶ್ರೀಹರಿಯು ಮೂರು ಲೋಕಗಳನ್ನು ತನ್ನ ಅಂಶದಿಂದ ಸನಾಥವನ್ನಾಗಿ ಮಾಡಲು ಅದಿತಿ ದೇವಿಯಿಂದ ಅವತರಿಸಿದ್ದಾನೆ. ಅದ್ವಿತೀಯವಾಗಿದೆ ಆ ಮಹಾಚೇತನ. ಮಹಾದೇವ, ಬ್ರಹ್ಮ, ಇಂದ್ರ, ಸೂರ್ಯ, ಚಂದ್ರ ಮೊದಲಾದ ದೇವತೆಗಳಿಗೂ, ಮರೀಚಿ ಮೊದಲಾದ ಮಹಾಮುನಿಗಳೂ, ಯಾವನ ಸ್ವರೂಪವನ್ನು ಸಂಪೂರ್ಣವಾಗಿ ತಿಳಿಯಲಾರರೋ ಅಂಥ ಸಾಕ್ಷಾತ್ ವಾಸುದೇವನೇ ತನ್ನ ಒಂದು ಅಂಶದಿಂದ ಈಗ ಅವತರಿಸಿದ್ದಾನೆ.

ವೇದವಿದ್ವಾಂಸರು ಅವನನ್ನು ಅಕ್ಷರ-ನಾಶರಹಿತ ಎಂದು ಕರೆಯುತ್ತಾರೆ. ಅವನ ಉಪಾಸನೆ ಮಾಡಿ ತಮ್ಮ ಪಾಪಗಳನ್ನೆಲ್ಲ ಕಳೆದುಕೊಂಡು ಅವನನ್ನೇ ಹೊಂದುತ್ತಾರೆ. ಒಮ್ಮೆ ಅವನನ್ನು ಹೊಂದಿದವರು ಮರಳಿ ಹುಟ್ಟುವುದಿಲ್ಲ. ಮತ್ತೆ ಸಂಸಾರಕ್ಕೆ ಬರುವದಿಲ್ಲ ಅಂಥ ಸರ್ವಕ್ಕೂ ಮೂಲನಾದ ವಾಸುದೇವನಿಗೆ ನಮಸ್ಕಾರ ಮಾಡುತ್ತೇನೆ.

ಸಮುದ್ರದಿಂದ ನಿರಂತರವೂ ತೆರೆಗಳು ಹುಟ್ಟಿ ಹೊಮ್ಮಿ ಹರಿದು ಮತ್ತೆ ಅದರಲ್ಲಿಯೇ ಕರಗಿ ಕಾಣದಂತಾಗುವದಿಲ್ಲವೇ! ಹಾಗೆ ಅಶೇಷ ಪ್ರಾಣಿಗಳು ಅನಿಮಿತ್ತ ಕಾರಣ ಪರಮಾತ್ಮನಿಂದಲೇ ಜನಿಸಿ ಬದುಕಿ ಬಾಳಿ ಮತ್ತೆ ಅವನಲ್ಲಿಯೇ ವಿಲಯವನ್ನು ಹೊಂದುತ್ತವೆ. ಇಂಥ ಅಚಿಂತ್ಯಾದ್ಭುತ ಶಕ್ತಿಯುಳ್ಳ ವಾಸುದೇವನನ್ನು ನಮಸ್ಕರಿಸುವೆನು.

ಆ ಪರಮಾತ್ಮನು ನಮಗೆ ರೂಪಜ್ಞಾನವಾಗಲು ಚಕ್ಷುರಿಂದ್ರಿಯವನ್ನೂ ಸ್ಪರ್ಶ ಜ್ಞಾನಕ್ಕಾಗಿ ತ್ವಗಿಂದ್ರಿಯವನ್ನೂ, ರಸದ ರುಚಿ ನೋಡಲು ನಾಲಿಗೆಯನ್ನೂ ಗಂಧದ ವಾಸನೆಯನ್ನು ಕಂಡುಹಿಡಿಯಲು ಮೂಗನ್ನೂ, ನಿರ್ಮಾಣ ಮಾಡಿದ್ದಾನೆ. ಆದರೆ ಅವನಿಗೆ ಮಾತ್ರ ಕಣ್ಣು, ನಾಲಿಗೆ, ಮೂಗು ಮೊದಲಾದ ನಮ್ಮಂಥ ಇಂದ್ರಿಯಗಳು ಇರುವುದಿಲ್ಲ. ಇಂಥ ಸರ್ವೇಶ್ವರನಾದ ಈ ಪರಮಾತ್ಮನನ್ನು ಯುಕ್ತಿಯಿಂದಲೂ ತಿಳಿದು ಕೊಳ್ಳತಕ್ಕದ್ದು. ಎಲ್ಲ ಲೋಕಗಳಿಗೂ ಅವನೇ ಒಡೆಯನು, ಅವನೇ ಶಾಸಕನು. ಸಂಸಾರದ ಭೀತಿಯು ತೊಲಗುವದು ಅವನಿಂದಲೇ. ಅವನಿಗೆ, ತುದಿ ಮೊದಲಿಲ್ಲ. ಅವನು ಸರ್ವಥಾ ದೋಷದೂರ, ಇಂಥ ದೇವೋತ್ತಮನಾದ ಶ್ರೀಹರಿಯನ್ನು ನಮಸ್ಕರಿಸುತ್ತೇನೆ.

೫೩.೨. ಯೇನೈಕದಂಷ್ಟ್ರೇಣ ಸಮುದ್ಧೃತೇಯಂ
ಧರಾಽಚಲಾ ಧಾರಯತೀಹ ವಿಶ್ವಂ ॥
ಇದಂ ಚ ಹರ್ತಾ ಸಕಲಂ ಜಗದ್ಯ
ಸ್ತಮೀಶಮೀಡ್ಯಂ ಪ್ರಣತೋಽಸ್ಮಿ ವಿಷ್ಣುಂ ॥

೫೩.೩. ಅಂಶಾವತೀರ್ಣೇನ ಯೇನ ಗರ್ಭೇ
ಹೃತಾನಿ ತೇಜಾಂಸಿ ಮಹಾಸುರಾಣಾಮ್ ।
ನಮಾಮಿ ತಂ ದೇವಮನಂತಮೀಶಂ
ಅಶೇಷಸಂಸಾರತರೋಃ ಕುಠಾರಂ ॥೩॥

೩.೫೪. ದೇವೋ ಜಗದ್ಯೋನಿರಯಂ ಮಹಾತ್ಮಾ
ಸ ಷೋಡಶಾಂಶೇನ ಮಹಾ ಸುರೇಂದ್ರ ।
ಸುರೇಂದ್ರ ಮಾತುರ್ಜಠರಂ ಪ್ರವಿಷ್ಟೋ
ಹೃತಾನಿವಸ್ತೇನ ಬಲಂ ವಪೂಂಷಿ ॥

೫೩೫. ತಾತ ಕೋಽಯಂ ಹರಿರ್ನಾಮ ಯತೋ ನೋಭಯಮಾಗತಂ।
ಸಂತಿ ಮೇ ಶತತೋ ದೈತ್ಯಾ ವಾಸುದೇವಾದ್ಬಲಾಧಿಕಾಃ ।

೫೩೬. ವಿಪ್ರಚಿತ್ತಿಃ ಶಿಬಿಃ ಶಂಭುರ್ಜಂಭಃ ಕುಂಭಸ್ತಥೈವಚ ।
ಹತಶಿರಾಽ ಅಶ್ವಶಿರಾ ಭಂಗಕಾರೋ ಮಹಾಹನುಃ

೫೩೭. ವಾತಾಪಿಃ ಪ್ರವಶಃ ಶುಂಭಃ ಕುಕುರಾಕ್ಷಶ್ಚ ದುರ್ಜಯಃ ।
ಏತೇ ಚಾನ್ಯೇ ಚ ಮೇ ಸಂತಿ ದೈತೇಯೋ ದಾನವಾಸ್ತಥಾ ।

೫೩೮. ಮಹಾಬಲಾ ಮಹಾವೀರ್ಯಾ ಭೂಭಾರಧರಣಕ್ಷಮಾಃ
ಏಷಾಮೇಕೈಕಶಃ ಕೃಷ್ಣೋ ನ ವೀರ್ಯಬಲಸಂಮಿತಃ

## ಲೋಮಹರ್ಷಣ ಉವಾಚ

೫೩೯. ಪೌತ್ರಸ್ಯೈತದ್ವಚಃ ಶ್ರುತ್ವಾ ಪ್ರಲ್ಹಾದೋ ದೈತ್ಯ ಪುಂಗವಃ ।
ಸಕ್ರೋಧಶ್ಚ ಬಲಿಂ ಪ್ರಾಹ ವೈಕುಂಠಾಕ್ಷೇಪವಾದಿನಂ ॥

೫೪೦. ವಿನಾಶಮುಪಯಾಸ್ಯಂತಿ ದೈತ್ಯಾಸ್ತೇ ಚಾಪಿ ದಾನವಾಃ
ಯೇಷಾಂ ತ್ವಮೀದೃಶೋ ರಾಜಾ ದುರ್ಬುದ್ಧಿರವಿವೇಕವಾನ್॥

ಯಾವ ಪರಮಾತ್ಮನು ತನ್ನ ವರಾಹರೂಪದಿಂದ ಈ ಭೂಮಿಯನ್ನು ಮೇಲಕ್ಕೆ ಎತ್ತಿದ್ದರಿಂದ ಈ ಭೂಮಿಯು ಎಲ್ಲವನ್ನೂ ಹೊರಲು ಸಮರ್ಥಳಾಗಿರುವಳೋ ಮತ್ತು ಈ ಪ್ರಪಂಚವನ್ನೆಲ್ಲ ಯಾವನು ಸಂಹರಿಸುವನೋ ಅಂಥ ಸರ್ವಸಮರ್ಥನೂ, ವರ್ಣನೀಯನೂ ಆದ ಆ ವಿಷ್ಣುವಿಗೆ ನಾನು ನಮಸ್ಕರಿಸುತ್ತೇನೆ. ಒಂದು ಅಂಶದಿಂದ ಅದಿತಿದೇವಿಯ ಗರ್ಭದಲ್ಲಿ ಅವತರಿಸಿದ ಶ್ರೀ ವಿಷ್ಣು ವಿನಿಂದಲೇ ದೈತ್ಯ ದಾನವ ಧುರಂಧರರೆಲ್ಲರ ತೇಜಸ್ಸು ಅಪಹರಿಸಲ್ಪಟ್ಟಿದೆ. ಈ ಸಂಸಾರ ವೆಂಬ ಮರಕ್ಕೆ ಕುಠಾರಪ್ರಾಯನಾಗಿದ್ದಾನೆ ಆ ಪರಮಾತ್ಮ. ಅಂಥ ಸರ್ವೇಶನಾದ ಅನಂತ ದೇವನನ್ನು ನಾನು ವಂದಿಸುತ್ತೇನೆ. ಅಸುರರ ಕುಲಕ್ಕೆ ಇಂದ್ರನಾದ ಬಲಿರಾಜನೇ, ಜಗತ್ಕಾರಣನೂ, ಮಹಾಮಹಿಮನೂ ಕ್ರೀಡಾದಿ ಗುಣ ವಿಶಿಷ್ಟನೂ ಆದ ಶ್ರೀವಿಷ್ಣುವು ತನ್ನ ಷೋಡಶ ಅಂಶದಿಂದ ದೇವಮಾತೆಯಾದ ಅದಿತಿದೇವಿಯ ಉದರದಲ್ಲಿ ಪ್ರವಿಷ್ಟನಾಗಿದ್ದಾನೆ. ಆದರಿಂದ ನಿಮ್ಮ ಎಲ್ಲ ದೈತ್ಯರ ದೇಹಗಳು ತೇಜಃ ಶೂನ್ಯವಾಗಿವೆ. ನಿಮ್ಮ ಶಕ್ತಿಯೆಲ್ಲವೂ ಅವನಿಂದಲೇ ಅಪಹರಿಸಲ್ಪಟ್ಟಿದೆ.''

**ಬಲಿರಾಜ :** ತಾತನೇ ನಮ್ಮನ್ನು ಹೆದರಿಸಲು ಈ ಹರಿಯು ಎಷ್ಟರವನು! ಬಲದಲ್ಲಿ ಈ ವಾಸುದೇವನಿಗೆ ಮಿಗಿಲಾದ ದೈತ್ಯರು ನಮ್ಮಲ್ಲಿ ನೂರಾರು ಜನರು ಇರುತ್ತಾರೆ. ವಿಪ್ರಚಿತ್ತಿ, ಶಿಬಿ, ಶಂಭು, ಜಂಭ, ಕುಂಭ, ಹಯಶಿರ, ಅಶ್ವಶಿರ, ಮಹಾಹನು, ವಾತಾಪಿ, ಪ್ರವಶ, ಶುಂಭ, ಕುಕುರಾಕ್ಷ, ದುರ್ಜಯ... ಇನ್ನೂ ಯಾರು ಯಾರೋ, ದೈತ್ಯರು ಅನೇಕಾನೇಕ ದಾನವರು ನಮ್ಮಲ್ಲಿ ಇರುತ್ತಾರೆ. ಅವರೆಲ್ಲ ಒಬ್ಬೊಬ್ಬರೂ ಮಹಾ ಪರಾಕ್ರಮಿಗಳು, ಮಹಾಬಲಿಷ್ಠರು. ಬೇಕೆಂದರೆ ಒಬ್ಬೊಬ್ಬರೇ ಇಡೀ ಭೂಮಂಡಲವನ್ನೆಲ್ಲ ಹೊತ್ತು ಎತ್ತಿ ಇಡಬಲ್ಲರು. ಇಂಥ ಶಕ್ತಿ ಅವರಿಗೆ. ಈ ಎಲ್ಲ ದೈತ್ಯ ದಾನವ ಧುರೀಣರಲ್ಲಿಯ ಒಬ್ಬೊಬ್ಬನ ಬಲವೀರ್ಯಕ್ಕೂ ಸರಿದೂಗಲಾರದು ನೀನು ಹೇಳಿದ ಆ ಕೃಷ್ಣನ ಶಕ್ತಿ.

**ಲೋಮಹರ್ಷಣ :** ಮೊಮ್ಮಗನ ಈ ಮಾತನ್ನು ಕೇಳಿ ಅಜ್ಜ ಪ್ರಲ್ಹಾದನಿಗೆ ಬಹಳ ಕೋಪ ಬಂದಿತು. ಬಲಿರಾಜನು ಮಾಡಿದ ವೈಕುಂಠಪತಿಯ ಆಕ್ಷೇಪದ ನುಡಿಯನ್ನು ಸಹಿಸಲಿಕ್ಕಾಗದೇ ಅವನು ಕೆರಳಿ ನುಡಿದನು. ''ದೈತ್ಯರಿಗೂ ದಾನವರಿಗೂ ಅಳಿಗಾಲ ಬಂದಿದೆ. ಯಾರಿಗೆ ನಿನ್ನಂಥ ವಿವೇಕ ಶೂನ್ಯನಾದ ದುರ್ಬುದ್ಧಿಯು ರಾಜನಾಗಿರುವನೋ ಅಂಥವರ ಸರ್ವ ನಾಶವಾಗುವದು. ಖಂಡಿತ.''

೫೪೧. ದೇವದೇವಂ ಮಹಾಭಾಗಂ ವಾಸುದೇವಮಜಂ ವಿಭುಂ ।
ತ್ವಾಮೃತೇ ಪಾಪಸಂಕಲ್ಪಃ ಕೋಽನ್ಯ ಏವಂ ವದಿಷ್ಯತಿ ॥

೫೪೨ ಯ ಏತೆ ಭವತಾ ಪ್ರೋಕ್ತಾಃ ಸಮಸ್ತಾ ದೈತ್ಯ ದಾನವಾಃ ।
ಸ ಬ್ರಹ್ಮಕಾಸ್ತಥಾ ದೇವಾಃ ಸ್ಥಾವರಾಂತಾಶ್ಚ ಜಾತಯಃ ॥

೫೪೩. ತ್ವಂ ಚಾಹಂ ಚ ಜಗಚ್ಚೇದಂ ಸಾದ್ರಿದ್ರುಮನದೀವನಂ
ಸಮುದ್ರದ್ವೀಪಲೋಕಾಶ್ಚ ಯಚ್ಚೇಂಗತಿ ಚ ನೇಂಗತಿ ॥

೫೪೪. ಯಸ್ಯಾಭಿವಾದ್ಯ ವಂದ್ಯಸ್ಯ ವ್ಯಾಪಿನಃ ಪರಮಾತ್ಮನಃ ।
ಏಕೈಕಾಂಶಕಲಾ ಜನ್ಮಕಸ್ತಮೇವಂ ವದಿಷ್ಯತಿ ॥

೫೪೫. ಋತೇ ವಿನಾಸಾಭಿಮುಖಂ ತ್ವಾಮೇಕಮವಿವೇಕಿನಂ ।
ದುರ್ಬುದ್ಧಿಮಜಿತಾತ್ಮಾನಂ ವೃದ್ಧಾನಾಂ ಶಾಸನಾತಿಗಮ್ ॥

೫೪೬. ಶೋಚ್ಯೋಽಹಂ ಯಸ್ಯ ಮೇ ಗೇಹೇ ಜಾತಸ್ತವ ಪಿತಾಧಮಃ ।
ಯಸ್ಯ ತ್ವಮೀ ದೃಶಃ ಪುತ್ರೋ ದೇವ ದೇವಾವಮಾನಕಃ

೫೪೭. ತಿಷ್ಠತ್ವನೇಕ ಸಂಸಾರ ಸಂಘಾಘಾಘವಿನಾಶಿನೀ ।
ಕೃಷ್ಣೇ ಭಕ್ತಿರಹಂ ತಾವದವೇಕ್ಷ್ಯೋ ಭವತಾ ನ ಕಿಂ ।

ದೇವದೇವೋತ್ತಮನೂ, ಷಡ್ಗುಣೈಶ್ವರ್ಯ ಸಂಪನ್ನನೂ, ಸರ್ವತ್ರ ವ್ಯಾಪ್ತನೂ ಹುಟ್ಟು ಸಾವು ಇಲ್ಲದವನೂ, ಸರ್ವ ಪ್ರಭುವೂ ಆದ ಆ ಪರಮಾತ್ಮನ ಬಗೆಗೆ ನಿನ್ನಂಥ ದುರ್ಬುದ್ಧಿಯುಳ್ಳ ಪಾಪಿಯ ಹೊರತಾಗಿ ಯಾರು ತಾನೇ ಇಂಥ ಬಿರುನುಡಿಗಳನ್ನು ನುಡಿದಾರು! ನೀನು ಇದೀಗ ಹೇಳಿದ ಎಲ್ಲ ದೈತ್ಯರೂ ದಾನವರೂ ಬ್ರಹ್ಮನೇ ಮೊದಲಾದ ದೇವತೆಗಳೂ ಎಲ್ಲ ಜಾತಿಯ ಚಲಿಸುವ ಪ್ರಾಣಿಗಳೂ ವಂದ್ಯನಾದ ಆ ಜಗದ್ವ್ಯಾಪಿ ಪರಮಾತ್ಮನ ಒಂದೊಂದು ಅಂಶದಿಂದ ಜನ್ಮ ತಾಳಿ ಬಾಳಿ ಬದುಕಿವೆ. ಅಂಥ ಆ ಜಗದೀಶನ ಬಗೆಗೆ ನಿನ್ನಂತೆ ಲಘುವಾಗಿ ಯಾರು ಮಾತನಾಡ್ಯಾರು ?

ಹಿರಿಯರ ಮಾತನ್ನು ಮೀರುವ ನೀನು ಶುದ್ಧ ಅವಿವೇಕಿ. ನಿನ್ನ ಬುದ್ಧಿಯು ಕೆಟ್ಟಿದೆ. ನಿನ್ನ ಮನಸ್ಸಿನ ಮೇಲೆ ನಿನಗೇ ನಿಯಂತ್ರಣವಿಲ್ಲ. ನೀನೀಗ ಸಾಯಲಿಕ್ಕೇ ಹೊರಟಿರುವಿ. ಆದುದರಿಂದ ನಿನ್ನ ಬಾಯಿಂದ ಇಂಥ ಮಾತುಗಳು ಬರುತ್ತಲಿವೆ.

ದೇವದೇವೋತ್ತಮನಾದ ಶ್ರೀಹರಿಯನ್ನು ಅವಮಾನಿಸುವ ನಿನ್ನಂಥ ಪಾಪಿ ಮಗನನ್ನು ಹಡೆದ ನಿನ್ನ ತಂದೆಯೇ ಅಧಮನಾಗಿದ್ದಾನೆ. ನಿನ್ನ ತಂದೆಗೆ ಜನ್ಮವಿತ್ತ ನನ್ನ

ಪರಿಸ್ಥಿತಿಯು ಈಗ ಈ ಮನೆಯಲ್ಲಿ ನಿಜವಾಗಿಯೂ ಶೋಚನೀಯವಾಗಿದೆ. ನಿನ್ನಂಥ ಪಾಪಿಗೆ ಜನ್ಮ ಕೊಟ್ಟವನನ್ನು ಹಡೆದದ್ದು ನನ್ನದೇ ಮೂಲ ತಪ್ಪು. ಸಂಸಾರ ಪರಂಪರೆಗೆ ಕಾರಣವಾದ ರಾಶಿ ರಾಶಿ ಪಾಪಗಳನ್ನೆಲ್ಲ ಪರಿಹರಿಸುವ ಏಕಮಾತ್ರ ಉಪಾಯವೆಂದರೆ ಶ್ರೀಕೃಷ್ಣ ಭಕ್ತಿ. ಅದರಿಂದಲೇ ನಾನು ಬದುಕಿದ್ದು. ಅದಕ್ಕಾಗಿಯೇ ನಾನು ಈ ಲೋಕದಲ್ಲಿ ಇದ್ದದ್ದು. ನನ್ನ ಈ ಹರಿ ಭಕ್ತಿ ನಿಷ್ಠತೆ ಯನ್ನಾದರೂ ನೀನು ನೋಡಬಾರದೇ!

ಶ್ರೀಕೃಷ್ಣ ಒಂದು ಮಹಾಚೇತನ. ಪರಮಾತ್ಮ ಆತ್ಮ. ಈ ನನ್ನ ದೇಹವೂ ಕೂಡ ಅವನಷ್ಟು ನನಗೆ ಪ್ರಿಯವಲ್ಲ. ನನ್ನ ಈ ಕೃಷ್ಣಭಕ್ತಿ ಪ್ರಪಂಚಕ್ಕೆಲ್ಲ ತಿಳಿದಿದೆ. ನೀನೂ ಇದನ್ನೂ ಬಲ್ಲೆ. ನನ್ನ ಈ ಭಗವದ್ಭಕ್ತಿಯನ್ನು ತಿಳಿದು ತಿಳಿದೂ ಆ ಭಗವಂತನನ್ನು ನನ್ನೆದುರು ನಿಂದಿಸುತ್ತಿರುವಿ. ಆ ಹರಿ ನನಗೆ ಪ್ರಾಣಕ್ಕಿಂತ ಪ್ರಿಯತಮ ಎಂದು ನಿಶ್ಚಿತವಾಗಿ ಅರಿತೂ ನೀನು ಮಾಡುವ ಆ ಹರಿನಿಂದೆ ನನಗೆ ಭಯಂಕರ ಅವಮಾನ.

೫೪೮. ವಿರೋಚನಸ್ತವ ಗುರುಃ ಗುರುಸ್ತಸ್ಯಾಪ್ಯಹಂ ಬಲೇ ।
ಮಾಮಪಿ ಸರ್ವಜಗತಾಂ ಗುರುರ್ನಾರಾಯಣೋ ಹರಿಃ ॥

೫೪೯. ನಿಂದಾಂ ಕರೋಷಿ ತಸ್ಮಿಂಸ್ತ್ವಂ ಕೃಷ್ಣೇ ಗುರುಗುರೋರ್ಗುರೌ
ಯಸ್ಮಾತ್ತಸ್ಮಾದಿಹೈಶ್ವರ್ಯಾದಚಿರಾದ್ ಭ್ರಂಶಮೇಷ್ಯತಿ ॥

೫೫೦. ಸ ದೇವೋ ಜಗತಾಂ ನಾಥೋ ಬಲೆ ಮಮ ಜನಾರ್ದನಃ
ನತ್ವಹಂ ಪ್ರತ್ಯವೇಕ್ಷಸ್ತೇ ಪಿತುರ್ಮಾನ್ಯೋತ್ರ ಯೋ ಗುರುಃ ॥

೫೫೧. ಏತಾವನ್ಮಾತ್ರಮಪ್ಯತ್ರ ನಿಂದತಾ ಜಗತೋ ಗುರುಮ್
ನಾಪೇಕ್ಷಿತಂ ತ್ವಯಾ ಯಸ್ಮಾತ್ತಸ್ಮಾಚ್ಛಾಪಃ ದದಾಮಿ ತೇ ॥

೫೫೨. ಯಥಾ ಮೆ ಶಿರಸಶ್ಛೇದಾದಿದಂ ಗುರುತರಂ ವಚಃ ।
ತ್ವಯೋಕ್ತಮಚ್ಯುತಾಕ್ಷೇಪಿ ರಾಜ್ಯಭ್ರಷ್ಟಸ್ತಥಾ ಪತ ।

೫೫೩. ಯಥಾ ನ ಕೃಷ್ಣಾದಪರಃ ಪರಿತ್ರಾಣಂ ಭವಾರ್ಣವೆ
ತಥಾ ಚಿರೇಣ ಪಶ್ಯೇಯಂ ಭವಂತಂ ರಾಜ್ಯವಿಚ್ಯುತಮ್ ॥।

ನಿನ್ನ ತಂದೆ ವಿರೋಚನ. ವಿರೋಚನನ ತಂದೆ ನಾನು. ನನಗೂ ತಂದೆ ಆ ಶ್ರೀಹರಿ. ಆ ನಾರಾಯಣನು ಸಕಲ ಜಗತ್ತಿಗೆ ತಂದೆಯಾಗಿದ್ದಾನೆ. ಹೀಗೆ ಗುರುವಿನ ಗುರುವಿನ ಗುರುವೂ ಜಗದ್ಗುರುವೂ, ತಂದೆಯ ತಂದೆಯೂ ಜಗತ್ ಪಿತಾಮಹನೂ ಆದ ಆ ಭಗವಂತನನ್ನು ನಿಂದಿಸಿದ್ದೀಯ. ಆ ಕಾರಣದಿಂದ ನೀನೂ ಬಹುಬೇಗ ನಿನ್ನ ಐಶ್ವರ್ಯ ಭ್ರಷ್ಟನಾಗುವಿ. ನೀನು ನಿನ್ನ ಮುತ್ತಜ್ಜನಾದ ನನ್ನ ಮಾತಿಗೆ ಬೆಲೆ ಕೊಡುವುದು ಬೇಡ. ನನ್ನನ್ನು ಗೌರವಿಸುವುದೂ ಬೇಡ. ಆದರೆ ನನಗೆ ಪರಮ ಮಾನ್ಯನೂ, ಪೂಜ್ಯಗುರುವೂ ಆದ ಆ ಜಗನ್ನಾಥ ಜನಾರ್ದನನನ್ನಾದರೂ ಮನ್ನಿಸಬಾರದೇ! ಮನ್ನಿಸುವದಿರಲಿ, ಆ ಜಗದ್ಗುರುವನ್ನು ನನ್ನೆದುರು ನಿಂದೆ ಮಾಡಿದಿ. ನೀನು ಇಷ್ಟು ನೀಚತನಕ್ಕೆ ಇಳಿಯುವಿ ಎಂದು ನಾನು ನಿರೀಕ್ಷಿಸಿರಲಿಲ್ಲ. ಅಂಥ ಜಗದ್ಗುರುವಿನ ನಿಂದೆ ಮಾಡಿದ ನಿನಗೆ ನಾನು ಈಗ ಅದಕ್ಕಾಗಿ ಶಾಪ ಕೊಡುತ್ತೇನೆ.

ನೀನು ನನ್ನ ತಲೆಯನ್ನು ಕಡಿದುಹಾಕಿದ್ದರೂ ನನಗೆ ಇಷ್ಟು ದುಃಖವಾಗುತ್ತಿದ್ದಿಲ್ಲ. ನೀನು ಮಾಡಿದ ಈ ಹರಿನಿಂದೆಯ ನುಡಿ ನನ್ನ ಶಿರಚ್ಛೇದಕ್ಕಿಂತಲೂ ಹೆಚ್ಚಿನ ತಾಪ ಪಾಪವನ್ನು ಉಂಟು ಮಾಡಿದೆ. ಅದಕ್ಕಾಗಿಯೇ ನನ್ನ ಈ ಶಾಪ. ನೀನು ರಾಜ್ಯ ಭ್ರಷ್ಟನಾಗಿ ಕೆಳಗುರುಳು. ಸಂಸಾರ ಸಮುದ್ರದಿಂದ ಕೃಷ್ಣನ ಹೊರತು ಬೇರಾರು ಪಾರು ಮಾಡಲಾರರು ಎಂದು ನನ್ನ ದೃಢವಿಶ್ವಾಸ. ಅಂಥ ಹರಿಯ ದ್ವೇಷಿಯಾದ ನೀನು ರಾಜ್ಯ ಸಿಂಹಾಸನದಿಂದ ಉರುಳಿ ಬಿದ್ದದ್ದನ್ನು ಬೇಗನೇ ನೋಡುವೆನು.

ವಾಮನ ಮಹಾಪುರಾಣದಲ್ಲಿ ವಿವೇಕ - ಅವಿವೇಕ
ಎಂಬ ಇಪ್ಪತ್ತೊಂಭತ್ತನೇಯ ಅಧ್ಯಾಯವು ಮುಗಿದುದು.



## ವಾಮನಾವತಾರ

**ಅಧ್ಯಾಯ - ೩೦**

೫೫೪. ಇತಿ ದೈತ್ಯಪತಿಃ ಶ್ರುತ್ವಾ ಗುರೋರ್ವಚನಮಪ್ರಿಯಂ ।
ಪ್ರಸಾದಯಾಮಾಸ ಗುರುಂ ಪ್ರಣಿಪತ್ಯ ಪುನಃ ಪುನಃ

ಬಲಿರುವಾಚ

೫೫೫. ಪ್ರಸೀದ ತಾತಾ ಮಾ ಕೋಪಂ ಕುರು ಮೋಹಹತೇ ಮಯಿ ।
ಬಲಾವಲೇಪಮೂಢೇನ ಮಯ್ಯೈತದ್ವಾಕ್ಯಮೀರಿತಂ ॥

೫೫೬. ರಾಜ್ಯಭ್ರಂಶಂ ಯಶೋಭ್ರಂಶಂ ಪ್ರಾಪ್ಸ್ಯಾಮೀತಿ ತತಸ್ತ್ವಹಂ ।
ವಿಷಣ್ಣೋಽಸಿ ಯಥಾ ತಾತ ತಥೈವಾವಿನಯಃ ಕೃತಃ ॥

೫೫೭. ಮೋಹಾಪಹತವಿಜ್ಞಾನಃ ಪಾಪೋಽಹಂ ದಿತಿಜೋತ್ತಮ ।
ಯಚ್ಛಪ್ತೋಽಸ್ಮಿ ದುರಾಚಾರಸ್ತತ್ಸಾಧು ಭವತಾ ಕೃತಂ ॥

೫೫೮. ತ್ರೈಲೋಕ್ಯೈಶ್ವರ್ಯಮನ್ಯದ್ವಾ ಕಿಮಪೀಹ ನ ದುರ್ಲಭಂ ।
ಸಂಸಾರೇ ದುರ್ಲಭಾಸ್ತಾತ ಗುರವೋ ಯೇ ಭವದ್ವಿಧಾಃ ॥

೫೫೯. ತತ್ಪ್ರಸೀದ ನ ಮೇ ಕೋಪಂ ಕರ್ತುಮರ್ಹಸಿ ದೈತ್ಯಪ ।
ತ್ವತ್ಕೋಪಪರಿದಗ್ಧೋಽಹಂ ಪರಿತಪ್ಯೇ ದಿವಾನಿಶಂ

ಪ್ರಹ್ಲಾದ ಉವಾಚ

೫೬೦. ವತ್ಸ ಕೋಪೇನ ಮೇ ಮೋಹೋ ಜನಿತಸ್ತೇನ ತೇ ಮಯಾ।
ದತ್ತಶ್ಶಾಪೋ ವಿವೇಕಶ್ಚ ಮೋಹೇನಾಪಹೃತೋ ಮಮ ॥

೫೬೧. ಯದಿ ಮೋಹೇನ ಮೇ ಜ್ಞಾನಂ ನ ಕ್ಷಿಪ್ತಂ ಸ್ಯಾನ್ಮಹಾಸುರ ।
ತತ್ಕಥಂ ಸರ್ವಗಂ ಜಾನನ್ ಹರಿಂ ಕಂಚಿಚ್ಛಪಾಮ್ಯಹಂ ॥

ದಾನವರ ದೊರೆಯಾದ ಬಲಿರಾಜನಿಗೆ ದೈತ್ಯಕುಲಕ್ಕೆಲ್ಲ ಹಿರಿ ಗುರುಸ್ಥಾನದಲ್ಲಿದ್ದ ಪ್ರಲ್ಹಾದನ ಕಹಿ ಮಾತನ್ನು ಕೇಳಿ ಕೆಡುಕೆನಿಸಿತು. ಅವನು ಪಶ್ಚಾತ್ತಾಪದಿಂದ ಪ್ರಲ್ಹಾದನಿಗೆ ಪ್ರಣಾಮ ಗೈದು ಸಂತೈಸುತ್ತ ಮತ್ತೆ ಮತ್ತೆ ನಮಿಸಿ ನುಡಿದನು.

**ಬಲಿರಾಜ -** ಅಜ್ಜನೇ, ಪ್ರಸನ್ನನಾಗು. ಮೊದಲೇ ಅಜ್ಞಾನ ಮೋಹದಿಂದ ಹತನಾದ ನನ್ನ ಮೇಲೆ ಕೋಪ ಮಾಡಬೇಡ. ಸಾಮರ್ಥ್ಯದ ಮದದಿಂದ ಕೊಬ್ಬಿ ನಾನು ಆ ಮಾತನಾಡಿದೆ. ಮೋಹಾಜ್ಞಾನದಿಂದ ನನ್ನ ಜ್ಞಾನವೆಲ್ಲ ಅಳಿದುಹೋಗಿದೆ. ನಿಮ್ಮ ಮನಸ್ಸಿನ ವಿರುದ್ಧವಾಗಿ ಹರಿಯನ್ನು ನಿಂದಿಸಿ ನುಡಿದ ನಾನು ಮಹಾಪಾಪಿ. ಇಂತಹ ಅನಾಚಾರಿಯಾದ ನನಗೆ ದೈತ್ಯೋತ್ತಮನಾದ ನೀನು ಶಾಪ ಕೊಟ್ಟಿದ್ದು ಯೋಗ್ಯವಾಗಿದೆ. ಹರಿದ್ವೇಷಿಯಾದ ನನಗೆ ''ರಾಜ್ಯಾಧಿಕಾರದಿಂದ ಉರುಳಿ ಪದಭ್ರಷ್ಟನಾಗಿ ಕೀರ್ತಿಯನ್ನು ಕಳೆದುಕೋ'' ಎಂದು ನೀವು ಶಪಿಸಿದ್ದೂ ಉಚಿತವೇ ಸರಿ. ನಿಮ್ಮ ಮನಸ್ಸಿಗೆ ತುಂಬ ನೋವಾಗುವಂತೆ ಹುಂಬಹುಂಬನಾಗಿ ನಾನು ನಿಮ್ಮ ಜೊತೆಗೆ ಉನ್ಮಾದದಿಂದ ನಡೆದೆ. ಮದೋನ್ಮತ್ತನಾಗಿ ನುಡಿದೆ. ಕ್ಷಮಿಸು.'' ತಾತಾ, ಈ ಸಂಸಾರದಲ್ಲಿ ದುರ್ಲಭವಾವುದು! ಎಲ್ಲವನ್ನೂ ದೊರಕಿಸಬಹುದು. ಬೇಕೆಂದರೆ ಮೂರು ಲೋಕದ ಆಧಿಪತ್ಯವನ್ನೂ ಸಂಪಾದಿಸಬಹುದು. ಆದರೆ ನಿನ್ನಂಥ ಗುರುಗಳು ದೊರೆಯುವುದು ಮಾತ್ರ ಅತ್ಯಂತ ದುರ್ಲಭ. ಆದುದರಿಂದ ದೈತ್ಯಕುಲದ ದೊರೆಯೇ, ಪ್ರಸನ್ನನಾಗು, ನನ್ನ ಮೇಲೆ ಕೋಪಿಸಬೇಡ. ನಿನ್ನ ಕ್ರೋಧದ ಬೆಂಕಿ ನನ್ನನ್ನು ಸುಡುತ್ತಿದೆ. ಅದರ ಬೇಗೆಯಲ್ಲಿ ನಾನು ಹಗಲಿರುಳೂ ಬೇಯುತ್ತಲಿರುವೆ.

**ಪ್ರಹ್ಲಾದ -** ವತ್ಸ, ಕೋಪ ತನ್ನ ಕೆಲಸ ಮಾಡಿಬಿಟ್ಟಿದೆ. ''ಕ್ರೋಧಾದ್ ಭವತಿ ಸಂಮೋಹಃ'' ಎಂಬಂತೆ ನಾನು ಸಿಟ್ಟು ಮಾಡಿದೆ. ಆ ಸಿಟ್ಟಿನಿಂದ ನಾನು ಸಮ್ಮೋಹಕ್ಕೂ ವಶನಾದೆ. ಆ ಸಮ್ಮೋಹದಿಂದ ನನ್ನ ವಿವೇಕ ಅಳಿದುಹೋಯಿತು. ಆ ಅವಿವೇಕದ ಉದಯದಿಂದಲೇ ನಾನು ನಿನಗೆ ಶಾಪವಿತ್ತೆ. ನಿಜ ಹೇಳಬೇಕೆಂದರೆ ಸಿಟ್ಟಿನಿಂದ ನನ್ನಲ್ಲಿ ಉಂಟಾದ ಮೋಹವು ನನ್ನ ಜ್ಞಾನ, ವಿವೇಕಗಳನ್ನೇ ಪೂರ್ತಿ ನಾಶಮಾಡಿಬಿಟ್ಟಿದೆ. ಆ ನನ್ನ ಜ್ಞಾನವು ನಾಶವಾಗಿರದಿದ್ದರೆ ನಾನು ನಿನಗೆ ಶಪಿಸುತ್ತಿರಲಿಲ್ಲ. ಶ್ರೀಹರಿಯು ಎಲ್ಲರಲ್ಲಿಯೂ ಇರುವವನು ಎಂದು ದೃಢನಿಶ್ಚಯವಿದ್ದರೆ ಬೇರೊಬ್ಬನನ್ನು ನಾನು ಶಪಿಸುವುದು ಹೇಗೆ?

೫೬.೨. ಯೋಽಯಂ ಶಾಪೋ ಮಯಾ ದತ್ತೋ ಭವತೇ ದೈತ್ಯಪುಂಗವ।
ಭಾವ್ಯಮೇತೇನ ತೇ ನೂನಂ ತಸ್ಮಾತ್ತ್ವಂ ಮಾ ವಿಷೀದ ವೈ ॥

೫೬.೩. ಅದ್ಯ ಪ್ರಭೃತಿ ದೇವೇಶೇ ಭಗವತ್ಯಚ್ಯುತೇ ಹರೌ ।
ಭವೇಸ್ತ್ವಂ ಭಕ್ತಿಮಾನೀಶೇ ಸ ತೇ ತ್ರಾತಾ ಭವಿಷ್ಯತಿ ॥

೫೬.೪. ಶಾಪಂ ಪ್ರಾಪ್ಯ ಚ ಮೇ ವೀರ ದೇವೇಶಸ್ಸಂಸ್ಮೃತಸ್ತ್ವಯಾ ।
ತಥಾ ತಥಾ ವದಿಷ್ಯಾಮಿ ಶ್ರೇಯಸ್ತ್ವಂ ಪ್ರಾಪ್ಸ್ಯಸೇ ಯಥಾ ॥

## ಲೋಮಹರ್ಷಣ ಉವಾಚ

೫೬.೫. ಅದಿತೇರ್ವರಮಾಸಾದ್ಯ ಸರ್ವಕಾಮ ಸಮೃದ್ಧಿದಂ ।
ಕ್ರಮೇಣೈವ ಹರಿರ್ವೃದ್ಧಿಂ ದೇವಃ ಪ್ರಾಪ್ತೋ ಮಹಾಯಶಾಃ ॥

೫೭೭. ತತೋ ಮಾಸೇ ಚ ದಶಮೇ ಕಾಲೇ ಪ್ರಸವ ಆಗತೇ ।
ಅಜಾಯತ ಸ ಗೋವಿಂದೋ ಭಗವಾನ್ ವಾಮನಾಕೃತಿಃ ॥

೫೭೮. ಅವತೀರ್ಣೇ ಜಗನ್ನಾಥೇ ತಸ್ಮಿನ್ಸರ್ವಾಮರೇಶ್ವರೇ ।
ದೇವಾಶ್ಚ ಮುಮುಚುರ್ದುಃಖಂ ದೇವಮಾತಾದಿತಿಸ್ತಥಾ ॥

೫೭೯. ವವುರ್ವಾತಾಃ ಸುಖಸ್ಪರ್ಶಾಃ ವಿರಜಸ್ಕಮಭೂನ್ನಭಃ ।
ಧರ್ಮೇ ಚ ಸರ್ವಭೂತಾನಾಂ ತದಾ ಮತಿರಜಾಯತ ॥

೫೮೦. ನೋದ್ವೇಗಶ್ಚಾಪ್ಯಭೂದ್ದೇಹೇ ಮಾನವಾನಾಂ ದ್ವಿಜೋತ್ತಮಾಃ ।
ತದಾ ಹಿ ಸರ್ವಭೂತಾನಾಂ ಧರ್ಮೇ ಮತಿರಜಾಯತ ॥

೫೮೧. ತಂ ಜಾತಮಾತ್ರಂ ಭಗವಾನ್ ಬ್ರಹ್ಮಾ ಲೋಕಪಿತಾಮಹಃ ।
ಜಾತ ಕರ್ಮಾದಿಕಾಂ ಕೃತ್ವಾ ಕ್ರಿಯಾಂ ತುಷ್ಟಾವ ಚ ಪ್ರಭುಃ ॥

ದೈತ್ಯಧುರ್ಯ, ನಾನು ನಿನಗೆ ಕೊಟ್ಟ ಶಾಪ ನಿನ್ನ ಹಣೆಯಲ್ಲಿ ಬರೆದಿದ್ದೇ ಆಗಿತ್ತು. ಅದು ನಿನ್ನ ಭವಿತವ್ಯ. ಆಗಬೇಕಾದದ್ದು ಆಗಿಯೇ ತೀರುವದು. ಅದಕ್ಕಾಗಿ ನೀನು ವಿಷಾದ ಪಡಬೇಡ. ಆದರೆ ಮಗು, ಇಂದಿನಿಂದ ಮಾತ್ರ ನೀನು ದೇವತೆಗಳ ಶಾಸ್ತಾರನಾದ ಶ್ರೀಹರಿಯ ಸಂಪೂರ್ಣ ಭಕ್ತನಾಗು. ಅವನು ಗುಣಪೂರ್ಣ, ಅಚ್ಯುತ ಭಗವಂತ. ಅವನಲ್ಲಿ ಗುಣಗಳಿಗೆ ಚ್ಯುತಿ ಇಲ್ಲ. ದೋಷಗಳಿಗೆ ಸ್ಥಿತಿ ಇಲ್ಲ. ನೀನು ಅವನ ಭಕ್ತನಾದರೆ ಆ ಪರಮಾತ್ಮನೇ ನಿನ್ನನ್ನು ರಕ್ಷಿಸುವನು.

ಈ ನನ್ನ ಶಾಪದಿಂದಲೇ ನಿನಗೆ ಶ್ರೀಹರಿಯ ನೆನಪಾಯಿತು. ಇದೂ ಒಂದು ಒಳ್ಳೆಯದೇ. ವೀರಪುತ್ರ, ಆ ದೇವೇಶ್ವರನಲ್ಲಿ ನೀನು ಭಕ್ತಿ ಮಾಡಿ ಅವನ ಗುಣಗಳನ್ನು ಚೆನ್ನಾಗಿ ಧ್ಯಾನ ಮಾಡುತ್ತ ಹೋದಂತೆ ನಿನಗೆ ಉತ್ತರೋತ್ತರ ಶ್ರೇಯಸ್ಸು ಉಂಟಾಗುವದು ಎಂದು ನಾನು ತಿಳಿದಿದ್ದೇನೆ.

**ಲೋಮಹರ್ಷಣ** - ಸಕಲ ಮನೋರಥ ಪೂರಕವಾದ ಅದಿತಿ ದೇವಿಯ ವರವನ್ನೇ ನಿಮಿತ್ತ ಮಾಡಿ ಶ್ರೀಹರಿಯು ಅವಳ ಗರ್ಭದಲ್ಲಿಯೇ ಕೀರ್ತಿವೆತ್ತು ಕ್ರಮೇಣ ಅಭಿವೃದ್ಧಿಯನ್ನು ಹೊಂದುತ್ತಲಿದ್ದನು. ಹತ್ತು ತಿಂಗಳು ಕಳೆಯಿತು. ಹೆರುವ ಸಮಯ ಬಂದಿತು. ಗುಣಪೂರ್ಣನಾದ ಗೋವಿಂದನು ವಾಮನಾಕಾರದಿಂದ ಅವತರಿಸಿದನು.

ಜಗದೊಡೆಯನು ಆವಿರ್ಭೂತನಾದ ಕೂಡಲೇ ದೇವತೆಗಳ ದುಃಖವೆಲ್ಲ ಕಳೆದು ಹೋಯಿತು. ದೇವಮಾತೆಯಾದ ಅದಿತಿದೇವಿಯ ಮನದಳಲು ಮಾಯವಾಯಿತು. ಗಾಳಿ ಹಿತಕರವಾಗಿ ಬೀಸಿತು. ಮುಗಿಲ ತುಂಬ ಒಂದೂ ಧೂಳೀಕಣವಿಲ್ಲ. ಆಗಸವೆಲ್ಲ ಪ್ರಶಾಂತವಾಗಿದ್ದಿತು. ಎಲ್ಲ ಪ್ರಾಣಿಗಳಿಗೂ ಧರ್ಮದಲ್ಲಿ ದೃಢಬುದ್ಧಿ ಉದಿಸಿತು. ಎಲ್ಲ ಮಾನವರ ಮನಸ್ಸಿನಲ್ಲಿಯೂ ಏನೋ ಉತ್ಸಾಹ. ಮೈಯಲ್ಲಿ ಉಮೇದ. ಯಾರ ದೇಹದಲ್ಲಿಯೂ ದುಗುಡವಿಲ್ಲ. ಯಾವ ಮನದಲ್ಲಿಯೂ ದುಮ್ಮಾನವಿಲ್ಲ ಎಲ್ಲರಲ್ಲಿಯೂ ಸದ್ಬುದ್ಧಿ. ಎಲ್ಲೆಡೆಗೂ ಸುಖ ಶಾಂತಿ ಸಂತಸ ಸಮಾಧಾನಗಳು ತುಳುಕಿದವು.

ಹುಟ್ಟಿದ ಕೂಡಲೇ ಪ್ರಪಂಚದ ಪಿತಾಮಹನಾದ ಬ್ರಹ್ಮದೇವರು ಆ ಭಗವಂತನಿಗೆ ಜಾತಕರ್ಮಾದಿ ಸಂಸ್ಕಾರಗಳನ್ನು ಮಾಡಿ ಸಂತಸಗೊಂಡರು ಮತ್ತು ಬ್ರಹ್ಮದೇವರು ಭಕ್ತಿಯಿಂದ ಆ ಭಗವಂತನನ್ನು ಓಲೈಸಿದರು.

## ಬ್ರಹ್ಮೋವಾಚ

೫೭೨. ಜಯಾಧೀಶ ಜಯಾಜೇಯ ಜಯ ಸರ್ವಗುರೋ ಹರೇ ।
ಜನ್ಮಮೃತ್ಯು ಜರಾತೀತ ಜಯಾನಂತ ಜಯಾಚ್ಯುತ ॥

೫೭೩. ಜಯಾಜಿತ ಜಯಾಶೇಷ ಜಯಾವ್ಯಕ್ತಸ್ಥಿತೇ ಜಯ ।
ಪರಮಾರ್ಥಾರ್ಥ ಸರ್ವಜ್ಞ ಜ್ಞಾನಜ್ಞೇಯಾರ್ಥ ನಿಶ್ಚಿತ ॥

೫೭೪. ಜಯಾಶೇಷ ಜಗತ್ಸಾಕ್ಷಿನ್ ಜಗತ್ಕರ್ತರ್ಜಗದ್ಗುರೋ ।
ಜಗತೋ ಜಗತಶ್ಚೇಶ ಸ್ಥಿತೌ ಪಾಲಯಸೇ ಜಯ ॥

೫೭೫. ಜಯಾಖಿಲ ಜಯಾಶೇಷ ಜಯ ಸರ್ವ ಹೃದಿ ಸ್ಥಿತ ।
ಜಯಾದಿ ಮಧ್ಯಾಂತಮಯ ಸರ್ವಜ್ಞಾನಮಯೋತ್ತಮ ॥

೫೭೬. ಮುಮುಕ್ಷುಭಿರನಿರ್ದೇಶ್ಯ ನಿತ್ಯಹೃಷ್ಟ ಜಯೇಶ್ವರ ।
ಯೋಗಿಭಿರ್ಮುಕ್ತಿಕಾಮೈಸ್ತು ದಮಾದಿಗುಣ ಭೂಷಣೈಃ ॥

೫೭೭. ಜಯಾತಿಸೂಕ್ಷ್ಮ ದುರ್ಜ್ಞೇಯ ಜಗನ್ಮೂಲ ಜಗನ್ಮಯ ।
ಜಯಸೂಕ್ಷ್ಮಾತಿ ಸೂಕ್ಷ್ಮ ತ್ವಂ ಜಯ ಯೋಗಿನ್ನತೀಂದ್ರಿಯ ॥

೫೭೮. ಜಯ ಸ್ವಮಾಯಾ ಯೋಗಸ್ಥ ಶೇಷ ಭೋಗಶಯಾಕ್ಷರ ।
ಜಯೈಕದಂಷ್ಟ್ರಾ ಪ್ರಾಂತೇನ ಸಮುದ್ಧೃತವಸುಂಧರ ॥

''ಎಲ್ಲರ ಒಡೆಯನೇ ನಿನಗೆ ಗೆಲುವಾಗಲಿ. ಯಾರಿಂದಲೂ ಗೆಲ್ಲಲಾಗದ ನಿನಗೆ ಜಯವಾಗಲಿ''. ಸರ್ವರಿಗೂ ಗುರುವಾದ ನಿನಗೆ ಗೆಲುವಾಗಲಿ. ಹುಟ್ಟು ಸಾವು ಮುಪ್ಪುಗಳನ್ನು ಮೀರಿದ, ನಾಶವಿಲ್ಲದ ಅಚ್ಯುತನೇ, ನಿನಗೆ ಗೆಲುವು. ಸೋಲಿಲ್ಲದ, ಎಲ್ಲರನ್ನೂ ಗೆಲ್ಲುವ, ಸ್ಥೂಲ ದೃಷ್ಟಿಗೆ ಗೋಚರನಾಗದ ಭಗವಂತನೇ ನಿನಗೆ ಗೆಲುವು. ಪಾರಮಾರ್ಥಿಕ ಸತ್ಯವಾದ ಈ ಪ್ರಪಂಚದಲ್ಲಿಯ ಸಕಲ ಪದಾರ್ಥಗಳನ್ನೂ ಈ ವಿಶ್ವದಲ್ಲಿ ಜ್ಞಾನಕ್ಕೆ ವಿಷಯವಾಗಬಹುದಾದ ಎಲ್ಲ ಜ್ಞೇಯ ವಸ್ತುಗಳನ್ನೂ ಅಶೇಷ ವಿಶೇಷಾಕಾರದಿಂದ ಅರಿತ ಸರ್ವಜ್ಞ ಮೂರ್ತಿಗೆ ಗೆಲವು. ಸರ್ವ ಜಗತ್ತಿಗೆ ಸಾಕ್ಷೀಭೂತನಾಗಿ ಪ್ರಪಂಚವನ್ನೇ ರೂಪಿಸಿದ ಜಗದ್ಗುರುವೇ ನಿನಗೆ ಗೆಲವು. ಚರಾಚರಾತ್ಮಕವಾದ ಈ ವಿಶ್ವವನ್ನು ಸ್ಥಿತಿ ಕಾಲದಲ್ಲಿ ಸಂರಕ್ಷಿಸುವ ಶ್ರೀ ವಿಷ್ಣುವೇ ನಿನಗೆ ಗೆಲುವಿರಲಿ.

ಸರ್ವ ಪ್ರಪಂಚವನ್ನೂ ವ್ಯಾಪಿಸಿ ಸರ್ವನಿರ್ವಾಹಕನಾದುದರಿಂದ ಸಕಲ ಜಗದ್ರೂಪಿ ಎನಿಸಿದ, ಸಮಸ್ತರನ್ನೂ ಗೆಲ್ಲುವ, ಸರ್ವರ ಹೃದಯಾಂತರಸ್ಥಿತನಾದ ಶ್ರೀ ವಿಷ್ಣುವೆ ನಿನಗೆ ಗೆಲುವು. ವಿಶ್ವದ ಅಂತಃಪ್ರವಿಷ್ಟನಾಗಿ ಅದಕ್ಕೆ ಸೃಷ್ಟಿ ಸ್ಥಿತಿ ಸಂಹಾರ ರೂಪವಾದ ಮೂರು

ಅವಸ್ಥೆಗಳನ್ನು ತಂದು ಕೊಡಲಿಕ್ಕೆ ಮುಖ್ಯ ಕಾರಣನಾದುದರಿಂದ ತನ್ಮಯನೆಂದು ಕರೆಯಿಸಿಕೊಳ್ಳಲ್ಪಡುವ ಪೂರ್ಣಜ್ಞಾನಸ್ವರೂಪಿಯಾದ ಭಗವನ್, ಸರ್ವೋತ್ತಮನಾದ ನಿನಗೆ ಗೆಲುವಿರಲಿ. ಶಮದಮಾದಿ ಗುಣಸಂಪನ್ನರಾದ ಮೋಕ್ಷವನ್ನು ಬಯಸುವ ಮುಮುಕ್ಷುಗಳಾದ ಜ್ಞಾನಿಗಳು ಕೂಡ ನಿನ್ನನ್ನು ಇದಮಿತ್ಥಂ ಎಂದು ತಿಳಿಯಲಾರರು. ನೀನು ನಿತ್ಯ ತೃಪ್ತ ಪೂರ್ಣ ಕಾಮ. ಸರ್ವೇಶ್ವರ. ಇಂಥ ನಿನಗೆ ಜಯವಾಗಲಿ. ಅಣೋರಣೀಯನೂ ಸಾಕಲ್ಯೇನ ಯಾರಿಂದಲೂ ತಿಳಿಯಲು ಅಶಕ್ಯನೂ ಜಗತ್ತಿಗೆಲ್ಲ ಆದಿಕಾರಣನೂ ವಿಶ್ವವನ್ನೆಲ್ಲ ವ್ಯಾಪಿಸಿದ್ದರಿಂದ ವಿಶ್ವಮಯನೂ ಇಂದ್ರಿಯಾತೀತನೂ ಯೋಗೇಶ್ವರನೂ ಆದ ನಿನಗೆ ಜಯ ಜಯ. ಮಾಯಾಶಬ್ದವಾಚ್ಯಳಾದ ಲಕ್ಷ್ಮೀದೇವಿಯೊಂದಿಗೆ ನಿತ್ಯಾವಿಯುಕ್ತನಾಗಿ, ಶೇಷ ಎಂಬ ಹಾವಿನ ಮೈಮೇಲೆ ಮಲಗಿದ, ನಾಶ ರಹಿತನಾದ, ಒಂದೇ ಕೋರೆ ದವಡೆಯಿಂದ ಭೂಮಂಡಲವನ್ನು ಎತ್ತಿ ಉದ್ಧರಿಸಿದ ವರಾಹ ಮೂರ್ತಿಗೆ ಜಯ ಜಯ.

೫೭೯. ನೃಕೇಸರಿನ್ ಸುರಾರಾತಿವಕ್ಷಸ್ಥಲವಿದಾರಣ ।
ಸಾಂಪ್ರತಂ ಜಯ ವಿಶ್ವಾತ್ಮನ್ ಮಾಯಾ ವಾಮನ ಕೇಶವ ।

೫೮೦. ಸ್ವಮಾಯಾ ಪಟಲಚ್ಛನ್ನ ಜಗದ್ಧಾತರ್ಜನಾರ್ದನ ।
ಜಯಾಚಿಂತ್ಯ ಜಯಾನೇಕ ಸ್ವರೂಪೈಕನಿಧೇ ಪ್ರಭೋ ॥

೫೮೧. ತ್ವಮೇವಾರಾಧಿತೋ ಯೇನ ಪ್ರಸಾದ ಸುಮುಖ ಪ್ರಭೋ ।
ಸ ಏವ ಕೇವಲಂ ದೇವ ವೇತ್ತಿ ತ್ವಾಂ ನೇತರೋ ಜನಃ ॥

೫೮೨. ವರ್ಧಸ್ವ ವರ್ಧಿತಾನೇಕ ವಿಕಾರ ಪ್ರಕೃತೇ ಹರೇ ।
ತ್ವಯ್ಯೆಷಾ ಜಗತೀ ಶೇಷಸಂಸ್ಥಿತಾ ಧರ್ಮಪದ್ಧತಿಃ ॥

೫೮೩. ನ ತ್ವಾಮಹಂ ನ ಚೇಶಾನೋ ನೇಂದ್ರಾದ್ಯಾಸ್ತ್ರಿದಶಾ ಹರೇ ।
ಜ್ಞಾತುಮೀಶಾ ನ ಋಷಯಃ ಸನಕಾದ್ಯಾ ನ ಯೋಗಿನಃ ॥

೫೮೪. ತ್ವಂ ಮಾಯಾಪಟ ಸಂವೀತೋ ಜಗತ್ಯತ್ರ ಜಗತ್ಪತೇ ।
ಕಸ್ತ್ವಾಂ ವೇತ್ಸ್ಯತಿ ಸರ್ವೇಶ ತ್ವತ್ಪ್ರಸಾದಂ ವಿನಾ ನರಃ ॥

೫೮೫. ನಂದೀಶ್ವರೇಶ್ವರೇಶಾನ ವಿಭೋ ವರ್ಧಸ್ವ ವಾಮನ ।
ಪ್ರಭವಾಯಾಸ್ಯ ವಿಶ್ವಸ್ಯ ವಿಶ್ವಾತ್ಮನ್ ಪೃಥುಲೋಚನ ।

## ಲೋಮಹರ್ಷಣ ಉವಾಚ

೫೮೬. ಏವಂ ಸ್ತುತೋ ಹೃಷೀಕೇಶಃ ಸ ತದಾ ವಾಮನಾಕೃತಿಃ ।
ಪ್ರಹಸ್ಯ ಭಾವಗಂಭೀರಮುವಾಚಾರೂಢ ಸಂಪದಂ

೫೮೭. ಸ್ತುತೋಹಂ ಭವತಾ ಪೂರ್ವಮಿಂದ್ರಾದ್ಯೈಃ ಕಾಶ್ಯಪೇನ ಚ ।
ಮಯಾ ಚಾಸ್ಯ ಪ್ರತಿಜ್ಞಾತಮಿಂದ್ರಸ್ಯ ಭುವನತ್ರಯಮ್ ॥

ಹುಟ್ಟಿದ ಕೂಡಲೇ ಪ್ರಪಂಚದ ಪಿತಾಮಹನಾದ ಬ್ರಹ್ಮದೇವರು ಆ ಭಗವಂತನಿಗೆ ಜಾತಕರ್ಮಾದಿ ಸಂಸ್ಕಾರಗಳನ್ನು ಮಾಡಿ ಸಂತಸಗೊಂಡರು ಮತ್ತು ಬ್ರಹ್ಮದೇವರು ಭಕ್ತಿಯಿಂದ ಆ ಭಗವಂತನನ್ನು ಓಲೈಸಿದರು.

## ಬ್ರಹ್ಮೋವಾಚ

೫೭೨. ಜಯಾಧೀಶ ಜಯಾಜೇಯ ಜಯ ಸರ್ವಗುರೋ ಹರೇ ।
ಜನ್ಮಮೃತ್ಯು ಜರಾತೀತ ಜಯಾನಂತ ಜಯಾಚ್ಯುತ ॥

೫೭೩. ಜಯಾಜಿತ ಜಯಾಶೇಷ ಜಯಾವ್ಯಕ್ತಸ್ಥಿತೇ ಜಯ ।
ಪರಮಾರ್ಥಾರ್ಥ ಸರ್ವಜ್ಞ ಜ್ಞಾನಜ್ಞೇಯಾರ್ಥ ನಿಶ್ಚಿತ ॥

೫೭೪. ಜಯಾಶೇಷ ಜಗತ್ಸಾಕ್ಷಿನ್ ಜಗತ್ಕರ್ತರ್ಜಗದ್ಗುರೋ ।
ಜಗತೋ ಜಗತಶ್ಚೇಶ ಸ್ಥಿತೌ ಪಾಲಯಸೇ ಜಯ ॥

೫೭೫. ಜಯಾಖಿಲ ಜಯಾಶೇಷ ಜಯ ಸರ್ವ ಹೃದಿ ಸ್ಥಿತ ।
ಜಯಾದಿ ಮಧ್ಯಾಂತಮಯ ಸರ್ವಜ್ಞಾನಮಯೋತ್ತಮ ॥

೫೭೬. ಮುಮುಕ್ಷುಭಿರನಿರ್ದೇಶ್ಯ ನಿತ್ಯಹೃಷ್ಟ ಜಯೇಶ್ವರ ।
ಯೋಗಿಭಿರ್ಮುಕ್ತಿಕಾಮೈಸ್ತು ದಮಾದಿಗುಣ ಭೂಷಣೈಃ ॥

೫೭೭. ಜಯಾತಿಸೂಕ್ಷ್ಮ ದುರ್ಜ್ಞೇಯ ಜಗನ್ಮೂಲ ಜಗನ್ಮಯ ।
ಜಯಸೂಕ್ಷ್ಮಾತಿ ಸೂಕ್ಷ್ಮ ತ್ವಂ ಜಯ ಯೋಗಿನ್ನತೀಂದ್ರಿಯ ॥

೫೭೮. ಜಯ ಸ್ವಮಾಯಾ ಯೋಗಸ್ಥ ಶೇಷ ಭೋಗಶಯಾಕ್ಷರ ।
ಜಯೈಕದಂಷ್ಟ್ರಾ ಪ್ರಾಂತೇನ ಸಮುದ್ಧೃತವಸುಂಧರ ॥

''ಎಲ್ಲರ ಒಡೆಯನೇ ನಿನಗೆ ಗೆಲುವಾಗಲಿ. ಯಾರಿಂದಲೂ ಗೆಲ್ಲಲಾಗದ ನಿನಗೆ ಜಯವಾಗಲಿ''. ಸರ್ವರಿಗೂ ಗುರುವಾದ ನಿನಗೆ ಗೆಲುವಾಗಲಿ. ಹುಟ್ಟು ಸಾವು ಮುಪ್ಪುಗಳನ್ನು ಮೀರಿದ, ನಾಶವಿಲ್ಲದ ಅಚ್ಯುತನೇ, ನಿನಗೆ ಗೆಲವು. ಸೋಲಿಲ್ಲದ, ಎಲ್ಲರನ್ನೂ ಗೆಲ್ಲುವ, ಸ್ಥೂಲ ದೃಷ್ಟಿಗೆ ಗೋಚರನಾಗದ ಭಗವಂತನೇ ನಿನಗೆ ಗೆಲವು. ಪಾರಮಾರ್ಥಿಕ ಸತ್ಯವಾದ ಈ ಪ್ರಪಂಚದಲ್ಲಿಯ ಸಕಲ ಪದಾರ್ಥಗಳನ್ನೂ ಈ ವಿಶ್ವದಲ್ಲಿ ಜ್ಞಾನಕ್ಕೆ ವಿಷಯವಾಗಬಹುದಾದ ಎಲ್ಲ ಜ್ಞೇಯ ವಸ್ತುಗಳನ್ನೂ ಅಶೇಷ ವಿಶೇಷಾಕಾರದಿಂದ ಅರಿತ ಸರ್ವಜ್ಞ ಮೂರ್ತಿಗೆ ಗೆಲವು. ಸರ್ವ ಜಗತ್ತಿಗೆ ಸಾಕ್ಷೀ ಭೂತನಾಗಿ ಪ್ರಪಂಚವನ್ನೇ ರೂಪಿಸಿದ ಜಗದ್ಗುರುವೇ ನಿನಗೆ ಗೆಲವು. ಚರಾಚರಾತ್ಮಕವಾದ ಈ ವಿಶ್ವವನ್ನು ಸ್ಥಿತಿ ಕಾಲದಲ್ಲಿ ಸಂರಕ್ಷಿಸುವ ಶ್ರೀ ವಿಷ್ಣುವೇ ನಿನಗೆ ಗೆಲುವಿರಲಿ.

ಸರ್ವ ಪ್ರಪಂಚವನ್ನೂ ವ್ಯಾಪಿಸಿ ಸರ್ವನಿರ್ವಾಹಕನಾದುದರಿಂದ ಸಕಲ ಜಗದ್ರೂಪಿ ಎನಿಸಿದ, ಸಮಸ್ತರನ್ನೂ ಗೆಲ್ಲುವ, ಸರ್ವರ ಹೃದಯಾಂತರಸ್ಥಿತನಾದ ಶ್ರೀ ವಿಷ್ಣುವೆ ನಿನಗೆ ಗೆಲುವು. ವಿಶ್ವದ ಅಂತಃಪ್ರವಿಷ್ಟನಾಗಿ ಅದಕ್ಕೆ ಸೃಷ್ಟಿ ಸ್ಥಿತಿ ಸಂಹಾರ ರೂಪವಾದ ಮೂರು

ಅವಸ್ಥೆಗಳನ್ನು ತಂದು ಕೊಡಲಿಕ್ಕೆ ಮುಖ್ಯ ಕಾರಣನಾದುದರಿಂದ ತನ್ಮಯನೆಂದು ಕರೆಯಿಸಿಕೊಳ್ಳಲ್ಪಡುವ ಪೂರ್ಣಜ್ಞಾನಸ್ವರೂಪಿಯಾದ ಭಗವನ್, ಸರ್ವೋತ್ತಮನಾದ ನಿನಗೆ ಗೆಲುವಿರಲಿ. ಶಮದಮಾದಿ ಗುಣಸಂಪನ್ನರಾದ ಮೋಕ್ಷವನ್ನು ಬಯಸುವ ಮುಮುಕ್ಷುಗಳಾದ ಜ್ಞಾನಿಗಳು ಕೂಡ ನಿನ್ನನ್ನು ಇದಮಿತ್ಥಂ ಎಂದು ತಿಳಿಯಲಾರರು. ನೀನು ನಿತ್ಯ ತೃಪ್ತ ಪೂರ್ಣ ಕಾಮ. ಸರ್ವೇಶ್ವರ. ಇಂಥ ನಿನಗೆ ಜಯವಾಗಲಿ. ಅಣೋರಣೀಯನೂ ಸಾಕಲ್ಯೇನ ಯಾರಿಂದಲೂ ತಿಳಿಯಲು ಅಶಕ್ಯನೂ ಜಗತ್ತಿಗೆಲ್ಲ ಆದಿಕಾರಣನೂ ವಿಶ್ವವನ್ನೆಲ್ಲ ವ್ಯಾಪಿಸಿದ್ದರಿಂದ ವಿಶ್ವಮಯನೂ ಇಂದ್ರಿಯಾತೀತನೂ ಯೋಗೇಶ್ವರನೂ ಆದ ನಿನಗೆ ಜಯ ಜಯ. ಮಾಯಾಶಬ್ದವಾಚ್ಯಳಾದ ಲಕ್ಷ್ಮೀದೇವಿಯೊಂದಿಗೆ ನಿತ್ಯಾವಿಯುಕ್ತನಾಗಿ, ಶೇಷ ಎಂಬ ಹಾವಿನ ಮೈಮೇಲೆ ಮಲಗಿದ, ನಾಶ ರಹಿತನಾದ, ಒಂದೇ ಕೋರೆ ದವಡೆಯಿಂದ ಭೂಮಂಡಲವನ್ನು ಎತ್ತಿ ಉದ್ಧರಿಸಿದ ವರಾಹ ಮೂರ್ತಿಗೆ ಜಯ ಜಯ.

೫೭೯. ನೃಕೇಸರಿನ್ ಸುರಾರಾತಿವಕ್ಷಸ್ಥಲವಿದಾರಣ ।
ಸಾಂಪ್ರತಂ ಜಯ ವಿಶ್ವಾತ್ಮನ್ ಮಾಯಾ ವಾಮನ ಕೇಶವ ।

೫೮೦. ಸ್ವಮಾಯಾ ಪಟಲಚ್ಛನ್ನ ಜಗದ್ಧಾತರ್ಜನಾರ್ದನ ।
ಜಯಾಚಿಂತ್ಯ ಜಯಾನೇಕ ಸ್ವರೂಪೈಕನಿಧೇ ಪ್ರಭೋ ॥

೫೮೧. ತ್ವಮೇವಾರಾಧಿತೋ ಯೇನ ಪ್ರಸಾದ ಸುಮುಖ ಪ್ರಭೋ ।
ಸ ಏವ ಕೇವಲಂ ದೇವ ವೇತ್ತಿ ತ್ವಾಂ ನೇತರೋ ಜನಃ ॥

೫೮೨. ವರ್ಧಸ್ವ ವರ್ಧಿತಾನೇಕ ವಿಕಾರ ಪ್ರಕೃತೇ ಹರೇ ।
ತ್ವಯ್ಯೈಷಾ ಜಗತೀ ಶೇಷಸಂಸ್ಥಿತಾ ಧರ್ಮಪದ್ಧತಿಃ ॥

೫೮೩. ನ ತ್ವಾಮಹಂ ನ ಚೇಶಾನೋ ನೇಂದ್ರಾದ್ಯಾಸ್ತ್ರಿದಶಾ ಹರೇ ।
ಜ್ಞಾತುಮೀಶಾ ನ ಋಷಯಃ ಸನಕಾದ್ಯಾ ನ ಯೋಗಿನಃ ॥

೫೮೪. ತ್ವಂ ಮಾಯಾಪಟ ಸಂವೀತೋ ಜಗತ್ಯತ್ರ ಜಗತ್ಪತೇ ।
ಕಸ್ತ್ವಾಂ ವೇತ್ಸ್ಯತಿ ಸರ್ವೇಶ ತ್ವತ್ಪ್ರಸಾದಂ ವಿನಾ ನರಃ ॥

೫೮೫. ನಂದೀಶ್ವರೇಶ್ವರೇಶಾನ ವಿಭೋ ವರ್ಧಸ್ವ ವಾಮನ ।
ಪ್ರಭವಾಯಾಸ್ಯ ವಿಶ್ವಸ್ಯ ವಿಶ್ವಾತ್ಮನ್ ಪೃಥುಲೋಚನ ।

ಲೋಮಹರ್ಷಣ ಉವಾಚ

೫೮೬. ಏವಂ ಸ್ತುತೋ ಹೃಷೀಕೇಶಃ ಸ ತದಾ ವಾಮನಾಕೃತಿಃ ।
ಪ್ರಹಸ್ಯ ಭಾವಗಂಭೀರಮುವಾಚಾರೂಢ ಸಂಪದಂ

೫೮೭. ಸ್ತುತೋಹಂ ಭವತಾ ಪೂರ್ವಮಿಂದ್ರಾದ್ಯೈಃ ಕಾಶ್ಯಪೇನ ಚ ।
ಮಯಾ ಚಾಸ್ಯ ಪ್ರತಿಜ್ಞಾತಮಿಂದ್ರಸ್ಯ ಭುವನತ್ರಯಮ್ ॥

**೫೮೮. ಭೂಯಶ್ಚಾಹಂ ಸ್ತುತೋದಿತ್ಯಾ ತಸ್ಯಾಶ್ಚಾಪಿ ಮಯಾ ಶ್ರುತಮ್।**
**ಯಥಾ ಶಕ್ರಾಯ ದಾಸ್ಯಾಮಿ ತ್ರೈಲೋಕ್ಯಂ ಹತಕಂಟಕಮ್ ॥**

ದೇವ ವೈರಿಯಾದ ಹಿರಣ್ಯಕಶ್ಯಪನ ಎದೆ ಸೀಳಿದ ನರಸಿಂಹಮೂರ್ತಿಗೆ ಗೆಲುವು. ವಿಶ್ವಾಂತರ್ಯಾಮಿಯಾದ ನೀನು ಈಗ ಸ್ವೇಚ್ಛೆಯಿಂದ ವಾಮನನಾಗಿ ಅವತರಿಸಿರುವೆ. ನಿನಗೆ ಜಯವಾಗಲಿ. ನಿನ್ನ ಮಾಯೆಯಿಂದ ಆವೃತವಾದ ಜಗತ್ತನ್ನು ರೂಪಿಸಿದ ಜನಾರ್ದನನೆ, ನಿನಗೆ ಗೆಲುವು. ಅಚಿಂತ್ಯಾದ್ಭುತ ಮಹಿಮೆಗಳುಳ್ಳ ಮಹಾಪ್ರಭುವೇ, ನಿನ್ನ ಅವತಾರ ರೂಪಗಳು ಅನಂತವಾದರೂ ಅವುಗಳಲ್ಲಿ ಭೇದವಿಲ್ಲ. ಅವೆಲ್ಲವುಗಳ ಏಕ ನಿಧಿಯಾದ ಮೂಲರೂಪಿ ಮಹಾವಿಷ್ಣುವೇ, ನಿನಗೆ ಗೆಲುವಾಗಲಿ.

ತನ್ನ ಅಧಿಷ್ಠಾನದಿಂದ ಪ್ರಕೃತಿಯಲ್ಲಿ ಬಗೆಬಗೆಯ ವಿಕಾರಗಳನ್ನು ಉಂಟು ಮಾಡಿ ಜಗದ್ರೂಪವಾಗಿ ಅಭಿವೃದ್ಧಿಗೊಳಿಸುವ ಶ್ರೀಹರಿಯೇ ಈಗ ನಿನ್ನ ಸಂಕಲ್ಪಾನುಸಾರವಾಗಿ ಅಭಿವೃದ್ಧಿ ಹೊಂದಿ ಆದಿಶೇಷನ ಹೆಡೆಯ ಮೇಲಿರುವ ಈ ಹದಿನಾಲ್ಕು ಲೋಕಗಳನ್ನು ನಿಜವಾಗಿ ಧರಿಸಿದವನು ನೀನೇ. ಇನ್ನು ಮೇಲೆ ಧರ್ಮಮಾರ್ಗದಲ್ಲಿ ನಮ್ಮನ್ನು ಮುನ್ನಡೆಸಬೇಕಾಗಿದೆ. ನಾನಾಗಲಿ, ಮಹಾದೇವನಾಗಲಿ, ಇಂದ್ರಾದಿ ದೇವತೆಗಳಾಗಲಿ, ಸನಕಾದಿ ಯೋಗಿಗಳು, ಮಹಾಮಹಾ ಋಷಿಗಳೂ ನಿನ್ನನ್ನು ಪೂರ್ಣವಾಗಿ ಅರಿಯಲಾರರು. ಸ್ವಾಧೀನವಾದ ಇಚ್ಛಾಶಕ್ತಿಯಿಂದ ಒಡಗೂಡಿದ ನಿನ್ನನ್ನು ಈ ಜಗತ್ತಿನಲ್ಲಿ ಜಗದೊಡೆಯಾ, ನಿನ್ನ ಅನುಗ್ರಹವಿಲ್ಲದೇ ಯಾವನು ತಾನೇ ತಿಳಿಯಬಲ್ಲನು!

ಯಾರು ನಿನ್ನನ್ನು ನಿರಂತರ ಸೇವಾರಾಧನೆಗಳಿಂದ ಸಂತೋಷಪಡಿಸುವರೋ ಅವರ ಮೇಲೆ ನೀನು ಪ್ರಸನ್ನನಾಗುವಿ. ನಿನ್ನ ಈ ಪ್ರಸಾದ ಪರಮಾನುಗ್ರಹಕ್ಕೆ ಪಾತ್ರ ರಾದವರು ಮಾತ್ರ ನಿನ್ನ ದಯೆಯಿಂದ ಯಥಾಯೋಗ್ಯವಾಗಿ ನಿನ್ನನ್ನು ತಿಳಿಯಬಲ್ಲರು. ನಂದೀಶ್ವರನಿಗೂ ಅವನ ಒಡೆಯನಾದ ಶಂಕರನಿಗೂ ನಿಯಾಮಕನಾದ ವಾಮನರೂಪಿ ಯಾದ ಪದ್ಮಾಕ್ಷ ಪ್ರಭುವೇ, ಈ ಜಗತ್ತಿನ ಅಭ್ಯುದಯಕ್ಕಾಗಿ ವಿಶ್ವಾಂತರ್ಯಾಮಿಯಾದ ನೀನು ಬೆಳೆದು ಬೆಳಗು.

**ಲೋಮಹರ್ಷಣ -** ಬ್ರಹ್ಮದೇವರ ಈ ಸ್ತೋತ್ರವನ್ನು ಕೇಳಿ ಕುಳ ಮೈದಾಳಿದ ಆ ಹೃಷೀಕೇಶನು ನಸುನಕ್ಕು ಜಗತ್ತಿನ ಭಾಗ್ಯೋದಯವನ್ನು ಸೂಚಿಸುವ ಭಾವ ಗಂಭೀರವಾದ ಈ ಮಾತನ್ನು ಆಡಿದನು.

**೫೮೯. ಸೋಽಹಂ ತಥಾ ಕರಿಷ್ಯಾಮಿ ಯೇಥೇಂದ್ರೋ ಜಗತಃ ಪತಿಃ ।**
**ಭವಿಷ್ಯತಿ ಸಹಸ್ರಾಕ್ಷಃ ಸತ್ಯಮೇತದ್ಬ್ರವೀಮಿ ವಃ ।**

**೫೯೦. ತತಃ ಕೃಷ್ಣಾಜಿನಂ ಬ್ರಹ್ಮಾ ಹೃಷೀಕೇಶಾಯ ದತ್ತವಾನ್ ।**
**ಯಜ್ಞೋಪವೀತಂ ಭಗವಾನ್ ದದೌ ತಸ್ಯ ಬ್ರಹಸ್ಪತಿಃ ॥**

**೫೯೧. ಆಷಾಢಮದದಾದ್ದಂಡಂ ಮರೀಚಿ ರ್ಬ್ರಹ್ಮಣ ಸುತಃ ।**
**ಕಮಂಡಲುಂ ವಸಿಷ್ಠಶ್ಚ ಕುಶಾಂಶ್ಚೀರಮಥಾಂಗಿರಾಃ ।**
**ಆಸನಂ ಚೈವ ಪುಲಹಃ ಪೀತವಾಸಸೀ ॥**

೫೯೨. ಉಪತಸ್ಥುಶ್ಚ ತಂ ವೇದಾಃ ಪ್ರಣವೋಚ್ಚಾರ ಭೂಷಣಾಃ ।
ಶಾಸ್ತ್ರಾಣ್ಯ ಶೇಷಾಣಿ ತಥಾ ಸಾಂಖ್ಯ ಯೋಗೋಕ್ತಯಸ್ತಥಾ ।

೫೯೩. ಸ ವಾಮನೋ ಜಟೀ ದಂಡೀ ಛತ್ರೀ ಧೃತಕಮಂಡಲುಃ ।
ಸರ್ವವೇದಮಯೋ ದೇವೋ ಬಲೇರಧ್ವರ ಮಭ್ಯಗಾತ್ ॥

೫೯೪. ಯತ್ರ ಪತ್ರ ಪದಂ ವಿಪ್ರಾ ಭೂಭಾಗೇ ವಾಮನೋ ದದೌ
ದದಾತಿ ಭೂಮಿರ್ವಿವರಂ ತತ್ರ ತತ್ರಾಭೀಪೀಡಿತಾ ॥

೫೯೫. ಸ ವಾಮನೋ ಜಡಗತಿ ರ್ಮೃದು ಗಚ್ಛನ್ ಸಪರ್ವತಾಂ ।
ಸಾದ್ರಿದ್ವೀಪವನಾಂ ಸರ್ವಾಂ ಚಾಲಯಾಮಾಸ ಮೇದಿನೀಂ ॥

೫೯೬. ಬ್ರಹ್ಮಸ್ಪತಿಸ್ತು ಶನಕ್ಕೈ ರ್ಮಾರ್ಗಂ ದರ್ಶಯತೇ ಶುಭಂ ।
ತಥಾ ಕ್ರೀಡಾವಿನೋದಾರ್ಥೇ ಗತಿರ್ಜಗತಿ ಸಾ ಭವತ್ ॥

''ಬ್ರಹ್ಮನೇ, ನೀನೂ ಇಂದ್ರಾದಿ ದೇವತೆಗಳೂ, ಕಶ್ಯಪ ಮುನಿಯೂ ಈ ಮೊದಲೇ ನನ್ನನ್ನು ಪ್ರಾರ್ಥಿಸಿದ್ದಿರಿ, ಅನಂತರ ಅದಿತಿ ದೇವಿಯೂ ನನ್ನನ್ನು ಬಿನ್ನವಿಸಿ ಪ್ರಾರ್ಥನೆಗೈದಿದ್ದಳು. ಅವಳಿಗೂ, ನಿಮಗೂ ನಾನು ವಚನ ಕೊಟ್ಟಿದ್ದೆ. ಮೂರು ಲೋಕಗಳ ಮುಳ್ಳುಗಳನ್ನು ದೂರ ಮಾಡಿ ಇಂದ್ರನಿಗೆ ಕೊಡುವೆನೆಂದು ಹೇಳಿದ್ದೆ. ಈಗ ನಾನು ಅದರಂತೆ ಮಾಡುತ್ತೇನೆ. ಇಂದ್ರನು ತ್ರಿಲೋಕಾಧಿಪತಿಯಾಗುವಂತೆ ಮಾಡುವುದೇ ನನ್ನ ಕಾರ್ಯ. ಅದು ಆಗುತ್ತದೆ. ಇದು ಸತ್ಯ'' ಎಂದು ನಾನು ನಿಮಗೆ ತಿಳಿಸುತ್ತೇನೆ. ಅವನ ನುಡಿ ಕೇಳಿ ಬ್ರಹ್ಮದೇವನು ಆ ಭಗವಂತನಿಗೆ ಕೃಷ್ಣಾಜಿನವನ್ನು ಕೊಟ್ಟನು. ಬೃಹಸ್ಪತಿಯ ಜನಿವಾರವನ್ನೂ ಬ್ರಹ್ಮಪುತ್ರ ಮರೀಚಿಮುನಿಯು ಪಾಲಾಶದಂಡವನ್ನೂ ವಸಿಷ್ಠರು ಕಮಂಡಲವನ್ನೂ ಅಂಗೀರಸರು ದರ್ಭೆನಾರುಬಟ್ಟೆಗಳನ್ನೂ ಪುಲಹರು ಆಸನವನ್ನೂ ಪುಲಸ್ತ್ಯರು ಪೀತಾಂಬರ ಜೋಡಿಯನ್ನು ಕೊಟ್ಟರು.

ಓಂಕಾರದಪ್ರಣವನಾದದಿಂದ ಭೂಷಿತವಾದವೇದಗಳು ಆ ಭಗವಂತನಸೇವೆಗೆ ಅಲ್ಲಿ ಉಪಸ್ಥಿತವಾದವು. ಸಾಂಖ್ಯ, ಯೋಗ, ಸಕಲಶಾಸ್ತ್ರಗಳೂ ಆ ಭಗವತ್ ಕೈಂಕರ್ಯಕ್ಕಾಗಿ ಬಂದು ಆ ವಾಮನವಟುವಿನ ಸನ್ನಿಹಿತವಾದವು. ಜಡೆ, ಕೊಡೆ, ದಂಡಗಳಿಂದ ಒಪ್ಪುವ ಆ ಸಕಲ ವೇದಮಯವಾದ ವಾಮನಮೂರ್ತಿಯು ಕೈಯಲ್ಲಿ ಕಮಂಡಲವನ್ನು ಪಿಡಿದು ಬಲಿರಾಜನ ಯಜ್ಞವಾಟದೆಡೆಗೆ ನಡೆದನು. ಬ್ರಾಹ್ಮಣರೇ, ಆ ವಾಮನನು ಎಲ್ಲಿ ಎಲ್ಲಿ ಹೆಜ್ಜೆ ಇಡುವನೋ ಆ ಆ ಭಾಗವು ತಾಡಿತ ಪೀಡಿತವಾಗಿ ತೆಗ್ಗು ಬೀಳುತ್ತಿತ್ತು. ಅವನು ಮೆಲ್ಲ ಮೆಲ್ಲನೆ ಮೆತ್ತಗೆ ನಡೆದರೂ ಬೆಟ್ಟ ಬಯಲು ಬನ ನಡುಗಡ್ಡೆ ಸಹಿತವಾದ ಭೂಮಂಡಲವೆಲ್ಲ ನಡುಗುತ್ತಿತ್ತು. ದೇವಗುರು ಬ್ರಹ್ಮಸ್ಪತ್ಯಾಚಾರ್ಯರು ಆ ವಾಮನರೂಪಿ ಭಗವಂತನಿಗೆ ''ಇತ್ತ ದಯ ಮಾಡಿಸಬೇಕು ಮಹಾಪ್ರಭು'' ಎಂದು ದಾರಿ ತೋರಿಸುತ್ತಿದ್ದರು. ವಾಸ್ತವಿಕವಾಗಿ ಸರ್ವಜ್ಞನಾದ ಆ ಮಹಾಪ್ರಭುವಿಗೆ ಯಾವ ದಾರಿ ತೋರುವ ಅವಶ್ಯಕತೆಯೂ ಇಲ್ಲ. ಎಲ್ಲೆಡೆಗೂ ತುಂಬಿದ ಅವನು ಬಲಿಯ ಯಜ್ಞಮಂಟಪದವರೆಗೆ ನಡೆದು ಹೋಗುವ ಪ್ರಮೇಯವೂ ಇಲ್ಲ. ಇದೆಲ್ಲವೂ ಆ ಪರಮಾತ್ಮನ ಒಂದು ಆಟ. ಬಲಿಯ ಯಜ್ಞವಾಟಗಮನವೂ ಅವನಿಗೆ ಒಂದು ಲೀಲಾವಿನೋದ.

೫೯೭. ತತಶ್ಶೇಷೋ ಮಹಾನಾಗೋ ನಿಸ್ಸೃತ್ಯಾಸೌ ರಸಾತಲಾತ್ ।
ಸಾಹಾಯ್ಯಂ ಕಲ್ಪಯಾಮಾಸ ದೇವದೇವಸ್ಯ ಚಕ್ರಿಣಃ ॥

೫೯೮. ತದಸ್ಯಾಪಿ ಚ ವಿಖ್ಯಾತಂ ಮಹಾ ವಿಪುಲ ಮುತ್ತಮಂ ।
ತಸ್ಯ ಸಂದರ್ಶನಾದೇವ ನಾಗೇಭ್ಯೋ ವ ಭಯಂ ಭವೇತ್ ॥

ಅನಂತರ ರಸಾತಲದಿಂದ ಆದಿಶೇಷನು ಎದ್ದು ಬಂದು ದೇವ ದೇವೋತ್ತಮನಾದ ಆ ಚಕ್ರವರ್ತಿಯನ್ನು ಹಿಂಬಾಲಿಸಿ ಬಂದು ಸೇವೆ ಸಲ್ಲಿಸಿದನು. ಅದರಿಂದ ಶೇಷನಿಗೆ ಒಳ್ಳೇ ಕೀರ್ತಿ ಬಂದಿತು. ಇಂಥ ವಾಮನಾವತಾರಿಯಾದ ಶ್ರೀಹರಿಯನ್ನು ನೆನೆದವರಿಗೂ ನೋಡಿದವರಿಗೂ ನಾಗಗಳ ಅಂಜಿಕೆಯೇ ಇರುವದಿಲ್ಲ.

ವಾಮನ ಮಹಾಪುರಾಣದಲ್ಲಿ ವಾಮನಾವತಾರ ಎಂಬ ಮೂವತ್ತನೇಯ ಅಧ್ಯಾಯವು ಮುಗಿದುದು.

—೦—

## ವಾಮನ ತ್ರಿವಿಕ್ರಮನಾದ | ಅಧ್ಯಾಯ - ೩೧

### ಲೋಮಹರ್ಷಣ ಉವಾಚ

೫೯೯. ಸಪರ್ವತವನಾಮುರ್ವೀಂ ದೃಷ್ಟ್ವಾ ಸಂಕ್ಷುಭಿತಾಂ ಬಲಿಃ ।
ಪಪ್ರಚ್ಛೋಶನಸಂ ಶುಕ್ರಂ ಪ್ರಣಿಪತ್ಯ ಕೃತಾಂಜಲಿಃ ॥

೬೦೦. ಆಚಾರ್ಯ ಕ್ಷೋಭಮಾಯಾತಿ ಸಾಬ್ಧಿಭೂಭೃದ್ವನಾ ಮಹೀ ।
ಕಸ್ಮಾಚ್ಚ ನಾಸುರಾನ್ಭಾಗಾನ್ ಪ್ರತಿಗೃಹ್ಣಂತಿ ವಹ್ನಯಃ ।

೬೦೧. ಇತಿ ಪೃಷ್ಟೋಽಥ ಬಲಿನಾ ಕಾವ್ಯೋ ವೇದವಿದಾಂ ವರಃ ।
ಉವಾಚ ದೈತ್ಯಾಧಿಪತಿಂ ಚಿರಂ ಧ್ಯಾತ್ವಾ ಮಹಾಮತಿಃ ॥

೬೦೨. ಅವತೀರ್ಣೋ ಜಗದ್ಯೋನಿಃ ಕಶ್ಯಪಸ್ಯ ಗೃಹೇ ಹರಿಃ ।
ವಾಮನೇನೇಹ ರೂಪೇಣ ಪರಮಾತ್ಮಾ ಸನಾತನಃ ॥

೬೦೩. ಸ ನೂನಂ ಯಜ್ಞಮಾಯಾತಿ ತೇನ ದಾನವಪುಂಗವ ।
ಯಸ್ಯ ಪಾದಪ್ರತಿಕ್ಷೇಪಾದಿಯಂ ಪ್ರಚಲಿತಾ ಮಹೀ ॥

೬೦೪. ಕಂಪಂತೇ ಗಿರಿಯಶ್ಚೈವ ಸಂಕ್ಷುಬ್ಧಾ ಮಕರಾಲಯಾಃ ।
ನ್ಯೆನಂ ಭೂತಪತಿಂ ಭೂಮಿಃ ಸಮರ್ಥಾ ವೋಢುಮೀಶ್ವರಂ ॥

೬೦೫. ಸದೇವಾಸುರ ಗಂಧರ್ವ ಯಕ್ಷರಾಕ್ಷಸ ಪನ್ನಗಾಃ ।
ಅನೇನೈವ ಧೃತಾ ಭೂಮಿಃ ಆಪೋಗ್ನಿಃ ಪವನೋ ನಭಃ ॥

೬೦೬. ಧಾರಯತ್ಯಖಿಲಾನ್ ದೇವಾನ್ಮನುಷ್ಯಾಂಶ್ಚ ಮಹಾಸುರಾನ್ ।
ಇಯಮಸ್ಯ ಜಗದ್ಧಾತುರ್ಮಾಯಾ ಕೃಷ್ಣಸ್ಯ ದುಸ್ತ್ಯಜಾ ॥
ಧಾರ್ಯಧಾರಕ ಭಾವೇನ ಯಥಾ ಸಂಪೀಡಿತಂ ಜಗತ್ ॥

**ಲೋಮಹರ್ಷಣ :** ಬೆಟ್ಟ ಬನ ಮೊದಲಾಗಿ ಭೂತಲವೆಲ್ಲ ಕಂಪನಗೊಳ್ಳುವದನ್ನು ಕಂಡು ಬಲಿಚಕ್ರವರ್ತಿಗೆ ಭಯವಾಯಿತು. ಅವನು ಗುರು ಶುಕ್ರರ ಬಳಿಗೆ ಬಂದು ಕೈಜೋಡಿಸಿದ. ತಲೆ ಬಾಗಿಸಿದ ಪ್ರಶ್ನೆ ಮಾಡಿದ -

''ಆಚಾರ್ಯರೇ, ಇಡೀ ಭೂಮಂಡಲವೇ ನಡುಗುತಿದೆ. ಕಡಲುಗಳೆಲ್ಲ ಅಲ್ಲೋಲ ಕಲ್ಲೋಲ. ಕುಲಗಿರಿಗಳಲ್ಲಿಯೂ ಕಂಪ. ವನೋಪವನಗಳಲ್ಲಿಯೂ ನಡುಕ. ಇದಕ್ಕೆಲ್ಲ ಏನು ಕಾರಣ? ಹೋಮಕುಂಡಗಳಲ್ಲಿ ನಿಗಿನಿಗಿ ಕೆಂಡವಿದ್ದರೂ ಅಸುರರ ಆಹುತಿಯನ್ನು ಅಗ್ನಿ ಸ್ವೀಕರಿಸುವುದಿಲ್ಲ. ಇದಕ್ಕೆ ಕಾರಣವೇನು?'' ದೈತ್ಯಗುರು ಶುಕ್ರರು ಸಾಮಾನ್ಯರಲ್ಲ. ವೇದ ಓದಿದವರಲ್ಲಿ ಅವರು ಶ್ರೇಷ್ಠರು. ಬಲಿ ಹೇಳಿದ ವಿಷಯವನ್ನು ಅವರು ಆಳವಾಗಿ ಆಲೋಚಿಸಿದರು. ಅನಂತರ ದೈತ್ಯರ ದೊರೆಗೆ ಆ ಮಹಾ ಮೇಧಾವಿ ಉತ್ತರಿಸಿದರು.

''ಬಲೀ, ಕಶ್ಯಪ ಮುನಿಗಳ ಮನೆಯಲ್ಲಿ ಸಾಕ್ಷಾತ್ ಪರಮಾತ್ಮನೇ ಅವತರಿಸಿದ್ದಾನೆ. ನೋಡಲಿಕ್ಕೇನೋ ಅವನು ಕುಳ್ಳ. ಆದರೆ ಆ ಕುಳ್ಳನೇ ಕಾರಣ ಈ ಪ್ರಪಂಚಕ್ಕೆಲ್ಲ. ಶಾಶ್ವತ ಸತ್ಯಸ್ವರೂಪನಾದ ಆ ಶ್ರೀಹರಿ ತನ್ನ ವಾಮನರೂಪದಿಂದಲೇ ನಿನ್ನ ಯಜ್ಞ ವೇದಿಕೆಯೆಡೆಗೆ ನಡೆದು ಬರುತ್ತಲಿದ್ದಾನೆ. ದಾನವ ಧುರೀಣನೇ, ನಿನ್ನ ಯಜ್ಞಮಂಟಪಕ್ಕೆ ಬರುತ್ತಿರುವ ಆ ಭಗವಂತನ ಅಡಿದಾವರೆಯ ವಿಕ್ಷೇಪದಿಂದ ಈ ನೆಲ ನಡುಗುತ್ತಿದೆ. ಕುಲಗಿರಿ ಕಂಪಿಸುತ್ತಿವೆ. ಹೆಗ್ಗಡಲುಗಳು ಹೊಯ್ದಾಡುತ್ತಿವೆ. ಆ ಭೂತನಾಥನಾದ ಜಗದೀಶ್ವರನನ್ನು ಹೊರಲು ಭೂಮಿಗೆ ಶಕ್ತಿ ಸಾಲದೇ ತತ್ತರಿಸುತ್ತಲಿದ್ದಾಳೆ. ಯಾಕೆಂದರೆ ದೇವ ದಾನವ ಮಾನವ ಗಂಧರ್ವರ ಯಕ್ಷ ರಾಕ್ಷಸರಿಂದ ತುಂಬಿದ ಈ ಪ್ರಪಂಚವನ್ನೆಲ್ಲ ಹೊತ್ತವನೇ ಆ ಹರಿ. ಇವರು ಮಾತ್ರವಲ್ಲದೇ ನೆಲ ಜಲ ಬೆಂಕಿ ಗಾಳಿ ಮುಗಿಲು ಈ ಪಂಚ ಮಹಾಭೂತಗಳನ್ನು ಧರಿಸಿದವನೂ ಅವನೇ. ಈ ಧರಣೀದೇವಿಯೂ ಸಮಸ್ತ ದಾನವ ಮಾನವರನ್ನೂ ಧರಿಸುವದು ಆ ವಿಶ್ವಶಿಲ್ಪಿಯಾದ ಶ್ರೀಕೃಷ್ಣನ ಇಚ್ಛೆ ಆದೇಶದಿಂದಲೇ. ಅದನ್ನು ಯಾರೂ ಉಲ್ಲಂಘಿಸಲಾರರು. ಜಗತ್ತನ್ನೇ ಧರಿಸುವ ಅ ಸರ್ವಾಧಾರನನ್ನು ಹೊರಲಾರದೆ ಈ ಜಗತ್ತೇ ಕುಸಿಯುತ್ತಲಿದೆ.

೯೦೭. ತತ್ಸನ್ನಿಧಾನಾದಧುನಾ ಭಾಗಹಾರಾಃ ಸುರೋತ್ತಮಾಃ ।
ಭುಂಜತೇ ನಾಸುರಾನ್ಭಾಗಾನಪಿ ವೈ ತತ್ರಯೋಗ್ನಯಃ ॥

೬೦೮. ಶುಕ್ರಸ್ಯ ವಚನಂ ಶ್ರುತ್ವಾ ಹೃಷ್ಟರೋಮಾಬ್ರವೀದ್ಬಲಿಃ ।
ಧನ್ಯೋಽಹಂ ಕೃತಪುಣ್ಯಶ್ಚ ಯತೋ ಯಜ್ಞಪತಿಃ ಸ್ವಯಂ ॥

೬೦೯. ಯಜ್ಞಮಭ್ಯಾಗತೋ ಬ್ರಹ್ಮನ್ ಮತ್ತಃ ಕೋಽನ್ಯೋಧಿಕಃಪುಮಾನ್।
ಯಂ ಯೋಗಿನಃ ಸದ್ಯೋದ್ಯುಕ್ತಾಃ ಪರಮಾತ್ಮಾನಮವ್ಯಯಂ ॥

೬೧೦. ದ್ರಷ್ಟುಮಿಚ್ಛಂತಿ ದೇವೋಽಸೌ ಮಮಾಧ್ವರಮುಪೇಷ್ಯತಿ ।
ಯನ್ಮಯಾಚಾರ್ಯಾ ಕರ್ತವ್ಯಂ ತನ್ಮಮಾದೇಷ್ಟು ಮರ್ಹಸಿ ॥

೬೧೧. ಯಜ್ಞಭಾಗಭುಜೋ ದೇವಾ ವೇದಪ್ರಾಮಾಣ್ಯತೋಽಸುರ ।
ತ್ವಯಾ ತು ದಾನವಾ ದೈತ್ಯಾ ಯಜ್ಞಭಾಗಭುಜಃ ಕೃತಾಃ ॥

೬೧೨. ಅಯಂ ಚ ದೇವಃ ಸತ್ವಸ್ಥಃ ಕರೋತಿ ಸ್ಥಿತಿ ಪಾಲನಂ ।
ವಿಸೃಷ್ಟಂ ಚ ತಥೈವಾಂತೇ ಸ್ವಯಮತ್ತಿ ಪ್ರಜಾಃ ಪ್ರಭುಃ ॥

ಅವನ ಸಾನ್ನಿಧ್ಯದಲ್ಲಿ ಈಗ ದೇವ ಧುರೀಣರು ಯಜ್ಞದಲ್ಲಿಯ ತಮ್ಮ ಹಕ್ಕಿನ ಹರ್ವಿಭಾಗಗಳನ್ನು ಹೊಂದಲು ಸಿದ್ಧರಾಗಿದ್ದಾರೆ. ಆದುದರಿಂದಲೇ ಅಗ್ನಿಕುಂಡ ಗಳಲ್ಲಿಯ ದಕ್ಷಿಣಾ ಗಾರ್ಹಪತ್ಯ ಆಹವನೀಯ ಎಂಬ ಮೂರು ಅಗ್ನಿಗಳು ಅಸುರರ ಭಾಗವನ್ನು ಸ್ವೀಕರಿಸುವದಿಲ್ಲ.'' ಆಚಾರ್ಯ ಶುಕ್ರರ ಈ ನುಡಿ ಕೇಳಿ ಬಲಿರಾಜನ ಮೈತುಂಬ ಹಿಗ್ಗಿನ ಮುಳ್ಳು ಮೂಡಿನಿಂತವು. ''ನಾನೇ ಧನ್ಯ. ನಿಜವಾಗಿಯೂ ನಾನು ಪುಣ್ಯವಂತನೇ ಸರಿ. ಯಾಕೆಂದರೆ ಯಜ್ಞಗಳಿಗೆಲ್ಲ ಅಧಿಪತಿಯಾದ ಸಾಕ್ಷಾತ್ ಶ್ರೀಹರಿಯು ನಾನು ಮಾಡುವ ಯಜ್ಞಕ್ಕೆ ತಾನಾಗಿ ದಯಮಾಡಿಸುತ್ತಿದ್ದಾನೆ. ನಾಶ ರಹಿತನಾದ ಯಾವ ಪರಮಾತ್ಮನನ್ನು ಒಲಿಸಿ ಕೊಳ್ಳಲು ಜ್ಞಾನಿಗಳು ಹಗಲಿರುಳು ಪ್ರಯತ್ನಿಸುತ್ತಲಿರುವರೋ ಅಂಥ ಭಗವಂತನು ತಾನಾಗಿ ನನ್ನ ಯಜ್ಞವಾಟಕ್ಕೆ ನಡೆದು ಬರುತ್ತಿರುವನೆಂದ ಬಳಿಕ ನನಗಿಂತ ಭಾಗ್ಯವಂತರು ಬೇರಾರು ಇರುವರು! ಎಲ್ಲ ಜ್ಞಾನಿಗಳು ಆ ಶ್ರೀಹರಿಯ ಸಾಕ್ಷಾತ್ಕಾರವನ್ನು ಬಯಸುತ್ತ ಲಿದ್ದಾರೆ. ಅಂಥ ದ್ರಷ್ಟವ್ಯನಾದ ದೇವೇಶನು ನನ್ನ ಈ ಯಾಗ ಭೂಮಿಗೆ ಬರಲಿರುವನು. ಆಚಾರ್ಯರೇ, ಆ ಭಗವಂತ ಬಂದಾಗ ನಾನು ಏನು ಮಾಡಬೇಕು! ದಯವಿಟ್ಟು ಈ ವಿಷಯದಲ್ಲಿ ತಾವು ಮಾರ್ಗದರ್ಶನ ಮಾಡಿಸಬೇಕು.''

**ಶುಕ್ರಾಚಾರ್ಯ :** ಅಸುರರಾಜನೇ, ವೇದಗಳು ಪರಮ ಪ್ರಮಾಣ. ಸ್ವಯಂ ಪ್ರಮಾಣವಾದ ಆ ವೇದಗಳಲ್ಲಿ ''ದೇವತೆಗಳೇ ಯಜ್ಞ ಭಾಗವನು ಉಣ್ಣಲು ಅಧಿಕಾರಿಗಳು'' ಎಂದು ಹೇಳಲಾಗಿದೆ. ಆದರೆ ನೀನು ನಿನ್ನ ಬಲಪ್ರಭಾವದಿಂದ ದೈತ್ಯದಾನವರಿಗೆ ಮಾತ್ರ ಯಜ್ಞದಲ್ಲಿ ಭಾಗಸಿಗುವಂತೆ ಮಾಡಿದೆ. ದೇವತೆಗಳ ಯಜ್ಞಾಧಿಕಾರವನ್ನು ಕಿತ್ತುಕೊಂಡೆ. ಸತ್ವಗುಣಾಧಿಕ್ಯದಿಂದ ಜಗತ್ತನ್ನು ಪಾಲಿಸುವದೂ, ಶಾಸ್ತ್ರಸಂಪ್ರದಾಯಗಳ ಮರ್ಯಾದೆ ಯನ್ನು ರಕ್ಷಿಸುವದೂ ಶ್ರೀವಿಷ್ಣುವಿನ ಕಾರ್ಯವಾಗಿದೆ. ಇದು ಸತ್ವಗುಣದ ಉನ್ನಾಹದ ಕಾಲ. ಈಗ ಮರ್ಯಾದಾ ಪುರುಷೋತ್ತಮನಾದ ಆ ಶ್ರೀಹರಿಯು ಲೋಕ ಹಾಗೂ ಶಾಸ್ತ್ರ ಮರ್ಯಾದೆಯನ್ನು ಸರಿಪಡಿಸಿ ಸಂರಕ್ಷಿಸಲಿಕ್ಕಾಗಿ ಅವತಾರ ಮಾಡಿದ್ದಾನೆ. ಈ ಪ್ರಪಂಚ ವನ್ನೆಲ್ಲ ಹಿಂದೆ ಹುಟ್ಟಿಸಿದವನೂ ಅವನೇ. ಇಂದು ಕಾಯುವವನೂ ಅವನೇ. ಮುಂದೇ ಕೊಲ್ಲುವವನೂ ಅವನೇ. ಇಂಥ ಸರ್ವಕರ್ತನಾದ ಶ್ರೀಹರಿಯು ವೇದವಿರುದ್ಧವಾದ ಕೃತ್ಯ ಎಸಗುವವರನ್ನು ಶಿಕ್ಷಿಸಲಿಕ್ಕಾಗಿ ಅದಿತಿಯ ಉದರದಿಂದ ಪ್ರಾದುರ್ಭೂತನಾಗಿದ್ದಾನೆ.

೬೧೩. ತ್ವಯಾ ತು ವಂಚಿತಾ ದೇವಾ ನೂನಂ ವಿಷ್ಣುಃ ಸ್ಥಿತೌ ಸ್ಥಿತಃ।
ವಿದಿತ್ವೈತನ್ಮಹಾರಾಜ ಕುರು ಯತ್ತೇ ಮನೋಗತಂ ॥

೬೧೪. ತ್ವಯಾ ಚ ದೈತ್ಯಾಧಿಪತೇ ಸ್ವಲ್ಪಕೇಽಪಿ ಹಿ ವಸ್ತುನಿ ।
ಪ್ರತಿಜ್ಞಾ ನೈವ ವೋಢಾವ್ಯಾ ವಾಚ್ಯಂ ಸಾಮ ತಥಾಫಲಂ ॥

೬೧೫. ಕೃತಕೃತ್ಯಸ್ಯ ದೇವಸ್ಯ ದೇವಾರ್ಥಂ ಚಾಪಿ ಕುರ್ವತಃ ।
ನಾಲಂ ದಾತುಮಹಂ ದೇವ ತ್ವಯಾ ವಾಚ್ಯಂ ತು ಯಾಚತಃ॥
ಕೃಷ್ಣಸ್ಯ ದೇವಭೂತ್ಯರ್ಥಂ ಪ್ರವೃತ್ತಸ್ಯ ಮಹಾಸುರ ।

೬೧೬. ಬ್ರಹ್ಮನ್ ಕಥಮಹಂ ಬ್ರೂಯಾಮನ್ಯೇನಾಪಿ ಚ ಯಾಚಿತಃ ।
ನಾಸ್ತೀತಿ ಕಿಮು ದೇವೇಶಂ ಸಂಸಾರಾಘೌಘಹಾರಿಣಂ ॥

೬೧೭. ವ್ರತೋಪವಾಸೈ ರ್ವಿವಿಧೈಃ ಯಃ ಪ್ರಭುಃ ಗೃಹ್ಯತೇ ಹರಿಃ ।
ಸ ಚೇದ್ವಕ್ಷ್ಯತಿ ದೇಹೀತಿ ಗೋವಿಂದಃ ಕಿಮತೋಧಿಕಂ ॥

ನೀನು ನಿನ್ನ ವೇದ ವಿರುದ್ಧವಾದ ನಡತೆಯಿಂದ ದೇವತೆಗಳನ್ನು ವಂಚಿಸಿ ಲೋಕ ಶಾಸ್ತ್ರಗಳ ಮರ್ಯಾದೆಯನ್ನು ಉಲ್ಲಂಘಿಸಿರುವಿ. ಆ ಹರಿಯಂತೂ ಈ ಶಾಸ್ತ್ರ ಮರ್ಯಾದೆಯನ್ನು ರಕ್ಷಿಸಲಿಕ್ಕೋಸುಗ ದೀಕ್ಷಾಬದ್ಧನಾಗಿ ನಿಂತಿದ್ದಾನೆ. ಇದನ್ನೆಲ್ಲ ನೀನು ಚೆನ್ನಾಗಿ ತಿಳಿದು ನಿನ್ನ ಮನಸ್ಸಿಗೆ ಬಂದಂತೆ ಮಾಡು.

ಆದರೆ ದೈತ್ಯಕುಲದ ದೊರೆಯೇ, ನಾನು ಹೇಳುವ ಒಂದು ಮಾತನ್ನು ಮಾತ್ರ ಲಕ್ಷದಲ್ಲಿ ಇಡು. ಆ ಹರಿಗೆ ಯಾವುದೇ ಚಿಕ್ಕ ವಿಷಯದಲ್ಲಿ ಕೂಡ ನೀನು ವಚನ ಕೊಡಬೇಡ. ಅವನು ಏನಾದರೂ ಕೇಳಿದರೆ ನಾಲ್ಕು ಒಳ್ಳೇ ಮಾತುಗಳನ್ನು ಹೇಳಿ ಸಾಮೋಪಾಯದಿಂದಲೇ ಅವನನ್ನು ಸಾಗಹಾಕು.

ಲೀಲೆಯಿಂದಲೇ ವಿಶ್ವದ ಸೃಷ್ಟ್ಯಾದಿಗಳನ್ನು ಮಾಡುವ ಆ ಭಗವಂತನಿಗೆ ಏನು ಬೇಕಾಗಿದೆ! ಅವನಿಗೆ ಏತರ ಕೊರತೆ! ಪೂರ್ಣ ಕಾಮನಲ್ಲವೇ! ಅವನು ಕೃತಕೃತ್ಯ. ಅವನು ಏನಾದರೂ ಬೇಡುವದಿದ್ದರೆ ಅದೆಲ್ಲವೂ ದೇವತೆಗಳ ಸಲುವಾಗಿಯೇ. ಸುರರ ಸಲುವಾಗಿ ಅವನು ಬಂದು ನಿನ್ನ ಬಳಿಗೆ ಯಾಚನೆ ಮಾಡುವುದು ನಿಶ್ಚಿತ. ಯಾಕೆಂದರೆ ದೇವತೆಗಳಿಗೆ ಕ್ಷೇಮ ಐಶ್ವರ್ಯಗಳನ್ನು ತಂದು ಕೊಡಲಿಕ್ಕಾಗಿಯೇ ಆ ಶ್ರೀಕೃಷ್ಣನ ಈ ಅವತಾರ ಪ್ರವೃತ್ತಿ. ಆದುದರಿಂದ ಅಸುರೋತ್ತಮ, ಆ ಭಗವಂತನು ಬಂದು ದೇವತೆಗಳಿಗಾಗಿ ನಿನ್ನ ಬಳಿ ಏನಾದರೂ ಯಾಚನೆ ಮಾಡಿದಾಗ ನೀನು ಅವನಿಗೆ "ದೇವ, ನಿನಗೆ ದಾನ ಕೊಡಲು ನಾನು ಎಷ್ಟರವನು! ನಿನಗೆ ಏನನ್ನೂ ನೀಡಲೂ ನಾನು ಸಮರ್ಥನಲ್ಲ" ಎಂದು ಮೃದುವಾಗಿ ಹೇಳಿ ಬಿಡು.

**ಬಲಿರಾಜ :** ಬ್ರಾಹ್ಮಣರೇ, ಬೇರೆ ಯಾರು ಬೇಡಿದರೂ ನಾನು ಎಂದೂ ಇಲ್ಲ ಎಂದು ನುಡಿದಿಲ್ಲ. ಈಗ ಬಾಳಿನ ಗೋಳನ್ನೆಲ್ಲ ದೂರಮಾಡುವ ಸುರೇಶ್ವರನಾದ ಸಾಕ್ಷಾತ್ ಶ್ರೀಹರಿಯೇ ಬಂದು ಬೇಡಿದಾಗ ನಾನು ಇಲ್ಲ ಎಂದು ಹೇಗೆ ಹೇಳಲಿ! ಯೋಗಿಗಳು ವಿವಿಧ ವ್ರತಗಳಿಂದಲೂ, ಉಪವಾಸಗಳಿಂದಲೂ ಯಾವ ಪ್ರಭುವನ್ನು ಅರಿತು ಒಲಿಸಿಕೊಳ್ಳಲು ಪ್ರಯತ್ನಿಸುವರೋ, ಅಂಥ ಗೋವಿಂದನು ನನ್ನ ಮುಂದೆ ಬಂದು 'ದೇಹಿ (ಕೊಡು)' ಎಂದು ಕೇಳಿದ ಬಳಿಕ ಇನ್ನೇನು ಬೇಕು! ಇದಕ್ಕೂ ಹೆಚ್ಚಿನದಾವುದಿದೆ! ಯಾವನನ್ನೂ ಪ್ರಸನ್ನೀಕರಿಸಿಕೊಳ್ಳಲಿಕ್ಕಾಗಿ ಶಮ ದಮಾದಿಗುಣ ಗಳಿಂದ ಶುಚಿರ್ಭೂತರಾದ ಸತ್ಪುರುಷರು ಯಜ್ಞ ಯಾಗಾದಿಗಳನ್ನು ಆಚರಿಸುವರೋ ಅಂಥ ಕ್ರೀಡಾದಿ ಗುಣವಿಶಿಷ್ಟನಾದ ವಿಷ್ಣು ನನ್ನ ಬಳಿ ಬಂದು 'ಕೊಡಿರಿ' ಎಂದು ಕೈ ಚಾಚುತ್ತಾನೆ. ಇದಕ್ಕಿಂತ ಹೆಚ್ಚಿನ ಭಾಗ್ಯವಾವುದು!

೬೧೮. ಯತ್ಪ್ರೀತಿ ಕರುಣಾಯ್ಯೈವ ಪುಂಭಿಃ ಶೌಚಗುಣಾನ್ವಿತೈಃ ।
ಯಜ್ಞಾಃ ಕ್ರಿಯಂತೇ ದೇವಶ್ಚ ಸ ಮಾಂ ದೇಹೀತಿ ವಕ್ಷ್ಯತಿ ॥

೬೧೯. ತತ್ಸಾಧು ಸುಕೃತಂ ಕರ್ಮ ತಪಃ ಸುಚರಿತಂ ಚ ನಃ ।
ಯನ್ಮಯಾ ದತ್ತ ಮೀಶಶ್ಚ ಸ್ವಯಮಾದಾಸ್ಯತೇ ಹರಿಃ ।

೬೨೦. ನಾಸ್ತೀತ್ಯಹಂ ಗುರೋ ವಕ್ಷ್ಯೇ ಕಥಮಾಗತಮೀಶ್ವರಂ ।
ಪ್ರಾಣತ್ಯಾಗಂ ಕರಿಷ್ಯಾಮಿ ನ ನಾಸ್ತೀತಿ ನ ಮೇ ಕ್ವಚಿತ್ ॥

೬೨೧. ತದೇತದ್ವಾಂಛಿತಂ ಪ್ರಾಪ್ತಂ ನೂನಂ ಚಾತ್ರನ ಸಂಶಯಃ ।
ಯಜ್ಞೇಽಸ್ಮಿನ್ ಯದಿ ಯಜ್ಞೇಶೋ ಯಾಚತೇ ಮಾಂ
ಜನಾರ್ದನಃ ॥

೬೨೨. ನಿಜ ಮೂರ್ಧಾನಮಪ್ಯಸ್ಮೈ ದಾಸ್ಯಾಮ್ಯೇವಾವಿಚಾರಿತಮ್ ।
ಸಮೇ ವಕ್ಷ್ಯತಿ ದೇಹೀತಿ ಗೋವಿಂದಃ ಕಿಮತೋಽಧಿಕಮ್ ॥

೬೨೩. ನಾಸ್ತೀತಿ ಯನ್ಮಯಾ ನೋಕ್ತಮನ್ಯೇಷಾಮಪಿ ಯಾಚತಾಮ್ ।
ವಕ್ಷ್ಯಾಮಿ ಕಥಮಾಯಾತೇ ತಸ್ಮಿನ್ನಭ್ಯಾಗತೇಽಚ್ಯುತೇ ॥

೬೨೪. ಶ್ಲಾಘ್ಯ ಏವ ಹಿ ಧೀರಾಣಾಂ ದಾನಾಚ್ಚಾಪತ್ಸಮಾಗಮಃ ।
ನವ ಬಾಧಾಕಾರಿ ಯದ್ದಾನಂ ತದಂಗ ಬಲವತ್ಸ್ಮೃತಮ್ ॥

೬೨೫. ಮದ್ರಾಜ್ಯೇ ನಾಸುಖೀ ಕಶ್ಚಿನ್ನ ದರಿದ್ರೋ ನ ಚಾತುರಃ ।
ನಾಭೂಷಿತೋ ನ ಚೋದ್ವಿಗ್ನೋ ನ ಪ್ರಸಾದ ವಿವರ್ಜಿತಃ ॥
ಹೃಷ್ಟ ತುಷ್ಟಸ್ಸುಗಂಧೀ ಚ ತೃಪ್ತಸ್ಸರ್ವಗುಣಾನ್ವಿತಃ ।

ಹಿಂದೆ ನಾನು ಬಹಳ ಪುಣ್ಯ ಮಾಡಿರಬಹುದು ಮತ್ತು ದಿವ್ಯ ತಪಸ್ಸನ್ನೂ ಆಚರಿಸಿರಬಹುದು. ಯಾಕೆಂದರೆ ನಾನು ಕೊಟ್ಟದ್ದನ್ನು ಜಗದೀಶ್ವರನಾದ ಆ ಶ್ರೀಹರಿಯು ಸ್ವಯಂ ತಾನೇ ಸ್ವೀಕರಿಸುತ್ತಾನೆ. ಗುರುಗಳೇ, ಮನೆಗೆ ಬಂದ ಭಗವಂತನಿಗೆ ಇಲ್ಲ ಎಂದು ಹೇಗೆ ಹೇಳಲಿ! ಪ್ರಾಣವನ್ನಾದರೂ ಬೇಕಾದರೆ ಬಿಡಬಲ್ಲೆ. ಆದರೆ ಕೇಳಿದವರಿಗೆ ಕೊಡುವದಿಲ್ಲ ಎಂದು ಮಾತ್ರ ನಾನು ಎಂದೂ ಹೇಳುವದಿಲ್ಲ.

ಆಚಾರ್ಯರೇ, ನೀವು ಹೇಳಿದಂತೆ ಯಜ್ಞಪತಿಯಾದ ಆ ಜನಾರ್ದನನು ನನ್ನಲ್ಲಿ ಬಂದು ಯಾಚನೆ ಮಾಡಿದರೆ ನನ್ನ ಜನ್ಮದ ಬಯಕೆಯೇ ಪೂರ್ಣವಾದಂತೆ. ಇದರಲ್ಲಿ ಸಂಶಯವಿಲ್ಲ. ಆ ಗೋವಿಂದನು ನನ್ನ ಮುಂದೆ ಬಂದು ಕೈ ಒಡ್ಡಿದರೆ ಸಾಕು. 'ಕೊಡು' ಎಂದರೆ ಸಾಕು. ಅವನಿಗೆ ಹಿಂದೆ ಮುಂದೆ ವಿಚಾರಿಸದೇ ನನ್ನ ತಲೆಯನ್ನೇ ಕೊಟ್ಟುಬಿಡುವೆನು. ಅದರಲ್ಲಿ ವಿಚಾರವೇ ಇಲ್ಲ. ಯಾರಿಗೂ ಎಂದೂ ' ಇಲ್ಲ' ಎಂದು ನಾನು ಎಂದಿಲ್ಲ. ಅಂದ ಬಳಿಕ ಇಂದು ಮಾತ್ರ ಆ ಅಚ್ಯುತನೇ ಮುಂದೆ ಬಂದು 'ಕೊಡು' ಎಂದಾಗ 'ಕೊಡುವದಿಲ್ಲಾ' ಎಂದು ಹೇಗೆ ನುಡಿಯಲಿ! ದಾನಮಾಡುವ ಧೀರರಿಗೆ ಏನಾದರೂ ಆಪತ್ತು ಬಂದರೆ ಅದು ಶ್ಲಾಘ್ಯವೇ ಸರಿ. ಆ ವಿಪತ್ತುಗಳಿಂದ ಅವರ ದಾನ ಧರ್ಮಕ್ಕೆ ಬಾಧೆ ಬರುವದಿಲ್ಲ. ಎಂಥ ಕುತ್ತು, ಆಪತ್ತು, ವಿಘ್ನ, ವಿಡ್ಡೂರಗಳು ಬಂದರೂ ಅವುಗಳನ್ನು ಲೆಕ್ಕಿಸದೇ ನೀಡಿದ ದಾನವೇ ಉತ್ತಮದಾನವಾಗಿದೆ.

ಮುನಿಪುಂಗವರೇ, ನನ್ನ ರಾಜ್ಯದಲ್ಲಿ ಸುಖಿಯಾಗದ ಮನುಷ್ಯನೇ ಇಲ್ಲ. ನನ್ನ ನಾಡಿನಲ್ಲಿರುವ ಪ್ರಜೆಗಳಲ್ಲಿ ಒಬ್ಬನೂ ದರಿದ್ರನಿಲ್ಲ. ರೋಗವಂತೂ ಯಾರಿಗೂ ಇಲ್ಲ. ಅಲಂಕಾರವಿಲ್ಲದ ನರನಿಲ್ಲ. ಯಾರಲ್ಲಿಯೂ ದುಗುಡ ದುಮ್ಮಾನಗಳಿಲ್ಲ ರಾಜ್ಯದ ಪ್ರಜಾಜನರೆಲ್ಲರೂ ಪ್ರಸನ್ನವಾದ ಮುಖಮುದ್ರೆಯುಳ್ಳವರಿರುತ್ತಾರೆ. ಪ್ರತಿಯೊಬ್ಬನು ಹೂ, ಹಾರ, ಶ್ರೀಗಂಧಗಳಿಂದ ಘಮಘಮಿಸುತ್ತಾನೆ. ಎಲ್ಲರ ಮುಖದ ಮೇಲೆಯೂ ಪೂರ್ಣತೃಪ್ತಿ ಗುರುತು ತೋರುತ್ತದೆ. ನನ್ನ ರಾಜ್ಯದ ಗುಣವಂತರಾದ ಎಲ್ಲ ಪ್ರಜೆಗಳೂ ನಲಿವು ಗೆಲುವುಗಳಿಂದ ಉಬ್ಬಿ ಆನಂದದಿಂದ ಉತ್ಸಾಹಿತರಾಗಿರುತ್ತಾರೆ.

೬೨೬. ಜನಃ ಸರ್ವೋ ಮಹಾಭಾಗ ಕಿಮುತಾಹಂ ಸದಾಸುಖೀ ।
ಏತದ್ವಿಶಿಷ್ಟ ಮತ್ರಾಪ್ತಂ ದಾನಬೀಜ ಫಲಂ ಮಯಾ ।
ವಿದಿತಂ ಮುನಿಶಾರ್ದೂಲ ಯಥೈತತ್ತ್ವನ್ಮುಖಾಚ್ಯುತಂ ॥

೬೨೭. ಏತದ್ಬೀಜವರಂ ದಾನಬೀಜಂ ಪತತಿ ಚೇದ್ಗುರೌ ।
ಜನಾರ್ದನೇ ಮಹಾಪಾತ್ರೇ ಕಿಂ ನ ಪ್ರಾಪ್ತಂ ತತೋ ಮಯಾ

೬೨೮. ವಿಶಿಷ್ಟಂ ಮಮ ತದ್ದಾನಂ ಪರಿತುಷ್ಟಾಶ್ಚ ದೇವತಾಃ ।
ಉಪಭೋಗಾಚ್ಛತ ಗುಣಂ ದಾನಂ ಸುಖಕರಂ ಸ್ಮೃತಂ ।

೬೨೯. ಮತ್ಪ್ರಸಾದಪರೋ ನೂನಂ ಯಜ್ಞೇನಾರಾಧಿತೋ ಹರಿಃ ।
ತೇನಾಭ್ಯೇತಿ ನ ಸಂದೇಹೋ ದರ್ಶನಾದುಪಕಾರ ಕೃತ್ ॥

೬೩೦. ಅಥ ಕೋಪೇನಚಾಭ್ಯೇತಿ ದೇವಭಾಗೋಪರೋಧಿನಂ ।
ಮಾಂ ನಿಹಂತುಂ ತತೋ ಹಿ ಸ್ಯಾದ್ವಧಃ ಶ್ಲಾಘ್ಯತಮೋಽಚ್ಯುತಾತ್ ॥
ಸ ಮಾಂ ಹಂತುಂ ಹೃಷೀಕೇಶಃ ಕಥಂ ವೈ ಸಮುಪೇಷ್ಯತಿ ॥

ನನ್ನ ಪ್ರಜೆಗಳೇ ಹೀಗೆ ಹಿಗ್ಗಿನಿಂದ ನಲಿಯುವಾಗ ನನ್ನನ್ನಂತೂ ಕೇಳುವದೇನು! ಮಹಾನುಭಾವರೇ, ನನಗೆ ಸಂತತವೂ ಸಂತಸ, ಸದಾ ಸುಖ. ಮುನಿಸಿಂಹರೇ, ನನಗೆ ಹಾಗೂ ನನ್ನ ಪ್ರಜೆಗಳಿಗೆ ದೊರೆತ ಈ ಭೋಗ ಭಾಗ್ಯಗಳು ಯಾವುದರ ಫಲ? ನನ್ನ ಈ ವಿಶಿಷ್ಟ ಸುಖ ಸೌಭಾಗ್ಯಗಳಿಗೆಲ್ಲ ನಾನು ಹಿಂದೆ ಮಾಡಿದ ದಾನವೇ ಮುಖ್ಯ ಕಾರಣವಾಗಿರುತ್ತದೆ. ಅಂದು ಬಿತ್ತಿದ ಬೀಜದ ಫಲವನ್ನು ಇಂದು ನಾನು, ನನ್ನ ಪ್ರಜೆಗಳೂ ಉಣ್ಣುತ್ತಲಿದ್ದೇವೆ. ಗುರುಗಳೇ, ಮುನಿಕುಲದ ಹಿರಿಯ ಹುಲಿಯಂತಿದ್ದ ತಮ್ಮ ಮುಖದಿಂದ ಉದುರಿದ ಮಾತಿನ ಧರ್ಮವನ್ನು ನಾನು ಚೆನ್ನಾಗಿ ಬಲ್ಲೆ.

ಆದರೆ ಫಲವನ್ನು ನೀಡುವ ದಿವ್ಯ ದಾನವ ಬೀಜವನ್ನು ಜಗದ್ಗುರುವಾದ ಜನಾರ್ದನನಂಥ ಸತ್ಪಾತ್ರದಲ್ಲಿ ಹಾಕಿಬಿಟ್ಟರೆ ತೀರಿತು. ನನ್ನ ಬದುಕಿನಲ್ಲಿ ಇದಕ್ಕೂ ಹೆಚ್ಚಿನದನ್ನು ಏನು ಮಾಡಲು ಶಕ್ಯವಿದೆ! ಇದೇ ನನ್ನ ಬಾಳಿನ ಸರ್ವಶ್ರೇಷ್ಠವೂ ವಿಶಿಷ್ಟವೂ ಆಗಿರುತ್ತದೆ. ಇದರಿಂದ ಎಲ್ಲ ದೇವತೆಗಳಿಗೂ ಸಂತೋಷಪಡಿಸಿದಂತಾಗುತ್ತದೆ. ನಮಗೆ ಪ್ರಿಯವಾದ ವಸ್ತುವನ್ನು ನಾವೇ ಭೋಗ ಮಾಡುವ ಆನಂದಕ್ಕಿಂತ ಅದನ್ನು ದಾನಕೊಟ್ಟಾಗ ಆಗುವ ಆನಂದವು ಅತ್ಯಧಿಕವಾಗಿರುತ್ತದೆ.

ನಾನು ಈಗ ಪ್ರಕೃತ ಯಜ್ಞ ಮಾಡಿ ಯಾವ ಹರಿಯ ಪ್ರಸಾದವನ್ನು ಪಡೆಯ ಬೇಕೆಂದು ಪ್ರಯತ್ನಿಸುತ್ತಿದ್ದೇನೋ ಅಂಥ ಯಜ್ಞದ ಫಲಸ್ವರೂಪನಾದ ಶ್ರೀಹರಿಯು ತಾನಾಗಿ ನನ್ನನ್ನು ಕರುಣಿಸುತ್ತಿದ್ದಾನೆ. ಇದೊಂದು ನನ್ನ ಮೇಲೆ ಆ ನಾರಾಯಣನು ಮಾಡುವ ಪರಮೋಪಕಾರವೇ ಸರಿ. ಇದರಲ್ಲಿ ಸಂದೇಹವಿಲ್ಲ. ಒಂದು ವೇಳೆ ದೇವತೆಗಳ ಯಜ್ಞ ಭಾಗವನ್ನು ಅಪಹರಿಸಿದ ಅಪರಾಧಿಯಾದ ನನ್ನನ್ನು ಕೊಲ್ಲ ಬೇಕೆಂದು ಕೋಪದಿಂದ ಆ ಅಚ್ಯುತನು ನಾನಿದ್ದಲ್ಲಿಗೆ ಬಂದರೆ ಅದೂ ಒಂದು ನನ್ನ ಭಾಗ್ಯವೇ ಸರಿ. ಆ ಶ್ರೀಹರಿಯಿಂದ ಸಾವು ಬಂದರೂ ಅತ್ಯಂತ ಶ್ಲಾಘನೀಯವಲ್ಲವೇ! ಇಂದ್ರಿಯಗಳನ್ನೂ ಇಂದ್ರಿಯಾಭಿಮಾನಿ ದೇವತೆಗಳನ್ನೂ ನಿಯಮಿಸುವ ಆ ಜಗದೀಶನು ನನ್ನನ್ನು ಕೊಲ್ಲಲು ಹೇಗೆ ಬಂದಾನು? ಸುದೈವದಿಂದ ಬಂದರೆ ಅದರಂಥ ಭಾಗ್ಯವಾವುದು!

೬೩೧. ಏತತ್ ಜ್ಞಾತ್ವಾ ಮುನಿಶ್ರೇಷ್ಠ ದಾನವಿಘ್ನಪರೇಣ ನ ।
ತ್ವಯಾ ಭಾವ್ಯಂ ಜಗನ್ನಾಥೇ ಗೋವಿಂದೇ ಸಮುಪಸ್ಥಿತೇ ॥

## ಲೋಮಹರ್ಷಣ ಉವಾಚ

೬೩೨. ಇತ್ಯೇವಂ ವದತಸ್ತಸ್ಯ ಯಜ್ಞವಾಟಮುಪಾಗತಃ ।
ಸಹೈವಾಮರ ವೃಂದ್ಯೈಃ ಸ ಬೃಹಸ್ಪತಿ ಪುರಸ್ಸರೈಃ ॥

೬೩೩. ಬಲಿಃ ಪುನರುವಾಚೇದಂ ಶುಕ್ರಂ ನಿಜ ಪುರೋಹಿತಂ ।
ಮಾಂ ಚ ಯಾಚಿತುಮಭ್ಯೇತಿ ಯತೋ ಗೇಹಾಗತೋ ಹರಿಃ!

೬೩೪. ಸ ಯಥಾತ್ಮೇಚ್ಛಯಾ ಸರ್ವಚೇತಸ್ಸಾಕ್ಷೀ ಜನಾರ್ದನಃ ।
ಸರ್ವದೇವಮಯೋಽಚಿಂತ್ಯೋ ಮಾಯಾವಾಮನ ರೂಪಧೃಕ್ ।

೬೩೫. ತಂ ದೃಷ್ಟ್ವಾ ಯಜ್ಞವಾಟಂ ತು ಪ್ರವಿಷ್ಟಮಸುರಾಃ ಪ್ರಭುಂ
ಜಗ್ಮುಃ ಪ್ರಭಾವತಃ ಕ್ಷೋಭಂ ತೇಜಸಾ ತಸ್ಯ ನಿಷ್ಪ್ರಭಾಃ ॥

೬೩೬. ವೇಪುಶ್ಚ ಮುನಯಸ್ತತ್ರ ಯೇ ಸಮೇತಾ ಮಹಾಧ್ವರೇ ।
ವಸಿಷ್ಠೋ ಗಾಧಿಜೋ ಗರ್ಗಸ್ತಥಾನ್ಯೇ ಮುನಿಸತ್ತಮಾಃ ।

೬೩೭. ಬಲಿಶ್ಚೈವಾಖಿಲಂ ಜನ್ಮ ಮೇನೇ ಸಫಲಮಾತ್ಮನಃ ।
ಶತಃ ಸಂಕ್ಷೋಭಮಾಪನ್ನೋ ನ ಕಶ್ಚಿತ್ಕಿಂಚಿದುಕ್ತವಾನ್ ॥

ಮುನಿಶ್ರೇಷ್ಠರಾದ ಶುಕ್ರಾಚಾರ್ಯರೇ, ತಾವು ಇದನ್ನೆಲ್ಲ ಚೆನ್ನಾಗಿ ತಿಳಿಯಿರಿ. ಜಗದೊಡೆಯನಾದ ಆ ಗೋವಿಂದನು ನನ್ನ ಮನೆಯವರೆಗೆ ಬೇಡಲು ಬಂದಾಗ ನಾನು ಅವನು ಬಯಸಿ ಬೇಡಿದ್ದನ್ನೆಲ್ಲ ನೀಡುವ ನಿರ್ಧಾರ ಮಾಡಿದ್ದೇನೆ. ದಯವಿಟ್ಟು ತಾವು ಮಾತ್ರ ನನ್ನ ಆ ಸತ್ಪಾತ್ರದಾನಕ್ಕೆ ವಿಘ್ನವನ್ನು ಉಂಟು ಮಾಡಬೇಡಿರಿ."

ಬಲಿಚಕ್ರವರ್ತಿಯು ಹೀಗೆ ಮಾತನಾಡುತ್ತಿರುವಾಗಲೇ ದೇವತೆಗಳ ತಂಡದೊಂದಿಗೆ ವಾಮನರೂಪಿಯಾದ ವಿಷ್ಣು ವಟುವೇಷದಿಂದ ಅಲ್ಲಿಗೆ ವಿಜಯಗೈದನು. ಆ ಸುರ ಸಂಘದ ಮುಂದೆ ದೇವಗುರು ಬೃಹಸ್ಪತ್ಯಾಚಾರ್ಯರು ನಡೆದುಬರುತ್ತಿದ್ದರು.

ದೂರದಿಂದಲೇ ಆ ಭಗವಂತನು ಬರುವದನ್ನು ಕಂಡು ಬಲಿರಾಜನು ತನ್ನ ಪುರೋಹಿತ ಶುಕ್ರಾಚಾರ್ಯರನ್ನು ಕುರಿತು ಮತ್ತೆ ನುಡಿದನು-

''ಗುರುಗಳೇ, ಆ ಭಗವಂತನು ನನ್ನ ಮನೆಯವರೆಗೆ ಬರಬೇಕಾದರೆ ಯಾಚನೆ ಮಾಡುವ ಉದ್ದೇಶದಿಂದಲೇ ಬಂದಿರುತ್ತಾನೆ. ಇಚ್ಛಾಮಾತ್ರದಿಂದಲೇ ಬೇಕಾದುದನ್ನು ಸೃಷ್ಟಿಸಲು ಅವನು ಸಮರ್ಥ. ಅವನು ಪೂರ್ಣಕಾಮ. ಆದರೂ ಈಗ ಯಾಚನೆಗಾಗಿ ಅವನು ವಾಮನವಟುವಿನ ವೇಷ ತಳೆದದ್ದು ಮಾಯೆ ಅಥವಾ ಲೋಕವಿಡಂಬನೆಯೇ ಸರಿ. ಸರ್ವ ದೇವತೆಗಳ ಅಂತರ್ಯಾಮಿಯಾದ ಆ ಜನಾರ್ದನನು ಸರ್ವವಿಧವಾದ ಚಿತ್ತವ್ಯಾಪಾರಗಳಿಗೆ ಸಾಕ್ಷೀಭೂತನಾಗಿದ್ದಾನೆ.''

ಬಲಿರಾಜ ಹೀಗೆ ನುಡಿಯುತ್ತಿರುವಾಗಲೇ ವಾಮನ ವಟು ಅಲ್ಲಿ ಬಂದುಬಿಟ್ಟ. ಆ ಮಹಾಪ್ರಭು ಯಜ್ಞವಾಟಿಕೆಯನ್ನು ಪ್ರವೇಶಿಸುವದೇ ತಡ ದೈತ್ಯರೆಲ್ಲರೂ ಕಳೆಗುಂದಿ ತೇಜೋವಧೆ ಆದಂತೆ ಆಗಿ ಕಂಗೆಟ್ಟುಹೋದರು. ಆ ಭಗವಂತನ ಪ್ರಭಾವದಿಂದ ದಾನವರ ದಂಡಿನಲ್ಲಿ ಅತ್ಯಂತ ಪ್ರಕ್ಷೋಭವುಂಟಾಯಿತು. ಬಲಿಚಕ್ರವರ್ತಿಯ ಯಜ್ಞಕ್ಕಾಗಿ ಅಲ್ಲಿ ಆ ಯಜ್ಞವೇದಿಕೆಯಲ್ಲಿ ನೆರೆದ ಮುನಿಗಳು ಎಲ್ಲರೂ ನಡುಗಿಹೋದರು. ವಶಿಷ್ಠ, ವಿಶ್ವಾಮಿತ್ರ, ಗರ್ಗಾಚಾರ್ಯ ಮುಂತಾದ ಮುನಿಶ್ರೇಷ್ಠರೂ ಮಾತ್ರ ಆ ಭಗವಂತನನ್ನು ಕಂಡು ನಮ್ಮ ಜನ್ಮವೇ ಸಫಲವಾಯಿತು ಎಂದು ಬಗೆದರು.

೬೩೮. ಪ್ರತ್ಯೇಕಂ ದೇವದೇವೇಶಂ ಪೂಜಯಾಮಾಸ ತೇಜಸಾ ।
ಅಥಾಸುರಪತಿಂ ಪ್ರಹ್ವಂ ದೃಷ್ಟ್ವಾ ಮುನಿವರಾಂಶ್ಚ ತಾನ್ ॥

೬೩೯. ದೇವದೇವ ಪತಿಃ ಸಾಕ್ಷಾದ್ವಿಷ್ಣುರ್ವಾಮನರೂಪಧೃಕ್ ।
ತುಷ್ಟಾವ ಯಜ್ಞಂ ವಹ್ನಿಂ ಚ ಯಜಮಾನಮಥರ್ತ್ವಿಜಃ ॥

೬೪೦. ಯಜ್ಞಕರ್ಮಾಧಿಕಾರಸ್ಥಾನ್ಸದಸ್ಯಾನ್‌ದ್ರವ್ಯ ಸಂಪದಃ ।
ಸದಸ್ಯಾಃ ಪಾತ್ರಮಖಿಲಂ ವಾಮನಂ ಪ್ರತಿತಕ್ಷಣಾತ್ ॥
ಯಜ್ಞವಾಟಸ್ಥಿತಾ ವಿಪ್ರಾಃ ಸಾಧುಸಾಧ್ವಿತ್ಯುದೀರಯನ್ ॥

೬೪೧. ಸಂಚಾರ್ಘ್ಯಮಾದಾಯ ಬಲಿಃ ಪ್ರೋದ್ಭೂತ ಪುಲಕಸ್ತಥಾ ।
ಪೂಜಯಾಮಾಸ ಗೋವಿಂದಂ ಪ್ರಾಹ ಚೇದಂ ಮಹಾಸುರಃ ।

೬೪೨. ಸುವರ್ಣರತ್ನ ಸಂಘಾತಾನ್ಗಜಾಂಶ್ಚ ಮಹಿಷಾಸ್ತಥಾ ।
ಸ್ತ್ರಿಯೋ ವಸ್ತ್ರಾಣ್ಯಲಂಕಾರಾನ್ಗಾವಃ ಕುಪ್ಯಂ ಚ ಪುಷ್ಕಲಂ ॥

ಬಲಿರಾಜನಂತೂ ತನ್ನ ಹಿಂದಿನ ಮುಂದಿನ ಇಂದಿನ ಜನ್ಮಗಳೆಲ್ಲವೂ ಸಾರ್ಥಕವಾದವು ಎಂದು ತಿಳಿದನು. ಭಗವಂತನ ಆ ಆಗಮನವನ್ನು ಕಂಡು ದೈತ್ಯರೆಲ್ಲರೂ ಹೆದರಿ ಹೌಹಾರಿ ಹೋದರು. ಯಾರೂ ಏನೂ ಮಾತನಾಡಲಿಲ್ಲ. ಪ್ರತಿಯೊಬ್ಬನೂ ಪ್ರತ್ಯೇಕಪ್ರತ್ಯೇಕ ವಾಗಿಯೇ ಆ ಪರಮಾತ್ಮನನ್ನು ಧೂಪ ದೀಪಗಳಿಂದ ಪೂಜಿಸಿದರು. ಕಣ್ಣಿನ ಕಿರಣಗಳಿಂದ ಬೆಳಗಿದರು.

ಅಸುರರ ಅರಸನಾದ ಬಲಿರಾಜನು ತಲೆತಗ್ಗಿಸಿ ಕೈ ಜೋಡಿಸಿ ಭಗವಂತನೆದುರು ಬಾಗಿ ನಿಂತುಕೊಂಡನು. ಮುನಿ ಮಹರ್ಷಿಗಳೆಲ್ಲರೂ ಆ ವಟುವಾಮನನಿಗೆ ಹಣೆ ಮಣಿದು ನಮಿಸಿ ನಮ್ರರಾಗಿ ನಿಂತರು. ದೇವಾಧಿದೇವತೆಗಳಿಗೆಲ್ಲ ಅಧಿನಾಯಕನಾದ ಭಗವಾನ್ ವಾಮನರೂಪಿಯಾದ ಶ್ರೀವಿಷ್ಣುವು ಬಲಿರಾಜನ ಆ ಯಜ್ಞವನ್ನು ಹೊಗಳಿದನು. ಹೋಮಕುಂಡದಲ್ಲಿಯ ಬೆಂಕಿಯನ್ನು ಬಣ್ಣಿಸಿದನು. ಯಜಮಾನನಾದ ಬಲಿರಾಜನನ್ನು ಪ್ರಶಂಸಿಸಿದನು. ಋತ್ವಿಜರನ್ನೂ ಹರಸಿದನು. ಆ ಯಜ್ಞಕಾರ್ಯದಲ್ಲಿ ದೀಕ್ಷಿತರಾದ ಪುರೋಹಿತರನ್ನೂ, ಸದಸ್ಯರನ್ನೂ ಹಾಗೂ ಆ ಯಾಗದ ವೈಭವ, ಯೋಗ್ಯತೆ ಸತ್ಪಾತ್ರ ಎಲ್ಲವನ್ನೂ ವಾಮನ ದೇವರು ಹೊಗಳಿದರು.

ಅದನ್ನು ಕೇಳಿದಕೂಡಲೇ ಆ ಯಜ್ಞ ಮಂಟಪದಲ್ಲಿದ್ದ ಬ್ರಾಹ್ಮಣರೆಲ್ಲರೂ ಆ ವಟು ವಾಮನನ ವಿನಯ ವಾಕ್ಚಾತುರ್ಯವನ್ನು ಕಂಡು ಕೇಳಿ 'ಬಲೇ ಭಾಪು' ಎಂದು ಪ್ರಶಂಸಾ ಉದ್ಗಾರವನ್ನು ತೆಗೆದರು. ಬಲಿರಾಜನಿಗಂತೂ ಗೋವಿಂದ ಬಂದದ್ದೇ ಪರಮಾನಂದ. ಮೈತುಂಬ ಹಿಗ್ಗಿನ ಮುಳ್ಳು. ಅರ್ಘ್ಯ ಪಾದ್ಯಾದಿಗಳನ್ನು ತಂದು ಪೂಜೆ ಮಾಡಿದನು. ಆ ಭಗವಂತನನ್ನು ಕುರಿತು ಆ ದೈತ್ಯರ ದೊರೆಯು ಇಂತು ನುಡಿದನು.

''ಶ್ರೇಷ್ಠನಾದ ವಾಮನಮೂರ್ತಿಯೇ, ನಿನಗೆ ಏನು ಬೇಕು! ಆನೆಗಳೇ? ಅಲಂಕಾರ ಗಳೇ, ಬಂಗಾರವೇ? ರತ್ನಗಳ ರಾಶಿಯೇ? ವಸ್ತ್ರಾಲಂಕಾರಗಳೇ? ಆಕಳು! ಎಮ್ಮೆ, ಬೆಳ್ಳಿ, ವಿಪುಲ ದ್ರವ್ಯ... ಯಾವುದು ಬೇಕು! ಅಥವಾ ಸುಂದರವಾದ ಸ್ತ್ರೀಯರು ಬೇಕೇ?''

೬೪೩. ಸರ್ವಂ ಚ ಸಕಲಾಂ ಪೃಥ್ವೀಂ ಭವತೋ ವಾ ಯದೀಪ್ಸಿತಂ ।
ತದ್ದದಾಮಿ ಶೃಣು ಶ್ರೇಷ್ಠ ಮಮಾರ್ಥಾಃ ಸಂತಿ ತೇ ಪ್ರಿಯಾಃ॥

೬೪೪. ಇತ್ಯುಕ್ತೋ ದೈತ್ಯಪತಿನಾ ಪ್ರೀತಿಗರ್ಭಮಿದಂ ವಚಃ ।
ಪ್ರಾಹ ಸಸ್ಮಿತ ಗಂಭೀರಂ ಭಗವಾನ್ ವಾಮನಾಕೃತಿಃ ॥

ಶ್ರೀ ವಾಮನ ಉವಾಚ

೬೪೫. ಮಮಾಗ್ನಿಶರಣಾರ್ಥಾಯ ದೇಹಿ ರಾಜನ್ ಪದತ್ರಯಂ ।
ಸುವರ್ಣ ಗ್ರಾಮರತ್ನಾದಿ ತದರ್ಥಿಭ್ಯಃ ಪ್ರದೀಯತಾಂ ॥

ಬಲಿಚಕ್ರವರ್ತಿ ಉವಾಚ

೬೪೬. ತ್ರಿಭಿಃ ಪ್ರಯೋಜನಃ ಕಿಂ ತೇ ಪದೈಃ ಪದವತಾಂ ವರ ।
ಶತಂ ಶತಸಹಸ್ರಂ ವಾ ಪದಾನಾಂ ಮಾರ್ಗತಾಂ ಭವಾನ್ ॥

ವಾಮನ ಉವಾಚ

೬೪೭. ಏತೈಃ ಪದೈಃ ದೈತ್ಯಪತೇ ಕೃತಕೃತ್ಯೋಽಸ್ಮಿ ಮಾರ್ಗಣೇ ।
ಅನ್ಯೇಷಾಮರ್ಥಿನಾಂ ವಿತ್ತಮಿಚ್ಛಯಾ ದಾಸ್ಯತೇ ಭವಾನ್ ॥

೬೪೮. ಏತಚ್ಛ್ರುತ್ವಾ ತು ಗದಿತಂ ವಾಮನಸ್ಯ ಮಹಾತ್ಮನಃ ।
ದದೌ ತಸ್ಮೈ ಮಹಾಬಾಹುಃ ವಾಮನಾಯ ಪದತ್ರಯಂ ॥

೭೪೯. ಪಾಣೌ ತು ಪತಿತೇ ತೋಯೇ ವಾಮನೋಽಭೂದವಾಮನಃ।
ಸರ್ವದೇವಮಯಂ ರೂಪಂ ದರ್ಶಯಾಮಾಸ ತತ್‌ಕ್ಷಣಾತ್॥

ಇಲ್ಲವೇ ಸಮಗ್ರವಾದ ಈ ಪೃಥ್ವೀಮಂಡಲದ ಅಪೇಕ್ಷೆ ನಿನಗೆ ಇದ್ದರೂ ಹೇಳು. ಇದನ್ನು ಈಗಲೇ ನಿನಗೆ ಕೊಟ್ಟುಬಿಡುತ್ತೇನೆ. ಒಟ್ಟಾರೆ ನಿನಗೆ ಬೇಕಾದುದು ಏನು? ನೀನು ಬಯಸುವದೇನು ? ತಿಳಿಸು. ನನಗೆ ಇಷ್ಟವಾದ ಪ್ರೀತಿಯ ಪದಾರ್ಥಗಳೆಲ್ಲವೂ ನನ್ನ ಬಳಿ ಇರುತ್ತವೆ. ಅವೆಲ್ಲಗಳನ್ನು ನಿನಗೆ ನೀಡುತ್ತೇನೆ.'' ದೈತ್ಯರ ಅರಸನು ನುಡಿದ ಈ ನುಡಿ ಪ್ರೀತಿಯಿಂದ ಒಡಗೂಡಿತ್ತು. ಅದನ್ನು ಕೇಳಿ ವಾಮನ ಆಕಾರದ ಕುಳ್ಳ ಭಗವಂತನು ಮುಗುಳುನಗೆ ನಕ್ಕು ಗಂಭೀರವಾಗಿ ಮಾತನಾಡಿದನು-

''ಮಹಾರಾಜನೇ, ನನಗೆ ಅಗ್ನಿಶಾಲೆಯನ್ನು ಕಟ್ಟಲಿಕ್ಕಾಗಿ ಮೂರು ಪಾದ ಭೂಮಿಯು ಬೇಕಾಗಿದೆ. ಅಷ್ಟು ಮಾತ್ರನ್ನು ನನಗೆ ಕೊಡು. ನಿನ್ನ ಬಳಿ ಇರುವ ಉಳಿದ ಬಂಗಾರ, ಗ್ರಾಮ, ರತ್ನ ಮುಂತಾದವುಗಳನ್ನು ಬಯಸಿ ಬೇಡುವ ಯಾಚಕರಿಗೆ ಕೊಡು.

**ಬಲಿರಾಜ :** ಒಳ್ಳೆ ಸ್ಥಾನಮಾನ ಉಳ್ಳ ಬ್ರಾಹ್ಮಣ ಶ್ರೇಷ್ಠನೇ, ಮೂರು ಅಡಿ ಭೂಮಿಯಿಂದ ನಿನಗೆ ಏನು ಪ್ರಯೋಜನ! ನೂರಾರು ಅಥವಾ ಸಾವಿರಾರು ಅಡಿಗಳಷ್ಟಾದರೂ ಪ್ರದೇಶವನ್ನು ನೀನು ಬೇಡಿಕೋ.

**ಶ್ರೀವಾಮನ :** ದೈತ್ಯಕುಲದ ಅಧಿಪತಿಯೆ, ಬೇರೆ ಬೇಡುವವರು ಬಂದಾಗ ಅವರು ಬಯಸಿದಷ್ಟು ಧನವನ್ನು ನೀನೇನೋ ಸ್ವೇಚ್ಛೆಯಿಂದ ನೀಡುವಿ. ಆದರೆ ನನಗೆ ಮಾತ್ರ ಈ ಮೂರು ಪಾದ ಪರಿಮಿತವಾದ ಭೂಮಿಯೇ ಸಾಕು. ಈ ಮೂರಡಿ ನೆಲದಿಂದಲೇ ನನ್ನ ಕಾರ್ಯವಾಗುವದು. ಅಷ್ಟರಿಂದಲೇ ನಾನು ಕೃತಕೃತ್ಯ.'' ಮಹಾತ್ಮನಾದ ವಾಮನದೇವರ ಈ ಮಾತನ್ನು ಕೇಳಿ ಬಾಹುಶಾಲಿಯಾದ ಬಲಿಚಕ್ರವರ್ತಿಯು ಮೂರು ಪಾದ ಪರಿಮಿತವಾದ ಪ್ರದೇಶವನ್ನು ಸಂಕಲ್ಪಪೂರ್ವಕವಾಗಿ ಆ ವಾಮನನಿಗೆ ದಾನ ಕೊಟ್ಟನು. ಬಲಿಚಕ್ರವರ್ತಿಯು ಮೂರು ಪಾದ ಭೂಮಿಯ ಸಂಕಲ್ಪ ಮಾಡಿ ವಟುವಿನ ಕೈಯಲ್ಲಿ ಆ ಭೂಮಿದಾನದ ಸಂಕಲ್ಪದ ನೀರನ್ನು ಬಿಟ್ಟ ಕೂಡಲೇ ಆ ವಟು ವಾಮನನು ತನ್ನ ಕುಳ್ಳಾದ ವಾಮನ ವೇಷವನ್ನು ಬಿಟ್ಟು ಅವಾಮನನಾಗಿ ವಿರಾಟರೂಪವನ್ನಾಂತು ನಿಂತುಕೊಂಡನು. ಸರ್ವದೇವತಾಮಯನಾದ ತನ್ನ ಅತ್ಯದ್ಭುತವಾದ ವಿಶ್ವವ್ಯಾಪಿಸ್ವರೂಪವನ್ನು ಕೂಡಲೇ ತೋರಿಸಿದನು.

೭೫೦. ಚಂದ್ರ ಸೂರ್ಯೌ ತು ನಯನೇ ದ್ಯೌಃ ಶಿರಃ ಚರಣೌ ಕ್ಷಿತಿಃ।
ಪಾದಾಂಗುಲ್ಯಃ ಪಿಶಾಚಾಸ್ತು ಹಸ್ತಾಂಗುಲ್ಯಸ್ತು ಗುಹ್ಯಕಾಃ ॥

೭೫೧. ವಿಶ್ವೇದೇವಾಶ್ಚ ಜಾನುಸ್ಥಾಃ ಜಂಘೇ ಸಾಧ್ಯಾಸ್ಸುರೋತ್ತಮಾಃ ।
ಯಜ್ಞಾಶ್ಚಾಂಗೇಷು ಸಂಭೂತಾ ಲೇಖಾಶ್ಚಪ್ಸರಸಸ್ತಥಾ ।

೭೫೨. ದೃಷ್ಟಿರ್ಋಕ್ಷಾಣ್ಯಶೇಷಾಣಿ ಕೇಶಾಃ ಸೂರ್ಯಾಂಶವಃ ಪ್ರಭೋಃ ।
ತಾರಕಾ ರೋಮಕೂಪಾಣಿ ರೋಮೇಷು ಚ ಮಹರ್ಷಯಃ ।

೭೫೩. ಬಾಹವೋ ವಿದಿಶಸ್ತಸ್ಯ ದಿಶಃ ಶ್ರೋತ್ರೇ ಮಹಾತ್ಮನಃ ।
ಅಶ್ವಿನೌ ಶ್ರವಣೇ ತಸ್ಯ ನಾಸಾ ವಾಯುರ್ಮಹಾಬಲಃ ॥

೬೫೪. ಪ್ರಸಾದೇ ಚಂದ್ರಮಾ ದೇವೋ ಮನೋಧರ್ಮಃ ಸಮಾಶ್ರಿತಃ ।
ಸತ್ಯಮಸ್ಯಾಽಭವದ್ವಾಣೀ ಜಿಹ್ವಾ ದೇವೀ ಸರಸ್ವತೀ ॥

೬೫೫. ಪೃಷ್ಠೇಽಸ್ಯ ವಸವೋ ದೇವಾ ಮರುತಃ ಸರ್ವಸಂಧಿಷು ।
ವಕ್ಷಸ್ಥಲೇ ತಥಾ ರುದ್ರಾ ಧೈರ್ಯಂ ಚಾಸ್ಯ ಮಹಾರ್ಣವಾಃ ॥

೬೫೬. ಉದರೇ ಚಾಸ್ಯ ಗಂಧರ್ವಾಃ ಮರುತಶ್ಚ ಮಹಾಬಲಾಃ ।
ಲಕ್ಷ್ಮೀರ್ಮೇಧಾ ಧೃತಿಃ ಕಾಂತಿಃ ಸರ್ವವಿದ್ಯಾಶ್ಚ ವೈ ಕಟೌ ॥

೬೫೭. ಸರ್ವಜ್ಯೋತಿರಸೌ ದೇವಸ್ತಪಶ್ಚ ಪರಮಂ ಮಹತ್ ।
ತಸ್ಯ ದೇವಾಧಿದೇವಸ್ಯ ತೇಜಃ ಪ್ರೋದ್ಭೂತಮುತ್ತಮಂ॥

೬೫೮. ತಸ್ಯ ಕುಕ್ಷಿಷು ವೇದಾಶ್ಚ ಜಾನುನೀ ಚ ಮಹಾಮಖಾಃ ।
ಇಷ್ಟಯಃ ಪಶುಬಂಧಾಶ್ಚ ದ್ವಿಜಾನಾಂ ಚೇಷ್ಟಿತಾನಿ ಚ ॥

೬೫೯. ತಸ್ಯ ದೇವಮಯಂ ರೂಪಃ ದೃಷ್ಟ್ವಾ ವಿಷ್ಣೋರ್ಮಹಾಬಲಾಃ ।
ನೋಪಸರ್ಪಂತಿ ತೇ ದೈತ್ಯಾಃ ಪತಂಗಾ ಇವ ಪಾವಕಂ ॥

ವಿಶ್ವರೂಪಿಯಾದ ಆ ಪರಮಾತ್ಮನ ವಿರಾಡ್ ದೇಹವು ಚಂದ್ರ ಸೂರ್ಯರೆಂಬ ಕಂಗಳಿಂದ ಕಂಗೊಳಿಸುತ್ತಿತ್ತು. ಅದರ ತಲೆಯ ತಾಣದಲ್ಲಿ ಆಗಸವಿದ್ದರೆ ಅವನೀತಲವೇ ಅದರ ಅಡಿದಾವರೆ. ಪಿಶಾಚಿಗಳೆಲ್ಲ ಕಾಲಬೆರಳು. ಗುಹ್ಯಕರು ಕೈಬೆರಳು. ಮೊಳಕಾಲು ಮಂಡೆಯಲ್ಲಿ ವಿಶ್ವೇ ದೇವತೆಗಳು. ಸಾಧ್ಯ ಎಂಬ ಸುರಶ್ರೇಷ್ಠರು ಕಾಲುಗಣಿಕೆಯಲ್ಲಿದ್ದರು.

ಆ ವಿರಾಡ್‌ರೂಪಿ ಪರಮಾತ್ಮನ ಅಂಗಾಂಗಗಳೆಲ್ಲ ಯಜ್ಞಮಯ. ಅವನ ಅವಯವಗಳಿಂದಲೇ ದೇವತೆಗಳೂ ಅಪ್ಸರೆಯರೂ ಉದ್ಭೂತರಾಗಿದ್ದರು. ಎಲ್ಲ ನಕ್ಷತ್ರಗಳು ಅವನ ಚಕ್ಷುಸ್ಸುಗಳು ಆಗಿ ಹೊಳೆಯುತ್ತಿದ್ದವು. ರವಿಯ ಕಿರಣಗಳೇ ಅವನ ಕೇಶಪಾಶ. ಚಿಕ್ಕಚಿಕ್ಕ ಚಿಕ್ಕೆಗಳು ಮೈಗೂದಲಿನ ಮೂಲಗಳಲ್ಲೇ ಮಿನುಗುತ್ತಿದ್ದವು. ಆ ರೋಮ ಕೂಪಗಳಲ್ಲಿಯೇ ಅನೇಕ ಮುನಿಮಹರ್ಷಿಗಳು. ದಿಕ್ಕುಗಳು ವಿಶ್ವರೂಪಿಯಾದ ಆ ವಿರಾಟ ವಾಮನನ ಕಿವಿ. ಉಪದಿಕ್ಕುಗಳೆಲ್ಲವೂ ಅವನ ತೋಳು. ಅಶ್ವಿನೀ ದೇವತೆಗಳು ಕಿವಿಯ ಹೊರಳೆ, ಮಹಾಬಲಿಷ್ಠನಾದ ವಾಯುವೇ ಅವನ ಮೂಗು.

ಚಂದ್ರಸು ಅವನ ಪ್ರಸಾದದ ಸ್ಥಾನದಲ್ಲಿದ್ದು ಬೆಳಗುತ್ತಿದ್ದನು. ಈ ಪ್ರಸನ್ನತೆಯೇ ಅವನ ಮನೋಧರ್ಮ. ಸತ್ಯವೇ ಅವನ ವಾಣಿ. ಸರಸ್ವತಿಯೇ ಅವನ ನಾಲಿಗೆ. ದೇವಮಾತೆಯಾದ ಅದಿತಿದೇವಿಯೇ ಅವನ ಕೊರಳು. ಎಲ್ಲ ವಿದ್ಯೆಗಳೂ ಅವನ ಹೊಟ್ಟೆಯ ಮೇಲಿನ ರೇಖೆಗಳಾಗಿ ಹೊಳೆದವು. ಸೂರ್ಯಮಂಡಲವೇ ಸ್ವರ್ಗದ್ವಾರವಾಗಿತ್ತು. ಅವನ ಹುಬ್ಬಿನಗುಂಟ ತ್ವಷ್ಟಾ ಎಂಬ ದೇವತೆಗಳು ಆಶ್ರಯಿಸಿ ನಿಂತಿದ್ದರು. ಅವನ ಮುಖದಲ್ಲಿ ಅಗ್ನಿ, ವೃಷಣಗಳಲ್ಲಿ ಪ್ರಜಾಪತಿ ಆಶ್ರಯ ಪಡೆದಿದ್ದರು. ಅವನ ಹೃದಯವು ಪರಬ್ರಹ್ಮ ಸ್ವರೂಪಿಯಾಗಿದ್ದಿತು. ಕಶ್ಯಪ ಮುನಿಗಳು ಅವನ ಪೌರುಷವನ್ನು ಆಶ್ರಯಿಸಿದ್ದರು. ಅವರ ಬೆನ್ನಿನಲ್ಲಿ ಅಷ್ಟವಸುಗಳು ದೇವತೆಗಳೂ ನೆಲೆನಿಂತಿದ್ದರು. ಅವಯವಗಳ ಸಂದುಗಳಲ್ಲಿ ಮರುದ್ಗಣಗಳು ಅವಕಾಶ ಪಡೆದಿದ್ದರು. ಹನ್ನೊಂದು

ರುದ್ರರಿಗೆ ಅವನ ಎದೆ ಆಸರೆ. ಎಲ್ಲ ಸಾಗರಗಳು ಅವನ ಧೈರ್ಯವನ್ನು ಅವಲಂಬಿಸಿದ್ದವು. ಗಂಧರ್ವರೂ ಮಹಾಬಲಿಷ್ಠರಾದ ಮರುದ್ದೇವತೆಗಳೂ ಅವನ ಉದರವನ್ನು ಆಶ್ರಯಿಸಿದ್ದರು. ಲಕ್ಷ್ಮೀ, ಮೇಧಾ, ಧೃತಿ, ಕಾಂತಿ, ಹಾಗೂ ಎಲ್ಲ ವಿದ್ಯೆಗಳು ಅವನ ನಡುವನ್ನು ಅಶ್ರಯಿಸಿದ್ದವು. ಸರ್ವಜ್ಯೋತಿಸ್ವರೂಪಿಯೂ, ತಪೋಮಯನೂ ಆದ ಆ ದೇವಾಧಿ ದೇವನ ದೇಹವು ಭುವಿ ಭಾನುಗಳನ್ನೆಲ್ಲ ವ್ಯಾಪಿಸಿ ಬೃಹದಾಕಾರವಾಗಿ ಬೆಳೆದು ನಿಂತು ಕೊಂಡಿತು. ಅದರಿಂದ ದಿವ್ಯವಾದ ತೇಜಃಪುಂಜವು ಹೊರಹೊಮ್ಮುತ್ತಿತ್ತು. ಅದರ ಹೊಟ್ಟೆಯಲ್ಲಿ ಎಲ್ಲ ವೇದಗಳೂ, ಮಂಡೆಗಳಲ್ಲಿ ಸಕಲ ಯಜ್ಞಗಳೂ, ಬ್ರಹ್ಮಕರ್ಮಗಳೂ ಅಡಕವಾಗಿದ್ದವು. ವಿಷ್ಣುವಿನ ವಿಶ್ವದೇವಮಯವಾದ ಈ ವಿರಾಟ್ ರೂಪವನ್ನು ನೋಡಿ ಮಹಾಬಲಿಷ್ಠರಾದ ದೈತ್ಯರೂ ಕೂಡ ಹೆದರಿ ದೂರ ಸರಿದರು. ಬೆಂಕಿಯನ್ನು ಕಂಡ ದೀಪದ ಹುಳಗಳಂತೆ ಅವರಾರೂ ಆ ವಾಮನನ ಬಳಿ ಸುಳಿಯಲಿಲ್ಲ.

೬೬೦. ಚಿಕ್ಷುರಸ್ತು ಮಹಾದೈತ್ಯಃ ಪಾದಾಂಗುಷ್ಠಂ ಗೃಹೀತವಾನ್ ।
ದಂತಾಭ್ಯಾಂ ತಸ್ಯ ವೈ ಗ್ರೀವಾಮಂಗುಷ್ಠೇನಾಹನದ್ಧರಿಃ ॥

೬೬೧. ಪ್ರಮಥ್ಯ ಸರ್ವಾನಸುರಾನ್ಪಾದ ಹಸ್ತತಲೈರ್ವಿಭುಃ ।
ಕೃತ್ವಾ ರೂಪಂ ಮಹಾರೌದ್ರಂ ಸಂಜಹಾರಾಶು ಮೇದಿನೀಂ ।

೬೬೨. ತಸ್ಯ ವಿಕ್ರಮತೋ ಭೂಮಿಂ ಚಂದ್ರಾದಿತ್ಯೌ ಸ್ತನಾಂತರೇ ।
ನಭೋ ವಿಕ್ರಮಾಣಸ್ಯ ಸಕ್ಥಿದೇಶೇ ಸ್ಥಿತಾವುಭೌ ॥

೬೬೩. ಪರಂ ವಿಕ್ರಮಮಾಣಸ್ಯ ಜಾನುಮೂಲೇ ಪ್ರಭಾಕರೌ ।
ವಿಷ್ಣೋ ರಾಸ್ತಾಂ ಸ್ಥಿತಸ್ಯೈತೌ ದೇವ ಪಾಲನಕರ್ಮಣಿ ॥

೬೬೪. ಜಿತ್ವಾ ಲೋಕತ್ರಯಂ ಕೃತ್ಸ್ನಂ ಹತ್ವಾ ಚಾಸುರಪುಂಗವಾನ್ ।
ಪುರಂದರಾಯ ತ್ರೈಲೋಕ್ಯಂ ದದೌ ವಿಷ್ಣುರುರುಕ್ರಮಃ ॥

೬೬೫. ಸುತಲಂ ನಾಮ ಪಾತಾಲ ಮಧಸ್ತಾದ್ವಸುಧಾತಲಾತ್ ।
ಬಲೇರ್ದತ್ತಂ ಭಗವತಾ ವಿಷ್ಣುನಾ ಪ್ರಭವಿಷ್ಣುನಾ ।

೬೬೬. ಅಥ ದೈತ್ಯೇಶ್ವರಂ ಪ್ರಾಹ ವಿಷ್ಣುಃ ಸರ್ವೇಶ್ವರೇಶ್ವರಃ ।
ಯತ್ತ್ವಯಾ ಸಲಿಲಂ ದತ್ತಂ ಗೃಹೀತಂ ಪಾಣಿನಾ ಮಯಾ ।

೬೬೭. ಕಲ್ಪ ಪ್ರಮಾಣಃ ತಸ್ಮಾತ್ತೇ ಭವಿಷ್ಯತ್ಯಾಯುರುತ್ತಮಂ ।
ವೈವಸ್ವತೇ ತಥಾತೀತೇ ಕಾಲೇ ಮನ್ವಂತರೇ ತಥಾ ॥

ಆದರೆ ದೊಡ್ಡ ದೈತ್ಯನಾದ ಚಿಕ್ಷುರನು ಮಾತ್ರ ಆಗ ಹರಿಯ ಕಾಲಿನ ಹೆಬ್ಬೆರಳನ್ನು ಹಿಡಿದುಬಂದನು. ಆಗ ವಿಷ್ಣುವು ಆ ದೈತ್ಯನ ಕೊರಳು ಹಿಡಿದು ಹಲ್ಲು ಉದುರಿಸಿ ಹೊಡೆದು ಕೊಂದುಹಾಕಿದನು. ಹೀಗೆ ಎದುರು ಬಂದ ದೈತ್ಯರನ್ನೆಲ್ಲ ಕಾಲಿನಿಂದ ಒದೆದು, ಕೈಯಿಂದ ಹೊಡೆದು, ಅಸುರರೆಲ್ಲರನ್ನೂ ಹೊಸೆದು ಹಾಕಿ ಆ ಹರಿಯು ತನ್ನ ದೊಡ್ಡ ದೇಹದಿಂದ ಭೂಮಿಯನ್ನೆಲ್ಲ ಆವರಿಸಿದನು. ದೇವತೆಗಳನ್ನು ರಕ್ಷಿಸುವ

ಮಹಾಕಾರ್ಯವನ್ನು ಕೈಕೊಂಡ ಆ ವಿಷ್ಣು ಭೂಮಿಯನ್ನು ಅಳೆಯುವ ಕಾಲದಲ್ಲಿ ಚಂದ್ರ ಸೂರ್ಯರು ಅವನ ಎದೆಯ ತಾಣದಲ್ಲಿ ಹೊಳೆದರು. ಮತ್ತೊಂದು ಹೆಜ್ಜೆಯಿಂದ ಅಂತರಿಕ್ಷವನ್ನು ಅಳೆಯತೊಡಗಿದಾಗ ಆ ಸೂರ್ಯ ಚಂದ್ರರು ತೊಡೆಯ ಮೇಲಿನ ಪ್ರದೇಶದಲ್ಲಿ ಮಿನುಗಿದರು. ಆ ಭಗವಂತನು ಇನ್ನೂ ಮೇಲೆ ಮೇಲಿನ ಭಾಗವನ್ನು ಆಕ್ರಮಿಸಿ ತನ್ನ ಅಡಿಯಿಂದ ಅಳೆಯುತ್ತ ನಡೆದಂತೆ ಆ ರವಿಚಂದ್ರರು ಆ ಭಗವಂತನ ಮೊಳಕಾಲ ಮಂಡಿಯ ಕೆಳಗೆ ಬಂದರು. ಹೀಗೆ ಮೂರು ಲೋಕಗಳನ್ನೂ ಆಕ್ರಮಿಸಿ ಗೆದ್ದು, ಎಲ್ಲ ದೈತ್ಯರನ್ನು ಸಂಹರಿಸಿ, ಪ್ರಪಂಚವನ್ನೆಲ್ಲ ತನ್ನ ಕೈವಶ ಮಾಡಿಕೊಂಡ ತ್ರಿವಿಕ್ರಮ ರೂಪಿಯಾದ ಆ ಪರಮಾತ್ಮನು ತಾನು ಗೆದ್ದ ಮೂರು ಲೋಕಗಳನ್ನೂ ದೇವೇಂದ್ರನಿಗೆ ಕೊಟ್ಟುಬಿಟ್ಟನು. ಈ ಭೂಲೋಕದ ಕೆಳಗಡೆ ಇರುವ ಸುತಲ ಎಂಬ ಹೆಸರುಳ್ಳ ಪಾತಾಳ ಲೋಕವನ್ನು ಸರ್ವ ಸಮರ್ಥನಾದ ಆ ಭಗವಾನ್ ಶ್ರೀವಿಷ್ಣು ಬಲಿರಾಜನಿಗೆ ತಾನಾಗಿ ಕೊಟ್ಟು ಕರುಣಿಸಿದನು. ಎಲ್ಲ ದೇವಾಧಿ ದೇವತೆಗಳಿಗೂ ಈಶ್ವರನಾದ, ಜಗದೊಡೆಯರಿಗೆಲ್ಲ ಒಡೆಯನಾದ ಆ ವಿಷ್ಣು ಭಗವಂತನು ದೈತ್ಯೇಶ್ವರನಾದ ಬಲಿರಾಜನನ್ನು ಕುರಿತು ಇಂತು ನುಡಿದನು-

"ದೈತ್ಯರಾಜ, ನೀನು ಮೂರು ಪಾದ ಭೂಮಿಯನ್ನು ನನಗೆ ಕೊಡುವ ಸಂಕಲ್ಪ ಮಾಡಿ ಆ ದಾನೋದಕವನ್ನು ನನ್ನ ಕೈಯಲ್ಲಿ ಬಿಟ್ಟು ನನಗೆ ತ್ರಿಪಾದ ಭೂಮಿಯನ್ನು ದಾನಕೊಟ್ಟೆ. ನೀನು ಬಿಟ್ಟ ಆ ದಾನೋದಕವನ್ನು ನಾನು ನನ್ನ ಕೈಯಲ್ಲಿ ತೆಗೆದುಕೊಂಡೆ. ಆದುದರಿಂದ ನಿನ್ನ ಆಯುಷ್ಯವು ಒಂದು ಕಲ್ಪಪ್ರಮಾಣ ಬೆಳೆದು ನೀನು ಚಿರಂಜೀವಿಯಾಗುವೆ."

೬೬೮. ಸಾವರ್ಣಿಕೇ ತು ಸಂಪ್ರಾಪ್ತೇ ಭವಾನಿಂದ್ರೋ ಭವಿಷ್ಯತಿ ।
ಇದಾನೀಂ ಭುವನಂ ದತ್ತಂ ಸರ್ವಂ ಶಕ್ರಾಯ ವೈ ತವ ॥

೬೬೯. ಚತುರ್ಯುಗವ್ಯವಸ್ಥಾ ಚ ಸಾಧಿಕಾತ್ಯೇಕಸಪ್ತತಿಃ ।
ನಿಯಂತವ್ಯಾ ಮಯಾ ಸರ್ವೇ ಯೇ ತಸ್ಯ ಪರಿಪಂಥಿನಃ ।

೬೭೦. ತೇನಾಹಂ ಪರಯಾ ಭಕ್ತ್ಯಾ ಪೂರ್ವಮಾರಾಧಿತೋ ಬಲೇ ।
ಸುತಲಂ ನಾಮ ಪಾತಾಲಂ ಸಮಾದಾಯ ವಚೋ ಮಮ ॥

೬೭೧. ವಸಾಸುರ ಮಮಾದೇಶಂ ಯಥಾವತ್ಪರಿಪಾಲಯನ್ ।
ತತ್ರ ದೇವಾಸುರೋಪೇತೇ ಪ್ರಾಸಾದ ಶತಸಂಕುಲೇ ।

ವೈವಸ್ವತ ಮನ್ವಂತರದ ಕಾಲಾವಕಾಶವು ಪೂರ್ತಿ ಕೊನೆಗೊಂಡ ಬಳಿಕ ಸಾವರ್ಣಿ ಮನ್ವಂತರವು ಪ್ರಾರಂಭವಾಗುವದು. ಹೊಸ ಮನ್ವಂತರಕ್ಕೆ ಈಗ ನನಗೆ ಮೂರುಪಾದ ಧರೆಯನ್ನು ದಾನ ಮಾಡಿದ ನೀನೇ ದೇವೇಂದ್ರನಾಗುವಿ. ಈ ಮನ್ವಂತರದಲ್ಲಿ ಈ ಭೂಮಿಯನ್ನೆಲ್ಲ ಈಗಿರುವ ಇಂದ್ರನಿಗೆ ನಾನು ಕೊಟ್ಟುಬಿಟ್ಟಿದ್ದೇನೆ.

ಕೃತ, ತ್ರೇತಾ, ದ್ವಾಪರ, ಕಲಿ ಈ ನಾಲ್ಕು ಯುಗಗಳು ಕೂಡಿದರೆ ಒಂದು ಮಹಾ ಯುಗವಾಗುತ್ತದೆ, ಇಂಥ ಎಪ್ಪತ್ತೊಂದು ಮಹಾಯುಗಗಳು ಕೂಡಿ ಒಂದು ಮನ್ವಂತರವಾಗುವುದು. ಇಂಥ ಹದಿನಾಲ್ಕು ಮನ್ವಂತರಗಳಲ್ಲಿ ಪ್ರಕೃತ ವೈವಸ್ವತ ಮನ್ವಂತರಕ್ಕೆ ಈಗಿರುವ ದೇವೇಂದ್ರನು ಒಡೆಯನಾಗಿದ್ದಾನೆ.

ಹೀಗೆ ಒಂದೊಂದು ಮನ್ವಂತರಕ್ಕೂ ಒಬ್ಬೊಬ್ಬ ಇಂದ್ರನನ್ನು ನೇಮಿಸಿ ಮನ್ವಂತರಗಳ ನಿಯಮನ ಹಾಗೂ ನಿಯಂತ್ರಣ ಅನುಶಾಸನ ಪರಿಪಾಲನೆಗಳನ್ನು ನಾನೇ ಮಾಡುತ್ತೇನೆ. ಈ ನನ್ನ ಕಾಲವ್ಯವಸ್ಥೆಗೆ ವಿರೋಧವಾಗಿ ವರ್ತಿಸಿದವರನ್ನು ನಾನು ಶಾಸನ ಮಾಡುತ್ತೇನೆ. ಇದಕ್ಕೆ ಅನುಕೂಲರಾದವರನ್ನು ಅನುಗ್ರಹಿಸುತ್ತೇನೆ.

ಈಗ ಇಂದ್ರಪದವಿಯಲ್ಲಿದ್ದ ಶಚೀಪತಿಯು ಹಿಂದೆ ನನ್ನನ್ನು ಅತ್ಯಂತ ಭಕ್ತಿಯಿಂದ ಆರಾಧನೆಮಾಡಿದ್ದನು. ಅದರಿಂದ ಪ್ರಸನ್ನನಾದ ನಾನು ಅವನಿಗೆ ಈ ವೈವಸ್ವತಮನ್ವಂತರದ ಇಂದ್ರಪದವಿಯನ್ನು ಕೊಟ್ಟು ಮೂರು ಲೋಕದ ಆಧಿಪತ್ಯವನ್ನೂ ಒಪ್ಪಿಸಿ ಅವನಿಗೆ ಕರುಣಿಸಿದ್ದೆ. ಈ ನನ್ನ ವ್ಯವಸ್ಥೆಗೆ ವಿರುದ್ಧವಾಗಿ ನೀನು ಅವನತ್ರೈಲೋಕ್ಯಾಧಿಪತ್ಯವನ್ನು ಕಿತ್ತುಕೊಂಡು ನನ್ನ ವ್ಯವಸ್ಥೆಗೆ ಬಾಧೆ ತಂದದ್ದರಿಂದ ನಾನು ನಿನ್ನನ್ನು ಶಾಸನ ಮಾಡಬೇಕಾಯಿತು. ಈ ವಾಮನವೇಷದಿಂದ ನಿನ್ನನ್ನು ಬೇಡಿ ಭೂಮಿಯನ್ನು ಪಡೆದು ನನ್ನ ವ್ಯವಸ್ಥೆಗೆ ಅನುಗುಣವಾಗಿ ದೇವೇಂದ್ರನಿಗೆ ಕೊಟ್ಟಿದ್ದೇನೆ. ಇನ್ನು ಮೇಲೆ ನೀನು ನನ್ನ ಮಾತನ್ನು ಮನ್ನಿಸಿ ಸುತಳ ಎಂಬ ಹೆಸರಿನ ಪಾತಾಳ ಲೋಕಕ್ಕೆ ಹೋಗು. ಅಲ್ಲಿಯೇ ನೆಲೆಸು. ನನ್ನ ಅಪ್ಪಣೆಯನ್ನು ತಪ್ಪದೇ ಪಾಲಿಸು. ಆ ಪಾತಾಳ ಪ್ರದೇಶವು ನಿನಗೆ ವಾಸಿಸಲು ಅತ್ಯಂತ ರಮ್ಯವಾಗಿದೆ. ಅಲ್ಲಿ ಅಸುರರು ಮಾತ್ರವಲ್ಲ. ಅನೇಕ ದೇವತೆಗಳೂ ಅಲ್ಲಿ ನೆಲೆನಿಂತಿದ್ದಾರೆ. ಆ ಪಾತಾಳ ಲೋಕದಲ್ಲಿ ನೂರಾರು ಅರಮನೆಗಳು, ಸಾವಿರಾರು ಸಿರಿಮನೆಗಳೂ, ಬಿರಿದ ಹೊಂದಾವರೆಗಳಿಂದ ಸುಂದರವಾದ ಸರೋವರಗಳು ಅಲ್ಲಿ ಕಂಗೊಳಿಸುತ್ತಿವೆ. ಅರಳಿದ ಹೂಗಳಿಂದ ಬಾಗಿದ ಮರಗಳು. ತಿಳಿನೀರಿನ ತೊರೆಗಳು. ಇಂಥ ರಮ್ಯವಾದ ಆ ಪಾತಾಳ ಲೋಕದಲ್ಲಿ ದಾನವೇಶ್ವರನೇ, ನೀನು ಎಲ್ಲ ಭೋಗಗಳನ್ನು ಅನುಭವಿಸು.

೬೭೨. ಪ್ರೋತ್ಫುಲ್ಲ ಪಂಕಜ ಸರೋದ್ರುಮ ಶುದ್ಧಸರಿದ್ವರೇ ।
ಸುಗಂಧೀ ರೂಪಸಂಪನ್ನೋ ಹೇಮಾಭರಣಭೂಷಿತಃ ।

೬೭೩. ಸ್ರಕ್ಚಂದನಾದಿದಿಗ್ಧಾಂಗೋ ನೃತ್ಯಗೀತ ಮನೋಹರಃ ।
ಉಪಭುಂಕ್ಷ್ವ ಮಹಾಭೋಗಾನ್ವಿಪುಲಾನ್ ದಾನವೇಶ್ವರ ॥

೬೭೪. ಮಾಮಜ್ಞಯಾ ಬಲೇ ತತ್ರ ತಿಷ್ಠ ಸ್ತ್ರೀಶತಸಂವೃತಃ ।
ಯಾವತ್ ಸುರೈಶ್ಚ ವಿಪ್ರೈಶ್ಚ ವಿರೋಧಂ ತ್ವಂ ಕರಿಷ್ಯಸಿ ।

೬೭೫. ತಾನತ್ತ್ವಂ ಭುಂಕ್ಷ್ವ ಸಂಭೋಗಾನ್ಸರ್ವಕಾಮಸಮನ್ವಿತಾನ್ ।
ಯದಾ ಸುರೈಶ್ಚ ವಿಪ್ರೈಶ್ಚ ವಿರೋಧಂ ತ್ವಂ ಕರಿಷ್ಯಸಿ
ಬಂಧಕೃಚ್ಚ ತದಾ ಪಾಶೋ ದಾರುಣೋ ಘೋರ ದರ್ಶನಃ ।

ಬಲಿರುವಾಚ

೬೭೬. ತತ್ರಾಶನಂ ಮೇ ಪಾತಾಲೇ ಭಗವನ್ ಭವದಾಜ್ಞಯಾ ।
ಕಿಂ ಭವಿಷ್ಯತ್ಯುಪಾದಾನಮುಪಭೋಗೋಪಪಾದಕಮ್ ॥
ಅಪ್ಯಾಯಿತೋಽತೋ ದೇವೇಶ ಸ್ಮರೇಯಂ ತ್ವಾಮಹಂ ಸದಾ ।

ಶ್ರೀ ಭಗವಾನುವಾಚ

೬೭೭. ದಾನಾನ್ಯವಿಧಿದತ್ತಾನಿ ಶ್ರಾದ್ಧಾನ್ಯಶ್ರೋತ್ರಿಯಾಣಿ ಚ ।
ಹುತಾನ್ಯಶ್ರದ್ಧಯಾ ಯಾನಿ ತಾನಿ ದಾಸ್ಯಂತಿ ತೇ ಫಲಂ ॥

೬೭೮. ಅದಕ್ಷಿಣಾಸ್ತಥಾ ಯಜ್ಞಾಃ ಕ್ರಿಯಾಶ್ಚಾವಿಧಿನಾ ಕೃತಾಃ ।
ಫಲಾನಿ ತವ ದಾಸ್ಯಂತಿ ಅಧೀತಾನ್ಯವ್ರತಾನಿ ಚ ।

ಒಲುವು ಚೆಲುವುಗಳಿಂದ ಒಡಗೂಡಿದ ನೀನು ಅಲ್ಲಿ ಮೈಗೆ ಶ್ರೀಗಂಧವನ್ನು ಪೂಸಿಕೊಂಡು ಬಂಗಾರದ ಆಭರಣಗಳನ್ನು ಧರಿಸಿ ಆನಂದದಿಂದ ವಾಸ ಮಾಡು ಹಾಗೂ ಭೋಗಭಾಗ್ಯಗಳನ್ನು ಅನುಭವಿಸು. ಅಲ್ಲಿ ನನ್ನ ಆಜ್ಞೆಯಿಂದ ಬಲಿರಾಜನೇ, ನೂರಾರು ಜನ ಚೆಲುವೆಯರು ಒಲವಿನಿಂದ ನಿನ್ನ ಸೇವೆಯನ್ನು ಮಾಡುವರು. ಈ ಎಲ್ಲ ಸ್ತ್ರೀ ಸುಖವನ್ನೂ, ಐಶ್ವರ್ಯದ ಆನಂದವನ್ನೂ, ಅಧಿಕಾರದ ಗೌರವ ವನ್ನೂ ನನ್ನ ಆದೇಶದಂತೆ ನೀನು ನಿರಂತರವೂ, ನಿರಾತಂಕವಾಗಿ ಅನುಭವಿಸಬಹುದು.

ಆದರೆ ಬಲಿರಾಜ, ಒಂದು ಮಾತು ಮಾತ್ರ ನೆನಪಿರಲಿ. ನಿನ್ನ ಈ ಎಲ್ಲ ಪಾತಾಳ ಲೋಕದ ಭೋಗಭಾಗ್ಯಗಳು ನೀನು ಬ್ರಾಹ್ಮಣರ ಹಾಗೂ ದೇವತೆಗಳ ವಿರೋಧವನ್ನು ಮಾಡದಿದ್ದರೆ ಮಾತ್ರ ಉಳಿಯುವವು. ದೇವ ಬ್ರಾಹ್ಮಣರ ವಿರೋಧವನ್ನು ನೀನು ಕಟ್ಟಿಕೊಂಡರೆ ಈ ಎಲ್ಲ ಸುಖೋಪಭೋಗಗಳು ನಿನಗೆ ದೊರಕಲಾರವು. ಇಷ್ಟೇ ಅಲ್ಲ. ಈ ಅಧಿಕಾರ ಐಶ್ವರ್ಯಗಳೇ ನಿನಗೆ ಘೋರ ಪಾಶಗಳಾಗಿ ಬಂಧನಕ್ಕೆ ಕಾರಣವಾಗುತ್ತವೆ.''

**ಬಲಿರಾಜ** : ಭಗವನ್, ನಿನ್ನ ಅಪ್ಪಣೆಯಂತೆ ನಾನೇನೋ ಪಾತಾಳಕ್ಕೆ ಹೋಗುತ್ತೇನೆ. ಅಲ್ಲಿ ನನ್ನ ಆಹಾರವೇನು? ನನಗೆ ಭೋಗೋಪಭೋಗಗಳನ್ನು ಒದಗಿಸುವ ಸಾಧನವು ಅಲ್ಲಿ ಏನಿದೆ ? ಏನೇ ಆಗಲಿ. ದೇವರ ಒಡೆಯನೆ, ನಿನ್ನ ಅನುಗ್ರಹಪೂರ್ಣವಾದ ಅಪ್ಪಣೆಯಿಂದ ನನಗೆ ಅತ್ಯಾನಂದವಾಗಿದೆ. ನಿನ್ನನ್ನು ಎಂದೂ ನಾನು ಇನ್ನು ಮರೆಯಲಾರೆ. ಸದಾ ಸರ್ವದಾ ನಿನ್ನನ್ನು ಸ್ಮರಿಸುತ್ತಲೇ ಇರುತ್ತೇನೆ.

**ಪರಮಾತ್ಮ** : ಬಲಿರಾಜ, ಪಾತಾಳದಲ್ಲಿ ಇರುವ ನಿನಗೆ ಬೇಕಾದಷ್ಟು ಆಹಾರ. ಶಾಸ್ತ್ರದ ವಿಧಿಯನ್ನು ಬಿಟ್ಟು ನೀಡಿದ ದಾನಗಳ ಫಲವೆಲ್ಲವೂ ನಿನಗೇ ಬರುವದು. ಶ್ರೋತ್ರಿಯ ಬ್ರಾಹ್ಮಣನಿಲ್ಲದೆ ಮಾಡಿದ ಹೋಮಹವನಗಳ ಫಲಪುಣ್ಯಗಳೂ ನಿನಗೇ. ದಕ್ಷಿಣೆ ಇಲ್ಲದ ಯಜ್ಞ ಯಾಗಗಳು, ವಿಧಿ ಪೂರ್ವಕವಲ್ಲದ ಪುಣ್ಯ ಕಾರ್ಯಗಳು, ವ್ರತ ನಿಯಮಗಳಿಲ್ಲದ ಅಧ್ಯಯನಗಳು ತಮ್ಮ ಪುಣ್ಯಫಲಗಳನ್ನೆಲ್ಲ ನಿನಗೇ ನೀಡುತ್ತವೆ.

೬೭೯. ಉದಕೇನ ವಿನಾ ಪೂಜಾ ವಿನಾ ದರ್ಭೇಣ ಯಾಃ ಕ್ರಿಯಾಃ ।
ಆಜ್ಯೇನ ಚ ವಿನಾ ಹೋಮಾಃ ಫಲಂಃ ದಾಸ್ಯಂತಿ ತೇ ಬಲೇ ॥

೬೮೦. ಯಶ್ಚೇದಂ ಸ್ಥಾನಮಾಶ್ರಿತ್ಯ ಕ್ರಿಯಾಃ ಕಶ್ಚಿತ್ಕರಿಷ್ಯತಿ ।
ನ ತತ್ರ ಚಾಸುರೋ ಭಾಗೋ ಭವಿಷ್ಯತಿ ಕದಾಚನ ॥

೬೮೧. ಜ್ಯೇಷ್ಠಾಶ್ರಮಂ ಮಹಾಪುಣ್ಯಂ ತಥಾ ವಿಷ್ಣುಪದಂ ಹ್ರದಂ ।
ಯೇ ಚ ಶ್ರಾದ್ಧಾನಿ ಕುರ್ವಂತಿ ವ್ರತಂ ನಿಯಮಮೇವ ಚ ॥

೬೮೨. ಕ್ರಿಯಾ ಕೃತಾ ಚ ಯಾ ಕಾಚಿದ್ವಿಧಿನಾ ಚ ಮಹಾತ್ಮನಾ ।
ಸರ್ವಂ ತದಕ್ಷಯಂ ತಸ್ಯ ಭವಿಷ್ಯತಿ ನ ಸಂಶಯಃ ॥

೬೮೩. ಜ್ಯೇಷ್ಠಮಾಸೇ ಸಿತೇ ಪಕ್ಷೇ ಏಕಾದಶ್ಯಾಮುಪೋಷಿತಃ ।
ದ್ವಾದಶ್ಯಾಂ ವಾಮನಂ ದೃಷ್ಟ್ವಾ ಸ್ನಾತ್ವಾ ವಿಷ್ಣುಪದೇ ತಥಾ ।
ದತ್ವಾ ದಾನಂ ಯಥಾಶಕ್ತಿ ಪ್ರಾಪ್ನೋತಿ ಪರಮಂ ಪದಂ ॥

೬೮೫. ಬಲಯೇಽಮುಂ ವರಂ ದತ್ವಾ ಶಕ್ರಾಯಾಪಿ ತ್ರಿವಿಷ್ಟಪಂ ।
ವ್ಯಾಪಿನಾ ತೇನ ರೂಪೇಣ ಜಗಾಮಾದರ್ಶನಂ ಹರಿಃ ॥

೬೮೬. ಶಶಾಸ ಚ ಯಥಾಪೂರ್ವಮಿಂದ್ರಸ್ತ್ರೈಲೋಕ್ಯಪೂಜಿತಃ ।
ಅವಸಚ್ಚ ಯಥಾಸ್ಥಾನಂ ಬಲಿಃ ಪಾತಾಲಮಾಶ್ರಿತಃ ॥

೬೮೭. ಇತ್ಯೇತತ್ ಕಥಿತಂ ತಸ್ಯ ವಿಷ್ಣೋಃ ಮಾಹಾತ್ಮ್ಯಮುತ್ತಮಂ ।
ಶೃಣುಯಾದ್ಯೋ ವಾಮನಸ್ಯ ಸರ್ವಪಾಪೈಃ ಪ್ರಮುಚ್ಯತೇ ॥

೬೮೮. ಬಲಿ ಪ್ರಲ್ಹಾದ ಸಂವಾದಂ ಮಂತ್ರಿತಂ ಬಲಿಶುಕ್ರಯೋಃ ।
ಬಲೇರ್ವಿಷ್ಣೋಶ್ಚ ಕಥಿತಂ ಯೇ ಸ್ಮರಿಷ್ಯಂತಿ ಮಾನವಾಃ ।

ನೀರು ಇಲ್ಲದ ದೇವರ ಪೂಜೆ, ದರ್ಭೆ (ಪವಿತ್ರ) ಇಲ್ಲದ ಸತ್ಕಾರ್ಯ, ತುಪ್ಪವಿಲ್ಲದ ಹೋಮ ಮುಂತಾದವುಗಳಿಂದ ಬರುವ ಪುಣ್ಯವು ಯಜಮಾನನಿಗೆ ಹೋಗದೆ ನಿನಗೇ ಬಂದು ಸೇರುತ್ತದೆ. ಆದರೆ ನಾನು ನಿನಗೆ ವರಕೊಟ್ಟು ಅನುಗ್ರಹಿಸಿದ ಈ ಸ್ಥಾನದಲ್ಲಿ ನಿಂತು ಪುಣ್ಯಕಾರ್ಯಗಳನ್ನು ನೆರವೇರಿಸಿದರೆ ಮಾತ್ರ ಅದರ ಫಲವು ಅಸುರ ಭಾಗ ರೂಪದಿಂದ ನಿನಗೆ ಎಂದೂ ಬರುವದಿಲ್ಲ. ಮಹಾಪುಣ್ಯಕರವಾದ ಈ ಜ್ಯೇಷ್ಠಾಶ್ರಮಕ್ಕೆ ಬಂದು ಇಲ್ಲಿ ವಿಷ್ಣುವಿನ ತಾಣ ಎನಿಸಿದ ಈ ಸರೋವರದಲ್ಲಿ ಸ್ನಾನಮಾಡಿ ಶ್ರಾದ್ಧವನ್ನಾಗಲಿ ವ್ರತ ನಿಯಮಗಳನ್ನಾಗಲಿ ಅಥವಾ ಬೇರೆ ಯಾವುದೇ ಪುಣ್ಯಕಾರ್ಯವನ್ನಾಗಲಿ ವಿಧಿಪೂರ್ವಕವಾಗಿ ಮಾಡಿದರೆ ಅದೆಲ್ಲವೂ ಅಕ್ಷಯವಾಗುತ್ತದೆ. ಇದರಲ್ಲಿ ಸಂದೇಹವಿಲ್ಲ. ಜ್ಯೇಷ್ಠಮಾಸದ ಶುಕ್ಲಪಕ್ಷದ ಏಕಾದಶಿಯಂದು ಉಪವಾಸ ಮಾಡಿ ವಿಷ್ಣುಪದ ಎಂಬ ಈ ಸರೋವರದಲ್ಲಿ ಸ್ನಾನಮಾಡಿ ಶ್ರೀವಾಮನ ದೇವರ ದರ್ಶನ ತೆಗೆದುಕೊಂಡು ಯಥಾ ಶಕ್ತಿ ದಾನಮಾಡಿದರೆ ದಿವ್ಯ ಸದ್ಗತಿಯಾಗುವದು.

**ಲೋಮಹರ್ಷಣ** : ಹೀಗೆ ಬಲಿರಾಜನಿಗೆ ವರವನ್ನೂ, ದೇವೇಂದ್ರನಿಗೆ ಸ್ವರ್ಗವನ್ನೂ ಕೊಟ್ಟು ಆ ವಾಮನ ರೂಪಿಯಾದ ಶ್ರೀ ವಿಷ್ಣು ಜಗದಗಲವನ್ನೆಲ್ಲ ತುಂಬಿ ಬ್ರಹ್ಮಾಂಡದುದ್ದಕ್ಕೂ ಬೆಳೆದು ನಿಂತ ತನ್ನ ವಿರಾಡ್ರೂಪವನ್ನು ಉಪಸಂಹರಿಸಿ ಅಲ್ಲಿಂದ ಅದೃಶ್ಯನಾದನು. ದೇವೇಂದ್ರನು ಮೊದಲಿನಂತೆ ಮೂರು ಲೋಕಗಳಿಂದ ವಂದಿತನಾಗಿ ತ್ರೈಲೋಕ್ಯ ಸಾಮ್ರಾಜ್ಯವನ್ನು ಆಳತೊಡಗಿದನು. ಬಲಿರಾಜನು ಭಗವಂತನ ಆದೇಶದ ಮೇರೆಗೆ ಪಾತಾಳಲೋಕಕ್ಕೆ ಹೋಗಿ ನಿರ್ದಿಷ್ಟಸ್ಥಾನದಲ್ಲಿ ವಾಸಮಾಡಿದನು. ಶ್ರೀವಿಷ್ಣುವಿನ ಅತ್ಯುತ್ತಮವಾದ ಈ ಎಲ್ಲ ಮಹಾಮಹಿಮೆಯನ್ನು ನಾನು ಈವರೆಗೆ ನಿವೇದಿಸಿದ್ದೇನೆ. ಇದನ್ನು ಕೇಳಿದವರ ಕಲ್ಮಶವೆಲ್ಲ ಕಳೆದುಹೋಗುವದು, ಪಾಪಗಳೆಲ್ಲ ಕಳೆದುಹೋಗುವವು.

ಈ ವಾಮನ ಚರಿತ್ರದಲ್ಲಿಯ ಬಲಿಚಕ್ರವರ್ತಿಯ ಹಾಗೂ ಪ್ರಲ್ಹಾದ ರಾಜರ ನಡುವಿನ ಸಂಭಾಷಣೆಯನ್ನು ಶುಕ್ರಾಚಾರ್ಯ ಹಾಗೂ ಬಲಿರಾಜರ ಮಂತ್ರಾಲೋಚನೆಯನ್ನು, ಬಲಿ ಹಾಗೂ ವಾಮನ ದೇವರು ಆಡಿದ ಮಾತುಗಳನ್ನು ಸ್ಮರಣೆ ಮಾಡುವ ಮಾನವರಿಗೆ ಬೇನೆಗಳು ಬರುವದಿಲ್ಲ. ಮನಸ್ಸಿಗೆ ಚಿಂತೆಗಳು ಉಂಟಾಗುವದಿಲ್ಲ. ಅಜ್ಞಾನ ಮೋಹಗಳು ಮನಸ್ಸಿಗೆ ಮೌಢ್ಯವನ್ನು ಉಂಟು ಮಾಡುವದಿಲ್ಲ. ಪಾಪವಂತೂ ಅವರ ಸಮೀಪದಲ್ಲಿ ಸುಳಿಯುವದಿಲ್ಲ.

೬೮೯. ನಾಧಯೋ ವ್ಯಾಧಯಸ್ತೇಷಾಂ ನ ಚ ಮೋಹಾಕುಲಂ ಮನಃ ।
ಭವಿಷ್ಯತಿ ದ್ವಿಜಶ್ರೇಷ್ಠಾಃ ಪಾಪಃ ತಸ್ಯ ಕದಾಚನ ॥

೬೯೦. ಚ್ಯುತರಾಜ್ಯೋ ನಿಜಂ ರಾಜ್ಯ ಮಿಷ್ಟಪ್ರಾಪ್ತಿಂ ವಿಯೋಗವಾನ್।
ಸಮಾಪ್ನೋತಿ ಮಹಾಭಾಗ ನರಃ ಶ್ರುತ್ವಾ ಕಥಾಮಿಮಾಂ ॥

೬೯೧. ಬ್ರಾಹ್ಮಣೋ ವೇದಮಾಪ್ನೋತಿ ಜಯತಿ ಕ್ಷತ್ರಿಯೋ ಮಹೀಂ ।
ವೈಶ್ಯೋ ಧನಸಮೃದ್ಧಿಂ ಚ ಶೂದ್ರಃ ಸುಖಮವಾಪ್ನುಯಾತ್
ವಾಮನಸ್ಯ ಚ ಮಾಹಾತ್ಮ್ಯಂ ಶ್ವಣ್ವನ್ ಪಾಪೈಃ ಪ್ರಮುಚ್ಯತೇ ।

ರಾಜ್ಯಭ್ರಷ್ಟರಾದವರು ಈ ವಾಮನಾವತಾರದ ಚರಿತ್ರೆಯನ್ನು ಕೇಳಿದರೆ ಕಳೆದು ಹೋದ ತನ್ನ ರಾಜ್ಯವನ್ನು ಮರಳಿ ಪಡೆಯುತ್ತಾರೆ. ಅಗಲಿದವರು ಆಪ್ತೇಷ್ಟರಿಂದ ಮೇಲನವನ್ನು ಹೊಂದುತ್ತಾರೆ. ಈ ವಾಮನ ಮಹಾತ್ಮೆಯ ಶ್ರವಣದಿಂದ ಬ್ರಾಹ್ಮಣರಿಗೆ ವೇದಜ್ಞಾನ ಉಂಟಾಗುತ್ತದೆ. ಕ್ಷತ್ರಿಯನಿಗೆ ಭೂಮಂಡಲದ ವಿಜಯವು ಪ್ರಾಪ್ತವಾಗುವದು. ವೈಶ್ಯನಿಗೆ ದುಡ್ಡಿನ ಸಮೃದ್ಧಿ, ಶೂದ್ರನಿಗೂ ಅತ್ಯಂತ ಸುಖವು ಉಂಟಾಗುವುದು. ಎಲ್ಲ ಜಾತಿ ಜನಾಂಗದ ಜನರೂ ಈ ವಾಮನ ಕಥಾಶ್ರವಣ ಮಾಡಿ ತಮ್ಮ ಪಾಪಗಳನ್ನು ಕಳೆದುಕೊಳ್ಳುತ್ತಾರೆ.

ವಾಮನ ಮಹಾಪುರಾಣದಲ್ಲಿ ವಾಮನ ತ್ರಿವಿಕ್ರಮನಾದ ಎಂಬ ಮೂವತ್ತೊಂದನೇಯ ಅಧ್ಯಾಯವು ಮುಗಿದುದು

—o—

ಸರಸ್ವತೀ ಸ್ತೋತ್ರ

ಅಧ್ಯಾಯ - ೩೨

೧೯೨. ಕಥಮೇಷಾ ಸಮುತ್ಪನ್ನಾ ನದೀನಾಮುತ್ತಮಾ ನದೀ ।
ಸರಸ್ವತೀ ಮಹಾಭಾಗಾ ಕುರುಕ್ಷೇತ್ರಾನುಯಾಯಿನೀ ॥

೧೯೩. ಕಥಂ ಚ ಸರ ಅಸಾದ್ಯ ಕೃತ್ವಾ ತೀರ್ಥಾನಿ ಪಾರ್ಶ್ವತಃ ।
ಪ್ರಯಾತಾ ಪಶ್ಚಿಮಾಮಾಶಾಂ ದೃಶ್ಯಾದೃಶ್ಯಗತಿಃ ಶುಭಾ ।
ಏತದ್ವಿಸ್ತರತೊ ಬ್ರೂಹಿ ತೀರ್ಥಂ ಬ್ರಹ್ಮವಿದಾಂ ವರ ।

ಲೋಮಹರ್ಷಣ ಉವಾಚ

೧೯೪. ಪ್ಲಕ್ಷ ವೃಕ್ಷಾತ್ಸಮುದ್ಭೂತಾ ಸರಿಚ್ಛ್ರೇಷ್ಠಾ ಸನಾತನೀ ।
ಸರ್ವಪಾಪಕ್ಷಯಕರೀ ಸ್ಮರಣಾದಪಿ ನಿತ್ಯಶಃ ।

೧೯೫. ಸೈಷಾ ಶೈಲಸಹಸ್ರಾಣಿ ವಿದಾರ್ಯ ಚ ಮಹಾನದೀ ।
ಪ್ರವಿಷ್ಟಾ ಪುಣ್ಯತೋಯೈಷಾ ವನಂ ದ್ವೈತಮಿತಿ ಶ್ರುತಂ ॥

೧೯೬. ತಸ್ಮಿನ್ ಪ್ಲಕ್ಷೇ ಸ್ಥಿತಾಂ ದೃಷ್ಟ್ವಾ ಮಾರ್ಕಂಡೇಯೋ ಮಹಾಮುನಿಃ।
ಪ್ರಣಿಪತ್ಯ ತದಾ ಮೂರ್ಧ್ನಾ ತುಷ್ಟಾವಾಥ ಸರಸ್ವತೀಂ ॥

೧೯೭. ತ್ವಂ ದೇವಿ ಸರ್ವಭೂತಾನಾಂ ಮಾತಾ ವೇದಾರಣಿಃ ಶುಭಾ ।
ಸದಸದ್ದೇವಿ ಯತ್ಕಿಂಚಿನ್ಮೋಕ್ಷಬೋಧಾಯ ಯತ್ಪದಂ ।

೧೯೮. ಯಥಾ ಜಲಂ ಸಾಗರೇ ಹಿ ತಥಾ ತತ್ತ್ವಯಿ ಸಂಸ್ಥಿತಂ ।
ಅಕ್ಷರಂ ಪರಮಂ ಬ್ರಹ್ಮ ವಿಶ್ವಂ ಚೈತತ್ಕ್ಷರಾತ್ಮಕಂ ॥

೧೯೯. ದಾರುಣ್ಯವಸ್ಥಿತೋ ವಹ್ನಿರ್ಭೂಮೌ ಗಂಧೋ ಯಥಾ ಧ್ರುವಂ
ತಥಾ ತ್ವಯಿ ಸ್ಥಿತಂ ಬ್ರಹ್ಮ ಜಗಚ್ಚೈತದಶೇಷತಃ ॥

೨೦೦. ಓಂಕಾರಾಕ್ಷರ ಸಂಸ್ಥಾನಂ ಯತ್ರ ದೇವಿ ಸ್ಥಿರಾಸ್ಥಿರಂ ।
ತತ್ರ ಮಾತ್ರಾತ್ರಯಂ ಸರ್ವಮಸ್ತಿ ಯದ್ದೇವಿ ನಾಸ್ತಿ ಚ ॥

೨೦೧. ತ್ರಯೋ ಲೋಕಾ ಸ್ತ್ರಯೋವೇದಾ ಸ್ತ್ರೈವಿದ್ಯಂ ಪಾವಕತ್ರಯಂ
ತ್ರೀಣಿ ಜ್ಯೋತೀಂಷಿ ವರ್ಗಾಶ್ಚ ತ್ರಯೋ ಧರ್ಮಾದಯಃಸ್ತಥಾ

೨೦೨. ತ್ರಯೋ ಗುಣಾಃ ತ್ರಯೋ ವರ್ಣಾಃ ತ್ರಯೋ ವೇದಾಃ ತಥಾಕ್ರಮಾತ್।
ತ್ರಿಧಾತವಸ್ತಥಾವಸ್ಥಾ ಪಿತರಶ್ಚಾಣಿಮಾದಯಃ ॥

ಋಷಿಗಳು ಲೋಮಹರ್ಷಣರಿಗೆ ಮತ್ತೆ ಪ್ರಶ್ನೆ ಮಾಡುತ್ತಾರೆ:

''ಮಹಾನುಭಾವರೇ, ನದಿಗಳಲ್ಲಿ ಉತ್ತಮ ನದೀ ಎಂದು ಪ್ರಸಿದ್ಧವಾಗಿದೆ, ಈ ಸರಸ್ವತೀ ನದೀ. ಕುರುಕ್ಷೇತ್ರದ ಪುಣ್ಯಭೂಮಿಯಲ್ಲಿ ಹರಿದುಬರುವ ಈ ಹಿರಿ ಹೊಳೆ ಹುಟ್ಟಿದ್ದು ಹೇಗೆ? ಮುಂದೆ ಅದು ಪೃಥೂದಕ ಸರೋವರವನ್ನು ಹೊಂದಿ ತನ್ನ

ಇಕ್ಕೆಲಗಳಲ್ಲಿಯೂ ದಿವ್ಯತೀರ್ಥಗಳನ್ನು ನಿರ್ಮಿಸಿ ಪಡುವಣ ನಿಟ್ಟಿಗೆ ಹೇಗೆ ಪ್ರವಹಿಸಿತು? ಅದರ ಪ್ರವಾಹದ ಗತಿಯು ಮುಂದೆ ಕೆಲವು ಕಡೆ ಕಂಡು ಹಲವೆಡೆ ಕಾಣದೆ ದೃಶ್ಯಾದೃಶ್ಯಗತಿಯಿಂದ ಹೇಗೆ ಹರಿದುಹೋಯಿತು! ಇದೆಲ್ಲ ಈ ತೀರ್ಥ ಸಮಾಚಾರವನ್ನು ಬ್ರಹ್ಮಬಲ್ಲಿದರಲ್ಲಿ ಉತ್ತಮರಾದ ತಾವು ನನಗೆ ತಿಳಿಸಬೇಕು.

**ಲೋಮಹರ್ಷಣ :** ಕುರುಕ್ಷೇತ್ರದಲ್ಲಿ ಹರಿಯುವ ನದಿಗಳಲ್ಲಿ ಈ ಸರಸ್ವತಿಯು ಸರ್ವಶ್ರೇಷ್ಠವಾಗಿದೆ. ಇದು ಹುಟ್ಟಿದ್ದು ಒಂದು ಆಲದ ಮರದಿಂದ. ಅನುದಿನವೂ ಇದನ್ನು ನೆನೆದ ಮಾತ್ರಕ್ಕೆ ಪಾಪಗಳೆಲ್ಲವೂ ಪರಿಹಾರವಾಗುವವು. ಮುಂದೆ ಸಹಸ್ರಾರು ಬೆಟ್ಟಗಳನ್ನು ಕೊರೆದು ಹರಿದು ಮುನ್ನಡೆದ ಈ ಮಹಾನದಿಯು ತನ್ನ ಪುಣ್ಯಕರವಾದ ನೀರಿನ ವೇಗದಿಂದ ದ್ವೈತವನ ಎಂದು ಹೆಸರಾದ ಕಗ್ಗಾಡಿನಲ್ಲಿ ನುಗ್ಗಿ ಹರಿಯಿತು.

ಆಲದ ಮರದಲ್ಲಿ ಉದ್ಭವಿಸುವಾಗಲೇ ಈ ನದಿಯು ಉಗಮಾಗಮಗಳನ್ನು ಕಂಡುಕೊಂಡ ಮಾರ್ಕಂಡೇಯ ಮಹಾಮುನಿಯು ಆಗಲೇ ಈ ನದಿಗೆ ನಮಿಸಿದನು. ಹಣೆ ಮಣಿಸಿದನು. ಭಕ್ತಿಯಿಂದ ನುಡಿದನು -

೭೦೩. ಏತನ್ಮಾತ್ರಾತ್ರಯಂ ದೇವಿ ತವ ರೂಪಂ ಸರಸ್ವತಿ ।
ವಿಭಿನ್ನದರ್ಶನಾ ಆದ್ಯಾ ಬ್ರಹ್ಮಣೋ ಹಿ ಸನಾತನಾಃ ॥

೭೦೪. ಸೋಮಸಂಸ್ಥಾ ಹವಿಸ್ಸಂಸ್ಥಾಃ ಪಾಕಸಂಸ್ಥಾಃ ಸನಾತನಾಃ ।
ತಾಃ ತ್ವದುಚ್ಚಾರಣಾದ್ದೇವಿ ಗೀಯಂತೇ ಬ್ರಹ್ಮವಾದಿಭಿಃ ॥

೭೦೫. ಅನಿರ್ದೇಶ್ಯಂ ತಥಾಚಾನ್ಯದರ್ಧಮಾತ್ರಾಶ್ರಿತಂ ಪರಂ ।
ಅವಿಕಾರ್ಯಕ್ಷಯಂ ದಿವ್ಯಂ ಪರಿಣಾಮವಿವರ್ಜಿತಂ ॥

೭೦೬. ತಥೈವ ತತ್ಪರಂ ರೂಪಂ ಯನ್ನಶಕ್ಯಂ ಮಯೋದಿತಂ ।
ನಚಾನ್ಯೇನ ತಥಾ ಜಿಹ್ವಾ ತಾಲ್ವೋಷ್ಠಾದಿಭಿರುಚ್ಯತೇ ॥

೭೦೭. ಸ ವಿಷ್ಣುಃ ಸ ಶಿವೋ ಬ್ರಹ್ಮಾ ಚಂದ್ರಾರ್ಕ ಜ್ಯೋತಿರೇವ ಚ।
ವಿಶ್ವಾವಾಸಂ ವಿಶ್ವರೂಪಂ ವಿಶ್ವಾತ್ಮಾನಂ ಮಹೇಶ್ವರಂ ॥

೭೦೮. ಸಾಂಖ್ಯ ಸಿದ್ಧಾಂತ ವೇದೋಕ್ತಂ ಬಹುಶಾಖಾಸ್ಥಿರೀಕೃತಂ ।
ಅನಾದಿ ಮಧ್ಯ ನಿಧನಂ ಸದಸಚ್ಚ ಸದೈವ ತು ।

೭೦೯. ಏಕಂ ತ್ವನೇಕಧಾಪ್ಯೇಕಂ ಭಾವಭೇದ ಸಮಾಶ್ರಿತಂ ।
ಅನಾಖ್ಯ ಷಡ್ಗುಣಾಖ್ಯಂ ಚ ಬಹ್ವಾಖ್ಯಂ ತ್ರಿಗುಣಾಶ್ರಯಂ ॥

೭೧೦. ನಾನಾಶಕ್ತಿ ವಿಭಾವಜ್ಞಂ ನಾನಾಶಕ್ತಿ ವಿಭಾವಕಂ ।
ಸುಖಾತ್ಸೌಖ್ಯಂ ಮಹಾಸೌಖ್ಯಂ ರೂಪಂ ತತ್ವಗುಣಾತ್ಮಕಂ ॥

೭೧೧. ಏವಂ ದೇವಿ ತ್ವಯಾ ವ್ಯಾಪ್ತಂ ನಿಷ್ಕಲಂ ಸಕಲಂ ಜಗತ್ ।
ಅದ್ವೈತಾವಸ್ಥಿತಂ ಬ್ರಹ್ಮ ಯಚ್ಚ ದ್ವೈತೇ ವ್ಯವಸ್ಥಿತಂ ॥

೭೧೨. ಯದ್ವಾಮೂರ್ತಂ ಯಚ್ಚ ಮೂರ್ತಂ ಸಮಸ್ತಂ ।
ಯದ್ವಾ ಭೋತೇಷ್ವೇವ ಕರ್ಮಾಸ್ತಿ ಕಿಂಚಿತ್ ॥
ಯದ್ವಾ ದೇವೇಷ್ವಸ್ತಿ ಲೇಖೆನ್ಯತೋ ವಾ ।
ತತ್ಸಂಬದ್ಧಂ ತ್ವಕ್ಷರೈಃ ವ್ಯಂಜನೈಶ್ಚ ॥

೭೧೩. ಏವಂ ಸ್ತುತಾ ತದಾ ದೇವೀ ವಿಷ್ಣೋರ್ಜಿಹ್ವಾ ಸರಸ್ವತೀ ।
ಪ್ರತ್ಯುವಾಚ ಮಹಾತ್ಮಾನಂ ಮಾರ್ಕಂಡೇಯಂ ಮಹಾಮುನಿಂ
ಯತ್ರ ತ್ವಂ ನೇಷ್ಯಸೇ ವಿಪ್ರ ತತ್ರ ಯಾಸ್ಯಾಮ್ಯತಂದ್ರಿತಾ ॥

## ಮಾರ್ಕಂಡೇಯ ಉವಾಚ

೭೧೪. ಆದ್ಯಂ ಬ್ರಹ್ಮಸರಂ ಪುಣ್ಯಂ ತತೋ ನಾಗಹ್ರದಂ ಸ್ಮೃತಂ ।
ಕುರುಣಾ ಕೃಷಿಣಾ ಕೃಷ್ಟಂ ಕುರುಕ್ಷೇತ್ರಂ ತತಃ ಸ್ಮೃತಂ ।
ತಸ್ಯ ಮಧ್ಯೇನ ಯಾಹಿ ಪುಣ್ಯಾ ಪುಣ್ಯಜಲಾವಹಾ ॥

''ಹೇ, ದೇವಿಯೇ, ನೀನು ಲೋಕಕ್ಕೆಲ್ಲ ತಾಯಿಯಂತಿರುವಿ. ಸಜ್ಜನರ ಮೋಕ್ಷಕ್ಕೆ ಸಾಧನಳಾಗಿರುವಿ. ಸಮುದ್ರದಂತೆ ನಿನ್ನಲ್ಲಿ ಅಪಾರವಾದ ನೀರು ಇರುವದು. ಕ್ಷರಾಕ್ಷರಾತ್ಮಕವಾದ ಬ್ರಹ್ಮನು ನಿನ್ನಲ್ಲಿ ಅಡಕವಾಗಿರುವನು. ಆದರೆ ಕಟ್ಟಿಗೆಯಲ್ಲಿಯ ಅಗ್ನಿಯಂತೆ ಆತನು ಅದೃಶ್ಯನಾಗಿರುವನು. ಓಂಕಾರವೆಂಬ ಶಬ್ದದಲ್ಲಿ ಮೂರು ಅಕ್ಷರಗಳು ಕೂಡಿದಂತೆ ನಿನ್ನಲ್ಲಿ ಲೋಕತ್ರಯಗಳ, ವಿದ್ಯಾತ್ರಯಗಳ, ಅಗ್ನಿತ್ರಯಗಳ, ಸಮಾವೇಶವು ಇರುವದು. ಸತ್ವ, ರಜ, ತಮ ಎಂಬ ಮೂರು ಗುಣಗಳು, ಋಗ್, ಯಜುರ್, ಅಥರ್ವ ಎಂಬ ಮೂರು ವೇದಗಳು, ವಾತ, ಪಿತ್ತ, ಕಫ ಎಂಬ ಮೂರು ಧಾತುಗಳು, ಇವೆಲ್ಲವೂ, ಹೇ ಸರಸ್ವತೀ ದೇವಿಯೇ ನಿನ್ನ ರೂಪಗಳು. ನಿನ್ನ ಹೆಸರಿನ ಉಚ್ಚಾರಣೆ ಮಾಡುವದರಿಂದ ಸೋಮಸಂಸ್ಥಾ, ಹವಿಸ್ಸಂಸ್ಥಾ, ಪಾಕಸಂಸ್ಥಾ ಎಂಬ ಯಜ್ಞ ಕಾರ್ಯಗಳಿಂದುಂಟಾಗುವ ಲಾಭವು ಆಗುವದು. ಶಬ್ದಗಳಿಂದ ಹೇಳಲಿಕ್ಕೆ ಬರದೇ ಇದ್ದ ದೇವರ ಸ್ವರೂಪವು ಸರ್ವಥಾ ವಿಕಾರ ಶೂನ್ಯವಾದದು ಹಾಗೂ ಕ್ಷರಾಕ್ಷರ ಪ್ರಪಂಚಕ್ಕಿಂತ ಶ್ರೇಷ್ಠವಾದ ಯಾವುದನ್ನು ನಮ್ಮ ಶಬ್ದ ಶಕ್ತಿಯಿಂದ ವರ್ಣಿಸಲು ಸಾಧ್ಯವಿಲ್ಲವೋ ಅದೇ ತತ್ವವೇ ವಿಷ್ಣು ಪರಮಾತ್ಮವು. ಆತನೇ ಶಿವ, ಬ್ರಹ್ಮ, ಸೂರ್ಯ, ಚಂದ್ರ, ಮೊದಲಾದ ದೇವತೆಗಳಲ್ಲಿ ಅಂತಿರ್ಯಾಮಿಯಾಗಿ ನಿಂತುಕೊಂಡು ವಿಶ್ವ ಚಾಲಕನಾಗಿ ಇರುವನು. ಸಾಂಖ್ಯ ಸಿದ್ಧಾಂತವು, ವೇದೋಪನಿಷತ್ತುಗಳು ಅನಾದ್ಯನಂತನಾದ ಪರಮಾತ್ಮನನ್ನು ವರ್ಣಿಸಿವೆ. ವಿಷ್ಣುವಿನ ಸ್ವರೂಪವು ಒಂದೇ ಆದರೂ ಅನೇಕ ವಿಧದಲ್ಲಿ ಕಂಡು ಬರುವುದು. ಪ್ರಾಕೃತ ಗುಣಗಳಿಗೆ ಆತನು ಕಾರಣೀಭೂತನಾದರೂ ಅವುಗಳ ವಿಕಾರ ಆತನಲ್ಲಿರುವದಿಲ್ಲ. ಸುಖಗಳಲ್ಲಿಯ ಮಹಾಸುಖ ಸ್ವರೂಪಿಯಾದ ಬ್ರಹ್ಮ ತತ್ವವು ಸರ್ವತ್ರ ವ್ಯಾಪ್ತವಾಗಿರುವದು. ಹೇ ಸರಸ್ವತೀ ದೇವಿಯೇ, ನೀನೂ ಕೂಡ ಆ ಬ್ರಹ್ಮ ತತ್ವದಂತೆ ವ್ಯಾಪ್ತವಾಗಿರುವೆ. ನಿತ್ಯಾನಿತ್ಯ ವಸ್ತುಗಳ, ಸ್ಥೂಲ ಸೂಕ್ಷ್ಮ ವಸ್ತುಗಳ, ಭೂಮಿ ಅಂತರಿಕ್ಷಗಳಲ್ಲಿ ಇರುವ ವಸ್ತುಗಳ, ದೃಶ್ಯ ಸ್ವರೂಪ ನೀನಾಗಿರುವಿ. ಜಗತ್ತಿನಲ್ಲಿ ಕಾಣುವ

ಮೂರ್ತಾಮೂರ್ತ ವಸ್ತುಗಳ ಅಥವಾ ದೇವ ದಾನವರಲ್ಲಿ ಕಂಡುಬರುವ ಸ್ಥೂಲ ವಸ್ತುಗಳ ಸ್ವರೂಪವು ಹೇ ದೇವಿಯೇ, ನೀನಾಗಿರುವಿ. ಹೇ ಸರಸ್ವತಿಯೇ, ನೀನು ವಿಷ್ಣುವಿನ ನಾಲಿಗೆಯ ಸ್ವರೂಪಳಾಗಿರುವಿ. ಹೀಗೆ ಸ್ತೋತ್ರ ಮಾಡಿರುವ ಮಾರ್ಕಂಡೇಯ ಮುನಿಯನ್ನು ಕುರಿತು ಸರಸ್ವತಿಯು ಅಂದಳು - "ನೀನು ನನ್ನನ್ನು ಎಲ್ಲಿ ಕರೆದುಕೊಂಡು ಹೋಗುವಿಯೋ ಅಲ್ಲಿಗೆ ಆಲಸ್ಯ ವಿಲ್ಲದೇ ಬರುವೆನು." ಮಾರ್ಕಂಡೇಯರು ಆಗ "ಮೊಟ್ಟ ಮೊದಲು ನೀನು ಪುಣ್ಯಕರವಾದ ಬ್ರಹ್ಮಸರೋವರಕ್ಕೆ ಹೋಗಬೇಕು. ಆಮೇಲೆ ನಾಗ ಸರೋವರಕ್ಕೆ ಆಗಮಿಸಬೇಕು. ಅನಂತರ ಕುರು ಎಂಬ ಋಷಿಯಿಂದ ನೇಗಿಲ ಹೊಡೆಯಲ್ಪಟ್ಟ ಪ್ರದೇಶಕ್ಕೆ ಅಂದರೆ ಕುರುಕ್ಷೇತ್ರಕ್ಕೆ ಹೋಗಬೇಕು. ಮಧ್ಯದಲ್ಲಿ ನಿನ್ನ ಗತಿಯು ಚ್ಯುತಿಯನ್ನು ಹೊಂದುವದು ಬೇಡ" ಎಂದು ಹೇಳಿದರು.

ವಾಮನ ಮಹಾಪುರಾಣದಲ್ಲಿ ಸರಸ್ವತೀ ಸ್ತೋತ್ರ ಎಂಬ ಮೂವತ್ತೆರಡನೇಯ ಅಧ್ಯಾಯವು ಮುಗಿದುದು.



## ಸರಸ್ವತೀ ತೀರ - ಊಬ್ರಹ್ಮಜ್ಞಾನ ಅಪಾರ | ಅಧ್ಯಾಯ - ೩೩

೭೧೫. ಇತ್ಯೃಷೇರ್ವಚನಂ ಶ್ರುತ್ವಾ ಮಾರ್ಕಂಡೇಯಸ್ಯ ಧೀಮತಃ ।
ನದೀ ಪ್ರವಾಹ ಸಂಯುಕ್ತಾ ಕುರುಕ್ಷೇತ್ರಂ ವಿವೇಶ ಹ ॥

೭೧೬. ತತ್ರ ಸಾರಂತುಕಂ ಪಾಪ್ಯ ಪುಣ್ಯತೋಯಾ ಸರಸ್ವತೀ ।
ಕುರುಕ್ಷೇತ್ರಂ ಸಮಾಪ್ಲಾವ್ಯ ಪ್ರಯಾತಾ ಪಶ್ಚಿಮಾಂ ದಿಶಂ ॥

೭೧೭. ತತ್ರ ತೀರ್ಥಸಹಸ್ರಾಣಿ ಋಷಿಭಿಸ್ಸೇವಿತಾನಿ ಚ ।
ತಾನ್ಯಹಂ ಕೀರ್ತಯಿಷ್ಯಾಮಿ ಪ್ರಸಾದಾತ್ಪರಮೇಷ್ಠಿನಃ ॥

೭೧೮. ತೀರ್ಥಾನಾಂ ಸ್ಮರಣಂ ಪುಣ್ಯಂ ದರ್ಶನಂ ಪಾಪನಾಶನಂ ।
ಸ್ನಾನಂ ಪುಣ್ಯಕರಂ ಪ್ರೋಕ್ತಂ ಅಪಿ ದುಷ್ಕೃತ್ಯಕಾರಿಣಃ ॥

೭೧೯. ಯೇ ಸ್ಮರಿಷ್ಯಂತಿ ತೀರ್ಥಾನಾಂ ದೇವತಾಃ ಪ್ರೀಣಯಂತಿ ಚ ।
ಸ್ನಾಂತಿ ಚ ಶ್ರದ್ಧಧಾನಾಶ್ಚ ತೇ ಯಾಂತಿ ಪರಮಾಂ ಗತಿಂ ॥

೭೨೦. ಅಪವಿತ್ರಃ ಪವಿತ್ರೋ ವಾ ಸರ್ವಾವಸ್ಥಾಂ ಗತೋಪಿ ವಾ ।
ಯಃ ಸ್ಮರೇತ್ಪುಂಡರೀಕಾಕ್ಷಂ ಸ ಬಾಹ್ಯಾಭ್ಯಂತರಃ ಶುಚಿಃ ॥

೭೨೧. ಕುರುಕ್ಷೇತ್ರಂ ಗಮಿಷ್ಯಾಮಿ ಕುರುಕ್ಷೇತ್ರೇ ವಸಾಮ್ಯಹಂ ।
ಅಪ್ಯೇತಾಂ ವಾಚಮುತ್ಸೃಜ್ಯ ಸರ್ವಪಾಪೈಃ ಪ್ರಮುಚ್ಯತೇ ॥

೭೨೨. ಬ್ರಹ್ಮಜ್ಞಾನಂ ಗಯಾಶ್ರಾದ್ಧಂ ಗೋಗ್ರಹೇ ಮರಣಂ ಧ್ರುವಂ ।
ವಾಸಃ ಪುಂಸಾಂ ಕುರುಕ್ಷೇತ್ರೆ ಮುಕ್ತಿರುಕ್ತಾ ಚತುರ್ವಿಧಾ ॥

೭೨೩. ಸರಸ್ವತೀ ದೃಷದ್ವತ್ಯೋಃ ದ್ವಯೋರ್ನದ್ಯೋರ್ಯದಂತರಂ ।
ತಂ ದೇವ ನಿರ್ಮಿತಂ ದೇಶಂ ಬ್ರಹ್ಮಾವರ್ತಂ ಪ್ರಚಕ್ಷತೇ ॥

೭೨೪. ದೂರಸ್ಥೋಪಿ ಕುರುಕ್ಷೇತ್ರಂ ಗಮಿಷ್ಯಾಮಿ ವಸಾಮ್ಯಹಂ ।
ಏವಂ ಯಃ ಸತತಂ ಬ್ರೂಯಾತ್ ಸೋಪಿ ಪಾಪೈಃ ಪ್ರಮುಚ್ಯತೆ॥

೭೨೫. ತತ್ರೈವ ಚ ವಸನ್ ಧೀರಃ ಸರಸ್ವತ್ಯಾಸ್ತಟೇ ಸ್ಥಿತಃ ।
ತಸ್ಯ ಜ್ಞಾನಂ ಬ್ರಹ್ಮಮಯಂ ಭವಿಷ್ಯತಿ ನ ಸಂಶಯಃ ॥

೭೨೬. ದೇವತಾ ಋಷಯಃ ಸಿದ್ಧಾಃ ಸೇವಂತೆ ಕುರುಜಾಂಗಲಂ ।
ತಸ್ಯ ಸಂಸೇವನಾನ್ನಿತ್ಯಂ ಬ್ರಹ್ಮ ಚಾತ್ಮನಿ ಪಶ್ಯತಿ ॥

೭೨೭. ಚಂಚಲಂ ಹಿ ಮನುಷ್ಯತ್ವಂ ಪ್ರಾಪ್ಯ ಯೇ ಮೋಕ್ಷಕಾಂಕ್ಷಿಣಃ ।
ವಸಂತಿ ನಿಯತಾತ್ಮಾನೋ ಯೇಪಿ ದುಷ್ಕೃತ ಕಾರಿಣಃ ॥

೭೨೮. ತೇ ವಿಮುಕ್ತಾಶ್ಚ ಕಲುಷೈಃ ಅನೇಕೈರ್ಜನ್ಮ ಸಂಭವೈಃ ।
ಪಶ್ಯಂತಿ ನಿರ್ಮಲಂ ದೇವಂ ಹೃದಯಸ್ಥಂ ಸನಾತನಂ ॥

೭೨೯. ಬ್ರಹ್ಮವೇದಿಃ ಕುರುಕ್ಷೇತ್ರಂ ಪುಣ್ಯಂ ಸನ್ನಿಹಿತಂ ಸರಃ ।
ಸೇವಮಾನಾ ನರಾಃ ನಿತ್ಯ ಪ್ರಾಪ್ನುವಂತಿ ಪರಂ ಪದಂ ।

ಲೋಮಹರ್ಷಣರು ಹೇಳುತ್ತಾರೆ, ''ಮಹಾತ್ಮರಾದ ಮಾರ್ಕಂಡೇಯ ಋಷಿಯ ಮಾತನ್ನು ಕೇಳಿ. ಈ ಸರಸ್ವತೀ ನದಿಯು ಉಳಿದ ನದಿಗಳ ಪ್ರವಾಹದೊಡಗೂಡಿ ಕುರುಕ್ಷೇತ್ರ ಪ್ರವೇಶಿಸಿದಳು. ಅಲ್ಲಿ ಸಾರುಂತಕವೆಂಬ ಸ್ಥಳವನ್ನು ಹೊಂದಿ ತನ್ನ ಪುಣ್ಯಕರವಾದ ಜಲದಿಂದ ಕುರುಕ್ಷೇತ್ರದ ಸ್ಥಳವನ್ನೆಲ್ಲ ಪಾವನಗೊಳಿಸಿ, ಪಶ್ಚಿಮಕ್ಕೆ ಹೊರಟಿತು. ಈ ನದಿಯ ಕೆಲವು ಸ್ಥಳಗಳು ಅನೇಕ ಋಷಿಗಳಿಂದ ಸೇವಿಸಲ್ಪಟ್ಟವುಗಳಾಗಿ ಬೇರೆ ಬೇರೆ ತೀರ್ಥಗಳಾಗಿ ಪರಿಣಮಿಸಿದವು. ಇವುಗಳ ಸ್ಮರಣೆಯೂ ಕೂಡ ಪುಣ್ಯಕರವಾದುದು. ಇವುಗಳಲ್ಲಿ ಸ್ನಾನ ಮಾಡುವುದಂತೂ ಪಾಪಿಗಳ ಪಾಪನಾಶ ಮಾಡಲು ಸಮರ್ಥವಾದದ್ದೆಂದು ಬೇರೆ ಹೇಳಬೇಕಿಲ್ಲ. ತೀರ್ಥಗಳ ಸ್ಮರಣವೂ ಪುಣ್ಯಕರ. ಮನುಷ್ಯನು ತಾನು ಪವಿತ್ರನಾಗಿರಲಿ ಅಥವಾ ಅಪವಿತ್ರನಾಗಿರಲಿ, ಯಾವದೇ ಅವಸ್ಥೆಯನ್ನು ಹೊಂದಿದವನಾಗಲಿ, ಕಮಲಾಕ್ಷನಾದ ಶ್ರೀನಾರಾಯಣನನ್ನು ಸ್ಮರಿಸಿದ್ದಾದರೆ ಅಂತಃಶುದ್ಧಿಯನ್ನೂ, ಬಹಿಶ್ಶುದ್ಧಿಯನ್ನೂ ಹೊಂದುವನು. ವಿಶೇಷವಾಗಿ ಕುರುಕ್ಷೇತ್ರದಲ್ಲಿ ಈ ಕಾರ್ಯವನ್ನು ಮಾಡಿದರೆ ಮತ್ತಷ್ಟು ಫಲ.

**ಮುಕ್ತಿಗೆ ನಾಲ್ಕು ಸಾಧನಗಳು :** ಬ್ರಹ್ಮಜ್ಞಾನ, ಗಯಾಶ್ರಾದ್ಧ, ಗೋಗೃಹಕ್ಷೇತ್ರದಲ್ಲಿ ಮರಣ, ಕುರುಕ್ಷೇತ್ರದಲ್ಲಿ ವಾಸಮಾಡುವಿಕೆ. ಇವುಗಳಲ್ಲಿ ಬ್ರಹ್ಮಜ್ಞಾನವು ಸಾಕ್ಷಾತ್ಸಾಧನವಾದರೂ ಉಳಿದವುಗಳು ಪರಂಪರೆಯಿಂದ ಸಾಧನಗಳು. ಈ ಸರಸ್ವತೀ ಹಾಗೂ ದೃಷದ್ವತೀ ನದಿಗಳ ಮಧ್ಯದಲ್ಲಿರುವ ದೇವನಿರ್ಮಿತ ಪ್ರದೇಶ ವಿಶೇಷಕ್ಕೆ ಬ್ರಹ್ಮಾವರ್ತವೆಂದು ಕರೆಯುತ್ತಾರೆ. ದೂರದಲ್ಲಿರುವವರೂ ''ನಾನೂ ಕುರುಕ್ಷೇತ್ರಕ್ಕೆ ಹೋಗುತ್ತೇನೆ, ಅಲ್ಲಿ ವಾಸಮಾಡುತ್ತೇನೆ'' ಎಂದು ಹೇಳುವ ಮಾತ್ರದಿಂದಲೇ ಅವರು ಪವಿತ್ರರಾಗುವರು.

೭೩೦. ಗ್ರಹನಕ್ಷತ್ರ ತಾರಾಣಾಂ ಕಾಲೇನ ಪತನಾದ್ಭಯಂ ।
ಕುರುಕ್ಷೇತ್ರ ಮೃತಾನಾಂ ತು ಪತನಂ ನೈವ ವಿದ್ಯತೆ ॥

೭೩೧. ಯತ್ರ ಬ್ರಹ್ಮಾದಯೋ ದೇವಾಃ ಋಷಯಃ ಸಿದ್ಧಚಾರಣಾಃ ।
ಗಂಧರ್ವಾಶ್ಚಾಪ್ಸರೋಯಕ್ಷಾ ಸೇವಂತೆ ಸ್ಥಾನ ಕಾಂಕ್ಷಿಣಃ ॥

೭೩೨. ಗತ್ವಾ ತು ಶುದ್ಧಯಾ ಯುಕ್ತ: ಸ್ನಾತ್ವಾ ಸ್ಥಾಣೂಮಹಾಹ್ರದೆ ।
ಮನಸಾ ಚಿಂತಿತಂ ಕಾಮಂ ಲಭತೇ ನಾತ್ರಸಂಶಯಃ ।

೭೩೩. ನಿಯಮಂ ಚ ನರಃ ಕೃತ್ವಾ ಸರಃ ಕೃತ್ವಾ ಪ್ರದಕ್ಷಿಣಂ ।
ರಂತುಕಂ ಚ ಸಮಾಸಾದ್ಯ ಕ್ಷಾಮಯಿತ್ವಾ ಪುನಃ ಪುನಃ ॥

೭೩೪. ಸರಸ್ವತ್ಯಾಂ ನರಃ ಸ್ನಾತ್ವಾ ಯಕ್ಷಂ ದೃಷ್ಟ್ವಾ ಪ್ರಣಮ್ಯ ಚ ।
ಪುಷ್ಪಂ ಧೂಪಂ ಚ ನೈವೇದ್ಯಂ ದತ್ವಾ ವಾಚಮುದೀರಯೇತ್

೭೩೫. ತವ ಪ್ರಸಾದಾದ್ಯಕ್ಷೇಂದ್ರ ವನಾನಿ ಸರಿತಸ್ತಥಾ ।
ಭ್ರಮಿಷ್ಯಾಮಿ ಚ ತೀರ್ಥಾನಿ ಹ್ಯವಿಘ್ನಂ ಕುರು ಮೇ ಸದಾ ॥

ಸರಸ್ವತೀತೀರದಲ್ಲಿ ವಾಸಮಾಡಿಕೊಂಡಿರುವ ಮಹಾತ್ಮನು ಬ್ರಹ್ಮಜ್ಞಾನವನ್ನು ಹೊಂದಿಯೇತೀರುವದರಲ್ಲಿ ಸಂದೇಹವಿಲ್ಲ. ಯಾಕೆಂದರೆ, ಆಸ್ಥಳವೇ ಅಷ್ಟು ಪವಿತ್ರ ವಾದುದು. ದೇವತೆಗಳು, ಋಷಿಗಳು, ಸಿದ್ಧರು ಈ ಕುರುಕ್ಷೇತ್ರದಲ್ಲಿಯೇ ವಾಸಮಾಡಿ ಆತ್ಮಜ್ಞಾನವನ್ನು ಪಡೆದಿದ್ದಾರೆ. ಮೋಕ್ಷಾಕಾಂಕ್ಷಿಯಾದ ಮನುಷ್ಯನು ತಾನು ಎಷ್ಟು ಪಾಪಿಯಾಗಿದ್ದರೂ ಕುರುಕ್ಷೇತ್ರದಲ್ಲಿ ವಾಸಮಾಡುವದರಿಂದ ತನ್ನ ಪಾಪವನ್ನು ದೂರ ಮಾಡಿಕೊಂಡು ಪರಮಾತ್ಮನನ್ನು ಸಾಕ್ಷಾತ್ಕರಿಸುವಷ್ಟು ಅಂತರ್ಮುಖಿಯಾಗುತ್ತಾನೆ. ಬ್ರಹ್ಮಜ್ಞಾನಕ್ಕೆ ಸಾಧನವಾದ ಕುರುಕ್ಷೇತ್ರವನ್ನು ಮತ್ತು ಅಲ್ಲಿರುವ ಪುಣ್ಯಕರವಾದ ಬ್ರಹ್ಮ ಸರೋವರವನ್ನು ಯಾರು ಸೇವಿಸುತ್ತಾರೋ ಅವರು ಪುಣ್ಯಭಾಗಿಗಳು. ಗ್ರಹನಕ್ಷತ್ರಗಳೂ ಒಮ್ಮೊಮ್ಮೆ ಅಧಃಪಾತವನ್ನು ಹೊಂದಬಹುದು. ಆದರೆ ಕುರುಕ್ಷೇತ್ರದಲ್ಲಿ ಮೃತನಾದ ಮನುಷ್ಯಮಾತ್ರ ಎಂದೂ ಪತನವನ್ನು ಹೊಂದುವದಿಲ್ಲ. ಈ ಕ್ಷೇತ್ರದಲ್ಲಿ ಸ್ನಾನ ಮಾಡುವದರಿಂದ ಬ್ರಹ್ಮದೇವನೇ ಮೊದಲಾದ ದೇವತೆಗಳೂ, ಋಷಿಗಳೂ, ಸಿದ್ಧ ಚಾರಣರೂ, ತಮ್ಮ ತಮ್ಮ ಉನ್ನತ ಸ್ಥಾನಕ್ಕಾಗಿ ಸಿದ್ಧಿಯನ್ನು ಪಡೆದರು. ಇಂಥ ಪವಿತ್ರತಮವಾದ ಕುರುಕ್ಷೇತ್ರಕ್ಕೆ ಹೋಗಿ ಅಲ್ಲಿ 'ಸ್ಥಾಣುಮಹಾಹ್ರ'ವೆಂಬ ತೀರ್ಥದಲ್ಲಿ ಸ್ನಾನಮಾಡಿ ಮನುಷ್ಯನು ತನ್ನ ಮನೋರಥಸಿದ್ಧಿಯನ್ನು ಪಡೆಯುತ್ತಾನೆ. ನಿಯಮ ಪೂರ್ವಕವಾಗಿ ಸರಸ್ವತೀನದಿಯಲ್ಲಿ ಸ್ನಾನಮಾಡಿ ಅಲ್ಲಿ ಸರೋವರದ ಪ್ರದಕ್ಷಿಣೆಯನ್ನು ಹಾಕಿ ಅಲ್ಲಿಯೇ ಸಮೀಪದಲ್ಲಿರುವ ಯಕ್ಷನನ್ನು ದರ್ಶನತೆಗೆದುಕೊಂಡು ಧೂಪದೀಪಾದಿಗಳಿಂದ ಆತನನ್ನು ಅರ್ಚಿಸಿ ಹೀಗೆ ಪ್ರಾರ್ಥಿಸಬೇಕು. ''ಎಲೈ ಯಕ್ಷೇಂದ್ರನೇ, ನಿನ್ನ ಅನುಗ್ರಹದಿಂದ ನಾನು ಈ ಕುರುಕ್ಷೇತ್ರದಲ್ಲಿಯೂ ಇಲ್ಲಿರುವ ಕ್ಷೇತ್ರಗಳಲ್ಲಿಯೂ ಸಂಚರಿಸಲು ಹೊರಟಿದ್ದೇನೆ. ನನ್ನ ಕಾರ್ಯಗಳಲ್ಲಿಯ ವಿಘ್ನಗಳನ್ನು ದೂರಮಾಡಿ ನನ್ನನ್ನು ಸಫಲನನ್ನಾಗಿ ಮಾಡು.''

ವಾಮನ ಮಹಾಪುರಾಣದಲ್ಲಿ ಸರಸ್ವತೀ ತೀರ-ಬ್ರಹ್ಮಜ್ಞಾನ ಅಪಾರ
ಎಂಬ ಮೂವತ್ಮೂರನೇಯ ಅಧ್ಯಾಯವು ಮುಗಿದುದು.

## ಕುರುಕ್ಷೇತ್ರದ ಏಳುವನಗಳು

**ಅಧ್ಯಾಯ - ೩೪**

೨೩೬. ವನಾನಿ ಸಪ್ತ ನೋ ಬ್ರೂಹಿ ಸಪ್ತನದ್ಯಶ್ಚ ಕಾಃ ಸ್ಮೃತಾಃ ।
ತೀರ್ಥಾನಿ ಚ ಸಮಗ್ರಾಣಿ ತೀರ್ಥಸ್ನಾನಫಲಂ ತಥಾ ॥

೨೩೭. ಯೇನ ಯೇನ ವಿಧಾನೇನ ಯಸ್ಯ ತೀರ್ಥಸ್ಯ-ಯತ್ ಫಲಂ ।
ತತ್ಸರ್ವಂ ವಿಸ್ತರೇಣೇಹ ಬ್ರೂಹಿ ಪೌರಾಣಿಕೋತ್ತಮ ॥

### ಲೋಮಹರ್ಷಣ ಉವಾಚ

೨೩೮. ಶ್ರುಣು ಸಪ್ತವನಾನೀಹ ಕುರುಕ್ಷೇತ್ರಸ್ಯ ಮಧ್ಯತಃ ।
ಯೇಷಾಂ ನಾಮಾನಿ ಪುಣ್ಯಾನಿ ಸರ್ವ ಪಾಪಹರಾಣಿ ಚ ॥

೨೩೯. ಕಾಮ್ಯಕಂ ಚ ವನಂ ಪುಣ್ಯಂ ತಥಾದಿತಿವನಂ ಮಹತ್ ।
ವಾಸಸ್ಯ ಚ ವನಂ ಪುಣ್ಯಂ ಫಲಕೀವನಮೇವ ಚ ॥

೨೪೦. ತಥಾ ಸೂರ್ಯವನಂ ಸ್ಥಾನಂ ತಥಾ ಮಧುವನಂ ಮಹತ್ ।
ಪುಣ್ಯಶೀತವನಂ ನಾಮ ಸರ್ವಕಲ್ಮಷನಾಶನಂ ॥

೨೪೧. ವನಾನ್ಯೇತಾನಿ ವೈ ಸಪ್ತ ನದೀಃ ಶೃಣುತ ಮೇ ದ್ವಿಜಾಃ ।
ಸರಸ್ವತೀ ನದೀ ಪುಣ್ಯಾ ತಥಾ ವೈತರಣೀ ನದೀ ।

೨೪೨. ಆಪಗಾ ಚ ಮಹಾಪುಣ್ಯಾ ಗಂಗಾ ಮಂದಾಕಿನೀ ನದೀ ।
ಮಧುಶ್ರವಾ ಆಮ್ಲನದೀ ಕೌಶಕೀ ಪಾಪನಾಶನೀ ॥

೨೪೩. ದೃಷದ್ವತೀ ಮಹಾಪುಣ್ಯಾ ತಥೈವ ಚ ಹಿರಣ್ವತೀ ।
ವರ್ಷಾಕಾಲವಹಾಸ್ಸರ್ವಾಃ ವರ್ಜಯಿತ್ವಾ ಸರಸ್ವತೀಂ ॥

೨೪೪. ಏತಾಸಾಮುದಕಂ ಪುಣ್ಯಂ ಪ್ರಾವೃಟ್ಕಾಲೇ ಪ್ರಕೀರ್ತಿತಂ ।
ರಜಸ್ವಲಾತ್ವಮೇತಾಸಾಂ ವಿದ್ಯತೇ ನ ಕದಾಚನ ।
ತೀರ್ಥಸ್ಯ ಚ ಪ್ರಭಾವೇಣ ಪುಣ್ಯಾಹ್ಯೇತಾಃ ಸರಿದ್ವರಾಃ ॥

೨೪೫. ಶೃಣ್ವಂತು ಮುನಯಃ ಪ್ರೀತಾಃ ತೀರ್ಥಸ್ನಾನಫಲಂ ಮಹತ್ ।
ಗಮನಂ ಸ್ಮರಣಂ ಚೈವ ಸರ್ವಕಲ್ಮಷ ನಾಶನಂ ॥

೨೪೬. ರಂತುಕಂ ಚ ನರೋ ದೃಷ್ಟ್ವಾ ದ್ವಾರಪಾಲಂ ಮಹಾಬಲಂ ।
ಯಕ್ಷಂ ಸಮಭಿವಾದ್ಯೈವ ತೀರ್ಥಯಾತ್ರಾಂ ಸಮಾರಭೇತ್ ॥

೨೪೭. ತತೋ ಗಚ್ಛೇದ್ಧಿ ವಿಪ್ರೇಂದ್ರಾ ನಾಮ್ನಾಽದಿತಿವನಂ ಮಹತ್ ।
ಅದಿತ್ಯಾ ಯತ್ರ ಪುತ್ರಾರ್ಥೇ ಕೃತಂ ಘೋರಂ ಮಹತ್ತಪಃ ॥

೨೪೮. ತತ್ರ ಸ್ನಾತ್ವಾ ಚ ಸಂಪೂಜ್ಯ ಹ್ಯದಿತಿಂ ದೇವಮಾತರಂ ।
ಪುತ್ರಂ ಜನಯತೇ ಶೂರಂಸರ್ವದೋಷವಿವರ್ಜಿತಂ ।
ಆದಿತ್ಯಶತಸಂಕಾಶಂ ವಿಮಾನಂ ಚಾಧಿರೋಹತಿ ॥

೭೪೯. ತತೋ ಗಚ್ಛೇದ್ದಿ ವಿಪ್ರೇಂದ್ರಾ ವಿಷ್ಣುಸ್ಥಾನಮನುತ್ತಮಂ ।
ಸತತಂ ನಾಮ ವಿಖ್ಯಾತಂ ಯತ್ರ ಸನ್ನಿಹಿತೋ ಹರಿಃ ॥

ಋಷಿಗಳು ಪ್ರಶ್ನೆ ಮಾಡುತ್ತಾರೆ, "ಆ ಕುರುಕ್ಷೇತ್ರದಲ್ಲಿ ಇರುವ ಏಳು ವನಗಳು ಯಾವುವು? ಅಲ್ಲಿಯ ತೀರ್ಥಗಳ ಹೆಸರುಗಳೇನು? ಆ ತೀರ್ಥಗಳಲ್ಲಿ ಸ್ನಾನ ಮಾಡುವುದರಿಂದ ಏನು ಪ್ರಯೋಜನ? ಹಾಗೂ ಆ ತೀರ್ಥವನ್ನು ಸೇವಿಸುವ ವಿಧಾನವಾವುದು? ಎಲ್ಲವನ್ನೂ ವಿಸ್ತಾರಪೂರ್ವಕವಾಗಿ ಹೇಳಿರಿ. ಲೋಮಹರ್ಷಣರು ಹೇಳುತ್ತಾರೆ : ಎಲೈ ಮಹರ್ಷಿಗಳೇ, ಕುರುಕ್ಷೇತ್ರದಲ್ಲಿಯ ಪುಣ್ಯಕರವಾದ ವನಗಳೆಂದರೆ ಕಾಮ್ಯಕವನ, ಆದಿತಿವನ, ವ್ಯಾಸವನ, ಫಲಕೀವನ, ಸೂರ್ಯವನ, ಮಧುವನ, ಪುಣ್ಯ, ಶೀತವನ ಎಂಬ ಏಳು ವನಗಳು. ಅವುಗಳ ನಾಮೋಚ್ಚಾರಣವೂ ಸಹ ಪುಣ್ಯಕರವಾಗಿರುವಾಗ ಸ್ನಾನ ಮಾಡುವುದರಿಂದ ಪುಣ್ಯ ಲಭಿಸುವದೆಂದು ಬೇರೆ ಹೇಳಬೇಕಾಗಿಲ್ಲ. ಈ ವನಗಳಲ್ಲದೇ ಅಲ್ಲಿ ಸರಸ್ವತೀ, ವೈತರಣೀ, ಮಂದಗಾಮಿನಿಯಾದ ಗಂಗಾ, ಮಧುಶ್ರವಾ, ಕೌಶಿಕೀ, ದೃಷದ್ವತೀ, ಹಿರಣ್ವತೀ ಎಂಬ ನದಿಗಳೂ ಕೂಡ ಇರುವುವು. ಇವುಗಳಲ್ಲಿ ಸರಸ್ವತಿಯನ್ನು ಬಿಟ್ಟು ಉಳಿದವುಗಳು ವರ್ಷಾಕಾಲದಲ್ಲಿ ಹರಿಯತಕ್ಕವುಗಳು. ಈ ನದಿಗಳ ನೀರು ವರ್ಷಾಕಾಲದಲ್ಲಿ ಬಹಳ ಪುಣ್ಯಕರವೆಂದು ಹೇಳಿದೆ. ಬೇರೆ ನದಿಗಳಂತೆ ಈ ನದಿಗಳಿಗೆ ರಜಸ್ವಲಾದೋಷವು ಯಾವಾಗಲೂ ಇಲ್ಲ. ಅಲ್ಲಲ್ಲಿ ಇರುವ ತೀರ್ಥಗಳ ಪ್ರಭಾವದಿಂದ ಈ ನದಿಗಳ ನೀರು ಸದಾಕಾಲಗಳಲ್ಲಿ ಪವಿತ್ರವಾದವುಗಳೇ ಇರುವವು. ಹೇ, ಮನಿಗಳೇ ಈ ತೀರ್ಥಗಳ ಸ್ಮರಣವು ಮತ್ತೂ ಅವುಗಳ ಗಮನವು ಎಲ್ಲ ಪಾಪ ವನ್ನು ನಾಶಮಾಡುವದು. ಮೊದಲು ರಂತುಕ ದೇಶಕ್ಕೆ ಹೋಗಿ ಅಲ್ಲಿ ದ್ವಾರಪಾಲಕ ನಾಗಿರುವ ಮಹಾಬಲಶಾಲಿಯಾದ ಯಕ್ಷನನ್ನು ನಮಸ್ಕರಿಸಿ, ಅವನ ಅನುಜ್ಞೆಯನ್ನು ಪಡೆದೇ ತೀರ್ಥಯಾತ್ರೆಯನ್ನು ಪ್ರಾರಂಭಿಸಬೇಕು. ಅನಂತರ ಆದಿತಿ ವನವೆಂಬ ಮಹಾಕ್ಷೇತ್ರಕ್ಕೆ ಹೋಗಬೇಕು. ಆ ವನದಲ್ಲಿ ಅದಿತಿ ದೇವಿಯು ಘೋರತಪಸ್ಸನ್ನಾಚರಿಸಿ ಪುತ್ರನನ್ನು ಪಡೆದಳು. ಈ ಸ್ಥಳದಲ್ಲಿ ಸ್ನಾನಮಾಡಿ ದೇವದೇವತೆಯಾದ ಅದಿತಿಯನ್ನು ಪೂಜಿಸಿದರೆ ಮಾನವನು ಬಲಶಾಲಿಯಾದ ದೋಷ ರಹಿತನಾದ ಪುತ್ರನನ್ನು ಪಡೆಯುತ್ತಾನೆ ಮತ್ತು ಪ್ರಜ್ವಲಿಸುತ್ತಿರುವ ಪ್ರಕಾಶಮಾನವಾದ ವಿಮಾನದಿಂದ ದೇವತೆಗಳ ಸಾನ್ನಿಧ್ಯವನ್ನು ಪಡೆಯುವನು. ಅಲ್ಲಿಂದ ಮುಂದೆ ವಿಷ್ಣು ಸ್ಥಾನವೆಂಬ ವನಕ್ಕೆ ಹೋಗಬೇಕು. ಅಲ್ಲಿರುವ ಸತತವೆಂದು ಪ್ರಸಿದ್ಧವಾದ ಸ್ಥಳದಲ್ಲಿ ವಿಷ್ಣು ಪರಮಾತ್ಮನು ಯಾವಾಗಲೂ ವಾಸಿಸುತ್ತಾನೆ.

೭೫೦. ವಿಮಲೇ ಚ ನರಃ ಸ್ನಾತ್ವಾ ದೃಷ್ಟ್ವಾ ಚ ವಿಮಲೇಶ್ವರಂ ।
ನಿರ್ಮಲಃ ಸ್ವರ್ಗಮಾಯಾತಿ ರುದ್ರಲೋಕಂ ಚ ಗಚ್ಛತಿ ॥

೭೫೧. ಹರಿಂ ಚ ಬಲದೇವಂ ಚಾಪ್ಯೇಕಾದಶ್ಯಾಂ ಸಮನ್ವಿತೌ ।
ದೃಷ್ಟ್ವಾ ದೋಷೈರ್ವಿಮುಚ್ಯೇತ ಕಲಿ ಕಲ್ಮಷ ಸಂಭವೈಃ ॥

೭೫೨. ತತಃ ಪಾರಿಪ್ಲವಂ ಗಚ್ಛೇತ್ತೀರ್ಥಂ ತ್ರೈಲೋಕ್ಯವಿಶ್ರುತಂ ।
ತತ್ರ ಸ್ನಾತ್ವಾ ಚ ದೃಷ್ಟ್ವಾ ಚ ಬ್ರಹ್ಮಾಣಂ ವೇದಸಂಯುತಂ ।

ಅಲ್ಲಿರುವ ವಿಮಲ ತೀರ್ಥದಲ್ಲಿ ಸ್ನಾನ ಮಾಡಿ ವಿಮಲೇಶ್ವರನನ್ನು ದರ್ಶನ ಮಾಡಿದಲ್ಲಿ ಅವನು ನಿರ್ಮಲನಾಗಿ ಸ್ವರ್ಗಗಾಮಿಯೇ ಆಗುವನು. ರುದ್ರ ಲೋಕವನ್ನು ಹೊಂದುತ್ತಾನೆ. ಅಲ್ಲಿರುವ ಬಲಭದ್ರ ಸಹಿತನಾದ ಹರಿಯನ್ನು ಏಕಾದಶಿ ದಿವಸ ದರ್ಶನ ಮಾಡಿದಲ್ಲಿ ಅವನು ಕಲಿಯಸಂಬಂಧದಿಂದ ಉಂಟಾಗುವ ಎಲ್ಲಾ ದೋಷ ಗಳಿಂದ ಬಿಡುಗಡೆ ಹೊಂದುತ್ತಾನೆ. ಅನಂತರ ಅಲ್ಲಿಂದ ತ್ರಿಲೋಕ ವಿಖ್ಯಾತವಾದ ಪಾರಿಪ್ಲವ ತೀರ್ಥಕ್ಕೆ ಹೋಗಬೇಕು. ಅಲ್ಲಿ ಸ್ನಾನವಮಾಡಿ ವೇದಗಳಿಂದೊಡಗೂಡಿರುವ ಬ್ರಹ್ಮದೇವರನ್ನು ದರ್ಶನ ಮಾಡಿದಲ್ಲಿ ಬ್ರಹ್ಮ ಯಜ್ಞದ ಫಲವನ್ನು ಹೊಂದುತ್ತಾನೆ. ಅದರಿಂದ ನಿರ್ಮಲವಾದ ಸ್ವರ್ಗಸುಖಕ್ಕೆ ಅರ್ಹನಾಗುತ್ತಾನೆ.

೭೫೩. ಬ್ರಹ್ಮಯಜ್ಞಫಲಂ ಪ್ರಾಪ್ಯ ನಿರ್ಮಲಃ ಸ್ವರ್ಗಮಾಪ್ನುಯಾತ್ ।
ತತ್ರಾಪಿ ಸಂಗಮಂ ರಮ್ಯಂ ಕೌಶಿಕೀ ತೀರ್ಥ ಸಂಭವಂ ॥

೭೫೪. ಸಂಗಮೇ ಚ ನರಃ ಸ್ನಾತ್ವಾ ಪ್ರಾಪ್ನೋತಿ ಪರಮಂ ಪದಂ ।
ಅರಣ್ಯೇ ಚಾಪರಾಧಾ ಯೇ ಕೃತಾ ಹಿ ಪುರುಷೇಣ ವೈ ।
ಸರ್ವಾಂಸ್ತಾನ್ ಕ್ಷಮತೇ ತತ್ರ ಸ್ನಾತ ಮಾತ್ರಸ್ಯ ದೇಹಿನಃ ।

೭೫೫. ತತೋ ದಕ್ಷಾಶ್ರಮಂ ಗತ್ವಾ ದೃಷ್ಟ್ವಾ ದಕ್ಷೇಶ್ವರಂ ಶಿವಂ ।
ಅಶ್ವಮೇಧಸ್ಯ ಯಜ್ಞಸ್ಯ ಫಲಂ ಪ್ರಾಪ್ನೋತಿ ಮಾನವಃ ।

ಅಲ್ಲಿರುವ ಕೌಶಿಕೀ ತೀರ್ಥದ ಸಂಗಮವು ಅತ್ಯಂತ ರಮ್ಯವಾದ ಸ್ಥಾನ. ಆ ಸಂಗಮದಲ್ಲಿ ಸ್ನಾನ ಮಾಡಿದವನು ಸಾಕ್ಷಾತ್ಪರ ಪದವನ್ನೇ ಹೊಂದುತ್ತಾನೆ. ಅಲ್ಲಿ ಸ್ನಾನ ಮಾತ್ರದಿಂದಲೇ ಚೇತನ ಸಾಮಾನ್ಯಕ್ಕೂ ಅರಣ್ಯದಲ್ಲಿ ಸಂಭವಿಸಬಹುದಾದ ಯಾವ ಅಪರಾಧವೂ ಬಂಧಕವಾಗಿ ಪರಿಣಮಿಸುವದಿಲ್ಲ. ಅನಂತರದಲ್ಲಿ ಅಲ್ಲಿಂದ ದಕ್ಷಾಶ್ರಮವೆಂಬ ಕ್ಷೇತ್ರಕ್ಕೆ ಹೋಗಿ ಅಲ್ಲಿರುವ ದಕ್ಷೇಶ್ವರನನ್ನು ಸೇವಿಸಿದರೆ ಅಶ್ವಮೇಧ ಯಜ್ಞದಿಂದ ಲಭಿಸಬಹುದಾದ ಫಲವನ್ನೇ ಅವನು ಹೊಂದುವನು.

೭೫೬. ತತಃ ಶಾಲೂಕಿನಂ ಗಚ್ಛೇತ್ ಸ್ನಾತ್ವಾ ತೀರ್ಥೇ ದ್ವಿಜೋತ್ತಮಃ।
ಹರಿಂ ಹರೇಣ ಸಂಯುಕ್ತಂ ಪೂಜಯಿತ್ವಾ ತು ಭಕ್ತಿತಃ ।
ಪ್ರಾಪ್ನೋತ್ಯಭಿಮತಂ ಲೋಕಂ ಸರ್ವಪಾಪ ವಿವರ್ಜಿತಃ ॥

೭೫೭. ಸರ್ಪಿರ್ದಧಿ ಸಮಾಸಾದ್ಯ ನಾಗಾನಾಂ ತೀರ್ಥಮುತ್ತಮಂ ।
ತತ್ರ ಸ್ನಾನಂ ನರಃ ಕೃತ್ವಾ ಮುಕ್ತೋ ನಾಗಭಯಾದ್ಭವೇತ್ ।

೭೫೮. ತತೋ ಗಚ್ಛೇಚ್ಚ ವಿಪ್ರೇಂದ್ರಾ ನರಕೋದ್ಧಾರರಂತುಕಂ ।
ತತ್ರಾಪಿ ರಜನೀಮೇಕಾಂ ಸ್ನಾತ್ವಾ ತೀರ್ಥವರೇ ಶುಭೇ ।

೭೫೯. ತತ್ರ ದ್ವಿತೀಯಂ ಸಂಪೂಜ್ಯ ದ್ವಾರಪಾಲಂ ಪ್ರಯತ್ನತಃ ।
ಬ್ರಾಹ್ಮಣಾನ್ ಭೋಜಯಿತ್ವಾ ಚ ಪ್ರಣಿಪತ್ಯ ಕ್ಷಮಾಪಯೇತ್।

ಅನಂತರ ಶಾಲೂಕಿ ಎಂಬ ಕ್ಷೇತ್ರಕ್ಕೆ ಹೋಗಬೇಕು. ಆ ತೀರ್ಥದಲ್ಲಿ ಸ್ನಾನಮಾಡಿ ಅಲ್ಲಿರುವ ಹರನಿಂದ ಕೂಡಿದ ಹರಿಯನ್ನು ಭಕ್ತಿಯಿಂದ ಪೂಜಿಸಿದ್ದೇ ಆದರೆ ಅಂತಹ

ದ್ವಿಜನು ಸರ್ವಪಾಪ ಮೋಕ್ಷಪೂರ್ವಕವಾಗಿ ತನಗೆ ಇಷ್ಟವಾದ ಲೋಕವನ್ನು ಹೊಂದುತ್ತಾನೆ. ತುಪ್ಪ ಮತ್ತು ಮೊಸರು ಇವನ್ನು ತೆಗೆದುಕೊಂಡು ಅಲ್ಲಿರುವ ನಾಗತೀರ್ಥವನ್ನು ಸೇವಿಸಿ ಸ್ನಾನಾದಿಗಳನ್ನು ನೆರವೇರಿಸಿದ್ದಲ್ಲಿ ಅಂತಹ ಮನುಷ್ಯನಿಗೆ ಸರ್ಪಭಯವೇ ಇರುವದಿಲ್ಲ. ಅನಂತರ ನರಕೋದ್ಧಾರವೆಂಬ ರಂತುಕ ದೇಶದ ಭಾಗವನ್ನು ಹೊಂದಿ ಅಲ್ಲಿನ ತೀರ್ಥವಲ್ಲಿ ಸ್ನಾನಮಾಡಿ ಅಲ್ಲಿ ಒಂದು ರಾತ್ರಿ ಇರಬೇಕು. ಅಲ್ಲಿರುವ ಎರಡನೇ ದ್ವಾರಪಾಲಕನಾದ ಯಕ್ಷನನ್ನು ಪ್ರಯತ್ನದಿಂದ ಪೂಜೆಮಾಡಿ ಬ್ರಾಹ್ಮಣ ಭೋಜನಾದಿಗಳನ್ನು ನಡೆಸಿ ಅವನಲ್ಲಿ ಕ್ಷಮಾಪಣೆಯನ್ನು ಬೇಡಬೇಕು.

೭೬೦. ತವ ಪ್ರಸಾದಾದ್ಯಕ್ಷೇಂದ್ರ ಮುಕ್ತೋಽಹಂ ಸರ್ವಕಿಲ್ಬಿಷೈಃ ।
ಸಿದ್ಧಿರ್ಮಯಾಭಿಲಷಿತಾ ಸಂಸಾರೇ ತಾಂ ಲಭಾಮ್ಯಹಂ ।

೭೬೧. ಏವಂ ಪ್ರಸಾದ್ಯ ಯಕ್ಷೇಂದ್ರಂ ತತಃ ಪಂಚನದಂ ವ್ರಜೇತ್ ।

೭೬೨. ಪಂಚನದ್ಯಾಶ್ಚ ರುದ್ರೇಣ ಕೃತಾ ದಾನವಭೀಷಣಾಃ ।
ತೇನ ಸರ್ವೇಷು ಲೋಕೇಷು ತೀರ್ಥಂ ಪಂಚನದಂ ಸ್ಮೃತಂ ।

೭೬೩. ಕೋಟಿತೀರ್ಥಾನಿ ರುದ್ರೇಣ ಸಮಾಜಹ್ರೇ ಯತಸ್ತತಃ ।
ತೇನ ತ್ರೈಲೋಕ್ಯ ವಿಖ್ಯಾತಂ ಕೋಟಿ ತೀರ್ಥಂ ಪ್ರಚಕ್ಷತೆ ।

ಎಲೈ ಯಕ್ಷೇಂದ್ರನೇ, ನಿನ್ನ ಅನುಗ್ರಹದಿಂದ ನಾನು ಸರ್ವ ಪಾಪಗಳಿಂದಲೂ ಬಿಡುಗಡೆಯನ್ನು ಹೊಂದಿದೆನು. ಯಾವ ಸಿದ್ಧಿಯನ್ನು ನಾನು ಹೊಂದಲು ಆಸೆಪಟ್ಟಿದ್ದೇನೆಯೋ ಅದನ್ನು ಸಂಸಾರದಲ್ಲಿಯೇ ಹೊಂದುತ್ತೇನೆ. ಈ ಪ್ರಕಾರ ಯಕ್ಷೇಂದ್ರನ ಅನುಗ್ರಹವನ್ನು ಹೊಂದಿ ಅನಂತರ ಪಂಚನದ ಕ್ಷೇತ್ರಕ್ಕೆ ಹೊರಡಬೇಕು. ದಾನವರಿಗೆ ಭಯಂಕರಗಳಾದ ಐದು ನದಿಗಳನ್ನು ಅಲ್ಲಿ ರುದ್ರನು ಒಟ್ಟುಗೂಡಿಸಿದ್ದರಿಂದ ಆ ಕ್ಷೇತ್ರಕ್ಕೆ ಪಂಚನದವೆಂದು ಪ್ರಸಿದ್ಧಿಯುಂಟಾಗಿದೆ. ರುದ್ರನು ಕೋಟಿತೀರ್ಥಗಳನ್ನು ಸಂಗ್ರಹಿಸಿ ಈ ಪಂಚನದ ಕ್ಷೇತ್ರವನ್ನು ನಿರ್ಮಿಸಿದುದರಿಂದ ಇದಕ್ಕೆ ಕೋಟಿ ತೀರ್ಥವೆಂದೂ ಮೂರು ಲೋಕದ ಪ್ರಖ್ಯಾತಿ ಇದೆ.

೭೬೪. ತಸ್ಮಿಂಸ್ತೀರ್ಥೆ ನರಃ ಸ್ನಾತ್ವಾ ದೃಷ್ಟ್ವಾ ಕೋಟೀಶ್ವರಂ ಹರಂ ।
ಪಂಚಯಜ್ಞಾನವಾಪ್ನೋತಿ ನಿತ್ಯಂ ಶ್ರದ್ಧಾ ಸಮನ್ವಿತಃ ॥

೭೬೫. ತತ್ರೈವ ವಾಮನೋ ದೇವಃ ಸರ್ವದೇವೈಃ ಪ್ರತಿಷ್ಠಿತಃ ।
ತತ್ರಾಪಿ ಚ ನರಃ ಸ್ನಾತ್ವಾ ಹ್ಯಗ್ನಿಷ್ಟೋಮಫಲಂ ಲಭೇತ್ ॥

೭೬೬. ಅಶ್ವಿನೋಸ್ತೀರ್ಥಮಾಸಾದ್ಯ ಶ್ರದ್ಧಾವಾನ್ಯೋ ಜಿತೇಂದ್ರಿಯಃ ।
ರೂಪವಾನ್ಭಾಗ್ಯಯುಕ್ತಶ್ಚ ಸ ಯಶಸ್ವೀ ನ ಸಂಶಯಃ ॥

೭೬೭. ವರಾಹತೀರ್ಥಮಾಖ್ಯಾತಂ ವಿಷ್ಣುನಾ ಪರಿಕಲ್ಪಿತಂ ।
ತಸ್ಮಿನ್ ಸ್ನಾತ್ವಾ ಶ್ರದ್ಧಧಾನಃ ಪ್ರಯಾತಿ ಪರಮಾಂ ಗತಿಂ ॥

ಈ ತೀರ್ಥದಲ್ಲಿ ಸ್ನಾನಮಾಡಿ ಕೋಟೀಶ್ವರನಾದ ಹರನ ದರ್ಶನದಿಂದ ಮನುಷ್ಯನು ನಿತ್ಯವೂ ಪಂಚಯಜ್ಞವನ್ನು ಶ್ರದ್ಧೆಯಿಂದ ಆಚರಿಸಿದರೆ ಉಂಟಾಗುವ ಫಲವನ್ನು ಹೊಂದ ಬಹುದು. ಅದೇ ಕ್ಷೇತ್ರದಲ್ಲಿ ದೇವತೆಗಳು ಅರ್ಚಾವತಾರವುಳ್ಳ ವಾಮನನನ್ನು ಪ್ರತಿಷ್ಠೆ ಮಾಡಿರುವರು. ಅಲ್ಲಿಯೂ ಸ್ನಾನಾದಿಗಳನ್ನು ನಡೆಸಿ ಭಗವತ್ಸೇವೆ ಮಾಡಿದವನು ಅಗ್ನಿಷ್ಟೋಮದ ಫಲವನ್ನು ಹೊಂದುತ್ತಾನೆ. ಹಾಗೆಯೇ ಅಶ್ವಿನೀ ದೇವತೆಗಳ ತೀರ್ಥವನ್ನು ಹೊಂದಿ ಶ್ರದ್ಧೆಯಿಂದಲೂ ಜಿತೇಂದ್ರಿಯತೆಯಿಂದಲೂ ಸ್ನಾನಾದಿಗಳನ್ನು ನಡೆಸಿದಲ್ಲಿ ಅವನು ರೂಪವಂತನೂ ಭಾಗ್ಯವಂತನೂ ಯಶಸ್ವಿಯೂ ಆಗುವದರಲ್ಲಿ ಸಂದೇಹವಿಲ್ಲ. ಹಾಗೆಯೇ ಮಹಾವಿಷ್ಣುವಿನಿಂದ ಏರ್ಪಡಿಸಲ್ಪಟ್ಟ ಪ್ರಖ್ಯಾತವಾದ ವರಾಹ ತೀರ್ಥವೂ ಇದೆ. ಅಲ್ಲಿ ಶ್ರದ್ಧೆಯಿಂದ ಸ್ನಾನಾದಿಗಳನ್ನು ಮಾಡಿದವನು ಪರಮ ಪದವನ್ನು ಹೊಂದುತ್ತಾನೆ.

೭೬೮. ತತ್ರ ಗಚ್ಛೇಚ್ಚ ವಿಪ್ರೇಂದ್ರಾ ಸೋಮತೀರ್ಥಮನುತ್ತಮಂ ।
ಯತ್ರ ಸೋಮಸ್ತಪಸ್ತಪ್ತ್ವಾ ವ್ಯಾಧಿ ಮುಕ್ತೋಽಭವತ್ಪುರಾ ॥

೭೬೯. ತತ್ರ ಸೋಮೇಶ್ವರಂ ದೃಷ್ಟ್ವಾ ಸ್ನಾತ್ವಾ ತೀರ್ಥವರೇ ಶುಭೇ ।
ರಾಜಸೂಯಸ್ಯ ಯಜ್ಞಸ್ಯ ಫಲಂ ಪ್ರಾಪ್ನೋತಿ ಮಾನವಃ ॥

೭೭೦. ವ್ಯಾಧಿಭ್ಯಶ್ಚ ವಿನಿರ್ಮುಕ್ತಃ ಸರ್ವದೋಷ ವಿವರ್ಜಿತಃ ।
ಸೋಮಲೋಕಮವಾಪ್ನೋತಿ ಚಂದ್ರೇಣ ರಮತೇ ಚಿರಂ ॥

ಎಲೈ ವಿಪ್ರಶ್ರೇಷ್ಠರೇ, ಅಲ್ಲಿರುವ ಉತ್ತಮವಾದ ಸೋಮತೀರ್ಥವನ್ನು ಹೊಂದ ಬೇಕು. ಅಲ್ಲಿ ತನ್ನ ವ್ಯಾಧಿನಿವೃತ್ತಿಗಾಗಿ ಚಂದ್ರನು ತಪಸ್ಸು ಮಾಡಿ ಪೂರ್ವದಲ್ಲಿ ವ್ಯಾಧಿ ನಿವೃತ್ತಿಯನ್ನು ಹೊಂದಿದನು. ಅಲ್ಲಿರುವ ತೀರ್ಥದಲ್ಲಿ ಸ್ನಾನಮಾಡಿ ಸೋಮೇಶ್ವರನನ್ನು ದರ್ಶನ ಮಾಡಿದ ಮನುಷ್ಯರು ರಾಜಸೂಯಾಗದ ಫಲವನ್ನು ಹೊಂದುತ್ತಾರೆ. ಎಲ್ಲಾ ವಿಧವಾದ ದೋಷಗಳಿಂದಲೂ ವ್ಯಾಧಿಯಿಂದಲೂ ವಿಮೋಚನ ವನ್ನು ಹೊಂದಿ ಚಂದ್ರ ಲೋಕಕ್ಕೆ ಹೋಗಿ ಚಂದ್ರನೊಡನೆ ಬಹಳ ಕಾಲ ಸುಖ ಭೋಗ ವನ್ನು ಅನುಭವಿಸುತ್ತಾರೆ.

೭೭೧. ಭೂತೇಶ್ವರಂ ಚ ತತ್ರೈವ ಜ್ವಾಲಾಮಾಲೇಶ್ವರಂ ತಥಾ ।
ತಚ್ಚ ಲಿಂಗಂ ಸಮಭ್ಯರ್ಚ್ಯ ನ ಭೂಯೋ ಜನ್ಮಚಾಪ್ನುಯಾತ್।

೭೭೨. ಏಕಹಂಸೇ ನರಃ ಸ್ನಾತ್ವಾ ಗೋ ಸಹಸ್ರ ಫಲಂ ಲಭೇತ್ ।
ಕೃತಶೌಚಂ ಸಮಾಸಾದ್ಯ ತೀರ್ಥಸೇವೀ ದ್ವಿಜೋತ್ತಮಾಃ ॥

ಅಲ್ಲಿಯೇ ಇರುವ ಭೂತೇಶ್ವರ ಮತ್ತು ಜ್ವಾಲಾ ಮಹೇಶ್ವರ ಇವರ ಲಿಂಗವನ್ನೂ ಪೂಜಿಸಿದ್ದಲ್ಲಿ ಆ ಮನುಷ್ಯನಿಗೆ ಪುನರ್ಜನ್ಮ ಇಲ್ಲ. ಅಲ್ಲಿಯೇ ಇರುವ ಏಕಹಂಸ ತೀರ್ಥದ ಸ್ನಾನದಿಂದ ಗೋ ಸಹಸ್ರ ದಾನದ ಫಲವನ್ನು ಹೊಂದುತ್ತಾನೆ. ಶುಚಿಯಾಗಿದ್ದು ಈ ತೀರ್ಥಗಳನ್ನು ಸೇವಿಸುವ ಮನುಷ್ಯನು ತಾನೂ ನಿಷ್ಕಲ್ಮಷನಾಗಿ ಪೌಂಡರೀಕಯಾಗದ ಫಲವನ್ನು ಹೊಂದುತ್ತಾನೆ.

೭೭೩. ಪೌಂಡರೀಕಮವಾಪ್ನೋತಿ ಕೃತಶೌಚೋ ಭವೇನ್ನರಃ ।
ತತೋ ಮುಂಜವಟಂ ನಾಮ ಮಹಾದೇವಸ್ಯ ಧೀಮತಃ ॥

೭೭೪. ಉಪೋಷ್ಯ ರಜನೀಮೇಕಾಂ ಗಾಣಪತ್ಯಮವಾಪ್ನುಯಾತ್ ।
ತತ್ರೈವ ಚ ಮಹಾಭಾಗಾ ಯಕ್ಷಿಣೀ ಲೋಕ ವಿಶ್ರುತಾ ॥

೭೭೫. ಸ್ನಾತ್ವಾಭಿಗಮ್ಯ ತತ್ರೈವ ಮಹಾ ಪಾತಕ ನಾಶನಂ ।
ಕುರುಕ್ಷೇತ್ರಸ್ಯ ತದ್ದ್ವಾರಂ ವಿಶ್ರುತಂ ಪುಣ್ಯವರ್ಧನಂ ॥

೭೭೬. ಪ್ರದಕ್ಷಿಣಮುಪಾವರ್ತ್ಯ ಬ್ರಾಹ್ಮಣಾನ್ ಭೋಜಯೇತ್ತತಃ ।
ಪುಷ್ಕರಂ ಚ ತತೋ ಗತ್ವಾ ಹ್ಯಭ್ಯರ್ಚ್ಯ ಪಿತೃದೇವತಾಃ ॥

೭೭೭. ಜಾಮದಗ್ನ್ಯೇನ ರಾಮೇಣ ಕೃತಂ ತಚ್ಚ ಮಹಾತ್ಮನಾ ।
ಕೃತಕೃತ್ಯೋ ಭವೇದ್ರಾಜಾ ಅಶ್ವಮೇಧಂ ಚ ವಿಂದತಿ ।

ಅನಂತರ ಮುಂಜವಟವೆಂಬ ಮಹಾತ್ಮನಾದ ಮಹಾದೇವನ ಕ್ಷೇತ್ರಕ್ಕೆ ಹೋಗಬೇಕು. ಅಲ್ಲಿ ಉಪವಾಸ ವ್ರತದಿಂದ ಒಂದು ರಾತ್ರಿ ವಾಸ ಮಾಡಿದ್ದಲ್ಲಿ ಅವನು ಪ್ರಮಥಗಣಾಧಿಪನಸ್ಥಾನವನ್ನು ಹೊಂದುತ್ತಾನೆ. ಅಲ್ಲಿಯೇ ಲೋಕವಿಖ್ಯಾತಳಾಗಿಯೂ, ಮಹಾತ್ಮಳಾಗಿಯೂ ಇರುವ ಯಕ್ಷಿಣಿಯು ನೆಲಸಿದ್ದಾಳೆ. ಅಲ್ಲಿ ಸ್ನಾನ ಮಾಡಿದಲ್ಲಿ ಸಕಲ ಮಹಾಪಾತಕಗಳು ಹೋಗಲಾಡಿಸಲ್ಪಡುವವು. ಅದೇ ಕುರುಕ್ಷೇತ್ರದದ್ವಾರವೆಂದೂ, ಮಹಾಪುಣ್ಯಕರವೆಂದೂ ಪ್ರಸಿದ್ಧಿ ಹೊಂದಿದೆ. ಅಲ್ಲಿ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿ ಬ್ರಾಹ್ಮಣ ಭೋಜನವನ್ನು ಮಾಡಿಸಬೇಕು. ಅನಂತರ ಅಲ್ಲಿಂದ ಪುಷ್ಕರ ಕ್ಷೇತ್ರಕ್ಕೆ ಹೋಗಿ ಅಲ್ಲಿಯೂ ಸ್ನಾನಾದಿಗಳನ್ನು ಮಾಡಿ ಪಿತೃದೇವತೆಗಳನ್ನು ಪೂಜಿಸಬೇಕು. ಅದು ಮಹಾತ್ಮನಾದ ಪರಶುರಾಮನಿಂದ ನಿರ್ಮಿಸಲ್ಪಟ್ಟ ಕ್ಷೇತ್ರ. ಅಲ್ಲಿ ಹೋಗಿ ಯಥಾವಿಧಿಯಾಗಿ ತೀರ್ಥಯಾತ್ರೆಯನ್ನು ನಡೆಸಿದ ರಾಜನು ಕೃತಕೃತ್ಯನಾಗಿ ಅಶ್ವಮೇಧ ಯಾಗದ ಫಲವನ್ನೇ ಹೊಂದುತ್ತಾನೆ.

೭೭೮. ಕನ್ಯಾದಾನಂ ಚ ಯಸ್ತತ್ರ ಕಾರ್ತಿಕ್ಯಾಂ ವೈ ಕರಿಷ್ಯತಿ ।
ಪ್ರಸನ್ನಾ ದೇವತಾಸ್ತಸ್ಯ ದಾಸ್ಯಂತ್ಯಭಿಮತಂ ಫಲಂ ॥

೭೭೯. ಕಪಿಲಶ್ಚ ಮಹಾಯಕ್ಷೋ ದ್ವಾರಪಾಲಃ ಸ್ವಯಂ ಸ್ಥಿತಃ ।
ವಿಘ್ನಂ ಕರೋತಿ ಪಾಪಾನಾಂ ದುರ್ಗತಿಂ ಚ ಪ್ರಯಚ್ಛತಿ ॥

೭೮೦. ಪತ್ನೀ ತಸ್ಯ ಮಹಾಯಕ್ಷೀ ನಾಮ್ನೋಲೂಖಲಮೇಖಲಾ ।
ಆಹತ್ಯ ದುಂದುಭಿಂ ಸಾ ತು ಭ್ರಮತೇ ನಿತ್ಯಮೇವ ಹಿ ॥

ಆ ಪುಷ್ಕರ ತೀರ್ಥದಲ್ಲಿ ಯಾರು ಕಾರ್ತೀಕದಲ್ಲಿ ಕನ್ಯಾದಾನ ಮಾಡುತ್ತಾರೆಯೋ ಅವರು ಪ್ರಸನ್ನರಾದ ದೇವತೆಗಳ ಅನುಗ್ರಹದಿಂದ ಇಷ್ಟವಾದ ಎಲ್ಲಾ ಫಲವನ್ನು ಹೊಂದುತ್ತಾರೆ. ಅಲ್ಲಿ ಕಪಿಲವೆಂಬ ಮಹಾಯಕ್ಷನು ತಾನೇ ದ್ವಾರಪಾಲಕನಾಗಿರುತ್ತಾನೆ. ಅವನೇ ಸಮಸ್ತ ಪಾಪಗಳಿಗೂ ವಿಘ್ನವನ್ನುಂಟು ಮಾಡಿ ತೊಂದರೆಯನ್ನು ಉಂಟು ಮಾಡುತ್ತಾನೆ. ಅವನ ಪತ್ನಿಯಾದ ಉಲೂಖಲಮೇಖಲಾ ಎಂಬ ಹೆಸರುಳ್ಳ ಮಹಾಯಕ್ಷಿಯು ನಿತ್ಯವೂ ದುಂದುಭಿಯನ್ನು ಹೊಡೆಯುತ್ತಾ ಸಂಚರಿಸುತ್ತಿರುವಳು.

೭೮೧. ಸಾ ದದರ್ಶ ಸ್ತ್ರಿಯಂ ಚೈಕಾಂ ಸಪುತ್ರಾಂ ಪಾಪದೇಶಜಾಂ ।
ತಾಮುವಾಚ ತದಾ ಯಕ್ಷೀ ಆಹತ್ಯ ನಿಶಿ ದುಂದುಭಿಂ ।

೭೮೨. ಯುಗಂಧರೇ ದಧಿ ಪ್ರಾಶ್ಯ ಉಷಿತ್ವಾ ಚಾಚ್ಯುತಸ್ಥಲೇ ।
ತದ್ವದ್ಭೂತಾಲಯೇ ಸ್ನಾತ್ವಾ ಸಪುತ್ರಾ ವಸ್ತುಮಿಚ್ಛಸಿ ।

೭೮೩. ದಿವಾ ಮಯಾ ತೇ ಕಥಿತಂ ರಾತ್ರೌ ಭಕ್ಷ್ಯಾಮಿ ನಿಶ್ಚಿತಂ ।
ಏತಚ್ಛ್ರುತ್ವಾ ತು ವಚನಂ ಪ್ರಣಿಪತ್ಯ ಚ ಯಕ್ಷಿಣೀಂ ॥

೭೮೪. ಉವಾಚ ದೀನಯಾ ವಾಚಾ ಪ್ರಸಾದಂ ಕುರು ಭಾಮಿನಿ ।
ತತಃ ಸಾ ಯಕ್ಷಿಣೀ ತಾಂ ತು ಪ್ರೋವಾಚ ಕೃಪಯಾನ್ವಿತಾ ।

೭೮೫. ಯದಾ ಸೂರ್ಯಸ್ಯ ಗ್ರಹಣಂ ಕಾಲೇನ ಭವಿತಾ ಕ್ವಚಿತ್ ।
ಸರಸ್ವತ್ಯಾಂ ತದಾ ಸ್ನಾತ್ವಾ ಪೂತಾ ಸ್ವರ್ಗಂ ಗಮಿಷ್ಯಸಿ ॥

ಆ ಯಕ್ಷಿಣಿಯು ಒಂದಾನೊಂದು ಕಾಲದಲ್ಲಿ ಪಾಪ ದೇಶದಿಂದ ಅಲ್ಲಿಗೆ ಬಂದಿದ್ದ ಪುತ್ರವತಿಯಾದ ಸ್ತ್ರೀಯೊಬ್ಬಳನ್ನು ನೋಡಿದಳು. ಆಗ ರಾತ್ರಿಯಲ್ಲಿ ದುಂದುಭಿಯನ್ನು ಹೊಡೆದು ಅವಳನ್ನು ಕುರಿತು ''ನೀನು ಪಾಪದೇಶದಿಂದ ಬಂದ ಪಾಪಿಯಾಗಿದ್ದೀಯೆ. ಯುಗಂಧರ ಕ್ಷೇತ್ರದಲ್ಲಿ ಮೊಸರನ್ನು ಕುಡಿದು ಅಚ್ಯುತನ ಸ್ಥಲದಲ್ಲಿ ವಾಸಮಾಡಿ ಭೂತಾಲಯದಲ್ಲಿ ಸ್ನಾನಮಾಡಿ ಶುದ್ಧಳಾಗಿ ಹಗಲಿನಲ್ಲಿ ಇಲ್ಲಿ ಪುತ್ರನೊಡನೆ ಇಲ್ಲಿ ವಾಸಿಸುತ್ತಿರು. ರಾತ್ರಿಯಲ್ಲಿ ನಾನು ನಿನ್ನನ್ನು ಭಕ್ಷಿಸುತ್ತೇನೆ.'' ಈ ಮಾತನ್ನು ಕೇಳಿದ ಆ ವನಿತೆಯು ಭಯಪಟ್ಟು ಆ ಯಕ್ಷಿಣಿಯನ್ನು ನಮಸ್ಕರಿಸಿ ದೈನ್ಯದಿಂದ ''ಎಲೈ, ಭಾಮಿನಿಯೇ, ನನ್ನ ವಿಷಯದಲ್ಲಿ ನೀನು ಅನುಗ್ರಹವನ್ನು ತೋರಬೇಕೆಂದು'' ಬೇಡಿ ಕೊಳ್ಳಲಾಗಿ ಆ ಯಕ್ಷಿಣಿಯು ದಯೆಯಿಂದ ಕೂಡಿ ಪಾಪನಾಶಕ್ಕೆ ಉಪಾಯವನ್ನು ಹೀಗೆ ಹೇಳಿದಳು. ''ಯಾವುದಾದರೊಂದು ಕಾಲದಲ್ಲಿ ಸೂರ್ಯಗ್ರಹವು ಬಂದದ್ದೇ ಆದರೆ ಆಗ ಈ ಸರಸ್ವತೀ ನದಿಯಲ್ಲಿ ಸ್ನಾನಮಾಡು. ನಿನ್ನ ಸಕಲ ಪಾಪವೂ ಹೋಗುತ್ತದೆ. ನೀನು ಸ್ವರ್ಗಲೋಕವನ್ನು ಹೊಂದುವೆ.''

ವಾಮನ ಮಹಾಪುರಾಣದಲ್ಲಿ ಕುರುಕ್ಷೇತ್ರದ ಏಳುವನಗಳು ಎಂಬ
ಮೂವತ್ನಾಲ್ಕನೇಯ ಅಧ್ಯಾಯವು ಮುಗಿದುದು

—o—

## ಕೊಡಲಿರಾಮ ನಿರ್ಮಿಸಿದ ತೀರ್ಥ

ಅಧ್ಯಾಯ - ೩೫

**ಲೋಮಹರ್ಷಣ :** ಅನಂತರ ತೀರ್ಥಯಾತ್ರೆಯನ್ನು ಕೈಕೊಂಡ ದ್ವಿಜಶ್ರೇಷ್ಠನು ಪರಶುರಾಮ ಸರೋವರಕ್ಕೆ ಹೋಗಬೇಕು. ಅಲ್ಲಿ ತೇಜೋದೀಪ್ತನಾದ ಪರಶುರಾಮನು ನಿರ್ಮಿಸಿದ ಐದು ಸರೋವರಗಳು ಇರುತ್ತವೆ. ವಿಪ್ರವಂಶದಲ್ಲಿ ಹುಟ್ಟಿದ ಪರಶುರಾಮನು ತನ್ನ ವಿರೋಧಿ ವೈರಿಗಳಾದ ಕ್ಷತ್ರಿಯರನ್ನೆಲ್ಲ ಸಂಹರಿಸಿ ಆ ನರೇಶರ ನೆತ್ತರದಿಂದಲೇ ಈ ಐದು ಕೊಳಗಳನ್ನು ತುಂಬಿ ಈ ರಾಮ ಹ್ರದದ ನಿರ್ಮಾಣಕ್ಕೆ ಕಾರಣನಾದನೆಂದು ಹಿರಿಯರು ಹೇಳುತ್ತಾರೆ.

**೭೮೬. ಕ್ಷತ್ರಮುತ್ಸಾದ್ಯ ವಿಪ್ರೇಣ ಹ್ರದಾಃ ಪಂಚ ನಿವೇಶಿತಾಃ ।**
**ಪೂರಯಿತ್ವಾ ನರವ್ಯಾಘ್ರ ರುಧಿರೇಣೇತಿ ವಃ ಶ್ರುತಮ್ ॥**

**೭೮೭. ಪಿತರಸ್ತರ್ಪಿತಾಸ್ತೇನ ತಥೈವ ಚ ಪಿತಾಮಹಾಃ ।**
**ತತಸ್ತೇ ಪಿತರಃ ಪ್ರೀತಾ ರಾಮಮೂಚುರ್ದ್ವಿಜೋತ್ತಮಾಃ ।**

ರಾಜರ ರಕ್ತದಿಂದ ರೂಪಗೊಂಡ ಈ ಪಂಚ ಸರೋವರಗಳಲ್ಲಿ ಆ ಪರಶುರಾಮನು ತನ್ನ ತಾತ ಮುತ್ತಾತರಿಗೆ ನೆತ್ತರಿನ ನೀರು ಕೊಟ್ಟು ತರ್ಪಣ ಬಿಟ್ಟನು. ಅದರಿಂದ ಹಿಂದೆ ದುಷ್ಟ ಕ್ಷತ್ರಿಯರ ಉಪಟಳ ಉಪದ್ರವಗಳಿಂದ ನೊಂದು ಬೆಂದು ನಾಶ ಹೊಂದಿದ ಪರಶುರಾಮನ ತಂದೆ ತಾತಂದಿರು ಹರ್ಷಗೊಂಡರು ಹಾಗೂ ರಾಮನನ್ನು ಉದ್ದೇಶಿಸಿ ಮಾತನಾಡಿದರು. ''ರಾಮ, ರಾಮ, ನೀನು ಮಹಾ ಪರಾಕ್ರಮಶಾಲಿ. ಭೃಗುವಂಶಕ್ಕೆ ಭೂಷಣ. ನಿನ್ನ ಪಿತೃ ಭಕ್ತಿಯಿಂದ ನಾವು ಪ್ರೀತರಾಗಿದ್ದೇವೆ. ಸಮರ್ಥನಾದ ನಿನ್ನ ವೀರ ವಿಕ್ರಮಗಳಿಂದ ನಮಗೆ ಪರಮಾನಂದ. ನಿನಗೆ ಕಲ್ಯಾಣವಾಗಲಿ, ಕೀರ್ತಿವಂತನೇ ಬೇಕಾದ ವರ ಬೇಡು. ನಿನ್ನ ಇಚ್ಛೆ ಏನು ಹೇಳು.'' ಹಿಂದಿನ ತಲೆಮಾರಿನ ತಾತ ಮುತ್ತಾತರ ಮಾತು ಕೇಳಿ ಪರಶುರಾಮನಿಗೆ ಸಂತೋಷವಾಯಿತು. ಸಮರ್ಥರಲ್ಲಿ ಅತ್ಯಂತ ಸಮರ್ಥ ಆ ಕೊಡಲಿಯ ರಾಮ. ಆದರೂ ಅವನು ಹಿರಿಯನಿಗೆ ಕೈಮುಗಿದು ನಮ್ರನಾಗಿ ನುಡಿದನು. ಅವನ ಪಿತೃಗಳು ಅಂತರಿಕ್ಷದ ಅಂತರಾಳದಲ್ಲಿಯೇ ನಿಂತುಕೊಂಡಿದ್ದರು.

ರಾಮ : ಹಿರಿಯರೇ, ತಾವು ಸುಪ್ರೀತರಾಗಿದ್ದರೆ ನನ್ನನ್ನು ಅನುಗ್ರಹಿಸಿರಿ. ಪಿತೃಗಳೇ, ನಾನೊಂದು ತಪ್ಪು ಮಾಡಿದೆ. ಅದೆಂದರೆ ನಾನು ಸಿಟ್ಟಿಗೆದ್ದೆ. ಬ್ರಾಹ್ಮಣರಿಗೆ ಕ್ರೋಧವು ಬರಬಾರದು.

**೭೮೮. ಪಿತೃಪ್ರಸಾದಾದಿಚ್ಛೇಯಂ ತಪಸೋಽಪ್ಯಾಪನಂ ಪುನಃ ।**
**ಯತೋ ರೋಷಾಭಿ ಭೂತೇನಕ್ಷತ್ರಮುತ್ಸಾದಿತಂ ಮಯಾ ॥**

ಆದರೆ ಕ್ಷತ್ರಿಯ ರಾಜರು ನಮ್ಮ ತಂದೆಗೆ ಮಾಡಿದ ವಿಚಿತ್ರ ಹಿಂಸೆ ಹಾಗೂ ಅಪಕಾರಗಳಿಂದ ನನ್ನ ಸಂಯಮದ ಕಟ್ಟು ಸಡಲಿತು. ನಾನು ಸಿಟ್ಟಿಗೆದ್ದು ಪ್ರತೀಕಾರಕ್ಕೆ ಇಳಿದೆ. ಸಂಪೂರ್ಣ ಕ್ಷತ್ರಿಯ ಜಾತಿಯನ್ನೇ ಕ್ಷೋಣೀತಲದಿಂದ ಅಳಿದು ಅಳಿಸಿ ಹಾಕಿದೆ. ಆ ನನ್ನ ಉಗ್ರವಾದ ಕೋಪದಿಂದ ನನ್ನ ತಪಸ್ಸಿನ ಪುಣ್ಯವೆಲ್ಲವೂ ಲೋಪವಾಗಿದೆ. ಹಿರಿಯರಾದ ತಾವು ನನ್ನ ಮೇಲೆ ನಿಜವಾಗಿ ತುಷ್ಟರಾಗಿದ್ದರೆ ನನ್ನ ಕಳೆದುಹೋದ ಆ ತಪಃ

ಪುಣ್ಯವು ಮರಳಿ ನನಗೆ ದೊರಕುವಂತೆ ಮಾಡಿರಿ. ಇದೇ ನಾನು ನಿಮ್ಮ ಬಳಿ ಬೇಡುವ ವರ. ತಮ್ಮ ತೇಜಸ್ಸಿನಿಂದ ನನ್ನ ಹಿಂಸೆಯಿಂದ ಉಂಟಾದ ಪಾಪವೆಲ್ಲ ತೊಳೆದುಹೋಗಲಿ.

೭೮೯. ತತಸ್ತು ಪಾಪಾನ್ಮುಚ್ಯೇಯ ಯುಷ್ಮಾಕಂ ತೇಜಸಾಹ್ಯಹಮ್ ।
ಹ್ರದಾಶ್ಚೈತೇ ತೀರ್ಥಭೂತಾ ಭವೇಯುರ್ಮುನಿಸತ್ತಮಾಃ ॥

ನೆತ್ತರಿನ ನೀರು ತುಂಬಿದ ಈ ಐದೂ ಮಡುಗಳು ಪಾವನ ತೀರ್ಥಗಳಾಗಿ ಮಾರ್ಪಡಲಿ. ಭೂಮಿಯಲ್ಲಿ ಪ್ರಸಿದ್ಧಿಯನ್ನೂ ಪಡೆಯಲಿ.'' ಕೊಡಲಿರಾಮನ ಈ ಸವಿನುಡಿಗಳನ್ನು ಕೇಳಿ ಪಿತೃಗಳೆಲ್ಲರೂ ಹರ್ಷಗೊಂಡರು. ಅವರು ಸುಪ್ರಸನ್ನರಾಗಿ ರಾಮನಿಗೆ ನುಡಿದರು. ''ಮಗನೇ, ನಿನ್ನ ತಪಸ್ಸು ಬೆಳೆಯಲಿ. ನಿನ್ನ ಪಿತೃಭಕ್ತಿ ಅಸಾಧಾರಣವಾದುದು. ನಿನ್ನ ಸಿಟ್ಟಿಗೆ ಮತ್ತು ಕ್ಷತ್ರಿಯರ ವಿನಾಶಕ್ಕೆ ನಿನ್ನ ಅತ್ಯಧಿಕವಾದ ಪಿತೃಭಕ್ತಿಯೇ ಕಾರಣ. ನಿನ್ನ ತಂದೆಯನ್ನು ಕೊಂದದ್ದರಿಂದಲೇ ನೀನು ರೊಚ್ಚಿಗೆದ್ದು ಹಂತಕ ಜಾತಿಯನ್ನೇ ಕೊಚ್ಚಿ ಹಾಕಿದೆ.

೭೯೦. ತಪಸ್ತೇ ವರ್ಧತಾಂ ಪುತ್ರ ಪಿತೃ ಭಕ್ತ್ಯಾ ವಿಶೇಷತಃ ।
ಯಚ್ಚ ರೋಷಾಭಿಭೂತೇನ ಕ್ಷತ್ರಮುತ್ಸಾದಿತಂ ತ್ವಯಾ ॥

ಈಗ ನಿನಗೆ ಪಶ್ಚಾತ್ತಾಪದಿಂದ ಮತ್ತು ಪಿತೃಭಕ್ತಿ ಪ್ರಭಾವದಿಂದ ನೀನಿಂದು ಆ ಪಾಪದಿಂದ ಮುಕ್ತನಾಗಿರುವಿ. ತಮ್ಮ ದುಷ್ಕರ್ಮ ಹಾಗೂ ದುಷ್ಕೃತ್ಯಗಳಿಂದಲೇ ಅವರು ನಾಶ ಹೊಂದಿದ್ದಾರೆ. ನೀನು ಕೇಳಿಕೊಂಡಂತೆ ನಮ್ಮ ವರದಿಂದ ಈ ಸರೋವರಗಳೆಲ್ಲ ಇಂದಿನಿಂದ ಪವಿತ್ರ ತೀರ್ಥಗಳಾಗುತ್ತವೆ.

೭೯೧. ತತಶ್ಚ ಪಾಪಾನ್ಮುಕ್ತಸ್ತ್ವಂ ಪಾತಿತಾಸ್ತೇ ಸ್ವಕರ್ಮಭಿಃ ।
ಹ್ರದಾಶ್ಚೈತೇಽದ್ಯ ತೀರ್ಥತ್ವಂ ಗಮಿಷ್ಯಂತಿ ನ ಸಂಶಯಃ ॥

ಈ ಸರೋವರಗಳಲ್ಲಿ ಸ್ನಾನಮಾಡಿ ಪಿತೃಗಳಿಗೆ ತರ್ಪಣ ಕೊಟ್ಟರೆ ಅವರು ಪ್ರೀತರಾಗುತ್ತಾರೆ ಮತ್ತು ಬಯಸಿದ ಫಲಗಳನ್ನು ನೀಡುತ್ತಾರೆ. ಇಲ್ಲಿ ತರ್ಪಣ ಬಿಟ್ಟ ಮಾನವರ ಮನೋರಥಗಳೆಲ್ಲವೂ ಪೂರ್ಣವಾಗುತ್ತವೆ ಹಾಗೂ ಮುಂದೆ ಅವರಿಗೆ ಶಾಶ್ವತವಾಗಿ ಸ್ವರ್ಗದಲ್ಲಿ ನಿರಂತರ ನಿವಾಸವು ಲಭಿಸುತ್ತದೆ.'' ಹೀಗೆ ಪರಶುರಾಮನಿಗೆ ಅವನ ಪಿತೃಗಳು ಆನಂದದಿಂದ ಅವನು ಕೇಳಿದ ವರಗಳನ್ನು ಕೊಟ್ಟು ಅಲ್ಲಿಯೇ ಅಂತರ್ಧಾನ ಹೊಂದಿದರು. ಹೀಗಿದೆ ಈ ಪರಶುರಾಮ ಮಡುಗಳು ಪುಣ್ಯಸರೋವರಗಳಾಗಿ ಮಾರ್ಪಟ್ಟ ಕಥೆ. ಇದಕ್ಕೆಲ್ಲ ಭೃಗು ವಂಶದಲ್ಲಿ ಅವತರಿಸಿದ ಪರಮ ಚೇತನ ಪರಮಾತ್ಮನ ಪ್ರಭಾವವೇ ಕಾರಣ.

೭೯೨. ಸ್ನಾತ್ವಾ ಹ್ರದೇಷು ರಾಮಸ್ಯ ಬ್ರಹ್ಮಚಾರೀ ಶುಚಿವ್ರತಃ ।
ರಾಮಂ ಸಮಭ್ಯರ್ಚ್ಯ ತಥಾ ವಿಂದೇದ್ಬಹು ಸುವರ್ಣಕಮ್ ॥

ಈ ರಾಮ ಸರೋವರಗಳಲ್ಲಿ ಯಾತ್ರಿಕನು ಬ್ರಹ್ಮಚರ್ಯದಿಂದ ಇದ್ದು ಸ್ನಾನ ಮಾಡಿ ಶುಚಿರ್ಭೂತನಾಗಿ ಪರಶುರಾಮನನ್ನು ಪೂಜಿಸಬೇಕು. ವ್ರತಗಳನ್ನು ಮಾಡಬೇಕು. ಇದರಿಂದ ಬದುಕು ಬಂಗಾರವಾಗಿ ಮಾನವನು ಭಾಗ್ಯವಂತನಾಗಿ ಬಾಳುವನು.

ಹೀಗೆ ಮುಂದೆ ತೀರ್ಥಯಾತ್ರಿಯು ಕುರುಕ್ಷೇತ್ರದಲ್ಲಿರುವ ವಂಶಮೂಲ ಎಂಬ ತೀರ್ಥಕ್ಕೆ ಹೋಗಬೇಕು. ಅಲ್ಲಿ ನಿಯಮದಿಂದ ಜಿತೇಂದ್ರಿಯನಾಗಿ ಇದ್ದು ಸ್ನಾನಮಾಡಿ ದೇವರ ಆರಾಧನೆ ಮಾಡಿದವನು ತನ್ನ ಮೂಲ ಪುರುಷನಿಂದ ಮೊದಲು ಮಾಡಿ ತನ್ನವರೆಗಿನ ಇಡೀ ವಂಶವನ್ನೇ ಉದ್ಧಾರ ಮಾಡುವನು. ಅಲ್ಲಿ ಕಾಯಶೋಧನ ಎಂಬ ಮತ್ತೊಂದು ತೀರ್ಥವಿದೆ. ಅದು ಮೂರು ಲೋಕಗಳಲ್ಲಿಯೇ ಪ್ರಸಿದ್ಧಿ ಪಡೆದಿದೆ. ಅಲ್ಲಿ ಸ್ನಾನ ಮಾಡುವದರಿಂದ ಮಾನವ ಶರೀರವು ಅಂತರಂಗ ಹಾಗೂ ಬಹಿರಂಗ ಶುದ್ಧಿ ಹೊಂದಿ ಪರಮ ಪವಿತ್ರವಾಗುವದು. ಇದರಲ್ಲಿ ಸಂದೇಹವಿಲ್ಲ.

೭೯೩. ತಾವದ್ಭ್ರಮಂತಿ ತೀರ್ಥೇಷು ಸಿದ್ಧಾಸ್ತೀರ್ಥಪರಾಯಣಾಃ ।
ಯಾವನ್ನ ಮಪ್ರಾಪ್ನುವಂತೀಹ ತೀರ್ಥಂ ತತ್ಕಾಯಶೋಧನಂ ॥

ಇಂಥ ಪಾವನ ದೇಹ ಪಡೆದು ಇಲ್ಲಿ ಸ್ನಾನ ಮಾಡಿದ ಮನುಷ್ಯನು ಎಂದೂ ಮರಳಿಬಾರದಂಥ ದಿವ್ಯಸ್ಥಾನವನ್ನು ಕುರಿತು ಮುಂದೆ ಪ್ರಯಾಣಿಸುವನು. ಸಿದ್ಧರೂ ಸಾಧಕರೂ ಈ ಕಾಯಶೋಧನ ತೀರ್ಥವನ್ನು ಕಾಣುವವರೆಗೆ ಮಾತ್ರ ತೀರ್ಥ ತೀರ್ಥ ಅಲೆಯುತ್ತಾರೆ. ಕಂಡ ನೀರಿನಲ್ಲಿ ಮುಳುಗುತ್ತಾರೆ. ಆದರೆ ಈ ಕಾಯ ಶೋಧನ ತೀರ್ಥಕ್ಕೆ ಬಂದ ಬಳಿಕ ಇಲ್ಲಿಯ ಪುಣ್ಯಜಲದಲ್ಲಿ ಮಿಂದ ಬಳಿಕ ಮುಂದೆ ಅವರಿಗೆ ಪುನರ್ಜನ್ಮವಿಲ್ಲ. ಅವರು ಮರಳಿ ಸಂಸಾರಕ್ಕೆ ಬರುವದೂ ಇಲ್ಲ. ದಿವ್ಯಗತಿ ಹೊಂದುವರು.

೭೯೪. ಲೋಕೋದ್ಧಾರಂ ಸಮಾಸಾದ್ಯ ತೀರ್ಥಂ ಸ್ಮರಣತತ್ಪರಃ ।
ಸ್ನಾತ್ವಾ ತೀರ್ಥವರೇ ತಸ್ಮಿನ್ ಲೋಕಂ ಪಶ್ಯತಿ ಶಾಶ್ವತಮ್ ॥

ಬ್ರಾಹ್ಮಣ ಶ್ರೇಷ್ಠರೇ, ಅನಂತರ ಯಾತ್ರಿಕರು ಲೋಕೋದ್ಧಾರ ಎಂಬ ಪುಣ್ಯ ತೀರ್ಥಕ್ಕೆ ಪ್ರಯಾಣ ಬೆಳೆಸಬೇಕು. ಅದು ಸರ್ವ ಸಮರ್ಥನಾದ ಶ್ರೀಹರಿಯು ಲೋಕದ ಜನರೆಲ್ಲ ಉದ್ಧರಿಸುವ ದಿವ್ಯ ಕ್ಷೇತ್ರ, ಮೂರು ಲೋಕಗಳಲ್ಲಿಯೇ ಹೆಸರು ಪಡೆದಿದೆ.

೭೯೫. ಯತ್ರ ವಿಷ್ಣುಃ ಸ್ಥಿತೋ ನಿತ್ಯಂ ಶಿವೋ ದೇವಶ್ಚ ಶಾಶ್ವತಃ ।
ತೌ ದೇವೌ ಪ್ರಣಿಪಾತೇನ ಪ್ರಸಾದ್ಯ ಮುಕ್ತಿಮಾಪ್ನುಯಾತ್ ॥

ಇಲ್ಲಿ ಬಂದು, ಇಲ್ಲಿಯ ತಿಳಿನೀರಿನಲ್ಲಿ ಮಿಂದು, ದೇವರನ್ನು ನೆನೆದು ನಿಂತ ನರನಿಗೆ ಶಾಶ್ವತ ಗತಿ ಕಟ್ಟಿಟ್ಟದ್ದು. ಯಾಕೆಂದರೆ ಇಲ್ಲಿ ವಿಷ್ಣು ಹಾಗೂ ಶಿವ ಇಬ್ಬರೂ ದೇವತೆಗಳು ಶಾಶ್ವತವಾಗಿ ನೆಲೆ ನಿಂತಿದ್ದಾರೆ. ಅವರಿಬ್ಬರನ್ನು ನಮಿಸಿ ನುತಿಸಿ ಅವರ ಅನುಗ್ರಹ ಪಡೆದರೆ ಮುಕ್ತಿಯು ದೊರಕುವದು. ಇದರ ಮುಂದೆ ಶ್ರೀತೀರ್ಥ. ಅದರಲ್ಲಿ ಅತ್ಯುತ್ತಮವಾದ ಸಾಲಿಗ್ರಾಮವು ತುಂಬಿರುತ್ತವೆ. ಇಲ್ಲಿ ಸ್ನಾನ ಮಾಡಿ ತನ್ನ ಸೇವೆಗೈದವರನ್ನು ಭಗವಂತನು ತನ್ನ ಸನ್ನಿಧಾನದಲ್ಲಿಯೇ ಸರ್ವದಾ ಇಟ್ಟುಕೊಳ್ಳುತ್ತಾನೆ.

೭೯೬. ಕಪಿಲಾನಾಂ ಸಹಸ್ರಸ್ಯ ಫಲಂ ವಿಂದಂತಿಮಾನವಃ ।
ತತ್ರಸ್ಥಿತಾ ಮಹಾದೇವಂ ಕಾಪಿಲಂ ವಪುರಾಶ್ರಿತಮ್ ।
ದೃಷ್ಟ್ವಾ ಮೋಕ್ಷಮವಾಪ್ನೋತಿ ಋಷಿಭಿಃ ಪೂಜಿತಂ ಶಿವಮ್ ॥

ಅದರಅನಂತರಮೂರುಲೋಕದಲ್ಲಿ ಹೆಸರುಹೊತ್ತ ಕಪಿಲಾತೀರ್ಥವಿದೆ. ಅಲ್ಲಿ ಸ್ನಾನ ಮಾಡಿ ದೇವರನ್ನು ಪೂಜಿಸಿ ಪಿತೃಗಳ ತರ್ಪಣ ಕೊಟ್ಟರೆ ಸಾವಿರ ಕಪಿಲ ಗೋವುಗಳನ್ನು ದಾನಮಾಡಿದ ಪುಣ್ಯವು ಮಾನವನಿಗೆ ಲಭಿಸುವದು. ಈ ಕ್ಷೇತ್ರದಲ್ಲಿ ಕಪಿಲರೂಪದಿಂದ ನೆಲೆಸಿದ ಮಹಾದೇವರನ್ನು ಋಷಿಗಳು ಪೂಜಿಸುತ್ತಾರೆ. ಈ ಶಿವದರ್ಶನದಿಂದ ಮಾನವರು ಮುಕ್ತಿ ಹೊಂದುತ್ತಾರೆ. ಇದರಮುಂದೆ ಸೂರ್ಯತೀರ್ಥಕ್ಕೆ ಬಂದು ಶುದ್ಧ ಮನಸ್ಸಿನಿಂದ ಸ್ನಾನಮಾಡಬೇಕು. ಪಿತೃಗಳಿಗೆ ತರ್ಪಣ ಕೊಡಬೇಕು. ಇದರಿಂದ ಅಗ್ನಿಷ್ಟೋಮ ಎಂಬ ಯಜ್ಞ ಮಾಡಿದ ಪುಣ್ಯವು ಬರುತ್ತದೆ. ಅದರಿಂದ ಸೂರ್ಯಲೋಕಕ್ಕೆ ಹೋಗುತ್ತಾನೆ. ಅಲ್ಲಿ ತ್ರಿಲೋಕ ವಿಶ್ರುತನಾದ ಸಾಸಿರ ಕಿರಣದ ನೇಸರನ್ನು ನೋಡಿದ ಬಳಿಕ ವರನಿಗೆ ದಿವ್ಯ ಜ್ಞಾನೋದಯವಾಗುವದು. ಅದರಿಂದ ಅವನು ಭಗವದ್ದರ್ಶನ ಪಡೆದು ಮೋಕ್ಷ ಹೊಂದುವನು. ತೀರ್ಥಯಾತ್ರಿಕನು ಹೀಗೆ ಕ್ರಮ ಪ್ರಕಾರ ಒಂದೊಂದು ತೀರ್ಥಗಳನ್ನು ಸೇವಿಸುತ್ತ ಭವಾನೀವನಕ್ಕೆ ಬರಬೇಕು. ಅಲ್ಲಿಯ ತೀರ್ಥದಲ್ಲಿ ಸ್ನಾನಮಾಡುವದರಿಂದ ಸಾವಿರ ಹಸುಗಳನ್ನು ದಾನಮಾಡಿದ ಪುಣ್ಯ ಬರುತ್ತದೆ. ಇದರಮುಂದೆ ಒಂದು ಗಣಪತಿಯ ಕ್ಷೇತ್ರವಿರುತ್ತದೆ. ಈ ಗಣೇಶ ದೇವಾಲಯವು ಒಂದು ಆಳವಾದ ಅಂತರ್ಗುಹದ ಮೇಲೆ ನಿಂತಿರುತ್ತದೆ. ಈ ಕ್ಷೇತ್ರದ ಹಿನ್ನೆಲೆಯಲ್ಲಿ ಒಂದು ಕಥೆ ಇದೆ.

೭೯೭. ಪಿತಾಮಹಸ್ಯ ಪಿಬತೋಹ್ಯಮೃತಂ ಪೂರ್ವಮೇವ ಹಿ ।
ಉದ್ಗಾರಾತ್ಸುರಭಿರ್ಜಾತಾ ಸಾ ಚ ಪಾತಾಲಮಾಶ್ರಿತಾ ॥

ಪೂರ್ವಕಾಲದಲ್ಲಿ ಬ್ರಹ್ಮದೇವರು ಅಮೃತವನ್ನು ಪಾನ ಮಾಡುತ್ತಿದ್ದರು. ಅವರ ಅಮೃತಪಾನದ ತೃಪ್ತಿಯ ತೇಗಿನಿಂದ ಸುರಭಿ ಎಂಬ ಕಾಮಧೇನು ಉತ್ಪನ್ನವಾಯಿತು. ಅದು ಮುಂದೆ ಪಾತಾಳಲೋಕಕ್ಕೆ ಪ್ರಯಾಣ ಮಾಡಿತು. ಅಲ್ಲಿ ಆ ಸುರಭಿ ಗೋವಿನಿಂದ ಅನೇಕ ಹಸುಗಳು ಹುಟ್ಟಿದವು. ಕಾಮಧೇನುವಿನಿಂದ ಹುಟ್ಟಿದ ಹಸುಗಳೆಲ್ಲವೂ ಲೋಕಮಾತೆಯೆಂದು ಹೆಸರಾಗಿದ್ದವು.

೭೯೮. ತಸ್ಯಾಃಸುರಭಯೋ ಜಾತಾ ಮಾತರೋ ಲೋಕಮಾತರಃ ।
ತಾಭಿಸ್ತತ್ ಸಕಲಂ ವ್ಯಾಪ್ತಂ ಪಾತಾಲಂ ಸುನಿರಂತರಮ್ ॥

೭೯೯. ಪಿತಾಮಹಸ್ಯ ಯಜತೋ ದಕ್ಷಿಣಾರ್ಥಮುಪಾಹೃತಾಃ ।
ಆಹೂತಾ ಬ್ರಾಹ್ಮಣಾಸ್ತೇಚ ವಿಭ್ರಾಂತಾ ವಿವರೇಣ ಹಿ ॥

ಪಾತಾಳ ಲೋಕವೆಲ್ಲವೂ ಇಂಥ ಆಕಳುಗಳಿಂದ ತುಂಬಿತು. ಮುಂದೆ ಒಂದು ದಿನ ಬ್ರಹ್ಮದೇವರು ಯಜ್ಞ ಮಾಡುವಾಗ ಗೋದಾನ ಮಾಡಲಿಕ್ಕಾಗಿ ಪಾತಾಳಲೋಕದಿಂದ ಆ ಹಸುಗಳನ್ನೆಲ್ಲ ಮೇಲಕ್ಕೆ ಕರೆತಂದರು. ಪಾತಾಳದ ಆಳದಿಂದ ಗೋವುಗಳನ್ನು ಮೇಲೆ ತರಲು ಬ್ರಹ್ಮದೇವರು ಭೂಮಿಯಲ್ಲಿ ಕೊರೆದ ಆ ದೊಡ್ಡ ರಂಧ್ರವನ್ನು ನೋಡಿ ಯಜ್ಞಕ್ಕೆ ಬಂದ ಬ್ರಾಹ್ಮಣರೆಲ್ಲರೂ ಬೆಕ್ಕಸ ಬೆರಗಾದರು.

೮೦೦. ತಸ್ಮಿಂಸ್ತು ವಿವರ ದ್ವಾರೇ ಸ್ಥಿತೋ ಗಣಪತಿಃಸ್ವಯಮ್ ।
ಯಂ ದೃಷ್ಟ್ವಾ ಸಕಲಾನ್ ಕಾಮಾನಾಪ್ನೋತಿ ನಿಯತೇಂದ್ರಿಯಃ॥

ಈ ಗುಹೆ ಆ ಪಾತಾಳ ರಂಧ್ರದ ಹೆಬ್ಬಾಗಿಲದಂತಿದೆ. ಆ ಪಾತಾಳ ಲೋಕದ ಬಾಯಿಯಾದ ಈ ಗುಹೆಯ ಬಾಗಿಲಲ್ಲಿಯೇ ಈ ಗಣಪತಿಯು ನೆಲೆಸಿದ್ದಾನೆ. ಜಿತೇಂದ್ರಿಯನಾಗಿ ಈ ಗಣಪತಿಯ ಸಂದರ್ಶನವನ್ನು ಮಾಡಿಕೊಂಡರೆ ಮಾನವರ ಸಕಲ ಇಷ್ಟಾರ್ಥವೂ ಪೂರ್ಣವಾಗುತ್ತದೆ. ಸಂಗಿನೀ ಎಂಬುದು ಈ ಕುರುಕ್ಷೇತ್ರದ ಮತ್ತೊಂದು ತೀರ್ಥ. ಇದು ಮುಕ್ತಿ ದಾಯಕ. ಅದರ ಪಕ್ಕದಲ್ಲಿಯೇ ದೇವೀ ತೀರ್ಥವಿದೆ. ಅಲ್ಲಿ ಸ್ನಾನ ಮಾಡಿದವರಿಗೆ ಒಳ್ಳೇ ಸೌಂದರ್ಯವು ಪ್ರಾಪ್ತವಾಗುತ್ತದೆ. ಇಲ್ಲಿ ಇರುವವರೆಗೆ ಸಮೃದ್ಧ ಐಶ್ವರ್ಯ, ಮಕ್ಕಳು, ಮೊಮ್ಮಕ್ಕಳು, ಮರಿಮಕ್ಕಳು ಮುಂತಾದ ಸಂತತಿ ಸೌಭಾಗ್ಯ. ಬಯಸಿದ ಭೋಗೋಪಭೋಗಗಳು. ಹೀಗೆ ಇಲ್ಲಿ ಎಲ್ಲ ವಿಧ ಆನಂದ ಅನುಭವಿಸಿ ಕೊನೆಗೆ ಮೋಕ್ಷವನ್ನೂ ಕೂಡ ಈ ದೇವೀ ತೀರ್ಥದ ಸ್ನಾನದಿಂದ ಪುರುಷರು ಪಡೆಯುವರು.

೮೦೧. ಬ್ರಹ್ಮಾವರ್ತೇ ನರಃ ಸ್ನಾತ್ವಾ ಬ್ರಹ್ಮಜ್ಞಾನ ಸಮನ್ವಿತಃ ।
ಜಾಯತೇ ನಾತ್ರಸಂದೇಹಃ ಪ್ರಾಣಾನ್ಮುಂಚತಿ ಚೇಚ್ಛಯಾ ॥

ಇಲ್ಲಿಯ ಬ್ರಹ್ಮಾವರ್ತ ಎಂಬ ತೀರ್ಥದಲ್ಲಿ ಸ್ನಾನ ಮಾಡಿದರೆ ಬ್ರಹ್ಮಜ್ಞಾನವು ಉತ್ಪನ್ನವಾಗುವದು ಮತ್ತೂ ಸಾವು ಇಚ್ಛಾಧೀನ. ಬೇಕಾದಷ್ಟು ದಿನ ಬದುಕಬಹುದು. ಸಾಕು ಎನಿಸಿದಾಗ ಸಾಯಬಹುದು. ಇಂಥ ಜೀವನ ಮರಣ ಸಿದ್ಧಿ ಬ್ರಹ್ಮಾವರ್ತ ಸ್ನಾನದಿಂದ ಬರುವಲ್ಲಿ ಸಂಶಯವಿಲ್ಲ. ಬ್ರಾಹ್ಮಣೋತ್ತಮರೇ, ಅನಂತರ ರಂತುಕ ಕ್ಷೇತ್ರಕ್ಕೆ ಹೋಗಬೇಕು. ಅಲ್ಲಿ ಸರಸ್ವತೀ ತೀರ್ಥವಿದೆ. ರಂತುಕ ಎಂಬ ಯಕ್ಷರ ಒಡೆಯನು ಆ ತೀರ್ಥವನ್ನು ರಕ್ಷಿಸುತ್ತಾನೆ. ಆ ತೀರ್ಥದಲ್ಲಿ ಸ್ನಾನ ಮಾಡಿ ಉಪವಾಸವಿದ್ದು ದೇವರ ಅರಾಧನೆ ಮಾಡಿದರೆ ಜ್ಞಾನೋದಯವಾಗುವದು ಮತ್ತು ಯಕ್ಷನ ಅನುಗ್ರಹವಾಗಿ ಬಯಸಿದುದೆಲ್ಲ ಲಭಿಸುವದು, ಬೇಡಿದ್ದೆಲ್ಲ ದೊರಕುವದು.

೮೦೨. ತತೋ ಗಚ್ಛೇಚ್ಚ ವಿಪ್ರೇಂದ್ರಾಃಸುತೀರ್ಥಕಮನುತ್ತಮಮ್ ।
ತತ್ರ ಸನ್ನಿಹಿತಾ ನಿತ್ಯಂ ಪಿತರೋ ದೈವತೈಃಸಮಮ್ ॥

ವಿಪ್ರವರ್ಯರೇ, ಅನಂತರ ಸುತೀರ್ಥವೆಂಬ ಹೆಸರಿನ ತೀರ್ಥಕ್ಕೆ ಪಯಣಿಸಬೇಕು. ಅದಕ್ಕಿಂತ ಮಿಗಿಲಾದ ತೀರ್ಥವಿಲ್ಲ. ಅಲ್ಲಿ ಅನುದಿನವೂ ಪಿತೃಗಳ ಹಾಗೂ ದೇವತೆಗಳ ಸನ್ನಿಧಾನ. ಈ ತೀರ್ಥದಲ್ಲಿ ಮೀಯಬೇಕು. ಪಿತೃಗಳನ್ನು ಆರಾಧಿಸಬೇಕು. ಅದರಿಂದ ಅಶ್ವಮೇಧದ ಪುಣ್ಯ. ಪಿತೃಗಳಿಗೆಲ್ಲ ಪ್ರೀತಿ. ಇದಾದ ನಂತರ ಧರ್ಮದ ಮರ್ಮವನ್ನು ಅರಿತ ಋಷಿಗಳೇ, ಕ್ರಮ ಪ್ರಕಾರ ಅವಂತೀ ಕ್ಷೇತ್ರಕ್ಕೆ ಹೋಗಬೇಕು. ಅಲ್ಲಿಯ ಕಾಮೇಶ್ವರ ತೀರ್ಥದಲ್ಲಿ ಸ್ನಾನಮಾಡಿ ಶ್ರದ್ಧೆಯಿಂದ ಭಗವಂತನನ್ನು ಆರಾಧಿಸಿದರೆ ಎಲ್ಲ ರೋಗಗಳೂ ಪರಿಹಾರವಾಗುವವು. ಮತ್ತು ಬ್ರಹ್ಮ ಪ್ರಾಪ್ತಿಯಾಗುವದು ಖಂಡಿತ ಹಾಗೂ ಅಲ್ಲಿಯೇ ಇರುವ ಮಾತೃ ತೀರ್ಥದಲ್ಲಿ ಭಕ್ತಿಯಿಂದ ಸ್ನಾನ ಮಾಡಿದರೆ ಸಂತಾನದ ಅಭಿವೃದ್ಧಿ ಸಂಪತ್ತಿಯ ಸಮೃದ್ಧಿ ಎರಡೂ ಆಗುತ್ತದೆ.

೮೦೩. ತತಃ ಸೀತಾ ವನಂ ಗಚ್ಛೇತ್ ನಿಯತೋ ನಿಯತಾಶನಃ
ಪುನಾತಿ ದರ್ಶನಾದೇವ ಪುರುಷಾನೇಕವಿಂಶತಿಮ್ ॥

ಅನಂತರ ಸೀತಾವನಕ್ಕೆ ಹೋಗಬೇಕು. ಅಲ್ಲಿ ಇದ್ದಾಗ ಇಂದ್ರಿಯಗಳನ್ನು ಬಿಗಿಹಿಡಿದು ಆಹಾರವನ್ನು ಮಿತಗೊಳಿಸಬೇಕು. ಈ ತೀರ್ಥದ ದರ್ಶನದಿಂದಲೇ ಹಿಂದಿನ ಇಪ್ಪತ್ತೊಂದು ತಲೆಮಾರಿನ ಪಿತೃಗಳು ಪುನೀತರಾಗುವರು. ಈ ತೀರ್ಥದ ಒಂದೆಡೆ ನಿಂತು ಆ ಪವಿತ್ರ ಜಲವನ್ನು ಪ್ರೋಕ್ಷಣ ಮಾಡಿಕೊಂಡರೂ ಸಾಕು. ಯಾತ್ರಿಕರ ಪಾಪವೆಲ್ಲ ಪರಿಹಾರವಾಗಿ ಅವನ ದೇಹವು ಪವಿತ್ರವಾಗುವದು.

೮೦೪. ಪ್ರಾಣಾಯಾಮೈರ್ನಿರ್ಹರಂತಿ ಸ್ವಲೋಮಾನಿ ದ್ವಿಜೋತ್ತಮಾಃ ।
ಪೂತಾತ್ಮಾನಶ್ಚ ತೇ ವಿಪ್ರಾಃ ಪ್ರಯಾಂತಿ ಪರಮಾಂಗತಿಮ್ ॥

ಅಲ್ಲಿ ಲೋಮಾಪಹ ಎಂಬ ಇನ್ನೂ ಒಂದು ತೀರ್ಥವಿದೆ. ಅಲ್ಲಿ ಮೈತೊಳೆದ ನಾಯಿಗೆ ಕೂಡ ಉದ್ಧಾರ ಉಂಟು. ಇದನ್ನು ತಿಳಿದ ಪಂಡಿತರಾದ ತೀರ್ಥ ಯಾತ್ರಿಕರು ಈ ಲೋಮಾಪಹ ತೀರ್ಥದಲ್ಲಿ ಸ್ನಾನಮಾಡಿ ಪ್ರಾಣಾಯಾಮಾದಿಗಳಿಂದ ಭಗವಂತನ ಧ್ಯಾನೋಪಾಸನೆಗೈದು ತಮ್ಮ ಪಾಪಗಳನ್ನು ಕಳೆದುಕೊಳ್ಳುತ್ತಾರೆ ಮತ್ತು ದೇಹ ಪರಿಶುದ್ಧರಾಗಿ ದಿವ್ಯ ಗತಿಯನ್ನು ಹೊಂದುತ್ತಾರೆ. ಅಲ್ಲಿ ದಶಾಶ್ವಮೇಧಿಕ ಎಂಬ ಇನ್ನೂ ಒಂದು ತೀರ್ಥ ಹೆಸರಾಗಿದೆ. ಅಲ್ಲಿ ಸ್ನಾನ ಮಾಡಿ ದೇವರಲ್ಲಿ ಭಕ್ತಿಯಿಂದ ಮನಸ್ಸಿಟ್ಟು ಮಾನವನು ಹತ್ತು ಅಶ್ವಮೇಧ ಯಾಗ ಗಳನ್ನು ಮಾಡಿದ ಪುಣ್ಯವನ್ನು ಪಡೆಯುತ್ತಾನೆ. ಇದಾದ ಬಳಿಕ ಶ್ರದ್ಧಾಳುವಾದ ಪ್ರಯಾಣಿಕನು ಜಗತ್ಪ್ರಸಿದ್ಧವಾದ ಮಾನುಷ ತೀರ್ಥಕ್ಕೆ ಹೋಗಬೇಕು. ಅದರ ದರ್ಶನದಿಂದಲೇ ಮನುಷ್ಯರಿಗೆ ಮುಕ್ತಿ. ಸ್ನಾನ ಮಾಡಿದರಂತೂ ಕೇಳುವದೇನು?

೮೦೫. ಪುರಾ ಕೃಷ್ಣ ಮೃಗಾಸ್ತತ್ರವ್ಯಾಧೈಸ್ತು ಪರಿ ಪೀಡಿತಾಃ ।
ಅವಗಾಹ್ಯ ಸರಸ್ಯಸ್ಮಿನ್ ಮಾನುಷತ್ವಮುಪಾಗತಾಃ ॥

ಪೂರ್ವಕಾಲದಲ್ಲಿ ಕೆಲವು ಬೇಡರು ಬಾಣ ಬಿಟ್ಟಕೂಡಲೇ ಹಲವು ಚಿಗರೆಗಳು ಹೆದರಿ ಈ ಮಾನುಷ ತೀರ್ಥದಲ್ಲಿ ಹಾರಿಕೊಂಡವು. ಈ ಸರೋವರದ ಪ್ರಭಾವದಿಂದ ಆ ಮೃಗಗಳೆಲ್ಲವೂ ಮಾನವರಾಗಿ ಮಾರ್ಪಾಡುಹೊಂದಿದವು. ಆ ಚಿಗರೆಗಳನ್ನು ಬೆನ್ನಟ್ಟಿದ ಬೇಡರು ಅಲ್ಲಿಗೆ ಓಡಿ ಬಂದರು. ಆ ಮಾನುಷ ಸರೋವರದ ದಂಡೆಯ ಮೇಲೆ ಕೆಲವು ಬ್ರಾಹ್ಮಣೋತ್ತಮರು ಕುಳಿತುಕೊಂಡಿದ್ದರು. ಅವರಿಗೆ ನಮಸ್ಕರಿಸಿ ಬೇಡರು ಪ್ರಶ್ನಿಸಿದರು-

೮೦೬. ತತೋವ್ಯಾಧಾಶ್ಚತೇ ಸರ್ವೇ ತಾನಪ್ರಚ್ಛನ್ ದ್ವಿಜೋತ್ತಮಾಃ ।
ಮೃಗಾಃ ಕ್ವ ಋಷಯೋ ಯಾತಾ ಅಸ್ಮಾಭಿಃಶರಪೀಡಿತಾಃ ॥

''ಋಷಿಗಳೇ, ನಮ್ಮ ಬಾಣಗಳ ಒಡೆತ ತಿಂದು ಹೆದರಿ ಓಡಿದ ಚಿಗರೆಗಳೆಲ್ಲ ಎಲ್ಲಿ ಹೋದವು ? ಈ ಸರೋವರದ ನೀರಿನಲ್ಲಿ ಹೆದರಿ ಹಾರಿಕೊಂಡ ಅವೆಲ್ಲವು ಇಲ್ಲಿಯ ಮಡುವಿನಲ್ಲಿ ಮುಳುಗಿ ಹೋದವೇ, ಏನಾದವು?'' ತಿಳಿಸಿರಿ. ಬೇಟೆಗಾರರ ಆ ನುಡಿಯನ್ನು ಕೇಳಿ ಅಲ್ಲಿಯೇ ದಡದಲ್ಲಿ ಕುಳಿತ ಆ ಬ್ರಾಹ್ಮಣರು ನಸುನಕ್ಕು ಹೇಳಿದರು -

ತೇಽಬ್ರುವಂಸ್ತತ್ರ ವೈ ಪೃಷ್ಟಾ ವಯಂ ತೇ ಚ ದ್ವಿಜೋತ್ತಮಾಃ ।
ಅಸ್ಯ ತೀರ್ಥಸ್ಯ ಮಾಹಾತ್ಮ್ಯಾತ್ ಮಾನುಷತ್ವಮುಪಾಗತಾಃ ॥

''ನಾವೇ ಆ ಬೆಗರೆಗಳು. ಈ ಮಾನುಷ ಸರೋವರದ ಮಹಿಮೆಯಿಂದ ಇಲ್ಲಿ ಮುಳುಗಿದ ನಾವು ಮೃಗ ಜನ್ಮವನ್ನು ನೀಗಿ ಮನುಷ್ಯರಾಗಿ ಮಾರ್ಪಟ್ಟಿದ್ದೇವೆ.''

೮೦೭. ನಿಮಗ್ನಾಸ್ತೇ ಸರಃ ಪ್ರಾಪ್ಯ ಕಿಂತದ್ಭೂತ ದ್ವಿಜೋತ್ತಮಾಃ

ಇದು ನಿಜವಾಗಿಯೂ ಮಹಾತೀರ್ಥ. ನೀವೂ ಇದರ ಮೇಲೆ ಶ್ರದ್ಧೆ ಇಡಿರಿ. ಸ್ನಾನ ಮಾಡಿರಿ. ಬೆಗರೆಗಳ ಮೇಲಿನ ಮತ್ಸರವನ್ನು ದ್ವೇಷವನ್ನು ಬಿಟ್ಟು ಬಿಡಿರಿ. ಈ ತೀರ್ಥದಲ್ಲಿ ನೀವು ಮೈತೊಳೆದರೆ ಇದು ನಿಮ್ಮ ಪಾಪಗಳನ್ನೆಲ್ಲ ತೊಳೆಯುವದು. ಇದರಿಂದ ನಿಮ್ಮದೂ ಉದ್ಧಾರವಾಗುವದು ಸಂಶಯವಿಲ್ಲ.''

ಆ ಬ್ರಾಹ್ಮಣರ ಬಾಯಿಂದ ಮಾನುಷ ಸರೋವರದ ಮಾಹಾತ್ಮ್ಯವನ್ನು ಕೇಳಿ ಆ ಬೇಟೆಗಾರರಿಗೂ ಭಕ್ತಿ ಹುಟ್ಟಿತು. ಅವರ ದೇಹ ಪರಿಶುದ್ಧವಾಯಿತು. ಅನಂತರ ಅವರು ಭಗವದಾರಾಧನೆಯನ್ನು ಮಾಡಿ ಸ್ವರ್ಗ ಸೇರಿದರು. ದ್ವಿಜೋತ್ತಮರೇ, ಈ ಮಾನುಷ ತೀರ್ಥದ ಮಹಿಮೆಯನ್ನು ವಿಶ್ವಾಸದಿಂದ ಕೇಳಿದವರು ದಿವ್ಯಗತಿಯನ್ನು ಹೊಂದುತ್ತಾರೆ.

ವಾಮನಮಹಾಪುರಾಣದಲ್ಲಿ ಕೂಡಲಿರಾಮನಿರ್ಮಿಸಿದ ತೀರ್ಥ ಎಂಬ ೩೫ನೇ ಅಧ್ಯಾಯವು ಮುಗಿದುದು



## ಸಿಂಹ - ಶರಭಗಳ ಹೋರಾಟ

**ಅಧ್ಯಾಯ - ೩೬**

೮೦೮. ಮಾನುಷಸ್ಯ ತು ಪೂರ್ವೇಣ ಕ್ರೋಶಮಾತ್ರೇ ದ್ವಿಜೋತ್ತಮಾಃ।
ಆಪಗಾ ನಾಮ ವಿಖ್ಯಾತಾ ನದೀ ದ್ವಿಜ ನಿಷೇವಿತಾ ।

೮೦೯. ಶ್ಯಾಮಕಂ ಪಯಸಾ ಸಿದ್ಧಮಾಜ್ಯೇನ ಚ ಪರಿಪ್ಲುತಮ್ ।
ಯೇ ಪ್ರಯಚ್ಛಂತಿ ವಿಪ್ರೇಭ್ಯಃ ತೇಷಾಂ ಪಾಪಂ ನ ವಿದ್ಯತೇ॥

**ಲೋಮಹರ್ಷಣ :** ಮಾನುಷ ತೀರ್ಥದ ಪಡುವಣ ನಿಟ್ಟಿನಲ್ಲಿ ಮೂರು ಹರದಾರಿ ಅಂತರದಲ್ಲಿ ಆಪಗಾ ಎಂಬ ನದಿಯು ಹರಿಯುತ್ತದೆ. ದ್ವಿಜ ಶ್ರೇಷ್ಠರೇ, ಅನೇಕ ಬ್ರಾಹ್ಮಣರು ಆ ನದಿಯ ತಟಾಕದಲ್ಲಿ ನಿಂತು ತಪಿಸುತ್ತಾರೆ. ಈ ಆಪಗಾ ನದಿಯ ತಡಿಯಲ್ಲಿ ಸಾವಕ್ಕಿಯನ್ನು ಹಾಲಿನಲ್ಲಿ ನೆನೆಸಿ ತುಪ್ಪ ಕೂಡಿಸಿ ಬ್ರಾಹ್ಮಣರಿಗೆ ದಾನ ಕೊಡಬೇಕು. ಅದರಿಂದ ಪಾಪಗಳೆಲ್ಲ ದೂರವಾಗುತ್ತವೆ. ಈ ಆಪಗಾ ನದೀ ತೀರದಲ್ಲಿ ಶ್ರಾದ್ಧ ಮಾಡಿದವರ ಇಷ್ಟಾರ್ಥಗಳೆಲ್ಲ ಪೂರ್ಣವಾಗುವವು. ಅವರ ತಾಯಿತಂದೆಗಳು ಇಲ್ಲಿ ಶ್ರಾದ್ಧ ಮಾಡಿದ್ದಕ್ಕಾಗಿ ಮಗನನ್ನು ಹರಸುವರು. ಅಜ್ಜಂದಿರು ಸ್ಮರಿಸುವರು.

''ನಮ್ಮ ಕುಲದಲ್ಲಿ ಆಪಗಾ ನದಿಗೆ ಹೋಗಿ ನಮಗೆ ಎಳ್ಳುನೀರು ಕೊಡುವ ಪುಣ್ಯಾತ್ಮನು ಎಂದಾದರೂ ಯಾವನಾದರೂ ಹುಟ್ಟಬಹುದು. ನನ್ನ ಮಗ ಅಥವಾ ಮೊಮ್ಮಗನು ಈ ನದೀ ನೀರಿನಿಂದ ತರ್ಪಣ ಬಿಡಬಹುದು. ಅದರಿಂದ ಮುಂದಿನ ನೂರು ತಲೆಮಾರುಗಳವರೆಗೆ ಪೂರ್ಣ ತೃಪ್ತಿ ನಮಗೆ ಆಗುವದು'' ಎಂದು ಪಿತೃಗಳು ಹಾರೈಸುತ್ತಾರೆ. ವಿಶೇಷವಾಗಿ ಭಾದ್ರಪದಮಾಸದ ಕೃಷ್ಣಪಕ್ಷ ಚತುರ್ದಶಿ ಮಧ್ಯಾಹ್ನ

ಕಾಲದಲ್ಲಿ ಈ ಆಪಗಾ ನದಿಯಲ್ಲಿ ಪಿತೃಗಳನ್ನು ಉದ್ದೇಶಿಸಿ ಪಿಂಡ ಪ್ರದಾನ ಮಾಡುವದರಿಂದ ಮುಕ್ತಿಯಾಗುವದು. ದ್ವಿಜ ಪುಂಗವರೇ, ಇದರ ಮುಂದಿನ ಕ್ಷೇತ್ರ ಬ್ರಹ್ಮೋದುಂಬರ. ಇದು ಉತ್ತಮ ವಾದ ಬ್ರಹ್ಮದೇವರ ಸ್ಥಾನವೆಂದು ಜಗತ್ತಿನಲ್ಲಿ ಪ್ರಸಿದ್ಧವಾಗಿದೆ. ಅಲ್ಲಿ ಹೋಗಿ ಬ್ರಹ್ಮ ಋಷಿ ಕುಂಡಗಳಲ್ಲಿ ಸ್ನಾನ ಮಾಡಿದರೆ ಸಪ್ತರ್ಷಿಗಳ ಅನುಗ್ರಹವಾಗುವದು. ಅದರಿಂದ ಏಳು ಸೋಮಯಾಗ ಮಾಡಿದ ಪುಣ್ಯ ಬರುವದು.

೮೧೦. ಭರದ್ವಾಜೋ ಗೌತಮಶ್ಚ ಜಮದಗ್ನಿಶ್ಚ ಕಶ್ಯಪಃ ।
ವಿಶ್ವಾಮಿತ್ರೋ ವಸಿಷ್ಠಶ್ಚ ಅತ್ರಿಶ್ಚ ಭಗವಾನ್ ಮುನಿಃ ॥

೮೧೧. ಏತೈಸ್ಸಮೇತ್ಯ ತತ್ಕುಂಡಂ ಕಲಿತಂ ಭುವಿ ದುರ್ಲಭಮ್ ।
ಬ್ರಹ್ಮಣಾ ಸೇವಿತಂ ತಸ್ಮಾದ್ ಬ್ರಹ್ಮೋದುಂಬರ ಮುಚ್ಯತೇ ॥

ಭರಧ್ವಾಜ, ಗೌತಮ, ಜಮದಗ್ನಿ, ಕಶ್ಯಪ, ವಿಶ್ವಾಮಿತ್ರ, ವಸಿಷ್ಠ ಮತ್ತೂ ಪೂಜ್ಯ ಅತ್ರಿಮುನಿ ಈ ಏಳು ಮಹರ್ಷಿಗಳು ಕಲೆತು ಈ ಬ್ರಹ್ಮರ್ಷಿ ಕುಂಡವನ್ನು ನಿರ್ಮಿಸಿದ್ದಾರೆ. ಇದು ಭೂಮಿಯಲ್ಲಿ ಅತ್ಯಂತ ದುರ್ಲಭ. ಸ್ವಯಂ ಬ್ರಹ್ಮದೇವರು ಇಲ್ಲಿ ಸ್ನಾನ ಮಾಡಿ ಹರಿಯನ್ನು ಸೇವಿಸಿದ್ದಾರೆ. ಆದುದರಿಂದಲೇ ಅದಕ್ಕೆ ಬ್ರಹ್ಮೋದುಂಬರ ಎಂದು ಹೆಸರು.

ಅವ್ಯಕ್ತ ಸ್ವರೂಪವಾದ ಬ್ರಹ್ಮದೇವರ ತೀರ್ಥವೆನಿಸಿದ ಇಲ್ಲಿ ಸ್ನಾನ ಮಾಡಿದವರು ಬ್ರಹ್ಮಲೋಕವನ್ನು ಹೊಂದುತ್ತಾರೆ. ಅಲ್ಲಿ ವಿಮರ್ಶೆ ಮಾಡಬೇಕಾಗಿಲ್ಲ. ಈ ಕ್ಷೇತ್ರದಲ್ಲಿ ದೇವತೆಗಳ ಹಾಗೂ ಪಿತೃಗಳ ಪ್ರೀತಿಯ ಉದ್ದೇಶದಿಂದ ಬ್ರಾಹ್ಮಣರ ಆರಾಧನೆಯನ್ನು ಮಾಡಿದರೆ ಪಿತೃಗಳಿಗೆ ಸಂತೋಷವಾಗುವದು. ಅವರು ಧರೆಯಲ್ಲಿ ದೊರೆಯುವ ದುರ್ಲಭ ಫಲಗಳನ್ನು ಆರಾಧಕರಿಗೆ ಕರುಣಿಸುವರು. ಸಪ್ತರ್ಷಿಗಳ ನೆನೆದು ಬೇರೆ ಬೇರೆ ಕುಂಡಗಳಲ್ಲಿ ಸ್ನಾನ ಮಾಡಿದರೆ ಆ ಋಷಿಗಳ ಪ್ರಸಾದದಿಂದ ಸಪ್ತ ಲೋಕಗಳ ಅರಸೊತ್ತಿಗೆಯೇ ದೊರಕಬಹುದು. ಅದಕ್ಕೆ ಮುಂದೆ ಕಪಿಲಸ್ಥ ಎಂಬ ಒಂದು ಕ್ಷೇತ್ರವಿದೆ. ಅದು ಪಾತಕಗಳ ಪರಿಹಾರಕ್ಕೆ ಹೆಸರಾಗಿದೆ. ಅಲ್ಲಿ ಮಹಾದೇವರು ವೃದ್ಧಕೇದಾರ ಎಂಬ ಹೆಸರಿನಿಂದ ಸ್ವಯಂ ಬಂದು ನಿಂತಿದ್ದಾನೆ. ಇಲ್ಲಿಯ ತೀರ್ಥದಲ್ಲಿ ಸ್ನಾನ ಮಾಡಿ ಯತಿಪೂಜ್ಯನಾದ ಮಹಾದೇವರನ್ನು ಭಕ್ತಿಯಿಂದ ಅರ್ಚಿಸಬೇಕು. ಅದರಿಂದ ಸಾವು ತಪ್ಪಿ ಸಶರೀರವಾಗಿ ಅಂತರ್ಧಾನ ಹೊಂದಿ ಶಿವಲೋಕದಲ್ಲಿ ಸಂತೋಷದಿಂದ ವಾಸಿಸುವಂತಾಗುವದು.

೮೧೨. ಕಪಿಲಸ್ಥೇತಿ ವಿಖ್ಯಾತಂ ಸರ್ವಪಾತಕನಾಶನಮ್ ।
ಯಸ್ಮಿನ್ ಸ್ಥಿತಃ ಸ್ವಯಂದೇವೋ ವೃದ್ಧಕೇದಾರ ಸಂಜ್ಞಿತಃ ।

೮೧೩. ತತ್ರ ಸ್ನಾತ್ವಾರ್ಚಯಿತ್ವಾಚ ರುದ್ರಂ ದಂಡಿಸಮನ್ವಿತಮ್ ।
ಅಂತರ್ಧಾನಮವಾಪ್ನೋತಿ ಶಿವಲೋಕೇ ಸ ಮೋದತೇ ।

ಇಲ್ಲಿಯ ಕಪಿಲತೀರ್ಥದಲ್ಲಿ ದೇವರಿಗೆ ಅರ್ಘ್ಯವನ್ನೂ, ಪಿತೃಗಳಿಗೆ ತರ್ಪಣವನ್ನೂ ಕೊಟ್ಟು ಆಚಮನ ಮಾಡಿ ದೇವದೇವೋತ್ತಮನಾದ ಶಿವನನ್ನು ನಮಸ್ಕಾರ ಮಾಡಿದರೆ ಕೇದಾರಕ್ಷೇತ್ರದ ಯಾತ್ರೆ ಮಾಡಿದ ಪುಣ್ಯ ಬರುವದು. ಚೈತ್ರ ಶುದ್ಧ ಚತುರ್ದಶಿಯಂದು ಶಿವನ ಪ್ರೀತಿಗಾಗಿ ಇಲ್ಲಿ ಶ್ರಾದ್ಧ ಮಾಡಿದರೆ ದಿವ್ಯಗತಿಯಾಗುವದು.

ಅನಂತರ ಕಲಶೀ ಎಂಬ ಕ್ಷೇತ್ರಕ್ಕೆ ಹೋಗಿ ಸ್ನಾನ ಮಾಡಬೇಕು. ಅಲ್ಲಿಯೇ ದಂಡೆಯ ಮೇಲಿದ್ದ ದುರ್ಗಾದೇವಿಯ ದರ್ಶನವನ್ನು ತೆಗೆದುಕೊಳ್ಳಬೇಕು. ಅದರಿಂದ ಸಂಸಾರವೆಂಬ ಗಹನವಾದ ದುರ್ಗವನ್ನು ಸಂಶಯವಿಲ್ಲದೇ ದಾಟಬಹುದು. ಅನಂತರ ತ್ರಿಲೋಕ ದುರ್ಲಭವಾದ ಸರಕ ಎಂಬ ಕ್ಷೇತ್ರಕ್ಕೆ ಹೋಗಬೇಕು. ಅಲ್ಲಿರುವ ಮಹೇಶ್ವರನನ್ನು ಕೃಷ್ಣ ಪಕ್ಷದ ಚತುರ್ದಶಿಯಂದು ದರ್ಶನ ಮಾಡಿಕೊಳ್ಳಬೇಕು. ಅದರಿಂದ ಮನದ ಬಯಕೆಗಳೆಲ್ಲವೂ ಈಡೇರುವದು ಮತ್ತು ಶಿವಲೋಕ ಪ್ರಾಪ್ತಿಯಾಗುವದು. ಈ ಸರಕ ಕ್ಷೇತ್ರದಲ್ಲಿ ಇದ್ದ ತೀರ್ಥಗಳ ಸಂಖ್ಯೆ ಮೂರು ಕೋಟಿ.

೮೧೪. ರುದ್ರಕೋಟ ಸ್ತಥಾ ಕೂಪೇ ಸರೋಮಧ್ಯೇ ವ್ಯವಸ್ಥಿತಾ ।
ತಸ್ಮಿನ್ ಸರಸಿ ಯಃ ಸ್ನಾತ್ವಾ ರುದ್ರಕೋಟಿಂ ಸ್ಮರೇನ್ನರಃ॥

ಆ ಸರೋವರದ ನಟ್ಟ ನಡುವೆ ಚಿಮ್ಮುವ ಚಿಲುಮೆಯೇ ರುದ್ರ ಕೋಟಿ ಎನಿಸುತ್ತದೆ. ರುದ್ರಕೋಟಿ ಸರೋವರದಲ್ಲಿ ಸ್ನಾನಮಾಡಿ ಕೋಟಿ ರುದ್ರ ಜಪವನ್ನು ಮಾಡಬೇಕು. ರುದ್ರ ಗಣವನ್ನು ಪೂಜಿಸಬೇಕು.

೮೧೫. ರುದ್ರಾಣಾಂಚ ಪ್ರಸಾದೇನ ಸರ್ವದೋಷ ವಿವರ್ಜಿತಃ ।
ಇಂದ್ರಯಾನೇನ ಸಂಯುಕ್ತಃ ಪರಂ ಪದಮವಾಪ್ನುಯಾತ್ ।

ಅದರಿಂದ ರುದ್ರದೇವರ ಪ್ರಸಾದ ದೊರೆಯುವದು. ಸಕಲ ದೋಷಗಳೂ ದೂರವಾಗುವವು. ಅವನನ್ನು ಕರೆಯಲು ಇಂದ್ರದೇವರ ವಿಮಾನವೇ ಬರುವದು. ಅದರಿಂದ ಅಲ್ಲಿ ಸ್ನಾನ ಮಾಡಿದವನು ದಿವ್ಯಗತಿಯನ್ನು ಹೊಂದುವನು. ಅಲ್ಲಿಯೇ ಇರುವ ಮತ್ತೊಂದು ತೀರ್ಥ ಇಡಾಸ್ಪದ. ಅಲ್ಲಿ ಪಾಪದ ಭಯವೇ ಇಲ್ಲ. ಈ ತೀರ್ಥದ ದರ್ಶನದಿಂದಲೇ ಮಾನವನಿಗೆ ಮುಕ್ತಿ. ಅಲ್ಲಿ ಸ್ನಾನ ಮಾಡಿ ಪಿತೃಗಳಿಗೆ ತರ್ಪಣ ಕೊಟ್ಟು ದೇವತೆಗಳ ಬಳಗವನ್ನು ಪೂಜಿಸಿದರೆ ಮಾನವನಿಗೆ ಎಂದೂ ದುರ್ಗತಿಯಾಗುವದಿಲ್ಲ. ಮನಸ್ಸಿನಲ್ಲಿ ಬಯಸಿದ್ದೆಲ್ಲ ಸಿದ್ಧಿಸುವದು. ಅಲ್ಲಿಯ ಮತ್ತೊಂದು ಮಹಾತೀರ್ಥವಾದ ಕೇದಾರವು ಸರ್ವಪಾಪ ಪರಿಹಾರಕ. ಅಲ್ಲಿ ಸ್ನಾನ ಮಾಡಿದ ಮನುಷ್ಯನಿಗೆ ಸಕಲ ದಾನದ ಫಲ. ಅದೇ ಪರಸರದಲ್ಲಿ ಇರುವ ವಿಶ್ವರೂಪ ಎಂಬ ಮಹಾತೀರ್ಥವು ಜಗತ್ತಿನಲ್ಲಿ ದುರ್ಲಭವಾಗಿದೆ. ಅಲ್ಲಿ ಮಿಂದ ಮಾನವನಿಗೆ ಸಕಲ ಯಜ್ಞ ಫಲ. ಸರಕ ಕ್ಷೇತ್ರದ ಪೂರ್ವಕ್ಕೆ ತ್ರೈಲೋಕ್ಯ ವಿಶ್ರುತ ಎಂಬ ತೀರ್ಥವಿದೆ. ಮಾನವರ ಸಕಲ ಪಾಪಗಳನ್ನು ತೊಳೆಯಲಿಕ್ಕಾಗಿಯೇ ಈ ತೀರ್ಥವು ಹುಟ್ಟಿದೆ.

೮೧೬. ನಾರಸಿಂಹಂ ವಪುಃ ಕೃತ್ವಾ ಹತ್ವಾ ದಾನವಮೂರ್ಜಿತಮ್ ।
ತಿರ್ಯಗ್ಯೋನಿಸ್ಥಿತೋ ವಿಷ್ಣುಃ ಸಿಂಹೀಷು ರತಿಮಾಪ್ತವಾನ್ ॥

ಹಿಂದೆ ವಿಷ್ಣುವು ನರಸಿಂಹ ದೇಹವನ್ನು ಧರಿಸಿ ಉನ್ಮತ್ತನಾದ ಹಿರಣ್ಯಕಶಿಪುವನ್ನು ಕೊಂದು ಆ ಪಶುಯೋನಿಯಲ್ಲಿಯೇ ಇದ್ದು ಎಲ್ಲ ಸಿಂಹಸಿಂಹಿಣಿಯರನ್ನೂ ಪ್ರೀತಿಸಿದನು. ಅನಂತರ ಎಲ್ಲ ದೇವತೆಗಳೂ, ಗಂಧರ್ವರೂ ಶಿವನನ್ನು ಆರಾಧಿಸಿ ನಮಸ್ಕರಿಸಿ ವಿಷ್ಣುವಿನ ಸಿಂಹ ಶರೀರದೊಡನೆ ಸೆಣಸಲು ಕೇಳಿಕೊಂಡರು. ಆಗ ಮಹಾದೇವನು

ಶರಭದ ಆಕಾರವನ್ನು ತಾಳಿ ನರಸಿಂಹನ ಜೊತೆಗೆ ದೇವಮಾನದ ಸಾವಿರ ವರ್ಷಗಳವರೆಗೆ ಘನಘೋರ ಯುದ್ಧ ಮಾಡಿದನು.

೮೧೭. ಯುದ್ಧ್ಯ ಮಾನೌ ತು ತೌ ದೇವೌ ಪತಿತೌ ಹ್ರದಮಧ್ಯತಃ ।
ತಸ್ಮಿನ್ ಸರಸ್ತಟೇ ವಿಪ್ರೋ ದೇವರ್ಷಿರ್ನಾರದ ಸ್ಥಿತಃ ।
ಅಶ್ವತ್ಥಸ್ಥಾನಮಾಶ್ರಿತ್ಯ ದ್ಯಾನಸ್ಥಸ್ತೌದದರ್ಶ ಹ ॥

ಸಿಂಹ ಶರಭ ರೂಪದಿಂದ ಹೋರಾಡುವ ಆ ಹರಿಹರರು ಈ ತ್ರೈಲೋಕ್ಯವಿಶ್ರುತ ಸರೋವರದಲ್ಲಿ ಬಂದು ಬಿದ್ದರು. ಆ ಸರೋವರದ ದಂಡೆಯ ಮೇಲಿರುವ ಅಶ್ವತ್ಥ ಗಿಡದ ಅಡಿಯಲ್ಲಿ ದೇವರ್ಷಿ ನಾರದನು ಧ್ಯಾನಮಾಡುತ್ತ ಕುಳಿತಿದ್ದನು. ಅವನ ಕಣ್ಣಿಗೆ ಇದೆಲ್ಲವೂ ಕಾಣಿಸಿತು.

೮೧೮. ವಿಷ್ಣುಶ್ಚತುರ್ಭುಜೋ ಜಜ್ಞೇ ಲಿಂಗಾಕಾರಃ ಶಿವಃ ಸ್ಥಿತಃ ॥

ಆಗ ಕೂಡಲೇ ವಿಷ್ಣುವು ತನ ಚತುರ್ಭುಜ ಸ್ವರೂಪವನ್ನು ನಾರದನಿಗೆ ತೋರಿಸಿದನು. ಶಿವನು ಲಿಂಗಾಕಾರನಾಗಿ ನಿಂತನು. ಆ ಇಬ್ಬರೂ ಪರಮ ಪುರುಷರನ್ನು ಅಲ್ಲಿ ಸಾಕ್ಷಾತ್ಕರಿಸಿಕೊಂಡ ನಾರದನಿಗೆ ಭಕ್ತಿ ಉದ್ರೇಕವಾಯಿತು. ಅವರಿಬ್ಬರನ್ನು ಅವನು ಸ್ತುತಿಸಲು ಮೊದಲು ಮಾಡಿದನು.

''ನಮಃ ಶಿವಾಯ ದೇವಾಯ ವಿಷ್ಣವೇ ಪ್ರಭವಿಷ್ಣವೇ ।
ಹರಯೇ ಚ ಉಮಾಭರ್ತ್ರೇ ಸ್ಥಿತಿಕಾಲಭೃತೇ ನಮಃ ।
ಹರಾಯ ಬಹುರೂಪಾಯ ವಿಶ್ವರೂಪಾಯ ವಿಷ್ಣವೇ ।
ತ್ರ್ಯಂಬಕಾಯ ಸುಸಿದ್ಧಾಯ ಕೃಷ್ಣಾಯ ಜ್ಞಾನ ಹೇತವೇ ।
ಧನ್ಯೋಽಹಂ ಸುಕೃತೀ ನಿತ್ಯಂ ಯದ್ದೃಷ್ಟ್ವಾ ಪುರುಷೋತ್ತಮೌ ।
ಮಮಾಶ್ರಮಮಿದಂ ಪುಣ್ಯಂ ಯುವಾಭ್ಯಾಂ ವಿಮಲೀಕೃತಂ ।

ದೇವತಾ ವಿಶೇಷನಾದ ಶಿವನಿಗೆ ನಮಸ್ಕಾರ. ಸರ್ವ ಸಮರ್ಥನಾದ ವಿಷ್ಣುವಿಗೂ ನಮಸ್ಕಾರ. ಪಾರ್ವತೀಪತಿಯಾದ ಮಹಾದೇವನಿಗೂ ವಂದನೆ. ಪ್ರಪಂಚವನ್ನೇ ಸಂರಕ್ಷಿಸುವ ಶ್ರೀಹರಿಗೆ ನಮೋ ನಮಃ. ಬಹುರೂಪಗಳುಳ್ಳ ಹರನಿಗೂ ವಿಶ್ವರೂಪಿಯಾದ ವಿಷ್ಣುವಿಗೂ ನಾನು ನಮಿಸುವೆ. ಇಲ್ಲೇ ಸಿದ್ಧಿ ಪಡೆದ ಮಹಾದೇವನಿಗೂ, ದಿವ್ಯ ಜ್ಞಾನಕ್ಕೆ ಕಾರಣನಾದ ಶ್ರೀ ಕೃಷ್ಣನಿಗೂ ನಾನು ವಂದಿಸುವೆ. ಪರಮ ಪುರುಷರಾದ ನೀವಿಬ್ಬರೂ ನನಗೆ ನಿಮ್ಮ ದರ್ಶನವನ್ನು ಕರುಣಿಸಿದಿರಿ. ನನ್ನ ಈ ಪುಣ್ಯಾಶ್ರಮವನ್ನು ಪಾವನಗೊಳಿಸಿದಿರಿ. ಇದರಿಂದ ನಾನು ನಿಜವಾಗಿಯೂ ಧನ್ಯ ಧನ್ಯ. ನಿಜವಾಗಿಯೂ ನಾನು ಭಾಗ್ಯಶಾಲಿ. ಇಂದಿನಿಂದ ನನ್ನ ಜನ್ಮವು ಸಾರ್ಥಕವೂ, ಪವಿತ್ರವೂ ಆಯಿತೆಂದು ಮೂರು ಲೋಕಗಳಲ್ಲಿ ಪ್ರಸಿದ್ಧಿಯಾಗುವದು. ಇಲ್ಲಿಗೆ ಬಂದು ಸ್ನಾನ ಮಾಡಿ ಶ್ರದ್ಧೆಯಿಂದ ಪಿತೃಗಳ ತರ್ಪಣ ಮಾಡಿದವರಿಗೆ ದಿವ್ಯ ದಾನವೂ, ಇಂದ್ರನಂಥ ಐಶ್ವರ್ಯವೂ ದೊರಕುವದು.

೮೧೯. ಅಶ್ವತ್ಥಸ್ಯತು ಯನ್ಮೂಲಂ ಸದಾ ತತ್ರ ವಸಾಮ್ಯಹಮ್ ।
ಅಶ್ವತ್ಥವಂದನಂ ಕೃತ್ವಾ ಶಿವಂ ಕೃಷ್ಣಂ ನಮಸ್ಯತಿ ॥

ನಾರದರು ಧ್ಯಾನಮಾಡುತ್ತ ಕುಳಿತ ಇಲ್ಲಿಯ ಅಶ್ವತ್ಥ ಗಿಡದ ಅಡಿಯಲ್ಲಿ ನಾನೂ ವಾಸ ಮಾಡುತ್ತೇನೆ. ಆ ಅಶ್ವತ್ಥ ಗಿಡಕ್ಕೆ ನಮಸ್ಕಾರ ಮಾಡಿ ಶಿವನನ್ನೂ, ಕೃಷ್ಣನನ್ನೂ ಭಕ್ತಿಯಿಂದ ನಮಸ್ಕರಿಸತಕ್ಕದ್ದು. ಇದರ ಮುಂದೆ ನಾಗಹ್ರದ ಎಂಬ ಕ್ಷೇತ್ರಕ್ಕೆ ಹೋಗಬೇಕು. ಅಲ್ಲಿಯ ನಾಗತೀರ್ಥದ ಕಮಲದಿಂದ ಘಮಘಮಿಸುವ ನೀರಿನಲ್ಲಿ ಸ್ನಾನ ಮಾಡಿದರೆ ಯಜ್ಞ ಮಾಡಿದಷ್ಟು ಪುಣ್ಯ ಬರುತ್ತದೆ. ಚೈತ್ರಮಾಸದ ಶುಕ್ಲಪಕ್ಷದ ದಶಮೀ ದಿನದಂದು ಇಲ್ಲಿ ಸ್ನಾನ ಮಾಡಿ ಜಪಗಳನ್ನು ಜಪಿಸಬೇಕು. ಶ್ರಾದ್ಧವನ್ನು ಮಾಡಬೇಕು. ಇದರಿಂದ ವಿಶೇಷವಾಗಿ ಮೋಕ್ಷ ದಾರಿಯು ಸುಗಮವಾಗುವದು. ಆ ಬಳಿಕ ತ್ರಿವಿಷ್ಟಪ ತೀರ್ಥಕ್ಕೆ ಹೋಗಬೇಕು. ಅದು ದೇವತೆಗಳಿಗೂ ಕೂಡ ಸೇವಿಸುವಂತಹ ತೀರ್ಥ. ಅಲ್ಲಿಯೇ ಪ್ರವಹಿಸುವ ವೈತರಣೀ ನದಿಯು ಪಾಪಗಳನ್ನೆಲ್ಲ ಬಿಡಿಸುವದು. ಆ ವೈತರಣಿಯಲ್ಲಿ ಸ್ನಾನ ಮಾಡಿ ಎತ್ತಿನ ಮೇಲೆ ಹತ್ತಿ ಕುಳಿತ ಶಿವನನ್ನು ಪೂಜಿಸಿದರೆ ಕಲುಷಗಳೆಲ್ಲ ಕರಗಿ ಹೋಗುವವು, ಶರೀರವು ಶುದ್ಧವಾಗುವದು. ಆತ್ಮವು ಪವಿತ್ರವಾಗುವದು. ಕೊನೆಗೆ ಪರಮಪದ ಪ್ರಾಪ್ತಿಯಾಗುವದು. ಬ್ರಾಹ್ಮಣ ಶ್ರೇಷ್ಠರೇ, ಅನಂತರ ಉತ್ತಮವಾದ ರಸಾವರ್ತನ ಎಂಬ ತೀರ್ಥಕ್ಕೆ ಹೋಗಿ ಭಕ್ತಿಯಿಂದ ಸ್ನಾನ ಮಾಡಿದವನಿಗೆ ಉತ್ತಮ ಸಿದ್ಧಿಯಾಗುವದು.

೮೨೦. ಚೈತ್ರಶುಕ್ಲ ಚತುರ್ದಶ್ಯಾಂ ತೀರ್ಥೇ ಸ್ನಾತ್ವಾತ್ವಲೇಪಕೇ ।
ಪೂಜಯಿತ್ವಾ ಶಿವಂ ತತ್ರ ಪಾಪಲೇಶೋ ನವಿದ್ಯತೇ ॥

ಅಲ್ಲಿಯೇ ಇರುವ ಅಲೇಪಕ ತೀರ್ಥದಲ್ಲಿ ಚೈತ್ರಶುದ್ಧ ಚತುರ್ದಶಿ ತಿಥಿಯಂದು ಸ್ನಾನ ಮಾಡಿ ಶಿವನನ್ನು ಪೂಜಿಸಿದರೆ ಪಾಪಲೇಪವೇ ಆಗುವದಿಲ್ಲ. ಆ ಬಳಿಕ ಉತ್ತಮವಾದ ಗಂತವ್ಯ ಕ್ಷೇತ್ರವೆಂದರೆ ಫಲಕೀವನ. ಅಲ್ಲಿ ಗಂಧರ್ವರೂ, ಋಷಿಗಳೂ, ದೇವತೆಗಳೂ, ಸಾಧ್ಯರೂ ಸಹಸ್ರಾರು ವರ್ಷಗಳವರೆಗೆ ಉಗ್ರತಪಸ್ಸನ್ನು ಅನುಷ್ಠಾನ ಮಾಡುತ್ತಲಿರುವರು.

೮೨೧. ದೃಷದ್ವತ್ಯಾಂ ನರಃ ಸ್ನಾತ್ವಾ ತರ್ಪಯಿತ್ವಾ ಚ ದೇವತಾಃ ।
ಅಗ್ನಿಷ್ಟೋಮಾತಿರಾತ್ರಸ್ಯ ಫಲಂ ವಿಂದತಿ ಮಾನವಃ ॥

ದೃಷದ್ವತೀ ನದಿಯಲ್ಲಿ ಸ್ನಾನ ಮಾಡಿ ದೇವತರ್ಪಣ ಪಿತೃತರ್ಪಣ ಕೊಡುವದರಿಂದ ಅಗ್ನಿಷ್ಟೋಮ ಅತಿರಾತ್ರ ಎಂಬ ಯಜ್ಞಗಳನ್ನು ಮಾಡಿದ ಫಲವು ಬರುತ್ತದೆ. ಇಲ್ಲಿ ಸೋಮವಾರ ಮತ್ತು ಅಮಾವಾಸ್ಯೆಯ ತಿಥಿಯಲ್ಲಿ ಶ್ರಾದ್ಧ ಮಾಡಿದ ಮಾನವನಿಗೆ ಬರುವ ಪುಣ್ಯಪಲವನ್ನು ಹೇಳುತ್ತೇನೆ, ಕೇಳಿರಿ -

''ಗಯಾ ಕ್ಷೇತ್ರದಲ್ಲಿ ಶ್ರಾದ್ಧ ಮಾಡಿದರೆ ಪಿತೃಗಳಿಗೆ ಹೇಗೆ ಸಂತೋಷವಾಗುವದೋ ಹಾಗೇ ಈ ಫಲಕೀ ವನದಲ್ಲಿ ಶ್ರಾದ್ಧ ಮಾಡುವದರಿಂದಲೂ ನಿತ್ಯ ನಿರಂತರ ಪಿತೃ ತೃಪ್ತಿಯಾಗುವದು. ಈ ಫಲಕೀವನವನ್ನು ಸ್ಮರಣೆ ಮಾಡಿದರೂ ಪಿತೃಗಳಿಗೆ ಸಂತೋಷವಾಗುವದರಲ್ಲಿ ಸಂದೇಹವಿಲ್ಲ.'' ಈ ಫಲಕೀವನದ ತೀರ್ಥಗಳಲ್ಲಿ ಪಾಣಿಖಾತ ಎಂಬ ತೀರ್ಥವು ವೈಶಿಷ್ಟ್ಯ ಪೂರ್ಣವಾಗಿದೆ.

ಎಲ್ಲ ದೇವತೆಗಳೂ ಅಲ್ಲಿ ಭೂಷಣಪ್ರಾಯರಾಗಿ ಸನ್ನಿಹಿತರಾಗಿರುತ್ತಾರೆ. ಈ ಮಹಾತೀರ್ಥದಲ್ಲಿ ಸ್ನಾನ ಮಾಡಿದರೆ ರಾಜಸೂಯಯಾಗದ ಫಲವು ಲಭಿಸುತ್ತದೆ. ಇವಲ್ಲದೆ ದಿವ್ಯಜ್ಞಾನವೂ, ಯೋಗ ಸಿದ್ಧಿಯೂ ಪ್ರಾಪ್ತವಾಗುತ್ತವೆ.

೮೨೨. ತತ್ರ ತೀರ್ಥಾನಿ ಮುನಿನಾ ಮಿಶ್ರಿತಾನಿ ಮಹಾತ್ಮನಾ ।
ವ್ಯಾಸೇನ ಮುನಿ ಶಾರ್ದೂಲ ದಧೀಚಾರ್ಥಂ ಮಹಾತ್ಮನಾ ।
ಸರ್ವತೀರ್ಥೇಷು ಸ ಸ್ನಾತೋ ಮಿಶ್ರಕೇ ಸ್ನಾತಿ ಯೋ ನರಃ॥

ಅನಂತರ ಶ್ರೇಷ್ಠವಾದ ಮಿಶ್ರಕ ಎಂಬ ಮಹಾ ತೀರ್ಥವಿರುವದು. ಪರಮಾತ್ಮ ಸ್ವರೂಪಿಗಳಾದ ವ್ಯಾಸ ಮುನಿಗಳು, ಋಷಿಸಿಂಹರಾದ ದಧೀಚ ಮುನಿಗಳ ಸಲುವಾಗಿ ಎಲ್ಲ ತೀರ್ಥಗಳನ್ನೂ ಒಂದುಗೂಡಿಸಿ ಇಲ್ಲಿಯ ಮಿಶ್ರ ತೀರ್ಥವನ್ನು ತಯಾರು ಮಾಡಿದರು. ಈ ಸರ್ವತೀರ್ಥ ಸಮ್ಮೇಳನದಂತಿರುವ ಮಿಶ್ರಕ ತೀರ್ಥದಲ್ಲಿ ಮೀಯುವದರಿಂದ ಪ್ರಪಂಚದ ಎಲ್ಲ ಪಾವನ ತೀರ್ಥಗಳಲ್ಲಿ ಮಿಂದು ಬಂದ ಪುಣ್ಯವು ಬರುವುದು.

ಇದರ ಮುಂದಿನದೇ ವ್ಯಾಸವನ. ಅಲ್ಲಿರುವದೇ ಮನೋಜವ ತೀರ್ಥ. ಅಲ್ಲಿಗೆ ಹೋಗುವವರು ಆಹಾರವನ್ನು ಮಿತವಾಗಿ ಸೇವಿಸಬೇಕು. ಮನಸ್ಸನ್ನೂ ಇಂದ್ರಿಯ ಗಳನ್ನೂ ಬಿಗಿ ಹಿಡಿಯಬೇಕು. ಅಲ್ಲಿ ಸ್ನಾನ ಮಾಡಿ ಮನೋನಿಯಾಮಕರಾದ ರುದ್ರದೇವರ ದರ್ಶನವನ್ನು ತೆಗೆದುಕೊಳ್ಳಬೇಕು. ಇದರಿಂದ ಮಾನವರ ಮನೋರಥಗಳೆಲ್ಲವೂ ಕೈಗೂಡುವವು. ಇದರ ಮುಂದಿನ ಮಧುವನದಲ್ಲಿ ಇರುವ ದೇವಿ ತೀರ್ಥದಲ್ಲಿ ಸ್ನಾನಮಾಡಿ ಶುಚಿರ್ಭೂತನಾಗಿ ದೇವತೆಗಳನ್ನು, ಪಿತೃಗಳನ್ನೂ ಪೂಜಿಸುವ ಮನುಷ್ಯನಿಗೆ ದೇವಿಯ ದಯೆಯಿಂದ ಸಕಲ ಸಿದ್ಧಿಗಳೂ ಪ್ರಾಪ್ತವಾಗುತ್ತವೆ. ದೃಷದ್ವತೀ ನದಿಯ ಕೌಶಿಕೀಸಂಗಮದಲ್ಲಿ ಸ್ನಾನಮಾಡಿ ಉಪವಾಸ ಗೈದು ದೇವರ ಧ್ಯಾನ ಮಾಡಿದ ಸಜ್ಜನನು ಎಲ್ಲ ಪಾಪಗಳಿಂದ ಮುಕ್ತನಾಗುತ್ತಾನೆ.

೮೨೩. ತತೋ ವ್ಯಾಸಸ್ಥಲೀಂ ಗಚ್ಛೇದ್ ಯತ್ರ ವ್ಯಾಸೇನ ಧೀಮತಾ ।
ಪುತ್ರಶೋಕಾಭಿಭೂತೇನ ದೇಹತ್ಯಾಗಾಯ ನಿಶ್ಚಯಃ ।
ಕೃತೋ ದೇವಶ್ಚ ವಿಪೇಂದ್ರ ಪುನರುತ್ಥಾಪಿತಸ್ತದಾ ॥
ಅಭಿಗಮ್ಯ ಸ್ಥಲೀಂ ತತ್ರ ಪುತ್ರಶೋಕಂ ನ ವಿಂದತಿ ॥

ತದನಂತರ ವ್ಯಾಸಸ್ಥಲೀ ಎಂಬ ಕ್ಷೇತ್ರಕ್ಕೆ ಪಯಣವನ್ನು ಬೆಳೆಸಬೇಕು. ಇಲ್ಲಿ ಹಿಂದೆ ವ್ಯಾಸ ಮಹರ್ಷಿಗಳಿಗೆ ಪುತ್ರವಿಯೋಗವಾದಾಗ ಆ ದುಃಖವನ್ನು ತಾಳಲಾರದೆ ಅವರು ದೇಹವನ್ನು ಬಿಡಲಿಕ್ಕೆ ಹೊರಟಿದ್ದರು. ಆಗ ಎಲ್ಲ ದೇವತೆಗಳು ಈ ಸ್ಥಳದಲ್ಲಿ ಮರಣಕ್ಕೆ ಸಿದ್ಧರಾದ ಅವರನ್ನು ಸಂತೈಸಿ ಸಮಾಧಾನಪಡಿಸಿ ಎಬ್ಬಿಸಿ ಕೂಡಿಸಿದರು. ಆದುದರಿಂದ ಈ ಕ್ಷೇತ್ರವು ಪುತ್ರಶೋಕವನ್ನು ಕಳೆಯಲು ಪ್ರಸಿದ್ಧವಾಗಿದೆ. ಅಲ್ಲಿಗೆ ಹೋದರೆ ಮಕ್ಕಳನ್ನು ಕಳೆದುಕೊಂಡವರ ದುಃಖವು ಶಾಂತವಾಗುವದು. ಅಲ್ಲಿಯೇ ಬಳಿಯಲ್ಲಿರುವ ಕಿಂದತ್ತರೂಪ ಎಂಬ ಕ್ಷೇತ್ರದಲ್ಲಿ ಒಂದು ಕೊಳಗ ಎಳ್ಳನ್ನು ದಾನಕೊಟ್ಟರೆ ಇಷ್ಟ ಸಿದ್ಧಿಯಾಗುವದಲ್ಲದೆ ಮುಕ್ತಿಯನ್ನು ಕೂಡ ಪಡೆಯ ಬಹುದು. ಅಲ್ಲಿ ಅನ್ನತೀರ್ಥ, ಸುದೀನತೀರ್ಥ ಎಂಬೆರಡು ತೀರ್ಥಗಳಿವೆ. ಆ ದುರ್ಲಭ ತೀರ್ಥಗಳಲ್ಲಿ ಸ್ನಾನ ಮಾಡಿದವರು ಶುದ್ಧಾತ್ಮರಾಗಿ ದಿವ್ಯಲೋಕವನ್ನು ಪಡೆಯುವರು. ಅನಂತರ ಮೂರುಲೋಕಗಳಲ್ಲಿ ಹೆಸರಾಂತ ಕೃತಪುಣ್ಯ ಕ್ಷೇತ್ರಕ್ಕೆ ಹೋಗಬೇಕು. ಅಲ್ಲಿರುವ ಗಂಗಾನದಿಯಲ್ಲಿ ಸ್ನಾನ ಮಾಡಿ ಪವಿತ್ರನಾಗಿ ಮಹಾದೇವರನ್ನು ಪೂಜಿಸಿದರೆ ಅಶ್ವಮೇಧ

ಯಜ್ಞ ಮಾಡಿದ ಪುಣ್ಯವು ಪದರಿನಲ್ಲಿ ಬೀಳುವದು. ಇದರ ಮುಂದಿನ ಕೋಟಿತೀರ್ಥದಲ್ಲಿ ಸ್ನಾನ ಮಾಡಿ ಅಲ್ಲಿಯೇ ಇರುವ ಕೋಟೀಶ್ವರನ ದರ್ಶನವನ್ನು ತೆಗೆದುಕೊಂಡರೆ ಕೋಟಿಯಜ್ಞಗಳ ಪುಣ್ಯವು ದೊರಕುವದು. ಇದರ ಮುಂದಿನದೇ ವಾಮನಕ್ಷೇತ್ರ. ಮೂರ್ಲೋಕಗಳಲ್ಲಿಯೂ ಇದರ ಖ್ಯಾತಿ.

೮೭೪. ಯತ್ರ ವಾಮನರೂಪೇಣ ವಿಷ್ಣುನಾ ಪ್ರಭ ವಿಷ್ಣುನಾ ।
ಬಲೇರಪ್ರಹೃತಂ ರಾಜ್ಯಂ ಇಂದ್ರಾಯ ಪ್ರತಿಪಾದಿತಮ್ ॥

ಸರ್ವಶಕ್ತನಾದ ವಿಷ್ಣುವು ವಾಮನ ವೇಷದಿಂದ ಬಲಿರಾಜನನ್ನು ವಂಚಿಸಿದ್ದು ಇಲ್ಲಿಯೇ. ಅವನಸಾಮ್ರಾಜ್ಯವನ್ನು ಕಸಿದದ್ದೂ ಇಲ್ಲಿಯೇ. ಇಂದ್ರನಿಗೆಅದನ್ನು ಕೊಟ್ಟಿದ್ದು ಇಲ್ಲಿಯೇ. ಇಲ್ಲಿರುವ ವಿಷ್ಣುಪದ ಎಂಬ ತೀರ್ಥದಲ್ಲಿ ಸ್ನಾನಮಾಡಿ ವಾಮನ ದೇವರನ್ನು ಪೂಜಿಸಿದರೆ, ಸರ್ವ ಪಾಪಗಳೂ ಪರಿಹಾರವಾಗಿ ಮನುಷ್ಯನು ಪುನೀತನಾಗುತ್ತಾನೆ. ಮುಂದೆ ವಿಷ್ಣು ಲೋಕವನ್ನು ಹೊಂದುತ್ತಾನೆ. ಅಲ್ಲಿಯೇ ಇರುವ ಎಲ್ಲ ಪಾಪಗಳನ್ನು ಕಳೆಯುವ ಜ್ಯೇಷ್ಠಾಶ್ರಮದ ದರ್ಶನದಿಂದಲೇ ಮನುಷ್ಯನಿಗೆ ಮೋಕ್ಷವಾಗುವದು. ಜ್ಯೇಷ್ಠ ಶುದ್ಧ ಏಕಾದಶಿ ದಿನದಲ್ಲಿ ಉಪವಾಸವಿದ್ದು ದ್ವಾದಶಿ ದಿನದಲ್ಲಿ ಇಲ್ಲಿಯ ತೀರ್ಥದಲ್ಲಿ ಸ್ನಾನ ಮಾಡಿದ ಯಾತ್ರಿಕನು ನರಶ್ರೇಷ್ಠನೆನಿಸುತ್ತಾನೆ. ಈ ಕ್ಷೇತ್ರದಲ್ಲಿ ಸರ್ವೇಶ್ವರನಾದ ಶ್ರೀ ವಿಷ್ಣುವಿನಿಂದ ಆಜ್ಞಪ್ತರಾಗಿ, ವಿಷ್ಣು ದೀಕ್ಷೆ ಹೊಂದಿ ವೈಷ್ಣವ ಮತದ ಪ್ರಸಾರವನ್ನು ಮಾಡುತ್ತ ವಿಷ್ಣುವನ್ನು ಸಂತೋಷಪಡಿಸುವುದರಲ್ಲಿಯೇ ತತ್ಪರರಾದ ಬ್ರಾಹ್ಮಣರಿಗೆ ಶ್ರದ್ಧೆಯಿಂದ ಬಗೆಬಗೆಯ ದಾನಗಳನ್ನು ಇತ್ತರೆ ಅಕ್ಷಯ ಫಲಪ್ರಾಪ್ತಿಯಾಗುವದು. ಈ ಮನ್ವಂತರ ಪೂರ್ತಿ ಅವರ ಪುಣ್ಯಕೀರ್ತಿಯು ಬೆಳಗುವದು. ಅಲ್ಲಿಯೇ ಇರುವ ಕೋಟಿತೀರ್ಥದಲ್ಲಿ ಸ್ನಾನ ಮಾಡಿದರೆ ಕೋಟಿಯಜ್ಞಫಲ. ಅಲ್ಲಿಯೇ ಕೋಟೀಶ್ವರನ ದರ್ಶನದಿಂದ ಮಹಾದೇವರ ಪ್ರಸಾದವಾಗಿ ಗಣಾಧಿಪತ್ಯವು ದೊರಕುವದು. ಇದರ ಮುಂದಿನ ತೀರ್ಥವೇ ಕುಲೋತ್ತಾರಣ. ಪಾಪವನ್ನು ನಾಶಪಡಿಸುವ ಈ ತೀರ್ಥವನ್ನು ಶ್ರೀವಿಷ್ಣು ಎಲ್ಲ ಜಾತಿ ಜನಾಂಗದ ಮತ್ತು ಎಲ್ಲ ವರ್ಣಾಶ್ರಮದ ಜನರ ಉದ್ಧಾರಕ್ಕಾಗಿ ನಿರ್ಮಿಸಿದ್ದಾನೆ. ಬ್ರಹ್ಮಗಿರಿ, ಗೃಹಸ್ಥ, ವಾನಪ್ರಸ್ಥ, ಸನ್ಯಾಸಿ, ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಇವರಲ್ಲಿ ಯಾರೇ ಆಗಲಿ ಈ ಕುಲೋತ್ತಾರಣ ತೀರ್ಥಕ್ಕೆ ಬಂದು ಇಲ್ಲಿ ಸ್ನಾನಗೈದು ಶ್ರೀವಿಷ್ಣುವಿನ ಧ್ಯಾನ ಮಾಡಿದರೆ ಅವನ ಹಿಂದಿನ ಇಂದಿನ ಮುಂದಿನ ಏಳೇಳು ತಲೆಮಾರುಗಳು ಉದ್ಧೃತವಾಗುವವು ಮತ್ತು ಆ ಸ್ನಾನ ಮಾಡಿದ ಮನುಷ್ಯನಿಗೆ ಪರಮಪದ ಪ್ರಾಪ್ತಿಯಾಗುವದು.

೮೭೫. ದೂರಸ್ಥೋಽಪಿ ಸ್ಮರೇದ್ಯಸ್ತು ಕುರುಕ್ಷೇತ್ರಂ ಸವಾಮನಮ್।
ಸೋಽಪಿ ಮುಕ್ತಿಮವಾಪ್ನೋತಿ ಕಿಂಪುನಸ್ತು ವಸನ್ನರಃ ॥

ದೂರ ದೇಶದಲ್ಲಿದ್ದ ಮನುಷ್ಯನೂ ಕೂಡ ಈ ಕುರುಕ್ಷೇತ್ರವನ್ನೂ ಇಲ್ಲಿ ನೆಲೆಸಿದ ವಾಮನ ದೇವರನ್ನೂ ನೆನಿಸಿದರೆ ಮುಕ್ತಿಯನ್ನು ಐದುತ್ತಾನೆ. ಅಲ್ಲಿಯೇ ವಾಸಮಾಡಿದ ಮನುಷ್ಯನು ಮೋಕ್ಷ ಪಡೆಯುತ್ತಾನೆ ಎಂದು ಬೇರೆ ಹೇಳಬೇಕೇ ?

ವಾಮನ ಮಹಾಪುರಾಣದಲ್ಲಿ ಸಿಂಹ - ಶರಭಗಳ ಹೋರಾಟಮೂವತ್ತಾರನೇಯ ಅಧ್ಯಾಯವು ಮುಗಿದುದು.

—o—

## ಮಂಕಣ ಮುನಿಯ ಸಿದ್ಧಿಯ ತಾಣ

ಅಧ್ಯಾಯ - ೩೭

೮೨೬. ಪವನಸ್ಯಹ್ರದೇ ಸ್ನಾತ್ವಾ ದೃಷ್ಟ್ವಾದೇವಂ ಮಹೇಶ್ವರಮ್ ।
ವಿಮುಕ್ತಃ ಸರ್ವಕಲುಷೈಃ ಶೈವಂ ಪದಮವಾಪ್ನುಯಾತ್ ॥

**ಲೋಮಹರ್ಷಣ** - ಪವನಹ್ರದ ಎಂಬ ತೀರ್ಥದಲ್ಲಿ ಸ್ನಾನ ಮಾಡಿ ಮಹಾದೇವರ ಸಂದರ್ಶನವನ್ನು ತೆಗೆದುಕೊಂಡರೆ ಮನುಷ್ಯನು ಸರ್ವ ಪಾಪಗಳಿಂದ ಮುಕ್ತನಾಗುತ್ತಾನೆ. ಶಿವಪದ ಪ್ರಾಪ್ತಿಯೂ ಆಗುತ್ತದೆ.

೮೨೭. ಪುತ್ರಶೋಕೇನ ಪವನೋ ಯಸ್ಮಿನ್ ಲೀನೋ ಬಭೂವ ಹ ।
ದೇವೈಸ್ಸ ಬ್ರಹ್ಮಕೈಃ ಸ್ತುತ್ವಾ ಹನೂಮಾನ್ ಪ್ರಕಟೀಕೃತಃ ॥

ಪೂರ್ವಕಾಲದಲ್ಲಿ ಪುತ್ರಶೋಕದಿಂದ ಸಂತಪ್ತನಾದ ವಾಯುದೇವನು ಈ ತೀರ್ಥದಲ್ಲಿ ಮುಳುಗಿಬಿಟ್ಟನು. ಆ ಬ್ರಹ್ಮಾದಿದೇವತೆಗಳು ಬಂದು ಅವನನ್ನು ಸ್ತೋತ್ರ ಮಾಡಿದರು. ಆಗ ಆ ವಾಯುದೇವನು ಭಗವಂತನಲ್ಲಿ ಭಕ್ತಿ ಮಾಡಿ ಮನಃಸಮಾಧಾನ ಪಡೆದನು. ಅನಂತರ ಶೂಲಪಾಣಿ ಕ್ಷೇತ್ರದಲ್ಲಿರುವ ಹನುಮಾನ್ ತೀರ್ಥಕ್ಕೆ ಹೋಗಬೇಕು. ಹಿಂದೆ ದೇವತೆಗಳು ಗಂಧರ್ವರು ಸೇವೆ ಮಾಡಿದ್ದರಿಂದ ಅವರಿಗೆ ಪ್ರಸನ್ನನಾಗಿ ಹನುಮಂತದೇವರು ಇಲ್ಲಿ ಪ್ರಕಟವಾಗಿ ಅವರಿಗೆಲ್ಲ ದರ್ಶನ ನೀಡಿದರು. ಈ ಹನುಮಂತ ತೀರ್ಥದಲ್ಲಿ ಸ್ನಾನ ಮಾಡಿದವರು ಅಮರರಾಗುವರು. ಮುಂದಿನ ಕುಲೋತ್ತಾರಣ ತೀರ್ಥದಲ್ಲಿ ಸ್ನಾನ ಮಾಡಿದ ಯಾತ್ರಿಕನು ತಾಯಿಯ ಮನೆತನದ ಹಾಗೂ ತಂದೆಯ ಮನೆತನದ ತಾತ ಮುತ್ತಾತರನ್ನು ಉದ್ಧರಿಸುವನು. ಅಲ್ಲಿಯೇ ಇರುವ ಶಾಲಿಹೋತ್ರರಾಜರ್ಷಿ ತೀರ್ಥದಲ್ಲಿ ಸ್ನಾನ ಮಾಡಿದವರ ದೇಹ ದೋಷಗಳೆಲ್ಲವೂ ದೂರವಾಗಿ ಮುಕ್ತಿಯನ್ನು ಪಡೆಯುವರು. ಮುಂದಿನ ಸರಸ್ವತೀ ನದಿಯಲ್ಲಿರುವ ಶ್ರೀಕುಂಬ ಎಂಬ ತೀರ್ಥವು ಮೂರು ಲೋಕಗಳಲ್ಲಿ ಹೆಸರಾದುದು. ಅಲ್ಲಿ ಸ್ನಾನ ಮಾಡಿದ ನರನಿಗೆ ಅಗ್ನಿಷ್ಟೋಮ ಎಂಬ ಹೋಮ ಮಾಡಿದ ಪುಣ್ಯವು ಲಭ್ಯವಾಗುವದು. ಇದರ ಮುಂದೆ ನೈಮಿಷ ಕುಂಜವಿದೆ. ಅಲ್ಲಿಯ ನೈಮಿಷ ತೀರ್ಥದಲ್ಲಿ ಮಿಂದು ಶುಚಿರ್ಭೂತನಾದ ಮಾನವನಿಗೆ ಪುಣ್ಯ ಎಂಬ ಹೆಸರುಳ್ಳ ಪದಾರ್ಥವೆಲ್ಲವೂ ಪ್ರಾಪ್ತವಾಗುವವು.

೮೨೮. ತತ್ರತೀರ್ಥಂ ಮಹತ್ ಖಾತಂ ವೇದವತ್ಯಾ ನಿಷೇವಿತಮ್ ।
ರಾವಣೇನ ಗೃಹೀತಾಯಾಃ ಕೇಶೇಷು ದ್ವಿಜ ಸತ್ತಮಾಃ ॥
ತದ್ವಧಾಯ ಚ ಸಾ ಪ್ರಾಣಾನ್ಮುಮುಚೇ ಶೋಕಕರ್ಶಿತಾ
ತತೋ ಜಾತಾ ಗೃಹೇ ರಾಜ್ಞೋ ಜನಕಸ್ಯ ಮಹಾತ್ಮನಃ ॥
ಸೀತಾ ನಾಮೇತಿ ವಿಖ್ಯಾತಾ ರಾಮಪತ್ನೀ ಪತಿವ್ರತಾ ।
ರಾಮೇಣ ರಾವಣಂ ಹತ್ವಾ ಅಭಿಷಿಚ್ಯ ವಿಭೀಷಣಂ ।
ಸಮಾನೀತಾ ಗೃಹಂ ಸೀತಾ ಕೀರ್ತಿರಾತ್ಮವತಾ ಯಥಾ ॥

ಈ ನೈಮಿಷ ತೀರ್ಥದ ಬಳಿಯಲ್ಲಿಯೇ ಮತ್ತೊಂದು ಮಹಾತೀರ್ಥವಿದೆ. ಹಿಮದ ಈ ತೀರ್ಥದ ತಡಿಯಲ್ಲಿ ವೇದವತಿಯು ತಪಸ್ಸನ್ನು ಮಾಡುತ್ತಿದ್ದಳು. ಒಂದು ದಿನ ಅಲ್ಲಿಗೆ ರಾವಣನು ಬಂದು ಅವಳ ಸೌಂದರ್ಯವನ್ನು ಕಂಡು ಕಾಮಾಂಧನಾಗಿ ಅವಳ

ಮಿದುಗೂದಲಿಗೆ ಕೈಹಾಕಿದನು. ರಾವಣನ ಹಸ್ತಸ್ಪರ್ಶವಾದ ಕೂಡಲೇ ಆ ಮಹಾಪತಿವ್ರತೆಯು ಅತ್ಯಂತ ದುಃಖಿತಳಾಗಿ ಆ ದೇಹವನ್ನೇ ಬಿಟ್ಟುಬಿಟ್ಟಳು. ಮತ್ತೂ ರಾವಣನು ಮಾಡಿದ ಆ ಅಪಕಾರಕ್ಕೆ ಪ್ರತೀಕಾರ ಮಾಡಲಿಕ್ಕಾಗಿ ಮಹಾತ್ಮನಾದ ಜನಕರಾಜನ ಮನೆಯಲ್ಲಿ ಮತ್ತೆ ಜನಿಸಿದಳು. ಸೀತೆ ಎಂಬ ಹೆಸರಿನಿಂದ ಪ್ರಖ್ಯಾತಳಾಗಿ ಶ್ರೀರಾಮನ ಕೈಹಿಡಿದು ಪರಮ ಪತಿವ್ರತೆಯೆಂದು ಹೆಸರಾದಳು. ಅವಳ ಸೌಂದರ್ಯವನ್ನು ಕಂಡು ರಾವಣನು ಮುಗ್ಧನಾಗಿ ಅವಳನ್ನು ಅಪಹರಿಸಿದನು. ಅದು ಅವನ ಆತ್ಮಘಾತಕ್ಕೆ ಕಾರಣವಾಯಿತು. ಶ್ರೀ ರಾಮಚಂದ್ರನು ಆ ದುಷ್ಟ ರಾವಣನನ್ನು ಸಂಹರಿಸಿದನು. ಅವನ ಸ್ಥಾನದಲ್ಲಿ ವಿಭೀಷಣನಿಗೆ ಪಟ್ಟಾಭಿಷೇಕ ಗೈದನು. ಕಳೆದು ಹೋದ ಸೀತೆಯನ್ನು ತನ್ನ ಕೀರ್ತಿಯೊಂದಿಗೆ ಮರಳಿ ಮನೆಗೆ ಕರೆತಂದನು. ಪಾಪದೃಷ್ಟಿಯಿಂದ ತನ್ನನ್ನು ನೋಡಿ ಮೋಹದಿಂದ ಮೈಮುಟ್ಟಿದ ರಾವಣನನ್ನು ತನ್ನ ಪತಿಯ ಕೈಯಿಂದ ಕೊಲ್ಲಿಸಬೇಕೆಂದು ಈ ತೀರ್ಥದಲ್ಲಿ ವೇದವತಿಯು ಮಾಡಿದ ಪ್ರತಿಜ್ಞೆಯು ಅವಳ ಸೀತೆಯ ಅವತಾರದಲ್ಲಿ ಪೂರ್ತಿಗೊಂಡಿತು. ಆದುದರಿಂದ ಅಂದಿನಿಂದ ಈ ಮಹಾತೀರ್ಥಕ್ಕೆ ವೇದವತೀ ತೀರ್ಥ ಎಂದು ಹೆಸರು ಬಂದಿತು. ಈ ತೀರ್ಥದಲ್ಲಿ ಸ್ನಾನ ಮಾಡಿದ ಮನುಷ್ಯನು ಕನ್ಯಾದಾನ ರೂಪವಾದ ಯಜ್ಞದ ಫಲವನ್ನು ಪಡೆಯುತ್ತಾನೆ. ಅವನ ಪಾಪಗಳಂತೂ ತಾವಾಗಿ ತೊಲಗಿ ಹೋಗುತ್ತವೆ, ಕೊನೆಗೆ ಪರಮ ಪದ ಪ್ರಾಪ್ತಿಯೂ ಆಗುತ್ತದೆ.

ಅನಂತರ ಬ್ರಹ್ಮಕ್ಷೇತ್ರಕ್ಕೆ ಹೋಗಬೇಕು. ಅಲ್ಲಿ ಸುಮಹತ್ ಎಂಬ ಮಹಾತೀರ್ಥದಲ್ಲಿ ಸ್ನಾನ ಮಾಡಿದರೆ ವರ್ಣಹೀನನಾದ ನರನು ಬ್ರಾಹ್ಮಣತ್ವವನ್ನು ಪಡೆಯುತ್ತಾನೆ. ಬ್ರಾಹ್ಮಣನು ಸ್ನಾನ ಮಾಡಿದರೆ ದೇಹದಿಂದ ಪುನೀತನಾಗಿ ಪರತ್ರ ಉಚ್ಚಸ್ಥಾನವನ್ನು ಹೊಂದುತ್ತಾನೆ. ಇದರ ಮುಂದೆ ಇರುವದೇ ಸೋಮತೀರ್ಥ. ಹಿಂದೆ ಚಂದ್ರನು ತಪಸ್ಸನ್ನು ಮಾಡಿ ದ್ವಿಜರಾಜನಾದನು. ಈ ದುರ್ಲಭವಾದ ತೀರ್ಥದಲ್ಲಿ ಪಿತೃಗಳನ್ನು ತರ್ಪಿಸಿ ದೇವತೆಗಳನ್ನು ಅರ್ಚಿಸಿದರೆ ಭವಬಂಧನದಿಂದ ಬಿಡುಗಡೆ ಹೊಂದಿ ಸ್ವರ್ಗವನ್ನು ಮುಂದೆ ಪಡೆಯುತ್ತಾನೆ. ಕಾರ್ತಿಕ ಮಾಸದಲ್ಲಿ ಮಾಡಿದ ವಾಮನ ದೇವರ ಪೂಜೆಯಂತೆ ಈ ತೀರ್ಥದಲ್ಲಿ ಸ್ನಾನಗೈದು ಮಾಡಿದ ಶ್ರಾದ್ಧ ಪೂಜಾದಿಗಳು ವಿಶೇಷ ಫಲಪ್ರದವಾಗುತ್ತದೆ. ಅನಂತರ ಸಪ್ತಸಾರಸ್ವತ ಎಂಬ ತೀರ್ಥವು ಕಂಗೊಳಿಸುತ್ತದೆ. ಇಲ್ಲಿ ಏಳು ನದಿಗಳು ಒಂದುಗೂಡಿ ಪಾಪರಾಶಿಯನ್ನೆಲ್ಲ ಕೊಚ್ಚಿ ಹಾಕುತ್ತದೆ. ಸುಪ್ರಭಾ, ಕಾಂಚನಾಕ್ಷಿ ವಿಮಲಾ, ಮಾನಸಹ್ರದಾ, ರಸತೋಯ, ಸುವರ್ಣಾ, ವಿಮಲೋದಕಾ ಎಂಬ ಏಳು ನದಿಗಳು ಒಗ್ಗೂಡಿ ಇಲ್ಲಿ ಸುಗ್ಗಿ ಹರಿದು ಈ ಸಪ್ತ ಸಾರಸ್ವತ ತೀರ್ಥವು ರೂಪಗೊಂಡಿದೆ. ಪೂರ್ವಕಾಲದಲ್ಲಿ ಬ್ರಹ್ಮದೇವರು ಪುಷ್ಕರ ಕ್ಷೇತ್ರದಲ್ಲಿ ನಿಂತು ಒಂದು ಯಜ್ಞವನ್ನು ಕೈಗೊಂಡಿದ್ದರು. ಆಗ ಋಷಿಗಳು ಆ ಚತುರ್ಮುಖನಿಗೆ ಹೇಳಿದರು -

**೮೨. ಅಬ್ರುವನ್ ಋಷಯಸ್ಸರ್ವೇ ನಾಯಂ ಯಜ್ಞೋ ಮಹಾಫಲಃ**
**ನ ದೃಶ್ಯತೇ ಸರಿಚ್ಛ್ರೇಷ್ಠಾ ಪುರಸ್ಥಾ ವೈ ಸರಸ್ವತೀ ॥**

''ಪಿತಾಮಹನೇ, ನೀವು ಮಾಡುವ ಈ ಯಜ್ಞದಿಂದ ಯಾವ ಮಹಾಪುಣ್ಯವೂ ಬರುವದಿಲ್ಲ. ಯಾಕೆಂದರೆ ನದಿಗಳಲ್ಲಿ ಶ್ರೇಷ್ಠವಾದ ಮತ್ತು ಈ ಕ್ಷೇತ್ರದ ಪವಿತ್ರತೆಗೆ ಕಾರಣವಾದ ಸರಸ್ವತೀ ನದಿಯು ಕಣ್ಣಿಗೆ ಕಾಣದೆ ಅದೃಶ್ಯವಾಗಿದ್ದಾಳೆ.''

೮೩೦. ಪಿತಾಮಹೇನ ಯಜತಾ ಹ್ಯಾಹೂತಾ ಪುಷ್ಕರೇಷು ಚ ।
ಸುಪ್ರಭಾ ನಾಮ ಸಾ ದೇವೀ ತತ್ರ ಖ್ಯಾತಾ ಸರಸ್ವತೀ ॥

ಋಷಿಗಳ ಈ ಸಲಹೆಯಿಂದ ಬ್ರಹ್ಮದೇವರಿಗೂ ಸಂತೋಷವಾಯಿತು. ಕೂಡಲೇ ಅವರು ಸರಸ್ವತೀ ನದಿಯನ್ನು ನೆನೆದುಕೊಂಡರು. ಹೀಗೆ ಪಿತಾಮಹನಾದ ಬ್ರಹ್ಮದೇವರು ಸ್ಮರಿಸಿ ತಾನು ಯಜ್ಞ ಮಾಡುವ ತಾನಕ್ಕೆ ಬೇಗ ಬರಲು ಕರೆಕೊಟ್ಟ ಕೂಡಲೇ ತನ್ನ ಕಾಂತಿಯನ್ನು ಚಿಮ್ಮುತ್ತ ಆ ಪುಷ್ಕರ ಕ್ಷೇತ್ರಕ್ಕೆ ಸರಸ್ವತಿ ನದಿಯು ಐತಂದಿತು. ಅವಳು ಹರಡಿದ ಕಾಂತಿಕಿರಣಗಳಿಂದ ಸುಪ್ರಭಾ ಎಂದು ಹೆಸರೂ ಬಂದಿತು. ವೇಗದಿಂದ ಒಡಗೂಡಿದ ಆ ಸರಸ್ವತೀ ನದಿಯನ್ನು ಕಂಡು ಋಷಿಗಳಿಗೆಲ್ಲ ಅತ್ಯಂತ ಸಂತೋಷ ವಾಯಿತು. ಚತುರ್ಮುಖನ ಮಾತಿಗೆ ಮನ್ನಣೆ ಇತ್ತು ಕರೆದ ಕೂಡಲೇ ತ್ವರೆಯಿಂದ ಹರಿದು ಬಂದುದಕ್ಕಾಗಿ ಆ ಹಿರಿ ಹೊಳೆಯ ಬಗೆಗೆ ಅವರಲ್ಲಿ ಒಳ್ಳೇ ಗೌರವ ಭಾವನೆ ಮೂಡಿತು.

೮೩೧. ಏವಮೇಷಾ ಸರಚ್ಛ್ರೇಷ್ಠಾ ಪುಷ್ಕರಸ್ಥಾ ಸರಸ್ವತೀ ।
ಸಮಾನೀತಾ ಕುರುಕ್ಷೇತ್ರಂ ಮಾರ್ಕಂಡೇಯಮಹಾತ್ಮನಾ ।

ಹೀಗೆ ಬ್ರಹ್ಮದೇವರ ಯಜ್ಞ ಕಾಲದಲ್ಲಿ ಪುಷ್ಕರ ಕ್ಷೇತ್ರಕ್ಕೆ ಪ್ರವಹಿಸಿ ಬಂದ ಆ ಸರಸ್ವತೀ ನದಿಯೇ ಮಹಾತ್ಮರಾದ ಮಾರ್ಕಂಡೇಯ ಮುನಿಗಳಿಂದ ಈ ಕ್ಷೇತ್ರಕ್ಕೆ ಕರೆಯಲ್ಪಟ್ಟಿತು. ನೈಮಿಷಾರಣ್ಯದಲ್ಲಿ ಶೌನಕರೇ ಮೊದಲಾದ ಮುನಿಗಳೂ ತಪೋಧನರಾದ ಇತರ ಋಷಿಗಳೂ ಪುರಾಣ ಪ್ರವಚನ ಮಾಡುವ ಪುರಾತನ ಲೋಮ ಹರ್ಷಣನಿಗೆ ಪ್ರಶ್ನೆ ಮಾಡಿದರು. ''ಸನ್ಮಾರ್ಗದಲ್ಲಿ ಇರುವ ನಮಗೆ ಯಜ್ಞದ ಫಲವು ಹೇಗೆ ಲಭಿಸುತ್ತದೆ?'' ಆಗ ಮಹಾನುಭಾವನಾದ ಆ ಲೋಮಹರ್ಷಣನು ಪ್ರಶ್ನೆ ಕೇಳಿದ ಶೌನಕ ಮುನಿಗಳಿಗೆ ವಂದಿಸಿ ತಿಳಿಸಿದನು -

೮೩೨. ಸರಸ್ವತೀ ಸ್ಥಿತಾ ಯತ್ರ ತತ್ರ ಫಲಂ ಮಹತ್ ॥

''ಸರಸ್ವತೀ ನದಿಯ ಸಾನ್ನಿಧ್ಯವು ಎಲ್ಲಿರುವದೋ ಅಲ್ಲಿ ಮಹತ್ತರವಾದ ಯಜ್ಞಫಲವು ದೊರಕುವುದು.''

೮೩೩. ಏತತ್ ಶ್ರುತ್ವಾತು ಮುನಯೋ ಸಂಸ್ಮರಂತಿ ಸರಸ್ವತೀಮ್ ॥

ಇದನ್ನು ಕೇಳಿ ತಮ್ಮ ತಮ್ಮ ವೇದ ಶಾಖೆಗಳನ್ನು ಅಧ್ಯಯನ ಮಾಡಿ ವೇದ ಕೋವಿದರು ಎನಿಸಿದ ಎಲ್ಲ ಮುನಿಗಳು ಒಂದುಗೂಡಿ ಸರಸ್ವತೀ ನದಿಯನ್ನು ಭಕ್ತಿಯಿಂದ ಸ್ಮರಣೆ ಮಾಡಿದರು. ಯಜ್ಞವನ್ನು ಕೈಕೊಂಡ ಮುನಿಗಳೆಲ್ಲರೂ ಕೂಡಿ ಧ್ಯಾನ ಮಾಡಲು ತೊಡಗಿದಾಗ ಯಜ್ಞಭೂಮಿಯನ್ನು ಪಾವನಗೊಳಿಸಲು ಸರಸ್ವತೀನದಿಯು ಆಗಮಿಸಿದಳು. ಮಹಾತೇಜಸ್ವೀ ತಪಸ್ವಿಯಾದ ಮಂಕಣ ಮುನಿಯ ಮುಂದಾಳುತನದಲ್ಲಿ ಮಹಾತ್ಮರಾದ ಮುನಿಗಳ ಕರೆಯನ್ನು ಮನ್ನಿಸಿ ಸರಸ್ವತಿಯು ನೈಮಿಷ ಕ್ಷೇತ್ರಕ್ಕೆ ಬಂದಳು. ಕುರುಕ್ಷೇತ್ರವನ್ನು ತನ್ನ ಪುಣ್ಯ ಜಲದಿಂದ ತೊಳೆಯುವ ಆ ಸರಸ್ವತೀ ನದಿಯ ಈ ನೈಮಿಷಶಾಖೆಗೆ ಕಾಂಚನಾಕ್ಷೀ ಎಂಬ ಹೆಸರು ಬಂದಿತು.

ಗಯಾಕ್ಷೇತ್ರದಲ್ಲಿ ದೊಡ್ಡ ಯಜ್ಞ ಕೈಕೊಂಡ ಗಯ ಎಂಬ ಹೆಸರಿನ ಯಜಮಾನನು ಆಹ್ವಾನ ಮಾಡಿದಾಗ ನದಿಗಳಲ್ಲಿ ಶ್ರೇಷ್ಠವಾದ ಸರಸ್ವತಿಯು ಆ ಗಯನ ಯಜ್ಞಭೂಮಿಗೆ ಬಂದಿದ್ದಳು.

ಆಗ ವ್ರತಾನುಷ್ಠಾನು ತತ್ಪರರಾದ ಅಲ್ಲಿಗೆ ಬಂದ ಮುನಿಗಳು ಆ ಸರಸ್ವತಿಯ ಶಾಖೆಯನ್ನು ವಿಶಾಲಾ ಎಂದು ಹೆಸರಿಸಿದರು. ಅದೇ ನದಿಯು ಈಗ ಮಂಕಣ ಮಹಾ ಮುನಿಯು ಕರೆದ ಕೂಡಲೇ ಈ ಕುರುಕ್ಷೇತ್ರಕ್ಕೆ ಹರಿದು ಬಂದಳು. ಈ ಪಾವನ ಭೂಮಿಯಲ್ಲಿ ಪ್ರವಹಿಸಿ ಮಹಾನದಿ ಎನಿಸಿದಳು. ಉತ್ತರ ಕೋಸಲದೇಶದ ಪರಿಸರ ಪ್ರದೇಶವೆಲ್ಲ ಪುಣ್ಯಭೂಮಿ ಎನಿಸಿದೆ. ಅನೇಕ ದೇವರ್ಷಿಗಳಿಗೆ ಅದು ಆಶ್ರಯ ಸ್ಥಾನ. ಅಲ್ಲಿರುವ ಉದ್ದಾಲಿಕ ಮುನಿಯು ಸರಸ್ವತೀ ನದಿಯನ್ನು ಸ್ಮರಿಸಿದನು. ಆ ಮುನಿಯ ಸಲುವಾಗಿ ಆ ಹಿರಿಮೆಯ ಹೊಳೆ ಅಲ್ಲಿಯೂ ಹರಿದು ಬಂದಿತು. ನಾರು ಉಟ್ಟು ಚಿಗರೆ ದೊಗಲು ಹೊದ್ದ ಮುನಿಗಳ ಗುಂಪು ಆದರದಿಂದ ಅವಳನ್ನು ಪೂಜಿಸಿದರು. ಕೇದಾರಕ್ಷೇತ್ರದಲ್ಲಿ ಹೊಕ್ಕು ಹರಿದ ಈ ಸರಸ್ವತೀ ಶಾಖೆಗೆ ಮನೋಹರ ಎಂದು ಪ್ರಸಿದ್ಧಿ ಇದೆ. ಋಷಿಗಳೂ, ಸಿದ್ಧರೂ ಈ ಕವಲು ಹೊಳೆಯನ್ನು ಸೇವಿಸಿದರು. ಅದರ ನೀರು ಎಲ್ಲ ಪಾಪಗಳನ್ನು ಕಳೆಯಬಲ್ಲದೆಂದು ತಿಳಿಯಲ್ಪಟ್ಟಿದೆ.

ಸರಸ್ವತೀನದಿಯ ಮನೋಹರಾ ಎಂಬ ಕವಲುತೊರೆಯು ಮಹಾದೇವರನ್ನು ಆರಾಧಿಸಿ ಸಿದ್ಧಿಪಡೆದ ಮಂಕಣ ಮುನಿಯಿಂದ ಋಷಿಗಳ ಉಪಕಾರಕ್ಕಾಗಿ ಕುರುಕ್ಷೇತ್ರದಲ್ಲಿ ಪ್ರವೇಶಿಸಲ್ಪಟ್ಟಿತು. ಇದರಂತೆ ಗಂಗಾದ್ವಾರದಲ್ಲಿ ಯಜ್ಞದೀಕ್ಷಿತನಾದ ಪ್ರಜಾಪತಿಯು ಈ ತಿಳಿನೀರಿನ ತೊರೆಯನ್ನು ತನ್ನ ಯಜ್ಞಭೂಮಿಗೆ ಬರಮಾಡಿಕೊಂಡನು. ದಕ್ಷನ ಮೇಲಿನ ದಾಕ್ಷಿಣ್ಯದಿಂದ ಗಂಗಾದ್ವಾರದಲ್ಲಿ ಪ್ರಕಟವಾದ ಸರಸ್ವತೀ ನದಿಯ ಶಾಖೆಗೆ ವಿಮಲೋದಕ ಎಂದು ಹೆಸರಾಯಿತು.

**೮೩೪. ಸಮಾಹೂತಾ ಯಯೌ ತತ್ರ ಮಂಕಣೇನ ಮಹಾತ್ಮನಾ ।**
**ಕುರುಕ್ಷೇತ್ರೇತು ಕುರುಣಾ ಯಜತಾ ಚ ಸರಸ್ವತಿ ।**
**ಸರೋಮಧ್ಯೇ ಸಮಾನೀತಾ ಮಾರ್ಕಂಡೇಯೇನ ಧೀಮತಾ ।**

ಹೀಗೆ ಮಂಕಣ ಮುನಿಯಿಂದ ಆಹೂತಳಾದ ಸರಸ್ವತಿಯು ಯಜ್ಞದೀಕ್ಷಿತನಾದ ಕುರುರಾಜನಿಂದ ಕುರುಕ್ಷೇತ್ರಕ್ಕೆ ಕರೆದೊಯ್ಯಲ್ಪಟ್ಟಿತು. ಅನಂತರ ಮಾರ್ಕಂಡೇಯ ಮುನಿಗಳು ಆ ಸರೋವರದ ಮಧ್ಯದಲ್ಲಿ ಸರಸ್ವತೀ ನದಿಯನ್ನು ತಂದು ತುಳುಕಿಸಿದರು. ಹೀಗೆ ಸುಪ್ರಭಾ, ಕಾಂಚನಾಕ್ಷಿ, ವಿಮಲಾ, ಮಾನಸಹ್ರದಾ, ಸರತೋಯಾ, ಸುವರ್ಣಾ, ವಿಮಲೋದಕ ಎಂಬ ಏಳುನದಿಗಳ ಸಂಗಮ ಸ್ಥಾನವಾದ ಸಪ್ತಸಾರಸ್ವತ ತೀರ್ಥದ ತೀರದಲ್ಲಿ ನೆಲೆಸಿ ಪುಣ್ಯ ಪಯಸ್ವನಿಯಾದ ಸರಸ್ವತೀ ನದಿಯನ್ನು ಸ್ತೋತ್ರ ಮಾಡಿ ಮಂಕಣಮುನಿಯು ಸಿದ್ಧಿಯನ್ನು ಪಡೆದನು.

ವಾಮನ ಮಹಾಪುರಾಣದಲ್ಲಿ ಮಂಕಣ ಮುನಿಯ ಸಿದ್ಧಿಯ ತಾಣ ಎಂಬ
ಮೂವತ್ತೇಳನೇಯ ಅಧ್ಯಾಯವು ಮುಗಿದುದು

—o—

## ಮಂಕಣನ ಅಕಾಂಡ ತಾಂಡವ

**ಅಧ್ಯಾಯ - ೩೮**

೮೩೫. ಕಥಂ ಮಂಕಣಕಃ ಸಿದ್ಧಃ ಕಸ್ಮಾಜ್ಜಾತೋ ಮಹಾನ್ ಋಷಿಃ ।
ನೃತ್ಯಮಾನಸ್ತು ದೇವೇನ ಕಿಮರ್ಥಂ ಸ ನಿವಾರಿತಃ ॥

**ಋಷಿಗಳು :** ಈ ಮಂಕಣ ಮುನಿಯು ಯಾರಿಂದ ಹುಟ್ಟಿದನು? ಹೇಗೆ ಸಿದ್ಧಿ ಪಡೆದನು? ಅವನು ಮಹರ್ಷಿಯಾದುದು ಎಂತು? ಅವನು ಕುಣಿಯುವಾಗ ಮಹಾದೇವರು ಅವನನ್ನು ತಡೆದುದೇಕೆ?

**ಲೋಮಹರ್ಷಣ:** ಕಶ್ಯಪಋಷಿಯಮಾನಸಪುತ್ರನಾಗಿಜನಿಸಿದಈಮಂಕಣಮುನಿ. ಒಂದು ದಿನಮಂಕಣನುಸ್ನಾನಮಾಡಬೇಕೆಂದುನಾರುಬಟ್ಟೆ ಹಿಡಿದುನದೀತೀರಕ್ಕೆ ಬಂದನು.

೮೩೬. ತತ್ರಾಗತಾಹ್ಯಪ್ಸರಸಃ ರಂಭಾದ್ಯಾಃ ಪ್ರಿಯದರ್ಶನಾಃ ।
ಸ್ನಾಂತ್ಯೇವ ರುಚಿರಾಕಾರಾಃ ಮುಕ್ತವಸ್ತ್ರಾ ಅನಿಂದಿತಾಃ ॥

ಅಲ್ಲಿ ರಂಭೆ ಮೊದಲಾದ ಅಪ್ಸರೆಯರು ಮೈತೊಳೆಯಲು ಆಗಮಿಸಿದರು. ನೋಡಲು ಒಬ್ಬರಿಗಿಂತ ಒಬ್ಬರು ಚೆಲುವೆಯರು. ಆ ಸುಂದರಿಯರೆಲ್ಲ ತಾವು ತೊಟ್ಟ ಬಟ್ಟೆಗಳನ್ನೆಲ್ಲ ಬಿಟ್ಟು ಹುಟ್ಟಿದ ದೆಸೆಯಲ್ಲಿಯೇ ನೀರಿಗೆ ಇಳಿದರು.

೮೩೭. ತತೋ ಮುನೇಸ್ತದಾ ಕ್ಷೋಭಾ ದ್ರೇತಃಸ್ಕನ್ನಂ ಯದಂಭಸಿ ।
ವ್ಯಾಧೋ ಜಗ್ರಾಹ ತದ್ರೇತಃ ಕಲಶೇ ನ್ಯಕ್ಷಿಪತ್ತದಾ ॥
ಸಪ್ತಧಾ ಪ್ರವಿಭಾಗಂ ತು ಕಲಶಸ್ಥಂ ಜಗಾಮಹ
ತತ್ರರ್ಷಯ ಸಪ್ತ ಜಾತಾಃ ವಿದುರ್ಯಾನ್ ಮರುತೋಗಣಾನ್॥

ಆ ಚೆಲುವಿನ ಬೊಂಬೆಗಳ ಮನೋಹರವಾದ ಆಕಾರ ಹಾಗೂ ಅನಿಂದ್ಯ ಸೌಂದರ್ಯಗಳನ್ನು ಕಂಡು ಮಂಕಣ ಮುನಿಯ ಮನ ಕದಡಿತು. ವೀರ್ಯ ಕರಗಿತು. ನೀರಿನಲ್ಲಿ ಸ್ಖಲಿತವಾಯಿತು. ನೀರು ಪಾಲಾದ ಮುನಿಯ ರೇತಸ್ಸನ್ನು ಒಬ್ಬ ಬೇಡನು ತೆಗೆದು ಒಂದು ಕೊಡದಲ್ಲಿ ಹಾಕಿದನು. ಅದು ಏಳು ಭಾಗವಾಯಿತು. ಗಡಿಗೆಯಲ್ಲಿಯ ಮುನಿವೀರ್ಯದ ಒಂದೊಂದು ಭಾಗದಿಂದ ಒಬ್ಬೊಬ್ಬ ಋಷಿ ಹುಟ್ಟಿದ. ಅವರಿಗೆ ವಾಯುವೇಗ, ವಾಯುಬಲ, ವಾಯುಹಾ, ವಾಯುಮಂಡಲ, ವಾಯು ಕಾಲ, ವಾಯುಕೇತು, ವಾಯುಚಕ್ರ ಎಂಬ ಹೆಸರುಗಳನ್ನು ಇಡಲಾಯಿತು. ಮಂಕಣ ಮುನಿಯಿಂದ ಹುಟ್ಟಿದ ಈ ಸಪ್ತ ಋಷಿಗಳೇ ಮುರುದ್ಗಣ ಎಂದು ಕರೆಯಲ್ಪಡುತ್ತಾರೆ. ಮಂಕಣ ಮುನಿಯ ಈ ಏಳು ಜನ ಮಕ್ಕಳೇ ವಾಯುದೇವರ ದಯೆಯಿಂದ ಚರಾಚರ ಪ್ರಪಂಚವನ್ನೆಲ್ಲ ಧರಿಸಿ ನಿಂತಿದ್ದಾರೆ. ಈ ಮಂಕಣ ಮುನಿಯು ಪೂರ್ವಕಾಲದಲ್ಲಿ ಚೂಪಾದ ಒಂದು ದರ್ಭದ ಸಂದರ್ಭದಿಂದ ಪ್ರಸಿದ್ಧನಾದನೆಂದು ಕೇಳಿದ್ದೇವೆ.

೮೩೮. ಕ್ಷತಾತ್ ಕಿಲ ಕರೇ ವಿಪ್ರಾಃ ತಸ್ಯ ಶಾಕರಸೋಽಸ್ರವತ್ ।
ಸ ವೈ ಶಾಕರಸಂ ದೃಷ್ಟ್ವಾ ಹರ್ಷಾವಿಷ್ಟಃ ಸ ನೃತ್ತವಾನ್ ॥

ಒಂದು ದಿನ ದರ್ಭೆಯ ತುದಿ ತಾಕಿ ಅವನ ಕೈಗೆ ಗಾಯವಾಯಿತು. ಗಾಯಗೊಂಡ ಕೈಯಿಂದ ರಕ್ತ ಸೋರುವದರ ಬದಲು ಶಾಕರಸ ಎಂದರೆ ತರಕಾರಿಯ ರಸವು ಸೋರ

ತೊಡಗಿತು. ತನ್ನ ಕೈಯಿಂದ ಹೀಗೆ ಒಮ್ಮೆಲೆ ಶಾಕರಸ ಸೋರುವದನ್ನು ಕಂಡು ಆ ಮುನಿಯ ಮನ ಹರ್ಷಗೊಂಡಿತು. ಆನಂದೋದ್ರೇಕದಿಂದ ಅವನು ಕುಣಿಯತೊಡಗಿದನು.

**೮೩೯. ತತಃಸರ್ವಂ ಪ್ರನೃತ್ತಂ ಚ ಸ್ಥಾವರಂ ಜಂಗಮಂ ಚ ಯತ್ ।**

ಆ ಸಿದ್ಧ ಪುರುಷನು ಕುಣಿಯುವದನ್ನು ನೋಡಿ ಎಲ್ಲರೂ ಕುಣಿಯತೊಡಗಿದರು. ಅದನ್ನು ಅನುಸರಿಸಿ ಸ್ಥಾವರ ಜಂಗಮಾತ್ಮಕವಾದ ಸರ್ವಪ್ರಪಂಚವೇ ಆ ಮಹಾ ಮುನಿಯ ತಪಃಪ್ರಭಾವವನ್ನು ಕಂಡು ಮುಗ್ಧವಾಗಿ ಕುಣಿಯತೊಡಗಿತು. ಜಗತ್ತಿನ ಹುಚ್ಚು ಕುಣಿತವನ್ನು ನಿಲ್ಲಿಸುವದು ಹೇಗೆ? ಎಂಬುದು ಎಲ್ಲರಿಗೂ ಚಿಂತೆಯಾಯಿತು. ಕೊನೆಗೆ ಋಷಿಗಳೂ, ತಾಪಸರೂ, ಬ್ರಹ್ಮಾದಿ ದೇವತೆಗಳೂ, ಮಹಾದೇವರ ಬಳಿಗೆ ಬಂದರು. ವಿಜ್ಞಾಪನೆ ಮಾಡಿಕೊಂಡರು.

**೮೪೦. ''ನಾಯಂ ನೃತ್ಯೇದ್ ಯಥಾದೇವ ತಥಾ ತ್ವಂ ಕರ್ತುಮರ್ಹಸಿ''**

''ದೇವನೇ, ಪ್ರಪಂಚದ ಈ ಕುಣಿತವು ನಿಲ್ಲಬೇಕಾದರೆ ಮೊದಲು ಈ ಮಂಕಣನ ನೃತ್ಯವು ನಿಲ್ಲಬೇಕು. ಆದುದರಿಂದ ತಾವು ಹೇಗಾದರೂ ಮಾಡಿ ಅವನು ಈ ಅಕಾಂಡ ತಾಂಡವವನ್ನು ನಿಲ್ಲಿಸುವಂತೆ ಮಾಡಿರಿ.''

ಬ್ರಹ್ಮರ್ಷಿಗಳು ಮತ್ತೂ ಬ್ರಹ್ಮದೇವರ ಬಿನ್ನಹವನ್ನು ಕೇಳಿ ಆ ಭವಾನೀ ಪತಿಯು ಮಂಕಣನ ಬೇಟಿ ಮಾಡಿದನು. ಹರ್ಷೋತ್ಕರ್ಷದಿಂದ ಅವನ ನಲ್ಲುಗಣಿತ ನಡೆದೇ ಇತ್ತು. ಮಹಾದೇವರು ಅವನಿಗೆ ಪ್ರಶ್ನೆ ಹಾಕಿದರು -

**೮೪೧. ಹರ್ಷ ಸ್ಥಾನಂ ಕಿಮರ್ಥಂ ಚ ತವೈವಂ ಮುನಿಸತ್ತಮ ।**
**ತಪಸ್ವಿನೋ ಧರ್ಮಪಥೇ ಸ್ಥಿತಸ್ಯ ಮುನಿಪುಂಗವ ॥**

''ಮುನಿವರ್ತನೇ, ನಿನಗೆ ಇಂಥ ಮಹದಾನಂದವಾಗಲು ಏನು ಕಾರಣ ? ಧರ್ಮ ಮಾರ್ಗದಲ್ಲಿ ತಪೋನುಷ್ಠಾನ ಮಾಡುತ್ತಲಿರುವ ನಿನ್ನ ಮನಸ್ಸಿಗೆ ಹರ್ಷೋದ್ರೇಕದಿಂದ ವಿಕಾರವನ್ನುಂಟುಮಾಡುವ ಯಾವ ಸಂದರ್ಭವು ಈಗ ಒದಗಿದೆ?''

**೮೪೨. ಕಿಂ ನ ಪಶ್ಯಸಿ ಮೇ ಬ್ರಹ್ಮನ್ ಕರಾತ್ ಶಾಕರಸಂ ಸ್ರುತಮ್**
**ಯಂ ದೃಷ್ಟ್ವಾ ಚ ಪ್ರನೃತ್ತೋ ವೈ ಹರ್ಷೇಣ ಮಹತಾನ್ವಿತಃ॥**

''**ಮಂಕಣ** - ಪೂಜ್ಯನೇ, ನಿನಗೆ ಕಣ್ಣು ಕಾಣುವದಿಲ್ಲವೇ! ನನ್ನ ಕೈಯಿಂದ ಪಲ್ಯ ಕಾಯಿಗಳ ರಸವೇ ಸೋರುತ್ತಲಿದೆ. ಪಂಚಭೂತಗಳಿಂದ ನಿರ್ಮಿತವಾದ ಶರೀರವುಳ್ಳ ಬೇರಾರ ಕೈಯಿಂದ ಶಾಕರಸವು ಸೋರುವದು ಶಕ್ಯವಿದೆ! ಇದು ನನ್ನ ಅಸಾಧಾರಣ ಸಿದ್ಧಿಯ ಪ್ರಭಾವ. ಇದನ್ನು ಕಂಡು ನನಗೆ ಮಹದಾನಂದವಾಗಿದೆ. ಆ ಹಿಗ್ಗಿನಿಂದ ನಾನು ಕುಣಿಯುತ್ತಿದ್ದೇನೆ.''

**೮೪೩. ಮಹಾ-''ಅಹಂ ನ ವಿಸ್ಮಯಂ ವಿಪ್ರ ಗಚ್ಛಾಮೀಹ ಪ್ರಪಶ್ಯತಾಮ್॥**

''**ಮಹಾದೇವ** - ಇದರಲ್ಲಿ ಏನು ಆಶ್ಚರ್ಯ! ನನಗಂತೂ ಇದರಲ್ಲಿ ಏನೂ ಕೌತುಕ ಎನಿಸುವದಿಲ್ಲ. ಇಕೋ ಇತ್ತ ನೋಡು.''

೮೪೪. "ಅಂಗುಲ್ಯಗ್ರೇಣ ವಿಪ್ರೇಂದ್ರಾಃ ಸ್ವಾಂಗುಷ್ಠಃ ತಾಡಿತೋಽಭವತ್॥

ಎಂದು ನುಡಿದು ಮೈತುಂಬ ಕಾಂತಿಪೂರವೇ ತುಂಬಿ ತುಳುಕುವ ಮಹಾದೇವರು ತನ್ನ ಒಂದು ಕಿರಿ ಬೆರಳಿನಿಂದ ಇನ್ನೊಂದು ಹೆಬ್ಬೆರಳಿಗೆ ಒಂದು ಏಟು ಹಾಕಿದನು.

೮೪೫. ತತೋಭಸ್ಮ ಕ್ಷತಾತ್ ತಸ್ಮಾನ್ನಿರ್ಗತಂ ಹಿಮಸನ್ನಿಭಮ್ ।
ತದ್ದೃಷ್ಟ್ವಾವ್ರೀಳಿತೋ ವಿಪ್ರಃ ಪಾದಯೋ ಪತಿತೋಽಬ್ರವೀತ್ ।

ಆಗ ಆ ಬೆರಳಿಗೆ ತುಸು ಗಾಯವಾಯಿತು. ಗಾಯಗೊಂಡಾ ಬೆರಳಿನ ತುದಿಯಿಂದ ಮಂಜಿನಂತೆ ಶುಭ್ರವಾದ ಭಸ್ಮವು ಉದುರತೊಡಗಿತು. ಭವನ ಬೆರಳಿನಿಂದ ಬೀಳುವ ಬಿಳಿ ಬೂದಿಯನ್ನು ಕಂಡು ಮಂಕಣನಿಗೆ ನಾಚಿಕೆಯಾಯಿತು. ತನ್ನ ಗರ್ವದ ಬಗ್ಗೆ ಪಶ್ಚಾತ್ತಾಪವೂ ಆಯಿತು. ಕೂಡಲೇ ಅವನು ಶಂಕರನ ಅಡಿದಾವರೆಗಳ ಮೇಲೆ ಉರುಳಿ ಬಿದ್ದ. ದೀನನಾಗಿ ಆ ಶಿವನಿಗೆ ಶರಣು ಬಂದು ನುಡಿದ -

೮೪೬. "ನಾನ್ಯದ್ದೇವಾದಹಂ ಮನ್ಯೇ ಶೂಲಪಾಣೇರ್ಮಹಾತ್ಮನಃ ।
ಚರಾಚರಸ್ಯ ಜಗತೋ ಗುರುಸ್ತ್ವಮಸಿ ಶೂಲಧೃಕ್ ॥"

"ಈ ಜಗತ್ತಿನಲ್ಲಿ ಕೈಯಲ್ಲಿ ತ್ರಿಶೂಲವನ್ನು ಧರಿಸಿದ ಮಹಾದೇವನ ಹೊರತು ಅವನಿಗೆ ಮಿಗಿಲಾದ ದೇವತೆಗಳೇ ಇಲ್ಲವೆಂದು ನಾನು ತಿಳಿದಿದ್ದೇನೆ. ಈ ಚರಾಚರ ಪ್ರಪಂಚಕ್ಕೆ ಶಿವಸ್ವಾಮಿನ್, ನೀನೇ ಗುರು ಆಗಿರುವಿ. ಬ್ರಹ್ಮಾದಿ ದೇವತೆಗಳೂ ನಿನ್ನನ್ನೇ ಆಶ್ರಯಿಸಿದ್ದಾರೆ. ದೇವತೆಗಳಿಗೆಲ್ಲ ಉಪಕಾರವನ್ನು ಮಾಡುವವನೂ, ಮಾಡಿಸುವವನೂ ನೀನೇ ಆಗಿರುವಿ.

೮೪೭. ತ್ವತ್ಪ್ರಸಾದಾತ್ಸುರಾಃ ಸರ್ವೇ ಮೋದಂತೇ ಹ್ಯಕುತೋಭಯಾಃ ।
ಸುರಾಸುರಸ್ಯ ಚಾಧೀಶ ನ ತಪೋ ಮೇ ಕ್ಷರೇನ್ಮಹತ್ ॥

ನಿನ್ನ ಅನುಗ್ರಹದಿಂದಲೇ ಎಲ್ಲ ದೇವತೆಗಳೂ ತಮ್ಮ ಭಯಾಪಾಯಗಳನ್ನೆಲ್ಲ ಕಳೆದುಕೊಂಡು ನಿರ್ಭಯರಾಗಿ ನಲಿದಾಡುವರು. ಸುರಾಸುರರಿಗೆಲ್ಲ ಅಧೀಶ್ವರನಾದ ಶಿವಪ್ರಭುವೇ, ನನ್ನ ತಪಸ್ಸು ಹ್ರಾಸವಾಗದಂತೆ ತಾವು ನನಗೆ ಅನುಗ್ರಹಿಸಬೇಕು."

**ಲೋಮಹರ್ಷಣ :** ಹೀಗೆ ಭಕ್ತಿಯಿಂದ ಸ್ತುತಿಸಿ ಆ ಮಂಕಣ ಮುನಿಯು ಮಹೇಶ್ವರನ ಚರಣಗಳಿಗೆ ನಮಿಸಿದನು. ಅವನ ಈ ಸ್ತುತಿಯಿಂದ ಶಿವನು ಸಂತೋಷಗೊಂಡನು ಮತ್ತು ಅವನಿಗೆ ಹೇಳಿದನು - "ಬ್ರಾಹ್ಮಣನೇ, ನಿನ್ನ ತಪಸ್ಸು ನನ್ನ ಪ್ರಸಾದದಿಂದ ಸಾವಿರಪಟ್ಟು ಹೆಚ್ಚಾಗಿ ಬೆಳೆಯಲಿ. ನಾನು ನಿನ್ನೊಡನೆ ಈ ನಿನ್ನ ಆಶ್ರಮದಲ್ಲಿಯೇ ನಿರಂತರವಾಗಿ ನೆಲೆಸುವೆನು. ಈ ಸಪ್ತಸಾರಸ್ವತ ತೀರ್ಥದಲ್ಲಿ ಸ್ನಾನಮಾಡಿ ನನ್ನ ಪೂಜೆ ಮಾಡುವ ಮನುಷ್ಯನಿಗೆ ಈ ಲೋಕದಲ್ಲಿ ದೊರಕದಿದ್ದ ಸೌಖ್ಯವೇ ಇಲ್ಲ. ಬದುಕಿ ಇರುವವರೆಗೆ ಆನಂದದಿಂದ ಇದ್ದು ಮುಂದೆ ಮರಣಾನಂತರ ಸಾರಸ್ವತ ಲೋಕಕ್ಕೆ ಹೋಗುವರು. ಕೊನೆಗೆ ಅಜ್ಞಾನ ಪ್ರಪಂಚದಿಂದ ಪಾರಾಗಿ ಶಿವನಪ್ರಸಾದ ಪಡೆದು ಪರಮಪದವನ್ನೂ ಹೊಂದುವರು."

ವಾಮನ ಪುರಾಣ ಮೂವತ್ತೆಂಟನೇಯ ಮಂಕಣನ ಅಕಾಂಡ ತಾಂಡವ ಎಂಬ ಅಧ್ಯಾಯವು ಮುಗಿದುದು

—o—

## ದಾಲ್ಭ್ಯನ ಯಜ್ಞ

**ಅಧ್ಯಾಯ - ೩೯**

**೮೪೮. ತತಶ್ಚೌಶನಸಂ ತೀರ್ಥಂ ಗಚ್ಛೇತ್ತು ಶ್ರದ್ಧಯಾನ್ವಿತಃ ।**
**ಉಶನಾ ಯತ್ರ ಸಂಸಿದ್ಧೋ ಗ್ರಹತ್ವಂ ಸಮವಾಪ್ತವಾನ್ ॥**

**ಲೋಮಹರ್ಷಣ:** ಆ ಬಳಿಕ ತೀರ್ಥಯಾತ್ರಿಕನು ಶ್ರದ್ಧೆಯಿಂದ ಒಡಗೂಡಿ ಔಶನಸ ತೀರ್ಥಕ್ಕೆ ಹೋಗಬೇಕು. ಆ ತೀರ್ಥದಲ್ಲಿ ತಂಗಿ ತಪಂಗೈದು ಸಿದ್ಧಿ ಪಡೆದ ಶುಕ್ರಾಚಾರ್ಯರು ಆಗಸದ ಗ್ರಹಗಳ ಗಣದಲ್ಲಿ ಗಣನೀಯವಾದ ಸ್ಥಾನವನ್ನೂ, ಮುನಿಮಂಡಲದಲ್ಲಿ ಮಾನವನ್ನೂ ಪಡೆದರು.

ಕುರುಕ್ಷೇತ್ರದ ಈ ಪುಣ್ಯ ತೀರ್ಥದಲ್ಲಿ ಸ್ನಾನ ಹಾಗೂ ಜಪತಪೋನುಷ್ಠಾನ ಗಳಿಂದ ಮಾನವನ ಜನ್ಮ ಜನ್ಮಾಂತರಗಳ ಕಲ್ಮಷಗಳೆಲ್ಲ ಕಳೆದುಹೋಗುತ್ತವೆ. ಪರಬ್ರಹ್ಮದ ಜ್ಞಾನವಾಗುತ್ತದೆ. ಎಂದಿಗೂ ಮರಳಿಬಾರದ ಮುಕ್ತಿಮಂದಿರದ ಮಾರ್ಗವು ಸುಲಭವಾಗುತ್ತದೆ. ಈ ಪುಣ್ಯ ತೀರ್ಥದಲ್ಲಿ ಸ್ನಾನಮಾಡುವದರಿಂದ ರಹೋದರ ಎಂಬ ಮುನಿಯು ದೊಡ್ಡದಾದ ಒಂದು ತಲೆಯಿಂದ ಗ್ರಸ್ತನಾಗಿದ್ದರೂ ಈ ಕ್ಷೇತ್ರದ ಮಹಿಮೆಯನ್ನು ಕಂಡು ಬಿಡುಗಡೆ ಹೊಂದಿದನು.

**೮೪೯. ಕಥಂ ರಹೋದರೋ ಗ್ರಸ್ತಃ ಕಥಂ ಮೋಕ್ಷಮವಾಪ್ತವಾನ್ ।**
**ತೀರ್ಥಸ್ಯ ತಸ್ಯ ಮಾಹಾತ್ಮ್ಯಂ ಶ್ರೋತುಮಿಚ್ಛಾಮಹೇ ವಯಮ್**

**ಋಷಿಗಳು:** ರಹೋದರನು ಹೇಗೆ ತಲೆಬುರುಡೆಯಿಂದ ಆಕ್ರಾಂತನಾಗಿದ್ದನು. ಅವನಿಗೆ ತಲೆಪರಟೆಯಿಂದ ಬಿಡುಗಡೆಯಾದುದೆಂತು! ಅದರಲ್ಲಿ ಈ ತೀರ್ಥದ ಮಾಹಾತ್ಮ್ಯದ ಪ್ರಯೋಜನವೇನಾಯಿತು! ಇದನ್ನೆಲ್ಲ ಕೇಳಬಯಸುತ್ತೇವೆ. ತಾವು ಅರುಹಬೇಕು.

**ಲೋಮಹರ್ಷಣ :** ಹಿಂದೆ ತ್ರೇತಾಯುಗದಲ್ಲಿ ಮಹಾತ್ಮನಾದ ಶ್ರೀರಾಮಚಂದ್ರನು ದಂಡಕಾರಣ್ಯಕ್ಕೆ ತೆರಳಿದ್ದನು. ಬ್ರಾಹ್ಮಣೋತ್ತಮರೇ, ಅಲ್ಲಿ ಇದ್ದಾಗ ಪರಮಾತ್ಮ ಸ್ವರೂಪಿಯಾದ ಆ ಶ್ರೀರಾಮನು ಅನೇಕ ಜನ ರಾಕ್ಷಸರನ್ನು ಸಂಹರಿಸಿದನು.

**೮೫೦. ತತ್ರೈಕಸ್ಯ ಶಿರಚ್ಛಿನ್ನಂ ರಾಕ್ಷಸಸ್ಯ ದುರಾತ್ಮನಃ ।**
**ಕ್ಷುರೇಣ ಶಿತಧಾರೇಣ ತತ್ಪಪಾತ ಮಹಾಮುನೇ ॥**

ಆಗ ಒಂದು ದಿನ ರಾಮಚಂದ್ರನು ಹದನವಾದ ತನ್ನ ಖಡ್ಗದಿಂದ ಓರ್ವ ದುರುಳ ದಾನವನ ತಲೆಯನ್ನು ಕತ್ತರಿಸಿದನು. ರಾಮನಿಂದ ಕಡಿದೊಗೆಯಲ್ಪಟ್ಟ ಆ ದೈತ್ಯನ ತಲೆಯು ಅದೇ ದಂಡಕಾರಣ್ಯದಲ್ಲಿ ಸಹಜವಾಗಿ ತಿರುಗಾಡುತ್ತಲಿರುವ ರಹೋದರ ಎಂಬ ಮುನಿಯ ಕೊರಳಿನಲ್ಲಿ ಸಿಕ್ಕಿತು.

**೮೫೧. ರಹೋದರಸ್ಯ ತಲ್ಲಗ್ನಂ ಗ್ರೀವಾಯಾಂ ಚ ಯದೃಚ್ಛಯಾ**
**ವನೇ ವಿಚರತಸ್ತಸ್ಯ ಹ್ಯಸ್ಥಿ ಭಿತ್ವಾ ವಿವೇಶ ಹ**

ಕುತ್ತಿಗೆಯ ಹಿಂಬದಿಯ ಎಲುಬನ್ನು ಸೀಳಿ ಸಹೋದರನ ಕೊರಳಿಗೆ ಆ ದೈತ್ಯನ ಶಿರವು ಅಂಟಿಕೊಂಡುಬಿಟ್ಟಿತು.

೮೫೨. ಸ ತೇನ ಲಗ್ನೇನ ತದಾ ವಿಹರ್ತುಂ ವ ಶಶಾಕ ಹ ।
ಅಭಿಗಮ್ಯ ಮಹಾಪ್ರಜ್ಞ ಸ್ತೀರ್ಥಾನ್ಯಾಯತನಾನಿ ಚ ॥

ಅದರಿಂದ ಆ ರಹೋದರಋಷಿಗೆ ಸ್ವಚ್ಛಂದವಾಗಿ ಓಡಾಡಲು ಬಾರದಾಯಿತು. ಬುದ್ಧಿವಂತನಾದ ಅವನು ಆ ದೈತ್ಯಶಿರವನ್ನು ಬಿಡಿಸಿಕೊಳ್ಳಲು ಅನೇಕ ತೀರ್ಥ ಕ್ಷೇತ್ರ ಗಳಿಗೆ ಹೋಗಿ ಮುಳುಗುಹಾಕಿದನು. ದೇವಾಲಯಗಳಿಗೆ ಹೋಗಿ ಸೇವಾ ಶುಶ್ರೂಷೆ ಗಳನ್ನು ಮಾಡಿದನು. ಏನಾದರೂ ಆ ದೈತ್ಯ ಕಪಾಲವು ಇವನ ಕತ್ತನ್ನು ಬಿಡಲೇ ಇಲ್ಲ. ಗಟ್ಟಿಯಾಗಿ ಅಂಟಿಕೊಂಡಿತ್ತು. ಅದರಿಂದ ರಕ್ತವು ಸೋರುತ್ತಲೇ ಇತ್ತು. ಕಂಠದ ಆಳದಲ್ಲಿ ಬಲವಾಗಿ ನೆಟ್ಟುಹೋದ ಆ ದಾನವನ ತಲೆಬುರುಡೆಯಿಂದ ಆ ರಹೋದರ ಮುನಿಗೆ ಭಯಂಕರ ವೇದನೆ ಆಗುತ್ತಿತ್ತು. ಅದರಿಂದ ಸಂತ್ರಸ್ತನಾದ ಆ ಋಷಿಯು ಭೂಮಂಡಲದ ತುಂಬ ಅಂಡಲೆದನು. ಎಲ್ಲ ತೀರ್ಥಕ್ಷೇತ್ರಗಳೂ ಮುಗಿದವು. ಕಂಡ ಕಂಡವರಿಗೆಲ್ಲ ಕೈಮುಗಿದು ಈ ದೈತ್ಯಮಸ್ತಕದಿಂದ ಬಿಡುಗಡೆಯಾಗುವ ಬಗೆ ಯಾವುದು? ಎಂದು ದೀನವಾಗಿ ಕೇಳಿದನು. ಒಮ್ಮೆ ಕೆಲವು ಭಗವದ್ಭಕ್ತರಾದ ಋಷಿಗಳು ರಹೋದರ ಮುನಿಗೆ ಒಂದು ಉಪಾಯವನ್ನು ಹೇಳಿದರು-

''ರಹೋದರನೇ, ನೀನು ಔಶನಸ ತೀರ್ಥಕ್ಕೆ ಹೋಗು. ಅಲ್ಲಿಯ ಪವಿತ್ರ ಜಲದಲ್ಲಿ ಸ್ನಾನಮಾಡು. ಅಂದರೆ ನಿನಗೆ ಅಂಟಿದ ರಕ್ಕಸನ ತಲೆ ತಾನಾಗಿ ತೊಲಗಿ ಹೋಗುವದು.''

೮೫೩. ತತ ಔಶನಸಂ ತೀರ್ಥಂ ತಸ್ಯಾಪಃಸಪ್ರಶತಃ ತದಾ ।
ತಚ್ಛಿರಃ ಶರಣಂ ಮುಕ್ತ್ವಾ ಪಪಾತಾಂತರ್ಜಲೇ ದ್ವಿಜಾಃ ॥

ಋಷಿಗಳ ಈ ವಚನವನ್ನು ಕೇಳಿ ಆ ರಹೋದರ ಋಷಿಯು ಔಶನತೀರ್ಥಕ್ಕೆ ಬಂದನು. ಆ ತೀರ್ಥ ಜಲದಲ್ಲಿ ಮಿಂದನು. ಆ ಪವಿತ್ರ ಜಲವು ತಾಕುವದೊಂದೇ ತಡ ದಾನವನ ತಲೆಯು ಕೂಡಲೇ ಕೈಯಿಂದ ಕಳಚಿ ನೀರಿನಲ್ಲಿ ಬಿದ್ದಿತು.

೮೫೪. ತೇ ಶ್ರುತ್ವಾ ಋಷಯಃ ಸರ್ವೇ ತೀರ್ಥ ಮಾಹಾತ್ಮ್ಯಮುತ್ತಮಮ್।
ಕಪಾಲ ಲೋಚನ ಮಿತಿ ನಾಮ ಚಕ್ರುಃ ಸಮಾಗತಃ ॥

ರಹೋದರನು ತಲೆಬುರುಡೆಯಿಂದ ಬಿಡುಗಡೆ ಹೊಂದಿದನು. ಅವನ ದುರದೃಷ್ಟವೆಲ್ಲವೂ ಅಳಿದಿತ್ತು. ಪಾಪಗಳೆಲ್ಲ ನಾಶವಾದವು. ದೇಹವು ಪವಿತ್ರವಾಯಿತು. ನಿರ್ಮಲಾತ್ಮಕವಾದ ಅವನು ತನಗೆ ಸಲಹೆ ನೀಡಿದ ಮುನಿಗಳಿದ್ದಲ್ಲಿಗೆ ಬಂದನು. ಔಶನಸ ತೀರ್ಥಸ್ನಾನದಿಂದ ದೈತ್ಯಕಪಾಲವು ತನ್ನನ್ನು ಬಿಟ್ಟುಹೋದ ಸಮಾಚಾರವನ್ನು ಅವರಿಗೆಲ್ಲ ತಿಳಿಸಿದನು. ಅಲ್ಲಿ ನೆರೆದ ಮುನಿಗಳೆಲ್ಲರೂ ರಹೋದರ ಮುನಿಯ ಹಿಗ್ಗಿನಿಂದ ಹೇಳಿದ ಆ ತೀರ್ಥದ ಮಹಿಮೆಯನ್ನು ಕೇಳಿ ಅದಕ್ಕೆ ಕಪಾಲ ಮೋಚನ ಎಂಬ ಹೆಸರನ್ನು ಇತ್ತರು.

೮೫೫. ಬ್ರಾಹ್ಮಣ್ಯಂ ಲಬ್ಧವಾನ್ ಯತ್ರ ವಿಶ್ವಾಮಿತ್ರೋ ಮಹಾಮುನಿಃ
ತಸ್ಮಿನ್ ತೀರ್ಥವರೇ ಸ್ನಾತ್ವಾ ಬ್ರಾಹ್ಮಣ್ಯಂ ಲಭತೇ ಧ್ರುವಮ್।

ಇದಕ್ಕಿಂತಲೂ ಮಹತ್ತರವಾದ ದೊಡ್ಡ ತೀರ್ಥವೆಂದರೆ ವಿಶ್ವಾಮಿತ್ರ ತೀರ್ಥ. ರಾಜನಾಗಿದ್ದ ಕೌಶಿಕನು ಇಲ್ಲಿ ನಿಂತು ಸ್ನಾನಮಾಡಿ ತಪಂಗೈದು ಬ್ರಾಹ್ಮಣತ್ವವನ್ನು ಪಡೆದನು.

ಅನಂತರ ಮಹಾಮುನಿಯು ಆದನು. ಇಂಥ ವಿಶ್ವಾಮಿತ್ರ ತೀರ್ಥದಲ್ಲಿ ಸ್ನಾನಮಾಡಿದರೆ ಬ್ರಹ್ಮಜ್ಞಾನವು ಉಂಟಾಗುವದು. ಹೀನಕುಲದವನು ಇಲ್ಲಿ ಸ್ನಾನಮಾಡಿ ಬ್ರಾಹ್ಮಣತ್ವವನ್ನು ಪಡೆಯಬಹುದು. ಬ್ರಾಹ್ಮಣನೇ ಸ್ನಾನಮಾಡಿದರೆ ದಿವ್ಯಗತಿಯನ್ನು ಹೊಂದುವನು. ಇದರ ನಂತರ ಪೃಥೂದಕ ಎಂಬ ತೀರ್ಥಕ್ಕೆ ಹೋಗಬೇಕು. ಅಲ್ಲಿ ಮಿತ ಆಹಾರದಿಂದ ನಿಯಮಬದ್ಧನಾಗಿ ದೇವತಾರಾಧನೆ ಮಾಡಬೇಕು. ಈ ಪೃಥೂದಕ ತೀರ್ಥದಲ್ಲಿ ಋಷಂಗು ಎಂಬ ಸಿದ್ಧನು ಸ್ನಾನಮಾಡಿ ಬ್ರಹ್ಮರ್ಷಿ ಪದವಿಯನ್ನು ಪಡೆದನು. ಮುಂದೆ ಆ ಮಹಾಮುನಿಯು ಗಂಗಾದ್ವಾರದಲ್ಲಿ ಓರ್ವ ಮಹರ್ಷಿಯಾಗಿ ಜನಿಸಿದನು. ತಪಸ್ಸಿನ ಪ್ರಭಾವದಿಂದ ಅವನ ಜನ್ಮಾಂತರದ ನೆನಹು ಅಳಿಸಿರಲಿಲ್ಲ. ಅವನಿಗೆ ಅಂತ್ಯಕಾಲವು ಸಮೀಪಿಸಿತು. ಅವನಿಗೆ ಹಿಂದಿನ ಜನ್ಮದಲ್ಲಿ ತಾನು ಸಿದ್ಧಿ ಪಡೆದ ಪೃಥೂದಕ ತೀರ್ಥದ ಪ್ರಭಾವವು ಸ್ಮರಣಕ್ಕೆ ಬಂದಿತು. ಅವನು ತನ್ನ ಮಕ್ಕಳನ್ನೆಲ್ಲ ತನ್ನ ಬಳಿಗೆ ಕರೆದು ಹೇಳಿದನು-

೮೫೬. ಸರಸ್ವತ್ಯುತ್ತರೇ ತೀರ್ಥೇಯಸ್ತ್ಯಜೇದಾತ್ಮನಸ್ತನುಮ್ ।
ಪೃಥೋದಕೇ ಜಪ್ಯ ಸರೋ ನೈತಸ್ಯ ಮರಣಂ ಭವೇತ್ ॥

"ಸರಸ್ವತೀ ನದಿಯ ಉತ್ತರ ತೀರದಲ್ಲಿ ಪೃಥೂದಕ ಎಂಬ ಒಂದು ತೀರ್ಥವಿದೆ. ಅಲ್ಲಿ ಸ್ನಾನ ಮಾಡಿ ದೇವರ ದಿವ್ಯ ನಾಮವನ್ನು ಜಪಿಸುತ್ತ ದೇಹತ್ಯಾಗ ಮಾಡಿದರೆ ಮತ್ತೆ ಹುಟ್ಟುವದೂ ಇಲ್ಲ. ಮರಳಿ ಸಾಯುವದೂ ಇಲ್ಲ.

ಆದೇ ಪ್ರದೇಶದಲ್ಲಿ ಬ್ರಹ್ಮಯೋನಿ ಎಂಬ ಮತ್ತೊಂದು ತೀರ್ಥವಿದೆ. ಸೃಷ್ಟಿಯ ಆದಿಕಾಲದಲ್ಲಿ ಸರಸ್ವತೀ ತಟಾಕದಲ್ಲಿರುವ ಬ್ರಹ್ಮದೇವರು ಪೃಥೂದಕ ತೀರ್ಥವನ್ನು ಆಶ್ರಯಿಸಿ ಈ ಬ್ರಹ್ಮಯೋನಿಯಲ್ಲಿಯೂ ಸ್ನಾನ ಮಾಡಿದರು. ಆಗಲೇ ಅವರಿಗೆ ಚಾತುರ್ವರ್ಣ್ಯದ ಸೃಷ್ಟಿಗಾಗಿ ಉಪಯುಕ್ತವಾದ ಆತ್ಮಜ್ಞಾನವು ಉಂಟಾಯಿತು.

೮೫೭. ಚಾತುರ್ವರ್ಣ್ಯಸ್ಯ ಸೃಷ್ಟ್ಯರ್ಥ ಮಾತ್ಮಜ್ಞಾನ ಪರೋಽಭವತ್ ।
ತಸ್ಯಾಭಿಧ್ಯಾಯತಃ ಸೃಷ್ಟಿಂ ಬ್ರಹ್ಮಣೋಽವ್ಯಕ್ತಜನ್ಮನಃ।

ಭಗವಂತನನ್ನು ಭಕ್ತಿಯಿಂದ ಧ್ಯಾನಮಾಡುತ್ತಲಿರುವ ಬ್ರಹ್ಮದೇವರ ಬಾಯಿ ಯಿಂದ ಬ್ರಾಹ್ಮಣರು ಜನಿಸಿದರು. ತೋಳುಗಳಿಂದ ಕ್ಷತ್ರಿಯರು, ತೊಡೆಗಳಿಂದ ವೈಶ್ಯರು, ಪಾದಗಳಿಂದ ಶೂದ್ರರು ಹುಟ್ಟಿದರು. ಈ ನಾಲ್ಕೂ ವರ್ಣದವರ ಸೃಷ್ಟಿಯಾದ ಬಳಿಕ ಬ್ರಹ್ಮಚರ್ಯ, ಗ್ರಹಸ್ಥಾಶ್ರಮ, ವಾನಪ್ರಸ್ಥ, ಸನ್ಯಾಸ ಎಂಬ ನಾಲ್ಕು ಆಶ್ರಮಗಳು ಆ ಬ್ರಹ್ಮದೇವರಿಂದ ನಿರ್ಮಿಸಲ್ಪಟ್ಟಿತು.

೮೫೮. ಚಾತುರ್ವರ್ಣ್ಯಂ ತತೋ ದೃಷ್ಟ್ವಾ ಆಶ್ರಮಾಃ ಸ್ಥಾಪಿತಾಸ್ತತಃ
ಏವಂ ಪ್ರತಿಷ್ಟಿತಂ ತೀರ್ಥಂ ಬ್ರಹ್ಮಯೋನಿತಿ ಸಂಜ್ಞಿತಮ್ ॥
ತತ್ರ ಸ್ನಾತ್ವಾ ಮುಕ್ತಿಕಾಮಃ ಪುನರ್ಯೋನಿಂ ನ ಪಶ್ಯತಿ ॥

ಹೀಗೆ ಈ ತೀರ್ಥದಲ್ಲಿ ಕುಳಿತು ಪರಮಾತ್ಮನ ಧ್ಯಾನಗೈದು ಬ್ರಹ್ಮದೇವರು ತನ್ನ ಸೃಷ್ಟಿಯ ವರ್ಣಾಶ್ರಮದ ವ್ಯವಸ್ಥೆಯನ್ನು ಏರ್ಪಡಿಸಿದ್ದರಿಂದ ಈ ತೀರ್ಥಕ್ಕೆ ಬ್ರಹ್ಮಯೋನಿ ತೀರ್ಥವೆಂದು ಹೆಸರುಬಂದಿತು.

ಮುಕ್ತಿ ಬೇಕಾದವರು ಇಲ್ಲಿ ಸ್ನಾನಮಾಡಬೇಕು. ಅಂದರೆ ಅವನಿಗೆ ಮುಂದೆ ಎಂದೂ ತಾಯಿಹೊಟ್ಟೆಯಲ್ಲಿ ಹುಟ್ಟುವ ಪ್ರಸಂಗವೇ ಬರುವದಿಲ್ಲ. ಅಲ್ಲಿಯೇ ಅವಕೀರ್ಣ ಎಂಬ ಬೇರೊಂದು ತೀರ್ಥವಿದೆ. ಅಲ್ಲಿ ಬಕದಾಲ್ಭ್ಯ ಎಂಬ ಮುನಿಯು ಧೃತರಾಷ್ಟ್ರ ರಾಜನಿಂದ ಆಕ್ಷಿಪ್ತನಾಗಿ ಇಡೀ ರಾಷ್ಟ್ರವನ್ನೇ ಬ್ರಾಹ್ಮಣರ ಸಹಾಯದಿಂದ ಹೋಮ ಮಾಡಿಬಿಟ್ಟಿದ್ದನು. ಅನಂತರ ಆ ದೊರೆಗೆ ಬುದ್ಧಿ ಬಂದಿತು.

**ಋಷಿಗಳು :** ಆ ತೀರ್ಥಕ್ಕೆ ಅವಕೀರ್ಣ ಎಂಬ ಹೆಸರು ಹೇಗೆ ಬಂದಿತು ? ಕುಪಿತನಾದ ಆ ದಾಲ್ಭ್ಯನನ್ನು ಧೃತರಾಷ್ಟ್ರನು ಏಕೆ ಸಮಾಧಾನಪಡಿಸಲಿಲ್ಲ?

**ಲೋಮಹರ್ಷಣ :** ಹಿಂದೆ ನೈಮಿಷ ಕ್ಷೇತ್ರದ ನಿವಾಸಿಗಳಾದ ಋಷಿಗಳು ಹಸ್ತಿನಾವತಿಯ ದೊರೆ ಧೃತರಾಷ್ಟ್ರನ ಬಳಿಗೆ ಹೋದರು. ಆ ಋಷಿಮಂಡಲದ ಧುರೀಣನಾದ ಬಕದಾಲ್ಭ್ಯನು ದೊರೆ ಧೃತರಾಷ್ಟ್ರನಿಗೆ ''ದಕ್ಷಿಣೆ ಕೊಡು'' ಎಂದು ಕೇಳಿದನು. ಅದಕ್ಕೆ ಪ್ರತಿಯಾಗಿ ಆ ರಾಜನು ದಕ್ಷಿಣೆಯನ್ನು ಕೊಡುವುದರ ಬದಲು ಆ ಮುನಿಗಳನ್ನೆಲ್ಲ ಹೀಗಳೆದು ಬೈದುಕಳಿಸಿದನು. ಇದರಿಂದ ಅವಮಾನಿತನಾದ ಬಕದಾಲ್ಭ್ಯನಿಗೆ ಬಹಳ ಕೋಪ ಬಂದಿತು. ಅವನು ಈ ಪೃಥೋದಕ ತೀರ್ಥದಲ್ಲಿ ಅವಕೀರ್ಣ ಎಂಬ ಹೆಸರಿನಿಂದ ಒಂದು ಹೋಮವನ್ನು ಶುರು ಮಾಡಿದನು.

೮೫೯. ತತಃಕ್ರೋಧೇನ ಮಹತಾ ಮಾಂಸಾನುತ್ಕೃತ್ಯತತ್ರಹ ।
ಪೃಥೂದಕೇ ಮಹಾಕ್ಷೇತ್ರೇ ಅವಕೀರ್ಣೇತಿನಾಮತಃ ।
ಜುಹಾವ ಧೃತರಾಷ್ಟ್ರಸ್ಯ ರಾಷ್ಟ್ರಂ ನರಪತೇಸ್ತತಃ ।
ಹೂಯಮಾನೇ ತದಾ ರಾಷ್ಟ್ರೇ ಪ್ರವೃತ್ತೇ ಯಜ್ಞಕರ್ಮಣಿ ।
ಅಕ್ಷೀಯತ ತತೋ ರಾಷ್ಟ್ರಂ ನೃಪತೇರ್ದುಷ್ಕೃತೇನ ವೈ ॥
ಪುರೋಹಿತೇನ ಸಹಿತೋ ರತ್ನಾನ್ಯಾದಾಯ ಸರ್ವಶಃ ॥
ಪ್ರಸಾದನಾರ್ಥಂ ವಿಪ್ರಸ್ಯಹ್ಯವಕೀರ್ಣೇ ಯಯೌ ತದಾ ॥
ಪ್ರಸಾದಿತ ಸ್ಸ ರಾಜ್ಞಾ ಚತುಷ್ಟಃ ಪ್ರೋವಾಚ ತಂ ನೃಪಮ್॥

ಅದರಲ್ಲಿ ಧೃತರಾಷ್ಟ್ರನ ರಾಜ್ಯವನ್ನೆಲ್ಲ ಹೋಮಿಸುವ ಉದ್ದೇಶದಿಂದ ತನ್ನ ಮೈಯಲ್ಲಿಯ ಮಾಂಸವನ್ನೇ ಕಡಿಕಡಿದು ಆಹುತಿ ಕೊಡತೊಡಗಿದನು. ಆ ಯಜ್ಞವು ಮುಂದುವರೆಯಲು ಇಡೀ ರಾಷ್ಟ್ರವೆಲ್ಲವೂ ಆ ಹೋಮದ ಆಹುತಿಯಾಗಿ ಕ್ಷಯಿಸ ಹತ್ತಿತು. ಅನಂತರ ಈ ರಾಷ್ಟ್ರಕ್ಷಯವು ತನ್ನಿಂದ ಅವಮಾನಿತನಾಗಿ ಹೋಬಕ ದಾಲ್ಭ್ಯನ ಕೃತ್ಯವೇ ಸರಿ ಎಂದು ರಾಜನಿಗೆ ತಿಳಿದುಹೋಯಿತು. ಆಗ ಅವನು ಪುರೋಹಿತರನ್ನು ಕರೆದುಕೊಂಡು ಅನೇಕ ರತ್ನಗಳೊಂದಿಗೆ ಈ ಅವಕೀರ್ಣ ಕ್ಷೇತ್ರಕ್ಕೆ ಬಂದನು ಮತ್ತು ರತ್ನಗಳನ್ನೆಲ್ಲ ಅವನ ಮುಂದಿಟ್ಟು ಪ್ರಸನ್ನನಾಗಿ ಅನುಗ್ರಹಿಸಬೇಕು ಎಂದು ಬೇಡಿ ಕೊಂಡನು. ಇದರಿಂದ ಬಕದಾಲ್ಭ್ಯನ ಮನಸ್ಸು ಪ್ರಸನ್ನವಾಯಿತು. ಅವನು ಸಂತೋಷದಿಂದ ಆ ಮಹಾರಾಜನಿಗೆ ಹೇಳಿದನು -

೮೬೦. ಬ್ರಾಹ್ಮಣಾ ನಾವಮಂತವ್ಯಾಃ ಪುರುಷೇಣ ವಿಜಾನತಾ ।
ಬ್ರಾಹ್ಮಣಶ್ಚೇದವಜ್ಞಾತೋ ಹನ್ಯಾತ್ರಿ ಪುರುಷಂ ಕುಲಮ್ ।

"ತಿಳುವಳಿಕೆಯುಳ್ಳ ಮನುಷ್ಯನು ಬ್ರಹ್ಮ ತಿಳಿದವರನ್ನು ಎಂದೂ ಅವಮಾನಿಸ ಕೂಡದು. ಬ್ರಾಹ್ಮಣರಿಗೆ ಅವಮಾನ ಮಾಡಿದರೆ ಅವನ ಹಿಂದಿನ ತಲೆ, ಮುಂದಿನ ತಲೆ ಮತ್ತು ತನ್ನ ತಲೆ ಈ ಮೂರು ತಲೆಮಾರುಗಳೂ ಹಾಳಾಗಿ ಹೋಗುವವು." ಹೀಗೆ ಹೇಳಿ ಆ ಬಕದಾಲ್ಭ್ಯನು ದೃತರಾಷ್ಟ್ರನನ್ನು ಸಮಾಧಾನಪಡಿಸಿದನು. ಈ ಮೊದಲೇ ತನ್ನ ಮಾಂಸದ ಆಹುತಿಯಿಂದ ಮರಣ ಹೊಂದಿದ ಅನೇಕ ರಾಜ ಪರಿವಾರ ದವರನ್ನು ಮತ್ತೆ ತುಪ್ಪ ಹಾಗೂ ಹಾಲುಗಳಿಂದ ಹೋಮಮಾಡಿ ಮರಳಿ ಬದುಕಿಸಿದನು. ಸತ್ತವರೆಲ್ಲರೂ ಎದ್ದು ಕುಳಿತರು. ರಾಜನಿಗೆ ಆ ಮುನಿಯು ಈ ಸ್ಥಳದಲ್ಲಿ ಪರಮೋಪಕಾರ ಮಾಡಿದನು.

**೮೬೧. ಏವ ಮುಕ್ತ್ವಾ ಸ ನೃಪತಿಂ ಆಜ್ಯೇನ ಪಾಯಸಾ ಪುನಃ ।**
**ಉತ್ಥಾಪಯಾಮಾಸ ಮೃತಾಂಸ್ತಸ್ಯ ರಾಜ್ಞೋ ಹಿತೇ ಸ್ಥಿತಃ ॥**

ಈ ತೀರ್ಥದಲ್ಲಿ ಶ್ರದ್ಧೆಯಿಂದ ಸ್ನಾನಮಾಡಿ ಇಂದ್ರಿಯಗಳನ್ನು ಬಿಗಿಹಿಡಿದು ಭಗವಂತನನ್ನು ಪೂಜಿಸಿದರೆ ಮಾನವರ ಮನೋರಥಗಳೆಲ್ಲವೂ ಪೂರ್ಣವಾಗುವವು.

**೮೬೨. ತತ್ರ ತೀರ್ಥಂ ಸುವಿಖ್ಯಾತಂ ಯಾಯಾತಂ ನಾಮ ನಾಮತಃ**
**ಯಸ್ಯೇಹ ಯಜಮಾನಸ್ಯ ಮಧು ಸುಸ್ರಾವ ವೈ ನದೀ ॥**

ಇಲ್ಲಿಯೇ ಯಾಯಾತ ಎಂಬ ಮತ್ತೊಂದು ತೀರ್ಥವು ಅತ್ಯಂತ ಪ್ರಸಿದ್ಧವಾಗಿದೆ. ಈ ತೀರ್ಥದ ದಂಡೆಯಲ್ಲಿ ಯಜ್ಞ ಮಾಡಿದ ಯಜಮಾನನ ಅಪೇಕ್ಷೆಯಂತೆ ಜೇನು ತುಪ್ಪವೇ ಹೊಳೆಯಾಗಿ ಹರಿಯಿತು. ಇಲ್ಲಿ ಭಕ್ತಿಯಿಂದ ಸ್ನಾನ ಮಾಡಿದರೆ ಪಾಪಗಳೆಲ್ಲವೂ ಪರಿಹಾರವಾಗುವದು. ಅಶ್ವಮೇಧ ಯಜ್ಞದ ಫಲವು ದೊರಕುವದು. ಅಲ್ಲಿಯೇ ಇರುವ ಮಧುಶ್ರವ ಎಂಬ ಪುಣ್ಯ ತೀರ್ಥದಲ್ಲಿ ಸ್ನಾನಮಾಡಿ ಪಿತೃಗಳಿಗೆ ಜೇನುತುಪ್ಪದಿಂದಲೇ ತರ್ಪಣಕೊಡಬೇಕು. ಅಲ್ಲಿಯೇ ಇರುವ ವಶಿಷ್ಠೋದ್ವಾಹ ಎಂಬ ಮಹಾತೀರ್ಥದಲ್ಲಿ ಭಕ್ತಿಯಿಂದ ಸ್ನಾನಮಾಡಿದರೆ ವಾಶಿಷ್ಠಲೋಕವು ಪ್ರಾಪ್ತವಾಗುವದು.

ವಾಮನ ಮಹಾಪುರಾಣದಲ್ಲಿ ದಾಲ್ಭ್ಯನ ಯಜ್ಞ ಎಂಬ ಮೂವತ್ತೊಂಭತ್ತನೇಯ ಅಧ್ಯಾಯವು ಮುಗಿದುದು

—o—

## ಅರುಣ ಸರಸ್ವತೀ ಮಹಾತ್ಮೆ

## ಅಧ್ಯಾಯ - ೪೦

೮೬೩. ವಸಿಷ್ಠಸ್ಯಾಪವಾಹೋಽಸೌ ಮಹಾವೇಗೋ ಬಭೂವ ಹ ।
ಕಿಮರ್ಥಂ ಸಾ ಸರಿಚ್ಛ್ರೇಷ್ಠಾ ತಮೃಷಿಂ ಪ್ರತ್ಯವಾಹಯತ್ ॥

**ಋಷಿಗಳು :** ವಶಿಷ್ಠೋದ್ವಾಹ ತೀರ್ಥ ಎಂದರೆ ವಶಿಷ್ಠರನ್ನು ಹೊತ್ತುಕೊಂಡು ವೈದ ತೀರ್ಥ ಎಂದು ಅರ್ಥವಾಗುವದು. ಆ ಹಿರಿ ಹೊಳೆಯಾದ ಸರಸ್ವತಿಯು ವಶಿಷ್ಠ ಮುನಿಗಳೇ ಹರಿದು ಹೋಗುವಷ್ಟು ಸೆಳೆವು ಉಳ್ಳದ್ದು ಏಕೆ ಆಯಿತು ? ತನ್ನ ಪ್ರವಾಹದ ವೇಗದಿಂದ ಆ ಮಹಾನ್‌ಋಷಿಯನ್ನು ಹೊತ್ತುಕೊಂಡು ಹೋದ ಕಾರಣವೇನು?

**ಲೋಮಹರ್ಷಣ :** ರಾಜರ್ಷಿವಿಶ್ವಾಮಿತ್ರನಿಗೂ, ಮಹಾತ್ಮರಾದ ವಶಿಷ್ಠರಿಗೂ ತಮ್ಮ ತಮ್ಮ ತಪಸ್ಸಿನ ಸ್ಪರ್ಧೆಯ ಮೂಲಕ ಭಾರೀ ವೈರವು ಏರ್ಪಟ್ಟಿತ್ತು. ವಶಿಷ್ಠರ ಆಶ್ರಮವು ಸ್ಥಾಣು ತೀರ್ಥದ ತಡಿಯಲ್ಲಿ ಇದ್ದಿತು. ಅದರ ಪಡುವಣ ನಿಟ್ಟಿನಲ್ಲಿಯೇ ವಿಶ್ವಾಮಿತ್ರರ ಆಶ್ರಮ. ಈ ಸ್ಥಾಣು ತೀರ್ಥದಲ್ಲಿ ಭಗವಾನ್ ಶಂಕರನು ಸರಸ್ವತೀದೇವಿಯ ಪೂಜೆಮಾಡಿ ಲಿಂಗಾಕಾರದ ಸರಸ್ವತಿಯನ್ನು ಅಲ್ಲಿ ಪ್ರತಿಷ್ಠೆ ಗೈದರು. ಸ್ಥಾಣು ತೀರ್ಥದಲ್ಲಿ ವಶಿಷ್ಠರು ಅತ್ಯುಗ್ರಹವಾದ ತಪಃ ಸಮಾಧಿಯಲ್ಲಿ ಕುಳಿತಿದ್ದರು. ವಿಶ್ವಾಮಿತ್ರರ ತಪಸ್ಸು ವಶಿಷ್ಠರಿಗಿಂತ ಕಡಿಮೆಯದಾಗಿತ್ತು. ಆಗ ವಿಶ್ವಾಮಿತ್ರರು ಸರಸ್ವತಿಯನ್ನು ಕರೆದು ಹೇಳಿದರು.

೮೬೪. ವಶಿಷ್ಠಂ ಮುನಿಶಾರ್ದೂಲಂ ಸ್ವೇನ ವೇಗೇನ ಚಾನಯ ।
ಇಹಾಯಾತಂ ಮುನಿಶ್ರೇಷ್ಠಂ ಹನಿಷ್ಯಾಮಿ ನ ಸಂಶಯಃ ।

''ಮುನಿಗಳಲ್ಲಿ ಹುಲಿಯಂತಿದ್ದ ವಶಿಷ್ಠರನ್ನು ನಿನ್ನ ಪ್ರವಾಹದ ವೇಗದಿಂದ ಇಲ್ಲಿಗೆ ಕರೆದುಕೊಂಡು ಬಾ. ಅವರು ಇಲ್ಲಿಗೆ ಬಂದ ಬಳಿಕ ಆ ಮುನಿವರರನ್ನು ಕೊಲ್ಲುವ ಕೆಲಸ ನನ್ನದು, ಅದಕ್ಕೆ ಸಂದೇಹಬೇಡ.'' ವಿಶ್ವಾಮಿತ್ರರ ಈ ನುಡಿಯನ್ನು ಕೇಳಿ ಆ ಸರಸ್ವತೀನದಿಗೆ ಬಹಳ ದುಃಖವಾಯಿತು. ವ್ಯಥೆಗೊಂಡು ನಡುಗತೊಡಗಿದ ಆ ಮಹಾನದಿಯನ್ನು ಕಂಡು ವಿಶ್ವಾಮಿತ್ರರಿಗೆ ಕೋಪಬಂದಿತು. ''ವಶಿಷ್ಠರನ್ನು ಕೂಡಲೇ ಕರೆದು ತಾ. ನಿನ್ನ ಹೊಳೆಯ ಸೆಳವಿನಲ್ಲಿ ಅವರು ಇಲ್ಲಿಗೆ ಕೊಚ್ಚಿ ಬರಲಿ. ನಿನ್ನ ಹೊಳೆಯ ಹುಚ್ಚು ಪ್ರವಾಹದ ಓಘ ವೇಗದಿಂದ ಇತ್ತ ಹರಿದುಬರಲಿ'' ಎಂದು ಗರ್ಜಿಸಿದರು. ಆಗ ನದಿಗಳಲ್ಲಿ ಶ್ರೇಷ್ಠವಾದ ಆ ಸರಸ್ವತಿಯು ಮುನಿಗಳಲ್ಲಿ ಶ್ರೇಷ್ಠರಾದ ವಶಿಷ್ಠರ ಬಳಿಗೆ ಹೋಗಿ ಅಳುತ್ತ ವಿಶ್ವಾಮಿತ್ರರು ಆಡಿದ ನುಡಿಗಳನ್ನು ಹೇಳಿದಳು. ಕಳೆಗೆಟ್ಟು ಹೋಯಿತು ಆ ಪುಣ್ಯನದಿ. ತಪಸ್ಸಿನಿಂದ ಮೊದಲೇ ಕೃಶವಾದ ಆ ಸರಸ್ವತಿಯು ವಿಶ್ವಾಮಿತ್ರಮುನಿಯ ಆದೇಶದಿಂದ ಮನನೊಂದು ಅತ್ಯಂತ ದುಃಖಿತಳಾಗಿದ್ದಳು. ಆ ನದೀನಾಯಕಿಗೆ ವಶಿಷ್ಠರು ಹೇಳಿದರು - ''ನನ್ನನ್ನು ನಿನ್ನ ಪ್ರವಾಹದ ಗುಂಟ ವಿಶ್ವಾಮಿತ್ರ ಇದ್ದಲ್ಲಿಗೆ ತೇಲಿಸಿಕೊಂಡು ನಡೆ.''

೮೬೫. ತಸ್ಯ ತದ್ವಚನಂ ಶ್ರುತ್ವಾ ಕೃಪಾಶೀಲಸ್ಯ ಸಾ ಸರಿತ್ ।
ಪ್ಲಾವಯಾಮಾಸ ತತ್‌ಸ್ಥಾನಂ ಪ್ರವಾಹೇಣಾಂಭಸಸ್ತದಾ ॥

ಕರುಣಾಶಾಲಿಗಳಾದ ಮಹರ್ಷಿಗಳು ಈ ಮಾತನ್ನು ಕೇಳಿ ಸರಸ್ವತಿಯು ಅವರ ಆಶ್ರಮವನ್ನೆಲ್ಲ ತನ್ನ ಪ್ರವಾಹದಿಂದ ತೋಯಿಸಿ ಜಲಮಯವಾಗಿ ಮಾಡಿದಳು.

೮೬೬. ಸ ಚ ಕೂಲಾಪಹಾರೇಣ ಮೈತ್ರಾವರುಣಿರುದ್ಧತಃ ।
ವಹಮಾನಶ್ಚ ತುಷ್ಟಾವ ತದಾ ದೇವೀಂ ಸರಸ್ವತೀಮ್ ।

ದಂಡೆಯಿಂದ ಕೊಚ್ಚಿ ಹೋದ ಬಳಿಕ ಅಲ್ಲಿಯೇ ಕುಳಿತ ವಶಿಷ್ಠರೂ ತೆರೆಗಳ ಮೇಲೆ ತೇಲತೊಡಗಿದರು. ತೇಲತೇಲುತ್ತಲೇ ಅವರು ಸರಸ್ವತೀ ದೇವಿಯನ್ನು ಸ್ತೋತ್ರ ಮಾಡಿದರು.

೮೬೭. ತ್ವಮೇವ ಕಾಮಗಾ ದೇವೀ ಮೇಘೇಷು ಸೃಜಸೇ ಪಯಃ ।
ಸರ್ವಾಸ್ತ್ವಾಪಸ್ತ್ವಮೇವೇತಿ ತ್ವತ್ತೋ ವಯಂ ವಹಾಮಹೇ ।

''ಬ್ರಹ್ಮ ಸರೋವರದಿಂದ ಹೊರಟ ಸರಸ್ವತಿಯೇ, ನೀನು ನಿನ್ನ ದಿವ್ಯಜಲದಿಂದ ಜಗತ್ತನ್ನೆಲ್ಲ ವ್ಯಾಪಿಸಿರುವಿ. ನೀನೇ ಸ್ವಇಚ್ಛೆಯಿಂದ ಆವಿಯ ರೂಪದಲ್ಲಿ ಮೇಲೆ ಹೋಗಿ ಮೇಘಗಳಲ್ಲಿ ನೀರನ್ನು ಮೂಡಿಸುವಿ. ಆ ಮೋಡದ ನೀರೇ ನೆಲಕ್ಕೆ ಸುರಿದು ಎಲ್ಲ ಕಡೆಗೂ ಹರಿಯುತ್ತದೆ. ಆದುದರಿಂದ ಸರ್ವ ಜಲಮಯಳು, ಸರ್ವತೀರ್ಥ ಮಯಳೂ ನೀನೇ ಆಗಿರುವಿ. ಈಗ ನಾನು ಈ ಪೆರ್ದೆರೆಗಳಲ್ಲಿ ಮುಳುಗದೆ ತೇಲುತ್ತ ಲಿರುವದು ನಿನ್ನ ಪ್ರವಾಹದಿಂದಲೇ. ಈ ಜಗತ್ತಿನಲ್ಲಿ ಘೋಷಣೆ, ಧೈರ್ಯ, ಯಶಸ್ಸು, ಸಿದ್ಧಿ, ಶಾಂತಿ, ಕ್ಷಮೆ, ಸ್ವಧಾ, ಸ್ವಾಹಾ ಮತ್ತು ನುಡಿ ಇವೆಲ್ಲವೂ ನಿನ್ನ ಅಧೀನವಾಗಿರುತ್ತವೆ. ನಿನ್ನ ಅನುಗ್ರಹದಿಂದಲೇ ಮಾನವರಿಗೆ ದೊರಕುತ್ತವೆ.

೮೬೭. ತ್ವಮೇವ ಸರ್ವಭೂತೇಷು ವಾಣೀರೂಪೇಣ ಸಂಸ್ಥಿತಾ ।

ಎಲ್ಲ ಪ್ರಾಣಿಗಳಲ್ಲಿಯೂ ವಾಣಿಯ ರೂಪದಿಂದ ನೀನೇ ನಾಲಿಗೆಯ ತುದಿಯಲ್ಲಿ ನಲಿದಾಡುತ್ತಲಿರುವೆ.''

೮೬೮. ಸುಖೇನೋವಾಹ ತಂ ವಿಪ್ರಂ ವಿಶ್ವಾಮಿತ್ರಾಶ್ರಮಂ ಪ್ರತಿ ।
ನ್ಯವೇದಯತ್ತದಾರ್ಚಿತ್ವಾ ವಿಶ್ವಾಮಿತ್ರಾಯ ತಂ ಮುನಿಮ್ ॥

ಹೀಗೆ ವಶಿಷ್ಠರ ಸ್ತುತಿಯಿಂದ ಪ್ರಸನ್ನಳಾದ ಆ ಸರಸ್ವತಿಯು ಅವರನ್ನು ಅನಾಯಾಸ ದಿಂದ ವಿಶ್ವಾಮಿತ್ರರ ಆಶ್ರಮಕ್ಕೆ ತೇಲಿಸಿಗೊಂಡು ಪ್ರವಾಹದ ಗುಂಡ ತೆರೆಗಳ ಮೇಲೆ ತೂಗಾಡುತ್ತ ಕರೆದೊಯ್ದಳು. ಅಲ್ಲಿದ್ದ ವಿಶ್ವಾಮಿತ್ರರನ್ನು ಸಂತೋಷಪಡಿಸಿ ವಶಿಷ್ಠರನ್ನು ಅವರಿಗೆ ಒಪ್ಪಿಸಿದಳು.

೮೬೯. ಸಮಾನೀತಂ ಸರಸ್ವತ್ಯಾ ದೃಷ್ಟ್ವಾ ಕೋಪಸಮನ್ವಿತಃ ।
ಅಥಾನ್ವಿಷತ್ ಪ್ರಹರಣಂ ವಶಿಷ್ಠಾಂತಕರಂ ತದಾ ।

ಹೊಳೆಯ ಹರಿ ಗುಂಟ ಹರಿದು ಬಂದ ವಶಿಷ್ಠರನ್ನು ಕಂಡ ಕೂಡಲೇ ವಿಶ್ವಾಮಿತ್ರರ ಕೋಪದ ಕಿಚ್ಚು ಭುಗಿಲ್ ಎಂದಿತು. ಆಗಲೇ ಅಲ್ಲಿಯೇ ಅವರನ್ನು ಕೊಂದು ಬಿಡಬೇಕೆಂದು ಘೋರ ಆಯುಧವನ್ನು ಹುಡುಕತೊಡಗಿದರು.

೮೭೦. ತಂ ತು ಕ್ಷುದ್ರಮಭಿಪ್ರೇಕ್ಷ ಬ್ರಹ್ಮಹತ್ಯಾಭಯಾನ್ವಿತಾ ।
ಅಪೋವಾಹ ವಶಿಷ್ಠಂ ಚ ಮಧ್ಯೇನ ಸ್ವಾಂಭವಸ್ತುತಃ ।

ಆ ಕೌಶಿಕ ಮುನಿಯ ಕೋಪಾಟೋಪವನ್ನು ಕಂಡು ಸರಸ್ವತೀ ನದಿಗೇ ಹೆದರಿಕೆ ಯಾಯಿತು. ನಾನು ತಂದು ಒಪ್ಪಿಸಿದ ವಶಿಷ್ಠರನ್ನು ವಿಶ್ವಾಮಿತ್ರ ಮುನಿಯು ಕೊಂದು

ಹಾಕಿದರೆ ಆ ಬ್ರಹ್ಮಹತ್ಯಾ ಪಾಪವು ತನಗೆ ತಟ್ಟುವುದೆಂದು ಅಂಜಿಕೆಯಿಂದ ಅವಳು ತನ್ನ ನೀರಿನ ಮತ್ತೊಂದು ಸೆಳವಿನ ಸುಳಿಯಿಂದ ವಶಿಷ್ಠರನ್ನು ಸೆಳೆದೊಯ್ದು ದೂರ ಸಾಗಿಸಿದಳು. ವಿಶ್ವಾಮಿತ್ರರ ಆಶ್ರಮದ ಬಳಿಯ ತೀರದವರೆಗೆ ತೇಲುತ್ತ ಬಂದ ವಶಿಷ್ಠರು ಸರಸ್ವತಿಯ ತರಲ ತರಂಗಗಳ ಆಕಸ್ಮಿಕ ತೂರಾಟ ತೇಲಾಟದಿಂದ ಒಮ್ಮೆಲೆ ನದಿಯ ನಟ್ಟ ನಡುವಿನ ಮಹಾಪ್ರವಾಹದಲ್ಲಿ ಹರಿದು ಹೋಗತೊಡಗಿದರು.

೮೭೧. ಉಭಯೋಃ ಕುರ್ವತೀ ವಾಕ್ಯಂ ವಂಚಯಿತ್ವಾ ಚ ಗಾಧಿಜಮ್।
ತತೋಽಪವಾಹಿತಂ ದೃಷ್ಟ್ವಾ ವಶಿಷ್ಠಂ ಋಷಿ ಸತ್ತಮಮ್ ।
ಅಬ್ರವೀತ್ ಕ್ರೋಧರಕ್ತಾಕ್ಷೋ ವಿಶ್ವಾಮಿತ್ರೋ ಮಹಾತಪಾಃ ।

ಇದರಿಂದ ಆ ಸರಸ್ವತೀ ನದಿಯು ಉಭಯ ಮುನಿಗಳೂ ನಿಷ್ಠಳಾಗಿ ಅವರ ಅಪ್ಪಣೆಯಂತೆ ನಡೆದುಕೊಂಡಂತಾಗಿತ್ತು. ವಿಶ್ವಾಮಿತ್ರರ ಆದೇಶದಂತೆ ಅವರ ಆಶ್ರಮದವರೆಗೆ ವಶಿಷ್ಠರನ್ನು ಕರೆದು ತಂದದ್ದೂ ಆಯಿತು. ಆದರೂ ಅವರು ಸಾಯದಂತೆ ಸುರಕ್ಷಿತವಾಗಿ ತನ್ನ ಸೆಳವಿನಿಂದ ಬೇರೆ ಕಡೆಗೆ ಸಾಗಿಸಿದ್ದೂ ಆಯಿತು. ಆದರೆ ವಿಶ್ವಾಮಿತ್ರಮುನಿಗೆ ಮಾತ್ರ ಕೋಪ ಬಂದಿತು. ತನ್ನ ತೀರದವರೆಗೆ ತಂದ ವಶಿಷ್ಠರನ್ನು ಮತ್ತೆ ದೂರ ತೇಲಿಸಿಕೊಂಡು ಹೋದುದು ತಮ್ಮ ವಂಚನೆಯೆಂದೇ ಅವರು ಬಗೆದರು. ಕೋಪದಿಂದ ಆ ಮಹಾ ತಪಸ್ವಿಯ ಕಣ್ಣು ಕೆಂಪಡರಿ ನುಡಿ ಕಿಡಿಯನ್ನು ದುರಿಸಿದರು.

೮೭೨. ಯಸ್ಮಾನ್ಮಾಂ ಸರಿತಾಂ ಶ್ರೇಷ್ಠೇ ವಂಚಯಿತ್ವಾ ವಿನಿರ್ಗತಾ ।
ಶೋಣಿತಂ ವಹ ಕಲ್ಯಾಣೀ ರಕ್ಷೋಗ್ರಾಮಸುಸಂಯುತಾ ॥

೮೭೩. ತತಃ ಸರಸ್ವತೀ ಶಪ್ತಾ ವಿಶ್ವಾಮಿತ್ರೇಣ ಧೀಮತಾ ।
ಅವಹತ್ ಶೋಣಿತೋನ್ಮಿಶ್ರಂ ತೋಯಂ ಸಂವತ್ಸರಂ ತದಾ ॥

''ನದೀ ಶ್ರೇಷ್ಠಳೇ, ನೀನು ನನ್ನನ್ನು ವಂಚಿಸಿ ಹೋದಿಯಲ್ಲವೇ! ಆದರಿಂದ ಇನ್ನು ನೀನು ನೆತ್ತರಿನ ನೀರನ್ನೇ ಪ್ರವಹಿಸು. ಮಾಂಸಾಹಾರಿಗಳಾದ ರಾಕ್ಷಸರು ರಕ್ತ ನದಿಯಾದ ನಿನ್ನನ್ನು ಸೇವಿಸಲಿ.'' ಹೀಗೆ ವಿಶ್ವಾಮಿತ್ರರ ಶಾಪದಿಂದ ಸರಸ್ವತೀ ನದಿಯು ಅಂದಿನಿಂದ ಒಂದು ವರ್ಷದವರೆಗೆ ರಕ್ತಮಿಶ್ರಿತವಾದ ನೀರನ್ನೇ ಹೊತ್ತು ಹರಿದಳು.

೮೭೪. ಅಥರ್ಷಯಶ್ಚ ದೇವಾಶ್ಚ ಗಂದರ್ವಾಪ್ಸರಸಸ್ತಥಾ ।
ಸರಸ್ವತೀ ತದಾ ದೃಷ್ಟ್ವಾ ಬಭೂವುಃ ಭೃಶದುಃಖಿತಾಃ ।
ತಸ್ಮಿಂ ಸ್ತೀರ್ಥವರೇ ರಮ್ಯೇ ಶೋಣಿತಂ ಸಮುಪಾವಹತ್ ॥

೮೭೫. ದೃಷ್ಟ್ವಾಶ್ಚ ತೇನ ಸುಭೃಶಂ ಸುಖಿತಾ ವಿಗತಜ್ವರಾಃ ।
ನೃತ್ಯಂತಶ್ಚ ಹಸಂತಶ್ಚ ಯಥಾಸ್ವರ್ಗಜಿತಃತಥಾ ।

ಅನಂತರ ಪುಣ್ಯ ನದಿಯಾದ ಸರಸ್ವತಿಯು ರಕ್ತವಾಹಿನಿಯಾಗಿ ಮಾರ್ಪಟ್ಟಿದ್ದನ್ನು ಕಂಡು ದೇವತೆಗಳು ದುಃಖಿತರಾದರು, ಗಂಧರ್ವರು ಗೋಳಿಟ್ಟರು. ಅಪ್ಸರೆಯರು ಶೋಕಾಕ್ರಾಂತರಾದರು. ಆ ತೀರ್ಥದಲ್ಲಿ ಇರುವ ಸರಸ್ವತೀ ನೀರೆಲ್ಲವೂ ರಕ್ತ ರಂಜಿತವಾಗಿಯೇ ಹರಿಯತೊಡಗಿತು.

ಇದರಿಂದ ಭೂತ, ಪಿಶಾಚ ಹಾಗೂ ರಾಕ್ಷಸರಿಗೆ ಮಾತ್ರ ಅತ್ಯಂತ ಆನಂದವಾಯಿತು. ಅವರು ಎಲ್ಲ ಕಡೆಯಿಂದಲೂ ಅಲ್ಲಿಗೆ ಬಂದು ಅಲ್ಲಿಯ ನೆತ್ತರನ್ನು ಕುಡಿದು ಆನಂದದಿಂದ ಇರುತ್ತಿದ್ದರು. ಆ ರಕ್ತಪಾನದಿಂದ ಆ ಎಲ್ಲ ರಕ್ಕಸರ ಬೇನೆ ಬೇಸರಿಕೆಗಳು ಕಳೆದುಹೋದವು. ಸುಖದಿಂದ ಅವರ ಶರೀರಗಳೆಲ್ಲ ಸೊಕ್ಕಿದವು. ಸ್ವರ್ಗವನ್ನೇ ಗೆದ್ದು ಆಕ್ರಮಿಸಿಕೊಂಡಂತೆ ಆನಂದದಿಂದ ಅವರು ಹಾಡಿಪಾಡಿದರು. ಕುಣಿದು ಕುಪ್ಪಳಿಸಿದರು.

ಕೆಲವು ಕಾಲ ಕಳೆದ ಬಳಿಕ ಒಂದು ದಿನ ನೂರಾರು ಯೋಜನ ದೂರದಿಂದ ಹಲವು ತಪಸ್ವಿಗಳು ತೀರ್ಥಯಾತ್ರೆ ಮಾಡುತ್ತ ಈ ಸರಸ್ವತೀ ನದಿಯ ದಂಡೆಗೆ ಬಂದರು. ಆದರೆ ಅಲ್ಲಿ ಇದ್ದವರೆಲ್ಲರೂ ಘೋರ ರಾಕ್ಷಸರೇ. ನೀರಂತೂ ನೆತ್ತರವೇ ನೆತ್ತರ. ಆನಂದದಿಂದ ರಾಕ್ಷಸರು ಅದನ್ನು ಕುಡಿಯುತ್ತಲೇ ಇದ್ದರು. ಇದನ್ನು ಕಂಡ ಆ ತಪಸ್ವಿಯಾತ್ರಿಕರಿಗೆ ಬಹಳ ದುಃಖವಾಯಿತು. ವ್ರತನಿಷ್ಠರಾದ ಆ ಮಹಾನುಭಾವರು ಎಲ್ಲರೂ ಕೂಡಿ ಆ ಮಹಾನದಿಯ ಬಳಿಗೆ ಬಂದು ಅವಳನ್ನು ಕೇಳಿದರು.

೮೭೬. ಕಿಂ ಕಾರಣಂ ಸರಚ್ಛ್ರೇಷ್ಠೇ ಶೋಣಿತೇನ ವಹಿಸ್ಯಹೋ ।
ಏವ ಮಾಕುಲತಾಂ ಯಾತಾಂ ಶ್ರುತ್ವಾ ಪೃಚ್ಛಾಮಹೇವಯಮ್।

೮೭೭. ತತಸ್ಸಾ ಸರ್ವಮಾಚಷ್ಟೇ ವಿಶ್ವಾಮಿತ್ರ ವಿಚೇಷ್ಟಿತಮ್ ॥

''ನದಿಗಳಲ್ಲಿ ಶ್ರೇಷ್ಠವಾದ ಸರಸ್ವತಿಯೇ, ನೀನು ನೆತ್ತರನ್ನು ಹೊತ್ತು ಹರಿಯುತ್ತಲಿರುವೆ. ಇದಕ್ಕೆ ಕಾರಣವೇನು ? ನಿನ್ನ ಈ ದುರವಸ್ಥೆಯನ್ನು ಕಂಡು ನಾವು ಈ ಪ್ರಶ್ನೆ ಕೇಳುತ್ತಿದ್ದೇವೆ.'' ಆಗ ಸರಸ್ವತಿಯು ಆ ತಪೋಧನರಿಗೆ ಇದೆಲ್ಲವೂ ''ವಿಶ್ವಾಮಿತ್ರನ ಚೇಷ್ಟೆ'' ಎಂದು ಹೇಳಿ ನಡೆದ ಸಂಗತಿಯನ್ನೆಲ್ಲ ತಿಳಿಸಿದಳು. ಅದನ್ನು ಕೇಳಿ ಋಷಿಗಳೆಲ್ಲರೂ ಸರಸ್ವತೀ ಮೇಲಿನ ಪ್ರೀತಿಯಿಂದ ಒಂದು ನಿರ್ಧಾರವನ್ನು ಕೈಕೊಂಡರು.

೮೭೮. ತತಸ್ತೇ ಮುನಯಃ ಪ್ರೀತಾಃ ಸರಸ್ವತ್ಯಾ ಸಮಾನಯನ್ ।
ಅರುಣಾಂ ಪುಣ್ಯತೋಯೌಘಾಂ ಸರ್ವದುಷ್ಕೃತನಾಶಿನೀಮ್ ॥

ತಮ್ಮ ತಪೋಬಲದಿಂದ ಪವಿತ್ರವಾದ ಜಲರಾಶಿಯನ್ನು ನಿರ್ಮಿಸಿ ಅದನ್ನು ಸರಸ್ವತೀ ನದಿಯಲ್ಲಿ ತಂದು ಕೂಡಿಸಿದರು. ಅಲ್ಲಿಯ ರಕ್ತವೆಲ್ಲವೂ ಹೋಗಿ ಪರಮ ಪವಿತ್ರವೂ ಅತ್ಯಂತ ಶುಚಿ ರುಚಿಯೂ ಆದ ನೀರು ಮಾತ್ರ ಅಲ್ಲಿ ತುಂಬಿ ತುಳುಕುವಂತೆ ಮಾಡಿದರು. ಅದರಲ್ಲಿಯ ನೆತ್ತರಿನ ಭಾಗವೆಲ್ಲವೂ ನಾಶವಾಗಿ ಕೇವಲ ಅದರ ಹೊಂಬಣ್ಣ ಮಾತ್ರ ಉಳಿಯಿತು. ಸರಸ್ವತಿಯ ನೀರು ಎಂದಿನಂತೆ ಪಾಪ ಪರಿಹರಣ ಸಾಮರ್ಥ್ಯವನ್ನೂ, ಪಾವಿತ್ರ್ಯವನ್ನೂ ಋಷಿಗಳ ತಪೋಮಹಿಮೆಯಿಂದ ಮತ್ತೆ ಪಡೆಯಿತು. ಆದರೆ ಆ ಸರಸ್ವತಿ ಒಡಲಿನಲ್ಲಿ ನೆತ್ತರಿನ ಬದಲು ನೀರು ಬಂದದ್ದನ್ನು ಕಂಡು ರಾಕ್ಷಸರಿಗೆಲ್ಲ ಬಹಳ ದುಃಖವಾಯಿತು. ಆ ರಕ್ತದ ಜಲಪರಿವರ್ತನೆಗೆ ಕಾರಣರಾದ ಆ ತಪಸ್ವಿ ಮುನಿಗಳ ಬಳಿಗೆ ಬಂದು ದೈನ್ಯದಿಂದ ಅಂಗಲಾಚಿ ಬೇಡಿಕೊಂಡರು.

''ಪೂಜ್ಯರೇ ನಾವೆಲ್ಲರೂ ಹಸಿದಿದ್ದೇವೆ, ಹಿಂದೆ ನಾವು ಧರ್ಮಭ್ರಷ್ಟರಾದುದರಿಂದ ನಮಗೆ ಈ ದುರವಸ್ಥೆಯು ಪ್ರಾಪ್ತವಾಗಿದೆ.

೮೭೯. ನ ಚ ನಃ ಕಾಮಕಾರೋಯಂ ಯದ್ವಯಂ ಪಾಪಕಾರಿಣಃ ।
ಯುಷ್ಮಾಕಂ ಚಾಪ್ರಸಾದೇನ ದುಷ್ಕೃತೇನ ಚ ಕರ್ಮಣಾ ॥

ಹಿಂದೆ ನಾವು ಘೋರ ಪಾಪಗಳನ್ನು ಮಾಡಿದ್ದು ಕೂಡ ನಮ್ಮ ಇಚ್ಛೆಯಿಂದಲ್ಲ. ನಿಮ್ಮಂತ ಮಹಾತ್ಮರ ಅನುಗ್ರಹವು ಇಲ್ಲದಿರುವದು ಹಾಗೂ ನಮ್ಮ ಪೂರ್ವಜನ್ಮದ ದುಷ್ಕರ್ಮಗಳು ನಮ್ಮನ್ನು ದುರಾಚಾರಕ್ಕೆ ಪ್ರೇರಿಸಿದವು.

೮೮೦. ಪಕ್ಷೋಽಯಂ ವರ್ಧತೇಽಸ್ಮಾಕಂ ಯತಶ್ಚ ಬ್ರಹ್ಮರಾಕ್ಷಸಾಃ ।
ಏವಂ ವೈಶ್ಯಾಶ್ಚ ಶೂದ್ರಾಶ್ಚ ಕ್ಷತ್ರಿಯಾಶ್ಚ ವಿಕರ್ಮಭಿಃ ।

ಇತ್ತೀಚೆಗೆ ನಮ್ಮ ಈ ಬ್ರಹ್ಮರಾಕ್ಷಸ ಬಳಗವು ಬೆಳೆಯುತ್ತಲಿದೆ. ಇತರ ರಾಕ್ಷಸರೂ ದಿನದಿನಕ್ಕೆ ಗುಂಪುಗೂಡುತ್ತಲೇ ಇದ್ದಾರೆ. ಎಷ್ಟೋ ಕ್ಷತ್ರಿಯ ವೈಶ್ಯರು, ಶೂದ್ರರೂ ಈ ಪ್ರಚಂಡ ರಾಕ್ಷಸರ ಗುಂಪಿಗೆ ಸೇರುತ್ತಲೇ ಇದ್ದಾರೆ.

೮೮೧. ಯೇ ಬ್ರಾಹ್ಮಣಾನ್ ಪ್ರದ್ವಿಷಂತಿ ತೇ ಭವಂತೀಹ ರಾಕ್ಷಸಾಃ ।
ಆಚಾರ್ಯಂ ಮಾತರಂ ಚೈವ ಪಿತರಂ ಯೇ ದ್ವಿಷಂತಿ ಹ ॥

ಬ್ರಹ್ಮಜ್ಞಾನಿಗಳನ್ನು ದ್ವೇಷ ಮಾಡುವವರೂ, ಗುರುಗಳನ್ನು ನಿಂದಿಸುವವರೂ, ತಾಯಿತಂದೆಗಳನ್ನು ಹಿಂಸಿಸುವವರೂ, ಅವಮಾನಿಸುವವರೂ, ರಾಕ್ಷಸರಾಗಿ ಹುಟ್ಟುತ್ತಾರೆ.

೮೮೨. ವೃದ್ಧಾನಾಮವಮಾನೇನ ತೇ ಭವಂತೀಹ ರಾಕ್ಷಸಾಃ ।
ಯೋಷಿತಾಂ ಚೈವ ಪಾಪಾನಾ ಯೋನಿದೋಷೇಣ ವರ್ಧತೇ ॥

ಹೆಣ್ಣುಮಕ್ಕಳ ವ್ಯಭಿಚಾರ ದೋಷದಿಂದ ಈ ರಾಕ್ಷಸಕುಲವು ಮತ್ತಿಷ್ಟು ಅಭಿವೃದ್ಧಿಗೊಳ್ಳುತ್ತದೆ. ಈ ಎಲ್ಲ ಪಾಪಿಗಳನ್ನೂ ಲೋಕೋದ್ಧಾರ ಸಮರ್ಥರಾದ ನೀವು ಮಾತ್ರ ಪಾವನಗೊಳಿಸಬಲ್ಲಿರಿ. ದಯಮಾಡಿ ನಮಗೆ ಉದ್ಧಾರದ ದಾರಿ ತೋರಿರಿ.'' ಆ ಪಾಪಾತ್ಮರ ಹೇಳಿಕೆಯನ್ನು ಕೇಳಿ ಆ ಎಲ್ಲ ತಪೋಧನರಿಗೂ ಕರುಣೆ ಬಂದಿತು. ಅವರು ತಮ್ಮ ತಮ್ಮಲ್ಲಿ ಆಲೋಚನೆ ಮಾಡಿದರು ಮತ್ತು ಪರಸ್ಪರ ಮಾತನಾಡಿದರು. ರಾಕ್ಷಸ ಜನ್ಮವು ಬರಲು ಕಾರಣವಾದ ಕೃತ್ಯಗಳನ್ನೆಲ್ಲ ಕಂಡುಹಿಡಿದು ಎಲ್ಲರಿಗೂ ತಿಳಿಸಿದರು.

೮೮೩. ಕೇಶಾವಪನ್ನಮಾಧೂತಂ ಮಾರುತ ಶ್ವಾಸದೂಷಿತಂ ।
ಏತೈಃ ಸಂಸ್ಪೃಷ್ಟಮನ್ನಂ ಚ ಭಾಗೋ ವೈ ರಾಕ್ಷಸೋ ಭವೇತ್ ॥

''ಶೀನು ಬಂದಾಗ ಬಾಯಿ ಮೂಗಿನ ಎಂಜಲು ಸಿಡಿದ ಅಪವಿತ್ರವಾದ ಅನ್ನವನ್ನು ಉಂಡರೆ ರಾಕ್ಷಸ ಜನ್ಮವು ಬರುವದು. ಹಳಸಿ ಹುಳವಾದ ಅನ್ನವನ್ನೂ, ದುರ್ವಾಸನೆಯಿಂದ ದೂಷಿತವಾದ ಅನ್ನವನ್ನೂ, ಕೂದಲು ಒಳಸೇರಿ ಕೆಟ್ಟುಹೋದ ಅನ್ನವನ್ನೂ, ನೀಚ ಊಟ ಮಾಡಿ ಉಳಿದ ಅನ್ನವನ್ನೂ ಉಂಡರೆ ರಾಕ್ಷಸಯೋನಿಯಲ್ಲಿ ಹುಟ್ಟುವರು.

೮೮೪. ತಸ್ಮಾತ್ ಜ್ಞಾತ್ವಾ ಸದಾ ವಿಸ್ವಾಂಸ್ತ್ಯಾನ್ಯೇತಾನಿ ವಿವರ್ಜಯೇತ್ ।
ರಾಕ್ಷಸಾನ್ವೈ ಭೋಜಯತೇ ಭುಂಕ್ತೇ ಸ್ವಯಮೀದೃಶಃ ।

ಆದುದರಿಂದ ಇದನ್ನೆಲ್ಲ ಬಲ್ಲವರು ಇಂಥ ಆಹಾರವನ್ನು ಸೇವಿಸಬಾರದು. ಇಂಥ ಅಶುದ್ಧವಾದ ಭೋಜನ ಮಾಡಿದರೆ ರಾಕ್ಷಸರಿಗೆ ಭೋಜನ ಮಾಡಿಸಿದಂತೆಯೇ ಸರಿ.

೮೮೫. ಶೋಧಯಿತ್ವಾತು ತತ್ತೀರ್ಥಮೃಷಯಸ್ತೇ ತಪೋಧನಾಃ ।

ಹೀಗೆ ಆ ತಪೋಮೂರ್ತಿಗಳು ತಮ್ಮ ವಿಚಾರವನ್ನು ತಿಳಿಸಿ ಆ ಸಾರಸ್ವತ ತೀರ್ಥವನ್ನು ಶೋಧಿಸಿ ಶುದ್ಧಗೊಳಿಸಿದರು. ಹಾಗೂ ಆ ಎಲ್ಲ ಪಾಪಿಗಳನ್ನು ರಕ್ಕಸ ಜನ್ಮದಿಂದ ಬಿಡುಗಡೆ ಮಾಡಲಿಕ್ಕಾಗಿ ಸಂಗಮ ಎಂಬ ಒಂದು ತೀರ್ಥವನ್ನು ನಿರ್ಮಿಸಿದರು.

೮೮೬. ಅರುಣಾಯಾಃ ಸರಸ್ವತ್ಯಾಃ ಸಂಗಮೇ ಲೋಕವಿಶ್ರುತೇ ।
ತ್ರಿರಾತ್ರೋಪೋಷಿತಃ ಸ್ನಾತೋ ಮುಚ್ಯತೇ ಸರ್ವಕಿಲ್ಬಿಷೈಃ ॥

ಸರಸ್ವತೀ ಅರುಣಾ ಸಂಗಮದ ಲೋಕಪ್ರಸಿದ್ಧವಾದ ಈ ಪುಣ್ಯ ತೀರ್ಥದಲ್ಲಿ ಮೂರು ರಾತ್ರಿ ಉಪವಾಸ ಮಾಡಿ ಸ್ನಾನ ಮಾಡಿದ ಮಾನವನ ಹಾಗೂ ಪಾಪಿಗಳ ಪಾಪಗಳೆಲ್ಲವೂ ಪರಿಹೃತವಾಗುತ್ತವೆ. ಘೋರವಾದ ಕಲಿಯುಗ ಬಂದಾಗ ಎಲ್ಲೆಡೆಗೂ ಅಧರ್ಮವು ಹಬ್ಬಿದಾಗ ಈ ಅರುಣಾ ಸಂಗಮ ತೀರ್ಥಕ್ಕೆ ಬಂದು ಮಿಂದು ಹೋದ ಮಾನವನು ಮೋಕ್ಷಕ್ಕೆ ಅಧಿಕಾರಿಯಾಗುವವನು.

ಸಂಗಮ ತೀರ್ಥದ ಈ ಮಹಾ ಮಹಿಮೆಯನ್ನು ತಿಳಿದು ಆ ನೀಚ ಯೋನಿಯಲ್ಲಿ ಹುಟ್ಟಿದ ರಕ್ಕಸರೆಲ್ಲರೂ ಅದರಲ್ಲಿ ಮುಳುಗು ಹಾಕಿದರು. ತಕ್ಷಣದಲ್ಲಿಯೇ ಅವರ ಘೋರ ಪಾಪಗಳೆಲ್ಲವೂ ಅವರಿಂದ ತೊಲಗಿಹೋದವು. ಅವರಿಗೆಲ್ಲ ಒಮ್ಮೆಲೆ ದಿವ್ಯ ಪ್ರಾಪ್ತವಾಯಿತು. ಸ್ವರ್ಗದ ಹೆಂಗಳೆಯರು ಅವರ ಬಳಿಯಲ್ಲಿ ಬಂದು ನಿಂತರು. ದಿವ್ಯ ಮಾಲೆ ಹಾಗೂ ವಸ್ತ್ರಗಳನ್ನು ಧರಿಸಿ ಅವರೆಲ್ಲರೂ ಸ್ವರ್ಗಕ್ಕೆ ನಡೆದರು.

ವಾಮನ ಮಹಾಪುರಾಣದಲ್ಲಿ ನಲವತ್ತನೇಯ ಅಧ್ಯಾಯವು ಮುಗಿದುದು.

—o—

## ಕುರುವಿನ ಉಗ್ರ ತಪಸ್

ಅಧ್ಯಾಯ - ೪೧

### ಲೋಮಹರ್ಷಣ ಉವಾಚ

**೮೮೭. ಸಮುದ್ರಾಸ್ತತ್ರ ಚತ್ವಾರಃ ಋಷಿಣಾ ನಿರ್ಮಿತಾಃ ಪುರಾ ।**
**ಪ್ರತ್ಯೇಕಂ ಚ ನರಃ ಸ್ನಾತೋ ಗೋಸಹಸ್ರ ಫಲಂ ಲಭೇತ್ ॥**

**ಲೋಮಹರ್ಷಣ** : ಅದೇ ಕ್ಷೇತ್ರದಲ್ಲಿ ಋಷಿ ನಿರ್ಮಿತವಾದ ನಾಲ್ಕು ಸಮುದ್ರ ತೀರ್ಥಗಳು ಇರುತ್ತವೆ. ಆ ಪ್ರತಿಯೊಂದು ತೀರ್ಥದಲ್ಲಿ ಸ್ನಾನ ಮಾಡಿದರೆ ಸಾವಿರ ಹಸುಗಳನ್ನು ದಾನಮಾಡಿದ ಪುಣ್ಯ ಬರುತ್ತದೆ.

**೮೮೮. ಯತ್ಕಿಂಚಿತ್ಕ್ರಿಯತೇ ತಸ್ಮಿಂ ಸ್ತಪಸ್ತೀರ್ಥೇ ದ್ವಿಜೋತ್ತಮಾಃ ।**
**ಪರಿಪೂರ್ಣಂ ಹಿ ತತ್ಸರ್ವಮಪಿ ದುಷ್ಕೃತ ಕರ್ಮಣಃ ॥**

ಆ ತೀರ್ಥಗಳಲ್ಲಿ ತುಸುವಾದರೂ ತಪಸ್ಸು ಮಾಡಿದರೆ ಅಥವಾ ಪುಣ್ಯ ಕರ್ಮವನ್ನು ಮಾಡಿದರೆ ಅದಕ್ಕೆಲ್ಲ ಪೂರ್ಣ ಫಲವು ಬರುವದು. ಅಲ್ಲಿಯೇ ಇರುವ ಶತಕ ಮತ್ತೂ ಶತಸಾಹಸ್ರಕ ಎಂಬ ಎರಡು ತೀರ್ಥಗಳಲ್ಲಿ ಸ್ನಾನ ಪೂಜೆ ಮಾಡಿದವರಿಗೆ ಸಾವಿರ ಗೋದಾನದ ಪುಣ್ಯ. ಅದೇ ಸರಸ್ವತಿಯು ತಟಾಕ ದಲ್ಲಿರುವ ಸೋಮತೀರ್ಥ ಸ್ನಾನದಿಂದ ರಾಜಸೂಯಯಾಗದ ಫಲ. ಇಂದ್ರಿಯಗಳನ್ನು ವಶದಲ್ಲಿ ಇಟ್ಟುಕೊಂಡು ಶ್ರದ್ಧೆಯಿಂದ ರೇಣುಕಾಷ್ಟಕ ಎಂಬ ತೀರ್ಥದಲ್ಲಿ ಸ್ನಾನ ಮಾಡಿದ ಮಾನವನಿಗೆ ತಾಯಿಯನ್ನು ಯಾವ ಜನ್ಮ ಸೇವೆ ಮಾಡುವದರಿಂದ ಬರುವ ಮಹಾಪುಣ್ಯ ಅನಾಯಾಸವಾಗಿ ಲಭಿಸುವದು. ಅಲ್ಲಿಯೇ ಬ್ರಾಹ್ಮಣರು ಸೇವಿಸುವ ಋಣಯೋಚನ, ಕುಮಾರಭಿಷೇಕ, ಓಜಸ ಎಂಬ ತೀರ್ಥಗಳು ಇರುತ್ತವೆ. ಅಲ್ಲಿ ಸ್ನಾನ ಮಾಡುವದರಿಂದ ಇಲ್ಲಿ ಕೀರ್ತಿ ಮುಂದೆ ಸ್ಕಂದಲೋಕ ಪ್ರಾಪ್ತಿ ಎರಡೂ ಆಗುತ್ತವೆ.

ಚೈತ್ರ ಶುಕ್ಲಪಕ್ಷದ ಷಷ್ಠಿ ದಿನ ಇಲ್ಲಿಯ ಓಜಸ ತೀರ್ಥದಲ್ಲಿ ಶಾದ್ಧ ಮಾಡಿದರೆ ಗಯಾ ಶ್ರಾದ್ಧ ಮಾಡಿದ ಪುಣ್ಯ ಫಲವೂ ಬರುತ್ತದೆ. ಹಿಂದೆ ವಾಯುದೇವರು ಇಲ್ಲಿಯ ಸನ್ನಿಹತಿ ತೀರ್ಥದಲ್ಲಿ ಶಾದ್ಧ ಮಾಡಿದರೆ ಬರುವದೆಂದು ಹೇಳಿದ ಪುಣ್ಯವೆಲ್ಲವೂ ಈ ಕುಮಾರ ಅಭಿಷೇಕ ತೀರ್ಥದಲ್ಲಿ ಸ್ನಾನ ಮಾಡುವದರಿಂದ ಪ್ರಾಪ್ತವಾಗುವದು. ಆದುದರಿಂದ ಸರ್ವ ಪ್ರಯತ್ನದಿಂದಲೂ ಇಲ್ಲಿ ಶ್ರಾದ್ಧ ಮಾಡಬೇಕು. ಚೈತ್ರ ಷಷ್ಠಿಯ ದಿನ ಇಲ್ಲಿ ಸ್ನಾನ ಮಾಡಿ ಪಿತೃಗಳಿಗೆ ನೀರಿನಿಂದ ತರ್ಪಣ ಮಾಡಿದರೆ ಅದು ಅಕ್ಷಯೋದಕವಾಗಿ ಪಿತೃಗಳಿಗೆ ನಿರಂತರ ತೃಪ್ತಿಯಾಗುವದು. ಪಂಚವಟಿ ಎಂಬ ಮೂರುಲೋಕದಲ್ಲಿ ವಿಖ್ಯಾತವಾದ ತೀರ್ಥ ಒಂದಿದೆ. ಅಲ್ಲಿ ಮಹಾದೇವರು ಯೋಗ ಮೂರ್ತಿಯಾಗಿ ಸ್ವಯಂ ಸನ್ನಿಹಿತರಾಗಿದ್ದಾರೆ. ಅಲ್ಲಿ ಸ್ನಾನ ಮಾಡಿ ದೇವದೇವನಾದ ಮಹಾದೇವನನ್ನು ಪೂಜಿಸಿದರೆ ಗಣಾಧಿಪತಿ ಗಳ ಗುಂಪಿನಲ್ಲಿ ಸೇರ್ಪಡೆಯಾಗುವದು. ದೇವತೆಗಳೊಂದಿಗೆ ಮುಂದೆ ಆನಂದದಿಂದ ವಿಹರಿಸುವ ಭಾಗ್ಯವೂ ದೊರಕುವದು.

**೮೮೯. ಕುರುಕ್ಷೇತ್ರಂ ಚ ವಿಖ್ಯಾತಂ ಕರುಣಾ ಯತ್ರವೈ ತಪಃ ।**
**ತಪ್ತಂ ಸುಘೋರಂ ಕ್ಷೇತ್ರಸ್ಯ ಕರ್ಷಣಾರ್ಥಂ ದ್ವಿಜೋತ್ತಮಾಃ॥**

ಅಲ್ಲಿ ಕುರುಕ್ಷೇತ್ರ ಎಂದೇ ಹೆಸರುಳ್ಳ ಒಂದು ಕ್ಷೇತ್ರವು ಇದೆ. ಇಲ್ಲಿ ಹಿಂದೆ ಕುರುರಾಜನು ಧರ್ಮದ ಬೀಜಗಳನ್ನು ಬಿತ್ತಲಿಕ್ಕಾಗಿ ಘೋರ ತಪವನ್ನು ಕೈಕೊಂಡಿದ್ದನು.

**೮೯೦. ತಸ್ಯ ಘೋರೇಣ ತಪಸಾ ತುಷ್ಟ ಇಂದ್ರೋಽಬ್ರವೀದ್ವಚಃ ।**
**ರಾಜರ್ಷೆ ಪರಿತುಷ್ಟೋಽಸ್ಮಿ ತಪಸಾನೇನ ಸುವ್ರತ ॥**

ಅವನ ಉಗ್ರ ತಪಸ್ಸಿನಿಂದ ಹಿಗ್ಗಿ ಹೋದ ದೇವೇಂದ್ರನು ಹೀಗೆ ನುಡಿದನು- ''ವ್ರತಬದ್ಧನಾದ ರಾಜರ್ಷಿಯೇ, ನಿನ್ನ ಈ ದಾರುಣ ತಪಸ್ಸಿನಿಂದ ನಾನು ತುಷ್ಟನಾಗಿದ್ದೇನೆ.

**೮೯೧. ಯಜ್ಞಂ ಚ ಯೇ ಕುರುಕ್ಷೇತ್ರೇ ಕರಿಷ್ಯಂತಿ ಶತಕ್ರತುಂ ।**
**ತೇ ಗಮಿಷ್ಯಂತಿ ಸುಕೃತಾನ್ ಲೋಕಾನ್ಪಾಪವಿವರ್ಜಿತಾನ್ ॥**

ನಿನ್ನ ಈ ಕುರುಕ್ಷೇತ್ರದಲ್ಲಿ ಒಂದು ಯಜ್ಞ ಮಾಡಿದರೂ ನೂರು ಯಜ್ಞ ಮಾಡಿದಂತೆ ಅವರ ಪಾಪಗಳೆಲ್ಲ ಕಳೆದುಹೋಗುವವು. ಅವರು ದಿವ್ಯಲೋಕವನ್ನು ಹೊಂದುವರು.'' ಹೀಗೆ ಹೇಳಿ ಇಂದ್ರನು ಮಂದಹಾಸ ಮಾಡುತ್ತ ಸ್ವರ್ಗಕ್ಕೆ ಹೊರಟುಹೋದನು.

**೮೯೨. ಅಪಹಸ್ಯ ತತ ಶ್ಶಕ್ರೋ ಜಗಾಮ ತ್ರಿದಿವಂ ಪ್ರಭುಃ ।**
**ಆಗಮ್ಯಾಗಮ್ಯ ಚೈವೈನಂ ಭೂಯೋ ಭೂಯೋಽಪಹಸ್ಯಚ ।**
**ಶತಕ್ರತುರನಿರ್ವಿಣ್ಣಃ ಪೃಷ್ಟ್ವಾ ಜಗಾಮ ಹ ॥**

ಸ್ವರ್ಗದಿಂದ ಮತ್ತೆ ಮತ್ತೆ ಮರಳಿ ಬಂದು ಕುರುರಾಜನನ್ನು ಕುರಿತು ನಕ್ಕು ನುಡಿದು ಮಾತನಾಡಿಸಿ ಹೋಗುತ್ತಿದ್ದನು. ಹೀಗೆ ಬೇಸರವಿಲ್ಲದೆ ಪುನಃ ಪುನಃ ಬಂದು ಪ್ರಶ್ನಿಸಿ ಕುರುವಿನೊಂದಿಗೆ ಮಾತನಾಡಿ ಮಂದಹಾಸ ಬೀರಿ ಇಂದ್ರನು ಅನೇಕ ಬಾರಿ ಅಲ್ಲಿಗೆ ಸಂದರ್ಶನವನ್ನು ನೀಡುತ್ತಿದ್ದನು.

**೮೯೩. ಯದಾತು ತಪಸೋಗ್ರೇಣ ಸಂತಪ್ತಂ ದೇಹಮಾತ್ಮನಃ ।**
**ತತಃ ಶಕ್ರೋಽಬ್ರವೀತ್ಪ್ರೀತಃ ಬ್ರೂಹಿ ಯತ್ತೇ ಚಿಕೀರ್ಷಿತಂ ।**

ಕುರುರಾಜನ ತಪಸ್ಸು ಇನ್ನೂ ಉಗ್ರವಾಯಿತು. ಅದರ ಕಾವಿನಿಂದ ಅವನ ದೇಹವೆಲ್ಲವೂ ಬೆಂದುಹೋಯಿತು. ಇಂದ್ರ ಮತ್ತೆ ಬಂದ ಕುರುರಾಜನ ಆ ಸಂತಪ್ತ ಶರೀರವನ್ನು ನೋಡಿ ಅವನಿಗೆ ಇವನಲ್ಲಿ ಪ್ರೀತಿ ಉಕ್ಕೇರಿ ಬಂದಿತು. ಅವನು ಕೇಳಿಬಿಟ್ಟ. ''ಕುರುರಾಜನೇ, ನಿನ್ನ ಮನಸ್ಸಿನಲ್ಲಿ ಏನು ಇರುವದು? ನೀನು ಇಲ್ಲಿ ಏನು ಮಾಡಬೇಕೆಂದು ಬಯಸಿರುವೆ? ಹೇಳು.

**೮೯೪. ಯೇ ಶ್ರದ್ಧದಾನಾಸ್ತೀರ್ಥೇಽಸ್ಮಿನ್ ಮಾನವಾ ನಿವಸಂತಿ ಹಿ ।**
**ತೇ ಪ್ರಾಪ್ನುವಂತಿ ಸದನಂ ಬ್ರಹ್ಮಣಃ ಪರಮಾತ್ಮನಃ ॥**

**ಕುರುರಾಜ** : ಈ ಕುರು ತೀರ್ಥದ ತಟಾಕದಲ್ಲಿ ಶ್ರದ್ಧೆಯಿಂದ ವಾಸಮಾಡಿದ ಮಾನವರಿಗೆ ಪರಬ್ರಹ್ಮನ ಮಂದಿರದಲ್ಲಿ ಕೈಂಕರ್ಯಕ್ಕೆ ಅವಕಾಶವು ದೊರಕುವಂತಾಗಲಿ.

**೮೯೫. ಅನ್ಯತ್ರ ಕೃತಪಾಪಾ ಯೇ ಪಂಚಪಾತಕ ದೂಷಿತಾಃ ।**
**ಅಸ್ಮಿಂಸ್ತೀರ್ಥೇ ನರಾ ಸ್ನಾತಾ ಮುಕ್ತಾ ಯಾಂತು ಪರಾಂಗತಿಂ ॥**

ಬೇರೆಕಡೆ ಪಂಚ ಮಹಾಪಾತಕದಂಥ ಘೋರ ಪಾಪಗೈದ ಮಹಾಪಾಪಿಗಳು ಈ ಕುರುಕ್ಷೇತ್ರ ತೀರ್ಥದಲ್ಲಿ ಸ್ನಾನ ಮಾಡಿದ ಕೂಡಲೇ ಅವರ ಪಾಪಗಳೆಲ್ಲ ಅಳಿದು ದಿವ್ಯ ಗತಿಯು ಪ್ರಾಪ್ತವಾಗಬೇಕು.

೮೯. ಕುರುಕ್ಷೇತ್ರೇ ಪುಣ್ಯತಮೇ ಕುರುಕ್ಷೇತ್ರಂ ದ್ವಿಜೋತ್ತಮಾಃ ॥
ತಂ ದೃಷ್ಟ್ವಾ ಮುಕ್ತಪಾಪಸ್ತು ಪರಂ ಪದಮವಾಪ್ನುಯಾತ್ ॥

ಈಕುರುಕ್ಷೇತ್ರವೇಪುಣ್ಯಪ್ರದೇಶ. ಅದರಲ್ಲಿಯೂಈಕುರುತೀರ್ಥವುಪುಣ್ಯತಮ. ಇದರ ದರ್ಶನದಿಂದಲೇ ಜನರ ದುರಿತಗಳೆಲ್ಲ ದೂರಾಗಿ ದಿವ್ಯಸ್ಥಾನವು ದೊರಕುವಂತಾಗಲಿ.'' ಕುರುರಾಜನಈಪ್ರಾರ್ಥನೆಯನ್ನು ಮನ್ನಿಸಿದೇವೇಂದ್ರನುತಥಾಸ್ತು ಎಂದುವರವಿತ್ತನು. ಅದುದರಿಂದಈಕುರುಕ್ಷೇತ್ರದಲ್ಲಿ ಸ್ನಾನಮಾಡಿದನರನು ಕಲುಷ ದೂರನಾಗಿಪರಪದವನ್ನು ಐದುವನು. ಅನಂತರ ಅನರಕ ಎಂಬ ಲೋಕ ಖ್ಯಾತವಾದ ತೀರ್ಥಕ್ಕೆ ಹೋಗಬೇಕು. ಅದರ ಮೂಡಣ ನಿಟ್ಟಿನಲ್ಲಿ ಬ್ರಹ್ಮನೂ, ತೆಂಕಣ ಭಾಗದಲ್ಲಿ ಮಹೇಶ್ವರನೂ, ಪಡುವಣ ಪ್ರದೇಶದಲ್ಲಿ ಪಾರ್ವತಿಯೂ, ಬಡಗು ಭಾಗದಲ್ಲಿ ಪದ್ಮನಾಭನೂ ನೆಲೆಸಿರುವನು. ಈ ನಾಲ್ಕರ ನಡುವೆ ಇರುವ ಅನರಕ ತೀರ್ಥವು ಮೂರು ಲೋಕದಲ್ಲಿಯೇ ದುರ್ಲಭ ಎನಿಸಿದೆ. ವೈಶಾಖಮಾಸದಲ್ಲಿ ಅಷ್ಟಮಿಯ ತಿಥಿಯಂದು ಮಂಗಳವಾರ ಬಂದಾಗ ಈ ತೀರ್ಥದಲ್ಲಿ ಸ್ನಾನ ಮಾಡಿದರೆ ಪಾಪಗಳೆಲ್ಲ ತಾವಾಗಿ ಬಿಟ್ಟುಹೋಗುವವು. ಈ ಕ್ಷೇತ್ರದಲ್ಲಿ ಚಿನ್ನವನ್ನು ದಾನ ಕೊಡಬೇಕು. ಆ ಚಿನ್ನದ ಬೆಲೆಯ ಕಾಲು ಭಾಗ ದಲ್ಲಿ ಒಂದು ಕಲಶವನ್ನು ಕೊಂಡು ಅದರಲ್ಲಿ ವಡೆ, ಅನಾರಸ ಮುಂತಾದವುಗಳನ್ನು ತುಂಬಿ ದಾನ ಕೊಡಬೇಕು. ಇದಕ್ಕೂ ಮೊದಲು ರತ್ನಾಭರಣ ಮುಕ್ತಾಭರಣಗಳಿಂದ ದೇವರನ್ನು ಅಲಂಕರಿಸಿ ಪೂಜಿಸಿ ದಾಳಿಂಬ ಫಲವನ್ನು ಸಮರ್ಪಿಸಬೇಕು. ಅನಂತರ ಸರ್ವಪಾಪಪರಿಹಾರಕ್ಕಾಗಿ ಮತ್ತೆ ಎರಡು ಕಲಶಗಳನ್ನು ದಾನ ಮಾಡಬೇಕು. ಈ ರೀತಿಯಾಗಿ ಇಲ್ಲಿ ವಿಧಿಪೂರ್ವಕವಾಗಿ ಸ್ನಾನ ಮಾಡಿದರೆ ಅವನ ಪಾತಕಗಳೆಲ್ಲ ಪ್ರಣಷ್ಟವಾಗಿ ಪರಪದಕ್ಕೆ ಅವನು ಪ್ರಯಾಣ ಮಾಡುತ್ತಾನೆ. ವೈಶಾಖ ಮಾಸವಿಲ್ಲದಿದ್ದರೂ ಮಂಗಳವಾರದಿನ ಷಷ್ಠೀತಿಥಿ ಮೇಲನವಾದಾಗ ಈ ಅನರಕ ತೀರ್ಥದಲ್ಲಿ ಸ್ನಾನಮಾಡುವದರಿಂದ ಮುಕ್ತಿ ಫಲವು ಲಭ್ಯವಾಗುವದು. ಸರ್ವತೀರ್ಥಗಳ ಸ್ನಾನಮಾಡಿದ ಪುಣ್ಯಫಲವು ಲಭಿಸುವದು. ಎಲ್ಲ ದೇವತೆಗಳೂ ಅಪ್ಪಣೆ ನೀಡಿ ಅವನನ್ನು ಉಚ್ಚಪದಕ್ಕೆ ಕಳಿಸಿಕೊಡುವರು. ಇದೇ ಕುರುಕ್ಷೇತ್ರದ ಪರಿಸರದಲ್ಲಿರುವ ಕಾಮ್ಯಕವನವು ಪಾಪವನ್ನು ನಾಶಮಾಡುವದು. ಪುಣ್ಯವನ್ನು ನೀಡುವದು. ಇಲ್ಲಿ ಹೆಜ್ಜೆ ಇರಿಸಿದ ಮಾತ್ರಕ್ಕೆ ಕಲ್ಮಷವೆಲ್ಲ ಕಳೆದುಹೋಗುವದು. ಈ ಬನಕ್ಕೆ ಹೊಂದಿಯೇ ಸೂರ್ಯನು ಪ್ರಕಟವಾಗುತ್ತಾನೆ. ಈ ಬನದ ಬದಿಯಲ್ಲಿ ಉದಯಿಸುವ ಸೂರ್ಯನನ್ನು ಕಂಡರೆ ಮುಕ್ತಿಯ ಮಾರ್ಗವು ಸುಗಮವಾಗುವದು. ರವಿವಾರದಲ್ಲಿ ಹಾಗೂ ರಥಸಪ್ತಮಿಯ ದಿನದಲ್ಲಿ ಇಲ್ಲಿಯ ತೀರ್ಥದಲ್ಲಿ ಸ್ನಾನ ಮಾಡಿದ ಮಾನವನ ಅಂತಃಕರಣವು ಶುದ್ಧವಾಗುವದು. ಅವನ ಮನಸ್ಸಿನಲ್ಲಿ ಬಯಸಿದ್ದೆಲ್ಲವೂ ಪೂರ್ಣವಾಗುವದು.

ವಾಮನ ಮಹಾಪುರಾಣದಲ್ಲಿ ಕುರುವಿನ ಉಗ್ರತಪಸ್ ಎಂಬ ೪೧ನೇ ಅಧ್ಯಾಯವು ಮುಗಿದುದು.

—o—

## ಕುಂಜ ತೀರ್ಥದ ಹಿರಿಮೆ

**ಅಧ್ಯಾಯ - ೪೨**

**೮೯೭. ಕಾಮ್ಯಕಸ್ಯ ತು ಪೂರ್ವೇಣ ಕುಂಜಂ ದೇವೈರ್ನಿಷೇವಿತಂ ।**
**ತಸ್ಯ ತೀರ್ಥಸ್ಯ ಸಂಭೂತಿಂ ವಿಸ್ತರೇಣ ಬ್ರವೀತು ನಃ ॥**

**ಋಷಿ :** ಕಾಮ್ಯಕವನದ ಪೂರ್ವಕ್ಕೆ ದೇವತಾ ಸೇವ್ಯವಾಗಿರುವ ಕುಂಜ ತೀರ್ಥವಿದೆಯಷ್ಟೇ! ಅದರ ಉದ್ಭವದ ಕತೆಯನ್ನು ವಿವರವಾಗಿ ಹೇಳಬೇಕು.

### ಲೋಮಹರ್ಷಣ ಉವಾಚ

**೮೯೮. ಶೃಣ್ವಂತು ಮುನಯಸ್ಸರ್ವೇ ತೀರ್ಥ ಮಾಹಾತ್ಮ್ಯ ಮುತ್ತಮಂ ।**
**ಋಷೀಣಾಂ ಚರಿತಂ ಶ್ರುತ್ವಾ ಮುಕ್ತೋ ಭವತಿ ಕಿಲ್ಬಿಷೈಃ ॥**

ಲೋಮಹರ್ಷಣ : ಮುನಿಗಳೇ ಈ ತೀರ್ಥ ಮಾಹಾತ್ಮ್ಯವನ್ನು ನೀವೆಲ್ಲರೂ ಆಲಿಸಿರಿ. ಮಹಾನುಭಾವರಾದ ಮುನಿಮಹರ್ಷಿಗಳ ದಿವ್ಯ ಚರಿತ್ರವನ್ನು ಕೇಳುವದರಿಂದ ದುರಿತಗಳೆಲ್ಲವೂ ದೂರವಾಗುವವು.

**೮೯೯. ನೈಮಿಷೇಯಾಶ್ಚ ಋಷಯಃ ಕುರುಕ್ಷೇತ್ರಂ ಸಮಾಗತಾಃ ।**
**ಸರಸ್ವತ್ಯಾಂ ಚ ಸ್ನಾನಾರ್ಥಂ ಪ್ರವೇಶಂ ನ ಚ ಲೇಭಿರೇ ॥**

ನೈಮಿಷಕ್ಷೇತ್ರದಲ್ಲಿ ಇರುವ ಋಷಿಗಳು ಸರಸ್ವತಿಯಲ್ಲಿ ಸ್ನಾನ ಮಾಡಬೇಕೆಂದು ಕುರುಕ್ಷೇತ್ರಕ್ಕೆ ಬಂದರು. ಆದರೆ ಅವರಿಗೆ ಅಲ್ಲಿ ಸ್ನಾನಮಾಡಲು ಅವಕಾಶವೇ ದೊರಕಲಿಲ್ಲ.

**೯೦೦. ತತಸ್ತು ಕಲ್ಪಯಾಮಾಸುಸ್ತೀರ್ಥಂ ಯಜ್ಞೋಪವೀತಿನಂ ।**
**ಶೇಷಾಸ್ತು ಮುನಯಸ್ತತ್ರ ನ ಪ್ರವೇಶಂ ಹಿ ಲೇಭಿರೇ ॥**

ಆಗ ಆ ಮುನಿಗಳು ಯಜ್ಞೋಪವೀತಿ ಎಂಬ ಹೊಸ ತೀರ್ಥ ಒಂದನ್ನು ನಿರ್ಮಿಸಿಕೊಂಡರು. ಯಾತ್ರಿಕರ ವಿಪರೀತ ಸಮ್ಮರ್ದದಿಂದ ಸರಸ್ವತೀನದಿಯಲ್ಲಿ ಸ್ನಾನ ಮಾಡಲು ಅವಕಾಶವು ದೊರಕದ ಉಳಿದ ಮುನಿಗಳೆಲ್ಲರೂ ಇದೇ ಹೊಸ ತೀರ್ಥದಲ್ಲಿ ಸ್ನಾನಮಾಡಿದರು.

**೯೦೧. ರಂತುಕಸ್ಯಾಶ್ರಮಾದ್ಯಾವತ್ತಾವತ್ತೀರ್ಥಂ ಚ ಚಕ್ರಕಂ ।**
**ಬ್ರಾಹ್ಮಣೈಃ ಪರಿಪೂರ್ಣಂ ತು ದೃಷ್ಟ್ವಾ ದೇವೀ ಸರಸ್ವತೀ ॥**

ರಂತುಕ ಮುನಿಯು ಆಶ್ರಮದಿಂದ ಚಕ್ರತೀರ್ಥದವರೆಗೆ ಇರುವ ತೀರ್ಥಕ್ಷೇತ್ರ ಪ್ರದೇಶವೆಲ್ಲವೂ ಬ್ರಾಹ್ಮಣರಿಂದ ಕಿಕ್ಕಿರಿದು ತುಂಬಿತ್ತು. ಹೊಸ ಯಾತ್ರಿಕರಿಗೆ ಅಲ್ಲಿ ಅವಕಾಶವೇ ಇರಲಿಲ್ಲ.

**೯೦೨. ಹಿತಾರ್ಥಂ ಸರ್ವವಿಪ್ರಾಣಾಂ ಕೃತ್ವಾ ಕುಂಡಾನಿ ಸಾ ನದೀ ।**
**ಪ್ರಯಾತಾ ಪಶ್ಚಿಮಂ ಮಾರ್ಗಂ ಸರ್ವಭೂತಹಿತೇ ಸ್ಥಿತಾ ॥**

ಇದನ್ನು ನೋಡಿ ಸರಸ್ವತೀ ದೇವಿಯು ಎಲ್ಲ ಬ್ರಾಹ್ಮಣರ ಕಲ್ಯಾಣಕ್ಕಾಗಿ ಅಲ್ಲಲ್ಲಿ ಬೇರೆ ಬೇರೆ ತೀರ್ಥಗಳನ್ನು ನಿರ್ಮಿಸುತ್ತ ಪಶ್ಚಿಮಾಭಿಮುಖವಾಗಿ ಹರಿದು ಹೋದಳು. ಈ ಸರಸ್ವತಿಯ ಪೂರ್ವದಿಶೆಯ ಪ್ರವಾಹದಲ್ಲಿ ಅವಗಾಹನಸ್ನಾನಮಾಡಿದವರಿಗೆ

ಗಂಗಾಸ್ನಾನ ಫಲವುಂಟು. ಇದರ ದಕ್ಷಿಣ ದಿಕ್ಕಿನ ಪ್ರವಾಹದಲ್ಲಿ ನರ್ಮದಾ ನದಿಯ ಸನ್ನಿಧಾನವಿದೆ. ಪಶ್ಚಿಮದಿಕ್ಕಿನಸೆಳವಿನಲ್ಲಿ ಯಮುನೆಯು ಆಶ್ರಯಪಡೆದಿದ್ದಾಳೆ. ಉತ್ತರಕ್ಕೆ ಇದೇನದಿಯುಹರಿದುಈಸರಸ್ವತಿಯೇಸಿಂಧುನದಿಯಾಗುತ್ತದೆ. ಹೀಗೆನಾಕುನಿಟ್ಟಿನತನ್ನ ಪುಣ್ಯಪ್ರವಾಹಗಳಿಂದನಾಲ್ಕುಮಹಾನದಿಗಳರೂಪತಾಳಿದಈಸರಸ್ವತಿಯುಅತ್ಯಂತಪುಣ್ಯ ಪಯಸ್ವಿನಿಯಾಗಿರುತ್ತದೆ. ಇದರಲ್ಲಿ ಸ್ನಾನಮಾಡಿದರೆಸರ್ವತೀರ್ಥಗಳಲ್ಲಿಯೂಸ್ನಾನ ಮಾಡಿದಪುಣ್ಯವುಬರುವದು. ಬ್ರಾಹ್ಮಣರೇ, ಅನಂತರಲೋಕಪ್ರಸಿದ್ಧವಾದವಿಹಾರಎಂಬ ಕಾಮನತೀರ್ಥಕ್ಕೆಬರಬೇಕು. ಹಿಂದೆದೇವತೆಗಳುಎಲ್ಲರೂಕೂಡಿಮಹಾದೇವರದರ್ಶನಕ್ಕೆ ಕೈಲಾಸಪರ್ವತಕ್ಕೆಹೋದರು. ಅಲ್ಲಿ ಶಿವನೂಇಲ್ಲ. ಸತಿಯೂಇಲ್ಲ.

೯೦೩. ತೇऽಸ್ತುವಂತ ಮಹಾದೇವಂ ನಂದಿನಂ ಗಣನಾಯಕಂ ।
ತತಃ ಪ್ರಸನ್ನೋ ನಂದೀಶಃ ಕಥಯಾಮಾಸ ಚೇಷ್ಟಿತಂ ॥

ಆಗ ಆ ಸುರರು ಗಣಾಧೀನಾಥನಾದ ನಂದೀಶ್ವರನನ್ನು ಸ್ತೋತ್ರ ಮಾಡಿದರು. ಪ್ರಸನ್ನನಾದ ನಂದಿಯು ''ವಿಹಾರತೀರ್ಥದಲ್ಲಿ ವಿಹಾರಮಾಡಲು ಪರಮೇಶ್ವರನು ಪಾರ್ವತಿಯೊಂದಿಗೆ ತೆರಳಿದ್ದಾನೆ'' ಎಂದು ಹೇಳಿದನು.

೯೦೪. ಭವಸ್ಯ ಉಮಯಾ ಸರ್ವವಿಹಾರೇ ಕ್ರೀಡಿತಂ ಮಹತ್ ।
ತಚ್ಛ್ರುತ್ವಾ ದೇವತಾಸ್ಸರ್ವಾಃ ಪತ್ನೀಮಾಹೂಯ ತೇ ಗತಾಃ ॥

ಆಗ ದೇವತೆಗಳು ತಮ್ಮ ತಮ್ಮ ಪ್ರೇಯಸಿಯರನ್ನು ಕರೆದು ಅವರೊಡನೆ ಕಾಮನ ಈ ವಿಹಾರ ತೀರ್ಥಕ್ಕೆ ಬಂದರು.

೯೦೫. ತೇಷಾಂ ಕ್ರೀಡಾವಿನೋದೇನ ತುಷ್ಟಃ ಪ್ರೋವಾಚ ಶಂಕರಃ ।
ಯೋऽಸ್ಮಿಂಸ್ತೀರ್ಥೇ ನರಃ ಸ್ನಾತಿ ವಿಹಾರೇ ಶ್ರದ್ಧಯಾನ್ವಿತಃ ॥
ಧನಧಾನ್ಯ ಪ್ರಿಯೈರ್ಯುಕ್ತಃ ಜಾಯತೇ ನಾತ್ರಸಂಶಯಃ ॥

ತಮ್ಮ ಪ್ರಿಯತಮೆಯೊಂದಿಗೆ ಈ ತೀರ್ಥದಲ್ಲಿ ಎಲ್ಲ ದೇವದಂಪತಿಗಳೂ ಜಲ ವಿಹಾರ ವಿಲಾಸ ಮಾಡಿದರು. ಅದನ್ನು ಕಂಡು ಶಂಕರನಿಗೆ ಸಂತೋಷವಾಯಿತು. ಅವನು ದೇವತೆಗಳನ್ನು ಕುರಿತು - ''ಈ ಮದನನ ವಿಹಾರ ತೀರ್ಥದಲ್ಲಿ ಶ್ರದ್ಧೆಯಿಂದ ಸ್ನಾನ ಮಾಡಿದರೆ ಧನ ಧಾನ್ಯ ಮುಂತಾದ ಎಲ್ಲ ವಿಧವಾದ ಇಷ್ಟೈಶ್ವರ್ಯವು ಪ್ರಾಪ್ತವಾಗುವದು'' ಎಂದು ಹೇಳಿದನು. ಅನಂತರ ದುರ್ಗಾದೇವಿಯಿಂದಲೇ ಸೇವಿಸಲ್ಪಟ್ಟ ಅಲ್ಲಿ ಸ್ನಾನ ಮಾಡಿ ಪಿತೃಗಳನ್ನು ಪೂಜಿಸಿದವರಿಗೆ ಎಂದಿಗೂ ದುರ್ಗತಿ ಆಗುವದಿಲ್ಲ. ಅಲ್ಲಿಯೇ ಸರಸ್ವತೀ ಕೂಲ ಎಂಬ ಹೆಸರಾದ ತೀರ್ಥವಿದೆ. ಅದರ ದರ್ಶನದಿಂದಲೇ ಪಾಪಹಾನಿ. ಅಲ್ಲಿ ಪಿತೃತರ್ಪಣದಿಂದ ಅಕ್ಷಯ ಫಲ. ಅಲ್ಲಿ ಮಾಡುವ ಪಿತೃಕಾರ್ಯವೆಲ್ಲ ವೈಶಿಷ್ಟ್ಯಪೂರ್ಣ. ತಾಯಿಯನ್ನು ಘಾತಿಸಿದವನೂ, ತಂದೆಯನ್ನು ಕೊಂದವನೂ, ಬ್ರಾಹ್ಮಣರನ್ನು ಹಿಂಸಿಸಿದವನೂ, ಗುರುಗಳ ಹಾಸಿಗೆಯ ಮೇಲೆ ಸರಸಕ್ಕೆ ಇಳಿದವನೂ, ಈ ತೀರ್ಥದಲ್ಲಿ ಸ್ನಾನ ಮಾಡು ವದರಿಂದ ಶುದ್ಧರಾಗಿ ಸಿದ್ಧಿ ಪಡೆಯುವರು. ಪೂರ್ವ ಭಾಗದಲ್ಲಿ ಹರಿಯುವ ಸರಸ್ವತೀ ನದಿಯ ಪ್ರವಾಹವು ಅತ್ಯಂತ ಪುಣ್ಯಕರವಾಗಿದೆ.

ಮಹಾಪಾಪ ಮಾಡಿದವರಿಗೂ ಉದ್ಧಾರ ಉಂಟು ಇಲ್ಲಿ ಸ್ನಾನದಿಂದ. ಈ ಸರಸ್ವತೀ ತಟಾಕಕ್ಕೆ ಬಂದು ಮೂರು ರಾತ್ರಿ ವಾಸ ಮಾಡಿ, ಮೂರು ಹಗಲು ಸ್ನಾನ ಮಾಡಿದವರ ದೇಹದಲ್ಲಿ ದುರಿತ ಎಂಬುದೇ ಉಳಿಯುವದಿಲ್ಲ. ಪೂರ್ವವಾಹಿನಿಯಾದ ಈ ಸರಸ್ವತೀ ನದಿಯನ್ನು ನರನಾರಾಯಣರೂ ಸೇವಿಸಿದ್ದಾರೆ. ಬ್ರಹ್ಮದೇವರೂ ಆಶ್ರಯಿಸಿದ್ದಾರೆ. ಮಹಾದೇವರೂ ಹಾಗೂ ಉಳಿದ ಇಂದ್ರಾದಿ ದೇವತೆಗಳೂ ಸರಸ್ವತಿಯು ಈ ಪೂರ್ವಾಭಿಮುಖ ಪ್ರವಾಹವನ್ನು ಸೇವಿಸಿದ್ದಾರೆ. ಸರಸ್ವತಿಯು ಈ ಪೂರ್ವವಾಹಿನಿಯ ತಟಾಕದಲ್ಲಿ ಶ್ರಾದ್ಧ ಮಾಡಿದವರಿಗೆ ಈ ಲೋಕದಲ್ಲಿ ದೊರಕದ ವಸ್ತುವೇ ಇಲ್ಲ. ಪರಲೋಕದಲ್ಲಿ ದುರ್ಲಭವಾದದ್ದೇ ಇಲ್ಲ. ಆದುದರಿಂದ ಈ ಪೂರ್ವ ಸರಸ್ವತಿಯನ್ನೂ ಸರ್ವದಾ ಸೇವಿಸಬೇಕು. ಪಂಚಮೀತಿಥಿಯಂದು ಇಲ್ಲಿ ಸ್ನಾನ ಮಾಡಿ ದೇವರ ಆರಾಧನೆ ಮಾಡಿದರೆ ಐಶ್ವರ್ಯವು ಪ್ರಾಪ್ತವಾಗುವದು.

ಶುಕ್ರಾಚಾರ್ಯರು ಶಿವನನ್ನು ಆರಾಧಿಸಿ ಸಿದ್ಧಿ ಪಡೆದ ಔಶನಸ ತೀರ್ಥದಲ್ಲಿ ಸ್ನಾನ ಮಾಡಿದವರಿಗೆ ದಿವ್ಯಗತಿ ದೊರಕುವದು. ಶುಕ್ರಾಚಾರ್ಯರಿಗೆ ಗ್ರಹಮಂಡಲದಲ್ಲಿ ಸ್ಥಾನ ದೊರೆತದ್ದು ಈ ತೀರ್ಥದ ಮಹಿಮೆಯಿಂದಲೇ. ಇಲ್ಲಿ ಶ್ರದ್ಧೆಯಿಂದ ಶ್ರಾದ್ಧ ಮಾಡಿದರೆ ಪಿತೃಗಳೆಲ್ಲರೂ ಉದ್ಧೃತರಾಗುವರು. ಕುರುಕ್ಷೇತ್ರದ ಗಡಿ ಸೀಮೆಯಲ್ಲಿ ಚತುರ್ಮುಖನ ಬ್ರಹ್ಮತೀರ್ಥವಿದೆ. ಅಲ್ಲಿ ಚೈತ್ರ ಮಾಸದ ಕೃಷ್ಣಪಕ್ಷದ ಅಷ್ಟಮಿ ತಿಥಿಯಲ್ಲಿ ಸ್ನಾನ ಮಾಡಿದರೆ ಮತ್ತು ಚತುರ್ದಶಿಯ ದಿನ ಉಪವಾಸ ಮಾಡಿ ಅಲ್ಲಿಯೇ ವಾಸ ಮಾಡಿದರೆ ಎಂದೂ ತಿರುಗಿ ಬರಲಾರದ ಶಾಶ್ವತ ಗತಿಯನ್ನು ಹೊಂದುವರು. ಅದರನಂತರ ಸಾವಿರಲಿಂಗಗಳಿಂದ ಶೋಭಿಸುವ ಸ್ಥಾಣುತೀರ್ಥಕ್ಕೆ ಹೋಗಬೇಕು. ಅಲ್ಲಿರುವ ಸ್ಥಾಣುವಟದ ದರ್ಶನದಿಂದ ಸರ್ವಪಾಪಗಳ ಪರಿಹಾರವು ಆಗುತ್ತದೆ.

ವಾಮನ ಮಹಾಪುರಾಣದಲ್ಲಿ ಕುಂಜ ತೀರ್ಥದ ಹಿರಿಮೆ ಎಂಬ
ನಲವತ್ತೆರಡನೇಯ ಅಧ್ಯಾಯವು ಮುಗಿದುದು.

—o—

## ಸ್ಥಾಣುತೀರ್ಥದ ಗರಿಮೆ

ಅಧ್ಯಾಯ - ೪೩

ಮುನಿಪುಂಗವನೇ, ಸ್ಥಾಣು ತೀರ್ಥದ ಮಹಿಮೆಯನ್ನು, ಸ್ಥಾಣು ವಟದ ಪ್ರಭಾವವನ್ನೂ ಮತ್ತೂ ಸನ್ನಿಹತಿ ಎಂಬ ಕ್ಷೇತ್ರದ ಉತ್ಪತ್ತಿಯನ್ನು ಧೂಳಿ ಪೂರಣದ ಸಂದರ್ಭವನ್ನೂ, ಲಿಂಗಗಳ ದರ್ಶನದಿಂದ ಬರುವ ಪುಣ್ಯವನ್ನೂ, ಸ್ಪರ್ಶನದಿಂದ ಆಗುವ ಫಲವನ್ನೂ ನಮಗೆ ತಿಳಿಸಬೇಕು ಮತ್ತೂ ಸರೋವರದ ಮಾಹಾತ್ಮ್ಯವನ್ನೂ ಪೂರ್ತಿಯಾಗಿ ನಮಗೆ ಹೇಳಿರಿ.

**ಲೋಮಹರ್ಷಣ:** ಭೂದೇವತೆಗಳಾದ ಬ್ರಾಹ್ಮಣರೇ, ನೀವೆಲ್ಲರೂ ಮಹತ್ತರವಾದ ವಾಮನ ಪುರಾಣವನ್ನು ಶ್ರವಣ ಮಾಡಿರಿ. ಇದರಿಂದ ವಾಮನದೇವರ ಪ್ರಸಾದವಾಗಿ ಮುಕ್ತಿ ದೊರಕುವದು. ಸ್ಥಾಣು ತೀರ್ಥದ ಸಮೀಪದಲ್ಲಿ ಸ್ಥಾಣು ವಟದಲ್ಲಿ ಹಿಂದೆ ಒಂದು ದಿನ ಸನತ್ಕುಮಾರರು ಕುಳಿತುಕೊಂಡಿದ್ದರು. ಬ್ರಹ್ಮದೇವರ ಮಕ್ಕಳಾದ ವಾಲಖಿಲ್ಯರೇ ಮೊದಲಾದ ಮಹಾತ್ಮರಾದ ಮಹರ್ಷಿಗಳೂ ಅಲ್ಲಿ ಆಸೀನರಾಗಿದ್ದರು. ಅಲ್ಲಿಗೆ ಮಾರ್ಕಂಡೇಯ ಋಷಿಗಳು ಬಂದರು. ವಿನಯದಿಂದ ವಂದಿಸಿ ಸರೋವರದ ಮಹಾತ್ಮ್ಯವನ್ನೂ ಅದರ ಆಳ ಅಗಲದ ಪ್ರಮಾಣವನ್ನೂ ಹೇಳಬೇಕು ಎಂದು ಬಿನ್ನವಿಸಿಕೊಂಡರು.

ಮಾರ್ಕಂಡೇಯ : ಎಲ್ಲ ಶಾಸ್ತ್ರಗಳಲ್ಲಿ ವಿಶಾರದರಾದ ಬ್ರಹ್ಮಪುತ್ರ ಸನತ್ಕುಮಾರರೇ, ಪಾಪಗಳ ಭೀತಿ ಕಳೆಯುವ ಆ ಸರೋವರದ ಮಾಹಾತ್ಮ್ಯವನ್ನು ನನಗೆ ಹೇಳಿರಿ. ಅಲ್ಲಿ ಕಾಣುವ ತೀರ್ಥಗಳು ಯಾವುವು? ಗುಪ್ತ ತೀರ್ಥಗಳು ಎಷ್ಟು? ಮತ್ತು ದರ್ಶನ ಮಾತ್ರದಿಂದ ಮುಕ್ತಿಗೆ ಕಾರಣವಾಗುವ ಶಿವಲಿಂಗಗಳು ಅಲ್ಲಿಯೇ ಸಮೀಪದಲ್ಲಿ ಎಷ್ಟು ಇರುತ್ತವೆ? ಸ್ಥಾಣುವಟದ ದರ್ಶನದಿಂದ ಬರುವ ಪುಣ್ಯವೇನು? ಅದರ ಉತ್ಪತ್ತಿ ಹೇಗಾಯಿತು? ಅದರ ಪ್ರದಕ್ಷಿಣ ನಮಸ್ಕಾರಗಳಿಂದ ಏನು ಪುಣ್ಯ? ತೀರ್ಥಸ್ನಾನದಿಂದ ಏನು ಫಲ? ದೇವತೆಗಳ ದೃಷ್ಟಿಮಾತ್ರ ಗೋಚರವಾಗುವ ರಹಸ್ಯಲಿಂಗಗಳ ದರ್ಶನದಿಂದ ಎಂಥ ಪುಣ್ಯ! ಇದನ್ನೆಲ್ಲ ನಮಗೆ ಹೇಳಬೇಕು. ಮಹಾದೇವರು ಆ ಸರೋವರದಲ್ಲಿ ಹೇಗೆ ನಿಂತರು? ಇಂದ್ರನು ಆ ತೀರ್ಥವನ್ನು ಧೂಳಿನಿಂದ ತುಂಬಿದ್ದೇಕೆ ? ಎಂಬುದನ್ನು ತಿಳಿಸಿರಿ. ಸ್ಥಾಣುತೀರ್ಥ, ಚಕ್ರತೀರ್ಥ, ಸೂರ್ಯತೀರ್ಥ ಸೋಮತೀರ್ಥಗಳ ಮಾಹಾತ್ಮ್ಯವನ್ನೂ, ಅಲ್ಲಿ ಸ್ನಾನ ಮಾಡುವದರಿಂದ ಬರುವ ಫಲವನ್ನೂ ನಮಗೆ ತಿಳಿಸಿರಿ. ಸರಸ್ವತೀ ತಟಾಕದಲ್ಲಿಯ ಶಂಕರನ ಗುಪ್ತ ಸ್ಥಾನಗಳು ಯಾವವು ? ವಿಷ್ಣುವಿನ ರಹಸ್ಯ ಸ್ಥಾಣುಗಳು ಯಾವುವು? ಇದನ್ನೆಲ್ಲ ವಿವರವಾಗಿ ತಿಳಿಸಿ. ದೇಹವನ್ನು ಧರಿಸಿದ ಮಾನವರಲ್ಲಿ ನಿಜವಾದ ಭಗವಂತನ ಮಾಹಾತ್ಮ್ಯವನ್ನು ಬ್ರಹ್ಮದೇವರ ಅನುಗ್ರಹದಿಂದ ಯಥಾರ್ಥವಾಗಿ ತಿಳಿದವನು ನೀನೊಬ್ಬನೇ ಇರುವಿ.

**ಲೋಮಹರ್ಷಣ :** ನಿರಂತರ ಬ್ರಹ್ಮಜ್ಞಾನ ಧ್ಯಾನಗಳಿಂದ ಬ್ರಹ್ಮಮಯನೇ ಆದ ಆ ಸನತ್ಕುಮಾರನು ಮಾರ್ಕಂಡೇಯನ ಪ್ರಶ್ನೆಯನ್ನು ಕೇಳಿ ಭಕ್ತಿಯಿಂದ ತನ್ನ ಮನಸ್ಸನ್ನು ತೀರ್ಥ ಕ್ಷೇತ್ರಗಳಲ್ಲಿಯೇ ಕೇಂದ್ರೀಕರಿಸಿದನು. ಮಹಾದೇವನನ್ನು ಮನದಲ್ಲಿಯೇ ನಮಿಸಿದನು. ಕುಳಿತ ಆಸನದ ಕಟ್ಟನ್ನು ಸಡಲಿಸಿದನು. ಹಿಂದೆ ತಾನು ಬ್ರಹ್ಮನಿಂದ ಕೇಳಿ ತಿಳಿದುಕೊಂಡ ವಿಷಯವನ್ನೆಲ್ಲ ಹೇಳಲು ಮೊದಲು ಮಾಡಿದನು.

**ಸನತ್ಕುಮಾರ :** ನಿಮ್ಮ ಪ್ರಶ್ನೆಗಳಿಗೆಲ್ಲ ಉತ್ತರವನ್ನು ಜಗದೊಡೆಯನಾದ, ಕಲ್ಯಾಣವನ್ನುಂಟು ಮಾಡುವ, ವರವನ್ನು ನೀಡುವ ಮಹಾದೇವರು ಹೇಳಿದ ಕ್ರಮದಿಂದ ಹೇಳುತ್ತೇನೆ. ಕೇಳಿರಿ. ಹಿಂದೆ ಪ್ರಳಯ ಕಾಲದಲ್ಲಿ ಸ್ಥಾವರ ಜಂಗಮಾತ್ಮಕವಾದ ಪ್ರಪಂಚವೆಲ್ಲವೂ ನಷ್ಟವಾಗಿದ್ದಿತು. ನೋಡಿದಲ್ಲೆಲ್ಲ ನೀರೇ ನೀರು. ಎಲ್ಲೆಡೆಯೂ ಘೋರ ಶೂನ್ಯತೆ. ವಿಶ್ವವೆಲ್ಲವೂ ಬರಿದೋ ಬರಿದು. ತೆರವೋ ತೆರವು. ಆ ಏಕಾರ್ಣವ ಜಲರಾಶಿಯಲ್ಲಿ ಪ್ರಜಾಕೋಟಿಯ ಉತ್ಪತ್ತಿಗೆ ಕಾರಣವಾದ ಬೃಹದಾಕಾರದ ಮೊಟ್ಟೆಯೊಂದು ಮೊದಲು ಉದಿಸಿತು. ಆ ಅಂಡದಲ್ಲಿ ಮೊದಲು ಇದ್ದವನು ಚತುರ್ಮುಖಬ್ರಹ್ಮ. ಅವನು ಸಾವಿರ ವರ್ಷ ನಿದ್ದೆ ಮಾಡಿ ಎದ್ದು ಕುಳಿತನು. ಅವನಲ್ಲಿ ಸತ್ವಗುಣದ ಉದ್ರೇಕವಾಯಿತು. ಎಲ್ಲೆಡೆಗೆ ತುಂಬಿದ ಶೂನ್ಯತೆಯನ್ನು ನೋಡಿ ಸೃಷ್ಟಿ ಮಾಡಬೇಕೆಂದು ವಿಚಾರ ಬಂದಿತು. ರಜೋಗುಣದ ಕಾರ್ಯವು ಪ್ರಾರಂಭವಾಯಿತು.

ಸೃಷ್ಟಿಕಾರ್ಯಕ್ಕೆ ಕಾರಣವಾದ ಗುಣವೆಂದರೆ ರಜೋಗುಣ. ಸತ್ವಗುಣದಿಂದ ಸ್ಥಿತಿ ಅಥವಾ ಪಾಲನ. ಉಪಸಂಹಾರ ಕಾಲದಲ್ಲಿ ತಮೋಗುಣವೇ ಪ್ರವೃತ್ತವಾಗುತ್ತದೆ. ಈ ಎಲ್ಲ ಗುಣಗಳಿಂದ ಅತೀತನಾಗಿ ಸರ್ವತ್ರ ವ್ಯಾಪ್ತನಾದ ಪುರುಷೋತ್ತಮನೇ ಆ ಪರಮಾತ್ಮ. ಅವನು ಜೀವ ಎಂಬ ಹೆಸರುಳ್ಳ ಚೇತನ ರಾಶಿಗಳಲ್ಲಿ ಅಂತರ್ಗತನಾಗಿ ನಿಂತುಕೊಂಡು ಎಲ್ಲವನ್ನು ಮಾಡಿಸುತ್ತಾನೆ. ಅವನನ್ನು ಪರಬ್ರಹ್ಮವೆಂದೂ ಗೋವಿಂದ ನೆಂದೂ ಕರೆಯುತ್ತಾರೆ. ಈ ಪ್ರಪಂಚಕ್ಕೆ ಅವನೇ ಶಾಸಕ ನಿಯಾಮಕನು ಆಗಿದ್ದಾನೆ. ಅವನೇ ಸತ್ಯ ಸನಾತನನು. ಆ ಮಹಾಪುರುಷನನ್ನು ತಿಳಿದರೆ ಎಲ್ಲವನ್ನೂ ತಿಳಿದಂತೆ. ಅವನು ಗುಣತ್ರಯಾತೀತನಾಗಿದ್ದಾನೆ.

ಅನಾದಿ ಜೀವನವೇ ಒಂದು ನದಿಯಿದ್ದಂತೆ. ಇಂದ್ರಿಯ ಜಯವೇ ಪುಣ್ಯ ತೀರ್ಥ. ಸತ್ಯವೇ ಅದರ ನೀರು. ಶೀಲಶಮದಮಗಳೇ ಅಲ್ಲಿಯ ತೆರೆಗಳು. ಇಂಥ ಪವಿತ್ರ ನದಿಯಲ್ಲಿ ಸ್ನಾನ ಮಾಡಿದವನೇ ಪುಣ್ಯವಂತ. ಬರೀ ನೀರಿನಲ್ಲಿ ಮುಳುಗಿ ಹಾಕಿದರೆ ದೇಹವು ಶುದ್ಧವಾಗುವದಿಲ್ಲ. ಶಮ ಶೀಲ ಸತ್ಯ ಸಂಯಮ ಸತ್ಕರ್ಮಗಳಿಂದಲೆ ನಿಜವಾದ ಶರೀರ ಶುದ್ಧಿ ಮತ್ತು ಆತ್ಮ ಶುದ್ಧಿ. ಇದೇ ನಿಜವಾದ ತೀರ್ಥಸ್ನಾನ.

ಆತ್ಮ ಜ್ಞಾನದಿಂದ ಆಗುವ ಪರಮ ಸುಖಕ್ಕೆ ತಂದು ಮುಟ್ಟಿಸುವ ಕರ್ಮವೇ ಮಾನವರು ಮಾಡುವ ಕರ್ಮಗಳಲ್ಲಿ ಮುಖ್ಯವಾಗಿರುತ್ತದೆ. ಈ ಪ್ರಪಂಚದಲ್ಲಿ ನಿಜವಾದ ಜ್ಞೇಯ ವಸ್ತು ಎಂದರೆ ಆ ಭಗವತ್ತತ್ವವೇ ಸರಿ. ಆ ಪರ ತತ್ವವನ್ನು ಹೊಂದಿದ ಬಳಿಕ ಮನುಷ್ಯನು ಕ್ಷುದ್ರ ಕಾಮನೆಗಳನ್ನೆಲ್ಲ ಬಿಟ್ಟುಬಿಡುತ್ತಾನೆ. ಆ ಜಗತ್ ಕಾರಣವಾದ ಪರಬ್ರಹ್ಮವು ಮುಖ್ಯವೂ, ಅದ್ವಿತೀಯವೂ ಆಗಿದೆ ಎಂದು ತಿಳಿದು ಸತ್ಯ ನಿಷ್ಠವಾಗಿ ಅಸತ್ಪಕ್ಷಪಾತವಿಲ್ಲದೇ ನಿರ್ದೋಷನಾದ ಭಗವಂತನನ್ನು ಆರಾಧಿಸುವದೇ ಬ್ರಾಹ್ಮಣರ ದೊಡ್ಡ ಧನವಾಗಿದೆ. ಎಲ್ಲ ಪ್ರಾಣಿಗಳ ದೇಹದಲ್ಲಿ ಅಂತರ್ನಿಯಾಮಕನಾಗಿ ಇರುವದರಿಂದ ಪುರುಷ ಶಬ್ದ ವಾಚ್ಯನೂ ಅವನೇ. ಅವನಿಂದ ನಿಯಮ್ಯನಾದವನು ಜೀವಾತ್ಮ. ಆ ನಿಯಾಮಕ ಚೇತನವೇ ಪರಮಾತ್ಮ, ಅವನೇ ಸನಾತನ. ಆ ಮಹಾತ್ಮನನ್ನು ತಿಳಿದವರು ಈ ಸಂಸಾರ ಬಂಧನದಿಂದ ಮೋಕ್ಷ ಮಾರ್ಗವನ್ನು ತಿಳಿದುಕೊಳ್ಳುತ್ತಾರೆ.

ಯಾರು ಅನಾದಿ ಅನಂತನಾದ ಆ ಭಗವಂತನಲ್ಲೇ ತಮ್ಮ ಮನಸ್ಸನ್ನು ಇಟ್ಟು ನಿರಂತರ ಧ್ಯಾನ ಮಾಡುವವರೋ ಅವರಿಗೆ ಯಾವ ತೀರ್ಥಸ್ನಾನದಿಂದ ಏನಾಗ ಬೇಕಾಗಿದೆ! ಯಾವ ವರ್ಣಾಶ್ರಮ ಧರ್ಮಗಳಿಂದ ಏನು ಪ್ರಯೋಜನವಾಗಬೇಕಾಗಿದೆ! (ಜ್ಞಾನ ಭಕ್ತಿಪೂರ್ವಕವಾದ ದೇವರ ಧ್ಯಾನದಿಂದ ಅವರಿಗೆ ಎಲ್ಲ ತೀರ್ಥಯಾತ್ರೆಗಳ ಫಲವೂ ಎಲ್ಲ ಧರ್ಮ ಕರ್ಮಾನುಷ್ಠಾನಗಳಿಂದ ಬರುವ ಪುಣ್ಯದ ಫಲವೂ ತಾನಾಗಿಯೇ ಪ್ರಾಪ್ತವಾಗುವದು ಎಂದು ತಾತ್ಪರ್ಯ.)

ಒಳ್ಳೇ ಶೀಲ, ಧರ್ಮದಲ್ಲಿ ಸ್ಥಿರವಾದ ಬುದ್ಧಿ, ದೇಹದಂಡನೆ, ಋಜುಸ್ವಭಾವ ಮುಂತಾದವುಗಳು ಬ್ರಾಹ್ಮಣನ ಭಾಗ್ಯ ಎನಿಸುತ್ತವೆ. ನಿಜವಾದ ಬ್ರಾಹ್ಮಣನು ಕಾಮ್ಯ ಕರ್ಮಗಳಿಂದ ಕ್ರಮವಾಗಿ ಉಪರಮಿಸಿ ಕೊನೆಗೆ ನಿಷ್ಕಾಮ ಬುದ್ಧಿಯಿಂದ ಸರ್ವಕರ್ಮ ಗಳನ್ನು ಆ ಭಗವಂತನಲ್ಲಿಯೇ ಸಮರ್ಪಿಸಬೇಕು. ಪರಬ್ರಹ್ಮ ವಿಷಯದಲ್ಲಿ ನಾನು ನಿನಗೆ ಹೇಳಿದ್ದೆಲ್ಲವೂ ಸಂಕ್ಷಿಪ್ತವಾಗಿದೆ. ಈ ಪೂರ್ಣ ಬ್ರಹ್ಮವನ್ನು ನೀನು ಯಥಾಶಕ್ತಿ ತಿಳಿದುಕೊಂಡರೆ ಆ ಪರಬ್ರಹ್ಮ ಪ್ರಾಪ್ತಿಯೇ ಆಗುತ್ತದೆ.

ಈಗ ಪರಮಾತ್ಮ ಸ್ವರೂಪಿಯಾದ ಆ ಬ್ರಹ್ಮನಿಂದ ಈ ವಿಶ್ವದ ಸೃಷ್ಟಿ ಹೇಗಾಯಿತೆಂಬುದನ್ನು ಹೇಳುತ್ತೇನೆ ಕೇಳು - ಈ ವಿಷಯದಲ್ಲಿ ಹಿರಿಯರು ಈ ಕೆಳಗಿನ ಪದ್ಯವನ್ನು ಉದಾಹರಿಸುತ್ತಾರೆ.

**೯೦೬. ಆಪೋ ನಾರಾ ಇತಿ ಪ್ರೋಕ್ತಾ ಆಪೋ ವೈನರಸೂನವಃ ।**
**ತಾಸು ಶೇತೇ ಸ ಯಸ್ಮಾಚ್ಚ ತೇನ ನಾರಾಯಣಃ ಸ್ಮೃತಃ ॥**

ನೀರುಗಳಿಗೆ ''ನಾರಾ'' ಎಂದು ಹೆಸರಿದೆ. ಆ ನೀರಿನಲ್ಲಿ ಪ್ರಲಯ ಜಲಧಿಯಲ್ಲಿ ಶಯನ ಮಾಡಿದ್ದರಿಂದ ನಾರಾಯಣ ಎಂದು ಆ ಪರಮಾತ್ಮನಿಗೆ ಹೆಸರು. ಮತ್ತು ಅರ ಎಂದರೆ ದೋಷಗಳು ನ+ಅರ=ನಾರ ಎಂದರೆ ಸದ್ಗುಣಗಳು. ಅವುಗಳಿಗೆ ಅಯನ=ಆಶ್ರಯ. ಅರ್ಥಾತ್ ಗುಣ ಪರಿಪೂರ್ಣ ಎಂದು ನಾರಾಯಣ ಶಬ್ದಕ್ಕೆ ಅರ್ಥವಿರುತ್ತದೆ. ಆ ನಾರಾಯಣನ ಸೃಷ್ಟಿ ಸಂಕಲ್ಪದಿಂದ ಆ ಪ್ರಲಯ ಜಲಧಿಯಲ್ಲಿ ಉದಿಸಿದ ಬೃಹದಾಕಾರದ ಅಂಡದಲ್ಲಿಯೇ ಪ್ರಪಂಚವೆಲ್ಲವೂ ಅಡಕವಾಗಿದೆ ಎಂದು ತಿಳಿದು ಬ್ರಹ್ಮದೇವರು 'ಓಂ' ಎಂದು ಗುಣಪೂರ್ಣನಾದ ಶ್ರೀಹರಿಯ ಧ್ಯಾನ ಮಾಡುತ್ತ ಆ ಜಗದಂಡವನ್ನು ಒಡೆದು ಹೊರಬಂದರು.

ಅನಂತರ ಆ ಚತುರ್ಮುಖನು ಭೂಃ ಭುವಃ ಸ್ವಃ ಎಂಬ ಮೂರು ಲೋಕಗಳನ್ನು ನಿರ್ಮಿಸಿದನು. ಜಗಜ್ಜನ್ಮಾದಿ ಕಾರಣನಾದ ಶ್ರೀಹರಿಯ ಒಂದು ತೇಜಃ ಕಿರಣವು ಹೊರ ಬಂದು ಮೂರು ಲೋಕದಲ್ಲಿದ್ದ ಅಪರಂಪಾರ ನೀರಿನ ರಾಶಿಯನ್ನೆಲ್ಲ ಒಣಗಿಸತೊಡಗಿತು. ಶೋಷಿತವಾದ ಜಲವು ಘನೀಭೂತವಾಗುತ್ತ ಕಲಲವಾಯಿತು. ಕಲಲ ಎಂದರೆ ಹೆಪ್ಪುಗಟ್ಟಿದ ಆ ನೀರು ಗುಳ್ಳೆಗುಳ್ಳೆಯಾಗಿ ಮತ್ತೆ ಗಟ್ಟಿಯಾಗುತ್ತ ಬಿರುಸಾದ ನೆಲದ ರೂಪ ತಾಳಿತು. ಭೂಮಿಯಾಗಿ ಮಾರ್ಪಾಡನ್ನು ಹೊಂದಿದ ಬಳಿಕ ಜನರು ಆ ನೆಲದಲ್ಲಿ ನಿಲ್ಲುವಂತಾಯಿತು. ನೆಲೆಸುವಂತಾಯಿತು. ಪ್ರಾಣಿಗಳನ್ನು ಹೊತ್ತು ನಿಂತದ್ದರಿಂದ ಭೂಮಿಗೆ ಧರಣಿ ಎಂದು ಹೆಸರು ಬಂದಿತು ''ಧರತಿ ಇತಿ ಧರಣೀ''.

ಪ್ರಲಯ ಜಲದಲ್ಲಿಯ ಅಪಾರ ನೀರಿನ ರಾಶಿಯನ್ನು ಶೋಷಿಸಲಿಕ್ಕಾಗಿ ಹೊರಹೊಮ್ಮಿದ ಶ್ರೀಹರಿಯ ತೇಜಃ ಕಿರಣವೇ ಆದಿತ್ಯ ಅರ್ಥಾತ್ ಸೂರ್ಯ ಎಂದು ಕರೆಯಲ್ಪಡುತ್ತಾನೆ. ಆ ಜಗದಂಡವನ್ನು ಒಡೆದು ಓಂ ಎಂದು ಹೊರಬಿದ್ದು ಹುಟ್ಟಿ ಬಂದ ಪುರುಷನೇ ಬ್ರಹ್ಮ. ಪ್ರಪಂಚದ ಆದಿ ಅಜ್ಜ. ಬ್ರಹ್ಮಾಂಡದ ಮಧ್ಯಭಾಗದಲ್ಲಿರುವ ಬ್ರಹ್ಮರೂಪ ಶಿಶುವಿಗೆ ಮೇರು ಪರ್ವತವೇ ಗರ್ಭದ ಹೊದಿಕೆಯಾಗಿದೆ. ಪರ್ವತಗಳು ಗರ್ಭಕೋಶದ ಪರಿಗಳು. ಆ ಗರ್ಭದ ಒಳಗಿನ ನೀರೇ ಸಾವಿರಾರು ನದೀ ಸಮುದ್ರಗಳು. ಬ್ರಹ್ಮದೇವರ ಹೊಕ್ಕಳಿನಿಂದ ಹರಿದುಬಂದ ಜಲವೇ ಸಮೀಪದಲ್ಲಿ ಒಂದು ದೊಡ್ಡ ಸರೋವರವಾಗಿ ರೂಪಗೊಂಡಿದೆ. ಆ ಸರೋವರದ ಮಧ್ಯಭಾಗದಲ್ಲಿ ಈ ಸ್ಥಾಣು ರೂಪಿಯಾದ ವಟ ವೃಕ್ಷವು ಉದ್ಭವಿಸಿತು. ಅನಂತರ ಅಲ್ಲಿಂದಲೇ ಬ್ರಾಹ್ಮಣ ಕ್ಷತ್ರಿಯ ವೈಶ್ಯರೂ ಹಾಗೂ ದ್ವಿಜರ ಸೇವೆ ಮಾಡುವ ಶೂದ್ರರೂ ಉತ್ಪನ್ನರಾದರು. ಅನಂತರ ಪರಬ್ರಹ್ಮನ ದಯದಿಂದ ಜನ್ಮತಾಳಿದ ಚತುರ್ಮುಖ ಬ್ರಹ್ಮದೇವರು ಸೃಷ್ಟಿ ಮಾಡಬೇಕೆಂದು ಯೋಚನೆ ಮಾಡತೊಡಗಿದರು. ಆಗಲೇ ಅವರ ಮನಸ್ಸಿನಿಂದ ಶುದ್ಧಾತ್ಮರಾದ ವಾಲಖಿಲ್ಯ ಎಂಬ ಹೆಸರಿನ ಎಂಬತ್ತೆಂಟು ಸಾವಿರ ಮಹರ್ಷಿಗಳು ಉತ್ಪನ್ನರಾದರು. ಇವರೆಲ್ಲರೂ ಆಜನ್ಮ ಬ್ರಹ್ಮಚಾರಿಗಳು, ಮತ್ತೆ ಸೃಷ್ಟಿಗಾಗಿ ಚಿಂತನೆ ಮಾಡುವ ಬ್ರಹ್ಮದೇವರಿಗೆ ಸನಕ, ಸನಂದನ, ಸನತ್ಕುಮಾರ, ಸನಾತನ ಮುಂತಾದ ಬ್ರಹ್ಮರ್ಷಿಗಳು ಮಾನಸ ಪುತ್ರರಾಗಿ ಜನಿಸಿದರು. ಅವರ ಅನಂತರ ಮತ್ತೆ ಸೃಷ್ಟಿ ಮಾಡಬೇಕೆಂದು ಬಯಸಿದ ಬ್ರಹ್ಮದೇವರಿಂದ ಸಪ್ತರ್ಷಿಗಳು ಹುಟ್ಟಿದರು. ಆ ಏಳು ಜನ ಮಹರ್ಷಿಗಳು ಪ್ರಜಾಪತಿ ಎಂದು ಹೆಸರಾದರು.

ರಜೋಗುಣ ಸಂಪರ್ಕದಿಂದ ಸೃಷ್ಟಿ ಕಾರ್ಯದಲ್ಲಿ ಉಜ್ಜುಗಿಸಿದ ಆ ಬ್ರಹ್ಮನಿಂದ ಉತ್ಪನ್ನರಾದ ವಾಲಖಿಲ್ಯರು ತಪಸ್ಸು ಹಾಗೂ ಸ್ವಾಧ್ಯಾಯಗಳಲ್ಲಿಯೇ ಹಗಲಿರುಳೂ ಆಸಕ್ತರಾಗಿರುತ್ತಿದ್ದರು. ಅವರ ಉದ್ಯೋಗವೆಂದರೆ ಯಾವಾಗಲೂ ಸ್ನಾನ ಮಾಡುವದು, ದೇವರನ್ನು ಪೂಜಿಸುವದು, ಜಪ ಜಪಿಸುವದು, ತಪ ಗೈಯುವದು, ಪಾಠ ಪ್ರವಚನ ಮಾಡುವದು. ತೀವ್ರತರವಾದ ವ್ರತ ಉಪವಾಸಗಳಿಂದ ಅವರ ಮೈಯೆಲ್ಲ ಒಣಗಿ ಹೋಗಿದ್ದಿತು. ಕೊರಗಿಕಟ್ಟಿಗೆಯಂತಾದ ಅವರ ದೇಹದಲ್ಲಿ ಬರೀ ನರಗಳು ಮಾತ್ರ ಎದ್ದು ಕಾಣುತ್ತಿದ್ದವು. ಹೀಗೆ ದೇವತೆಗಳ ಮಾನದಿಂದ ಒಂದು ಸಾವಿರ ವರ್ಷ ಅವರು ದೇವೇಶನಾದ ಮಹೇಶನನ್ನು ಕುರಿತು ತಪಸ್ಸನ್ನು ಮಾಡಿದರು. ಆದರೂ ಅವರ ಈ ಆರಾಧನೆಯಿಂದ ಮಹಾದೇವರು ಒಲಿಯಲಿಲ್ಲ. ಹೀಗೆ ಬಹುಕಾಲ ಕಳೆದ ಬಳಿಕ ಒಂದು ದಿನ ಪರಮೇಶ್ವರನು ಪಾರ್ವತಿದೇವಿಯೊಂದಿಗೆ ಆಕಾಶಮಾರ್ಗದಲ್ಲಿ ಪಯಣಿಸುತ್ತಿದ್ದರು. ಆಗ ಉಗ್ರ ತಪವನ್ನು ಆಚರಿಸುತ್ತಿದ್ದ ಈ ಎಂಬತ್ತೆಂಟು ಸಾವಿರ ವಾಲಖಿಲ್ಯ ಮುನಿಗಳು ಆ ಮಹಾದೇವಿಯ ಕಣ್ಣಿಗೆ ಬಿದ್ದರು. ತನ್ನ ಪತಿ ಪರಮೇಶ್ವರನನ್ನು ಪ್ರಸನ್ನೀಕರಿಸಿಕೊಳ್ಳಲಿಕ್ಕಾಗಿ ಆ ತಪೋಧನರು ಪಡುವ ಕಷ್ಟ ಹಾಗೂ ಕಾಯ ಕ್ಲೇಶಗಳನ್ನು ಕಂಡು ಅವಳಿಗೆ ಬಹಳ ಕೆಡುಕೆನಿಸಿತು. ಅವಳ ಕರುಳು ಕರಗಿ ಕೈಲಾಸಪತಿಯನ್ನು ಒಲಿಸಿ ಕೈ ಜೋಡಿಸಿ ನುಡಿದಳು-

೯೦೭. ''ಕಿಂ ದೇವ ಧರ್ಮನಿಷ್ಠಾನಾಮನಂತಂ ದೇವ ದುಷ್ಕೃತಂ ।
ನಾದ್ಯಾಪಿ ಯೇನ ಸಿದ್ಧ್ಯಂತಿ ಶುಷ್ಕಸ್ನಾಯ್ವಸ್ಥಿಶೋಷಿತಾಃ ॥

''ಪ್ರಭುದೇವ, ಈ ದಾರು ವನದಲ್ಲಿ ಇರುವ ಈ ಮುನಿಗಳು ಬಹಳ ಕ್ಲೇಶ ಪಡುತ್ತಿದ್ದಾರೆ. ನನ್ನ ಮೇಲೆ ದಯೆದೋರಿ ಆ ಋಷಿಗಳ ಕಷ್ಟವನ್ನು ಪರಿಹರಿಸಿರಿ. ಸ್ವಾಮಿ, ಧರ್ಮನಿಷ್ಠರಾದ ಈ ಮಹರ್ಷಿಗಳು ಮಾಡಿದ ಅಪರಾಧವಾದರೂ ಏನು? ಇಂಥ ಉಗ್ರ ತಪವನ್ನು ಮಾಡಿದರೂ ಅವರಿಗೆ ಇನ್ನೂ ಸಿದ್ಧಿ ಏಕಿಲ್ಲ! ಘೋರ ತಪೋನುಷ್ಠಾನದಿಂದ ಅವರ ಮೈಯಲ್ಲಿಯ ಮಾಂಸವೆಲ್ಲ ಒಣಗಿಹೋಗಿದೆ. ಎಲಬು ಕೂಡ ಸವೆದುಹೋಗಿವೆ. ಇಷ್ಟಾದರೂ ಅವರಿಗೆ ಸಿದ್ಧಿ ಇಲ್ಲ. ಯಾವ ದುಷ್ಕರ್ಮ ಅವರನ್ನು ತಡೆದಿದೆ?

೯೦೮. ತತ್‌ಶ್ರುತ್ವಾ ವಚನಂ ದೇವ್ಯಾಃ ಪಿನಾಕೀ ಪಾತಿತಾಂತಕಃ ।
ಪ್ರೋವಾಚ ಪ್ರಹಸನ್ ಮೂರ್ಧ್ನಾ ಚಾರುಚಂದ್ರಾಂಶುಶೋಭಿತಃ ॥

ಭವಾನಿಯ ಕೃಪಾಪೂರಿತ ವಚನಗಳನ್ನು ಕೇಳಿ ಯಮನನ್ನು ನಿಗ್ರಹಿಸಿದ ಪಿನಾಕಿ ಪರಮೇಶ್ವರನು ನಸುನಕ್ಕನು. ಅವನು ಮಂದಹಾಸ ಮಾಡುವಾಗ ಆಂದೋಲಿತವಾದ ಮುಡಿಯಲ್ಲಿಯ ಚಂದ್ರಚಕೋರವು ಬೆಳದಿಂಗಳನ್ನು ಸೂಸಿತು. ಪ್ರಸನ್ನ ಮುಖದಿಂದ ಪರಶಿವನು ನುಡಿದನು.

೯೦೮. ನ ವೇತ್ಸಿ ದೇವಿ ತತ್ತ್ವೇನ ಧರ್ಮಸ್ಯ ಗಹನಾಂ ಗತಿಂ ।
ನೈತೇ ಧರ್ಮಂ ವಿಜಾನಂತಿ ನ ಚ ಕಾಮವಿವರ್ಜಿತಾಃ ॥
ನ ಚ ಕ್ರೋಧೇನ ನಿರ್ಮುಕ್ತಾಃ ಕೇವಲಂ ಮೂಢಬುದ್ಧಯಃ ।
ದೇವ ಪ್ರದರ್ಶಯಾತ್ಮಾನಂ ಪರಂ ಕೌತೂಹಲಂ ಹಿ ಮೇ ॥

''ದೇವಿ, ಧರ್ಮದ ಸೂಕ್ಷ್ಮ ಗತಿ ನಿನಗೆ ಗೊತ್ತಿಲ್ಲ. ಈ ವಾಲಖಿಲ್ಯರಿಗೆ ಧರ್ಮದ ಮರ್ಮವು ತಿಳಿದಿಲ್ಲ. ಇವರು ಕಾಮವನ್ನು ತ್ಯಜಿಸಿಲ್ಲ. ಕೋಪವನ್ನು ಬಿಟ್ಟಿಲ್ಲ. ಇವರು ಕೇವಲ ಮೂಢಮತಿಗಳು. ಇಂಥವರಿಗೆ ಸಿದ್ಧಿ ಎಂತು ದೊರೆವುದು!'' ಆಗ ಪಾರ್ವತಿಗೆ ಅಚ್ಚರಿಯಾಯಿತು. ಅವಳು ಶಂಕರನಿಗೆ ''ಇದರ ರಹಸ್ಯವೇನು! ವಸ್ತುಸ್ಥಿತಿಯನ್ನು ಅರಿಯಲು ನನಗೆ ಬಹಳ ಕುತೂಹಲವುಂಟಾಗಿದೆ. ದಯಮಾಡಿ ನನಗೆ ಯಥಾರ್ಥ ದರ್ಶನ ಮಾಡಿಸಬೇಕು'' ಎಂದು ಬಿನ್ನವಿಸಿದಳು. ದೇವಿಯ ಕೌತುಕದ ಬಯಕೆ ಕೇಳಿ ದೇವನಿಗೆ ನಗೆ ಬಂದಿತು. ಅವನು ಅವಳಿಗೆ ''ನೀನು ಇಲ್ಲಿಯೇ ನಿಲ್ಲು. ನಾನು ಆ ಮುನಿ ಪುಂಗವರು ತಂಗಿ ತಪಂಗೈಯುವಲ್ಲಿ ಹೋಗುವೆನು. ನಿನ್ನ ಕಣ್ಣೆದುರೇ ಅವರ ಉಗ್ರ ತಪಸ್ಸಿನ ಬಣ್ಣವು ಬಯಲಾಗುವಂತೆ ಮಾಡುವೆನು'' ಎಂದು ಹೇಳಿದನು. ''ಹಾಗಾದರೆ ಅವಶ್ಯವಾಗಿ ಹೋಗಿಬನ್ನಿ'' ಎಂದು ಸಂತಸದಿಂದ ಅನುಮೋದಿಸಿ ದಳು ಆ ಗಿರಿಜೆ. ಕೂಡಲೇ ಕೈಲಾಸಪತಿಯು ವಾಲಖಿಲ್ಯರು ತಪಂಗೈಯುತ್ತಿದ್ದ ತಾಣಕ್ಕೆ ತೆರಳಿದನು. ಅಲ್ಲಿ ಮಹಾಮುನಿಗಳು ಅಗ್ನಿಶಾಲೆಯನ್ನು ಕಟ್ಟಿಕೊಂಡು ವಾಸಮಾಡಿದ್ದರು. ನಿರಂತರ ಪಾಠ ಪ್ರವಚನ ನಡೆಸಿದ್ದರು. ಹೋಮ ಹವನ ಮಾಡುತ್ತಿದ್ದರು. ಅವರಿಗೆ ಕಲ್ಲು, ಮಣ್ಣು, ರನ್ನ, ಚಿನ್ನ ಎಲ್ಲವೂ ಒಂದೇ. ನಿರಂತರ ಸಾಗಿತ್ತು ಅವರ ಅತ್ಯುಗ್ರತಪೋನುಷ್ಠಾನ.

೯೦೯. ತಾನ್ವಿಲೋಕ್ಯ ತತೋದೇವಃ ನಗ್ನಃ ಸರ್ವಾಂಗ ಸುಂದರಃ ।
ವನಮಾಲ ಕೃತಾಪೀಡೋ ಯುವಾ ಭಿಕ್ಷಾಕಪಾಲಧೃಕ್ ॥

ಅದನ್ನು ದೂರದಿಂದಲೇ ನೋಡಿ ಗೌರೀಪತಿಯು ಓರ್ವ ದಿಗಂಬರನ ರೂಪ ತಳೆದನು. ಅತ್ಯಂತ ಸುಂದರವಾಗಿತ್ತು ಶಿವನ ಆ ನಗ್ನ ರೂಪ. ಕೈಯಲ್ಲಿ ಭಿಕ್ಷಾಕಪಾಲ, ಮೈತುಂಬ ಮಿಂಚುವ ಹರೆಯದ ಸಿರಿ, ಮೈಮೇಲೆ ಒಂದು ಬಟ್ಟೆನಷ್ಟೂ ಬಟ್ಟೆ ಇಲ್ಲ. ಕಪ್ಪು ಗೂದಲುಗಳನ್ನು ಮುಡಿ ಮಾಡಿ ಮೇಲೆತ್ತಿ ಕಟ್ಟಿ ಕಾಡು ಹೂಗಳ ಸರದಿಂದ ದುಂಡು ಸುತ್ತಲಾಗಿತ್ತು.

೯೧೦. ಆಶ್ರಮೇಷರ್ಯಟನ್ ಭಿಕ್ಷಾಂ ಮುನೀನಾಮಾಶ್ರಮಂ ಪ್ರತಿ ।
ದೇಹಿ ಭಿಕ್ಷಾಂ ತತಶ್ಶೋಕ್ತ್ವಾ ಸಂಭ್ರಮನ್ನಾಶ್ರಮಾನ್ ಯಯೌ॥

ಈ ದಿಗಂಬರ ತರುಣ ಭಿಕ್ಷುಕನು ಮುನಿಗಳ ಆಶ್ರಯದ ಪರಿಸರದಲ್ಲಿರುವ ಎಲೆ ಮನೆಯಿಂದ ಎಲೆ ಮನೆಗೆ ಸಾಗಿ ಭಿಕ್ಷೆ ಬೇಡುತ್ತಿದ್ದ. ಪರ್ಣಕುಟೀರದ ಮುಂಭಾಗದಲ್ಲಿ ನಿಂತು ''ಭಿಕ್ಷಾಂದೇಹಿ'' ಎನ್ನುತ್ತಿದ್ದ, ಮತ್ತೆ ಮುಂದೆ ಸಾಗುತ್ತಿದ್ದ.

೯೧೧. ತಂ ವಿಲೋಕ್ಯಾಶ್ರಮಗತಂ ಯೋಷಿತೋ ಬ್ರಹ್ಮವಾದಿನಾಮ್ ।
ಸಕೌತುಕ ಸ್ವಭಾವೇನ ತಸ್ಯ ರೂಪೇಣ ಮೋಹಿತಾಃ ॥

ಅವನ ಈ ಭಿಕ್ಷಾಟನದ ಸಂಭ್ರಮವನ್ನು ಕಂಡು ಬ್ರಹ್ಮವಾದಿಗಳ ಮನೆಯಲ್ಲಿ ಮಡದಿಯರಿಗೆಲ್ಲ ಸಂತಸವೋ ಸಂತಸ. ಕೌತುಕವೋ ಕೌತುಕ. ಕಾಮಿನೀ ಸಹಜವಾದ ಕುತೂಹಲದಿಂದ ಅವರು ಹುಟ್ಟಿದ ಮಹರ್ದೆಶೆಯಲ್ಲಿಯೇ ಬಿಕ್ಕೆಬೇಡುವ ಆ ತರುಣ ನೆಡೆಗೆ ನೋಡಿದರು. ಅವನ ಹರೆಯ ಸಿರಿ, ತಿರಿದುಂಬುವ ಪರಿ, ಹೊಮ್ಮುವ ಕಾಂತಿ, ಚಿಮ್ಮುವ ಚೆಲುವು ಮುನಿ ಮಾನಿನಿಯರ ಮನವನ್ನು ಸೂರೆಗೊಂಡವು. ಅವನ ತಾರುಣ್ಯ ಮತ್ತು ದೇಹದ ಲಾವಣ್ಯಕ್ಕೆ ಮನಸೋತ ಆ ಮುಗುದೆಯರು ತಮ್ಮ ತಮ್ಮಲ್ಲಿ ''ಸಖಿಯರೇ, ಬನ್ನಿರಿ. ಬೀದಿಯಲ್ಲಿ ಬಟ್ಟೆಯಿಲ್ಲದ ಭಿಕ್ಷುಕ ಬಂದಿದ್ದಾನೆ. ನೋಡೋಣ ನಡೆಯಿರಿ'' ಎಂದು ಮಾತನಾಡಿಕೊಂಡರು. ತಮ್ಮ ಆಶ್ರಮದಲ್ಲಿರುವ ಹಣ್ಣು ಕಾಯಿ ಗೆಡ್ಡೆ ಗೆಣಸು, ಏನಿತ್ತೋ ಅದನ್ನೆಲ್ಲ ತೆಗೆದುಕೊಂಡರು. ಬೀದಿಯ ಬದಿಗೆ ಬಂದರು. ನಾಚುತ್ತ ನುಡಿದರು.

''ಭಿಕ್ಷುಕ, ಇತ್ತಬಾ, ಈ ಭಿಕ್ಷೆ ಕೊಳ್ಳು.''

೯೧೨. ಸ ತು ಭಿಕ್ಷಾಕಪಾಲಂ ತತ್ ಪ್ರಸಾರ್ಯ ಬಹುಸಾದರಂ ।
ದೇಹಿ ಭಿಕ್ಷಾಂ ಶಿವಂ ವೋಸ್ತು ಭವತೀಭ್ಯಃ ತಪೋಧನಾಃ ।

ಆಗ ಆ ತರುಣನು ಆದರದಿಂದ ಅವರಿದ್ದಲ್ಲಿಗೆ ಬಂದ. ತನ್ನ ಭಿಕ್ಷೆಯ ಪಾತ್ರೆಯನ್ನು ಅವರೆದುರು ಚಾಚಿದ. ''ಭಿಕ್ಷಾಂದೇಹಿ, ಶಿವಂ ವೋಸ್ತು'' ಭಿಕ್ಷೆ ನೀಡಿ ನಿಮಗೆ ಕಲ್ಯಾಣವಾಗಲಿ ಎಂದು ನುಡಿದ.

೯೧೩. ಹಸಮಾನಸ್ತು ದೇವೇಶಃ ತತ್ರ ದೇವ್ಯಾ ನಿರೀಕ್ಷಿತಃ ॥

ಆ ತಾಪಸಿಯರು ಬೊಗಸೆ ತುಂಬ ಭಿಕ್ಷೆ ನೀಡಿದರು. ಅದರಿಂದ ಸಂತಸಗೊಂಡ ಆ ದಿಗಂಬರ ಯುವಕನ ತುಟಿಯಂಚಿನಲ್ಲಿ ಮುಗುಳು ನಗೆ ಮಿಂಚಿತು. ಮಂದ ಹಾಸದಿಂದ ಸುಂದರವಾದ ಆ ಭವ ಭಿಕ್ಷುಕನ ಮುಖವನ್ನು ಮಹಾದೇವಿಯು ನೋಡಿದಳು.

೯೧೪. ತತ್ರದತ್ತ್ವೈವ ತಾಂ ಭಿಕ್ಷಾಂ ಪಪ್ರಚ್ಛುಸ್ತಾಃ ಸ್ಮರಾತುರಾಃ ॥

ಭಿಕ್ಷೆ ನೀಡಿದ ನಾರಿಯರ ಮನದಲ್ಲಿ ಮದನ, ಕಣ್ಣಲ್ಲಿ ಕೆಂಪು, ತುಟಿಯಲ್ಲಿ ಮುಗುಳು ಮಾತಿನಲ್ಲಿ ಮಾರ್ದವ ಮೂಡಿ ನಿಂತಿದ್ದವು. ರಾಗಾಲಸರಾಗಿ ಆ ರಮಣಿಯರು ಕೇಳಿದರು.

೯೧೫. ಕೋಸೌ ನಾಮ ವ್ರತವಿಧಿಃ ತ್ವಯಾ ತಾಪಸ ಸೇವ್ಯತೇ ।
ಯತ್ರ ನಗ್ನೇನಲಿಂಗೇನ ವನಮಾಲಾ ವಿಭೂಷಿತಃ ।
ಭವಾನ್ ವೈ ತಾಪಸೋ ಹೃದ್ಯೋ ಬ್ರೂಹಿ ಸ್ಮ ಯದಿ ಮನ್ಯಸೇ॥

ತಪಸ್ವಿಯೇ, ನೀನು ಮಾಡುವ ಈ ವ್ರತವು ಯಾವದು? ಬತ್ತಲೆಮೈ, ಬಟ್ಟೆ ಇಲ್ಲದ ಲಿಂಗ, ಕೊರಳಲ್ಲಿ ಕಾಡು ಹೂವಿನ ಮಾಲೆ? ಇದೆಂಥ ವ್ರತ? ಇದರ ಹೆಸರೇನು? ನೀನಂತೂ ಚೆಲುವ ಚೆನ್ನಿಗ. ಈ ನಗ್ನ ವೇಷದಲ್ಲಿಯೂ ಎಷ್ಟು ಸುಂದರನಾಗಿ ಕಾಣುತ್ತಿದ್ದಿಯೇ! ಈ ವ್ರತದ ರಹಸ್ಯವನ್ನು ನಮಗೆ ತಿಳಿಸಿದರೆ ತೊಂದರೆ ಇಲ್ಲವಷ್ಟೇ! ನಿನಗೆ ಸರಿ ಎನಿಸಿದರೆ ತಿಳಿಸು.''

೯೧೬. ಇತ್ಯುಕಸ್ತಾಪಸಸ್ತಾಭಿಃ ಪ್ರೋವಾಚ ಹಸಿತಾನನಃ
ಇದಂ ಮಮ ವ್ರತಂ ಕಿಂಚಿನ್ನ ರಹಸ್ಯಂ ಪ್ರಕಾಶತೇ ॥
ಶೃಣ್ವಂತಿ ಬಹವೋ ಯತ್ರ ತತ್ರ ವ್ಯಾಖ್ಯಾನ ವಿದ್ಯತೇ
ಅಸ್ಯ ವ್ರತಸ್ಯ ಸುಭಗಾ ಇತಿ ಮತ್ವಾ ಗಮಿಷ್ಯಥ ॥
ಏವಮುಕ್ತಾಸ್ತದಾ ತೇನ ಪ್ರತ್ಯೂಚುಃ ತಂ ತದಾ ಮುನಿಮ್ ।
ತತೋಭ್ಯೇಹಿ ಗಮಿಷ್ಯಾಮಃ ಮುನೇನಃ ಕೌತುಕಂ ಮಹತ್ ॥

ಆ ಮುಗ್ಧ ಮಹಿಳೆಯರ ಈ ಮಾತುಗಳನ್ನು ಕೇಳಿ ಆ ಭಿಕ್ಷುಕನು ಮುಗುಳು ನಗೆ ನಕ್ಕು ನುಡಿದನು. ''ಸುಂದರಿಯರೇ, ಇದೊಂದು ನನ್ನ ವ್ರತ. ಇದರಲ್ಲಿ ಗುಟ್ಟು ಗೂಢ ಯಾವದೂ ಇಲ್ಲ. ಆದರೆ ಇದು ಗುಂಪಿನಲ್ಲಿ ಹೇಳುವ ನೋಂಪಿಯಲ್ಲ. ಈ ವ್ರತದ ಬಗ್ಗೆ ಇಷ್ಟು ಮಾತ್ರ ನೀವು ತಿಳಿದುಕೊಂಡರೆ ಸಾಕು. ನೀವು ಇಲ್ಲಿಂದ ಹೊರಟು ಹೋಗಿರಿ'' ಎಂದು ಭಿಕ್ಷುಕನು ಮತ್ತೂ ಮಧುರಮುಗ್ಧವಾಗಿ ನಕ್ಕು ಗೂಢಗುಂಜನ ವಾಗಿಯೇ ತನ್ನ ವ್ರತದ ಬಗ್ಗೆ ನುಡಿಯಲು, ಆ ಕಾಮಿನಿಯರ ಕಾಮ ಕೆರಳಿ ಕೌತುಕವು ನೂರ್ಮಡಿಸಿ ಹೇಳಿದರು. ''ಎಲೈ ಮುನಿಯೇ, ನಿನ್ನ ಹಾಗೂ ನಿನ್ನ ಈ ವ್ರತದ ಬಗ್ಗೆ ನಮಗೆ ಭಾರೀ ಕೌತುಕ ಎನಿಸಿದೆ. ಹೀಗೆ ನಗ್ನನಾಗಿ ಅನಾವೃತ ಲಿಂಗದಿಂದ ಕಂಡಲ್ಲಿ ತಿರುಗಾಡುವದೇ ನಿನ್ನ ವ್ರತವಾದರೆ ಇತ್ತ ನಮ್ಮ ಕಡೆಗೇ ಬಾ. ಹೋಗೋಣ ನಡೆ.''

೯೧೭. ಇತ್ಯುಕ್ತಾಸ್ತಾಸ್ತದಾ ತಂ ವೈ ಜಗೃಹುಃ ಪಾಣಿಪಲ್ಲವೈಃ ।
ಕಾಚ್ಚಿತ್ ಕಂಠೇಸಕಂದರ್ಪಾಃ ಕಾಶ್ಚಿತ್ಕಾಮ ಪರಾಸ್ತಥಾ ॥

ಎಂದಂದು ಕೆಲವು ಭಾಮಿನಿಯರು ಆ ತರುಣ ಭಿಕ್ಷುಕನ ಕೈ ಹಿಡಿದು ಜಗ್ಗಿದರು. ಹಲವು ಹೆಂಗಳೆಯರು ಕಾಮದಿಂದ ಉತ್ಕಂಠಿತರಾಗಿ ತಮ್ಮ ಬಳ್ಳಿದೋಳುಗಳಿಂದ ಅವನ ಕೊರಳನ್ನು ಬಳಸಿದರು.

೯೧೮. ಜಾನುಭ್ಯಾಮಪರಾ ನಾರೀ ಕೇಶೇಷು ಲಲಿತಾ ಪರಾ ।
ಅಪರಾತು ಕಟೀರಂಧ್ರೇ ಹ್ಯಪರಾ ಪಾದಯೋರಪಿ ।

ಮತ್ತೆ ಕೆಲವು ಮಾನಿನಿಯರು ಮೋಹಮತ್ತರಾಗಿ ತಮ್ಮ ಮಂಡೆಗಳಿಂದ ಅವನ ಮಂಡೆಗಳನ್ನು ಅಮುಕಿದರು. ಕೆಲವರು ಅವನ ಸುರಳಿಗೂದಲಿನಲ್ಲಿ ಬೆರಳಾಡಿಸಿದರು. ಹಲವರು ಅವನ ನಡುವಿಗೆ ಕೈ ಹಾಕಿದರು. ಮತ್ತು ಕೆಲವರು ಕಾಲಿಗೆ ಬಿದ್ದರು.

**೯೯. ಕ್ಷೋಭಂ ವಿಲೋಕ್ಯ ಮುನಯಃ ಆಶ್ರಮೇ ತುಸ್ವಯೋಷಿತಾಮ್।
ಹನ್ಯತಾಮಿತಿ ಸಂಭಾಷ್ಯ ಕಾಷ್ಠ ಪಾಷಾಣ ಪಾಣಯಃ ॥**

ಋಷಿ ರಮಣಿಯರು ಹೀಗೆ ಕಾಮಾಂಧರಾಗಿ ಅಪರಿಚಿತ ತರುಣ ಭಿಕ್ಷುಕನೊಡನೆ ಉನ್ಮತ್ತರಾಗಿ ಶೃಂಗಾರ ಚೇಷ್ಟೆಗಳನ್ನು ಸುರು ಮಾಡಿದ್ದು ನೋಡಿ ಋಷಿಗಳಿಗೆಲ್ಲ ಕೋಪ ಬಂದಿತು. ತಮ್ಮ ಮಡದಿಯರ ಮನೋಮೋಹಕ್ಕೂ ಈ ಉಚ್ಛೃಂಖಲ ಕಾಮವಿಕಾರಕ್ಕೂ ಈ ತರುಣ ಭಿಕ್ಷುಕನೇ ಕಾರಣ. ಇವನನ್ನು ಹಿಡಿಯಿರಿ. ಹೊಡೆಯಿರಿ. ಬಡೆಯಿರಿ, ಕೊಲ್ಲಿರಿ ಎನ್ನುತ್ತ ಕಲ್ಲು ಕಟ್ಟಿಗೆಗಳನ್ನು ಕೈಯಲ್ಲಿ ಹಿಡಿದು ಹೊಡೆಯ ತೊಡಗಿದರು.

**೯೨೦. ಪಾತಯಂತಿ ಸ್ಮ ದೇವಸ್ಯ ಲಿಂಗಮೂರ್ಧ್ವಂ ವಿಭೀಷಣಮ್ ।
ಪಾತೀತೇ ತು ತತೋ ಲಿಂಗೇ ಗತೋಂತರ್ಧಾನ ಮೀಶ್ವರಃ ॥**

ಕ್ರೋಧಾಂಧರಾದ ಋಷಿಗಳ ಕಲ್ಲು ಕಟ್ಟಿಗೆಗಳ ಬಲವಾದ ಪ್ರಹಾರದಿಂದ ಭಿಕ್ಷು ರೂಪಿಯಾದ ಮಹಾದೇವನ ಭೀಕರವಾದ ಲಿಂಗವು ಮುರಿದು ಮುಗಿಲಿಗೆ ಹಾರಿ ಮೇಲ್ಮುಖವಾಗಿ ಕೆಳಗೆ ಬಿದ್ದಿತು. ಲಿಂಗವು ಮುರಿದು ಬಿದ್ದ ಕೂಡಲೇ ಆ ತರುಣ ಭಿಕ್ಷುಕನು ಅಲ್ಲಿಯೇ ಅದೃಶ್ಯನಾದನು.

**೯೨೧. ದೇವ್ಯಾ ಜಹಾಸ ಭಗವಾನ್ ಕೈಲಾಸಂ ನಗಮಾಶ್ರಿತಃ ।**

ಹೀಗೆ ಮಹಾದೇವನು ತನ್ನ ನಗ್ನ ಭಿಕ್ಷುಕ ವೇಷವನ್ನು ಉಪಸಂಹರಿಸಿ ಪಾರ್ವತಿಯ ಬಳಿಗೆ ಬಂದನು. ಮಹಾಮುನಿಗಳ ಆಶ್ರಮದಲ್ಲಿ ನಡೆಯುವ ಈ ಕಾಮ ಕ್ರೋಧಗಳ ವ್ಯಾಪಾರಗಳನ್ನು ಕಂಡು ಮಹಾದೇವಿಯು ಮುಕ್ಕಣ್ಣನೊಡನೆ ನಕ್ಕು ಇಬ್ಬರೂ ಕೂಡಿ ಕೈಲಾಸಪರ್ವತಕ್ಕೆ ಹೊರಟುಹೋದರು. ಈ ಚರಾಚರ ಪ್ರಪಂಚದಲ್ಲಿ ಮಹಾದೇವರ ಲಿಂಗ ಪಾತವಾದದ್ದನ್ನು ಕಂಡು ಋಷಿಗಳ ಮನಸ್ಸಿನಲ್ಲಿ ಬಹಳ ಕಳವಳವಾಯಿತು. ಆ ನಗ್ನ ಭಿಕ್ಷುಕನು ಸಾಕ್ಷಾತ್ ಪರಮೇಶ್ವರನೇ ಎಂದು ತಿಳಿದ ಬಳಿಕಂತೂ ಅವರೆಲ್ಲರೂ ಪಶ್ಚಾತ್ತಾಪದಿಂದ ವ್ಯಾಕುಲರಾದರು.

**೯೨೨. ಉವಾಚೈಕೋ ಮುನಿವರಸ್ತತ್ರ ಬುದ್ಧಿಮತಾಂ ವರಃ ।
ನ ವಯಂ ವಿದ್ಮಃ ಸದ್ಭಾವಂ ತಾಪಸಸ್ಯ ಮಹಾತ್ಮನಃ ।
ವಿರಿಂಚಿಂ ಶರಣಂ ಯಾಮಃ ಸಹಿ ಜ್ಞಾಸ್ಯತಿ ಚೇಷ್ಟಿತಮ್ ॥**

ಅವರಲ್ಲಿ ಬುದ್ಧಿವಂತನಾದ ಒಬ್ಬ ಮುನಿಯು ಮಹಾತ್ಮನಾದ ಆ ಮಹಾದೇವನು ತಾಪಸ ಸ್ವರೂಪದಿಂದ ನಮ್ಮಲ್ಲಿಯೇ ಇದ್ದುದು ನಮಗೆ ತಿಳಿಯಲೇ ಇಲ್ಲ. ನಾವೆಲ್ಲರೂ ಈಗ ಬ್ರಹ್ಮದೇವರಿಗೆ ಶರಣು ಹೋಗೋಣ. ಈ ಶಿವನ ವ್ಯಾಪಾರವೆಲ್ಲವೂ ಆ ವಿಧಾತನಿಗೆ ಚೆನ್ನಾಗಿ ಗೊತ್ತು. ಹೀಗೆ ಮತಿಮಂತನಾದ ಮುನಿಯೊಬ್ಬನು ಆಡಿದ ಮಾತನ್ನು ಉಳಿದ ಎಲ್ಲ ಋಷಿಗಳೂ ಅನುಮೋದಿಸಿದರು.

ಅವರೆಲ್ಲರೂ ತಮ್ಮ ಇಂದ್ರಿಯಗಳನ್ನೆಲ್ಲ ಬಿಗಿ ಹಿಡಿದು ನೇರವಾಗಿ ಬ್ರಹ್ಮ ಲೋಕಕ್ಕೆ ಐತಂದರು. ಅಲ್ಲಿ ಅನೇಕ ದೇವತೆಗಳು ಆ ಸತ್ಯಲೋಕದ ಸ್ವಾಮಿಯನ್ನು ಸೇವಿಸುತ್ತಲಿದ್ದರು. ಅವನ ಮುಂದೆ ಅಡ್ಡ ಬಿದ್ದರು, ಈ ಎಲ್ಲ ಮಹೀತಲದ ಮುನಿಗಳು. ನಾಚಿಕೆಯಿಂದ ಅವರೆಲ್ಲರ ಮುಖಗಳು ಕೆಳಗಾಗಿದ್ದವು. ಅವರ ದೀನ ಮುಖದಲ್ಲಿಯ ದುಃಖವನ್ನು ಗುರುತಿಸಿ ಬ್ರಹ್ಮದೇವರು ಹೀಗೆ ನುಡಿದರು-

**೯೨೩. ಅಥ ತಾನ್ ದುಃಖಿತಾನ್ ದೃಷ್ಟ್ವಾ ಬ್ರಹ್ಮಾ ವಚನಮಬ್ರವೀತ್।**
**ಅಹೋ ಮುಗ್ಧಾ ಯದಾ ಯೂಯಂ ಕ್ರೋಧೇನ ಕಲುಷೀಕೃತಾಃ॥**

''ಎಲೋ ಮೂಢ ಮುನಿಗಳೇ, ಕೋಪದಿಂದ ನಿಮ್ಮ ಮನಸ್ಸು ಕಲುಷಿತವಾಗಿದೆ. ಬುದ್ಧಿಯು ಮಂಕಾಗಿದೆ.

**೯೨೪. ನ ಧರ್ಮಂ ಚ ಕ್ರಿಯಾಂ ಕಾಂಚಿದ್ ಜಾನತೇ ಮೂಢ ಬುದ್ಧಯಃ ।**
**ಶ್ರೂಯತಾಂ ಧರ್ಮ ಸರ್ವಸ್ವಂ ತಾಪಸಾಃ ಕ್ರೂರ ಕರ್ಮಣಃ ॥**

ನಿಮಗೆ ಯಾವ ಧರ್ಮಜ್ಞಾನವೂ ಇಲ್ಲ. ಕರ್ಮಜ್ಞಾನವೂ ಇಲ್ಲ. ನೀವು ನೋಡಲು ತಪಸ್ವಿಗಳಾಗಿ ಕಾಣುತ್ತಿದ್ದರೂ ನೀವು ಮಾಡುವ ಕಾರ್ಯಗಳು ಮಾತ್ರ ಅತ್ಯಂತ ಕ್ರೂರವೂ ಆಗಿವೆ, ಘೋರವೂ ಆಗಿವೆ. ಮನಸ್ಸು ಶುದ್ಧವು ಆಗಬೇಕಾದರೆ ಧರ್ಮದ ಮರ್ಮವನ್ನು ತಿಳಿದುಕೊಳ್ಳುವದು ಅತ್ಯಗತ್ಯ. ಈ ಧರ್ಮಸರ್ವಸ್ವದ ಜ್ಞಾನವಾದರೂ ಸಾಕು ಆ ಧರ್ಮಾಚರಣದ ಪೂರ್ಣ ಫಲವು ಪ್ರಾಪ್ತವಾಗುವದು. ಇಂಥ ಧರ್ಮ ರಹಸ್ಯವನ್ನು ತಿಳಿಸುತ್ತೇನೆ, ಕೇಳಿರಿ. ವಿಶ್ವರೂಪಿಯಾದ ಪರಮಾತ್ಮನು ಎಲ್ಲ ಪ್ರಾಣಿಗಳ ದೇಹಗಳಲ್ಲಿಯೂ, ಆತ್ಮದಲ್ಲಿಯೂ ಅಂತರ್ಯಾಮಿಯಾಗಿ ನಿಂತು ಕೊಂಡಿರುತ್ತಾನೆ. ಅವನು ಅನಾದಿ. ಶಾಶ್ವತ. ಅವನಿಂದ ಅಧಿಷ್ಠಿತವಾದ ಈ ಜೀವಜಡಾತ್ಮಕ ಪ್ರಪಂಚದಿಂದ ಅವನು ಭಿನ್ನನಾಗಿದ್ದಾನೆ ಎಂದು ವೇದಶಾಸ್ತ್ರಗಳು ಸೂಚಿಸುತ್ತವೆ.

**೯೨೫. ಯೋಽಸಾವಾತ್ಮನಿ ದೇಹೇಽಸ್ಮಿನ್ ವಿಭುಃ ನಿತ್ಯೋ ವ್ಯವಸ್ಥಿತಃ ।**
**ಸೋಽನಾದಿಃ ಸ ಮಹಾಸ್ಥಾಣುಃ ಪೃಥಕ್ತ್ವೇ ಪರಿಸೂಚಿತಃ ॥**

ಪರಮಾತ್ಮನಂತೆ ಜ್ಞಾನಾನಂದ ರೂಪಿಯಾದ ಜೀವಾತ್ಮನಿಗೆ ಅನಾದಿ ಕರ್ಮವಾಸನಾ ಮೂಲಕವಾಗಿ ಮನಃ ಕಾಲುಷ್ಯ ಉಂಟಾಗುತ್ತದೆ. ಆ ಮನೋದೋಷದಿಂದ ಮತ್ತೆ ಪಾಪ ಪುಣ್ಯ ಕರ್ಮಗಳನ್ನು ಮಾಡುತ್ತಾನೆ. ಅದರಿಂದ ಅವನಿಗೆ ಸ್ವರ್ಗ, ನರಕ, ಜನನ, ಮರಣ, ಸುಖ, ದುಃಖ ಉಂಟಾಗುತ್ತವೆ. ಇದಕ್ಕೆಲ್ಲ ಮನಸ್ಸೇ ಮೂಲ ಕಾರಣ. ಆದುದರಿಂದ ಬುದ್ಧಿವಂತನಾದ ಮನುಷ್ಯನು ಜ್ಞಾನ ಯೋಗದಿಂದ ಭಗವಂತನನ್ನು ತಿಳಿದು ಕರ್ಮಯೋಗದಿಂದ ಸ್ವೋಚಿತ ಕರ್ಮಾನುಷ್ಠಾನ ಮಾಡಿ ಅಂತಃಕರಣ ಶುದ್ಧಿಯನ್ನು ಸಂಪಾದಿಸಬೇಕು. ಇಂಥ ಮನಃಶುದ್ಧಿಯಿಂದ ಮಾತ್ರವೇ ಮನುಷ್ಯನ ಆತ್ಮಶುದ್ಧಿಯಾಗುವುದು. ಬರೀ ವ್ರತ ಉಪವಾಸ ರೂಪವಾದ ದೇಹದಂಡನೆಯಿಂದ ಆತ್ಮಶುದ್ಧಿಯಾಗುವುದಿಲ್ಲ. ಮನಸ್ಸು ಶುದ್ಧವಾಗದೇ ಮನುಷ್ಯರು ಮಾಡುವ ಯಾವ ಕಾರ್ಯವೂ ಪರಿಶುದ್ಧವಾಗುವುದಿಲ್ಲ. ಶಾಸ್ತ್ರೀಯವಾದ ಕ್ರಿಯಾಕಲಾಪಗಳು ಮನೋಮಾಲಿನ್ಯಮೂಲಕವಾದ ದೈಹಿಕ ಅಶುದ್ಧಿಯನ್ನು ಹೋಗಲಾಡಿಸಲು

ಸಮರ್ಥವಾಗುವುದಿಲ್ಲ. ಆದುದರಿಂದ ಈ ಜಗತ್ತಿನಲ್ಲಿ ಸನ್ಮಾರ್ಗವನ್ನು ಹೊಂದಿ ಬಾಳಬೇಕಾದರೆ ಮನಸ್ಸಿನ ಶುದ್ಧಿಯೇ ಮುಖ್ಯ. ಆ ಅಂತಃಕರಣ ಶುದ್ಧಿಯು ಪರಮಾತ್ಮನ ಪಾರಮ್ಯಜ್ಞಾನ ಮತ್ತು ಅವನ ಆಜ್ಞಾರೂಪವಾದ ವೇದೋಕ್ತವಿಹಿತಕರ್ಮಾನುಷ್ಠಾನ ಇವೆರಡರಿಂದ ಮಾತ್ರ ಉಂಟಾಗುವುದು.

೯೨೭. ವರ್ಣಾಶ್ರಮ ವಿಭಾಗೋಯಂ ಲೋಕಾಧ್ಯಕ್ಷೇಣ ಕೇನಚಿತ್ ।
ನಿಮಿತ್ತಂ ಮೋಹಮಾಹಾತ್ಮ್ಯಂ ನಿಹ್ನವೋತ್ತಮ ಭಾಗಿನಾಮ್ ॥

ವೇದೋಕ್ತವಾದ ವಿಧಿನಿಷೇಧಗಳನ್ನು ಪರಿಪಾಲಿಸಲು ಅನುವಾಗಲಿ ಎಂದು ಲೋಕಸ್ವಾಮಿಯಾದ ಆ ಪರಮಾತ್ಮನು ವರ್ಣಾಶ್ರಮದ ವಿಭಾಗವನ್ನು ಮಾಡಿ ಇಟ್ಟಿದ್ದಾನೆ. ಬ್ರಾಹ್ಮಣ ಶ್ರೇಷ್ಠರಾದ ನಿಮ್ಮಂಥ ಮುನಿಗಳು ಇದನ್ನೆಲ್ಲ ತಿಳಿದೂ ತಮ್ಮ ವರ್ಣ ಹಾಗೂ ಆಶ್ರಮಗಳಿಗೆ ವಿರುದ್ಧವಾಗಿ ನಡೆಯುವದು ಮೋಹ ಮೂಲಕವಾಗಿದೆ.

೯೨೮. ಭವಂತಃ ಕ್ರೋಧ ಕಾಮಾಭ್ಯಾಂ ಅಭಿಭೂತಾಶ್ರಮೇ ಸ್ಥಿತಾಃ ।
ಜ್ಞಾನಿನಾಮಾಶ್ರಮೋ ವೇಶ್ಮ ವೇಶ್ಮಾ ಶ್ರಮಮಯೋಗಿನಾಮ್ ॥

ನೀವು ಜ್ಞಾನಿಗಳಾಗಿ ಮನೆ ಮಾರುಗಳನ್ನು ತೊರೆದು ಆಶ್ರಮಗಳಲ್ಲಿ ವಾಸಿಸುತ್ತೀರಿ. ಇಷ್ಟಾದರೂ ನಿಮಗೆ ಕಾಮ ಕ್ರೋಧಗಳನ್ನು ಜಯಿಸುವದು ಆಗಲಿಲ್ಲ. ಈಗ ನೀವು ಕ್ರೋಧಕ್ಕೆ ಆಹಾರವಾಗಿದ್ದೀರಿ. ಜ್ಞಾನಿಗಳಿಗೆ ಇದ್ದ ಮನೆಯೇ ಆಶ್ರಮ. ಅಜ್ಞಾನಿಗಳಿಗೆ ಆಶ್ರಮವೇ ಮನೆ.

೯೨೯. ಕ್ವ ಚ ನ್ಯಸ್ತಸಮಸ್ತೇಚ್ಛಾ ಕ್ವಚ ನಾರೀಮಯೋ ಭ್ರಮಃ ।
ಕ್ವ ಕ್ರೋಧ ಈದೃಶೊ ಘೋರಃ ಯೇನಾತ್ಮಾನಂ ನ ಜಾನಥ॥

ಸರ್ವ ಸಂಗವನ್ನೂ ಪರಿತ್ಯಾಗ ಮಾಡಿದ ನಿಮ್ಮ ಮುನಿವೃತ್ತಿ ಎಲ್ಲಿ! ನಿಮ್ಮ ಈಗಿನ ಮಡದಿಯರ ಮೇಲಿನ ಮೋಹವೆಲ್ಲಿ! ಅವರ ಮೇಲಿನ ಪ್ರೇಮ ಕಾಮ ಮೂಲಕವಾಗಿ ಈ ಭಯಂಕರ ಕೋಪಾಟೋಪವೆಲ್ಲಿ! ನಿಮ್ಮನ್ನೇ ನೀವು ಮರೆತು ದೇವರನ್ನು ಕೂಡ ಮರೆತು ಸಿಟ್ಟಿನ ಕೈಯಲ್ಲಿ ಬುದ್ಧಿ ಕೊಟ್ಟಿದ್ದೀರಿ.

೯೩೦. ಯತ್ ಕ್ರೋಧನೋ ಯಜತಿ ಯಚ್ಚ ದದಾತಿ ನಿತ್ಯಂ ।
ಯದ್ವಾ ತಪಸ್ತಪತಿ ಯಚ್ಚ ಜುಹೋತಿ ತಸ್ಯ ।
ಪ್ರಾಪ್ನೋತಿ ನೈವ ಕಿಮಪೀಹ ಫಲಂ ಹಿ ಲೋಕೇ ।
ಮೋಘಂ ಫಲಂ ಭವತಿ ತಸ್ಯ ಹಿ ಕೋಪನಸ್ಯ ।

ಕೋಪಿಷ್ಠನಾದ ಮನುಷ್ಯನು ಏನೇ ಯಜ್ಞಯಾಗ ಮಾಡಿದರೂ, ದಾನ ಧರ್ಮ ನೀಡಿದರೂ ಹೋಮಹವನ ಗೈದರೂ ಎಲ್ಲವೂ ವ್ಯರ್ಥ. ಸಿಟ್ಟಿಗೇಳುವ ಮನುಷ್ಯನ ಯಾವ ಧರ್ಮಕರ್ಮಗಳಿಗೂ ಕಿಂಚಿತ್ತಾದರೂ ಪುಣ್ಯವಿಲ್ಲ. ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಕೋಪಿಗೆ ಫಲವಿಲ್ಲ. ಕುಪಿತ ಮನುಷ್ಯನ ಸರ್ವಕರ್ಮಗಳೂ ವ್ಯರ್ಥವೇ ಸರಿ.

ವಾಮನ ಮಹಾಪುರಾಣದಲ್ಲಿ ಸ್ಥಾಣುತೀರ್ಥದ ಗರಿಮೆ ಎಂಬ ಆಳಿಸಿನೇ ಅಧ್ಯಾಯವು ಮುಗಿದುದು.

—೦—

# ರುದ್ರನ ಲಿಂಗ ಪ್ರವೇಶ

ಅಧ್ಯಾಯ - ೪೪

೯೩೧. ಬ್ರಹ್ಮಣೋ ವಚನಂ ಶ್ರುತ್ವಾ ಋಷಯಃ ಸರ್ವ ಏವ ತೇ ।
ಪುನರೇವ ಚ ಪಪ್ರಚ್ಛುಃ ಜಗತಃ ಶ್ರೇಯಕಾರಣಮ್ ॥

ಪುನಃ ಸನತ್ಕುಮಾರರು ಮುಂದಿನ ವೃತ್ತಾಂತವನ್ನು ಹೇಳುತ್ತಾರೆ, ಚತುರ್ಮುಖನ ಈ ಮಾತುಗಳನ್ನೆಲ್ಲ ಕೇಳಿ ಆ ಋಷಿಗಳೆಲ್ಲರೂ ''ಆಗತಕ್ಕ ಕೆಲಸವು ಆಗಿಹೋಯಿತು. ಇನ್ನು ಮುಂದೆ ಜಗತ್ತಿನ ಶ್ರೇಯಸ್ಸಿಗೆ ತಕ್ಕ ಯಾವ ಮಾರ್ಗವನ್ನು ಅನುಸರಿಸಬೇಕೆಂದು ಬ್ರಹ್ಮನನ್ನು ಪ್ರಶ್ನೆ ಮಾಡಿದರು! ಆಗ ಬ್ರಹ್ಮನು ಶೂಲಪಾಣಿಯಾದ ಆ ತ್ರಿಲೋಚನನಲ್ಲಿಯೇ ಶರಣಾಗತರಾಗಿ ಅಲ್ಲಿಗೆ ಹೋಗೋಣ, ಅವನ ಅನುಗ್ರಹದಿಂದಲೇ ನೀವು ಈ ಅಪರಾಧವನ್ನು ಹೋಗಲಾಡಿಸಿಕೊಂಡು ಪೂರ್ವಸ್ಥಿತಿಗೆ ಬರಬೇಕು'' ಎಂದು ಹೇಳಲು ಆ ಬ್ರಹ್ಮನೊಡನೆ ಆ ಋಷಿಗಳೆಲ್ಲರೂ ಕೈಲಾಸ ಪರ್ವತಕ್ಕೆ ಹೊರಟರು. ಅಲ್ಲಿ ಹೋಗಿ ಪಾರ್ವತಿಯೊಡಗೂಡಿರುವ ಶಂಕರನನ್ನು ನೋಡಿದರು. ಆಗ ಬ್ರಹ್ಮನು ದೇವತಾ ಗ್ರೇಸರನೂ, ಲೋಕಗಳಿಗೆ ವರಪ್ರದನೂ ಆಗಿರುವ ಪ್ರಭುವಾದ ಶಂಕರನನ್ನು ಸ್ತೋತ್ರ ಮಾಡತೊಡಗಿದನು.

೯೩೨. ಅನಂತಾಯ ನಮಸ್ತುಭ್ಯಂ ವರದಾಯ ಪಿನಾಕಿನೇ ।
ಮಹಾದೇವಾಯ ದೇವಾಯ ಸ್ಥಾಣವೇ ಪರಮಾತ್ಮನೇ
ನಮೋಽಸ್ತು ಭುವನೇಶಾಯ ತುಭ್ಯಂ ತಾರಕ ಸರ್ವದಾ ।
ಜ್ಞಾನಾನಂದಾಯ ಕೋ ದೇವಃ ತ್ವಮೀಶಃ ಪುರುಷೋತ್ತಮಃ
ನಮಸ್ತೇ ಪದ್ಮಗರ್ಭಾಯ ಹೃತ್ ಪದ್ಮಶಯಿನೇ ನಮಃ ।
ಶೂಲಪಾಣೇ ನಮಸ್ತೇಽಸ್ತು ನಮಸ್ತೆ ವಿಶ್ವಭಾವನ ।
ನಮಸ್ತೇ ದೇವ ವಿಶ್ವೇಶ ನಮಸ್ತೇ ಶೂರ ನಾಯಕ ।
ಘೋರ ಶಾತಿತ ಪಾಪಾಯ ಚಂಡ ಕ್ರೋಧ ನಮೋಽಸ್ತುತೇ ॥

ಅಪರಿಚ್ಛಿನ್ನನಾಗಿಯೂ ವರಪ್ರದನಾಗಿಯೂ ಪಿನಾಕಪಾಣಿಯಾಗಿಯೂ ಶಾಶ್ವತನಾಗಿಯೂ ಪರಮಾತ್ಮ ಸ್ವರೂಪನಾಗಿಯೂ ಇರುವ ದೇವತಾ ಸಾರ್ವಭೌಮನಾದ ನಿನಗೆ ನಮಸ್ಕಾರಗಳು. ಯಾವಾಗಲೂ ಆಶ್ರಿತರ ಸಂಸಾರ ಬಂಧವನ್ನು ತೊಲಗಿಸುವ ಲೋಕಾಧಿಪತಿಯಾದ ನಿನಗೆ ನಮಸ್ಕಾರಗಳು. ಎಲೈ, ದೇವನೇ ಎಲ್ಲರಿಗೂ ಜ್ಞಾನಪ್ರದನಾಗಿರುವ ಪುರುಷಶ್ರೇಷ್ಠನೆಂದರೆ ನೀನೊಬ್ಬನೇ. ಪದ್ಮ ಗರ್ಭನೂ ಎಲ್ಲರ ಹೃದಯ ಪದ್ಮವಾಸಿಯೂ, ಘೋರ ಪಾಪನಾಯಕನೂ, ಚಂಡ ಕೋಪಿಯೂ ನೀನೇ ಆಗಿದ್ದಿಯೇ. ನಿನಗೆ ನಮಸ್ಕಾರ. ಎಲೈ ವಿಶ್ವನಾಥನೇ, ಶೂರಾಗ್ರಗಣ್ಯನೇ, ಶೂಲಪಾಣಿಯೇ, ವಿಶ್ವೋತ್ಪತ್ತಿ ಕಾರಣನೇ, ನಿನಗೆ ಅನಂತ ನಮಸ್ಕಾರ. ಋಷಿಗಳಿಂದಲೂ ಬ್ರಹ್ಮನಿಂದಲೂ ಹೀಗೆ ಸ್ತೋತ್ರ ಮಾಡಲ್ಪಟ್ಟ ಶಂಕರನು ಋಷಿಗಳನ್ನು ಕುರಿತು ಹೇಳಿದನು.

''ಬನ್ನಿರಿ ಆ ಲಿಂಗವು ಪುನಃ ನಿಮಗೆ ದೊರಕುತ್ತದೆ. ನನಗೆ ಪ್ರೀತಿಯಾಗಬೇಕಾದರೆ ನನ್ನ ಮಾತಿನ ಪ್ರಕಾರ ಆ ಲಿಂಗವನ್ನು ಪುನಃ ಪ್ರತಿಷ್ಠೆ ಮಾಡಿರಿ. ನನ್ನ ಲಿಂಗವನ್ನು

ಭಕ್ತಿಯಿಂದ ಯಾರು ಪೂಜಿಸುತ್ತಾರೋ ಅವರಿಗೆ ಯಾವ ಮನೋರಥವೂ ದುರ್ಲಭ ವಾಗಿ ಆಗುವದಿಲ್ಲ. ಯಾವ ಕಾಲದಲ್ಲಾದರೂ ಮನೋರಥ ಸಿದ್ಧಿಯನ್ನೂ ಹೊಂದುತ್ತಾರೆ. ಬುದ್ಧಿಪೂರ್ವಕವಾಗಿ ಅನೇಕ ಪಾಪಗಳನ್ನು ಮಾಡಿದಾಗ್ಯೂ ಈ ಲಿಂಗಪೂಜೆಯಿಂದ ಅವನು ಶುದ್ಧನಾಗುತ್ತಾನೆ. ಇದರಲ್ಲಿ ಸಂಶಯವಿಲ್ಲ.

೯೩೩. ಯುಷ್ಮಾಭಿಃ ಪಾತಿತಂ ಲಿಂಗಂ ತಾರಯಿತ್ವಾ ಮಹತ್ಸರಃ ।
ಸನ್ನಿಹತ್ಯಾಂ ತು ವಿಖ್ಯಾತಂ ತಸ್ಮಿನ್ ಶೀಘ್ರಂ ಪ್ರತಿಷ್ಠಿತಮ್।

ನಿಮ್ಮಿಂದ ಕೆಡಹಲ್ಪಟ್ಟ ಪ್ರಖ್ಯಾತವಾದ ಆ ಲಿಂಗವು ಸರೋವರವನ್ನು ದಾಟಿ ಸನ್ನಿಹಿತ್ಯ ಕ್ಷೇತ್ರದಲ್ಲಿ ಪ್ರತಿಷ್ಠಿತವಾಗಿದೆ. ಎಲೈ ಬ್ರಾಹ್ಮಣರೇ, ಆ ಲಿಂಗವನ್ನು ಪೂಜಿಸಿ ಅದರ ಅನುಗ್ರಹದಿಂದ ನಿಮ್ಮ ಇಷ್ಟಸಿದ್ಧಿಯನ್ನು ಹೊಂದಿರಿ. ಲೋಕದಲ್ಲೆಲ್ಲ ದೇವತೆಗಳು ಸಹ ಸ್ಥಾಣು ಎಂಬ ಹೆಸರಿನಿಂದ ಆ ಲಿಂಗವನ್ನು ಪೂಜಿಸತಕ್ಕದ್ದು. ಸ್ಥಾಣೇಶ್ವರದಲ್ಲಿ ನೆಲೆಸಿದುದರಿಂದ ಆ ಲಿಂಗಕ್ಕೆ ಸ್ಥಾಣ್ವೇಶ್ವರವೆಂಬ ಹೆಸರು ಬಂದಿದೆ. ಆ ಸ್ಥಾಣು ಲಿಂಗವನ್ನು ಸ್ಮರಿಸಿದವರು ಸರ್ವ ಪಾಪಗಳಿಂದ ಮುಕ್ತರಾಗುವರು. ಶುದ್ಧ ದೇಹರಾಗಿ ದರ್ಶನ ಮಾಡಿದಲ್ಲಿ ಮೋಕ್ಷವನ್ನು ಹೊಂದುತ್ತಾರೆ.

೯೩೪. ತಸ್ಮಾದ್ದಾರು ವನಾಲ್ಲಿಂಗಂ ನೇತುಂ ಸಮುಪಚಕ್ರಮುಃ ।
ಅಶಕ್ತಾಃ ತಂ ಚಾಲಯಿತುಂ ತಂ ದೇವಾಃ ಋಷಿಭಿಃ ಸಹ ॥

ಈ ಪ್ರಕಾರ ಶಂಕರನಿಂದ ಹೇಳಲ್ಪಟ್ಟ ಆ ಋಷಿಗಳು ಬ್ರಹ್ಮನೊಡಗೂಡಿ ಆ ದಾರುವನದಿಂದ ಲಿಂಗವನ್ನು ಒಯ್ಯಲು ಪ್ರಯತ್ನಿಸಿದರು. ಆಗ ದೇವತೆಗಳು ಋಷಿಗಳು ಸಹ ಆ ಲಿಂಗವನ್ನು ಅಲ್ಲಾಡಿಸಲು ಅಶಕ್ತರಾಗಿ ಬಹಳ ಶ್ರಮಪಟ್ಟು ಸಾಧ್ಯವಿಲ್ಲದೆ ಚತುರ್ಮುಖನಲ್ಲಿ ಶರಣಾಗತರಾದರು. ಆಗ ಬಹಳ ಶ್ರಾಂತರಾಗಿದ್ದ ಅವರನ್ನು ಕುರಿತು ಚತುರ್ಮುಖನು ''ನಿಮ್ಮ ಈ ಶ್ರಮದಿಂದ ಪ್ರಯೋಜನವಿಲ್ಲ.

೯೩೫. ಕಿಂ ವಾ ಶ್ರಮೇಣ ಮಹತಾ ನ ಯೂಯಂ ವಹನಕ್ಷಮಾಃ ।
ಸ್ವೇಚ್ಛಯಾ ಪತಿತಂ ಲಿಂಗಂ ದೇವ ದೇವೇನ ಶಂಭುನಾ ॥

ನೀವು ಎಷ್ಟು ಶ್ರಮ ಪಟ್ಟರೂ ನಿಮ್ಮಿಂದ ಇದನ್ನು ವಹಿಸುವ ಕೆಲಸವು ಸಾಧ್ಯವಾಗುವದಿಲ್ಲ. ದೇವದೇವನಾದ ಶಂಕರನು ಸ್ವೇಚ್ಛೆಯಿಂದ ಕೆಳಗೆ ಹಾಕಿದ ಈ ಲಿಂಗವನ್ನು ವಹಿಸಲು ಅವನೇ ಸಮರ್ಥ. ಅವನಲ್ಲೇ ನಾವು ಶರಣಾಗತರಾಗೋಣ. ಅವನು ಪ್ರಸನ್ನನಾದಲ್ಲಿ ಅವನೇ ಇದನ್ನು ಒಯ್ಯಬಲ್ಲನು.'' ಹೀಗೆ ಬ್ರಹ್ಮನಿಂದ ಹೇಳಲ್ಪಟ್ಟ ಆ ಋಷಿಗಳೆಲ್ಲರೂ ಅದಕ್ಕೆ ಒಪ್ಪಿ ಆ ಬ್ರಹ್ಮನೊಡನೆ ಕೈಲಾಸ ಪರ್ವತಕ್ಕೆ ಹೋಗಿ ಅಲ್ಲಿ ರುದ್ರದೇವರ ದರ್ಶನವನ್ನು ಅಪೇಕ್ಷಿಸುವ ವೇಳೆಗೆ ಅಲ್ಲಿ ಅವನು ಪ್ರತ್ಯಕ್ಷನಾಗಲೇ ಇಲ್ಲ.

೯೩೬. ನ ಚ ಪಶ್ಯಂತೀ ತೇ ದೇವಂ ತತಶ್ಚಿಂತಾ ಸಮಾನ್ವಿತಾಃ ।
ಬ್ರಹ್ಮಾಣ ಮೂಚುರ್ಮುನಯಃ ಕ್ವ ಸ ದೇವೋ ಮಹೇಶ್ವರಃ॥

ಆಗ ಬಹಳ ಚಿಂತಾಕ್ರಾಂತರಾದ ಆ ಋಷಿಗಳು ''ಮಹೇಶ್ವರನೆಲ್ಲಿ? ನಮಗೆ ಇಲ್ಲಿ ಗೋಚರನಾಗುತ್ತಿಲ್ಲವಲ್ಲ!'' ಎಂದು ಪ್ರಶ್ನೆ ಮಾಡಿದರು.

೯೩೭. ತತೋ ಬ್ರಹ್ಮಾಚಿರಂ ಧ್ಯಾತ್ವಾ ದೇವ ದೇವಂ ಮಹೇಶ್ವರಮ್।
ಹಸ್ತಿ ರೂಪೇಣ ತಿಷ್ಠಂತಂ ಮುನಿಭಿರ್ಮಾನಸಂ ಸ್ತುತಮ್ ॥

ಅನಂತರ ಬ್ರಹ್ಮನು ಬಹಳ ಕಾಲ ಧ್ಯಾನದಿಂದ ಆನೆಯ ರೂಪದಲ್ಲಿ ರುವ ಮುನಿ ಜನಗಳ ಮಾನಸಗೋಚರನಾದ ಆ ಮಹೇಶ್ವರನನ್ನು ತಿಳಿದನು. ಅನಂತರ ಆ ಋಷಿಗಳೆಲ್ಲರೂ ಚತುರ್ಮುಖನೊಡನೆ ಆ ಶಂಕರನು ತಾನಾಗಿ ನೆಲೆಸಿರುವ ಪುಣ್ಯಕರವಾದ ಆ ಸರೋವರಕ್ಕೆ ಹೋಗಿ ಸೇರಿದರು. ಅಲ್ಲಿ ಅವರು ಎಲ್ಲಿ ಹುಡುಕಿದರೂ ಆ ದೇವನನ್ನು ನೋಡಲಾಗಲಿಲ್ಲ. ಅನಂತರ ಬ್ರಹ್ಮನೊಡನೆ ಚಿಂತಾಕ್ರಾಂತರಾದ ಋಷಿಗಳು ಪ್ರಸನ್ನಳಾಗಿಯೂ, ಕಮಂಡಲು ಭೂಷಿತಳಾಗಿಯೂ ಇದ್ದ ದೇವಿಯನ್ನು ನೋಡಿದರು. ಆಗ ಸಂತುಷ್ಟರಾದ ಋಷಿಗಳು ದೇವಿಯನ್ನು ಕುರಿತು ಹೀಗೆ ಹೇಳುತ್ತಾರೆ- ''ಎಲೈ ತಾಯಿಯೇ, ನಾವು ಬಹಳ ಶ್ರಮದಿಂದ ಎಲ್ಲೆಲ್ಲಿಯೂ ದೇವೇಶನನ್ನು ಹುಡುಕುತ್ತಿದ್ದೇವೆ. ಸಮ ದೃಷ್ಟಿಯುಳ್ಳ ಆ ಮಹೇಶ್ವರನು ಎಲ್ಲಿದ್ದಾನೆ? ಅವನನ್ನು ಎಲ್ಲಿ ನೋಡಬಹುದು?'' ಎಂದು ಕೇಳಿಕೊಳ್ಳುತ್ತಿರುವ ಆ ಋಷಿಗಳನ್ನು ನೋಡಿ ದೇವಿಯು ದಯೆಯಿಂದ-

೯೩೮. ಅತ್ರೈವಾದ್ಯ ಮಹಾಭಾಗಾಸ್ತಂ ದ್ರಕ್ಷ್ಯಥ ಮಹೇಶ್ವರಮ್ ।
ಪೀಯತಾಮಮೃತಂ ದೇವಾಸ್ತತೋ ಜ್ಞಾಸ್ಯಥ ಶಂಕರಮ್ ॥

ಎಲೈ, ಭಾಗ್ಯಶಾಲಿಗಳೇ ಇಲ್ಲಿಯೇ ನೀವು ಅವನನ್ನು ನೋಡುವಿರಿ. ಈ ಅಮೃತವನ್ನು ಪಾನ ಮಾಡಿರಿ. ಅನಂತರ ಶಂಕರನು ನಿಮಗೇ ಗೋಚರವಾಗುತ್ತಾನೆ ಎಂದು ಹೇಳಲಾಗಿ ಆ ದೇವಿಯ ಮಾತನ್ನು ಕೇಳಿ ದೇವತೆಗಳೆಲ್ಲರೂ ಅಲ್ಲಿಯೇ ಸುಖವಾಗಿ ಕುಳಿತು ದೇವಿಯಿಂದ ದತ್ತವಾದ ಅಮೃತವನ್ನು ಪಾನ ಮಾಡಿದರು.

೯೩೯. ಕ್ವ ಸ ದೇವ ಇಹಾಯಾತೋ ಹಸ್ತಿರೂಪಧರಃ ಸ್ಥಿತಃ ।
ದರ್ಶಿತಶ್ಚ ತದಾ ದೇವ್ಯಾ ಸರೋಮಧ್ಯೇ ವ್ಯವಸ್ಥಿತಃ ।

ಹೀಗೆ ಅಮೃತಪಾನದಿಂದ ಸುಖಿತರಾದ ಆ ಋಷಿಗಳು ದೇವಿಯಾದ ಪರಮೇಶ್ವರಿ ಯನ್ನು ಕುರಿತು ಹಸ್ತಿಯ (ಆನೆಯ) ರೂಪದಿಂದ ಬಂದ ಆ ದೇವನು ಇಲ್ಲಿ ಎಲ್ಲಿ ಇದ್ದಾನೆ? ಎಂದು ಪ್ರಶ್ನೆ ಮಾಡಲಾಗಿ ದೇವಿಯು ಸರೋವರದ ಮಧ್ಯದಲ್ಲಿರುವ ಆ ಶಂಕರನನ್ನು ತೋರಿಸಿದಳು. ಆಗ ದೇವತೆಗಳೆಲ್ಲರೂ ಇಂದ್ರಾದಿಗಳೊಡನೆ ಸಂತೋಷದಿಂದ ಈಶ್ವರನನ್ನು ನೋಡಿ ಬ್ರಹ್ಮನನ್ನು ಮುಂದಿಟ್ಟು ಹೀಗೆ ಪ್ರಾರ್ಥಿಸಿದರು. ''ಎಲೈ ಮಹಾದೇವನೇ ಲೋಕ ಸೇವ್ಯವಾದ ಆ ಲಿಂಗವು ನಿನ್ನಿಂದಲೇ ಬಿಡಲ್ಪಟ್ಟಿರು ವುದರಿಂದ ಪುನಃ ಅದನ್ನು ತರಲು ನೀನೇ ಸಮರ್ಥನೇ ಹೊರತು ಮತ್ತಾರಿಂದಲೂ ಆ ಕೆಲಸವು ಸಾಧ್ಯವಾಗು ವಂತಿಲ್ಲ'' ಬ್ರಹ್ಮಾದಿ ದೇವತೆಗಳಿಂದ ಹೀಗೆ ಹೇಳಲ್ಪಟ್ಟ ಶಂಕರನು ಋಷಿಗಳೊಡನೆ ಅದೇ ದಾರುವನ ದೇವಸ್ಥಾನಕ್ಕೆ ಹೋಗಿ ತಾನು ಗಜರೂಪಧಾರಿಯಾಗಿ ತನ್ನ ಸೊಂಡಲಿನಿಂದ ಆ ಲಿಂಗವನ್ನು ಲೀಲಾ ಮಾತ್ರದಿಂದ ತೆಗೆದುಕೊಂಡು ಬಂದನು. ದೇವತೆಗಳಿಂದ ಸ್ತೋತ್ರ ಮಾಡಲ್ಪಡುತ್ತ ಸರೋವರದ ಪಶ್ಚಿಮ ಪಾರ್ಶ್ವದಲ್ಲಿಟ್ಟನು. ಆಗ ದೇವತೆಗಳು ಋಷಿಗಳೂ ಎಲ್ಲರೂ ತಮ್ಮ ಪ್ರಯತ್ನವು ಸಫಲವಾಯಿತೆಂದು ತಿಳಿದು ಕೃತ ಕೃತ್ಯತೆ ಯಿಂದ ಸಂತುಷ್ಟರಾಗಿ ಮಹೇಶ್ವರನನ್ನು ಈ ರೀತಿ ಸ್ತೋತ್ರ ಮಾಡಿದರು.

ನಮಸ್ತೇ ಪರಮಾತ್ಮನ್, ಅನಂತಯೋನೇ, ಲೋಕ ಸಾಕ್ಷಿನ್, ಪರಮೇಷ್ಠಿನ್ ಭಗವನ್, ಸರ್ವಜ್ಞ, ಕ್ಷೇತ್ರಜ್ಞ, ಸರ್ವೇಶ್ವರ, ಮಹಾ ವಿರಿಂಚೇ, ಮಹಾವಿಭೂತೇ, ಮಹಾಪುರುಷ, ಸರ್ವಭೂತಾವಾಸ, ಮನೋನಿವಾಸ, ಆದಿದೇವ, ಮಹಾದೇವ, ಸದಾಶಿವ, ಈಶಾನ, ದುರ್ವಿಜ್ಞೇಯ, ದುರಾರಾಧ್ಯ, ಮಹಾಭೂತೇಶ್ವರ, ಪರಮೇಶ್ವರಿ.

ಮಹಾ ಯೋಗೇಶ್ವರ, ತ್ರ್ಯಂಬಕ, ಮಹಾಯೋಗಿನ್, ಪರಬ್ರಹ್ಮ, ಪರಮ ಜ್ಯೋತಿಃ, ಬ್ರಹ್ಮ ವಿದುತ್ತಮ, ಓಂಕಾರ, ವಷಟ್‌ಕಾರ, ಸ್ವಾಹಾಕಾರ, ಸ್ವಧಾಕಾರ, ಪರಮಕಾರಣ, ಸರ್ವಗತ, ಸರ್ವಶಕ್ತ, ಸರ್ವ ದೇವ, ಅಜ, ಸಹಸ್ರಾರ್ಚಿಃ, ಸುಧಾಮನ್, ಹರಧಾಮ, ವಂಶವರ್ತ, ಸಂವರ್ತ, ಸಂಕರ್ಷಣ, ವಡವಾನಲ, ಅಗ್ನಿಷ್ಟೋಮಾತ್ಮಕ, ಪವಿತ್ರ, ಮಹಾಪವಿತ್ರ, ಮಹಾಮೇಘ, ಮಹಾಕಾಮಹನ್, ಹಂಸ, ಪರಮಹಂಸ, ಮಹಾರಾಜಿಕ, ಮಹೇಶ್ವರ, ಮಹಾಕಾಮುಕ, ಮಹಾ ಹಂಸ, ಭವಕ್ಷಯಕರ, ಸುರಸಿದ್ಧಾರ್ಚಿತ, ಹಿರಣ್ಯವಾಹ, ಹಿರಣ್ಯರೇತಃ, ಹಿರಣ್ಯನಾಭ, ಹಿರಣ್ಯಗ್ರಕೇಶ ಮುಂಜಿಕೇಶಿನ್. ಸರ್ವಲೋಕವರಪ್ರದ, ಸರ್ವಾನುಗ್ರಹಕರ, ಕಮಲೇಶಯ, ಹೃದಯೇಶಯ, ಜ್ಞಾನೋದಧೇ, ಶಂಭೋ, ಚ ವಿಭೋ, ಮಹಾಯಜ್ಞ, ಮಹಾಯಾಜ್ಞಿಕ, ಸರ್ವಯಜ್ಞಮಯ, ಸರ್ವಯಜ್ಞ ಸಂಸ್ತುತ, ನಿರಾಶ್ರಯ, ಸಮುದ್ರೇಶ, ಅತ್ರಿಸಂಭೂತ, ಭಕ್ತಾನುಕಂಪಕ, ಅಭಗ್ನಯೋಗ, ಯೋಗಧರ, ವಾಸುಕಿಮಹಾವಿದ್ಯೋತಿತ ವಿಗ್ರಹ, ಹರಿತನಯನ, ತ್ರಿಲೋಚನ, ಜಟಾಧರ, ನೀಲಕಂಠ, ಚಂದ್ರಾರ್ಧಧರ, ಉಮಾಶರೀರಾರ್ಧಧರ.

೯೪೦. ಶೂಲಧರ ಪಿನಾಕಧರ ಖಡ್ಗ ಚರ್ಮಧರ ಗಜ ಚರ್ಮಧರ ।
ದುಸ್ತರ ಸಂಸಾರ ಮಹಾ ಸಂಹಾರಕರ ಪ್ರಸೀದ ಭಕ್ತಜನ ವತ್ಸಲ ॥

ಎಲೈ ಪರಮಾತ್ಮ ಸ್ವರೂಪನೇ, ನಾನಾ ವಿಧವಾದ ಪ್ರಾಣಿಗಳನ್ನು ಆಶ್ರಯಿಸಿ ಉತ್ಪತ್ತಿ ಹೊಂದುತ್ತಿರುವ ಸಾಮರ್ಥ್ಯವುಳ್ಳವನೇ, ಪ್ರಪಂಚವನ್ನೆಲ್ಲ ಪ್ರತ್ಯಕ್ಷೀಕರಿಸುವ ಶಕ್ತಿಯುಳ್ಳವನೇ, ಉತ್ತಮಸ್ಥಾನವಾಸಿಯೇ, ಷಡ್ಗುಣೈಶ್ವರ್ಯ ಪರಿಪೂರ್ಣನಾದವನೇ, ಸರ್ವಜ್ಞನೇ, ಶರೀರಿಯಾಗಿಯೂ ಇರುವವನೇ, ಜ್ಞಾನಮಾತ್ರಗಮ್ಯನೇ, ಸರ್ವ ನಿಯಾಮಕನೇ, ಸರ್ವೋತ್ತಮನಾದ ಸೃಷ್ಟಿಕರ್ತನೇ, ಮಹದೈಶ್ವರ್ಯಶಾಲಿಯೇ, ಉತ್ತಮ ಕ್ಷೇತ್ರರೂಪನೇ, ಪುರುಷಾಗ್ರಗಣ್ಯನೇ, ಸರ್ವಪ್ರಾಣಿಗಳಲ್ಲೂ ವಾಸಿಸುವವನೇ, ಸದಾ ಶಿವಸ್ವರೂಪಿಯೇ, ಪ್ರಭುವೇ, ತಿಳುವಳಿಕೆಗೆ ನಿಲುಕದಿರುವ ಅಪರಿಮಿತ ಶಕ್ತಿಶಾಲಿಯೇ ಕ್ಲೇಶ ಸಾಧ್ಯವಾದ ಪ್ರೀತಿಯುಳ್ಳವನೇ, ಪಂಚ ಮಹಾಭೂತಗಳಿಗೂ ನಿಯಾಮಕ ನಾಗಿರುವವನೇ, ಪರಮೇಶ್ವರನೇ, ನಿನಗೆ ಅನಂತ ನಮಸ್ಕಾರಗಳು. ಎಲೈ ಮಹಾಸಿದ್ಧಿಗಳಿಗೆ ನಿಯಾಮಕನೇ, ತ್ರಿನೇತ್ರನೇ, ಅಪರಿಮಿತ ಶಕ್ತಿ ಶಾಲಿಯೇ, ಪರಬ್ರಹ್ಮ ಸ್ವರೂಪಿಯೇ, ಪವಿತ್ರ ತೇಜೋಮೂರ್ತಿಯೇ, ಬ್ರಹ್ಮವಿದಗ್ರೇಸರನೇ ಓಂಕಾರ, ವಷಟ್ಕಾರ ಸ್ವಾಹಾಕಾರ ಸ್ವಧಾಕಾರ ರೂಪದಿಂದ ಶ್ರುತಿ ಪ್ರಸಿದ್ಧ ಮೂರ್ತಿಯೇ, ಕಾರಣ ಸ್ವರೂಪನೇ, ಸರ್ವವ್ಯಾಪಕನೇ, ಸರ್ವ ಸಾಕ್ಷಾತ್ಕಾರಶಾಲಿಯೇ, ಸರ್ವಶಕ್ತಿಯೇ, ಸರ್ವದೇವ ಸ್ವರೂಪಿಯೇ, ಕರ್ಮಕೃತ ಉತ್ಪತ್ತಿರಹಿತನೇ. ಅನಂತ

ತೇಜೋಮೂರ್ತಿಯೇ, ಸುಂದರ ದೇಹಶಾಲಿಯೇ, ಹರಸ್ವರೂಪನೇ, ವಂಶ ಪ್ರವರ್ತಕನೇ, ಪ್ರಳಯಕಾಲದ ಕಾಲ ಸ್ವರೂಪಿಯೇ, ಸಂಕರ್ಷಣರೂಪನೇ, ಬಡಬಾಗಿ ಯಂತೆ ದುಸ್ಸಹ ಸ್ವರೂಪನೇ, ಪವಿತ್ರ ಮೂರ್ತಿಯೇ, ಮೇಘದಂತೆ ಸರ್ವಸಾಮ್ಯ ವುಳ್ಳವನೇ ಅಥವಾ ಮಹೋದಾರನೇ, ಅಜೇಯನಾದ ಮನ್ಮಥನನ್ನು ಸಂಹರಿಸಿದವನೇ, ಹಂಸಸ್ವರೂಪನೇ, ಪರಮಹಂಸ ಸ್ವರೂಪನೇ, ನಿನಗೆ ಅನಂತ ನಮಸ್ಕಾರಗಳು.

ಎಲೈ ಗಣದೇವತಾ ಸ್ವರೂಪನೇ, ಮಹಾಪ್ರಭುವೇ, ಮಹಾ ಕಾಮುಕ ಸ್ವಭಾವನೇ ಪರಮಾತ್ಮನೇ, ಸಂಸಾರ ನಾಶಕನೇ, ಸುರಸಿದ್ಧಾದಿಗಳಿಂದ ಸೇವಿಸಲ್ಪಡುವವನೇ, ಸಕಲ ದ್ರವ್ಯಪ್ರದನೇ, ರೇತೋರೂಪದಿಂದ ತೇಜಸ್ಸನ್ನು ಧರಿಸಿರುವವನೇ ಅಥವಾ ಅಗ್ನಿಸ್ವರೂಪನೇ, ಹಿತವಾಗಿಯೂ ರಮಣೀಯವಾಗಿಯೂ ಇರುವ ನಾಭಿಪ್ರದೇಶ ವುಳ್ಳವನೆ, ಸ್ವರ್ಣದಂತೆ ಜ್ವಲಿಸುವ ಕೇಶಾಗ್ರಹವುಳ್ಳವನೇ, ಸೂಕ್ಷ್ಮ ದೀರ್ಘಕೇಶ ವುಳ್ಳವನೇ, ಸಕಲ ಜನ ವರಪ್ರದನೇ, ಎಲ್ಲರಿಗೂ ಅನುಗ್ರಹಪ್ರದನಾಗಿರುವವನೇ, ಕಮಲಶಾಯಿಯೇ, ಎಲ್ಲರ ಅಥವಾ ಯೋಗಿಗಳ ಹೃದಯದಲ್ಲಿ ವಾಸಿಸುವವನೇ, ಮಂಗಲ ರೂಪನೇ, ಸರ್ವಸಮುಚ್ಚಯ ಸ್ವರೂಪನೇ, ಪ್ರಭುವೇ, ಯಜ್ಞ ರೂಪವಾದ ಪರಬ್ರಹ್ಮೋಪಾಸನೆಯುಳ್ಳವನೇ, ಯಾಜ್ಞಿಕ ಸ್ವರೂಪನೇ, ಸರ್ವಯಜ್ಞಗಳಲ್ಲಿಯೂ ದೇವತಾರೂಪದಿಂದ ತನ್ಮಯನಾಗಿರುವವನೇ, ಎಲ್ಲಾ ಯಜ್ಞದಲ್ಲಿಯೂ ಸ್ತುತಿಸಲ್ಪಡು ವವನೇ, ಜ್ಞಾನ ಸಮುದ್ರನೇ, ಆಶ್ರಯಾಂತರ ರಹಿತನೇ, ಸಮುದ್ರ ನಾಯಕನೇ, ಅತ್ರಿಯಿಂದ ಅವತರಿಸಿದವನೇ, ವಾಸುಕಿ ರೂಪನೇ, ಅಗ್ನಿ ಸಂಬಂಧದಿಂದ ಕಪ್ಪಾದ ಕಣ್ಣುಳ್ಳವನೇ, ಮೂರು ಕಣ್ಣುಗಳುಳ್ಳವನೇ, ಜಟಾಧಾರಿಯೇ, ಕಂಠಗತವಾದ ವಿಷದಿಂದ ಕಪ್ಪಾದ ಕತ್ತುಳ್ಳವನೇ, ಅರ್ಧಚಂದ್ರಧಾರಿಯೇ, ಪಾರ್ವತಿಯ ಶರೀರಾರ್ಧಧಾರಿಯೇ, ಅಸಾಧಾರಣ ಶೂಲಾಯುಧಧಾರಿಯೇ, ಪಿನಾಕ ಧನುರ್ಧಾರಿಯೇ, ಖಡ್ಗ ಮೃಗದ ಚರ್ಮವನ್ನು ಧರಿಸಿರುವವನೇ, ಗಜ ಚರ್ಮಧಾರಿಯೇ, ದಾಟಲಶಕ್ಯವಾದ ಸಂಸಾರಕ್ಕೆ ಮಹಾ ಸಂಹಾರವನ್ನು ಉಂಟುಮಾಡುವವನೇ, ಭಕ್ತವತ್ಸಲನೇ, ಪ್ರಸನ್ನನಾಗು.

೬೪೧. ಏವಂ ಸ್ತುತೋದೇವಗಣೈಃ ಸುಭಕ್ತ್ಯಾ ।
ಸ ಬ್ರಹ್ಮ ಮುಖ್ಯೈಶ್ಚ ಪಿತಾಮಹೇನ ॥
ತ್ಯಕ್ತ್ವಾ ತದಾ ಹಸ್ತಿರೂಪಂ ಮಹಾತ್ಮಾ ।
ಲಿಂಗಂ ತದಾ ಸನ್ನಿಧಾನಂ ಚಕಾರ ॥

ಹೀಗೆ ಬ್ರಹ್ಮದೇವರೇ ಮೊದಲಾದ ದೇವತಾ ವೃಂದವು ಸ್ತೋತ್ರ ಮಾಡಿದ್ದನ್ನು ಕೇಳಿ ಪರಿತುಷ್ಟನಾದ ಪರಮೇಶ್ವರನು ತನ್ನ ಆನೆಯ ರೂಪವನ್ನು ತೊರೆದು ತನ್ನ ನಿಜರೂಪದಿಂದ ಲಿಂಗದಲ್ಲಿ ಸನ್ನಿಹಿತನಾದನು.

ವಾಮನ ಮಹಾಪುರಾಣದಲ್ಲಿ ರುದ್ರನ ಲಿಂಗ ಪ್ರವೇಶ ಎಂಬ
ನಲತ್ನಾಲ್ಕನೇಯ ಅಧ್ಯಾಯವು ಮುಗಿದುದು.

—o—

## ಸ್ಥಾಣುಲಿಂಗದ ಮಹಿಮೆ

**ಅಧ್ಯಾಯ - ೪೫**

**೯೪೧. ಅಥೋವಾಚ ಮಹಾದೇವೋ ದೇವಾನ್ ಬ್ರಹ್ಮಪುರೋಗಮಾನ್।**
**ಋಷೀಣಾಂ ಚೈವ ಪ್ರತ್ಯಕ್ಷಂ ತೀರ್ಥ ಮಾಹಾತ್ಮ್ಯ ಮುತ್ತಮಮ್॥**

ಅನಂತರ ಆ ಲಿಂಗದಲ್ಲಿ ಸಾನ್ನಿಧ್ಯವನ್ನು ಹೊಂದಿದ ಮಹಾದೇವನು ಬ್ರಹ್ಮನೇ ಮೊದಲಾದ ದೇವತೆಗಳಿಗೂ ತಾನೇ ಪ್ರತ್ಯಕ್ಷನಾಗಿ ನಿಂತು ಆ ತೀರ್ಥದ ಮಾಹಾತ್ಮ್ಯವನ್ನು ತಿಳಿಸಿ ಹೇಳಿದನು. ''ನನ್ನ ಈ ಲಿಂಗದ ಸಾನ್ನಿಧ್ಯವಿರುವದರಿಂದ ಈ ಸರೋವರವು ಸನ್ನಿಹಿತ ಎಂಬ ಹೆಸರಿನಿಂದ ಕರೆಯಲ್ಪಡುತ್ತದೆ. ಇದು ನನ್ನಿಂದಲೇ ಪ್ರತಿಷ್ಠಿತವಾಗಿರುವದರಿಂದ ಮೋಕ್ಷದಾಯಕವೂ, ಅತ್ಯಂತ ಪುಣ್ಯಪ್ರದವೂ ಆಗಿರುತ್ತದೆ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಯಾರೇ ಇರಲಿ, ಈಲಿಂಗದ ದರ್ಶನ ಮಾತ್ರದಿಂದಲೇ ಪರಮ ಪದವನ್ನು ಪಡೆಯುತ್ತಾರೆ. ಸಾಗರದವರೆಗೆ ಹಬ್ಬಿರುವ ಎಲ್ಲ ತೀರ್ಥಗಳೂ ಸರೋವರಗಳೂ ಪ್ರತಿದಿನವೂ ಸೂರ್ಯನು ನಡುನೆತ್ತಿಗೆ ಬಂದಾಗ ಈ ಸ್ಥಾಣು ತೀರ್ಥದಲ್ಲಿ ಬಂದು ಪರಸ್ಪರ ಮೇಲನವನ್ನು ಹೊಂದುತ್ತವೆ. ದೇವತೆಗಳು ಹಿಂದೆ ಮಾಡಿದ ಸ್ತೋತ್ರದಿಂದ ಭಕ್ತಿಪೂರ್ವಕವಾಗಿ ನನ್ನನ್ನು ಸ್ತುತಿಸುವರಿಗೆ ನಾನು ನಿತ್ಯವೂ ಸುಲಭನಾಗಿರುವೆನು. ಇದಕ್ಕೆ ಸಂಶಯ ಬೇಡ.'' ಹೀಗೆ ಹೇಳಿ ಪೂಜ್ಯನಾದ ಪ್ರಭು ಪರಮೇಶ್ವರನು ಅಲ್ಲಿಯೇ ಅಂತರ್ಧಾನ ಹೊಂದಿದನು. ಅನಂತರ ಎಲ್ಲ ದೇವತೆಗಳೂ ಋಷಿಗಳೂ ತಮ್ಮ ತಮ್ಮ ಸ್ಥಾನಗಳಿಗೆ ತೆರಳಿದರು. ಅನಂತರ ಪರಮೇಶ್ವರನ ವರದ ಪ್ರಭಾವದಿಂದ ಸ್ಥಾಣು ಲಿಂಗದ ಮಹಿಮೆಯು ಅತ್ಯಧಿಕವಾಗಿ ಭೂಮಂಡಲದಲ್ಲಿ ಬೆಳೆಯಿತು.

**೯೪೨. ತತೋ ನಿರಂತರಂ ಸ್ವರ್ಗಂ ಮಾನುಷ್ಯೈರ್ಮಿಶ್ರಿತಂ ಕೃತಮ್ ।**
**ಸ್ಥಾಣು ಲಿಂಗಸ್ಯ ಮಾಹಾತ್ಮ್ಯ ದರ್ಶನಾತ್ಸ್ವರ್ಗಮಾಪ್ನುಯುಃ ॥**

ಆ ಸನ್ನಿಹಿತ ಕ್ಷೇತ್ರದಲ್ಲಿಯ ಸ್ಥಾಣುಲಿಂಗದ ಮಹಾತ್ಮ್ಯವನ್ನು ಕೇಳಿ ಅದರ ದರ್ಶನವನ್ನು ತೆಗೆದುಕೊಂಡವರೆಲ್ಲರೂ ಪುಣ್ಯಜೀವಿಗಳಾಗಿ ಸ್ವರ್ಗಕ್ಕೆ ಹೋಗ ತೊಡಗಿದರು. ಇದರಿಂದ ಭೂಲೋಕದಲ್ಲಿಯ ಅಸಂಖ್ಯ ಜನರು ಈ ಕ್ಷೇತ್ರಕ್ಕೆ ಬಂದು ಲಿಂಗ ದರ್ಶನವನ್ನು ತೆಗೆದುಕೊಂಡು ಸ್ವರ್ಗಕ್ಕೆ ಧುಮಕತೊಡಗಿದರು. ಸ್ವರ್ಗದ ತುಂಬ ಮಾನವರದೇ ಕೋಲಾಹಲವಾಗಿ ಹೋಯಿತು. ಅಮರಾವತಿಯಲ್ಲಿ ನೆರೆಯುತ್ತಲಿರುವ ಈ ಮನುಷ್ಯ ಸಂದಣಿಯನ್ನು ಕಂಡು ವೃಂದಾರಕರೆಲ್ಲರೂ ಭಯಭ್ರಾಂತರಾಗಿ ಸತ್ಯಲೋಕಕ್ಕೆ ಹೋಗಿ ಚತುರ್ಮುಖನಿಗೆ ಮೊರೆ ಹೊಕ್ಕರು.

''ಬಂದ ಕಾರಣವೇನು?'' ಎಂದು ಕೇಳಿದ ವೃಂದಾರಕರಿಗೆ ಆ ವಾಣೀಪತಿ. ''ಪಿತಾಮಹನೇ ನಮಗೆ ನರರಿಂದ ಭಯ ಉಂಟಾಗಿದೆ. ಕೂಡಲೇ ನಮ್ಮನ್ನು ಆ ಮಾನುಷ ಭಯದಿಂದ ಕಾಪಾಡಿರಿ'' ಎಂದು ಬೇಡಿಕೊಂಡರು. ಆಗ ಬ್ರಹ್ಮದೇವರು ದೇವಲೋಕದ ಒಡೆಯನಾದ ದೇವೇಂದ್ರನನ್ನು ಕುರಿತು ''ಇಂದ್ರನೇ, ನಿಮಗೆ ಹಿತವಾಗಬೇಕಾದರೆ ಆ ಸ್ಥಾಣುಲಿಂಗದಿಂದ ಅಧಿಷ್ಠಿತವಾದ ಸನ್ನಿಹಿತ ಸರೋವರವನ್ನು ಧೂಳಿನಿಂದ ತುಂಬಿಬಿಡು'' ಎಂದು ಉಪಾಯವನ್ನು ಸೂಚಿಸಿದರು.

೯೪೩. ತತೋ ವವರ್ಷ ಭಗವಾನ್ ಪಾಂಸುನಾ ಪಾಕ ಶಾಸನಃ ।
ಸಪ್ತಾಹಂ ಪೂರಯಾಮಾಸ ಸೇಂದ್ರಾ ದೇವಾಸ್ತದಾಸ್ಮೃತಾಃ ।

ವಿಧಾತನ ಸಲಹೆಯ ಮೇರೆಗೆ ಮಹೇಂದ್ರನು ಸಂತತವಾಗಿ ಧೂಳಿಯ ಮಳೆಯನ್ನು ಕರೆಯತೊಡಗಿದನು. ಹೀಗೆ ಎಲ್ಲ ದೇವತೆಗಳೊಂದಿಗೆ ಏಳು ದಿನಗಳವರೆಗೆ ನಿರಂತರ ಧೂಳಿ ವೃಷ್ಟಿಯನ್ನು ಮಾಡಿ ಆ ಕ್ಷೇತ್ರದ ಪರಿಸರವನ್ನೆಲ್ಲ ತುಂಬಿಬಿಟ್ಟನು.

೯೪೪. ತಂ ದೃಷ್ಟ್ವಾ ಪಾಂಸು ವರ್ಷಂ ಚ ದೇವದೇವೋ ಮಹೇಶ್ವರಃ
ಕರೇಣ ಧಾರಯಾಮಾಸ ಲಿಂಗಂ ತೀರ್ಥವಟಂ ತದಾ ॥

ಹಗಲಿರುಳೂ ಎಡೆಬಿಡದೆ ನಡೆದ ಈ ಹುಡಿಪುಡಿಯ ಜಡೆ ಮಳೆಯನ್ನು ಕಂಡು ಮಹೇಶ್ವರನು ಧೂಳಿಯಲ್ಲಿ ಮುಚ್ಚಿ ಹೋಗದಂತೆ ಆ ವಟುವನ್ನೂ ಮತ್ತೂ ತನ್ನ ಲಿಂಗವನ್ನೂ ಕೈಯಿಂದ ಮೇಲಕ್ಕೆ ಎತ್ತಿ ಹಿಡಿದನು. ಆಗ ಆ ಸರೋವರದಲ್ಲಿ ಇದ್ದ ನೀರು ಪುಣ್ಯತಮವಾದ ಪಾದ್ಯವಾಗಿ ಪರಿಣಮಿಸಿತು. ಈ ಶಿವ ಪಾದೋದಕ ತೀರ್ಥದಲ್ಲಿ ಸ್ನಾನ ಮಾಡಿದವನು ಸರ್ವ ತೀರ್ಥಗಳಲ್ಲಿ ಅವಗಾಹನದ ಪುಣ್ಯವನ್ನು ಪಡೆಯುತ್ತಾನೆ. ಈ ವಟ ವೃಕ್ಷಕ್ಕೂ ಮತ್ತೂ ಶಿವಲಿಂಗಕ್ಕೂ ನಡುವಿನ ಮಧ್ಯಂತರ ಸ್ಥಾನದಲ್ಲಿ ಶ್ರಾದ್ಧ ಮಾಡಿದವನಿಗೆ ಪಿತೃಗಳು ಪರಿತುಷ್ಟರಾಗಿ ಇಷ್ಟಾರ್ಥಗಳನ್ನೆಲ್ಲ ನೀಡುತ್ತಾರೆ.

೯೪೫. ಪಾಂಸುನಾ ಸರ್ವಗಾತ್ರಾಣಿ ಸ್ಪೃಶಂತಿ ಶ್ರದ್ಧಯಾನ್ವಿತಾಃ ।
ತೇಽಪಿ ನಿರ್ಧೂತ ಪಾಪಾಶ್ಚ ಪ್ರಯಾತಾ ಬ್ರಹ್ಮಣಃ ಪದಮ್॥

ಆ ಸರೋವರವೆಲ್ಲವೂ ಹುಡಿಪುಡಿಗಳಿಂದ ತುಂಬಿಹೋದದ್ದನ್ನು ಕಂಡು ಎಲ್ಲ ಮುನಿಗಳು ಭಕ್ತಿಯಿಂದ ಲಿಂಗಕ್ಕೆ ತಾಕಿದ ಧೂಳಿರಾಶಿಯ ಕಣಕಣಗಳನ್ನು ಶ್ರದ್ಧೆಯಿಂದ ತಮ್ಮ ಅಂಗಾಂಗಗಳಿಗೆಲ್ಲ ಬಳಿದುಕೊಂಡರು. ಆ ಧೂಳಿಯ ಸ್ಪರ್ಶದಿಂದ ಋಷಿಗಳ ಪಾಪಗಳೆಲ್ಲವೂ ತೊಳೆದುಹೋದವು. ಲಿಂಗಸ್ಪೃಷ್ಟವಾದ ಧೂಳೀ ಕಣಗಳನ್ನು ದೇಹದಲ್ಲಿ ಧರಿಸಿದ ಋಷಿಗಳನ್ನು ದೇವತೆಗಳು ಪೂಜಿಸಿದರು. ಅವರೆಲ್ಲರೂ ಬ್ರಹ್ಮಲೋಕಕ್ಕೆ ಪ್ರಯಾಣಿಸಿದರು. ಮಹಾತ್ಮರಾದ ಅನೇಕ ಸಿದ್ಧರು ಆ ಸ್ಥಾಣು ಲಿಂಗವನ್ನು ಪೂಜಿಸಿ ಎಂದೂ ಮರಳಿಬಾರದ ಮೋಕ್ಷಸಿದ್ಧಿಯನ್ನು ಪಡೆದರು.

೯೪೬. ಏವಂ ಜ್ಞಾತ್ವಾ ತದಾ ಬ್ರಹ್ಮ ಲಿಂಗಂ ಶೈಲಮಯಂ ತದಾ ।
ಆದ್ಯಂ ಲಿಂಗಂ ತದಾ ಸ್ಥಾಪ್ಯ ತಸ್ಯೋಪರಿ ನ್ಯಧೀಯತ ॥

ಈ ಲಿಂಗ ಮಾಹಾತ್ಮ್ಯವನ್ನು ತಿಳಿದು ಚತುರ್ಮುಖನು ಕಲ್ಲಿನ ಮತ್ತೊಂದು ಲಿಂಗವನ್ನು ತಾನೇ ನಿರ್ಮಿಸಿ ಮೊದಲಿನ ಆದ್ಯಲಿಂಗದ ಮೇಲೆ ಪ್ರತಿಷ್ಠಾಪಿಸಿದನು. ಇದರಿಂದ ಮೂಲ ಶಿವಲಿಂಗದ ದರ್ಶನ ಸ್ಪರ್ಶನಗಳು ಜನರಿಗೆ ದುರ್ಲಭವಾಗಿ ದರ್ಶನ ಮಾತ್ರದಿಂದಲೇ ಸ್ವರ್ಗಕ್ಕೆ ಹೋಗುವ ಜನರ ದಟ್ಟಣೆಯು ಕಡಿಮೆಯಾಯಿತು.

೯೪೭. ತತಃ ಕಾಲೇನ ಮಹತಾ ತೇಜಸಾ ತಸ್ಯ ರಂಜಿತಮ್ ।
ತಸ್ಯಾಪಿ ಸ್ಪರ್ಶನಾತ್ ಸಿದ್ಧಾಃ ಪರಂ ಪದಮವಾಪ್ನುಯುಃ ॥

ಆದರೆ ಕಾಲಾಂತರದಿಂದ ಮೂಲಲಿಂಗದ ಸಂತತಸ್ಪರ್ಶದಿಂದ ಬ್ರಹ್ಮ ಪ್ರತಿಷ್ಠಿತ ವಾದ ಶಿಲಾಲಿಂಗದಲ್ಲಿಯೂ ಅದ್ಭುತವಾದ ತೇಜಸ್ಸು ತುಂಬಿ ಅದರ ಮಹಿಮೆ ಮೆರೆಯ

ತೊಡಗಿತು. ಈ ಬ್ರಹ್ಮಕರಾರ್ಚಿತ ಶಿಲಾಲಿಂಗದ ದರ್ಶನ ಸ್ಪರ್ಶನಾದಿಗಳಿಂದಲೂ ಅನೇಕ ಸಿದ್ಧಪುರುಷರು ಪಾವನ ಜೀವಿಗಳಾಗಿ ಮತ್ತೆ ಸ್ವರ್ಗಕ್ಕೆ ಧಾವಿಸತೊಡಗಿದರು. ಪುನಃ ಪ್ರಾರಂಭವಾಯಿತು ಸುರಲೋಕದಲ್ಲಿ ಜನಸಂದಣಿ.

೯೪೮. ತತೋ ದೇವೈಃ ಪುನರ್ಬ್ರಹ್ಮಾ ವಿಜ್ಞಪ್ತೋದ್ವಿಜಸತ್ತಮಾಃ ।
ಏತೇ ಯಾಂತಿ ಪರಾಂ ಸಿದ್ಧಿಂ ಲಿಂಗ ಸಂದರ್ಶನಾತ್ಪರಮ್ ॥

ಆಗ ಮತ್ತೆ ಸುರೇಶ್ವರರೆಲ್ಲರೂ ಬ್ರಹ್ಮದೇವರ ಬಳಿಗೆ ಹೋಗಿ ''ಸ್ವಾಮಿ ನೀವೇನೋ ಮೂಲಲಿಂಗದ ಮೇಲೆ ಶೈಲ ಲಿಂಗ ಸ್ಥಾಪನೆ ಮಾಡಿದಿರಿ. ಆದರೆ ಅದರಂತೆ ಇದರ ದರ್ಶನದಿಂದಲೂ ಜನ ಧೂತಪಾಪರಾಗಿ ಸ್ವರ್ಗಕ್ಕೆ ನುಗ್ಗುತ್ತಿದ್ದಾರೆ. ಮತ್ತೆ ಮೊದಲಿನಂತೆ ಈಗಲೂ ನಾಕಲೋಕದಲ್ಲಿ ನೆಲದೆದೆಯಿಂದ ಮೇಲೆದ್ದು ಬಂದ ನರಮಾನುಷರ ನಿರಂತರ ನೂಕು ನುಗ್ಗಲು. ಇದಕ್ಕೇನಾದರೂ ಉಪಾಯ ಮಾಡಿರಿ'' ಎಂದು ಬೇಡಿಕೊಂಡರು. ಸುರವರರ ಈ ಬೇಡಿಕೆಯನ್ನು ಮನ್ನಿಸಿ ಬೊಮ್ಮನು ಮೂಲಲಿಂಗದ ಮೇಲಿನ ಶೈಲಲಿಂಗದ ಮೇಲೆ ಮತ್ತೊಂದು ಲಿಂಗವನ್ನು ಪ್ರತಿಷ್ಠಿಸಿದನು. ಅದರದೂ ಅದೇ ಹಾಡು. ಮೂಲಲಿಂಗ ಸ್ಪೃಷ್ಟ ಶೈಲಲಿಂಗದಿಂದ ಆಲಿಂಗಿತವಾದ ಈ ಮೂರನೇಯ ಮಹಾದೇವನ ಲಿಂಗದಿಂದಲೂ ಜನರ ಪಾಪ ಪರಿಹಾರ ಸ್ವರ್ಗಪ್ರಾಪ್ತಿ. ಅದರಿಂದ ಸುರಲೋಕದಲ್ಲಿ ಜನ ಸಮ್ಮರ್ದ ಯಥಾ ಪ್ರಕಾರ ಸಾಗಿತು. ಪುನಃ ಸುರರ ಪ್ರಾರ್ಥನೆ, ಬ್ರಹ್ಮದೇವರಿಂದ ಮತ್ತೆ ಮೂರನೆ ಲಿಂಗದ ಮೇಲೆ ಮತ್ತೊಂದು ಲಿಂಗ ಪ್ರತಿಷ್ಠಾನ. ಅದರದೂ ಇದೇ ಕತೆ. ಕಂಡವರಿಗೆಲ್ಲ ಕೈವಲ್ಯ ನೋಡಿದವರಿಗೆಲ್ಲ ನಾಕಲೋಕ. ಇದನ್ನು ನೋಡಿ ಅದರ ಮೇಲೆ ಬ್ರಹ್ಮದೇವರ ಐದನೆಯ ಲಿಂಗ ಸ್ಥಾಪನೆ.

೯೪೯. ತಚ್ಛ್ರುತ್ವಾ ಭಗವಾನ್ ಬ್ರಹ್ಮಾ ದೇವಾನಾಂ ಹಿತಕಾಮ್ಯಯಾ ।
ಉಪರ್ಯುಪರಿ ಲಿಂಗಾನಿ ಸಪ್ತ ತತ್ರ ಚಕಾರ ಹ ।

ಹೀಗೇಯೇ ನಡೆಯಿತು. ಬ್ರಹ್ಮದೇವರ ಶಿವಲಿಂಗ ಪ್ರತಿಷ್ಠಾಪನೆಯ ಕ್ರಮ. ಒಂದರ ಮೇಲೆ ಒಂದರಂತೆ ಏಳು ಲಿಂಗಗಳನ್ನು ಆ ಆದಿಶಿವಲಿಂಗದ ಮೇಲೆ ಒಂದೊಂದಾಗಿ ಬ್ರಹ್ಮದೇವರು ದೇವತೆಗಳ ಹಿತಕ್ಕಾಗಿ ಪ್ರತಿಷ್ಠಾಪನೆ ಮಾಡಿದರು.

೯೫೦. ಲಿಂಗಸ್ಯ ದರ್ಶನಾನ್ಮುಕ್ತಿಃ ಸ್ಪರ್ಶನಾಚ್ಚ ವಟಸ್ಯ ಚ ।
ತತ್ಸನ್ನಿಧೌ ಜಲೇ ಸ್ನಾತ್ವಾ ಪ್ರಾಪ್ನೋತ್ಯಭಿಮತಂ ಫಲಮ್ ॥

ಈಗಲೂ ಈ ಸಪ್ತಮ ಲಿಂಗದ ದರ್ಶನದಿಂದಲೂ ವಟವೃಕ್ಷದ ಸ್ಪರ್ಶನ ದಿಂದಲೂ ಸನ್ನಿಹಿತ ಸರೋವರ ಸ್ನಾನದಿಂದಲೂ ಯಾತ್ರಿಕರು ತಮಗೆ ಅಭೀಪ್ಸಿತವಾದ ಮನೋರಥಗಳನ್ನು ಪಡೆಯುವರು.

೯೫೧. ತತೋ ಯೇ ಮುಕ್ತಿಕಾಮಾಶ್ಚ ಸಿದ್ಧಾಶ್ರಮ ಪರಾಯಣಾಃ ।
ಸೇವ್ಯ ಪಾಂಸು ಪ್ರಯತ್ನೇನ ಪ್ರಯಾತಾಃ ಪರಮಂ ಪದಮ್॥

ಮುಕ್ತಿಯನ್ನು ಬಯಸುವವರು ಆ ಕ್ಷೇತ್ರದ ಬಳಿಯಲ್ಲಿರುವ ಸಿದ್ಧಾಶ್ರಮಗಳಲ್ಲಿ ಇದ್ದು ಆ ಲಿಂಗಕ್ಕೆ ಹತ್ತಿ ಮೆತ್ತಿದ ಧೂಳಿಯನ್ನು ಧರಿಸಿ ಪರಮ ಪದವನ್ನು ಹೊಂದಿದರು.

೯೫೭. ಪಾಂಸವೋऽಪಿ ಕುರುಕ್ಷೇತ್ರೇ ವಾಯುನಾ ಸಮುದೀರಿತಾಃ ।
ಮಹಾದುಷ್ಕೃತ ಕರ್ಮಾಣಃ ಪ್ರಾಪಯಂತಿ ಪರಂಪದಮ್ ।

ಈ ಕುರುಕ್ಷೇತ್ರದಲ್ಲಿ ಗಾಳಿ ಬೀಸಿ ತೂರಿ ಬಂದ ಧೂಳಿಯ ಕಣಗಳೂ ಕೂಡ ಪಾಪಿಗಳನ್ನು ಉದ್ಧರಿಸುತ್ತವೆ. ಗಂಡಸಾಗಲಿ ಹೆಂಗಸಾಗಲಿ, ತಿಳಿದಾಗಲೀ ತಿಳಿಯದೇ ಆಗಲಿ ಮಾಡಿದ ಪಾಪಗಳೆಲ್ಲವೂ ಇಲ್ಲಿಯ ಗಾಳಿ ಧೂಳಿಯ ಸೋಂಕಿನಿಂದ ಮತ್ತು ಸ್ಥಾಣು ತೀರ್ಥದ ಪ್ರಭಾವದಿಂದ ಪರಿಹೃತವಾಗುತ್ತವೆ. ಇಲ್ಲಿಯ ತೀರ್ಥದಲ್ಲಿ ಪಿತೃಗಳಿಗೆ ತರ್ಪಣವನ್ನು ಕೊಡಬೇಕು. ತರ್ಪಣ ಕೊಟ್ಟ ನೀರಿನ ಒಂದೊಂದು ಹನಿಗೂ ಇಲ್ಲಿ ಅನಂತ ಪುಣ್ಯವುಂಟು. ಈ ಸ್ಥಾಣು ಲಿಂಗದ ಪಶ್ಚಿಮ ತೀರ್ಥದಲ್ಲಿ ಕರಿ ಎಳ್ಳುಗಳಿಂದ ತರ್ಪಣ ಬಿಟ್ಟರೆ ಮೂರು ಯುಗಗಳ ಕಾಲ ಅವನ ಪಿತೃಗಳು ಆನಂದಪಡುತ್ತಾರೆ. ಮನ್ವಂತರದ ಕೊನೆಯವರೆಗೆ ಈ ಲಿಂಗವು ಇಲ್ಲಿ ಇರುವವರಿಗೆ ಪಿತೃಗಳು ಸಂತೋಷದಿಂದ ತಮ್ಮ ವಂಶಜನು ಈ ದಿವ್ಯ ಕ್ಷೇತ್ರದ ತೀರ್ಥದಲ್ಲಿ ಇತ್ತ ತಿಲಾಂಜಲಿ ಯಿಂದ ಅಮೃತರಸ ಪಾನವನ್ನು ಮಾಡುತ್ತಾರೆ. ಇದಕ್ಕೆ ಕೃತಯುಗದಲ್ಲಿ ಸನ್ನಿಹಿತ, ತ್ರೇತಾಯುಗದಲ್ಲಿ ವಾಯುತೀರ್ಥ, ಕಲಿಯುಗ ಹಾಗೂ ದ್ವಾಪರಯುಗಗಳಲ್ಲಿ ರುದ್ರ ಹ್ರದ ಎಂದು ಕ್ರಮಪ್ರಕಾರ ಹೆಸರುಗಳು ಬರುವವು. ಚೈತ್ರಮಾಸದ ಕೃಷ್ಣಪಕ್ಷದ ಚತುರ್ದಶಿ ದಿನದಂದು ಈ ರುದ್ರ ತೀರ್ಥದಲ್ಲಿ ಸ್ನಾನ ಮಾಡಿದವನು ದಿವ್ಯ ಗತಿಯನ್ನು ಹೊಂದುತ್ತಾನೆ.

೯೫೮. ವಟೇ ಯಸ್ತು ಸ್ಥಿತೋ ರಾತ್ರೌ ಧ್ಯಾಯತೇ ಪರಮೇಶ್ವರಮ್
ಸ್ಥಾಣೋರ್ವಟ ಪ್ರಸಾದೇನ ಮನಸಾ ಚಿಂತಿತಂ ಫಲಮ್ ।

ರಾತ್ರಿ ಕಾಲದಲ್ಲಿ ಇಲ್ಲಿಯ ವೃಕ್ಷದ ಅಡಿಯಲ್ಲಿ ಕುಳಿತು ಪರಮೇಶ್ವರನ ಧ್ಯಾನ ಮಾಡಿದ ಮನುಷ್ಯನು ಆ ಸ್ಥಾಣುಲಿಂಗದ ಮತ್ತೂ ವಟೇಶ್ವರನ ಪ್ರಸಾದದಿಂದ ಮನಸ್ಸಿನಲ್ಲಿ ಬಯಸಿದ್ದನ್ನೆಲ್ಲ ಪಡೆಯುತ್ತಾನೆ.

ವಾಮನ ಮಹಾಪುರಾಣದಲ್ಲಿ ಸ್ಥಾಣುಲಿಂಗದ ಮಹಿಮೆ ಎಂಬ
ನಲವತ್ತೈದನೇಯ ಅಧ್ಯಾಯವು ಮುಗಿದುದು.

—o—

## ಕೋಟಿಲಿಂಗ ದರ್ಶನ

ಅಧ್ಯಾಯ - ೪೬

೯೫೪. ಸ್ಥಾಣೋರ್ವಟಸ್ಯೋತ್ತರತಃ ಶುಕ್ಲತೀರ್ಥಂ ಪ್ರಕೀರ್ತಿತಮ್ ।
ಸ್ಥಾಣೋರ್ವಟಸ್ಯ ಪೂರ್ವೇಣ ವ್ಯೋಮ ತೀರ್ಥಂ ದ್ವಿಜೋತ್ತಮಾಃ॥

ಸ್ಥಾಣುವಟದ ಉತ್ತರ ದಿಕ್ಕಿನಲ್ಲಿ ಶುಕ್ಲತೀರ್ಥವಿದೆ, ಪೂರ್ವದಲ್ಲಿ ವ್ಯೋವು ತೀರ್ಥವಿದೆ, ದಕ್ಷಿಣದಲ್ಲಿ ದಕ್ಷತೀರ್ಥವಿದೆ. ಪಶ್ಚಿಮದಲ್ಲಿ ನಕುಲಗಣವೆಂಬ ತೀರ್ಥವಿದೆ. ಈ ತೀರ್ಥದ ಮಧ್ಯಭಾಗ ಪ್ರದೇಶವೇ ಸ್ಥಾಣುತೀರ್ಥವೆಂದು ಪ್ರಸಿದ್ಧಿ ಹೊಂದಿದೆ. ಅದರ ದರ್ಶನ ಮಾತ್ರವೂ ಪರಮಪದ ಪ್ರಾಪ್ತಿಗೆ ಕಾರಣವಾಗಿರುತ್ತದೆ. ಅಷ್ಟಮೀ ಚತುರ್ದಶೀ ದಿನಗಳಲ್ಲಿ ಇದಕ್ಕೆ ಮೂರು ಪ್ರದಕ್ಷಿಣೆ ಹಾಕಬೇಕು. ಆ ಸಮಯದಲ್ಲಿ ಪಾರ್ವತಿಯೂ ಲಿಂಗರೂಪಿಣಿಯಾಗಿ ಹರನ ಪಾರ್ಶ್ವವನ್ನು ಬಿಡದೇ ಅಲ್ಲಿಯೇ ಸಾನ್ನಿಧ್ಯ ಹೊಂದಿರುತ್ತಾಳೆ. ಈ ಪಾರ್ವತಿಯ ದರ್ಶನ ಮಾತ್ರದಿಂದ ಮನುಷ್ಯನು ಸಿದ್ಧನಾಗುತ್ತಾನೆ. ಈ ವಟದ ಉತ್ತರ ಭಾಗದಲ್ಲಿ ಇಷ್ಟಪ್ರದವಾದ ಲಿಂಗವನ್ನು ಪ್ರತಿಷ್ಠಿಸಿರುತ್ತಾರೆ. ಆ ವಟದ ಪೂರ್ವಭಾಗದಲ್ಲಿ ವಿಶ್ವಕರ್ಮನಿಂದ ಪ್ರತಿಷ್ಠಿತವಾದ ಲಿಂಗ ಒಂದಿರುವದು. ಪಶ್ಚಿಮಾಭಿಮುಖವಾಗಿರುವ ಆ ಲಿಂಗದ ದರ್ಶನವು ಮನುಷ್ಯ ಮಾತ್ರರಿಗೇ ಸಿದ್ಧಿದಾಯಕವಾಗಿದೆ. ಅಲ್ಲಿಯೇ ಸರಸ್ವತಿಯು ದೇವಿಯ ರೂಪದಿಂದ ಇರುತ್ತಾಳೆ. ಆ ಸರಸ್ವತಿಯನ್ನು ಪ್ರಯತ್ನಪೂರ್ವಕವಾಗಿ ಸೇವಿಸಿದವನು ಬುದ್ಧಿಯನ್ನು ಮೇಧಾವಿತೆಯನ್ನೂ ಹೊಂದುತ್ತಾನೆ. ಆ ವಟದ ಪಕ್ಕದಲ್ಲಿ ಬ್ರಹ್ಮನಿಂದ ಪ್ರತಿಷ್ಠಿತ ಲಿಂಗವೊಂದಿದೆ. ವಟೇಶ್ವರವೆಂಬ ಆ ಲಿಂಗವನ್ನು ದರ್ಶನ ಮಾಡಿದವನು ಪರಮಪದ ಗಾಮಿಯಾಗುತ್ತಾನೆ. ಅನಂತರ ಸ್ಥಾಣು ವಟವನ್ನು ಪ್ರದರ್ಶನ ಮಾಡಿ ಪ್ರದಕ್ಷಿಣೆ ಮಾಡಿದವನು ಸಪ್ತದ್ವೀಪವುಳ್ಳ ಭೂಮಿಯ ಪ್ರದಕ್ಷಿಣ ಫಲವನ್ನೇ ಹೊಂದುತ್ತಾನೆ. ಆ ಸ್ಥಾಣುವಿನ ಪಶ್ಚಿಮದಿಕ್ಕಿನಲ್ಲಿ ನಕುಲೀಶ ಗಣವಿದೆ. ಅದನ್ನು ತಪ್ಪದೇ ಸೇವಿಸಿದವನು ಸಕಲ ಪಾಪಗಳಿಂದಲೂ ಮುಕ್ತಿ ಹೊಂದುತ್ತಾನೆ. ಅದರ ದಕ್ಷಿಣ ಭಾಗದಲ್ಲಿ ರುದ್ರಾಕರವೆಂಬ ತೀರ್ಥವಿದೆ. ಅಲ್ಲಿ ಸ್ನಾನ ಮಾಡಿದವನು ಸರ್ವ ತೀರ್ಥಗಳಲ್ಲೂ ಸ್ನಾನ ಮಾಡಿದಂತಾಗುತ್ತದೆ.

೯೫೫. ತಸ್ಯ ಚೋತ್ತರ ದಿಗ್ಭಾಗೇ ರಾವಣೇನ ಮಹಾತ್ಮನಾ ।
ಪ್ರತಿಷ್ಠಿತ ಮಹಾಲಿಂಗಂ ಗೋಕರ್ಣಂ ನಾಮ ನಾಮತಃ ॥

ಅದರ ಉತ್ತರದಿಕ್ಕಿನಲ್ಲಿ ಮಹಾತ್ಮನಾದ ರಾವಣನಿಂದ ಪ್ರತಿಷ್ಠಿತವಾದ ಗೋಕರ್ಣವೆಂಬ ಮಹಾಲಿಂಗವಿರುವದು. ಆಷಾಢಮಾಸದ ಕೃಷ್ಣ ಚತುರ್ದಶಿಯಲ್ಲಿ ಅಲ್ಲಿ ಸ್ನಾನ ಮಾಡಿ ಉಪವಾಸ ವ್ರತದಿಂದ ಇದ್ದಲ್ಲಿ ಅವನು ಪಾಪ ಬಂಧನದಿಂದ ವಿಮೋಚನ ಹೊಂದುತ್ತಾನೆ. ಅಲ್ಲಿಯೇ ಮೇಘನಾದನಿಂದ ಸ್ಥಾಪಿತವಾದ ಸಿದ್ಧಿಪ್ರದವಾದ ಮತ್ತೊಂದು ಲಿಂಗ ವಿದೆ. ಅದನ್ನು ಪ್ರಯತ್ನಪಟ್ಟು ಪೂಜಿಸಿದಲ್ಲಿ ಐಶ್ವರ್ಯಶಾಲಿ ಯಾಗುತ್ತಾನೆ. ಅದಕ್ಕೆ ಪಶ್ಚಿಮದಲ್ಲಿ ಕುಂಭಕರ್ಣನಿಂದ ಸ್ಥಾಪಿತವಾದ ಮತ್ತೊಂದು ಲಿಂಗವಿದೆ. ಜ್ಯೇಷ್ಠಶುಕ್ಲ ಅಷ್ಟಮಿಯಲ್ಲಿ ಶ್ರದ್ಧೆಯಿಂದ ಆ ಲಿಂಗವನ್ನು ಪೂಜಿಸಿ ಉಪವಾಸ ವ್ರತದಿಂದ ಅಲ್ಲಿ ವಾಸ ಮಾಡಿದವರಿಗೆ ಹೆಜ್ಜೆಹೆಜ್ಜೆಗೂ ಯಜ್ಞಫಲವೇ ಉಂಟಾಗುತ್ತದೆ. ಈ ಲಿಂಗ ಗಳೆಲ್ಲವೂ ಮುನಿಗಳಿಂದಲೂ, ಸಾಧ್ಯರಿಂದಲೂ, ಆದಿತ್ಯರು ವಸುಗಳು ಮರುತ್ತೆಂಬ ದೇವತೆಗಳಿಂದಲೂ ಅಗ್ನಿಗಳು ಇವರೆಲ್ಲರಿಂದಲೂ ಪ್ರಯತ್ನಪೂರ್ವಕವಾಗಿ

ಸೇವಿಸಲ್ಪಟ್ಟಿವೆ. ಇತರ ಪ್ರಾಣಿಗಳೂ ಈ ಸ್ಥಾಣು ಕ್ಷೇತ್ರಕ್ಕೆ ಪ್ರವೇಶಿಸಿದ ಮಾತ್ರದಿಂದಲೇ ಸಕಲ ಪಾಪ ಮೋಕ್ಷವನ್ನು ಹೊಂದಿ ಪರಮ ಪದಕ್ಕೆ ಹೋಗುತ್ತವೆ. ದೇವದೇವನಾದ ಈಶ್ವರನ ಲಿಂಗವು ಸಮೀಪದಲ್ಲಿದ್ದುದರಿಂದಲೇ ಉಮಾದೇವಿಯೂ ಲಿಂಗರೂಪದಿಂದ ಅಲ್ಲೇ ಇರುತ್ತ ಆ ಹರನ ಸಮೀಪವನ್ನು ಬಿಡುತ್ತಿಲ್ಲ. ಗೋಕರ್ಣಕ್ಷೇತ್ರವೂ ದರ್ಶನ ಮಾತ್ರದಿಂದ ಪುಣ್ಯ ಸಂಪಾದಕವಾಗಿರುತ್ತದೆ. ಅಲ್ಲಿರುವ ಹರನನ್ನು ಶುಚಿಯಾಗಿದ್ದು ಪೂಜಿಸಿದರೆ ಅಂಥವನ ಬುದ್ಧಿಪೂರ್ವಕವಾಗಿಯೂ ಅಬುದ್ಧಿಪೂರ್ವಕವಾಗಿಯೂ ಸಂಚಿತವಾಗಿರುವ ಪಾಪಗಳೆಲ್ಲವೂ ಬಿಡುಗಡೆ ಹೊಂದುತ್ತವೆ. ಕೌಮಾರಾವಸ್ಥೆಯಲ್ಲಿ ಬ್ರಹ್ಮಚರ್ಯ ಹೊಂದಿದವನು ಯಾವ ಪುಣ್ಯವನ್ನು ಹೊಂದಬಹುದೋ ಅಲ್ಲಿರುವ ಶಂಕರನನ್ನು ಅಷ್ಟಮಿಯ ದಿವಸ ಪೂಜಿಸಿದವನು ಆ ಪುಣ್ಯವನ್ನು ಹೊಂದುತ್ತಾನೆ. ಸೌಂದರ್ಯವನ್ನೂ ಸಂಪತ್ತನ್ನು ಅಪೇಕ್ಷಿಸುವವನು ಆ ಕೌಮಾರೇಶ್ವರನನ್ನು ಪೂಜಿಸಿ ಆ ಮಾಹಾತ್ಮ್ಯದಿಂದಲೇ ಇಷ್ಟಸಿದ್ಧಿಯನ್ನು ಹೊಂದಿ ಕೃತಕೃತ್ಯನಾಗುತ್ತಾನೆ.

೯೫೬. ತಸ್ಯ ಚೋತ್ತರದಿಗ್ಭಾಗೇ ಲಿಂಗಂ ಪೂಜ್ಯ ವಿಭೀಷಣಃ ।
ಅಜರಾಶ್ಚಾಮರಶ್ಚೈವ ಕಲ್ಪಯಿತ್ವಾ ಬಭೂವ ಹ ॥

ಅದರ ಉತ್ತರ ದಿಕ್ಕಿನಲ್ಲಿ ವಿಭೀಷಣನು ಒಂದು ಲಿಂಗವನ್ನು ಪ್ರತಿಷ್ಠಿಸಿ ಅದನ್ನು ಪೂಜಿಸಿ ಅಜರಾಮರನಾದನು. ಆಷಾಢಮಾಸದ ಶುಕ್ಲಪಕ್ಷದ ಅಷ್ಟಮಿಯಲ್ಲಿ ಆ ವಿಭೀಷಣ ಲಿಂಗವನ್ನು ಪೂಜಿಸಿ ಉಪವಾಸ ವ್ರತದಿಂದಿರುವವನಿಗೆ ಮುಕ್ತಿಯುಂಟಾಗುತ್ತದೆ. ಆ ಲಿಂಗದ ಪೂರ್ವಭಾಗದಲ್ಲಿ ಪೂರ್ಣವೆಂಬ ಹೆಸರಿನ ಮತ್ತೊಂದು ಲಿಂಗವಿದೆ. ಅದನ್ನು ಪ್ರಯತ್ನದಿಂದ ಪೂಜಿಸಿದವನು ಎಲ್ಲಾ ಮನೋರಥಗಳನ್ನು ಹೊಂದುತ್ತಾನೆ. ದೂಷಣ ಮತ್ತು ತ್ರಿಶಿರಸ್ಸು ದಾನವರೂ ಅಲ್ಲಿ ಈಶ್ವರನನ್ನು ಪೂಜಿಸಿ ಇಷ್ಟಸಿದ್ಧಿ ಹೊಂದಿ ಸಂತೋಷಪಟ್ಟರು. ಚೈತ್ರ ಮಾಸದ ಶುಕ್ಲಪಕ್ಷದಲ್ಲಿ ಅಲ್ಲಿದ್ದು ಯಾವನು ಲಿಂಗಗಳನ್ನು ಪೂಜಿಸುತ್ತಾನೋ ಅವನಿಗೆ ಆ ಲಿಂಗಗಳು ಇಷ್ಟಸಿದ್ಧಿಯನ್ನುಂಟು ಮಾಡುತ್ತವೆ. ಸ್ಥಾಣೂಟದ ಪೂರ್ವಭಾಗದಲ್ಲಿ ಹಸ್ತಿಪಾದೇಶ್ವರನಿರುವನು. ಅವನ ದರ್ಶನದಿಂದ ಪೂರ್ವ ಜನ್ಮಕೃತವಾದ ಪಾಪಗಳು ನಾಶಹೊಂದುತ್ತವೆ. ಅದರ ದಕ್ಷಿಣ ಭಾಗದಲ್ಲಿ ಹಾರೀತ ಮುನಿಯಿಂದ ಸ್ಥಾಪಿತವಾದ ಲಿಂಗವಿದೆ. ಅದರ ಪ್ರಣಾಮವೂ ಮನುಷ್ಯನಿಗೆ ಸಿದ್ಧಿಪ್ರದವಾದುದು. ಅದರ ದಕ್ಷಿಣ ಪಾರ್ಶ್ವದಲ್ಲಿ ಆ ಮಹಾಮುನಿಯಿಂದಲೇ ನಿರ್ಮಿತವಾದ ಕೊಳವಿದೆ. ಅಲ್ಲಿರುವ ಲಿಂಗವೂ ಸರ್ವಪಾಪ ನಾಶಕವಾದದ್ದು.

೯೫೭. ಕಂಕಾಲ ರೂಪಿಣಾ ಚಾಪಿ ರುದ್ರೇಣ ಸುಮಹಾತ್ಮನಾ ।
ಪ್ರತಿಷ್ಠಿತಂ ಮಹಾಲಿಂಗಂ ಸರ್ವ ಪಾಪ ಪ್ರಣಾಶನಮ್ ॥

ಆ ಲಿಂಗವು ತಪಸ್ಸಿನಿಂದ ಕೃಶನಾಗಿ ಅಸ್ಥಿಪಂಜರಮಾತ್ರದಿಂದಿದ್ದ ರುದ್ರದೇವನಿಂದಲೇ ಪ್ರತಿಷ್ಠಿತವಾದದ್ದು.

೯೫೮. ಭುಕ್ತಿದಂ ಮುಕ್ತಿದಂ ಪ್ರೋಕ್ತಂ ಸರ್ವಕಿಲ್ಬಿಷ ನಾಶನಮ್ ।
ಲಿಂಗಸ್ಯ ದರ್ಶನಾದೇವ ಹ್ಯಗ್ನಿಷ್ಟೋಮ ಫಲಂ ಲಭೇತ್ ॥

ಅದು ಭೋಗಪ್ರದವೂ, ಮೋಕ್ಷಪ್ರದವೂ ಸರ್ವಪಾಪನಾಶಕವೂ ಆಗಿದೆ. ಅದರ ದರ್ಶನ ಮಾತ್ರದಿಂದಲೂ ಅಗ್ನಿಷ್ಟೋಮ ಫಲವನ್ನು ಹೊಂದುವನು.

೯೫೭. ತಸ್ಯ ದಕ್ಷಿಣ ದಿಗ್ಭಾಗೇ ಮೃಕಂಡೇನ ಮಹಾತ್ಮನಾ ।
ತತ್ರ ಪ್ರತಿಷ್ಠಿತಂ ಲಿಂಗಂ ದರ್ಶನಾತ್ ಸಿದ್ಧಿದಾಯಕಮ್ ॥

ಅದರ ಪಶ್ಚಿಮ ಭಾಗದಲ್ಲಿ ಸಿದ್ಧ ಪ್ರತಿಷ್ಠಿತವಾದ ಲಿಂಗವಿದೆ. ಸಿದ್ಧೇಶ್ವರನೆಂಬ ಪ್ರಸಿದ್ಧಿಯುಳ್ಳ ಆ ಲಿಂಗವು ಸರ್ವಸಿದ್ಧಿಗಳನ್ನು ಉಂಟುಮಾಡುತ್ತದೆ. ಅದಕ್ಕೆ ದಕ್ಷಿಣ ದಿಗ್ಭಾಗದಲ್ಲಿ ಮೃಕಂಡು ಮುನಿಯಿಂದ ಪ್ರತಿಷ್ಠಿತವಾದ ಲಿಂಗವಿದೆ. ಅದರ ದರ್ಶನವೂ ಸಿದ್ಧಿಪ್ರದವಾದುದು. ಅದಕ್ಕೆ ಪೂರ್ವ ದಿಕ್ಕಿನಲ್ಲಿ ಮಹಾತ್ಮನಾದ ಆದಿತ್ಯನಿಂದ ಪ್ರತಿಷ್ಠಿತವಾದ ಲಿಂಗವಿದೆ. ಅದೂ ಸರ್ವಪಾಪನಾಶಕವಾಗಿದೆ.

೯೫೮. ಚಿತ್ರಾಂಗದಸ್ತು ಗಂಧರ್ವೋ ರಂಭಾ ಚಾಪ್ಸರಸಾಂ ವರಾ ।
ಪರಸ್ಪರಂ ಸಾನುರಾಗೌ ಸ್ಥಾಣುದರ್ಶನ ಕಾಂಕ್ಷಿಣೌ ॥

೯೫೯. ದೃಷ್ಟ್ವಾ ಸ್ಥಾಣುಂ ಪೂಜಯಿತ್ವಾ ಸಾನುರಾಗೌ ಪರಸ್ಪರಮ್ ।
ಆಗಮ್ಯ ವರದಂ ದೇವಂ ಪ್ರತಿಷ್ಠಾಪ್ಯ ಮಹೇಶ್ವರಮ್ ॥

ಗಂಧರ್ವನಾದ ಚಿತ್ರಾಂಗದನೂ, ಅಪ್ಸರ ಶ್ರೇಷ್ಠೆಯಾದ ರಂಭೆಯೂ ಸಹ ಪರಸ್ಪರಾನುರಾಗಿಗಳಾಗಿ ಸ್ಥಾಣು ದರ್ಶನ ಹೊಂದಲು ಆಸೆಪಟ್ಟು ಸ್ಥಾಣುವನ್ನು ದರ್ಶನ ಮಾಡಿ ಪೂಜಿಸಿ, ಪರಸ್ಪರಾನುಕ್ತರಾಗಿ ಅಲ್ಲಿಯೇ ವರಪ್ರದನಾದ ಮಹೇಶ್ವರನನ್ನು ಪ್ರತಿಷ್ಠಿಸಿದರು. ಚಿತ್ರಾಂಗದೇಶ್ವರನೆಂದೂ ರಂಭೇಶ್ವರನೆಂದೂ ಹೆಸರುಳ್ಳ ಆ ಲಿಂಗವನ್ನು ದರ್ಶನ ಮಾಡಿದವನು ಸೌಭಾಗ್ಯಶಾಲಿಯೂ, ಸುಂದರನೂ ಆಗಿ ಸತ್ಕುಲದಲ್ಲಿ ಜನಿಸುತ್ತಾನೆ. ಅದಕ್ಕೆ ದಕ್ಷಿಣ ಭಾಗದಲ್ಲಿ ಇಂದ್ರನಿಂದ ಸ್ಥಾಪಿತವಾದ ಲಿಂಗವಿದೆ. ಅದರ ಅನುಗ್ರಹವೂ ಇಷ್ಟಾರ್ಥಪ್ರಾಪ್ತಿಗೆ ಕಾರಣವಾದುದು.

೯೬೩. ಪರಾಶರೇಣ ಮುನಿನಾ ತಥೈವಾರಾಧ್ಯ ಶಂಕರಂ ।
ಪ್ರಾಪ್ತಂ ಕವಿತ್ವಂ ಪರಮಂ ದರ್ಶನಾತ್ ಶಂಕರಸ್ಯ ಚ ॥

ಪರಾಶರ ಮುನಿಯೂ ಕೂಡ ಶಂಕರನನ್ನು ಆರಾಧಿಸಿ ಅವನ ದರ್ಶನದಿಂದಲೇ ಉತ್ತಮವಾದ ಕವಿತಾ ಶಕ್ತಿಯನ್ನು ಹೊಂದಿದನು.

೯೬೪. ವೇದ ವ್ಯಾಸೇನ ಮುನಿನಾ ಆರಾಧ್ಯ ಪರಮೇಶ್ವರಮ್ ।
ಸರ್ವಜ್ಞತ್ವಂ ಬ್ರಹ್ಮಜ್ಞಾನಂ ಪ್ರಾಪ್ತಂ ದೇವ ಪ್ರಸಾದತಃ ॥

ವೇದ ವ್ಯಾಸ ಮುನಿಯೂ ಕೂಡ ಪರಮೇಶ್ವರನನ್ನು ಆರಾಧಿಸಿಯೇ ಅವನ ಅನುಗ್ರಹದಿಂದ ಸರ್ವಜ್ಞನೂ, ಬ್ರಹ್ಮ ಜ್ಞಾನಿಯೂ ಆದನು. ಆ ಸ್ಥಾಣುವಿನ ಪಶ್ಚಿಮ ದಿಕ್ಕಿನಲ್ಲಿ ಹಿಮವಂತನಿಂದ ಪ್ರತಿಷ್ಠಿತವಾದ ಈಶ್ವರ ಲಿಂಗವಿದೆ. ಪುಣ್ಯಶಾಲಿಗಳು ಅದರ ದರ್ಶನದಿಂದ ಸಿದ್ಧಿ ಹೊಂದುವರು.

೯೬೫. ತಸ್ಯಾಪಿ ಪಶ್ಚಿಮೇ ಭಾಗೇ ಕಾರ್ತವೀರ್ಯೇಣ ಸ್ಥಾಪಿತಂ ।
ಲಿಂಗಂ ಪಾಪಹರಂ ಸದ್ಯೋದರ್ಶನಾತ್ ಪುಣ್ಯಮಾಪ್ನುಯಾತ್ ॥

೯೬೬. ತಸ್ಯಾಪ್ಯುತ್ತರತೋ ಭಾಗೇ ಸುಪಾರ್ಶ್ವಸ್ಥಾಪಿತಂ ಪುನಃ ।
ಆರಾಧ್ಯ ಹನುಮಾಂಶ್ಚೈವ ಸಿದ್ಧಿಂ ದೇವಪ್ರಸಾದತಃ ॥

ಅದಕ್ಕೂ ಪಶ್ಚಿಮ ಭಾಗದಲ್ಲಿ ಕಾರ್ತವೀರ್ಯನಿಂದ ಸ್ಥಾಪಿತವಾದ ಮತ್ತೊಂದು ಲಿಂಗವಿದೆ. ಅದರ ದರ್ಶನದಿಂದಲೂ ಪಾಪನಾಶವೂ ಮತ್ತು ಪುಣ್ಯವೂ ಉಂಟಾಗುತ್ತದೆ. ಅದಕ್ಕೆ ಉತ್ತರ ಭಾಗದಲ್ಲಿ ಸುಪಾರ್ಶ್ವನಿಂದ ಸ್ಥಾಪಿತವಾದ ಮತ್ತೊಂದು ಲಿಂಗವಿದೆ. ಅದನ್ನು ಪೂಜಿಸಿ ಹನುಮಂತನು ಸಿದ್ಧಿಯನ್ನು ಹೊಂದಿದನು.

**೯೬೭. ತಸ್ಯಾಪಿ ಪೂರ್ವದಿಗ್ಭಾಗೇ ಇಂದ್ರೇನ ವರುಣೇನ ಚ ।**
**ಪ್ರತಿಷ್ಠಿತೇ ಲಿಂಗವರೇ ಸರ್ವಕಾಮ ಪ್ರದಾಯಕೇ ॥**

ಅದರಪೂರ್ವದಿಕ್ಕಿನಲ್ಲಿ ಸರ್ವಶಕ್ತನಾದ ವಿಷ್ಣುವೂ ಕೂಡ ತನ್ನ ಚಕ್ರಮಧ್ಯದಲ್ಲಿ ಸುದರ್ಶನರೂಪದಲ್ಲಿ ಆರಾಧಿಸಿದನು. ಅದಕ್ಕೂ ಪೂರ್ವದಿಕ್ಕಿನಲ್ಲಿ ಇಂದ್ರನಿಂದಲೂ ವರುಣನಿಂದಲೂಪ್ರತಿಷ್ಠಿತವಾದಸರ್ವಪುರುಷಾರ್ಥಪ್ರದವಾದಎರಡುಲಿಂಗಗಳಿವೆ. ಈ ಲಿಂಗಗಳೆಲ್ಲವೂಋಷಿಗಳಿಂದಲೂ, ಸಾಧ್ಯರಿಂದಲೂ, ಆದಿತ್ಯವಸ್ವಾದಿಗಳಿಂದಲೂಪ್ರಯತ್ನ ಪೂಜಿತವಾಗಿಪ್ರಕಾಶಿಸುತ್ತವೆ. ಸ್ವಯಂಭುಲಿಂಗದಮತ್ತುಸ್ಥಾಣುಲಿಂಗದಸಮೀಪದಲ್ಲಿ ಆ ಋಷಿಗಳುಪ್ರತಿಷ್ಠ ಮಾಡಿರುವ ಆಲಿಂಗಗಳಿಗೆಸಂಖ್ಯೆಯೇಇಲ್ಲ. ದೇವಲಿಂಗದಪಶ್ಚಿಮ ಭಾಗದಿಂದಪ್ರಾರಂಭವಾಗಿ ಉತ್ತರದ ಓಘವತೀನದಿಯವರೆಗೂಸಾವಿರದ ಒಂದು ಲಿಂಗಗಳುಪ್ರತಿಷ್ಠಿತವಾಗಿವೆ. ಅದರಪೂರ್ವ ಭಾಗದಲ್ಲಿ ಮಹಾತ್ಮರಾದವಾಲಖಿಲ್ಯರು ಸರೋವರದದೀರ್ಘತೆಯಿರುವವರೆಗೂಕೋಟಿಲಿಂಗಗಳನ್ನುಪ್ರತಿಷ್ಠೆಮಾಡಿರುವರು.

**೯೬೮. ತಿಸ್ರಃ ಕೋಟ್ಯೋರ್ಧ ಕೋಟೀ ಚ ಲಿಂಗಾನಾಂ ವಾಯುರಬ್ರವೀತ್**
**ಅಸಂಖ್ಯಾತಾಃ ಸಹಸ್ರಾಣಿ ಯದ್ರುದ್ರ ಸ್ಥಾನ ಮಾಶ್ರಿತಾಃ**

ಆ ದೇವಲಿಂಗದ ದಕ್ಷಿಣ ದಿಕ್ಕಿನಲ್ಲಿ ಗಂಧರ್ವ ಯಕ್ಷ ಕಿನ್ನರಾದಿಗಳು ಲೆಕ್ಕವಿಲ್ಲದಷ್ಟು ಲಿಂಗಗಳನ್ನು ಪ್ರತಿಷ್ಠೆ ಮಾಡಿರುವರು. ವಾಯುವು ಇಲ್ಲಿ ಮೂರುವರೆಕೋಟಿ ಲಿಂಗಗಳಿವೆ ಎಂದು ಸಂಖ್ಯಾ ನಿಯಮದಿಂದ ಹೇಳಿರುತ್ತಾರೆ. ಇನ್ನೂ ಅಸಂಖ್ಯಾತವಾದ ಸಾವಿರಾರು ಲಿಂಗಗಳು ಆ ಸ್ಥಾನವನ್ನು ಆಶ್ರಯಿಸಿವೆ. ಇದೆಲ್ಲವನ್ನೂ ತಿಳಿದು ಶ್ರದ್ಧೆಯಿಂದ ಆ ಸ್ಥಾಣು ಲಿಂಗವನ್ನು ಆಶ್ರಯಿಸಿದ್ದೇ ಆದರೆ ಅದರ ಅನುಗ್ರಹದಿಂದ ಇಷ್ಟಾರ್ಥವನ್ನು ಹೊಂದುತ್ತಾನೆ. ನಿಷ್ಕಾಮನಾಗಿರಲಿ, ಸಕಾಮನಾಗಿರಲಿ ಸ್ಥಾಣು ಮಂದಿರಕ್ಕೆ ಪ್ರವೇಶ ಮಾಡಿದ್ದೇ ಆದರೆ ಅವನು ಘೋರವಾದ ಪಾಪಗಳಿಂದಲೂ, ಮುಕ್ತನಾಗಿ ಪರಮ ಪದಗಾಮಿ ಯಾಗುತ್ತಾನೆ. ಚೈತ್ರಮಾಸದ ತ್ರಯೋದಶಿಯಲ್ಲಿ ದಿವ್ಯ ನಕ್ಷತ್ರ ಯೋಗವನ್ನು ಚಕ್ರ, ಸೂರ್ಯ, ಚಂದ್ರ ಇವುಗಳ ಯೋಗವನ್ನೂ ಹೊಂದಿರುವ ಆ ಪುಣ್ಯಕರವಾದ ಶುಭದಿನದಲ್ಲಿ ಬ್ರಹ್ಮನು ಆ ಲಿಂಗವನ್ನು ಪ್ರತಿಷ್ಠೆ ಮಾಡಿರುವನು. ಅನಂತರ ಋಷಿಗಳಿಂದಲೂ ಅನೇಕ ದೇವತೆಗಳಿಂದಲೂ ಬಹಳ ವರ್ಷದಿಂದಲೂ ಪೂಜಿಸಲ್ಪಟ್ಟಿದೆ. ಆ ಕಾಲದಲ್ಲಿ (ಅಂದರೆ ಚೈತ್ರ ತ್ರಯೋದಶಿಯಲ್ಲಿ) ಉಪವಾಸ ವ್ರತದಿಂದಿದ್ದು ಶ್ರದ್ಧೆಯಿಂದ ಆ ಶಿವನನ್ನು ಪೂಜಿಸುವವರು ಪರಮಪದವನ್ನು ಹೊಂದುತ್ತಾರೆ. ಅಲ್ಲಿ ಶಿವನು ಸನ್ನಿಹಿತನಾಗಿರುವನೆಂದು ತಿಳಿದು ಯಾರು ಪ್ರದಕ್ಷಿಣೆ ಮಾಡುತ್ತಾರೋ ಅವರು ಸಪ್ತದ್ವೀಪವುಳ್ಳ ಭೂಮಂಡಲವನ್ನೇ ಪ್ರದಕ್ಷಿಣೆ ಮಾಡಿದಂತೆ ಆಗುತ್ತದೆ.

ವಾಮನ ಮಹಾಪುರಾಣದಲ್ಲಿ ಕೋಟಿಲಿಂಗ ದರ್ಶನ ಎಂಬ ನಲವತ್ತಾರನೇಯ ಅಧ್ಯಾಯವು ಮುಗಿದುದು.

## ತಂದೆಯ ಭಂಜನ ಮಗನ ರಂಜನ

ಅಧ್ಯಾಯ - ೪೭

### ಮಾರ್ಕಂಡೇಯ ಉವಾಚ

**೬೬೯. ಸ್ಥಾಣುತೀರ್ಥಪ್ರಭಾವಂ ತು ಶ್ರೋತುಮಿಚ್ಛಾಮಹೇ ವಯಮ್।
ಕೇನ ಸಿದ್ಧಿರಿಹ ಪ್ರಾಪ್ತಾ ಸರ್ವಪಾಪ ಭಯಾಪಹಾ ॥**

ಈ ಸ್ಥಾಣು ತೀರ್ಥವನ್ನು ಸೇವಿಸಿ ಸಿದ್ಧಿಯನ್ನು ಯಾರು ಪಡೆದರು ಅದನ್ನು ತಿಳಿಸಿರಿ. ಎಲ್ಲ ಪಾಪಗಳ ಭೀತಿ ಕಳೆಯುವ ಸ್ಥಾಣು ತೀರ್ಥದ ಪ್ರಭಾವವನ್ನು ಕೇಳಬೇಕೆಂದು ನಾನು ಇಚ್ಛಿಸುತ್ತೇನೆ.

**ಸನತ್ಕುಮಾರ** - ಸರ್ವಪಾಪ ಪರಿಹಾರಕವಾದ ಸ್ಥಾಣು ತೀರ್ಥದ ಮಹಿಮೆಯನ್ನು ವಿವರವಾಗಿ ಹೇಳುತ್ತೇನೆ ಕೇಳು - ''ಹಿಂದೆ ಪ್ರಳಯ ಕಾಲದಲ್ಲಿ ಸ್ಥಾವರ ಜಂಗಮಾತ್ಮಕವಾದ ಪ್ರಪಂಚವೆಲ್ಲವೂ ನಷ್ಟವಾಗಿ ಜಗತ್ತಿನ ತುಂಬ ನೀರೇನೀರಾಗಿದ್ದಿತು. ಆ ವಿಷ್ಣುವಿನ ಹೊಕ್ಕಳ ಕಮಲದಿಂದ ಸರ್ವ ಲೋಕ ಪಿತಾಮಹನಾದ ಬ್ರಹ್ಮನು ಜನಿಸಿದನು. ಆ ಬ್ರಹ್ಮನಿಂದ ಮರೀಚಿ, ಮರೀಚಿಯಿಂದ ಕಶ್ಯಪ ಕಶ್ಯಪನಿಂದ ಸೂರ್ಯ, ಸೂರ್ಯನಿಂದ ಮನು ಮಹಾರಾಜನು ಕ್ರಮವಾಗಿ ಜನಿಸಿದರು. ಆ ಮನು ಮಹಾರಾಜನು ಶೀನುವ ಕಾಲದಲ್ಲಿ ಮುಖದಿಂದ ಒಬ್ಬ ಮಗನು ಹುಟ್ಟಿದನು. ಅವನಿಗೆ ಇಕ್ಷ್ವಾಕು ಎಂದು ಹೆಸರು. ನಾಕು ಸಾಗರಗಳವರೆಗೆ ಹಬ್ಬಿದ ಧರಾಮಂಡಲಕ್ಕೆ ಅವನು ಒಡೆಯನಾಗಿದ್ದನು.

**೯೬೯. ತಸ್ಯ ಪತ್ನೀ ಬಭೂವಾಥ ಭಯಾ ನಾಮ ಭಯಾವಹಾ ।
ಮೃತ್ಯೋಃ ಸಕಾಶಾದುತ್ಪನ್ನಾ ಕಾಲಸ್ಯ ದುಹಿತಾ ತದಾ ॥**

ಧರ್ಮರಕ್ಷಕನಾದಆಮಹಾರಾಜನಿಗೆಭಯಾಎಂಬಹೆಸರಿನಮಡದಿಇದ್ದಳು. ಅವಳು ಮೃತ್ಯುವಿನಸಂಬಂಧದಿಂದಕಾಲಕನ್ನಿಕೆಯಾಗಿಜನಿಸಿದಕಾರಣತನ್ನಹೆಸರಿಗೆತಕ್ಕಂತೆ ಭಯಂಕರಳಾಗಿದ್ದಳು. ಅವಳಿಂದದುರಾತ್ಮನಾದವೇನಎಂಬಮಗನುಹುಟ್ಟಿದನು.

**೯೭೦. ತಸ್ಯಾಂ ಸಮಭವದ್ವೇನೋ ದುರಾತ್ಮಾ ವೇದನಿಂದಕಃ ।
ಸ ದೃಷ್ಟ್ವಾ ಪುತ್ರ ವದನಂ ಕ್ರುದ್ಧೋ ರಾಜಾ ವನಂಯಯೌ॥**

ಅವನು ಯಾವಾಗಲೂ ವೇದಗಳನ್ನು ನಿಂದಿಸುತ್ತಿದ್ದನು. ಇಂಥ ದುಷ್ಟ ಮಗನ ಮುಖವನ್ನು ನೋಡಿ ದುಃಖಿತನಾದ ಮಹಾರಾಜನು ಮನೆಬಿಟ್ಟು ವನಕ್ಕೆ ಹೋದನು. ಅರಣ್ಯದಲ್ಲಿ ಧರ್ಮಮಾರ್ಗಾನುಸಾರವಾಗಿ ಉಗ್ರ ತಪಸ್ಸನ್ನು ಆಚರಿಸಿ ಭಗವಂತನ ಅನುಗ್ರಹವನ್ನು ಸಂಪಾದಿಸಿ ಎಂದೂ ಮರಳಿಬಾರದ ಮುಕ್ತಿ ಸ್ಥಾನವನ್ನು ಪಡೆದನು. ಅನಂತರ ಸಮಸ್ತ ಭೂಮಂಡಲಕ್ಕೆಲ್ಲ ವೇನನೇ ಅಧಿರಾಜನಾದನು. ತಾಯಿಯ ತಂದೆಯಾದ ಮೃತ್ಯುವಿನ ದೌಷ್ಟ್ಯ ದುರ್ಗುಣಗಳೆಲ್ಲವೂ ಇವನಿಗೆ ಅಜ್ಜನ ಬಳುವಳಿಯಾಗಿ ಬಂದಿದ್ದವು.

**೯೭೧. ಘೋಷಯಾಮಾಸ ನಗರೇ ದುರಾತ್ಮಾ ವೇದನಿಂದಕಃ ।
ನ ದಾತವ್ಯಂನ ಹೋತವ್ಯಂನ ಯಷ್ಟವ್ಯಂ ಕದಾಚನ ॥**

ಅವನುತನ್ನ ರಾಜ್ಯದಲ್ಲೆಲ್ಲ ವೇದಶಾಸ್ತ್ರಕ್ಕೆವಿರುದ್ಧವಾದಘೋಷಣೆಯನ್ನು ಡಂಗುರದ ಮೂಲಕ ಸಾರಿದನು. ''ನನ್ನ ರಾಜ್ಯದಲ್ಲಿ ಯಾರೂ ದಾನ ಧರ್ಮ ಮಾಡಬಾರದು, ಹೋಮಹವನಹೂಡಬಾರದು. ಪೂಜೆಪುನಸ್ಕಾರಗಳನ್ನು ಮಾಡಬಾರದು.''

೯೭೨. ಅಹಮೇಕೋತ್ರ ವೈ ವಂದ್ಯಃ ಪೂಜ್ಯೋಹಂ ಭವತಾಂ ಸದಾ
ಮಯಾ ಹಿ ಪಾಲಿತಾ ಯೂಯಂ ನಿವಸಧ್ವಂ ಯಥಾ ಸುಖಮ್

''ಮಾಡುವದೇ ಆದರೆ ನನ್ನ ಪೂಜೆಯನ್ನೇ ಮಾಡಬೇಕು. ನನಗೇ ನಮಸ್ಕರಿಸಬೇಕು. ನಿಮ್ಮನ್ನೆಲ್ಲ ಪಾಲಿಸುವವನು ನಾನು. ಆದುದರಿಂದ ನಾನೇ ನಿಮಗೆ ಪೂಜ್ಯ, ಉಳಿದವರೆಲ್ಲರೂ ತ್ಯಾಜ್ಯ. ನಿಮಗೆ ನನ್ನ ಹೊರತು ಬೇರೆ ದೇವರಿಲ್ಲ. ನನ್ನನ್ನೇ ಆರಾಧಿಸಿ ಪೂಜಿಸಿ ಸುಖವಾಗಿ ಇರ್ರಿ.'' ವೇದ ನಿಂದಕನಾದ ವೇನರಾಜನ ಈ ಘೋಷಣೆಯನ್ನು ಕೇಳಿ ಋಷಿಗಳೆಲ್ಲರೂ ಒಂದು ಗುಡಿದರು. ತಮ್ಮ ತಮ್ಮಲ್ಲಿ ಮಾತನಾಡಿದರು. ಅನಂತರ ಎಲ್ಲರೂ ಕೂಡಿ ಆ ವೇದ ದ್ರೋಹಿ ಮಹಾರಾಜನ ಬಳಿಗೆ ಬಂದು ಅವನಿಗೆ ಹೇಳಿದರು.

೯೭೩. ಶ್ರುತಿಃ ಪ್ರಮಾಣಂ ಧರ್ಮಸ್ಯ ತತೋ ಯಜ್ಞಃ ಪ್ರತಿಷ್ಠಿತಃ ।
ಯಜ್ಞೈರ್ವಿನಾ ನ ಪ್ರೀಯಂತೆ ದೇವಾಃ ಸ್ವರ್ಗ ನಿವಾಸಿನಃ ।
ಅಪ್ರೀತಾ ನ ಪ್ರಯಚ್ಛಂತಿ ಸಸ್ಯಸ್ಯ ಚ ವಿವೃದ್ಧಯೇ ॥
ತಸ್ಮಾದ್ಯಜ್ಞೈಶ್ಚ ದೇವೈಶ್ಚ ಧಾರ್ಯತೇ ಸಚರಾಚರಮ್ ॥

ಯಜ್ಞ ಯಾಗಾದಿ ಧರ್ಮಕರ್ಮಗಳು ವೇದ ವಿಹಿತವಾಗಿವೆ. ಅವುಗಳ ಕರ್ತವ್ಯತೆಯ ವಿಷಯದಲ್ಲಿ ಅಪೌರುಷೇಯವಾದ ವೇದವೇ ಪರಮ ಪ್ರಮಾಣ. ಆ ವೇದೋಕ್ತವಾದುದರಿಂದಲೇ ಯಜ್ಞ ಸಂಸ್ಥೆಯು ಜಗತ್ತಿನಲ್ಲಿ ಸುಪ್ರತಿಷ್ಠಿತವಾಗಿದೆ. ಯಜ್ಞಗಳು ಇಲ್ಲದಿದ್ದರೆ ಸ್ವರ್ಗವಾಸಿಗಳಾದ ದೇವತೆಗಳಿಗೆ ಸಂತೋಷವಾಗುವುದಿಲ್ಲ. ಅವರಿಗೆ ಸಂತೋಷವಾಗದಿದ್ದರೆ ಮಳೆ ಸುರಿಸುವುದಿಲ್ಲ. ಮಳೆ ಬಾರದಿದ್ದರೆ ಬೆಳೆ ಬರುವುದಿಲ್ಲ. ಬೆಳೆ ಇಲ್ಲದಿದ್ದರೆ ಪ್ರಾಣಿಗಳು ಬದುಕುವುದಿಲ್ಲ. ಆದುದರಿಂದ ಮಳೆ ಬೆಳೆಗಳನ್ನು ಕೊಡುವ ದೇವತೆಗಳನ್ನು ಯಜ್ಞಯಾಗಗಳಿಂದ ಸಂತೋಷಪಡಿಸಬೇಕು. ಯಜ್ಞ ಹಾಗೂ ದೇವತೆಗಳಿಂದಲೇ ಚರಾಚರ ವಿಶ್ವವೆಲ್ಲವೂ ಬಾಳಿ ಬದುಕುತ್ತದೆ.'' ಋಷಿಗಳ ಈ ಮಾತನ್ನು ಕೇಳಿ ವೇನ ರಾಜನ ಮನಸ್ಸಿನಲ್ಲಿ ಕೋಪ, ಕಣ್ಣಿನಲ್ಲಿ ಕೆಂಪು, ನುಡಿಯಲ್ಲಿ ಕಿಡಿ ತುಂಬಿತು. ಅವನು ಮತ್ತೆ ಮತ್ತೆ ಒತ್ತಿ ಒದರಿ ಕೂಗತೊಡಗಿದನು. ''ಯಜ್ಞ ಯಾಗಗಳನ್ನು ಮಾಡಕೂಡದು, ದಾನ ಧರ್ಮಗಳನ್ನು ನೀಡಕೂಡದು''. ಹೀಗೆ ಸಿಟ್ಟು ನೆತ್ತಿಗೇರಿ ಕೂಗಾಡುವ ವೇನನನ್ನು ಕಂಡು ಎಲ್ಲ ಋಷಿಗಳಿಗೂ ಕೋಪ ಬಂದಿತು.

೯೭೪. ತತಃ ಕ್ರೋಧ ಸಮಾವಿಷ್ಟಾಃ ಋಷಯಃ ಸರ್ವ ಏವ ತೇ ॥
ನಿರ್ಜಘ್ನುರ್ಮಂತ್ರ ಪೂತೈಸ್ತೇ ಕುಶೈರ್ವಜ್ರ ಸಮನ್ವಿತೈಃ ॥

ಆಗ ಅವರು ಅಭಿ ಮಂತ್ರಿತವಾದ ದರ್ಭೆಗಳನ್ನೇ ವಜ್ರಾಯುಧವನ್ನಾಗಿ ಮಾಡಿಕೊಂಡು ಅವನ ಮೇಲೆ ಪ್ರಯೋಗಿಸಿದರು. ಅದರಿಂದ ವೇನನು ತಕ್ಷಣದಲ್ಲಿಯೇ ಸತ್ತು ಬಿದ್ದನು. ಹೀಗೆ ವೇದ ವಿದ್ವೇಷದ ಫಲವಾಗಿ ವೇನ ರಾಜನು ಮರಣ ಹೊಂದಿದ ಬಳಿಕ ರಾಷ್ಟ್ರವು ಅರಾಜಕವಾಯಿತು. ಆ ಅನಾಯಕವಾದ ದೇಶದಲ್ಲಿ ಕಳ್ಳಕಾಕರು ನುಗ್ಗಿ

ಕಳವು ಕೊಲೆ ಸುಲಿಗೆಗಳನ್ನು ನಡೆಸಿದರು. ಇದರಿಂದ ಪರಿಪೀಡಿತರಾದ ಪ್ರಜೆಗಳು ತಮ್ಮ ರಾಜನನ್ನು ಸಂಹರಿಸಿದ ಋಷಿಗಳಿಗೆ ಶರಣುಹೋದರು. ಆಗ ಆ ಋಷಿಗಳು ಅರಮನೆಗೆ ಬಂದು ಪ್ರಾಣಹೋದ ವೇನ ರಾಜನ ಶರೀರದ ಕೈಯನ್ನು ಕಡೆದರು. ಆ ಎಡಗೈ ಮಂಥನದಿಂದ ಒಬ್ಬ ಕುಳ್ಳಾದ ಮನುಷ್ಯನು ಎದ್ದು ಬಂದನು.

೯೭೫. ತಮೂಚೂ ಋಷಯಸ್ಸರ್ವೇ ನಿಷೀದತು ಭವಾನಿತಿ
ತಸ್ಮಾನ್ನಿಷಾದಾ ಉತ್ಪನ್ನಾ ವೇನ ಕಲ್ಮಷ ಸಂಭವಾಃ ॥

ಅವನಿಗೆ ಋಷಿಗಳು ''ನಿಷೀದತು ಭವಾನ್'' ''ನೀನು ಕುಳಿತುಕೋ'' ಎಂದು ಹೇಳಿದರು. ಆದರಿಂದ ನಿಷಾದ ಎಂದು ಅವನಿಗೆ ಹೆಸರಾಯಿತು. ವೇನನ ಎಡಗೈ ತೋಳಿನ ಮಂಥನದಿಂದ ವೇನನ ಕಾಲುಷ್ಯ ಮೂಲಕ ಹುಟ್ಟಿದ ಈ ನಿಷಾದನೇ ಮುಂದೆ ನಿಷಾದ ಜಾತಿಗೆ ಮೂಲ ಪುರುಷನಾದನು. ಈ ಬಳಿಕ ಎಲ್ಲ ಋಷಿಗಳು ಆ ವೇನ ದೇಹದ ಬಲಗೈಯನ್ನು ಕಡೆಯ ತೊಡಗಿ ದರು. ಆದರಿಂದ ಬೆಟ್ಟದಂತೆ ಬೃಹದಾಕಾರವುಳ್ಳ ದಿವ್ಯ ಲಕ್ಷಣಗಳಿಂದ ಒಡಗೂಡಿದ ಮತ್ತೊಬ್ಬ ಪುರುಷನು ಉತ್ಪನ್ನನಾದನು. ಅವನು ಕೈಯಲ್ಲಿ ಬಿಲ್ಲುಬಾಣಗಳನ್ನು ಹಿಡಿದು ಚಕ್ರಧ್ವಜ ಮುಂತಾದ ಚಕ್ರವರ್ತಿ ಲಕ್ಷಣಗಳಿಂದ ಸಹಿತನಾಗಿಯೇ ಉದ್ಭೂತನಾಗಿದ್ದನು. ಅದನ್ನು ನೋಡಿ ಇಂದ್ರಾದಿ ದೇವತೆಗಳು ಭೂಮಂಡಲದ ಪರಿಪಾಲಕನಾದ ಮಹಾರಾಜನೆಂದು ಅವನಿಗೆ ಪಟ್ಟಾಭಿಷೇಕ ಮಾಡಿದರು.

೯೭೬. ತತಃ ರಂಜಯಾಮಾಸ ಧರ್ಮೇಣ ಪೃಥವೀಂ ತದಾ ।
ಪಿತ್ರಾ ವಿರಂಜಿತಾಸ್ತಸ್ಯ ತೇನ ಸಾ ಪರಿಪಾಲಿತಾ ॥
ತತೋ ರಾಜೇತಿ ಶಬ್ದೋಽಭೂತ್ ಪೃಥಿವ್ಯಾ ರಂಜನಾದಿಹ ॥

ಅನಂತರ ಅವನು ಧರ್ಮದಿಂದ ಪೃಥ್ವಿಯನ್ನು ಪಾಲಿಸಿ ಪ್ರಜೆಗಳನ್ನು ರಂಜಿಸಿದನು. ತಂದೆ ಪ್ರಜೆಗಳನ್ನು ಭಂಜನ ಮಾಡಿದರೆ ಮಗನು ರಂಜನೆ ಮಾಡಿ ರಂಜಯತೀತಿ 'ರಾಜಾ' ಎಂಬ ಹೆಸರನ್ನು ಪಡೆದನು. ರಾಜ್ಯಾರೂಢನಾದ ಬಳಿಕ ಆ ವೇನ ಕುಮಾರನಿಗೆ ಒಂದು ದೊಡ್ಡ ಚಿಂತೆ ಯಾಯಿತು. ''ನನ್ನ ತಂದೆ ವೇದ ದ್ವೇಷಿ. ಧರ್ಮದ್ರೋಹಿ. ಯಜ್ಞಗಳನ್ನೆಲ್ಲ ಹಾಳು ಮಾಡಿಬಿಟ್ಟ. ಅಂಥ ಅಧಾರ್ಮಿಕ ತಂದೆಯ ಉತ್ತರ ಕ್ರಿಯೆಯನ್ನು ಮಾಡುವದು ಹೇಗೆ? ವೇದೋಕ್ತ ಅಂತ್ಯ ಸಂಸ್ಕಾರವನ್ನು ಮಾಡದಿದ್ದರೆ ಅವನಿಗೆ ಪರಲೋಕದಲ್ಲಿ ಸದ್ಗತಿಯಾಗುವದೆಂತು? ಹೀಗೆ ಚಿಂತೆ ಮಾಡುತ್ತ ಮಹಾರಾಜನು ಕುಳಿತುಕೊಂಡಾಗ ಅಲ್ಲಿಗೆ ನಾರದರು ಬಂದರು. ಅವರಿಗೆ ಆಸನಕೊಟ್ಟು ನಮಸ್ಕಾರ ಮಾಡಿ ಪ್ರಶ್ನಿಸಿದನು. ''ಪೂಜ್ಯರೇ, ತಾವು ಮೂರು ಲೋಕಗಳ ಒಳ್ಳೇದನ್ನೂ ಬಲ್ಲಿರಿ, ಕೆಟ್ಟದ್ದನ್ನು ಬಲ್ಲಿರಿ. ಆದುದರಿಂದ ದುರಾಚಾರಿಯೂ, ದೇವ ಬ್ರಾಹ್ಮಣ ನಿಂದಕನೂ ಆದ ನನ್ನ ತಂದೆಯು ಈಗ ಎಲ್ಲಿ ಇರುತ್ತಾನೆ? ಈ ಲೋಕದಲ್ಲಿ ಧರ್ಮಭ್ರಷ್ಟನಾದ ಅವನು ಯಾವ ಗತಿ ಹೊಂದಿದ್ದಾನೆ? ತಿಳಿಸಿರಿ.

೯೭೭. ತತೋಽ ಬ್ರವೀನ್ನಾರದಸ್ತಂ ಜ್ಞಾತ್ವಾ ದಿವ್ಯೇನ ಚಕ್ಷುಷಾ ।
ಮ್ಲೇಂಛ ಮಧ್ಯೇ ಸಮುತ್ಪನ್ನಃ ಕ್ಷಯಕುಷ್ಠ ಸಮನ್ವಿತಃ ॥

ಆಗ ನಾರದರು ದಿವ್ಯ ದೃಷ್ಟಿಯಿಂದ ನೋಡಿ ''ಮಹಾರಾಜಾ, ನಿಮ್ಮ ತಂದೆಯು ಈಗ

ಮ್ಲೇಂಛ ಜಾತಿಯಲ್ಲಿ ಹುಟ್ಟಿದ್ದಾನೆ. ಅವನಿಗೆ ಕ್ಷಯರೋಗ ಹತ್ತಿದೆ. ಮೇಲೆ ಕುಷ್ಠರೋಗವೂ ಕೂಡಿದೆ. ಈ ಎರಡು ರೋಗಗಳಿಂದ ಜರ್ಜರನಾಗಿ ನರಳುತ್ತಿದ್ದಾನೆ'' ಎಂದು ಹೇಳಿದರು. ನಾರದರ ಈ ನುಡಿಯನ್ನು ಕೇಳಿ ಮಹಾತ್ಮನಾದ ಪೃಥುರಾಜನ ಚಿಂತೆ ಇಮ್ಮಡಿಸಿತು, ದುಃಖ ಮುಮ್ಮಡಿಸಿತು. ಅವನು ಯೋಚಿಸತೊಡಗಿದನು.

**೯೭೮. ಚಿಂತಯಾಮಾಸ ದುಃಖಾರ್ತಃ ಕಥಂ ಕಾರ್ಯಮಯಾಭವೇತ್ ।**
**ಪುತ್ರಃ ಸ ಕಥ್ಯತೇ ಲೋಕೇ ಯಃಪಿತೃನ್ ತ್ರಾಯತೇ ಭಯಾತ್॥**

''ಮುಂದೆ ಏನು ಮಾಡಬೇಕು? ತಂದೆಯ ದುಃಖವನ್ನು ದೂರ ಮಾಡದಿದ್ದರೆ ನಾನು ಮಗನಾಗಿದ್ದು ಏನು ಪ್ರಯೋಜನ! ತಂದೆಯನ್ನು ಪರಲೋಕದ ಭಯದಿಂದ ಪಾರು ಮಾಡಿ ರಕ್ಷಿಸುವವನೇ ಪುತ್ರ ಎನಿಸುತ್ತಾನೆ. ಈ ಪುತ್ರ ಧರ್ಮವನ್ನು ಸರಿಯಾಗಿ ಪರಿಪಾಲಿಸುವದು ನನಗೆ ಅಶಕ್ಯವಾಯಿತಲ್ಲ! ಇದಕ್ಕೇನು ಉಪಾಯ!'' ಇಂತು ಚಿಂತಾಕ್ರಾಂತನಾದ ಆ ಮಹಾರಾಜನು ''ಇದಕ್ಕೆ ಏನಾದರೂ ಉಪಾಯ ಹೇಳಬೇಕು'' ಎಂದು ನಾರದರನ್ನೇ ಕೇಳಿದನು. ಆಗ ನಾರದರು ''ಹಾಗಾದರೆ ನೀನು ಈಗಲೇ ಹೊರಡು. ನಿನ್ನ ಮ್ಲೇಂಛ ತಂದೆಯ ದೇಹವನ್ನು ತೀರ್ಥೋದಕದಿಂದ ಪರಿಶುದ್ಧಗೊಳಿಸು. ಸ್ಥಾಣುತೀರ್ಥದ ಪುಣ್ಯ ಸರೋವರದಲ್ಲಿ ಅವನಿಗೆ ಸ್ನಾನಮಾಡಿಸು'' ಎಂದು ಹೇಳಿದರು. ಮಹಾತ್ಮರಾದ ನಾರದರಿಂದ ತಮ್ಮ ತಂದೆಯ ಈ ಹೊಸ ಜನ್ಮದಲ್ಲಿ ಯಾವ ದೇಶದಲ್ಲಿ ಇರುವನೆಂಬುದನ್ನು ತಿಳಿದುಕೊಂಡು ಮಹಾರಾಜನು ಆ ದೇಶಕ್ಕೆ ಹೋದನು.

**೯೭೯. ಸ ಗತ್ವಾ ಚೋತ್ತರಂ ದೇಶಂ ಮ್ಲೇಂಚ್ಛ ಮಧ್ಯೇ ದದರ್ಶಹ**
**ಕುಷ್ಠರೋಗೇಣ ತಂ ವೀಕ್ಷ್ಯ ಕ್ಷಯೇಣ ಚ ಸಮನ್ವಿತಮ್ ॥**

ಅಲ್ಲಿ ವಿಚಾರಿಸಲಾಗಿ ಉತ್ತರದೇಶದ ಮ್ಲೇಂಛ ಜನರ ಮಧ್ಯದಲ್ಲಿ ನಾರದರು ಹೇಳಿದ ಲಕ್ಷಣಗಳಿಂದ ಅವನಿಗೆ ತಮ್ಮ ತಂದೆಯ ಗುರುತು ಸಿಕ್ಕಿತು. ಅಲ್ಲಿ ಒಬ್ಬ ಕುಷ್ಠರೋಗಿಯು ಕ್ಷಯಹತ್ತಿ ನವೆದು ನೆರಳುತ್ತಿದ್ದನು. ಅದನ್ನು ಕಂಡು ಮಹಾರಾಜನಿಗೆ ದುಃಖ ಉಕ್ಕಿ ಬಂದಿತು. ಅವನು ಅಲ್ಲಿರುವ ಅವನ ಮ್ಲೇಛ್ಛ ಬಂಧುಗಳಿಗೆ ಬಿನ್ನಹ ಮಾಡಿಕೊಂಡನು.

**೯೮೦. ಹಾ ಮ್ಲೇಚ್ಛಾ ನೌಮಿ ಪುರುಷಂ ಸ್ವಗೃಹಂ ಚ ನಯಾಮ್ಯಹಂ**
**ತತ್ರಾಹಮೇನಂ ನಿರುಜಂ ಕರಷ್ಯೇ ಯದಿ ಮನ್ಯಸೇ ॥**

''ಬಾಂಧವರೇ, ನಿಮಗೆ ನಮಸ್ಕಾರ ಮಾಡುತ್ತೇನೆ. ಈ ರೋಗಿಷ್ಠ ಮನುಷ್ಯನನ್ನು ನನಗೆ ಒಪ್ಪಿಸಿರಿ. ನೀವು ಅನುಮತಿ ಕೊಟ್ಟರೆ ಈ ರೋಗಿಯನ್ನು ನಮ್ಮ ಮನೆಗೆ ಕರೆದುಕೊಂಡು ಹೋಗುತ್ತೇನೆ. ಔಷಧ ಉಪಚಾರಗಳಿಂದ ಇವನ ಬೇನೆಯನ್ನು ಗುಣ ಪಡಿಸುತ್ತೇನೆ.

**೯೮೧. ತಥೇತಿ ಸರ್ವತೋ ಮ್ಲೇಚ್ಛಾಃ ಪುರುಷಂ ತಂ ದಯಾಪರಮ್**
**ಊಚುಃ ಪ್ರಣತಸರ್ವಾಂಗಾಃ ಯಥಾ ಜಾನಾಸಿ ತತ್ಕುರು ॥**

ತಮ್ಮ ಬೇನೆಕೊಳಕ ಬಂಧುವಿನ ಮೇಲೆ ಇಷ್ಟು ದಯೆ ತೋರುವ ಈ ಕರುಣಾಳು ಮಹಾಪುರುಷನ ಬಗೆಗೆ ಆ ಮ್ಲೇಚ್ಛ ಜನರಿಗೆಲ್ಲ ಒಳ್ಳೇ ಗೌರವ ಬುದ್ಧಿ ಹುಟ್ಟಿತು. ಅವರೆಲ್ಲರೂ ಮಹಾರಾಜನಿಗೆ ಸಾಷ್ಟಾಂಗ ನಮಸ್ಕಾರ ಮಾಡಿ ತಮಗೆ ತಿಳಿದಂತೆ ಮಾಡಿರಿ

ಎಂದು ಕೈಮುಗಿದು ಹೇಳಿದರು. ಅನಂತರ ಮಹಾರಾಜನು ಆ ಮ್ಲೇಚ್ಛ ಕುಲದ ಬಂಧು ಬಳಗದವರಿಗೆಲ್ಲ ಕೈತುಂಬ ದುಡ್ಡು ಕೊಟ್ಟನು.

೯೮೨. ತತಃ ಆನೀಯ ಪುರುಷಾನ್ ಶಿಬಿಕಾವಾಹನೋಚಿತಾನ್
ದತ್ವಾ ಶುಲ್ಕಂ ಚ ದ್ವಿಗುಣಂ ಸುಖೇನಾನೀಯಾತಾಂ ದ್ವಿಜ ॥

ಮತ್ತು ಅಲ್ಲಿಯೇ ಒಂದು ಪಲ್ಲಕ್ಕಿಯನ್ನು ಮಾಡಿಸಿ ಅದನ್ನು ಹೊರಲು ಕೆಲವು ಸಮರ್ಥ ಜನರನ್ನು ಎರಡು ಪಟ್ಟು ಹಣ ಕೊಟ್ಟು ಗೊತ್ತುಪಡಿಸಿದನು. ಆ ಪಲ್ಲಕ್ಕಿಯಲ್ಲಿ ಮೆತ್ತನೆಯ ಹಾಸಿನಲ್ಲಿ ಆ ರೋಗಿಯನ್ನು ಸುಖವಾಗಿ ಮಲಗಿಸಿ ಕುರುಕ್ಷೇತ್ರಕ್ಕೆ ಇವನನ್ನು ಹೊತ್ತುಕೊಂಡು ನಡೆಯಿರಿ'' ಎಂದು ಅಪ್ಪಣೆ ಇತ್ತನು.

೯೮೩. ಗೃಹೀತ್ವಾ ಶಿಬಿಕಾಂ ಕ್ಷಿಪ್ರಂ ಕುರುಕ್ಷೇತ್ರೇಣ ಯಾಂತಿ ತೇ ।
ತತ್ರ ನೀತ್ವಾ ಸ್ಥಾಣು ತೀರ್ಥಂ ಅವತೀರ್ಯ ತತೋ ಗತಾಃ॥

೯೮೪. ಮಾ ತಾತ ಸಾಹಸಂ ಕಾರ್ಷೀಃ ತೀರ್ಥಂ ರಕ್ಷ ಪ್ರಯತ್ನಕಃ ।
ಅಯಂ ಪಾಪೇನ ಘೋರೇಣ ಸರ್ವತಃ ಪರವೇಷ್ಟಿತಃ ॥

೯೮೫. ವೇದ ನಿಂದಾ ಮಹತ್ಪಾಪಂ ತಸ್ಯಾಂತೋ ನೈವ ಲಭ್ಯತೇ ।
ಸೋಽಯಂ ಸ್ನಾತೋ ಮಹತ್ತೀರ್ಥಂ ನಾಶಯಿಷ್ಯತಿ ತತ್ಕ್ಷಣಾತ್॥

ಅವನ ಆದೇಶದಂತೆ ಬೋವಿಗಳು ಪಾಲಿಕೆಯನ್ನು ಹೊತ್ತುಕೊಂಡು ಕುರುಕ್ಷೇತ್ರದ ಮಾರ್ಗದಿಂದ ಹೊರಟು ಸ್ಥಾಣುತೀರ್ಥಕ್ಕೆ ಅವನನ್ನು ಕರೆತಂದು ಇಳಿಸಿದರು. ಮಧ್ಯಾಹ್ನದಲ್ಲಿ ಮಹಾರಾಜನು ಆ ರೋಗಿಗೆ ಅಲ್ಲಿಯ ತೀರ್ಥದಲ್ಲಿ ಸ್ನಾನ ಮಾಡಿಸಲು ಉದ್ಯತನಾದನು. ಆದರೆ ಅಷ್ಟರಲ್ಲಿ ದೇವವಾಣಿಯಾಯಿತು. ''ದಮ್ಮಯ್ಯ, ಇಂಥ ಸಾಹಸವನ್ನು ಮಾತ್ರ ಮಾಡಬೇಡ. ಈ ತೀರ್ಥವನ್ನು ಸಂರಕ್ಷಿಸು. ನೀನು ಸ್ನಾನಕ್ಕೆ ಕರೆತಂದ ಮನುಷ್ಯನು ಮಹಾಪಾಪಿ. ವೇದ ನಿಂದಕ. ವೇದ ನಿಂದೆಯಿಂದ ಬರುವ ಪಾಪಕ್ಕೆ ಇತಿಮಿತಿಯೇ ಇಲ್ಲ. ಈ ಪಾಪಿ ಪುರುಷನು ಸ್ನಾನಮಾಡಿದರೆ ಈ ತೀರ್ಥವೇ ಹಾಳಾಗಿ ಹೋಗುವದು. ಇಂಥ ಘೋರ ದುರಂತ ಅಸಂಖ್ಯ ಅಪರಿಮಿತ ಪಾಪರಾಶಿಗಳು ಈ ವೇದ ನಿಂದಕನನ್ನು ಸುತ್ತಿ ಬಿಟ್ಟವೆ. ದಯಮಾಡಿ ಇವನನ್ನು ಈ ತೀರ್ಥಕ್ಕೆ ತರಬೇಡ.'' ಆಕಾಶದಲ್ಲಿ ವಾಯುದೇವನು ನುಡಿದ ಈ ಮಾತನ್ನು ಕೇಳಿ ರಾಜನ ಅಂತರಂಗದಲ್ಲಿ ಅತ್ಯಂತ ಸಂತಾಪವಾಯಿತು. ದುಃಖದಿಂದ ಅವನು ಆರ್ತನಾಗಿ ನುಡಿದನು.

೯೮೬. ಏಷ ಘೋರೇಣ ಪಾಪೇನ ಹ್ಯತೀವ ಪರಿವೇಷ್ಠಿತಃ ।
ಪ್ರಾಯಶ್ಚಿತ್ತಂ ಕರಿಷ್ಯೇಹಂ ಯದ್ವದಿಷ್ಯಂತಿ ದೇವತಾಃ ॥

೯೮೭. ಸ್ನಾತ್ವಾ ಚ ತೀರ್ಥೇ ತ್ವಮಭಿಷಿಂಚಸ್ವ ವಾರಿಣಾ ।
ಆಗಸೋ ಲುಂಪನಂ ಯಾವತ್ ಪ್ರತಿಕೂಲಾಂ ಸರಸ್ವತೀಮ್ ॥

''ಇವನು ಘೋರ ಪಾಪಗಳಿಂದ ಸುತ್ತುವರಿಯಲ್ಪಟ್ಟಿದ್ದೇನೋ ನಿಜ. ಆದರೆ ಅದಕ್ಕೇನೂ ಪ್ರಾಯಶ್ಚಿತ್ತವಿಲ್ಲವೇ? ಎಂಥ ಪಾಪಕ್ಕಾದರೂ ಪ್ರಾಯಶ್ಚಿತ್ತವೆಂಬುದು ಉಂಟೇ ಉಂಟು. ಅದು ಎಷ್ಟು ಕಷ್ಟಕರವಾದರೂ ಚಿಂತೆ ಇಲ್ಲ. ನಾನು ಮಾಡುತ್ತೇನೆ. ದಯಮಾಡಿ

ಹೇಳಿರಿ.'' ಆಗ ಗಗನಚಾರಿಗಳಾದ ದೇವತೆಗಳು ಎಲ್ಲರೂ ಕೂಡಿ ವಿಚಾರ ಮಾಡಿ ಹೇಳಿದರು. ಈ ಪಾಪಿಯನ್ನು ತೀರ್ಥೋದಕವನ್ನು ಸಾಕ್ಷಾತ್ತಾಗಿ ಮುಟ್ಟಿಸಬೇಡ. ನೀನು ಮೊದಲು ಸ್ನಾನಮಾಡಿ ಇವನನ್ನು ದಂಡೆಯ ಮೇಲೆ ಕೂರಿಸಿ ನೀರು ತಂದು ಇವನ ತಲೆಯ ಮೇಲೆ ಸುರುವಿ ಸ್ನಾನ ಮಾಡಿಸು. ಸರಸ್ವತೀ ನದಿಯ ದಂಡೆಯ ಮೇಲೆ ಎಷ್ಟು ತೀರ್ಥಗಳಿರುವವೋ ಆ ಎಲ್ಲ ತೀರ್ಥಗಳಲ್ಲಿಯೂ ನೀನು ಸ್ನಾನಮಾಡಿ ಇವನಿಗೆ ಪ್ರೋಕ್ಷಣ ಮಾಡು. ಹೀಗೆ ಇವನ ಪಾಪಗಳೆಲ್ಲ ಪರಿಹಾರವಾಗುವ ತನಕ ಇವನ ದೇಹವನ್ನು ಎಲ್ಲ ತೀರ್ಥಜಲಗಳಿಂದ ತೊಳೆತೊಳೆದು ಶುದ್ಧಗೊಳಿಸು. ಸ್ವಾರ್ಥಿಯಾಗಿ ದೇವರನ್ನು ದ್ವೇಷಿಸಿ, ಬ್ರಾಹ್ಮಣರನ್ನು ದೂಷಿಸಿ, ಧರ್ಮವನ್ನು ದ್ರೋಹಿಸಿ, ಜ್ಞಾನಿಗಳಿಂದ ಬಹಿಷ್ಕೃತನಾದ ಈ ದುರಾತ್ಮನು ಎಂದೂ ತಾನಾಗಿ ಶುದ್ಧನಾಗಲಾರ. ಆದುದರಿಂದ ನೀನೇ ಎಲ್ಲ ತೀರ್ಥಗಳಲ್ಲಿ ಇವನ ಹೆಸರಿನಿಂದ ಮುಳುಗಿ ತೀರ್ಥೋದಕವನ್ನು ತಂದು ಇವನ ತಲೆಯ ಮೇಲೆ ಹೊಯ್ದು ಸರ್ವತೀರ್ಥಾಭಿಷೇಕವನ್ನು ಮಾಡಿಸು. ಹಾಗಾದರೆ ಮಾತ್ರ ಇವನು ಶುದ್ಧಿ ಪಡೆದು ಉದ್ಧಾರವನ್ನು ಹೊಂದುವನು.

**೯೮. ಸ ತೇಪ್ವಾಪ್ಲವನಂ ಕುರ್ವನ್ ತೀರ್ಥೇಷು ಚ ದಿನೇ ದಿನೇ**
**ಅಭ್ಯಷಿಂಚತ್ ಸ್ವಪಿತರಂ ತೀರ್ಥತೋಯೇನ ನಿತ್ಯಶಃ ।**

ಈ ದೇವತೆಗಳ ಆದೇಶವನ್ನು ಕೇಳಿ ಪೃಥುರಾಜನು ಅದರಂತೆ ನಡೆದನು. ತೀರ್ಥಯಾತ್ರೆಯ ದಾರಿ ಹಿಡಿದನು. ದಿನಕ್ಕೊಂದು ತೀರ್ಥಕ್ಕೆ ಹೋಗಿ ತಂದೆಯ ಹೆಸರಿನಿಂದ ಮುಳುಗಿದನು. ಆ ನೀರಿನಿಂದ ಈ ರೋಗಿಯನ್ನು ಎರೆದನು. ಹೀಗೆ ಪ್ರತಿದಿನವೂ ತೀರ್ಥೋದಕದಿಂದ ತನ್ನ ತಂದೆಗೆ ಆ ಮಹಾರಾಜನು ಸ್ನಾನ ಸಂಪ್ರೋಕ್ಷಣೆಗಳನ್ನು ಮಾಡಿಸತೊಡಗಿದನು.

**೯೯. ಸ್ಥಾಣೋರ್ಮಠೇ ಕೌಲಪತಿಃ ದೇವದ್ರವ್ಯಸ್ಯ ರಕ್ಷಿತಾ ।**

ಇದೇ ಸಮಯದಲ್ಲಿ ಅಲ್ಲಿಗೆ ಒಂದು ನಾಯಿಯು ಬಂದಿತು. ಆ ನಾಯಿಯು ಪೂರ್ವಜನ್ಮದಲ್ಲಿ ಸ್ಥಾಣು ಮಠದಲ್ಲಿ ಮಹಂತವಾಗಿದ್ದಿತು. ದೇವರಿಗೆ ಬಂದ ದ್ರವ್ಯವನ್ನು ದೇವತಾ ಕಾರ್ಯಕ್ಕೂ ಧರ್ಮ ಕಾರ್ಯಕ್ಕೂ ವಿನಿಯೋಗಿಸುವದು ಅವನ ಕರ್ತವ್ಯವಾಗಿತ್ತು. ಅದರಂತೆ ಅವನು ಮಾಡುತ್ತಿದ್ದುದರಿಂದ ಅವನು ಎಲ್ಲ ದೇಶಗಳಲ್ಲಿಯೂ ಅತ್ಯಂತ ಜನಪ್ರಿಯ ವ್ಯಕ್ತಿಯಾಗಿದ್ದನು.

**೯೦. ಕಾಲೇನ ಚಲಿತಾ ಬುದ್ಧಿಃ ದೇವ ದ್ರವ್ಯಸ್ಯ ನಾಶನೇ**

ಹೀಗೆ ಕೆಲವು ದಿನ ಕಳೆದ ಬಳಿಕ ಅವನಿಗೆ ದುರ್ಬುದ್ಧಿ ಹುಟ್ಟಿತು. ದೇವಸ್ಥಾನದ ದ್ರವ್ಯವನ್ನು ಸ್ವಾರ್ಥಕ್ಕಾಗಿ ಉಪಯೋಗಿಸತೊಡಗಿದನು. ಆ ಪಾಪದಿಂದ ಅವನು ಬೇಗ ಮರಣಹೊಂದಿ ಯಮಲೋಕಕ್ಕೆ ಹೋದನು.

**೯೧. ದೃಷ್ಟ್ವಾಯಮೋಽಬ್ರವೀದ್ವಾಕ್ಯಂ ಶ್ವಯೋನೀಂ ವ್ರಜ ಮಾಚಿರಮ್ ॥**

ಅವನನ್ನು ನೋಡಿದ ಕೂಡಲೇ ಯಮದೇವನು ''ದೇವಸ್ವ ತಿಂದದ್ದರಿಂದ ನೀನು ನಾಯಿಯಾಗಿ ಹೋಗು'' ಎಂದು ಹೇಳಿದನು.

ಮುಂದೆ ಅವನು ಸೌಗಂಧಿಕವನದಲ್ಲಿ ನಾಯಿಯಾಗಿ ಹುಟ್ಟಿದನು. ದೊಡ್ಡದಿತ್ತು ಆ ನಾಯಿಯ ಬಳಗ. ಕೆಲಕಾಲದ ಮೇಲೆ ಅದರ ಜೋಡಿ ನಾಯಿಗಳೇ ಇದರೊಡನೆ ಹೊಡೆದಾಡಿ ಹಣ್ಣು ಮಾಡಿದವು. ಸ್ವಕೀಯರಿಂದಲೇ ಏಟುತಿಂದು ಸೋತು ಸುಣ್ಣವಾದ ಆ ನಾಯಿಯು ದ್ವೈತವನಕ್ಕೆ ಹೋಯಿತು. ಅಲ್ಲಿ ಕೆಲದಿನ ಸುತ್ತಾಡಿ ಸನ್ನಿಹತ್ಯಾಕ್ಷೇತ್ರದಲ್ಲಿರುವ ರುದ್ರಸರೋವರಕ್ಕೆ ಹೋಯಿತು.

೯೯೨. ಅತೀವ ತೃಷಯಾಯುಕ್ತಃ ಸರಸ್ವತ್ಯಾಂ ನ್ಯಮಜ್ಜಹ ।
ತತ್ರ ಸಂಪ್ಲುತ ದೇಹಸ್ತು ವಿಮುಕ್ತಃ ಸರ್ವ ಕಿಲ್ಬಿಷೈಃ ॥

ಅಲ್ಲಿ ಬಂದ ಕೂಡಲೇ ಅದಕ್ಕೆ ಭಯಂಕರ ಬಾಯಾರಿಕೆಯಾಗಿ ಸರಸ್ವತಿ ನದಿಯಲ್ಲಿಯೇ ಹೋಗಿ ಮುಳುಗಿತು. ಆ ನದೀ ನೀರಿನಲ್ಲಿ ಮೈ ಅದ್ದುವದೊಂದೇ ತಡ ಅದರ ಪಾಪರಾಶಿ ಎಲ್ಲ ತೊಳೆದುಹೋಯಿತು.

೯೯೩. ಆಹಾರ ಲೋಭೇನ ತದಾ ಪ್ರವಿವೇಶ ಕುಲಂ ಮಠಮ್ ।
ಪ್ರವಿಶಂತಂ ತದಾ ದೃಷ್ಟ್ವಾ ಶ್ವಾನಂ ಭಯಸಮನ್ವಿತಮ್ ॥

ಆಗ ಅದಕ್ಕೆ ಬಹಳ ಹಸಿವೆ ಅನಿಸಿ ಆಹಾರವನ್ನು ಹುಡುಕಬೇಕೆಂದು ಸ್ಥಾಣು ಮಠದಲ್ಲಿ ಪ್ರವೇಶ ಮಾಡಬೇಕೆಂದು ಬಂದಿತು. ಯಾರಾದರೂ ನೋಡಿ ಹೊಡೆದಾರು ಎಂಬ ಭಯದಿಂದ ಆಚೆ ಈಚೆ ನೋಡಿ ಅದು ಮೆಲ್ಲನೆ ಮಠದೊಳಗೆ ಹೋಗತೊಡಗಿತು.

ಮಹಾರಾಜನು ಕರೆತಂದ ರೋಗಿಷ್ಠ ಮ್ಲೇಚ್ಛನು ಆಕಸ್ಮಿಕವಾಗಿ ತೀರ್ಥಯಾತ್ರೆಯ ಕ್ರಮದಿಂದ ಮಹಾರಾಜನೊಂದಿಗೆ ಅಲ್ಲಿಗೆ ಬಂದು ಆ ಮಠದ ಬಾಗಿಲ ಬಳಿಯಲ್ಲಿಯೇ ಕುಳಿತಿದ್ದನು.

೯೯೪. ಸ ತಂ ಪಸ್ಪರ್ಶ ಶನಕೈಃ ಸ್ಥಾಣು ತೀರ್ಥೇ ಮಮಜ್ಜ ಚ ।
ಪತಿತಃ ಪೂರ್ವ ತೀರ್ಥೇಷು ವಿಪ್ರುಷೈಃ ಪರಿಷೇಚಿತಃ ।

೯೯೫. ಶುನೋಽಸ್ಯ ಗಾತ್ರ ಸಂಭೂತೈಃ ಅಬ್ಬಿಂದುಭಿಃ ಸಸಿಂಚಿತಃ ।
ವಿರಕ್ತದೃಷ್ಟಿಃ ಸಶುನಕಃ ಕ್ಷಣೇನ ಚ ತತಃ ಪರಮ್ ॥

೯೯೬. ಸ್ಥಾಣು ತೀರ್ಥಸ್ಯ ಮಾಹಾತ್ಮ್ಯಾತ್ ಸಪುತ್ರೇಣ ಚ ತಾರಿತಃ ।
ನಿಯತಸ್ತತ್ಕ್ಷಣಾಜ್ಜಾತಃ ದಿವ್ಯದೇಹ ಸಮನ್ವಿತಃ ॥

ಹೆದರುತ್ತ ಬೆದರುತ್ತ ಮೆಲ್ಲನೆ ಒಳಗೆ ಹೋಗುವ ಆ ನಾಯಿಯನ್ನು ನೋಡಿ ಆ ಮ್ಲೇಂಛನು ಅದರ ಮೇಲೆ ಮೆತ್ತಗೆ ಕೈಯಾಡಿಸಿದನು. ಆಗ ನಾಯಿಯು ಸ್ಥಾಣು ತೀರ್ಥಕ್ಕೆ ಹೋಗಿ ಸ್ನಾನಮಾಡಿ ಬಂದಿತ್ತು. ಆ ಮ್ಲೇಂಛನ ಬಳಿಯಲ್ಲಿ ನಿಂತು ತನ್ನ ಮೈ ಜಾಡಿಸಿತು. ಚಳಿಗೆ ನಿಮಿರಿದ ಅದರ ಮೈಗೂದಲುಗಳಿಂದ ಕೆಲವು ಹನಿಗಳು ಈ ಮ್ಲೇಛನ ಮೈಗೆ ಸಿಡಿದವು. ಆ ತೀರ್ಥ ಜಲ ಬಿಂದುಗಳ ಸಂಪ್ರೋಕ್ಷಣದಿಂದ ಮ್ಲೇಂಛನ ಪಾಪಗಳೆಲ್ಲವೂ ಪರಿಹಾರವಾದವು. ಒಮ್ಮೆಲೇ ಅವನು ಹೋಗಿ ಆ ಸ್ಥಾಣು ತೀರ್ಥದಲ್ಲಿ ಸ್ನಾನ ಮಾಡಿದನು. ಇಷ್ಟು ದಿನ ದೂರ ಕುಳಿತೇ ಸ್ನಾನ ಸಂಪ್ರೋಕ್ಷಣೆ ಮಾಡಿದ ಅವನು ಇಂದು ತೀರ್ಥಸ್ನಾನ ಮಾಡಿದ. ಅವನಲ್ಲಿ ವೈರಾಗ್ಯ ಉದಿಸಿತು. ಮಗನು ಮಾಡಿದ ಸರ್ವ ತೀರ್ಥಾಭಿಷೇಕ ದಿಂದಲೂ, ಸ್ಥಾಣು ತೀರ್ಥದ ಪ್ರಭಾವದಿಂದಲೂ ಆ ಮ್ಲೇಂಛನು

ಪರಿಶುದ್ಧನಾಗಿ ಆ ಪಾಪಿಜನ್ಮ ದಿಂದ ಮುಕ್ತನಾಗಿ ದಿವ್ಯ ದೇಹ ಪಡೆದು ಉದ್ಧಾರ ಹೊಂದಿದನು. ಹೀಗೆ ದೈವೀ ದೇಹ ಪಡೆದು ವೇನನು ತನ್ನ ಉದ್ಧಾರಕ್ಕೆ ಕಾರಣನಾದ ಸ್ಥಾಣ್ವೇಶ್ವರನನ್ನು ಇಂತು ಸ್ತೋತ್ರ ಮಾಡಿದನು.

### ವೇನ ಉವಾಚ

೯೯೭. ಪ್ರಪದ್ಯೇ ದೇವಮೀಶಾನಂ ತ್ವಾಮಜಂ ಚಂದ್ರಭೂಷಣಮ್
ಮಹಾದೇವಂ ಮಹಾತ್ಮಾನಂ ವಿಶ್ವಸ್ಯ ಜಗತಃ ಪತಿಮ್ ॥

ಎಲ್ಲರ ಶಾಸಕನೂ ಜನ್ಮ ರಹಿತನೂ ಚಂದ್ರಭೂಷಣನೂ ಸಮಸ್ತ ಪ್ರಪಂಚಕ್ಕೆ ಅಧಿಪತಿಯೂ ಆದ ಮಹಾತ್ಮನಾದ ಮಹಾದೇವನನ್ನು ಶರಣು ಹೊಂದಿದ್ದೇನೆ.

೯೯೮. ನಮಸ್ತೇ ದೇವ ದೇವೇಶ ಸರ್ವಶತ್ರು ನಿಷೂದನ
ದೇವೇಶ ಬಲಿ ವಿಷ್ಟಂಭಿನ್ ದೇವೈರ್ದೈತ್ಯೈಶ್ಚ ಪೂಜಿತ ॥

ಸರ್ವಶತ್ರುಗಳನ್ನು ಸಂಹರಿಸಿ ಬಲಿಷ್ಠರಾದ ದುಷ್ಟರನ್ನು ದಮನ ಮಾಡಿದ ದೇವದೇವೇಶನೇ, ದೇವದೈತ್ಯರಿಂದ ಪೂಜಿತನಾದ ನಿನಗೆ ವಂದನೆ.

೯೯೯. ಶರೀರೇ ತವ ಪಶ್ಯಾಮಿ ಸೋಮಮಗ್ನಿಂ ಜಲೇಶ್ವರಮ್
ನಾರಾಯಣಂ ತಥಾ ಸೂರ್ಯಂ ಬ್ರಹ್ಮಾಣಂ ಚ ಬೃಹಸ್ಪತಿಮ್

ಚಂದ್ರಸೂರ್ಯ ಅಗ್ನಿ ವರುಣ ಹರಿ ಬ್ರಹ್ಮ ಬೃಹಸ್ಪತಿ ಮುಂತಾದವರೆಲ್ಲರೂ ನಿನ್ನ ದೇಹದಲ್ಲಿಯೇ ಇದ್ದುದನ್ನು ನೋಡುತ್ತಿದ್ದೇನೆ.

೧೦೦೦. ನಮೋದಂಡಾಯ ಚಂಡಾಯ ಅಂಡಾಯೋತ್ಪತ್ತ್ಯ ಹೇತವೇ
ಡಿಂಡಿಮಾಸಕ್ತ ಹಸ್ತಾಯ ದಂಡಿ ಮುಂಡಾಯ ತೇನಮಃ
ನಮೋಭವಾಯ ಶರ್ವಾಯ ವರದಾಯೋಗ್ರರೂಪಿಣೇ ।
ಅಂಧಕಾಸುರ ಹಂತ್ರೇ ಚ ಪಶೂನಾಂ ಪತಯೇ ನಮಃ ।

೧೦೦೧. ನಮೋ ನಾನಾಭಿರಾಮಾಯ ನಮಃ ಪಟುತರಾಯ ಚ ।
ನಮೋ ಗಜೇಂದ್ರನಾಥಾಯ ವೃಷಸ್ಕಂಧಾಯ ಧನ್ವಿನೇ ॥

೧೦೦೨. ಸಂಕ್ರಂದನಾಯ ಚಂಡಾಯ ಪರ್ಣಧಾರ ಪುಟಾಯ ಚ ।
ನಮೋ ಹಿರಣ್ಯವರ್ಣಾಯ ನಮಃ ಕನಕವರ್ಚಸೇ ॥

೧೦೦೩. ನಮೋಜ್ಯೇಷ್ಠಾಯ ಶ್ರೇಷ್ಠಾಯ ಬಲಾತಿ ಬಲಘಾತಿನೇ।
ಕಾಲನಾಶಾಯ ಕಾಲಾಯ ಸಂಸಾರಕ್ಷಯ ರೂಪಿಣೇ ॥

೧೦೦೪. ಗಂಗಾಲುಲಿತ ಕೇಶಾಯ ಮುಂಜಕೇಶಾಯ ವೈ ನಮಃ ।
ನಮಃಷಟ್ಕರ್ಮತುಷ್ಟಾಯ ತ್ರಿಕರ್ಮನಿರತಾಯ ಚ ॥

೧೦೦೫. ದುರ್ವಾರಣೋ ದುರ್ವಿಷಹೋ ದುಸ್ಸಹೋದುರತಿಕ್ರಮಃ
ದುರ್ಧರ್ಷೋ ದುಷ್ಪ್ರಕಾಶಶ್ಚ ಅಧಿಹಾ ವ್ಯಾಧಿನಾಶನಃ ॥

೧೦೦೬. ಕೃಷ್ಣಾಜಿನೋತ್ತರೀಯಾಯ ಹೃಷಿಕೇಶ ನಮೋಸ್ತುತೇ।
ತ್ರ್ಯಂಬಕಾಂಬಿಕಾನಾಥ ವ್ಯಕ್ತವ್ಯಕ್ತಾಯ ತೇ ನಮಃ ।

೧೦೦೭. ನಮಃ ಸಹಸ್ರಶೀರ್ಷಾಯ ಸಹಸ್ರ ಚರಣಾಯ ಚ ।
ಸಹಸ್ರೋದ್ಯತ ಶೀಲಾಯ ಸಹಸ್ರಾಭರಣಾಯ ಚ ॥

೧೦೦೮. ಪ್ರಾಣಿ ಸಂಘಟ್ಟ ಘಂಟಾಯ ನಮಃ ಕಿಲಕಿಲ ಪ್ರಿಯ ।
ಹುಂ ಹುಂ ಕಾರಾಯ ಪಾರಾಯ ಹುಂಕಾರಾಯ ಪ್ರಿಯಾಯಚ॥

೧೦೦೯. ಸಹಸ್ರಚಿತ್ರೋರುಘಂಟಾಯ ಘಂಟಾ ಘಂಟ ನಿಘಂಟವೇ
ಸಹಸ್ರಶಿತ ಘಂಟಾಯ ಘಂಟಾಮಾಲಾ ವಿಭೂಷಿಣೇ ॥

೧೦೧೦. ಚಿತಾ ಭಸ್ಮಪ್ರಿಯಾಯೈವ ಕಪಾಲಾಸಕ್ತ ಪಾಣಯೇ ।
ವಿಭೀಷಣಾಯ ಭೀಷ್ಮಾಯ ಹಿಮವ್ರತಧರಾಯ ಚ ॥

೧೦೧೧. ಯೇಷಾಂ ನ ವಿದ್ಯತೇ ಸಂಖ್ಯಾ ಪ್ರಮಾಣಂ ರೂಪಮೇವ ಚ।
ಅಸಂಖ್ಯಾಯೇಗಣಾ ರುದ್ರಾಃ ನಮಸ್ತೇಭ್ಯೋಽಸ್ತು ನಿತ್ಯಶಃ

೧೦೧೨.ಪ್ರಸೀದ ಮಮ ಭದ್ರಂ ತೇ ತವ ಭಾಗವತಸ್ಯ ಚ
ತ್ವಯಿ ಮೇ ಹೃದಯಂ ದೇವ ತ್ವಯಿ ಬುದ್ಧಿಃ ಮತಿಸ್ತ್ವಯಿ।
ಸ್ತುತ್ವೈವಂ ಸ ಮಹಾದೇವಂ ವಿರರಾಮ ದ್ವಿಜೋತ್ತಮಾಃ ॥

ಹೀಗೆ ವೇನನು ಮಹಾದೇವರನ್ನು ಭಕ್ತಿಯಿಂದ ಸ್ತೋತ್ರ ಮಾಡಿದನು.

ವಾಮನ ಮಹಾಪುರಾಣದಲ್ಲಿ ತಂದೆಯ ಭಂಜನ ಮಗನ ರಂಜನ ಎಂಬ
ನಲವತ್ತೇಳನೇಯ ಅಧ್ಯಾಯವು ಮುಗಿದುದು.

—೦—

## ನಾಯಿಜನ್ಮ ನೀಗಿತು

**ಅಧ್ಯಾಯ - ೪೮**

**೧೦೧೩. ಅಥೈವಮಬ್ರವೀದ್ದೇವಃ ತ್ರೈಲೋಕ್ಯಾಧಿಪತಿರ್ಭವಃ ।**
**ಆಶ್ವಾಸನಕರಂ ಚಾಸ್ಯ ವಾಕ್ಯವಿದ್ ವಾಕ್ಯಮುತ್ತಮಮ್ ॥**

ಭಕ್ತಿಯಿಂದ ತನ್ನನ್ನು ಇಂತು ಸ್ತೋತ್ರ ಮಾಡುವ ವೇನನನ್ನು ಮೂರು ಲೋಕದ ಒಡೆಯನಾದ ಮಹಾದೇವನು ಸಮಾಧಾನಪಡಿಸುತ್ತ ಅವನಿಗೆ ಹಿತಕರವಾಗುವಂತೆ ನುಡಿದನು.

**೧೦೧೪. ಅಹೋ ತುಷ್ಟೋಽಸ್ಮಿ ತೇ ರಾಜನ್ ಸ್ತವೇನಾನೇನ ಸುವ್ರತ**
**ಬಹುನಾತ್ರ ಕಿಮುಕ್ತೇನ ಮತ್ಸಮೀಪೇ ವಸಿಷ್ಯಸಿ ॥**

''ಸರ್ವತೀರ್ಥ ಸ್ನಾನರೂಪವಾದ ವ್ರತ ಮಾಡಿದ ವೇನನೇ, ನಿನ್ನ ಈ ಸ್ತೋತ್ರದಿಂದ ನಾನು ತುಷ್ಟನಾಗಿದ್ದೇನೆ. ಬಹಳ ಮಾತಿನಿಂದೇನು! ಇನ್ನು ಮೇಲೆ ನೀನು ನನ್ನ ಸಮೀಪದಲ್ಲಿಯೇ ವಾಸಮಾಡುವಿ, ಬಹು ದೀರ್ಘಕಾಲದವರೆಗೆ ನನ್ನ ಬಳಿಯಲ್ಲಿಯೇ ಇದ್ದು ಬಳಿಕ ಮತ್ತೆ ನನ್ನ ದೇಹದಿಂದಲೇ ನೀನು ಜನಿಸುವಿ. 'ಅಂಧಕ' ಎಂದು ಆಗ ನಿನಗೆ ಹೆಸರಾಗುವದು. ದೇವತೆಗಳ ಶತ್ರುವಾದ ನೀನು ಹಿರಣ್ಯಾಕ್ಷನ ಮನೆಯಲ್ಲಿ ಜನ್ಮತಾಳಿ ಅಲ್ಲಿಯೇ ಬೆಳೆಯುವಿ. ಪೂರ್ವ ಜನ್ಮದಲ್ಲಿ ನೀನು ಮಾಡಿದ ಘೋರ ಪಾಪ ಹಾಗೂ ವೇದ ನಿಂದೆಯ ಪಾತಕಗಳು ಇನ್ನೂ ಸವೆದಿಲ್ಲ. ಆ ದುಷ್ಟಕರ್ಮದಿಂದ ನೀನು ಜಗನ್ಮಾತೆಯಲ್ಲಿಯೇ ಮೋಹಗೊಳ್ಳುವೆ. ಆಗ ನನ್ನ ತ್ರಿಶೂಲದಿಂದ ನಿನ್ನ ದೇಹವನ್ನು ಇರಿದು ನಾನೇ ನಿನ್ನನ್ನು ಸಂಹರಿಸುವೆನು. ಆ ನನ್ನ ಶೂಲಪ್ರಹಾರದಿಂದ ನಿನ್ನ ಮನೋಮಾಲಿನ್ಯ ಹಾಗೂ ಪಾಪರಾಶಿಗಳೆಲ್ಲ ನಾಶವಾಗುವವು. ಅನಂತರ ನೀನು ನನ್ನನ್ನು ಭಕ್ತಿಯಿಂದ ಸೇವೆ ಮಾಡಿ ನನ್ನ ಗಣಾಧೀಶರಲ್ಲಿ ಭೃಂಗಿರಿಟಿ ಎಂಬ ಹೆಸರಿನಿಂದ ಪ್ರಖ್ಯಾತನಾಗುವಿ. ಅನಂತರ ನನ್ನ ಸನ್ನಿಧಾನದಲ್ಲಿಯೇ ಇದ್ದು ನನ್ನನ್ನು ಆರಾಧಿಸಿ ಸಿದ್ಧಿಯನ್ನು ಹೊಂದುವಿ.

ವೇನನು ಹೇಳಿದ ಈ ನನ್ನ ಸ್ತೋತ್ರವನ್ನು ಪಠಿಸಿದವನೂ ಕೇಳಿದವನೂ ಯಾವದೇ ಅಶುಭವನ್ನು ಹೊಂದದೇ ದೀರ್ಘಾಯುಷ್ಯವನ್ನು ಪಡೆಯುವರು. ಎಲ್ಲ ದೇವತೆಗಳಲ್ಲಿ ಭಗವಾನ್ ಶಂಕರನು ಶ್ರೇಷ್ಠ. ಅವನ ಶಿವಸ್ತುತಿಗಳೆಲ್ಲೆಲ್ಲ ವೇನನು ರಚಿಸಿದ ಈ ಹರಸ್ತುತಿಯು ಶ್ರೇಷ್ಠ. ಕೀರ್ತಿ, ರಾಜ್ಯ ಸುಖ ಐಶ್ವರ್ಯ, ಧನಮಾನಗಳನ್ನು ಬಯಸುವವರೂ, ವಿದ್ಯೆಯನ್ನು ಬಯಸುವವರೂ ಇದನ್ನು ಭಕ್ತಿಯಿಂದ ಕೇಳಿದರೆ ಅವರ ಇಷ್ಟಾರ್ಥಗಳು ಈಡೇರುತ್ತವೆ. ಅಧಿವ್ಯಾಧಿಗಳು ಅವನನ್ನು ಬಾಧಿಸುವದಿಲ್ಲ. ಅವನು ಎಲ್ಲ ಕಾರ್ಯಗಳಲ್ಲಿ ಯಶಸ್ವಿಯಾಗುವನು, ತೇಜಸ್ವಿಯಾಗುವನು. ಅವನ ಕಾರ್ಯಕ್ಕೆ ಯಾವ ಯಕ್ಷರಾಕ್ಷಸರೂ ವಿಘ್ನ ಮಾಡರು. ಭೂತ ಪಿಶಾಚಿಗಳೂ ಈ ಶಿವಸ್ತುತಿಯ ಪಠಣ ಪಾರಾಯಣಗಳು ನಡೆದ ಮನೆಯಲ್ಲಿ ನಿಲ್ಲಲಾರವು. ಪತಿಯ ಅಪ್ಪಣೆಪಡೆದು ಈ ಶಿವಸ್ತುತಿಯನ್ನು ಶ್ರವಣ ಮಾಡಿದ ನಾರಿಯು ದೇವಿಯಂತೆ ಸರ್ವಕಾಲದಲ್ಲಿಯೂ ಪೂಜ್ಯಳಾಗುವಳು. ಈ ಸ್ತೋತ್ರ ಪಾಠ ಮಾಡಿದವರ ಕಾಯಿಕ ವಾಚಿಕ ಮಾನಸಿಕ ದೋಷಗಳೆಲ್ಲವೂ ಪರಿಹಾರವಾಗಿ ಅವರ ಮನೋರಥಗಳೆಲ್ಲವೂ ಸಿದ್ಧಿಸುತ್ತದೆ. ವೇನರಾಜನೇ, ನಿನ್ನ ಮನಸ್ಸಿಗೆ ಬೇಕಾದ ವರವನ್ನು ಬೇಡು, ಕೊಡುತ್ತೇನೆ.

**ವೇನ :** ದೇವಗಣ ಶಾಸಕನೇ, ಇಲ್ಲಿಯ ಸ್ಥಾಣು ಲಿಂಗದ ದರ್ಶನದಿಂದ ಮತ್ತೂ ಈ ಕ್ಷೇತ್ರದ ಮಹಿಮೆಯಿಂದ ಹಾಗೂ ನಿನ್ನ ಸಾಕ್ಷಾತ್ಕಾರದಿಂದ ನಾನು ಸರ್ವಪಾತಕಗಳಿಂದಲೂ ಈಗ ಮುಕ್ತನಾಗಿದ್ದೇನೆ. ನೀನು ನಿಜವಾಗಿಯೂ ನನ್ನ ಮೇಲೆ ಸಂತುಷ್ಟನಾಗಿ ವರ ಕೊಡಬೇಕೆಂದು ಬಯಸುತ್ತಿದ್ದರೆ ಈ ನಿನ್ನ ಇನ್ನೊಬ್ಬ ಭಕ್ತನನ್ನು ಉದ್ಧಾರ ಮಾಡು. ನಿನ್ನ ಸೇವಕನಾದ ಅವನು ದೇವರಿಗಾಗಿ ಬಂದ ಹಣವನ್ನು ಸ್ವಾರ್ಥಕ್ಕಾಗಿ ಉಪಯೋಗಿಸಿಕೊಂಡದ್ದರಿಂದ ನಾಯಿಯಾಗಿ ಹುಟ್ಟಿದ್ದಾನೆ. ಅವನ ಮೇಲೆಯೂ ನೀನು ಅನುಗ್ರಹ ಮಾಡಬೇಕು. ಅವನು ನನ್ನನ್ನು ಮುಟ್ಟಿದ್ದರಿಂದಲೇ ನನಗೆ ನಿನ್ನ ಸರೋವರದಲ್ಲಿ ಮುಳುಗು ಹಾಕಿ ಸ್ನಾನ ಮಾಡಲು ಶಕ್ಯವಾಯಿತು. ಅದಕ್ಕಿಂತಲೂ ಮೊದಲು ಈ ತೀರ್ಥದಲ್ಲಿ ಸ್ನಾನ ಮಾಡಬೇಡವೆಂದು ದೇವತೆಗಳು ನನ್ನನ್ನು ನಿಷೇಧಿಸಿದ್ದರು. ಇವನ ನಾಯಿ ಜನ್ಮದ ಸ್ಪರ್ಶದಿಂದ ನನಗೆ ನಿನ್ನ ಸರೋವರದಲ್ಲಿ ಸ್ನಾನ ಮಾಡುವ ಯೋಗವು ಒದಗಿತು. ನಿನ್ನ ಸಂದರ್ಶನದ ಸೌಭಾಗ್ಯವು ದೊರಕಿತು. ಈ ನಾಯಿಯ ಉಪಕಾರವನ್ನು ಮರೆಯಲಾರೆ. ದಯಮಾಡಿ ಅವನನ್ನು ಅನುಗ್ರಹಿಸು.

ವೇನನ ಈ ಮಾತನ್ನು ಕೇಳಿ ಮಹಾದೇವರು ಪ್ರೀತರಾಗಿ ನುಡಿದರು. ''ನನ್ನ ಅನುಗ್ರಹದಿಂದ ಮಠದಲ್ಲಿ ದೇವಸ್ವವನ್ನು ತಿಂದು ನಾಯಿಯಾಗಿರುವ ಆ ನನ್ನ ಸೇವಕನಾದರೂ ನನ್ನ ಪ್ರಸಾದದಿಂದ ಪಾಪಮುಕ್ತನಾಗಿ ಶಿವಲೋಕಕ್ಕೆ ಹೋಗುವನು.

ಕುರುಕ್ಷೇತ್ರದ ಮಹಾತ್ಮೆ, ಶಿವ ಸರೋವರದ ಮಹಿಮೆ, ನನ್ನ ಲಿಂಗದ ಉತ್ಪತ್ತಿ ಮೊದಲಾದುದನ್ನು ಶ್ರವಣ ಮಾಡಿದರೆ ಸರ್ವಪಾಪ ಪರಿಹಾರವಾಗುವದು. ಹೀಗೆ ಹೇಳಿ ವಿಶ್ವವಂದ್ಯನಾದ ಶಂಕರನು ಅಲ್ಲಿಯೇ ಅದೃಶ್ಯನಾದನು. ಆ ನಾಯಿಗೆ ತಕ್ಷಣದಲ್ಲಿ ಜನ್ಮಾಂತರದ ಸ್ಮರಣೆ ಬಂದಿತು. ಶಿವನ ಪ್ರಸಾದದಿಂದ ಅದು ತನ್ನ ನಾಯಿ ಜನ್ಮ ನೀಗಿ ದಿವ್ಯ ಶರೀರವನ್ನು ಹೊಂದಿತು ಮತ್ತೂ ಅಲ್ಲಿಯೇ ಇದ್ದ ಪೃಥುರಾಜನ ಬಳಿಗೆ ಬಂದಿತು.

ಪೃಥುರಾಜನು ತನ್ನ ಪ್ರತಿದಿನದ ಪದ್ಧತಿಯಂತೆ ಸ್ಥಾಣು ತೀರ್ಥದಲ್ಲಿ ಸ್ನಾನ ಮಾಡಿ ತಂದೆಯನ್ನು ಕಾಣಬೇಕೆಂದು ಉತ್ಕಂಠೆಯಿಂದ ತಮ್ಮ ಪರ್ಣಶಾಲೆಗೆ ಬಂದನು. ಆದರೆ ಅಲ್ಲಿ ರೋಗಿಷ್ಠನಾದ ತನ್ನ ಆ ಮ್ಲೇಚ್ಛ ತಂದೆ ಇರಲಿಲ್ಲ. ಶೂನ್ಯನಾದ ತನ್ನ ಎಲೆಮನೆಯನ್ನು ನೋಡಿ ಅವನಿಗೆ ಕಡುದುಃಖವಾಗಿ ಶೋಕಿಸತೊಡಗಿದನು.

ಆಗ ಅಲ್ಲಿಯೇ ನಿಂತ ಒಬ್ಬ ದಿವ್ಯ ಪುರುಷನು ಅತ್ಯಾನಂದಪರವಶನಾಗಿ ಈ ವಾಕ್ಯವನ್ನು ನುಡಿದನು. ''ಸತ್ಪುತ್ರನೇ, ಏಕೆ ಶೋಕ ಮಾಡುವೆ ? ನಿನ್ನ ತಂದೆಯಾದ ನಾನು ಇಲ್ಲಿಯೇ ಇರುತ್ತೇನೆ. ನಿನ್ನ ಸೇವೆಯಿಂದ ನಾನು ಹಿಂದಿನ ಘೋರ ನರಕದಿಂದ ಪಾರಾಗಿ ಈ ದೈವೀ ಶರೀರವನ್ನು ಪಡೆದು ನಿಂತಿದ್ದೇನೆ. ನೀನು ಪ್ರತಿಯೊಂದು ತೀರ್ಥಗಳ ದಂಡೆಯ ಮೇಲಿನ ಮಳಲ ರಾಶಿಯ ಮೇಲೆ ನನ್ನನ್ನು ಕೂಡ್ರಿಸಿ ತೀರ್ಥೋದಕದಿಂದ ನನ್ನನ್ನು ಪ್ರೋಕ್ಷಣೆ ಮಾಡುತ್ತಿದ್ದೆ. ಆ ತೀರ್ಥಜಲವನ್ನು ಹೊತ್ತು ತಂದು ನನಗೆ ಸ್ನಾನ ಮಾಡಿಸುತ್ತಿದ್ದೆ. ಆ ಎಲ್ಲ ಪುಣ್ಯತೀರ್ಥಗಳ ಅಭಿಷೇಕದಿಂದಲೂ, ಹಾಗೂ ನಾಯಿ ಜನ್ಮ ಪಡೆದ ಈ ಸಾಧು ಪುರುಷನ ಪ್ರಸಾದದಿಂದಲೂ, ಈ ಸ್ಥಾಣ್ವೀಶ್ವರನ ಸಾಕ್ಷಾತ್ಕಾರದಿಂದಲೂ ನಾನು ನನ್ನ ಹಿಂದಿನ ಪಾಪಗಳಿಂದ ಮುಕ್ತನಾದೆ. ದಿವ್ಯ ದೇಹದಿಂದ

ಯುಕ್ತನಾದೆ. ಇನ್ನು ಆ ಪರಮೇಶ್ವರನು ನೆಲೆಸಿದ ಶಿವಲೋಕಕ್ಕೆ ನಾನು ಪ್ರಯಾಣ ಮಾಡುತ್ತೇನೆ.'' ದಿವ್ಯ ದೇಹ ಧರಿಸಿದ ಆ ವೇನರಾಜನು ತನ್ನ ಮಗನಾದ ಪೃಥುರಾಜನಿಗೆ ಹೀಗೆ ಹೇಳಿ ಅಲ್ಲಿ ಪ್ರತಿಷ್ಠಿತನಾದ ಈಶ್ವರನನ್ನು ಪೂಜಿಸಿ ಸಿದ್ಧಿಪಡೆದನು. ದುಷ್ಟನಾದ ವೇನರಾಜನು ಸತ್ಪುತ್ರನಿಂದ ಘೋರ ಜನ್ಮ ಹಾಗೂ ಭೀಕರ ಪಾಪ ಮತ್ತು ಉಲ್ಬಣ ರೋಗಗಳಿಂದ ಪಾರಾದನು. ದೇವಸ್ವವನ್ನು ತಿಂದು ನಾಯಿಪಾಡಿಗೆ ಈಡಾದ ಆ ಶಿವಭಕ್ತನೂ ಕೂಡ ಸ್ಥಾಣುತೀರ್ಥದ ಪ್ರಭಾವದಿಂದ ತನ್ನ ಎಲ್ಲ ಪಾಪಗಳಿಂದ ಮುಕ್ತನಾಗಿ ಪರಮೇಶ್ವರನ ನಿವಾಸವಾದ ಕೈಲಾಸಲೋಕಕ್ಕೆ ಪ್ರಯಾಣಿಸಿದನು.

ಇತ್ತ ವೇನನ ಮಗನಾದ ಪೃಥುರಾಜನು ಪಿತೃಋಣದಿಂದ ಮುಕ್ತನಾಗಿ ರಾಜಧಾನಿಗೆ ಬಂದು ಧರ್ಮದಿಂದ ತನ್ನ ಪ್ರಜೆಗಳನ್ನು ಪರಿಪಾಲಿಸಿದನು. ಯಜ್ಞಯಾಗಗಳನ್ನು ಮಾಡಿದನು. ಬ್ರಾಹ್ಮಣರಿಗೆ ಬಯಸಿದ್ದನ್ನು ದಾನಕೊಟ್ಟನು. ಸ್ವಯಂ ತಾನಾದರೂ ಬೇಕು ಬೇಕಾದ ಭೋಗ ಭಾಗ್ಯಗಳನ್ನು ಅನುಭವಿಸಿದನು. ಮಿತ್ರರಿಗೆ ಸಾಕಷ್ಟು ಧನ ಕನಕಗಳನ್ನು ನೀಡಿ ಸಂತೋಷಿಸಿದನು. ಹೆಂಗಳೆಯರನ್ನು ಭೋಗ ಅನುರಾಗಗಳಿಂದ ಆನಂದಪಡಿಸಿದನು. ಕೊನೆಗೆ ತನ್ನ ಮಗನನ್ನು ಸಾಮ್ರಾಜ್ಯ ಸಿಂಹಾಸನದ ಮೇಲೆ ಕೂಡಿಸಿ ಪಟ್ಟಾಭಿಷೇಕ ಮಾಡಿ ತಾನು ಕುರುಕ್ಷೇತ್ರಕ್ಕೆ ಹೋದನು.

ಆ ಕ್ಷೇತ್ರಕ್ಕೆ ಬಂದು ಶಂಕರನನ್ನು ಆರಾಧಿಸಿದನು. ಅಲ್ಲಿ ನಿಂತು ಉಗ್ರವಾದ ತಪಸ್ಸನ್ನು ಮಾಡಿದನು. ಕೊನೆಗೆ ಯೋಗ ಮಾರ್ಗದಿಂದ ದೇಹತ್ಯಾಗ ಮಾಡಿ ಮೋಕ್ಷವನ್ನು ಹೊಂದಿದನು. ಸ್ಥಾಣುತೀರ್ಥದ ಈ ದಿವ್ಯವಾದ ಪ್ರಭಾವವನ್ನು ಕೇಳಿದ ಮನುಷ್ಯರು ಸದ್ಗತಿಯನ್ನು ಹೊಂದುತ್ತಾರೆ.

ವಾಮನ ಮಹಾಪುರಾಣದಲ್ಲಿ ನಾಯಿಜನ್ಮ ನೀಗಿತು ಎಂಬ
ನಲವತ್ತೆಂಟನೇಯ ಅಧ್ಯಾಯವು ಮುಗಿದುದು



## ಸ್ಥಾಣುಲಿಂಗದ ಮಹಿಮೆ

**ಅಧ್ಯಾಯ - ೪೯**

೧. ಚತುರ್ಮುಖಾನಮುತ್ಪತ್ತಿಂ ವಿಸ್ತರೇಣ ಮಮಾನಘ ।
ಪೃಥ್ವೀಶ್ವರಾಣಾಂ ಚರಿತಂ ಶ್ರೋತುಮಿಚ್ಛಾ ಪ್ರವರ್ತತೇ ॥

**ಮಾರ್ಕಂಡೇಯ :** ಪೂಜ್ಯರೇ, ಚತುರ್ಮುಖರೂಪಶಿವನ ಹಾಗೂ ಪೊಡವಿ ಯೊಡೆಯರಾದ ರಾಜಾಧಿರಾಜರುಗಳ ಉತ್ಪತ್ತಿಯನ್ನೂ ಹಾಗೂ ಚರಿತ್ರೆಯನ್ನೂ ವಿವರವಾಗಿ ಕೇಳಬೇಕೆಂದು ನನಗೆ ಬಯಕೆಯಾಗಿದೆ. ದಯವಿಟ್ಟು ಅಪ್ಪಣೆ ಕೊಡಿಸಬೇಕು.

೨. ಶೃಣು ಸರ್ವಮಶೇಷೇಣ ಕಥಯಿಷ್ಯಾಮಿ ತೇನಘ ।
ಬ್ರಹ್ಮಣಃ ಸೃಷ್ಟಿ ಕಾಮಸ್ಯ ಯದ್‌ವೃತ್ತಂ ಪದ್ಮಜನ್ಮನಃ ॥

**ಸನತ್ಕುಮಾರ :** ಪುಣ್ಯಶಾಲಿಯೇ, ನೀನು ಕೇಳಿದ ವಿಷಯವನ್ನೆಲ್ಲ ಬಿತ್ತರಸಿ ಹೇಳುತ್ತೇನೆ, ಆಲಿಸು.

೩. ಉತ್ಪನ್ನ ಏವ ಭಗವಾನ್ ಬ್ರಹ್ಮಾ ಲೋಕಪಿತಾಮಹಃ ।
ಸಸರ್ಜ ಸರ್ವಭೂತಾನಿ ಸ್ಥಾವರಾಣಿ ಚರಾಣಿಚ ॥

ನಾರಾಯಣನ ಹೊಕ್ಕಳದ ಹೊಂದಾವರೆಯಿಂದ ಹುಟ್ಟಿಬಂದ ಬ್ರಹ್ಮದೇವನು ಸೃಷ್ಟಿ ಮಾಡಬೇಕೆಂದು ಬಯಸಿದನು. ಆ ಪ್ರಪಂಚದ ಪಿತಾಮಹನು ತಾನು ಜನಿಸಿದ ಕೂಡಲೇ ಎಲ್ಲ ಪ್ರಾಣಿಗಳನ್ನೂ ಸ್ಥಾವರ ವಸ್ತುಗಳನ್ನೂ ಜಂಗಮ ಜಂತುಗಳನ್ನು ಸೃಷ್ಟಿಮಾಡಿದನು.

೪. ಪುನಶ್ಚಿಂತಯತಃ ಸೃಷ್ಟಿಂ ಜಜ್ಞೇಕನ್ಯಾ ಮನೋರಮಾ ।
ನೀಲೋತ್ಪಲದಲ ಶ್ಯಾಮಾ ತನು ಮಧ್ಯಾ ಸುಲೋಚನಾ ॥

ಮತ್ತೆ ಹೊಸಸೃಷ್ಟಿಗಾಗಿ ಆ ಚತುರ್ಮುಖನು ಅಲೋಚಿಸಲು ಮೊದಲು ಮಾಡಿದನು. ಕೂಡಲೇ ಅವನಿಂದ ಓರ್ವ ಚೇತೋಹಾರಿಯಾದ ಚೆಲುವಿನ ಕನ್ಯೆ ಜನಿಸಿದಳು. ನೈದಿಲೆಯಂತೆ ಕೆಂಪಗಿತ್ತು ಅವಳ ದೇಹದ ಬಣ್ಣ. ನಡು ಸಣ್ಣ ಕಣ್ಣು ಸುಂದರ.

೫. ತಾಂ ದೃಷ್ಟ್ವಾಭಿಮತಾಂ ಬ್ರಹ್ಮಾ ಮೈಥುನಾಯಾಜುಹಾವ ತಾಮ್।
ತೇನ ಪಾಪೇನ ಮಹತಾ ಶಿರೋऽಶೀರ್ಯತ ವೇಧಸಃ ॥

ಅವಳ ಚೆಲುವಿಕೆಯನ್ನು ಕಂಡು ಹುಟ್ಟಿಸಿದ ಬ್ರಹ್ಮನ ಮನಸ್ಸಿನಲ್ಲಿಯೇ ಮೋಹ ಉಂಟಾಯಿತು. ಅವಳ ಸೌಂದರ್ಯಕ್ಕೆ ಮೆಚ್ಚಿ ಪಿತಾಮಹನು ಆ ಮನ ಮೋಹಿನಿಯನ್ನು ಕಾಮಕೇಳಿಗಾಗಿ ಆಮಂತ್ರಿಸಿದನು. ಇದೇನು ಸಾಮಾನ್ಯ ಪಾಪವೇ! ವಿಧಾತನ ತಲೆಯೇ ಸೀಳಿ ಹೋಯಿತು ಆ ಪಾಪದಿಂದ.

೬. ತೇನ ಶೀರ್ಣೇನ ಸ ಯಯೌ ತೀರ್ಥಂ ತ್ರೈಲೋಕ್ಯವಿಶ್ರುತಮ್।
ಸಾನ್ನಿಹತ್ಯಂ ಸರಃ ಪುಣ್ಯಂ ಸರ್ವಪಾಪಕ್ಷಯಾವಹಮ್ ॥

ಆ ಶೀಳಿದ ಶಿರದೊಂದಿಗೇ ಬ್ರಹ್ಮದೇವನು ಸನ್ನಿಹತಿ ಎಂಬ ಮೂರುಲೋಕ ದಲ್ಲಿಯೇ ಕೀರ್ತಿವೆತ್ತ ಪಾವನ ಸರೋವರಕ್ಕೆ ಐತಂದನು. ಆ ಕ್ಷೇತ್ರದ ಪಾವನ ಜಲವು ಎಲ್ಲ ವಿಧ ಪಾಪಗಳಿಗೂ ವಿನಾಶಕವಾಗಿದ್ದಿತು.

೭. ತತ್ರ ಪುಣ್ಯೇ ಸ್ಥಾಣುತೀರ್ಥೇ ಋಷಿ ಸಿದ್ಧ ನಿಷೇವಿತೇ ।
ಸರಸ್ವತ್ಯುತ್ತರೇ ತೀರ್ಥೇ ಪ್ರತಿಷ್ಠಾಪ್ಯ ಚತುರ್ಮುಖಃ ॥

ಸರಸ್ವತೀ ನದಿಯ ಉತ್ತರ ತೀರದಲ್ಲಿರುವ ಆ ಸ್ಥಾಣುತೀರ್ಥವನ್ನು ಋಷಿಗಳೂ ಸಿದ್ಧಪುರುಷರೂ ಸೇವಿಸುತ್ತಿದ್ದರು. ಆ ಪುಣ್ಯತೀರ್ಥದಲ್ಲಿ ನೆಲಿಸಿ ಚತುರ್ಮುಖನು ಚಂದ್ರಶೇಖರನನ್ನು ಭಕ್ತಿಯಿಂದ ಆರಾಧಿಸಿದನು.

೮. ಆರಾಧಯಾಮಾಸ ತದಾ ಧೂಪೈರ್ಗಂಧೈರ್ಮನೋರಮೈಃ ।
ಉಪಹಾರೈಸ್ತಥಾ ಹೃದ್ಯೈ ರುದ್ರ ಸೂಕ್ತೈರ್ದಿನೇ ದಿನೇ ॥

ಮನೋಹರವಾದ ಧೂಪದಿಂದ ಬೆಳಗಿದನು. ದೀಪದಿಂದ ಆರತಿ ಎತ್ತಿದನು. ಸುಗಂಧಿ ಹೂಗಳನ್ನು ಏರಿಸಿದನು. ರುಚಿಕರವಾದ ಹಣ್ಣು ಹಂಪಲಗಳ ನೈವೇದ್ಯವನ್ನು ತೋರಿಸಿದನು.

೯. ತಸ್ಯೈವಂ ಭಕ್ತಿಯುಕ್ತಸ್ಯ ಶಿವಪೂಜಾರತಸ್ಯ ಚ ।
ಸ್ವಯಮೇವಾಜಗಾಮಾಥ ಭಗವಾನ್ನೀಲ ಲೋಹಿತಃ ॥

ಪ್ರತಿದಿನವೂ ರುದ್ರ ಸೂಕ್ತಗಳ ಮಂತ್ರ ಪಠಣ ಪರಾಯಣಗಳಿಂದ ಮಹಾದೇವನನ್ನು ಮೆಚ್ಚಿಸಿದನು. ಹೀಗೆ ಶ್ರದ್ಧೆಯಿಂದ ಒಡಗೂಡಿದ ಶಿವಪೂಜೆಯಿಂದ ಸಂತುಷ್ಟನಾದ ಸಾಕ್ಷಾತ್ ಶಂಕರನೇ ಅಲ್ಲಿಗೆ ಸ್ವಯಂ ಆಗಮಿಸಿದನು. ಅಲ್ಲಿಗೆ ದಯಮಾಡಿಸಿದ ಚಂದ್ರಮೌಳಿಯನ್ನು ಕಂಡು ಪ್ರಪಂಚದ ಪಿತಾಮಹನಾದ ಬ್ರಹ್ಮದೇವನು ನೆಲದುದ್ದಕ್ಕೂ, ಅಡ್ಡ ಬಿದ್ದು ನಮಸ್ಕಾರ ಮಾಡಿ ಸ್ತೋತ್ರಗೈಯಲು ಮೊದಲು ಮಾಡಿದನು.

## ಬ್ರಹ್ಮಾ ಉವಾಚ

೧೧. ನಮಸ್ತೇಸ್ತು ಮಹಾದೇವ ಭೂತಭವ್ಯಭವಾಶ್ರಯ ।
ನಮಸ್ತೇ ಸ್ತುತಿನಿತ್ಯಾಯ ನಮಸ್ತ್ರೈಲೋಕ್ಯ ಪಾಲಿನೇ ॥

ಮೂರುಲೋಕಗಳನ್ನು ಪಾಲಿಸುವ ಮಹಾದೇವನಿಗೆ ನಮಸ್ಕಾರ. ಹಿಂದೆ ಹುಟ್ಟಿದ ಮುಂದೆ ಹುಟ್ಟಲಿರುವ ಈಗ ಬದುಕಿ ಇದ್ದ ಎಲ್ಲ ಜನರಿಗೂ ಆಶ್ರಯನಾದ ನಿನಗೆ ವಂದನೆ. ನಿರಂತರವೂ ಜ್ಞಾನಿಗಳಿಂದ ಹೊಗಳಿಕೊಳ್ಳಲ್ಪಡುವ ನಿನಗೆ ನಮೋನಮಃ

೧೨. ನಮಃ ಪವಿತ್ರದೇಹಾಯ ಸರ್ವಕಲ್ಮಷನಾಶಿನೇ
ಚರಾಚರಗುರೋ ಗುಹ್ಯ ಗುಹ್ಯಾನಾಂ ಚ ಪ್ರಕಾಶಕೃತ್ ॥

ಸಕಲ ಪಾಪಗಳನ್ನು ನಾಶಮಾಡುವ ಪವಿತ್ರ ದೇಹವುಳ್ಳ ಪರಮೇಶ್ವರನಿಗೆ ನಾನು ನಮಿಸುವೆ. ಚರಾಚರ ಗುರುವಾದ ನೀನು ಗಹನ ಗೂಢವಾದ ಅನೇಕ ತತ್ವಗಳ ಮೇಲೆ ಬೆಳಕು ಬೀರುವ ಸರ್ವಜ್ಞಮೂರ್ತಿಯಾಗಿರುವಿ.

೧೩. ರೋಗಾ ನ ಯಾಂತಿ ಭಿಷಜ್ಯೈಃ ಸರ್ವರೋಗವಿನಾಶನ ।
ರೌರವಾಜಿನಸಂವೀತ ವೀತಶೋಕ ನಮೋಸ್ತುತೇ ॥

ವೈದ್ಯರುಗಳು ಗುಣಪಡಿಸಲಾರದ ರೋಗಗಳನ್ನು ನೀನು ಪರಿಹರಿಸುವಿ. ಜಿಂಕೆಯ ಚರ್ಮವನ್ನು ಉಟ್ಟುಕೊಂಡ ಶೋಕ ಲೇಶವಿಲ್ಲದ ಶಂಕರನೇ ನಿನಗೆ ನನ್ನ ನಮಸ್ಕಾರ.

೧೪. ವಾರಿಕಲ್ಲೋಲ ಸಂಕ್ಷುಬ್ಧ ಮಹಾಬುದ್ಧಿ ವಿಘಟ್ಟನ ।
ತ್ವನ್ನಾಮ ಜಾಪಿನೋ ದೇವ ನ ಭವಂತಿ ಭವಾಶ್ರಯಾಃ ॥

ಸಮುದ್ರಮಧ್ಯದ ಹೆದ್ದರೆಗಳಂತೆ ಪ್ರಕ್ಷುಬ್ಧವಾದ ಮನಸ್ಸಿನ ಚಾಂಚಲ್ಯ, ಸ್ವೈರಗತಿಯ ಅಲೆತ ಒಲೆತಗಳನ್ನು ಕಳೆದು ಸ್ಥೈರ್ಯ ಸಮಾಧಾನಗಳನ್ನು ತಂದುಕೊಡುವ ಪರಶಿವನೇ ನಿನ್ನ ಶುಭನಾಮವನ್ನು ಜಪಿಸಿದವರಿಗೆ ಮತ್ತೆ ಸಂಸಾರದಲ್ಲಿ ತೊಳಲಬೇಕಾಗುವುದಿಲ್ಲ.

೧೫. ನಮಸ್ತೇ ನಿತ್ಯ ನಿತ್ಯಾಯ ನಮಸ್ತ್ರೈಲೋಕ್ಯ ನಾಶಿನೇ ।
ಶಂಕರಾಯಾಪ್ರಮೇಯಾಯ ವ್ಯಾಧೀನಾಂ ಶಮನಾಯಯಚ ॥

ನಿತ್ಯ ಸತ್ಯ ಸ್ವರೂಪಿಯಾದ ನಿನಗೆ ವಂದನೆ. ಪ್ರಳಯ ಕಾಲದಲ್ಲಿ ಮೂರು ಲೋಕಗಳನ್ನು ಸಂಹರಿಸುವ ರುದ್ರರೂಪಿಯೇ ನಿನಗೆ ನನ್ನ ನಮೋಽಸ್ತು. ರೋಗರುಜಿನ ಗಳನ್ನು ಕಳೆದು ಎಲ್ಲರಿಗೂ ಸೌಖ್ಯವನ್ನು ನೀಡುವ ಸಾಮಾನ್ಯ ಜನರಿಗೆ ತಿಳಿಯಲು ಅಶಕ್ಯನಾದ ಶಂಕರನಿಗೆ ನಮೋ ನಮಃ.

೧೬. ಪರಾಯಾ ಪರಿಮೇಯಾಯ ಸರ್ವಭೂತಪ್ರಿಯಾಯ ಚ ।
ಯೋಗೇಶ್ವರಾಯ ದೇವಾಯ ಸರ್ವಪಾಪಕ್ಷಯಾಯ ಚ ॥

ಈ ಪ್ರಪಂಚದಲ್ಲಿ ಸರ್ವ ಶ್ರೇಷ್ಠವಾದ ಪರ ವಸ್ತು ಎಂದರೆ ಶಿವನೇ ಸರಿ. ಯಾರಿಗೂ ತಿಳಿಯದು ಅವನ ಮಹಾಮಹಿಮೆ. ಈ ಜಗದಲ್ಲಿ ಹುಟ್ಟಿದ ಪ್ರಾಣಿ ಮಾತ್ರಕ್ಕೆಲ್ಲ ಪ್ರಿಯತಮವಾದ ಪದಾರ್ಥವೆಂದರೆ ಪರಮೇಶ್ವರನು ಒಬ್ಬನೇ. ಇಂಥ ಸಕಲರ ಪಾಪಗಳನ್ನು ನಾಶಮಾಡುವ ಯೋಗೇಶ್ವರನಾದ ಮಹಾದೇವನಿಗೆ ನಾನು ನಮಿಸುತ್ತೇನೆ.

೧೭. ನಮಃಸ್ಥಾಣ್ವೇ ಪ್ರಸಿದ್ಧಾಯ ಸಿದ್ಧ ಬಂದಿಸ್ತುತಾಯ ತೇ ।
ಭೂತಸಂಸಾರ ದುರ್ಗಾಯ ವಿಶ್ವರೂಪಾಯ ತೇ ನಮಃ ॥

ಸ್ಥಾಣು ಎಂದು ಪ್ರಸಿದ್ಧನಾದ ಈ ಮಹಾದೇವನನ್ನು ಸಿದ್ಧಪುರುಷರು ಭಟ್ಟಂಗಿ ಗಳಾಗಿ ಹೊಗಳಿ ಹಾಡುತ್ತಾರೆ. ಸಂಸಾರದ ಆಘಾತಗಳಿಂದ ತಪ್ಪಿಸಿಗೊಳ್ಳಲು ಒಂದು ದುರ್ಗ ರೂಪವಾಗಿ ಇರುವ ವಿಶ್ವರೂಪಿಯಾದ ಮಹೇಶನೇ, ನಿನಗೆ ನನ್ನ ಪ್ರಣಾಮಗಳು.

೧೮. ಫಣೇಂದ್ರೋಕ್ತ ಮಹಿಮ್ನೇ ತೇ ಫಣಂದ್ರಾಂಗದ ಧಾರಿಣೇ ।
ಫಣೇಂದ್ರ ವರಹಾರಾಯ ಭಾಸ್ಕರಾಯ ನಮೋನಮಃ ॥

ಜಗತ್ತಿಗೆಲ್ಲ ತಿಳಿವಿನ ಬೆಳಕನ್ನು ನೀಡುವ ನಿನ್ನ ಮಹಾಮಹಿಮೆಯನ್ನು ಹಾವುಗಳ ಇಂದ್ರನಾದ ಆದಿಶೇಷನು ಹಾಡಿ ಹೊಗುಳುತ್ತಿದ್ದಾನೆ. ಹಾವಿನ ಅರಸನನ್ನು ಹಾರವನ್ನಾಗಿ ಮಾಡಿಕೊಂಡು ಹೊಳೆಯುವ ಹರನೇ ನಿನಗೆ ನಮೋ ನಮಃ.

೧೯. ಏನಂ ಸ್ತುತೋ ಮಹಾದೇವಃ ಬ್ರಹ್ಮಾಣಂ ಪ್ರಾಹ ಶಂಕರಃ
ನ ಚ ಮನ್ಯುಸ್ತ್ವಯಾ ಕಾರ್ಯೋ ಭಾವಿನ್ಯರ್ಥೇ ಕದಾಚನ॥

ಹೀಗೆ ತನ್ನನ್ನು ಬಗೆಬಗೆಯಿಂದ ಬಣ್ಣಿಸಿ ಬಿನ್ನಪಿಸುವ ಬ್ರಹ್ಮದೇವರನ್ನು ಕುರಿತು ಪ್ರೀತ ಚಿತ್ತನಾದ ಪರಮೇಶ್ವರನು ನುಡಿದನು.

೨೦. ಪುರಾ ವರಾಹಕಲ್ಪೇತೇ ಯನ್ಮಯಾಪಕೃತಂ ಶಿರಃ
ಚತುರ್ಮುಖಂಚ ತದಭೂನ್ನ ಕದಾಚಿನ್ನಾಶಿಷ್ಯತಿ ॥

''ಚತುರ್ಮುಖನೇ, ಅವಶ್ಯವಾಗಿ ಆಗಲೇಬೇಕಾದ ಭವಿತವ್ಯದ ವಿಷಯದಲ್ಲಿ ನೀನು ಕೋಪಗೊಳ್ಳಬೇಡ. ಹಿಂದೆ ವರಾಹ ಕಲ್ಪದಲ್ಲಿ ನೀನು ಪಂಚಮುಖನಾಗಿದ್ದಿ. ಆಗ ನಿನ್ನ ಐದನೇ ತಲೆಯನ್ನು ನಾನು ಕತ್ತರಿಸಿ ಹಾಕಿದೆ. ಅಂದಿನಿಂದ ಉಳಿದ ನಿನ್ನ ಚತುಮುರ್ಖಗಳಿಗೆ ಎಂದಿಗೂ ಚ್ಯುತಿ ಇಲ್ಲ.

೨೧. ಅಸ್ಮಿನ್ ಸನ್ನಿಹಿತೇತೀರ್ಥ ಲಿಂಗಾನಿ ಮಮ ಭಕ್ತಿತಃ ।
ಪ್ರತಿಷ್ಠಾಪ್ಯ ವಿಮುಕ್ತಸ್ತ್ವಂ ಸರ್ವಪಾಪೈಃ ಭವಿಷ್ಯಸಿ ॥

ಯಾವುದೇ ತರಹ ಭಯಾಪಾಯವೂ ಇಲ್ಲ. ಈ ಸನ್ನಿಹಿತಿ ತೀರ್ಥದಲ್ಲಿ ಭಕ್ತಿಯಿಂದ ನೀನು ನನ್ನ ಲಿಂಗವನ್ನು ಪ್ರತಿಷ್ಠೆ ಮಾಡು. ಅದರಿಂದ ನಿನ್ನ ಎಲ್ಲ ದುರಿತಗಳೂ ದೂರಾಗುವವು.

೨೨. ಸೃಷ್ಟಿಕಾಮೇನ ಚಯತಃ ತ್ವಯಾಹಂ ಪ್ರೇರಿತಃ ಕಿಲ ।
ತೇನಾಹಂ ತ್ವಾಂ ತಥೇತ್ಯುಕ್ತ್ವಾ ಭೂತೇಭ್ಯೋ ದರ್ಶನು ಗತಃ

ಆದಿಕಾಲದಲ್ಲಿ ಸೃಷ್ಟಿಯನ್ನು ಮಾಡಬಯಸಿದ ನೀನು ನನಗೆ ಪ್ರೇರಣೆ ಮಾಡಿದೆ ಯಷ್ಟೆ! ಆಗ ನಾನು ನಿನ್ನ ಮಾತನ್ನು ಮನ್ನಿಸಿ ಎಲ್ಲ ಪ್ರಾಣಿಗಳಿಗೂ ನನ್ನ ಪ್ರತ್ಯಕ್ಷ ದರ್ಶನವನ್ನು ಕೊಟ್ಟೆನು. ಅನಂತರ ದೀರ್ಘಕಾಲದವರೆಗೆ ಈ ಸನ್ನಿಹಿತ ಸರೋವರದಲ್ಲಿ ಮುಳುಗಿ ನಾನು ಅತ್ಯುಗ್ರವಾದ ತಪಸ್ಸನ್ನು ಮಾಡಿದೆನು. ಚಿರ ಕಾಲದವರೆಗೆ ನೀನು ನನ್ನ ಮಾರ್ಗ ಪ್ರತೀಕ್ಷೆಯನ್ನು ಮಾಡಿದೆ.

೨೩. ಸೃಷ್ಟಾಹಂ ಸರ್ವಭೂತಾನಾಂ ಮನಸಾ ಕಲ್ಪಿತಸ್ತ್ವಯಾ ।
ಸೋಽಬ್ರವೀತ್ವಾ ತವಾದೃಷ್ಟ್ವಾ ಮಾಂ ಮಗ್ನಂಚ ತತೋಽಭಸಿ

ಆಗ ಸರ್ವ ಪ್ರಾಣಿಗಳ ಸೃಷ್ಟಾರನಾಗಿ ಎಲ್ಲರ ಅಂತರ್ಯಾಮಿಯಾಗಿರುವದ ರಿಂದಲೂ ಅಹೇಯನಾಗಿರುವದರಿಂದಲೂ ಅಹಂ ಶಬ್ದವಾಚ್ಯನಾದ ಆ ನಾರಾಯಣನನ್ನು ಮನಸ್ಸಿನಿಂದ ನೀನು ನೆನೆದು ಧ್ಯಾನ ಮಾಡಿದೆ. ಆಗ ಪ್ರಸನ್ನನಾದ ಆ ಪರಮಾತ್ಮನು ನನ್ನ ಮಾರ್ಗವನ್ನು ಕಾಯುತ್ತಲಿರುವ ನಿನಗೆ ''ಶಿವನು ನೀರಿನಲ್ಲಿ ಮುಳುಗಿ ತಪೋನಿರತನಾಗಿದ್ದಾನೆ'' ಎಂದು ತಿಳಿಸಿದನು.

೨೪. ಯದಿ ನೈವಾಗ್ರಜಸ್ತೇಭ್ಯಃ ತತಃ ಸೃಕ್ಷ್ಯಾಮಹೇ ಪ್ರಜಾಃ ।
ತ್ವಯೈವೋಕ್ತಶ್ಚ ನೈವಾಸ್ತಿ ತ್ವದನ್ಯಃ ಪುರುಷೋಽಗ್ರಜಃ ॥

''ಮುಂದೆ ನೀನು ಮತ್ತು ಶಿವ ಹಾಗೂ ಇತರ ಪದಾರ್ಥಗಳಿಗಿಂತ ಮೊದಲು ಹುಟ್ಟಿದ ಹಿರಿಯರು ಯಾರೂ ಇಲ್ಲದಿದ್ದರೆ ನಾವೇ ಸೃಸ್ಟಿಯನ್ನು ಮಾಡುತ್ತೇವೆ'' ಎಂದು ಹೇಳಿದನು. ಅದನ್ನು ಕೇಳಿ ನೀನು ಆ ಭಗವಂತನಿಗೆ ಇಂತು ಬಿನ್ನವಿಸಿದೆ -

''ಪೂಜ್ಯನೇ, ನಿನಗಿಂತ ಜ್ಯೇಷ್ಠನೂ ಶ್ರೇಷ್ಠನೂ ಆದ ಪುರುಷೋತ್ತಮನು ಯಾರೂ ಇಲ್ಲ. ನೀನೇ ಎಲ್ಲರಿಗಿಂತ ಹಿರಿಯ ನೀನೇ ಎಲ್ಲರಿಗಿಂತ ಶ್ರೇಷ್ಠ.''

**೨೫. ಸ್ಥಾಣುರೇಷ ಜಲೇಮಗ್ನಃ ವಿವಶಃ ಕುರು ಮದ್ಧಿತಂ ।**
**ಸಸರ್ವಭೂತಾನಸೃಜದ್ದಕ್ಷಾದೀಂಶ್ಚ ಪ್ರಜಾಪತೀನ್ ॥**

ಈ ಮಹಾದೇವನಂತೂ ನೀರಿನಲ್ಲಿಯೇ ಮುಳುಗಿ ಬಿಟ್ಟಿದ್ದಾನೆ. ಅವನೂ ಪರಾಧೀನ. ನಿನಗೇ ಅಧೀನ. ನನಗೂ ಸೃಷ್ಟಿ ಮಾಡಲು ಸಾಮರ್ಥ್ಯವು ಸಾಲದಾಗಿದೆ. ಸ್ವಾಮಿ. ಆದುದರಿಂದ ನೀನೇ ಮುಂದಿನ ಸೃಷ್ಟಿಯನ್ನು ಮಾಡು, ನನಗೆ ಕಲ್ಯಾಣವನ್ನು ಉಂಟು ಮಾಡು.'' ಚತುರ್ಮುಖನ ಈ ಬಿನ್ನಪವನ್ನು ಆಲಿಸಿ ಆ ಪುರುಷೋತ್ತಮನು ದಕ್ಷನೇ ಮೊದಲಾದ ಪ್ರಜಾಪತಿಗಳನ್ನೂ, ಎಲ್ಲ ಪ್ರಾಣಿಗಳನ್ನೂ ಸೃಷ್ಟಿ ಮಾಡಿದನು.

**೨೬. ಯೈರಿಮಂ ಪ್ರಾಕರೋತ್ಸರ್ವಂ ಭೂತಗ್ರಾಮಂ ಚತುರ್ವಿಧಮ್**
**ತಾಃ ಸೃಷ್ಟಮಾತ್ರಾಃ ಕ್ಷುದಿತಾಃ ಪ್ರಜಾಃ ಸರ್ವಾಃ ಪ್ರಜಾಪತಿಮ್।**

ಆ ಪ್ರಜಾಪತಿಗಳು ನಾಲ್ಕು ವಿಧವಾದ ಪ್ರಾಣಿಗಳನ್ನು ನಿರ್ಮಿಸಿದರು. ಆದರೆ ಹುಟ್ಟಿದ ಕೂಡಲೇ ಆ ಪ್ರಜೆಗಳು ಹಸಿವೆಯಿಂದ ಬಳಲಿ ಬೆಂಡಾದರು.

**೨೭. ಜಿಘತ್ಸವಸ್ತದಾ ಬ್ರಹ್ಮನ್ ಸಹಸಾ ಪ್ರಾದ್ರವಂಸ್ತದಾ**
**ಸಂಭಕ್ಷ್ಯಮಾಣಸ್ತ್ರಾಣಾರ್ಥೀ ಪಿತಾಮಹಮುಮಪಾದ್ರವತ್ ॥**

ಅವರಿಗೆ ತಿನ್ನಲು ಏನೂ ದೊರಕದಿದ್ದಾಗ ತಮ್ಮನ್ನು ನಿರ್ಮಿಸಿದ ಪ್ರಜಾಪತಿ ಯನ್ನೇ ಕಬಳಿಸಲು ಹೊಂಚು ಹಾಕಿ ಧಾವಿಸಿದರು. ಆಗ ಗಾಬರಿಯಾದ ಆ ಪ್ರಜಾಪತಿಯು ಹೆದರಿ ಬ್ರಹ್ಮದೇವನಾದ ನಿನ್ನ ಬಳಿಗೆ ಓಡಿ ಬಂದನು.

**೨೮. ಅಥಾಸಾಂಚ ಮಹಾವೃತ್ತಿಃ ಪ್ರಜಾನಂ ಸಂವಿಧೀಯತಾಮ್ ।**
**ದತ್ತಂ ತಾಭ್ಯಸ್ತ್ವಯಾಹ್ಯನ್ನಂ ಸ್ಥಾವರಾಣಾಂ ಮಹೌಷಧೀಃ ॥**

ಮತ್ತು ''ಈ ಪ್ರಾಣಿಗಳಿಗೆಲ್ಲ ಬದುಕಲಿಕ್ಕಾಗಿ ಏನಾದರೂ ಆಹಾರವನ್ನು ಕಲ್ಪಿಸಿ ಕೊಡು'' ಎಂದು ಆ ಭಗವಂತನಾದ ನಿನ್ನನ್ನು ಬಾಗಿ ಬೇಡಿಕೊಂಡನು.

**೨೯. ಜಂಗಮಾನಿ ಚ ಭೂತಾನಿ ದುರ್ಬಲಾನಿ ಬಲೀಯಸಾಂ ।**
**ವಿಹಿತಾನ್ನಾಃ ಪ್ರಜಾಸ್ಸರ್ವಾಃ ಪುನರ್ಜಗ್ಮುರ್ಯಥಾಗತಮ್ ॥**

ಆಗ ನೀನು ಆ ಪ್ರಜಾಪತಿಯ ಅಪೇಕ್ಷೆ ಯ ಮೇರೆಗೆ ಸ್ಥಾವರ ವಸ್ತುಗಳಿಗೆಲ್ಲ ಮಹಾಔಷಧಿಗಳನ್ನು ಚರಪ್ರಾಣಿಗಳಿಗೆ ತಮಗಿಂತ ದುರ್ಬಲ ಜೀವ ಜಂತುಗಳನ್ನೂ ಆಹಾರವೆಂದು ಕಟ್ಟಿಸಿಕೊಟ್ಟೆ. ಹೀಗೆ ಉಣ್ಣಲು ಅನ್ನವನ್ನು ಪಡೆದ ಎಲ್ಲ ಪ್ರಜೆಗಳೂ ಬಂದದಾರಿಯಿಂದ ಮರಳಿ ಹೋದರು. ಅನಂತರ ಎಲ್ಲ ಪ್ರಾಣಿಗಳೂ ಪರಸ್ಪರ ಪ್ರೀತಿ ಯಿಂದ ಬೆಳೆಯತೊಡಗಿದವು. ಹೀಗೆ ಪ್ರಾಣಿಪ್ರಪಂಚವು ಬೆಳೆದುದನ್ನು ಕಂಡು ನಿನಗೂ ಮನಸ್ಸಿಗೆ ಸಂತೋಷವಾಯಿತು. ಇಷ್ಟೆಲ್ಲಾ ಆದ ಬಳಿಕ ಈ ಸನ್ನಿಹಿತ ತೀರ್ಥದಲ್ಲಿ ಮುಳುಗಿ ತಪಸ್ಸನ್ನು ಮಾಡುತ್ತಿದ್ದ ನಾನು ನೀರಿನಿಂದ ಮೇಲಕ್ಕೆ ಎದ್ದೆನು. ಆಗ ಎಲ್ಲ ಕಡೆಗೂ ಪ್ರಜೆಗಳು ಹುಟ್ಟಿ ಬೆಳೆದು ನಿಂತದ್ದು ನನ್ನ ಕಣ್ಣಿಗೆ ಬಿದ್ದಿತು. ದೇಶದ ತುಂಬ ದೃಷ್ಟಿ ಚೆಲ್ಲಿದಲ್ಲೆಲ್ಲ ಪ್ರಜೆಗಳೂ, ಪ್ರಾಣಿಗಳು. ಇದೆಲ್ಲವೂ ನಿನ್ನ ತೇಜಸ್ಸಿನ ಪ್ರಭಾವ ಎಂದು ನಾನು ಅರಿತೆ.

೩೧. ಕ್ರೋಧೇನ ಮಹತಾ ಯುಕ್ತೋಲಿಂಗಮುತ್ಪಾಟ್ಯಚಾಪಕ್ಷಿಪಮ್
ತತ್ ಕ್ಷಿಪ್ತಂ ಸರಸೋ ಮಧ್ಯೇ ಊರ್ಧ್ವಮೇವ ಯದಾ ಸ್ಥಿತಮ್॥

ಆಗ ಒಮ್ಮೆಲೇ ನನಗೆ ಕೋಪ ಬಂದಿತು. ಆ ಸಿಟ್ಟಿನ ಭರದಲ್ಲಿ ನನ್ನ ಲಿಂಗವನ್ನೇ ಎತ್ತಿ ಎಸೆದುಬಿಟ್ಟೆ. ಅದು ಈ ಸರೋವರದ ನಟ್ಟನಡುವೆ ಮೇಲ್ಮುಖವಾಗಿ ಬಿದ್ದು ಹಾಗೇ ನಿಂತುಕೊಂಡಿತು.

೩೨. ತದಾ ಪ್ರಭೃತಿ ಲೋಕೇಽಸ್ಮಿಂಸ್ಥಾಣುರಿತ್ಯೇವ ವಿಶ್ರುತಃ ।
ಸಕೃದ್ದರ್ಶನಮಾತ್ರೇಣ ವಿಮುಕ್ತಃ ಸರ್ವಕಿಲ್ಬಿಷೈಃ ॥

ಅಂದಿನಿಂದ ಇದು ಜಗತ್ತಿನಲ್ಲೆ 'ಸ್ಥಾಣು' ಎಂಬ ಹೆಸರಿನಿಂದ ಪ್ರಸಿದ್ಧವಾಯಿತು. ಈ ಸ್ಥಾಣು ಲಿಂಗವನ್ನು ಒಮ್ಮೆ ದರ್ಶನ ಮಾಡಿಕೊಂಡರೂ ಸಾಕು. ಎಲ್ಲ ಪಾಪ ಗಳೂ ಪರಿಹಾರವಾಗುತ್ತವೆ. ಹಾಗೂ ಆ ದರ್ಶಕನು ಎಂದಿಗೂ ಹಿಂದಿರುಗಿ ಬರಲಾರ ದಂಥ ಮೋಕ್ಷವನ್ನೇ ಹೊಂದುತ್ತಾನೆ.

೩೩. ಪ್ರಯಾತಿ ಪರಮಂ ಮೋಕ್ಷಂ ಯಸ್ಮಾನ್ನಾವರ್ತತೇ ಪುನಃ ।
ಯಶ್ಚೇಹ ನಿವಸೇತ್ತೀರ್ಥೇ ಕೃಷ್ಣಾಷ್ಟಮ್ಯಾಂ ಸಮಾಹಿತಃ ।

ಕೃಷ್ಣಪಕ್ಷದ ಅಷ್ಟಮಿಯ ದಿನ ಈ ತೀರ್ಥದಲ್ಲಿ ಇದ್ದು ಸ್ನಾನ ಜಪ ತಪೋನುಷ್ಠಾನ ಗಳನ್ನು ಮಾಡಿದರೆ ಮಾನವನು ಸರ್ವ ಪಾಪಗಳಿಂದಲೂ ಮುಕ್ತನಾಗುತ್ತಾನೆ.

೩೪. ಸ ಮುಕ್ತ ಪಾತಕೈಃ ಸರ್ವೈಽ ಅಗಮ್ಯಾಗಮನೋದ್ಭವೈಃ
ಇತ್ಯುಕ್ತ್ವಾ ಭಗವಾನ್ ದೇವಃ ತತ್ರೈವಾಂತರಧೀಯತ ॥

''ನೋಡಬಾರದ ನಾರಿಯರೊಂದಿಗೆ ಕೂಡುವದರಿಂದ ಬರುವ ಪಾಪವು ಇಲ್ಲಿ ಸ್ನಾನ ಮಾಡಿದರೆ ಪರಿಹಾರವಾಗುವದು.'' ಹೀಗೆ ಹೇಳಿ ಪರಮೇಶ್ವರನು ಅಲ್ಲಿಯೇ ಅಂತರ್ಧಾನ ಹೊಂದಿದನು.

೩೫. ಬ್ರಹ್ಮಾ ವಿಶುದ್ಧಪಾಪಸ್ತು ಪೂಜ್ಯ ದೇವಂ ಚತುರ್ಮುಖಮ್ ।
ಲಿಂಗಾನಿ ದೇವದೇವಸ್ಯ ಸಸೃಜೇ ಶರಮಧ್ಯತಃ ॥

ಪಾಪವಿಮೋಚನೆಯಿಂದ ಶುದ್ಧವಾದ ಬ್ರಹ್ಮದೇವನು ನಾಲ್ಕು ಮುಖದವ ನಾಗಿ ಅಲ್ಲಿ ನೆಲೆಸಿದ ಶಿವನನ್ನು ಪೂಜಿಸಿ ಆ ದೇವ ದೇವನ ಲಿಂಗಗಳನ್ನು ನೀರಿನ ನಡುವೆ ಪ್ರತಿಷ್ಠಾಪನೆ ಮಾಡಿದನು.

೩೬. ಆದ್ಯಂ ಪುಣ್ಯಸರಃ ಪ್ರೋಕ್ತಂ ಹರೇಃ ಪಾರ್ಶ್ವೇ ಪ್ರತಿಷ್ಠಿತಮ್
ದ್ವಿತೀಯಂ ಬ್ರಹ್ಮಣೋ ಲಿಂಗಂ ಸರಸ್ವತ್ಯಾಃ ತಟೇ ಸ್ಥಿತಮ್॥

ಮೊದಲನೆಯ ಬ್ರಹ್ಮಸರ ಎಂಬ ಲಿಂಗವನ್ನು ಶ್ರೀಹರಿಯ ಪಕ್ಕದಲ್ಲಿಯೇ ಪ್ರತಿಷ್ಠೆ ಮಾಡಿದನು. ಸರಸ್ವತಿಯ ತಟಾಕದಲ್ಲಿ ಎರಡನೆಯ ಬ್ರಹ್ಮಲಿಂಗವನ್ನು ತಾನಿರುವ ತಾಣದಲ್ಲಿಯೇ ಇರಿಸಿದನು.

೩೭. ತಸ್ಯೈವ ಪೂರ್ವದಿಗ್ಭಾಗೇ ತೃತೀಯಂ ಚ ಪ್ರತಿಷ್ಠಿತಮ್ ।
ಚತುರ್ಥಂ ಬ್ರಹ್ಮಣೋ ಲಿಂಗಂ ಸರಸ್ವತ್ಯಾ ಸ್ತಟೇಸ್ಥಿತಮ್ ॥

ಅದರ ಪೂರ್ವದಿಕ್ಕಿನಲ್ಲಿ ಮೂರನೆಯ ಲಿಂಗವನ್ನು ಇಟ್ಟನು. ನಾಲ್ಕನೆಯ ಲಿಂಗವನ್ನು ಇನ್ನೊಂದು ಸರಸ್ವತೀ ತೀರದಲ್ಲಿ ಸ್ಥಾಪಿಸಿದನು.

೩೮. ಕೃತಾನ್ಯೇತಾನಿ ತೀರ್ಥಾನಿ ಪುಣ್ಯಾನಿ ಪಾವನಾನಿ ಚ ।
ಯೇ ಪಶ್ಯಂತಿ ನಿರಾಹಾರಾಸ್ತೇ ಯಾಂತಿ ಪರಮಾಂ ಗತಿಮ್ ॥

ಸ್ವಯಂ ಪವಿತ್ರವೂ, ಪುಣ್ಯಪ್ರದವೂ ಆದ ಈ ಬ್ರಹ್ಮ ನಿರ್ಮಿತ ತೀರ್ಥಗಳನ್ನು ಊಟ ಮಾಡದೇ ಸಂದರ್ಶನ ಮಾಡಿಕೊಂಡವರು ಪರಗತಿಯನ್ನು ಐದುವರು.

೩೯. ಕೃತೇ ಯುಗೇ ಹರೇಃ ಪಾರ್ಶ್ವೇ ತ್ರೇತಾಯಾಂ ಬ್ರಹ್ಮಣಾಶ್ರಮೇ।
ದ್ವಾಪರೇ ತಸ್ಯ ಪೂರ್ವೇಣ ಸರಸ್ವತ್ಯಾ ಸ್ತಟೇ ಕಲೌ ॥

ಕೃತಯುಗದಲ್ಲಿ ಶ್ರೀಹರಿಯಪಕ್ಕದಲ್ಲಿರುವಪ್ರಥಮಲಿಂಗವನ್ನು, ತ್ರೇತಾಯುಗದಲ್ಲಿ ಬ್ರಹ್ಮದೇವರಆಶ್ರಮದಲ್ಲಿರುವದ್ವಿತೀಯಲಿಂಗವನ್ನು, ದ್ವಾಪರಯುಗದಲ್ಲಿ ಪೂರ್ವದಿಕ್ಕಿನಲ್ಲಿ ಇರುವತೃತೀಯಲಿಂಗವನ್ನು, ಕಲಿಯುಗದಲ್ಲಿ ಸರಸ್ವತೀತಟಾಕದಲ್ಲಿ ಇರುವ ಚತುರ್ಥಲಿಂಗವನ್ನು ಭಕ್ತಿಯಿಂದಪೂಜಿಸಬೇಕು. ಶ್ರದ್ಧೆಯಿಂದಸಂದರ್ಶಿಸಬೇಕು.

೪೦. ಏತಾನಿ ಪೂಜಾಯಿತ್ವಾತು ದೃಷ್ಟ್ವಾ ಭಕ್ತಿ ಸಮನ್ವಿತಾಃ ।
ವಿಮಲಾಃ ಸರ್ವಕಲುಷೈಃ ಪ್ರಯಾಂತಿ ಪರಮಾಂ ಗತಿಮ್ ॥

ಅದರಿಂದ ಸರ್ವಪಾಪಗಳಿಂದ ಮುಕ್ತನಾಗಿ ಮಾನವನು ಪರಗತಿ ಹೊಂದುವನು.

೪೧. ಸೃಷ್ಟಿಕಾಲೇ ಭಗವತಾ ಪೂಜಿತಸ್ತು ಮಹೇಶ್ವರಃ ।
ಸರಸ್ವತ್ಯುತ್ತರೇ ತೀರೇ ನಾಮ್ನಾಖ್ಯಾತಶ್ಚತುರ್ಮುಖಃ ॥

ಸೃಷ್ಟಿಕಾಲದಲ್ಲಿ ಪೂಜ್ಯನಾದ ಚತುರ್ಮುಖ ಬ್ರಹ್ಮದೇವರು ಸರಸ್ವತೀಯ ಉತ್ತರ ತೀರದಲ್ಲಿ ಪ್ರತಿಷ್ಠಾಪಿಸಿ ಪೂಜಿಸಿದ್ದರಿಂದ ಈ ಮಹಾದೇವನಿಗೂ ಚತುರ್ಮುಖ ಎಂದೇ ಹೆಸರು ಬಂದಿತು.

೪೨. ತಂ ಪೂಜಯಿತ್ವಾ ಯತ್ನೇನ ಸೋಪವಾಸೋ ಜಿತೇಂದ್ರಿಯಃ।
ಅಗಮ್ಯಾಗಮನೈರ್ದೋಷೈರ್ಮುಚ್ಯತೇ ನಾತ್ರ ಸಂಶಯಃ ॥

ಈ ಮಹೇಶ್ವರನನ್ನು ಉಪವಾಸವಿದ್ದು ಇಂದ್ರಿಯಗಳನ್ನು ಗೆದ್ದು ಪ್ರಯತ್ನ ದಿಂದ ಪೂಜೆ ಮಾಡಿದರೆ ವ್ಯಭಿಚಾರ ಮೊದಲಾದ ದೋಷಗಳಿಂದ ಮನುಜನು ಮುಕ್ತನಾಗುತ್ತಾನೆ. ಇದರಲ್ಲಿ ಸಂದೇಹವಿಲ್ಲ.

೪೩. ತತಸ್ತ್ರೇತಾಯುಗೇ ಪ್ರಾಪ್ತೇ ಸ್ಥಾಣೋರ್ದೇವ ಸಮೀಪತಃ ॥
ಪೂಜಿತಂ ಸುಮಹಲ್ಲಿಂಗಂ ತತ್ರಾಪಿ ಚ ಚತುರ್ಮುಖಮ್ ।

ಅನಂತರ ಇದೇ ಸ್ಥಾಣುರೂಪಿಯಾದ ಪರಮೇಶ್ವರನ ಸಮೀಪದಲ್ಲಿ ತ್ರೇತಾ ಯುಗವು ಪ್ರಾಪ್ತವಾದ ಬಳಿಕ ಪರಿಪೂಜಿತವಾದ ದೊಡ್ಡದಾದ ಒಂದು ಚತುರ್ಮುಖ ಲಿಂಗ ಉಂಟು. ಅದನ್ನು ಶ್ರದ್ಧೆಯಿಂದ ನಮಸ್ಕರಿಸಿದವರು ಸರ್ವಪಾಪಗಳಿಂದ ಮುಕ್ತರಾಗುತ್ತಾರೆ.

೪೪. ತಂ ಪ್ರಣಮ್ಯ ಶ್ರದ್ದಧಾನೋ ಮುಚ್ಯತೇ ಸರ್ವಕಿಲ್ಬಿಷೈಃ ।
ಲೀಲಾಶಂಕರ ಸಂಭೂತಂ ತಥಾ ವೈ ಭಾನು ಶಂಕರಮ್ ॥

ಇದರಂತೆ ದ್ವಾಪರ ಯುಗವು ಬಂದಾಗ ಲೀಲಾಶಂಕರ ಭಾನುಶಂಕರ ಹಾಗೂ ಪ್ರಾಚ್ಯ ಶಂಕರ ಮುಂತಾದ ಭಗವಲ್ಲಿಂಗಗಳನ್ನು ಪೂಜಿಸಿದವರು ವರ್ಣ ಸಂಕರಗಳಿಗೆ ಕಾರಣವಾದ ರಾಜಸ ದೋಷಗಳಿಂದ ಮುಕ್ತರಾಗುತ್ತಾರೆ.

೪೫. ತಥೈವ ದ್ವಾಪರೇ ಪ್ರಾಪ್ತೇ ಸ್ವಾಶ್ರಮೇ ಪ್ರಾಚ್ಯಶಂಕರಮ್ ।
ವಿಮುಕ್ತೋ ರಾಜಸೈರ್ಭಾವೈ ವರ್ಣಸಂಕರಸಂಭವೈಃ ॥

............................................................ ..................... ...

............................................................ ..................... ...

............................................................ ..................... ...

೪೬. ತತಃ ಕೃಷ್ಣ ಚತುರ್ದಶ್ಯಾಂ ಪೂಜಯಿತ್ವಾ ತು ಮಾನವಃ
ವಿಮುಕ್ತಃ ಪಾತಕೈಃ ಸರ್ವೈಃ ಅಭೋಜ್ಯಸ್ಯಾನ್ನಸಂಭವೈಃ

ಕೃಷ್ಣಪಕ್ಷದ ಚತುರ್ದಶಿಯ ದಿನದಂದು ಈ ಶಿವಲಿಂಗವನ್ನು ಪೂಜಿಸಿದರೆ ನಿಷಿದ್ಧ ಅನ್ನವನ್ನೂ ನೀಚಾನ್ನವನ್ನೂ ಉಣ್ಣುವದರಿಂದ ಬರುವ ಪಾಪಗಳು ಪರಿಹಾರವಾಗುತ್ತದೆ.

೪೭. ಕಲಿಕಾಲೇ ತು ಸಂಪ್ರಾಪ್ತೇ ವಶಿಷ್ಠಾಶ್ರಮಮಾಸ್ಥಿತಃ ।
ಚತುರ್ಮುಖಂ ಸ್ಥಾಪಯಿತ್ವಾ ಯಾತಿ ಸಿದ್ಧಿಮನುತ್ತಮಾಮ್ ।

ಕಲಿ ಕಾಲವು ಬಂದಾಗ ಇಲ್ಲಿಯ ವಶಿಷ್ಠಾಶ್ರಕ್ಕೆ ಬಂದು ಈ ಚತುರ್ಮುಖ ಪರಮೇಶ್ವರನನ್ನು ಆಹಾರ ಬಿಟ್ಟು ಇಂದ್ರಿಯಗಳನ್ನು ಅಂಕೆಯಲ್ಲಿ ಇಟ್ಟು ಮನಸ್ಸನ್ನು ಮಹಾದೇವನಲ್ಲಿ ನೆಟ್ಟು ಪೂಜೆ ಮಾಡಿದವರಿಗೆ ಮುಂದೆ ಉತ್ತಮಗತಿಯಾಗುವದು.

೪೮. ಇತ್ಯೇತತ್ ಸ್ಥಾಣು ತೀರ್ಥಸ್ಯ ಮಾಹಾತ್ಮ್ಯಂ ಕೀರ್ತಿತಂ ತವ
ತಚ್ಛ್ರುತ್ವಾ ಸರ್ವಪಾಪೇಭ್ಯೋ ಮುಕ್ತೋ ಭವತಿ ಮಾನವ॥

ಇದೆಲ್ಲ ಸ್ಥಾಣುತೀರ್ಥದ ಮಹಿಮೆಯನ್ನು ನಾನು ನಿನಗೆ ಹೇಳಿದ್ದೇನೆ. ಇದನ್ನು ಕೇಳಿದರೆ ಸಮಸ್ತ ಪಾಪಗಳಿಂದಲೂ ಮಾನವನು ಮುಕ್ತನಾಗುತ್ತಾನೆ.

ವಾಮನ ಮಹಾಪುರಾಣದಲ್ಲಿಸ್ಥಾಣುಲಿಂಗದ ಮಹಿಮೆ ಎಂಬ
ನಲವತ್ತೊಂಭತ್ತನೇಯ ಅಧ್ಯಾಯವು ಮುಗಿದುದು.

—o—

## ಪೃಥೂದಕ ತೀರ್ಥದ ಮಹಿಮೆ

**ಅಧ್ಯಾಯ - ೫೦**

**೫೦. ತತೋಽಬ್ರವೀದ್ದೇವವರಸ್ತು ತೀರ್ಥಂ ಯಸ್ಮಾದ್ಭವಾನೇಕತಯಾ ಪ್ರಯಾತಿ।**
**ಪೃಥೂದಕೇತ್ಯೇವ ಚ ನಾಮ ತುಭ್ಯಂ ಭವಿಷ್ಯತೇತೇ**
**ತೀರ್ಥವರಃ ಪೃಥಿವ್ಯಾಮ್ ॥**

**ಸನತ್ಕುಮಾರ:** ಅನಂತರ ದೇವಶ್ರೇಷ್ಠನಾದ ಶ್ರೀವಿಷ್ಣುವು ''ನೀನು ಒಬ್ಬನೇ ಈ ತೀರ್ಥಕ್ಕೆ ಹೊರಟಿರುವದರಿಂದ ಇದು ಭೂಮಿಯಲ್ಲಿ ಪೃಥೂದಕ ಎಂದು ಪ್ರಸಿದ್ಧವಾಗುವದು. ಮತ್ತು ಪೃಥ್ವಿಯಲ್ಲಿ ಶ್ರೇಷ್ಠ ತೀರ್ಥವೆಂದು ಪರಿಗಣಿಸಲ್ಪಡುವದು'' ಎಂದು ಹೇಳಿದನು.

**೫೧. ಏವಂ ಪೃಥೂದಕಂ ದೇವಾಃ ಪುಣ್ಯಂ ಪಾಪಭಯಾಪಹಮ್ ।**
**ತಂ ಗಚ್ಛಧ್ವಂ ಮಹಾತೀರ್ಥಂ ಯಾಚಿಷ್ಯಂತೋ ನಿಭೋದತ ॥**

ಹೀಗೆ ದೇವತೆಗಳೇ, ಈ ಪೃಥೂದಕ ಕ್ಷೇತ್ರವು ಪಾಪಗಳ ಭಯವನ್ನು ಕಳೆಯುವದು. ಪುಣ್ಯವನ್ನು ಕೊಡುವದು. ಇಂಥ ಈ ಮಹಾತೀರ್ಥವನ್ನು ಕುರಿತು ಪ್ರಯಾಣ ಮಾಡಿರಿ. ಇದರ ಮಹಾಮಹಿಮೆಯನ್ನು ಅಲ್ಲಲ್ಲಿ ಕೇಳಿ ತಿಳಿದುಕೊಳ್ಳಿರಿ.

**೫೨. ಯದಾ ಮೃಗಶಿರೋಋಕ್ಷೇ ಶಶಿಸೂರ್ಯೌರ್ನ ಬೃಹಸ್ಪತಿಃ ।**
**ತಿಷ್ಠಂತಿ ಸಾತಿಥಿಪೂರ್ವಾ ತ್ವಕ್ಷಯಾ ಪರಿಗೀಯತೇ ॥**

ಮೃಗಶಿರಾ ನಕ್ಷತ್ರದಲ್ಲಿ ಚಂದ್ರ ಸೂರ್ಯ ಹಾಗೂ ಗುರು ಗ್ರಹಗಳು ಇದ್ದಾಗ ಆ ತಿಥಿಯ ಪೂರ್ವಭಾಗವು ಅಕ್ಷಯ ತಿಥಿಯೆಂದು ಹೇಳಲ್ಪಡುತ್ತದೆ.

**೫೩. ತದ್ಗಚ್ಛಧ್ವಂ ಸುರಶ್ರೇಷ್ಠಾಃ ಯತ್ರ ಪ್ರಾಚೀ ಸರಸ್ವತೀ ।**
**ಪಿತೃನಾರಾಧಯಧ್ವಂ ಚ ತತ್ರ ಶ್ರಾದ್ಧೇನ ಭಕ್ತಿತಃ ॥**

''ಇಂಥ ಶುಭ ಮುಹುರ್ತದಲ್ಲಿ ದೇವೋತ್ತಮರೇ ಸರಸ್ವತಿಯ ಪೂರ್ವ ತಟಾಕಕ್ಕೆ ಹೋಗಿರಿ. ಅಲ್ಲಿ ಶ್ರದ್ಧೆಯಿಂದ ಪಿತೃಗಳನ್ನು ಶ್ರಾದ್ಧ ಮಾಡಿ ಆರಾಧಿಸಿರಿ.''

**೫೪. ತತೋ ಮುರಾರಿ ವಚನಂ ಶ್ರುದೇವಾಸ್ಸವಾಸವಾಃ ।**
**ಸಮಾಜಗ್ಮುಃ ಕುರುಕ್ಷೇತ್ರೇ ಪುಣ್ಯಂ ತೀರ್ಥಂ ಪೃಥೂದಕಮ್ ॥**

ಶ್ರೀಹರಿಯ ಈ ಉಪದೇಶ ವಚನವನ್ನು ಕೇಳಿ ಇಂದ್ರನೇ ಮೊದಲಾದ ಎಲ್ಲ ದೇವತೆಗಳು ಕುರುಕ್ಷೇತ್ರದಲ್ಲಿ ಇರುವ ಪೃಥೂದಕ ತೀರ್ಥಕ್ಕೆ ಬಂದರು.

**೫೫. ತತ್ರಸ್ನಾತ್ವಾ ಸುರಾಸ್ಸರ್ವೇ ಬ್ರಹಸ್ಪತಿಮಚೋದಯನ್ ।**
**ವಿವಸ್ವನ್ ಭಗವನ್ ಋಕ್ಷಮಿದಂ ಮೃಗಶಿರಃ ಕುರು ॥**

ಅಲ್ಲಿ ಎಲ್ಲ ಅಮರರು ಸ್ನಾನಮಾಡಿ ಬೃಹಸ್ಪತಿಗೆ ಹೇಳಿದರು ಮತ್ತು ಸೂರ್ಯನಿಗೆ ಪ್ರಾರ್ಥಿಸಿಕೊಂಡರು.

**೫೬. ಪುಣ್ಯಾಂತಿಥಿಂ ಪಾಪಹರಾಂ ತವ ಕಾಲೋಯಮಾಗತಃ**
**ಪ್ರವರ್ತತೇ ರವಿಸ್ತತ್ರ ಚಂದ್ರಮಾಪಿ ವಿಶತ್ಯಸೌ ॥**

''ದೇವಗುರುವೇ, ನಿನ್ನ ಅಧೀನದಲ್ಲಿರುವ ಈ ಕಾರ್ಯವನ್ನು ದೇವತೆಗಳ ಹಿತಕ್ಕಾಗಿ ನೀನು ಮಾಡು. ಎಲೈ ಸೂರ್ಯನೇ, ಈ ನಕ್ಷತ್ರವನ್ನು ಮೃಗಶಿರಾ ನಕ್ಷತ್ರವನ್ನಾಗಿ ಮಾಡು. ಪಾಪಹರವಾಗಿಯೂ ಪುಣ್ಯಕರವಾಗಿಯೂ ಇರುವ ಈ ತಿಥಿಯನ್ನು ಮಾಡಲು ನಿನಗೆ ಅನುಕೂಲ ಕಾಲವೂ ಒದಗಿದೆ.

೫೭. ತವಾಯತ್ತಂ ಗುರೋ ಕಾರ್ಯಂ ಸುರಾಣಾಂತತ್ಕುರುಷ್ವನಃ ।
ಇತ್ಯೇವಮುಕ್ತೋದೇವೈಸ್ತು ದೇವಾಚಾರ್ಯೋ ಬ್ರವೀದಿದಮ್॥

ಎಲೈ ಗುರುವೇ, ಸೂರ್ಯನೂ ಅಲ್ಲಿಯೇ ಇರುವನು. ಚಂದ್ರನೂ ಪ್ರವೇಶಿಸುತ್ತಿರುವನು. ಆದುದರಿಂದ ನೀನು ಮೃಗಶಿರಾನಕ್ಷತ್ರದಲ್ಲಿ ಸೂರ್ಯ ಚಂದ್ರ ಬೃಹಸ್ಪತಿಗಳಿರುವ ಪುಣ್ಯಕಾಲವನ್ನು ನಿರ್ಮಿಸಿ ದೇವತೆಗಳ ಹಿತವನ್ನು ಸಾಧಿಸು.'' ಅವರ ಮಾತು ಕೇಳಿ ಬೃಹಸ್ಪತಿಯು ನುಡಿದನು.

೫೮. ಯದಿ ವರ್ಷಾಧಿಪೋಽಹಂ ಸ್ಯಾಂ ತತೋ ಯಾಸ್ಯಾಮಿ ದೇವತಾಃ ।
''ಬಾಢಮೂಚುಃ ಸುರಾಃ ಸರ್ವೇ ತತೋಽಸೌ ಪ್ರಾಕ್ರಮನ್ ಮೃಗಮ್॥''

''ದೇವತೆಗಳೇ, ನಾನೇ ವರ್ಷಾಧಿಪತಿಯಾಗುವ ಪಕ್ಷದಲ್ಲಿ ಆ ತಿಥಿಯನ್ನು ಹೊಂದುತ್ತೇನೆ.'' ಗುರುವಿನ ಈ ನಿಬಂಧನೆಗೆ ಸುರರೆಲ್ಲರೂ ಹಾಗೇ ಆಗಲಿ ಎಂದು ಒಪ್ಪಿಕೊಂಡರು. ಆಗ ಗುರುವು ಮೃಗಶಿರಾ ನಕ್ಷತ್ರದೊಂದಿಗೆ ಮೇಲನ ಹೊಂದಿದನು.

೫೯. ''ತತಃ ಪ್ರೀತಾಸ್ತು ಪಿತರಃ ತಾಂ ಪ್ರಾಹುಃ ತನಯಾಂನಿಜಾಮ್''।
ಮೇನಾಂ ದೇವಾಶ್ಚ ಶೈಲಾಯ ಹಿಮಯುಕ್ತಾಯ ವೈ ದದುಃ ॥

ಆಗ ಅಷಾಢಮಾಸದ ಮೃಗಶಿರಾನಕ್ಷತ್ರಯುಕ್ತವಾದ ಚಂದ್ರನಕ್ಷಯತಿಥಿಯಲ್ಲಿ ಇಂದ್ರನು ಸಂತೋಷದಿಂದ ಪಿತೃಗಳಿಗೆ ಎಳ್ಳು ಜೇನುತುಪ್ಪ ಸಹಿತ ಪಿಂಡವನ್ನು ಪ್ರದಾನ ಮಾಡಿದನು. ಹವಿಷ್ಯಾನ್ನವನ್ನೂ ಪ್ರದಾನಮಾಡಿದನು. ಅದರಿಂದ ಪಿತೃಗಳು ಸಂತುಷ್ಟರಾಗಿ ಬ್ರಹ್ಮದೇವರಿಂದ ನಿರ್ಮಿತಳಾದ ಆ ಮೇನಾದೇವಿಯನ್ನು ತಮ್ಮ ಮಗಳೆಂದು ಒಪ್ಪಿ ನುಡಿದರು.

೬೦. ತಾಂ ಮೇನಾಂ ಹಿಮವಾನ್ ಲಬ್ಧ್ವಾ ಪ್ರಮುದಾದ್ದೇವತೇಷ್ವಾಥ ।
ಪ್ರೀತಮನಾಭವಚ್ಚ ಸೌರೇಮೇವ ಸ ತು ಯಥೇಚ್ಛಯಾ ॥

ಆಗ ದೇವತೆಗಳು ಆ ಮೇನಾ ಎಂಬ ಕನ್ನಿಕೆಯನ್ನು ಹಿಮತುಂಬಿದ ಹಿರಿ ಪರ್ವತನಾದ ಹಿಮಾಲಯಕ್ಕೆ ಕೊಟ್ಟರು.

೬೧. ತತೋ ಹಿಮಾದ್ರಿಃ ಪಿತೃಕನ್ಯಯಾಸಮಂ ಸಂತರ್ಪಯನ್
ವೈವಿಷಯಾನ್ ಯಥೇಷ್ಟಮ್ ॥
ಅಜೀಜನತ್ಸಾ ತನಯಾಶ್ಚ ತಿಸ್ರೋ ರೂಪಾತಿಯುಕ್ತಾಃ
ಸುರಯೋಷಿತಸ್ತು ॥

ಆ ಮೇನಾ ಕನ್ನಿಕೆಯನ್ನು ಪಡೆದು ಹಿಮಾಚಲಕ್ಕೆ ಅತ್ಯಂತ ಸಂತೋಷವಾಯಿತು ಮತ್ತು ಎಲ್ಲ ದೇವತೆಗಳ ವಿಷಯದಲ್ಲಿ ಆ ಪರ್ವತೇಶ್ವರನಿಗೆ ವಿಶೇಷವಾದ ಪ್ರೀತಿ

ವಿಶ್ವಾಸಗಳು ಉಂಟಾದವು. ಆ ಪಿತೃಕನ್ಯೆಯೊಂದಿಗೆ ಆ ಪರ್ವತ ಪತಿಯು ಆನಂದದಿಂದ ಯಥೇಚ್ಛವಾಗಿ ವಿಹರಿಸಿದನು. ಹೀಗೆ ಆ ಹೇಮಾದ್ರಿಯು ಪಿತೃಪುತ್ರಿಯಾದ ಮೇನಾಮಾನಿನಿಯೊಂದಿಗೆ ಯಥೇಷ್ಟವಾದ ವಿಷಯೋಪಭೋಗಗಳನ್ನು ಆನಂದದಿಂದ ಅನುಭವಿಸಿದನು. ಅವನಿಗೆ ಚಾರು ಚೆಲುವಿಕೆಯಿಂದ ಒಡಗೂಡಿದ ಮೂವರು ದೇವತಾ ಸ್ತ್ರೀಯರು ಮಕ್ಕಳಾಗಿ ಜನಿಸಿದರು.

ವಾಮನ ಮಹಾಪುರಾಣದಲ್ಲಿ ಐವತ್ತನೇಯ ಅಧ್ಯಾಯವು ಮುಗಿದುದು.



## ಮೇನಾದೇವಿಯ ಮಕ್ಕಳ ವೃತ್ತಾಂತ — ಅಧ್ಯಾಯ - ೫೧

### ಪುಲಸ್ತ್ಯರು ಹೇಳುತ್ತಾರೆ

೧. ಮೇನಾಯಾಂ ಕನ್ಯಕಾಸ್ತಿಸ್ರೊ ಜಾತಾ ರೂಪಗುಣಾನ್ವಿತಾಃ
ಸುನಾಭ ಇತಿ ಚ ಖ್ಯಾತಶ್ಚತುರ್ಥಸ್ತನಯೋಽಭವತ್ ॥

ಮೇನಾದೇವಿಯಲ್ಲಿ ಪರ್ವತೇಶ್ವರ ಹಿಮಾಲಯನಿಗೆ ಮೂವರು ಕನ್ನಿಕೆಯರು ಜನಿಸಿದರು. ಆ ಮೂರೂ ಮಕ್ಕಳೂ ಸುಂದರ ರೂಪ ಹಾಗೂ ಶ್ರೇಷ್ಠ ಸದ್ಗುಣಗಳಿಂದ ಒಡಗೂಡಿದ್ದರು. ಆ ಮೇನಾ ಹಿಮಾಚಲ ದಂಪತಿಗಳಿಗೆ ಸುನಾಭ ಎಂಬ ಹೆಸರಿನ ಗಂಡು ಮಗನು ಹುಟ್ಟಿದನು. ಇವನೇ ಆ ಶೈಲ ದಂಪತಿಗಳ ನಾಲ್ಕನೆಯ ಸಂತಾನ.

೨. ರಕ್ತಾಂಗೀ ರಕ್ತನೇತ್ರಾ ಚ ರಕ್ತಾಂಬರವಿಭೂಷಿತಾ ।
ರಾಗಿಣೀ ನಾಮ ಸಂಜಾತಾ ಜ್ಯೇಷ್ಠಾ ಮೇನಾಸುತಾ ಮುನೇ ॥

ಅವಳ ಹಿರಿಯ ಮಗಳ ಹೆಸರು ರಾಗಿಣೀ. ಈ ಮೇನೆಯ ಮಗಳು ಯಾವಾಗಲೂ ಹೊಂಬಣ್ಣದ ರಕ್ತಾಂಬರವನ್ನು ಉಟ್ಟುಕೊಳ್ಳುತ್ತಿದ್ದಳು. ಅವಳ ಅಂಗಾಂಗಗಳೆಲ್ಲ ಕೆಂಬಣ್ಣದ ಕಾಂತಿಯಿಂದ ಕಂಗೊಳಿಸುತ್ತಿದ್ದವು. ಎರಡೂ ಕಣ್ಣಿನಂಚಿನಲ್ಲಿ ನೆತ್ತರಿನ ಲಾಲಿಮೆ ಮಿಂಚುತಿತ್ತು. ಇವಳೇ ಮೇನೆಯ ಜ್ಯೇಷ್ಠಪುತ್ರಿ.

---

೩. ಶುಭಾಂಗೀ ಪದ್ಮಪತ್ರಾಕ್ಷೀ ನೀಲ ಕುಂಚತಮೂರ್ಧಜಾ ।
ಶ್ವೇತಮಾಲ್ಯಾಂಬರ ಧರಾ ಕುಟಿಲಾ ನಾಮ ಚಾಪರಾ ॥

ಎರಡನೆಯ ಮಗಳ ಹೆಸರು ಕುಟಿಲಾ. ಅವಳ ಅಂಗಾಂಗಗಳೂ ಬಿಳಿದಾವರೆಯಂತೆ ಶುದ್ಧ, ಸ್ವಚ್ಛ. ಕಂಗಳಲ್ಲಿ ಕಮಲಕಾಂತಿ. ಕಪ್ಪು ಕಪ್ಪಾದ ಗುಂಗುರು ಗೂದಲು. ಉಟ್ಟಿದ್ದು ಬೆಳ್ಳಗಿನ ಬಟ್ಟೆ. ಹಾಕಿಕೊಂಡದ್ದು ಬಿಳಿ ಹೂಗಳ ಹಾರ. ಈ ಶುಭಾಂಗಿಯು ಮೇನಾದೇವಿಯ ದ್ವಿತೀಯ ಪುತ್ರಿ.

೪. ನೀಲಾಂಜನ ಚಯ ಪ್ರಖ್ಯಾ ನೀಲೇಂದೀವರ ಲೋಚನಾ ।
ರೂಪೇಣಾನುಪಮಾ ಕಾಲೀ ಜಘನ್ಯಾ ಮೇನಕಾಸುತಾ ॥

ಕೊನೆಯವಳೇ ಕಾಲೀದೇವಿ. ಅವಳ ಚೆಲುವಿಕೆಗೆ ಸರಿಸಮರಿಲ್ಲ. ಕಾಡಿಗೆ ಬಣ್ಣ, ನೈದಿಲೆಯಂತೆ ಒಪ್ಪುವ ಕಣ್ಣು. ಈ ಶ್ಯಾಮ ಸುಂದರಿಯೇ ಮೇನಾದೇವಿಯ ಮೂರನೇ ಮಗಳು.

೫. ಕುಟಿಲಾ ಬ್ರಹ್ಮಲೋಕಂತು ನೀತಾ ಶಶಿಕರ ಪ್ರಭಾ
ಅಥೋಚುರ್ದೇ ತಾಸ್ಸರ್ವಾಃ ಕಿಂತ್ವಿಯಂ ಜನಯಿಷ್ಯತಿ
ಪುತ್ರಂ ಮಹಿಕ್ಷಹಂತಾರಂ ಬ್ರಹ್ಮನ್ ವ್ಯಾಖ್ಯಾತು ಮರ್ಹಸಿ ॥

ಈ ಗಿರಿರಾಜ ದಂಪತಿಗಳ ಮೂರು ಮಕ್ಕಳೂ ಆರು ವರ್ಷದವರಾದ ಕೂಡಲೇ ಮನೆಬಿಟ್ಟು ವನಕ್ಕೆ ತಪಸ್ಸಿಗಾಗಿ ತೆರಳಿದರು. ಇದೊಂದು ಒಳ್ಳೇ ಶುಭಲಕ್ಷಣವೆಂದು ದೇವತೆಗಳು ಆದರದಿಂದ ಆ ಶೈಲ ಕನ್ಯೆಯರನ್ನು ನೋಡಿದರು. ನಂತರ ಹನ್ನೆರಡು ಜನ ಸೂರ್ಯರು ಎಂಟು ವಸುಗಳು ಕೂಡಿ ಚಂದ್ರ ಜ್ಯೋತ್ಸ್ನೆಯಂತೆ ಅಂಗಾಂಗಗಳಿಂದ ತಿಂಗಳ ಕಾಂತಿಯನು ತುಳುಕಿಸುವ ಕುಟಿಲೆಯೆಂಬ ಆ ತಪಸ್ವಿನಿ ಬಾಲಕಿಯನ್ನು ಬ್ರಹ್ಮಲೋಕಕ್ಕೆ ಕರೆದೊಯ್ದರು. ಆ ಚೆಲುವೆಯನ್ನು ಚತುರ್ಮುಖನ ಎದುರು ನಿಲ್ಲಿಸಿ ದೇವತೆಗಳೆಲ್ಲರು ಬ್ರಹ್ಮದೇವನಿಗೆ ಪ್ರಶ್ನೆ ಮಾಡಿದರು.

''ಪೂಜ್ಯನಾದ ಬ್ರಹ್ಮದೇವನೇ, ಈ ಹೆಣ್ಣು ಮಗಳು ಮುಂದೆ ಮಹಿಷಾಸುರನನ್ನು ಕೊಲ್ಲಬಲ್ಲ ಸಮರ್ಥನಾದ ಮಗನನ್ನು ಹಡೆಯುವಳೇ ? ಎಲ್ಲ ಪ್ರಾಣಿಗಳ ಹಣೆಬರಹವನ್ನು ಬರೆಯುವ ನಿಮಗೆ ಇವಳ ಭವಿತವ್ಯವೂ ಸರಿಯಾಗಿ ಗೊತ್ತಿರಲಿಕ್ಕೆ ಸಾಕು. ದಯ ಮಾಡಿ ಇವಳು ಮಹಿಷನನ್ನು ಮರ್ದಿಸುವ ಮಗನನ್ನು ಹೆರಬಲ್ಲಳೇ ಹೇಗೆ? ಎಂಬುದನ್ನು ತಿಳಿಸಿರಿ.'' ಆಗ ದೇವತೆಗಳಿಗೆ ಒಡೆಯನಾದ ಬ್ರಹ್ಮದೇವನು ಉತ್ತರಿಸಿದನು-

೬. ತತೋಬ್ರವೀತ್ಸುರಪತಿರ್ನೇಯಂ ಶಕ್ತಾ ತಪಸ್ವಿನೀ ।
ಶಾರ್ವಂ ಧಾರಯಿತುಂ ತೇಜೋ ವರಾಕೀ ಮುಚ್ಯತಾಮಿಯಂ॥

''ಪಾಪ, ಈ ತಪಸ್ವಿನಿಯು ಅಂಥ ಮಹಾಕಾರ್ಯಕ್ಕೆ ಸಮರ್ಥಳಲ್ಲ. ಶಿವನ ದಿವ್ಯ ತೇಜಸ್ಸನ್ನು ಧರಿಸುವ ಶಕ್ತಿ ಇವಳಿಗಿಲ್ಲ. ಆದುದರಿಂದ ಈ ಬಡಪಾಯಿ ಬಾಲೆಯನ್ನು ಬಿಟ್ಟುಬಿಡಿ.'' ಆಗ ಆ ಕುಮಾರಿ ಕುಟಿಲೆಗೆ ಕೋಪಬಂದಿತು. ಅವಳು ರೋಷವೇಶದಿಂದ ಸೃಷ್ಟಿಕರ್ತನ ಎದುರು ಹೀಗೆ ನಿರ್ಧಾರದ ನುಡಿಯಲ್ಲಿ ಪ್ರತಿಜ್ಞೆಗೈದಳು.

೭. ಧಾರಯಿಷ್ಯಾಮ್ಯಹಂ ತೇಜಃ ತಥೈವ ಶೃಣು ಸತ್ತಮ ।
ತಪಸಾಹಂ ಸುತಪ್ತೇನ ಸಮಾರಾಧ್ಯ ಜನಾರ್ದನಂ ॥

''ಪೂಜ್ಯರೇ, ಯಾರಿಂದಲೂ ಧರಿಸಲು ಅಶಕ್ಯವಾದ ಧೂರ್ಜಟಿಯ ದಿವ್ಯ ತೇಜಸ್ಸನ್ನು ಧರಿಸಲು ನಾನು ಪ್ರಯತ್ನಿಸುತ್ತೇನೆ. ನಾನು ಮಾಡಲಿರುವ ಆ ಪ್ರಯತ್ನದ ಪ್ರಕಾರವನ್ನು ಕೇಳಿರಿ. ಅತ್ಯುಗ್ರವಾದ ತಪಸ್ಸನ್ನು ಮಾಡಿ ಶ್ರೀ ಹರಿಯನ್ನು ಆರಾಧಿಸುತ್ತೇನೆ.

೮. ಯಥಾ ಹಾರಸ್ಯ ಮೂರ್ಧಾನಂ । ನಮಯಿಷ್ಯೇ ಪಿತಾಮಹ
ತಥಾದೇವ ಕರಿಷ್ಯಾಮಿ ಸತ್ಯಂ ಸತ್ಯಂ ಮಯೋದಿತಮ್ ॥

ಅವನ ಅನುಗ್ರಹದಿಂದ ಮಹಾದೇವನ ಮಸ್ತಕವನ್ನು ಮಣಿಸುತ್ತೇನೆ. ಪಿತಾಮಹನೆ. ನನ್ನ ಈ ನುಡಿ ಹುಸಿ ಅಲ್ಲ. ನಿಜವಾಗಿಯೂ ನುಡಿದಂತೆ ನಡೆದು ತೋರಿಸುತ್ತೇನೆ. ಮಾತಿನಂತೆ ಮಾಡಿ ತೋರಿಸುತ್ತೇನೆ.''

ಪುಲಸ್ತ್ಯ - ಕುಟಿಲೆಯ ಕಟುಕುಟಿಲವಾದ ಈ ಮಾತುಗಳನ್ನು ಕೇಳಿ ವಿಧಾತನಿಗೆ ಕೋಪ ಬಂದಿತು. ಈ ಪ್ರಪಂಚವನ್ನೆಲ್ಲ ಮೂಲತಃ ಸೃಷ್ಟಿಮಾಡಿದ ಬ್ರಹ್ಮದೇವರು ಸರ್ವಶಾಸಕನಲ್ಲವೇ! ಕುಪಿತರಾದ ಅವರು ಕ್ರೂರ ನುಡಿಗಳನ್ನಾಡಿದ ಕುಟಿಲಾ ಕುಮಾರಿಯನ್ನು ಕುರಿತು ಹೇಳಿದರು.

೯. ಯಸ್ಮಾನ್ಮದ್ವಚನಂ ಪಾಪೇ ನ ಕ್ಷಾಂತಂ ಕುಟಿಲೇ ತ್ವಯಾ ।
ತಸ್ಮಾನ್ಮಚ್ಛಾಪನಿರ್ದಗ್ಧಾ ಸರ್ವಾಸ್ವಾಪೋ ಭವಿಷ್ಯಸಿ ॥

ಬ್ರಹ್ಮ - ''ಪಾಪಿಕುಟಿಲೆಯೇ, ನೀನು ನನ್ನ ಮಾತನ್ನು ಕೇಳಲೂ ಇಲ್ಲ. ತಾಳಲೂ ಇಲ್ಲ. ಹೆಸರಿಗೆ ತಕ್ಕಂತೆ ವಕ್ರ ಬುದ್ಧಿಯವಳಾದ ನೀನು ಇನ್ನು ಮೇಲೆ ನನ್ನ ಶಾಪದ ಬೇಗೆಯಲ್ಲಿ ಬೆಂದು ಹೋಗುವಿ. ನನಗೆ ಎದುರು ಮಾತನಾಡಿದ ಜಡಮತಿಯೇ ನೀನು ಜಲಮಯಳಾಗಿ ಹರಿದುಹೋಗುವಿ.'' ಹೀಗೆ ಕುಪಿತನಾದ ಪಿತಾಮಹನಿಂದ ಶಪಿತಳಾದ ಆ ಕುಟಿಲಾ ಕನ್ಯೆಯು ಬ್ರಹ್ಮ ದೇವರ ಶಾಪದ ಪ್ರಭಾವದಿಂದ ಕೂಡಲೇ ಕರಗಿ ನೀರುನೀರಾಗಿ ನದೀರೂಪದಿಂದ ಹರಿಯತೊಡಗಿದಳು. ಬ್ರಹ್ಮಶಾಪದಿಂದ ಕೋಪಗೊಂಡ ಆ ಹಿಮಾಲಯ ಪುತ್ರಿಯು ನದಿಯಾದ ಬಳಿಕವೂ ರೋಷ ರಭಸದಿಂದ ತನ್ನ ಪ್ರವಾಹದ ತಡಸಲನ್ನು ತುಳುಕಿಸಿ ತೂರಾಡಿ ಬ್ರಹ್ಮಲೋಕವನ್ನೆಲ್ಲ ತೋಯಿಸಿಬಿಟ್ಟಳು.

೧೦. ತಾಮುದ್ಧತಜಲಾಂ ದೃಷ್ಟ್ವಾ ಪ್ರಬಬಂಧ ಪಿತಾಮಹಃ ।
ಋಕ್ ಸಾಮಾಥರ್ವಯಜುರ್ಭಿರ್ಬಂಧನೈಃ ಸರ್ವತೋದೃಢಮ್ ।

ಉನ್ಮತ್ತ ಪ್ರವಾಹದ ಮಹಾಪೂರದಿಂದ ಮೇರೆ ಮೀರಿ ಹರೆಯುವ ಆ ಮಹಾ ನದಿಯನ್ನು ನೋಡಿ ಬ್ರಹ್ಮದೇವನು ಋಗ್ವೇದ ಯಜುರ್ವೇದ ಅಥರ್ವಣ ವೇದಮಂತ್ರ ಗಳಿಂದ ಆ ಕುಲಟೆಯ ನದೀ ನೀರಿನ ಮಹಾಪೂರಿನ ಪ್ರವಾಹಕ್ಕೆ ದಿಗ್ಬಂಧನ ಮಾಡಿದರು.

೧೧. ಸಾ ಬದ್ಧಾ ಸಂಸ್ಥಿತಾ ಬ್ರಹ್ಮನ್ ತತ್ರೈವ ಗಿರಿಕನ್ಯಕಾ ।
ಅಪೋಮಯೀ ಪ್ಲಾವಯಂತೀ ಬ್ರಹ್ಮಣೋ ವಿಮಲಾಲಯಮ್॥

ಬ್ರಹ್ಮದೇವರ ಬಿಗಿಯಾದ ಮಂತ್ರಬಂಧನದಿಂದ ಆ ಕುಟಿಲೆಯ ನದಿಯ ನೀರಿನ ರಾಶಿಗೆ ಆಚೀಚೆ ಹರಿದು ಹಂದಾಡಲು ಬಾರದಂತಾಯಿತು. ನಿರ್ಬಂಧಿಸಲ್ಪಟ್ಟ ಆ ಗಿರಿಕನ್ಯೆಯು ಆ ಬ್ರಹ್ಮಬಂಧನದಲ್ಲಿಯೇ ನದೀರೂಪದಿಂದ ನಿಂತುಕೊಂಡು ಚತುರ್ಮುಖನ ಸ್ವಯಂ ಸ್ವಚ್ಛ ಶುದ್ಧವಾದ ಸೌಧವನ್ನು ತನ್ನ ತೋಯ ರಾಶಿಯ ತೆರೆಗಳಿಂದ ತೊಳೆಯುತ್ತ ಅಲ್ಲಿಯೇ ತಂಗಿದಳು.

೧೨. ಯಾ ಸಾ ರಾಗವತೀ ನಾಮ ಸಾಪಿ ನೀತಾ ಸುರೋತ್ತಮೈಃ ।
ಬ್ರಹ್ಮಣೇ ತಾಂ ನಿವೇದ್ಯೈವ ತಾಮಪ್ಯಾಹ ಪ್ರಜಾಪತಿಃ ॥

ಹಿಮಾಚಲದ ಚೊಚ್ಚಿಲ ಮಗಳ ಹೆಸರು ರಾಗಿಣಿ ಎಂದಿರುವದಷ್ಟೇ! ಅವಳನ್ನು ಕೂಡ ದೇವತೆಗಳು ಸತ್ಯಲೋಕಕ್ಕೆ ಕರೆದುಕೊಂಡು ಹೋದರು. ಸೃಷ್ಟಿಕರ್ತನ ಎದುರು ನಿಲ್ಲಿಸಿದರು. ''ಮಹಿಷಾಂತಕನನ್ನು ಇವಳು ಹಡೆಯಬಲ್ಲಳೇ?'' ಎಂದು ಕೇಳಿದರು, ಅದಕ್ಕೆ ಪಿತಾಮಹನು ಮೊದಲಿನಂತೆ,

''ಇವಳೂ ಅಂತ ವೀರಪುತ್ರನನ್ನು ಹೆರಲಾರಳು. ಹರನ ತೇಜಸ್ಸನ್ನು ಹೊರಲಾರಳು'' ಎಂದು ನಿಷ್ಠುರವಾಗಿ ನುಡಿದುಬಿಟ್ಟನು. ಆಗ ರಾಗಿಣಿಗೂ ಕೋಪ ಬಂದಿತು. ಅವಳು ಬ್ರಹ್ಮದೇವರ ಎದುರು ಪ್ರತಿಜ್ಞೆ ಗೈದಳು, ''ಮಹಿಷಾಸುರನನ್ನು ಯಾರೇ ಸಂಹರಿಸಲಿ, ಅವನು ನನ್ನ ಹೆಸರನ್ನು ಹೊಂದುವಂತೆ ಮಾಡುತ್ತೇನೆ''.

೧೩. ತಾಂ ಶಶಾಪಾಥ ಸ ಬ್ರಹ್ಮಾ ಸಂಧ್ಯಾರಾಗೋ ಭವಿಷ್ಯಸಿ ।
ಯಾ ಮದ್ವಾಕ್ಯಮಲಂಘ್ಯಂ ವೈ ಸುರೈರ್ಲಂಘಯಸೇ ಬಲಾತ್॥

ಆಗ ಬ್ರಹ್ಮದೇವರು ತನ್ನ ಎದುರು ನಿಂತು ವಾದಿಸುವ ಆ ರಾಗಿಣಿಗೆ ''ದೇವತೆಗಳಿಗೂ ಮೀರಲು ಬಾರದ ನನ್ನ ಮಾತನ್ನು ನೀನು ಮೀರಿನಿಂತೆ. ಆದುದರಿಂದ ಮುಚ್ಚಂಜೆಯ ಬಣ್ಣದ ಬದುಕು ನಿನ್ನದಾಗಲಿ'' ಎಂದು ಶಾಪವಿತ್ತರು. ವಿಧಾತನ ಶಾಪಾನುಸಾರ ಆ ರಾಗಿಣಿಯು ಕೃತ್ತಿಕೆಯ ಭಾಗದಲ್ಲಿ ತನ್ನ ರಾಗಿಣಿ ರೂಪವನ್ನು ಮೇಳವಿಸಿ ರಾಗರಂಜಿತ ಸಂಧ್ಯೆಯಾದಳು.

೧೪. ತಪಸೇ ವಾರಯಾಮಾಸ ಉಮೇತ್ಯೇವಾಬ್ರವೀಚ್ಚ ಸಾ ।
ತದೇವ ಮಾತಾ ನಾಮಾಸ್ಯಾಚಕ್ರೇ ಪಿತೃ ಶ್ರುತಾ ಇತಿ ॥

ಹೀಗೆ ಇಬ್ಬರು ಹೆಣ್ಣು ಮಕ್ಕಳು ಮನೆ ಬಿಟ್ಟು ತೆರಳಿದ ಬಳಿಕ ತಾಯಿ ಮೇನೆಯ ಬಳಿಗೆ ಮೂರನೆಯ ಮಗಳಾದ ಕಾಳಿಯೊಬ್ಬಳೇ ಉಳಿದಳು. ಆದರೆ ಅವಳಿಗೂ ತಪಸ್ಸಿನ ಹಂಬಲ. ತಪೋನುಷ್ಠಾನಕ್ಕಾಗಿ ಆ ಗಿರಿಜೆಯೂ ಬನಕ್ಕೆ ಹೊರಟುನಿಂತಳು. ಪಾಪ ತಾಯಿ ಮೇನೆಯು ಮಾಡಬೇಕೇನು? ತನ್ನ ಕನಿಷ್ಠ ಕುಮಾರಿಗೆ ಅವಳು ಕನಿಕರದಿಂದ ''ಊ-ಮಾ'' ''ಮಗಳೇ ಬೇಡ ಬೇಡ, ತಪಸ್ಸಿಗೆ ತೆರಳಬೇಡ'' ಎಂದು ಬಲವಾಗಿ ನಿಷೇಧಿಸಿದಳು. ಮೇಲಿಂದ ಮೇಲೆ ''ಉ-ಮಾ, ಉ-ಮಾ'' ಎಂದು ಅವಳನ್ನು ಕರೆದು ಕೊನೆಗೆ 'ಉಮಾ' ಎಂದೇ ತಂದೆಯ ಸಮ್ಮತಿಯಿಂದ ಅವಳಿಗೆ ಹೆಸರು ಇಟ್ಟಳು. ಕೊನೆಗೆ ತಪೋನುಷ್ಠಾನಕ್ಕಾಗಿ ಅವಳು ತಪೋವನಕ್ಕೆ ಹೋಗಿಯೇಬಿಟ್ಟಳು.

೧೫. ತತೋಽಬ್ರಹ್ಮಾ ಬ್ರವೀದ್ದೇವಾನ್ । ಗಚ್ಛಧ್ವಂ ಹಿಮವತ್ಸುತಾಮ್ ।
ಇಹಾನಯಧ್ವಂ ತತ್ಕಾಲಂ ತಪಸ್ಯಂತೀಂ ಹಿಮಾಲಯೇ ॥

ಅಲ್ಲಿ ಅವಳು ವೃಷಭಧ್ವಜನಾದ ಮಹಾದೇವನನ್ನು ಮನಸ್ಸಿನಲ್ಲಿ ಚಿಂತಿಸುತ್ತ ಘೋರವಾದ ತಪಸ್ಸನ್ನು ಮಾಡಿದಳು. ಅನಂತರ ಬ್ರಹ್ಮದೇವರು ದೇವರು ದೇವತೆಗಳಿಗೆ ''ನೀವೆಲ್ಲ ಹಿಮಾಲಯಕ್ಕೆ ಹೋಗಿರಿ. ಅಲ್ಲಿ ತಪಂಗೈಯುತ್ತಿದ್ದ ಹಿಮವಂತನ ಕೊನೆಯ ಕನ್ನಿಕೆಯಾದ ಕಾಳಿದೇವಿ ಯನ್ನು ಕೂಡಲೇ ಇಲ್ಲಿಗೆ ಕರೆತನ್ನಿರಿ'' ಎಂದು ಅಪ್ಪಣೆ ಇತ್ತರು. ಅನಂತರ ಸುರರೆಲ್ಲರು ಪಾರ್ವತಿಯ ತಪೋಭೂಮಿಗೆ ಐತಂದರು. ತಪೋನುಷ್ಠಾನ ನಿರತಳಾದ ಆ ಶೈಲ ಸುತೆಯನ್ನು ನೋಡಿದರು. ಅವಳ ದೇಹದ ದಿವ್ಯ ತೇಜಸ್ಸಿನಿಂದ ಅವರೆಲ್ಲರೂ ಸೋತು ಹೋದರು. ಅವಳ ಸನಿಹದಲ್ಲಿ ಸುಳಿದಾಡಲಿಕ್ಕೂ ಸಹ ಅವರಿಗೆ ಧೈರ್ಯವಾಗಲಿಲ್ಲ.

೧೬. ಇಂದ್ರೋ ಮರುದ್ಗಣೈಸ್ಸಾರ್ಧಂ ನಿರ್ಧೂತಸ್ತೇಜಸಾ ತಯಾ
ತೇಜಸಾ ವಿಜಿತಾಸ್ತಸ್ಯಾ ನ ಶೇಕುರುಪಸರ್ಪಿತುಮ್ ॥

ದೇವೇಂದ್ರನೂ ಮರುದ್ಗಣದ ದೇವತೆಗಳೂ ಅವಳ ತೇಜಃಪ್ರಕರ್ಷದಿಂದ ಧರ್ಷಿತರಾದರು. ಅವಳ ಸಮೀಪಕ್ಕೆ ಹೋಗಲಿಕ್ಕೂ ಕೂಡ ಸಾಧ್ಯವಾಗಲಿಲ್ಲ. ಆ ದೇವತೆಗಳಿಗೆ. ಆಗ ಅವರೆಲ್ಲರು ಬ್ರಹ್ಮದೇವನ ಬಳಿಗೆ ಬಂದು ಆ ಶೈಲ ನಂದಿನಿಯ ಅತ್ಯಧಿಕ ತೇಜಃಪುಂಜದ ದಿವ್ಯದೀಪ್ತಿಯ ಬಗ್ಗೆ ನೀವೇದನೆ ಮಾಡಿಕೊಂಡು 'ಅವಳನ್ನು ಇಲ್ಲಿಗೆ ಕರೆತರಲು ಶಕ್ಯವಿಲ್ಲ' ಎಂದು ತಿಳಿಸಿದರು.

**೧೭. ತತೋ ಬ್ರಹ್ಮಾಬ್ರವೀದ್ದೇವಾನ್ ಧ್ರುವಂ ಶಂಕರವಲ್ಲಭಾ**
**ಯೂಯಂ ಸತೇಜಸೋ ನೂನಂ ವಿಕ್ಷಿಪ್ತಾಸ್ತು ಹತಪ್ರಭಾಃ ॥**

''ಓಹ! ಹಾಗಾದರೆ ಅವಳೇ ನಿಜವಾದ ಶಂಕರನ ಪ್ರೇಯಸಿ. ಆದುದರಿಂದಲೇ ನೀವೆಲ್ಲರೂ ಅವಳ ತೇಜಃಪ್ರಭಾವದಿಂದ ಕಳೆಗೆಟ್ಟು ನಿಸ್ತೇಜರಾಗಿ ಹೋಗಿರುವಿರಿ. ಆ ಗಿರಿಸುತೆಯು ಖಂಡಿತವಾಗಿ ಶಿವ ವಲ್ಲಭೆ.

**೧೮. ತಸ್ಮಾದ್ ವ್ರಜಧ್ವಂ ಸ್ವಂ ಸ್ವಂ ಹಿ ಸ್ಥಾನಂ ಭೋ ವಿಗತಜ್ವರಾಃ**
**ಸತಾರಕಂ ಹಿ ಮಹಿಷ ವಿದಧ್ವಂ ನಿಹತಂ ರಣೇ ॥**

ಆದುದರಿಂದ ನೀವೆಲ್ಲರೂ ನಿಮ್ಮ ನಿಮ್ಮ ಸ್ಥಾನಗಳಿಗೆ ತೆರಳಿರಿ. ನಿಮ್ಮ ಮನದ ಚಿಂತೆಯನ್ನು ಬಿಟ್ಟುಬಿಡಿರಿ. ಇಂದೇ ಆ ಮಹಿಷಾಸುರನು ಮಡಿದನೆಂದೂ, ತಾರಕಾಸುರನು ತೀರಿಕೊಂಡನೆಂದೂ ತಿಳಿಯಿರಿ.'' ಹೀಗೆ ಹೇಳಿ ಬ್ರಹ್ಮದೇವರಿಂದ ಸಂತೈಸಲ್ಪಟ್ಟ ಆ ಎಲ್ಲ ಸುರಸತ್ತಮರು ತಮ್ಮ ತಮ್ಮ ತಾಣಗಳಿಗೆ ತೆರಳಿದರು. ಚಿಂತೆ ಕಳೆದ ಅವರ ಮುಖದಲ್ಲಿ ಸಂತಸವು ತುಳುಕುತ್ತಿತ್ತು. ಇತ್ತ ತಪವನ್ನು ತಪಿಸುತ್ತಲಿರುವ ತನ್ನ ತರಳೆ ಉಮೆಯನ್ನು ಶೈಲರಾಜನಾದ ಹಿಮಾಲಯನು ಮಡದಿಯೊಡನೆ ಬಂದು ತಾತ್ಕಾಲಿಕವಾಗಿ ತಿರುಗಿ ಮನೆಯೆಡೆಗೆ ಬರುವಂತೆ ಅವಳ ಮನಸ್ಸನ್ನು ಒಲಿಸಿದನು.

**೧೯. ದೇವೋಪ್ಯಾಶ್ರಿತ್ಯ ತದ್ರೌದ್ರಂ ವ್ರತಂ ನಾಮ ನಿರಾಶ್ರಯಂ ।**
**ವಿಚಚಾರ ಮಹಾಶೈಲಾನ್ ಮೇರುಪ್ರಾಗ್ರ್ಯಾನ್ ಮಹಾಮತಿಃ ॥**

ಅತ್ತ ಮಹಾದೇವನು ನಿರಾಶ್ರಯ ಎಂಬ ಕಠಿಣವ್ರತವನ್ನು ಅಂಗೀಕರಿಸಿದ್ದನು. ನಿರಾಶ್ರಯ ವ್ರತ ಎಂದರೆ ಒಂದು ತಾಣದಲ್ಲಿ ತಂಗದೆ, ಒಂದು ಸ್ಥಳದಲ್ಲಿ ನಿಲ್ಲದೆ ಸತತವೂ ಸಂಚರಿಸುತ್ತಲೇ ಇರುವದು. ದಾಕ್ಷಾಯಣಿ ಮರಣಿಸಿದ ಬಳಿಕ ಮಹಾದೇವನು ಈ ಉಗ್ರವಾದ ರೌದ್ರವ್ರತವನ್ನು ಅಂಗೀಕರಿಸಿ ಅಡವಿ ಅಡವಿ ಅಲೆದನು. ಮೇರು ಮೊದಲಾದ ಮಹಾರಣ್ಯಗಳನ್ನೆಲ್ಲ ಸುತ್ತಿದನು. ಹೀಗೆ ವನವನ ಅಲೆದಾಡುತ್ತ ಆ ಮಹೇಶ್ವರನು ಒಂದು ದಿನ ಹಿಮಾಲಯ ಪರ್ವತಕ್ಕೆ ಬಂದನು. ಗಿರಿರಾಜನು ಭಕ್ತಿಯಿಂದ ಆ ಮಹಾದೇವನನ್ನು ಪೂಜಿಸಿದನು. ಆ ರಾತ್ರಿ ಅವನು ಅಲ್ಲಿಯೇ ಬಿಡಾರ ಮಾಡಿದನು. ಮಾರನೆಯದಿನ ಅಡವಿಗಳ ಅರಸನಾದ ಹಿಮಾಲಯನು ಆ ಮಹಾದೇವರಿಗೆ ಬೇಡಿಕೊಂಡನು.

''ಪ್ರಭು, ತಾವು ಇನ್ನು ಮೇಲೆ ಇದೇ ನನ್ನ ಈ ಹಿಮಶೈಲದಲ್ಲಿ ವಾಸಮಾಡಬೇಕು. ನಿಮ್ಮ ತಪಸ್ಸಾಧನೆಗೆ ಇದು ಒಳ್ಳೇ ಅನುಕೂಲ ಸ್ಥಳ.''

೨೦. ತಥಾಚಾಶ್ರಮಮಾಶ್ರಿತ್ಯ ತ್ಯಕ್ತ್ವಾ ಸ ಸ್ವಂ ನಿರಾಶ್ರಮಮ್
ವಸತೋಽಪ್ಯಾಶ್ರಮೇ ತಸ್ಯ ದೇವದೇವಸ್ಯ ಶೂಲಿನಃ ॥

ಅಂದಿಗೆ ಮಹಾದೇವರ ''ನಿರಾಶ್ರಯ ವ್ರತ''ವು ಕೊನೆಗೊಂಡಂತಾಯಿತು. ಹಿಮಗಿರಿಯ ಬಿನ್ನಹವನ್ನು ಮನ್ನಿಸಿ ಶಿವನು ಆ ಹಿಮಶೈಲದಲ್ಲಿಯೇ ನೆಲೆನಿಂತನು. ಅವನಿಗಾಗಿ ಒಂದು ಆಶ್ರಮವೂ ಸಿದ್ಧವಾಯಿತು.

೨೧. ತಾಮಗತಾಂ ಹರೋ ದೃಷ್ಟ್ವಾ ಭೂಯೋಜಾತಾಂ ಪ್ರಿಯಾಂ ಸತೀಮ್।
ಸ್ವಾಗತೇನಾಭಿಸಂಪೂಜ್ಯ ತಸ್ಥೌ ಯೋಗರತೋ ಹರಃ॥

ಹೀಗೆ ಹೈಮಾಚಲದ ತಪೋವನದಲ್ಲಿ ಪುಣ್ಯಾಶ್ರಮದಲ್ಲಿ ತಪಿಸುತ್ತಲಿರುವ ಆ ತ್ರಿಶೂಲಿಯ ಬಳಿಗೆ ಗಿರಿರಾಜನಂದಿನಿಯಾದ ಕಾಲಿಯೂ ಬಂದಳು. ಹರನು ಆ ಕಾಲೀ ಕುಮಾರಿಯನ್ನು ಕಂಡನು. ಅವಳು ಬೇರಾರೂ ಆಗದೆ ಮರಳಿ ಹುಟ್ಟಿ ಬಂದ ತನ್ನ ಮನದನ್ನೆ ಸತೀದೇವಿಯೇ ಆಗಿದ್ದಳು. ಶಂಕರನು ಅವಳಿಗೆ ಸುಸ್ವಾಗತವನ್ನು ಹೇಳಿ ಸತ್ಕರಿಸಿ ತಾನು ಮತ್ತೆ ಯೋಗ ಸಮಾಧಿಯಲ್ಲಿ ಕುಳಿತುಬಿಟ್ಟನು.

೨೨. ಸಾ ಚಾಭ್ಯೇತ್ಯ ವರಾರೋಹಾ ಕೃತಾಂಜಲಿಪರಿಗ್ರಹಾ ।
ವವಂದೇ ಚರಣೌ ಶೈಲಸಖೀಭಿಃ ಸಹಭಾಗಿನೀ ॥

ಆ ಸುಂದರಿಯಾದ ಕಾಲೀದೇವಿಯು ಕೈ ಜೋಡಿಸಿ ಗೆಳತಿಯರೊಂದಿಗೆ ಚಂದ್ರಶೇಖರನ ಚರಣಗಳಿಗೆ ನಮಸ್ಕಾರ ಮಾಡಿದಳು. ಅನಂತರ ಶಂಕರನು ಗಿರಿಕನ್ಯೆಯನ್ನು ಬಹಳ ಹೊತ್ತು ನೆಟ್ಟ ದೃಷ್ಟಿಯಿಂದ ನೋಡಿಯೇ ನೋಡಿದನು.

೨೩. ತತಸ್ತು ಸುಚಿರಾತ್ ಶರ್ವಃ ಸಮೀಕ್ಷ್ಯ ಗಿರಿಕನ್ಯಕಾಮ್ ।
''ನಯುಕ್ತಂ'' ಚೈವ ಮುಕ್ತ್ವಾಥ ಸುಗಣೋಽಂತರ್ದಧೇ ತತಃ ॥

''ಛೇ, ಇದು ಸರಿಯಲ್ಲ'' ಎಂದು ತನ್ನಲ್ಲಿ ತಾನೇ ನುಡಿದು ತನ್ನ ಗಣದೊಂದಿಗೆ ಆಗಲೇ ಅಲ್ಲಿಯೇ ಅಂತರ್ಧಾನವನ್ನು ಹೊಂದಿದನು.

೨೪. ಸಾಪಿ ಶರ್ವವಚೋ ರೌದ್ರಂ ಶ್ರುತ್ವಾ ಜ್ಞಾನಸಮನ್ವಿತಾ ।
ಅಂತರ್ದುಃಖೇನ ದಹ್ಯಂತೀ ಪಿತರಂ ಪ್ರಾಹ ಪಾರ್ವತೀ ॥

ರುದ್ರನ ಅರೆನುಡಿಯೇ ಪಾರ್ವತಿಗೆ ರುದ್ರಭೀಕರವಾಗಿ ತೋರಿತು. ಅವಳು ಒಳ್ಳೇ ತಿಳುವಳಿಕೆಯುಳ್ಳ ಹೆಣ್ಣು. ಶಿವ ತನ್ನನ್ನು ತೊರೆದು ಹೋದ ದುಃಖದ ಕಿಡಿ ಕಿಚ್ಚಾಗಿ ಅವಳ ಒಳ ಮನವನ್ನು ಸುಡುತ್ತಿತ್ತು. ಅವಳು ತನ್ನ ತಂದೆಗೆ ಹೇಳಿದಳು.

೨೫. ತಾತ ಯಾಸ್ಯೇ ಮಹಾರಣ್ಯಂ ತಪ್ತುಂ ಘೋರಂ ಮಹತ್ತಪಃ ।
ಆರಾಧನಾಯ ದೇವಸ್ಯ ಶಂಕರಸ್ಯ ಪಿನಾಕಿನಃ ॥

''ತಾತ, ಘೋರಾರಣ್ಯಕ್ಕೆ ಹೋಗುವೆ. ಘೋರ ತಪ ಕೈಗೊಳ್ಳುವೆ. ಪಿನಾಕ ಪಿಡಿದ ಶಂಕರನ್ನು, ಮೆಚ್ಚಿಸಲಿಕ್ಕೆ ಇನ್ನು ಬೇರೆ ದಾರಿ ಇಲ್ಲ. ಅವನ ಆರಾಧನೆಯೇ ನನ್ನ ಗುರಿ.'' ಹಿಮಗಿರಿಯು ಮಗಳ ಈ ಮನೋನಿರ್ಧಾರವನ್ನು ಅನುಮೋದಿಸಿದನು. ಅದೇ ಹೈಮಾಚಲದ ಬಿತ್ತರದ ತಪ್ಪಲ ಪ್ರದೇಶದಲ್ಲಿ ಉಗ್ರ ತಪವನ್ನು ಕೈಕೊಂಡಳು ಉಮೆ.

**೨೬. ತಥೇತ್ಯುಕ್ತ್ವಂ ವಚಃ ಪಿತ್ರಾ ಪಾದೇ ತಸ್ಯೈವ ವಿಸ್ತೃತೇ ॥**
**ಲಲಿತಾಖ್ಯಾ ತಪಸ್ತೇಪೇ ಹರಾರಾಧನಕಾಮ್ಯಯಾ ॥**

ತಪೋನಿರತಳಾದ ಕಾಲೀದೇವಿಯ ಆ ತಾಪಸೀ ರೂಪಕ್ಕೆ 'ಲಲಿತಾ' ಎಂದು ಶಿವನ ಆರಾಧನೆಯೇ ಅದರ ಅರಸುಗುರಿ.

**೨೭. ವಿನೋಧನಾರ್ಥಂ ಪಾರ್ವತ್ಯಾಮ್ಮೃಣಯಃ ಶೂಲಧೃಗ್ವರಃ ।**
**ಕೃತಶ್ಚ ತೇಜೋಯುಕ್ತಶ್ಚ ರುದ್ರೋ ಮೇಽಸ್ತ್ವಿತಿ ಸಾಬ್ರವೀತ್॥**

ಅವಳ ಗೆಳತಿಯರು ಅವಳ ಅನುಷ್ಠಾನಕ್ಕೆ ಅನುಕೂಲವಾಗುವಂತೆ ದರ್ಭೆ, ಸಮಿಧೆ, ಹಣ್ಣುಹಂಪಲು, ಗಡ್ಡೆ ಗೆಣಸು ಮುಂತಾದವುಗಳನ್ನು ತಂದುಕೊಟ್ಟು ಆ ದೇವಿಯನ್ನು ಸೇವಿಸುತ್ತಲಿದ್ದರು ಹಾಗೂ ಪಾರ್ವತಿಯ ಮನೋವಿನೋದಕ್ಕಾಗಿ ಮಣ್ಣಿನ ಮಹಾದೇವರ ಲಿಂಗಮೂರ್ತಿಯನ್ನು ಮಾಡಿ ಅವಳ ಮುಂದೆ ತಂದು ಇರಿಸಿದರು. (೨೭). ಗಿರಿಜೆಯು ಪ್ರೇಮದಿಂದ ನೋಡಿದ ಕೂಡಲೇ ಅದರಲ್ಲಿ ತೇಜಸ್ಸು ಮಿಂಚಾಡ ತೊಡಗಿತು. ''ಈ ರುದ್ರನೇ ನನಗೆ ಪತಿಯಾಗಲಿ'' ಎಂದು ಕಾಳಿಯು ನುಡಿದಳು. ಶೈಲಸುತೆಯು ಇಂಥ ಮಾರ್ಮಿಕ ಮಹೇಶ್ವರನ ಮೂರ್ತಿಯನ್ನು ಮತ್ತೆ ಮತ್ತೆ ನೋಡುತ್ತ ಪುನಃ ಪುನಃ ಪೂಜೆ ಮಾಡುತ್ತಿದ್ದಳು.

**೨೮. ಪೂಜಾಂ ಕರೋತಿ ತಸ್ಯೈವ ತಂ ಪಶ್ಯಂತೀ ಮುಹುರ್ಮುಹುಃ ।**
**ತತೋಽಸಾ ಸ್ತುಷ್ಟಿಮಗಮತ್ ಶ್ರದ್ಧಯಾ ತ್ರಿಪುರಾಂತಕೃತ್ ॥**

ಅವಳ ಈ ಭಕ್ತಿಗೆ ತ್ರಿಪುರಾರಿಯಾದ ಮಹಾದೇವನು ಮೆಚ್ಚಿ ಮನಸ್ಸಿನಲ್ಲಿ ಅತ್ಯಂತ ಸಂತೋಷಪಟ್ಟನು. ಪಾರ್ವತಿಯ ಘೋರ ತಪಸ್ಸಿನಿಂದ ಸುಪ್ರಸನ್ನನಾದ ಆ ಪರಶಿವನು ಒಂದು ದಿನ ಅವಳಿಗಾಗಿ ವಟುವೇಶವನ್ನು ಧರಿಸಿದನು. ಕೈಯಲ್ಲಿ ಕೊಡೆ, ಕೊರಳಲ್ಲಿ ಜನಿವಾರ. ಕಟಿಯಲ್ಲಿ ಮೌಂಜಿ. ಗೆಜ್ಜೆಯಲ್ಲಿ ಉಡುದಾರ. ಮೈಮೇಲೆ ಮಿಗದೊಗಲು. ಆ ವಟು ವೇಷದ ಶಿವನ ಮತ್ತೊಂದು ಮಾಟಕ್ಕೆ ಕಮಂಡಲವನ್ನು ಸಂಬಾಳಿಸುತ್ತಿತ್ತು. ಭಸ್ಮಲೇಪನದಿಂದ ಮೈತುಂಬ ಹೊಂಬಣ್ಣದ ಹೊಳಪು ಪ್ರತಿಯೊಂದು ಆಶ್ರಮವನ್ನು ಸುತ್ತಾಡುತ್ತ ಆ ವಟು ಕಾಲೀ ಕುಮಾರಿಯ ಆಶ್ರಮಕ್ಕೆ ಬಂದನು. ನಾರದನೇ, ಆ ದಿಟ್ಟ ಅತಿಥಿಯನ್ನು ಕಂಡು ಕಾಲೀದೇವಿಯು ಗೆಳತಿಯರೊಂದಿಗೆ ಎದ್ದು ನಿಂತಳು. ಕ್ರಮಬದ್ಧವಾಗಿ ಪೂಜಿಸಿದಳು. ಅನಂತರ ಈ ಪ್ರಶ್ನೆಯನ್ನು ಕೇಳಿದಳು.

**೨೯. ಕಸ್ಮಾದಾಗಮ್ಯತೇ ಭಿಕ್ಷೋ ಕುತ್ರ ಸ್ಥಾನೇ ತವಾಶ್ರಮಃ ।**
**ಕುತಸ್ಸಂಪರಿಗಂತಾಸಿ ಮಮ ಶೀಘ್ರಂ ನಿವೇದಯ ॥**

**ಉಮಾ :** ''ಭಿಕ್ಷುಕನೇ ನೀನು ಎಲ್ಲಿಂದ ಬಂದೆ? ನೀನು ನೆಲೆಸಿದ ನೆಲ ಯಾವುದು? ನೀನು ಇರುವ ಆಶ್ರಮವು ಎಲ್ಲಿ? ನೀನು ಹೀಗೇಕೆ ಸಂಚರಿಸುತ್ತಲಿರುವೆ? ಇದೆಲ್ಲವನ್ನೂ ನನಗೆ ಹೇಳು. ತಡ ಮಾಡದೇ ಹೇಳು. ಬೇಗ ತಿಳಿಸು.

**೩೦. ಮಮಾಶ್ರಯಪದಂ ಬಾಲೇ ವಾರಾಣಸ್ಯಾಂ ಶುಚಿವ್ರತೇ ।**
**ಅಥೈತತ್ತೀರ್ಥಯಾತ್ರಾಯಾಂ ಗಮಿಷ್ಯಾಮಿ ಪೃಥೂದಕಮ್ ।**

**ಭಿಕ್ಷು :** ಬಾಲಿಕೆಯೇ ನನ್ನ ಆಶ್ರಮವು ಕಾಶಿಯಲ್ಲಿ ಇರುತ್ತದೆ. ಪವಿತ್ರ ವ್ರತಗಳನ್ನು ಕೈಕೊಂಡ ಕುಮಾರಿಯೇ, ನಾನೀಗ ತೀರ್ಥಯಾತ್ರೆಗೆ ಹೊರಟಿದ್ದೇನೆ. ಮುಂದೆ ಪೃಥೂದಕ ಎಂಬ ತೀರ್ಥಕ್ಕೆ ಹೋಗುತ್ತೇನೆ.

**೩೧. ಕಿಂ ಪುಣ್ಯಂ ತತ್ರ ವಿಪ್ರೇಂದ್ರ ಯದ್ಯಾಸಿ ತ್ವಂ ಪೃಥೂದಕೇ**
**ಪಥಿ ಸ್ನಾನೇನ ಚ ಕಿಂ ಫಲಂ ಕೇಷು ಕಿಂ ಲಬ್ಧವಾನಸಿ ॥**

**ಕಾಲಿ :** ನೀನು ಪೃಥೂದಕ ತೀರ್ಥಕ್ಕೆ ಹೋಗುವದಿದ್ದರೆ ಬ್ರಾಹ್ಮಣೋತ್ತಮನೇ, ಅದರಿಂದ ಏನು ಫಲ! ಎಂಥ ಪುಣ್ಯ! ಆ ಪೃಥೂದಕ ಕ್ಷೇತ್ರದ ದಾರಿಯಲ್ಲಿರುವ ತೀರ್ಥ ಕ್ಷೇತ್ರಗಳಲ್ಲಿ ಸ್ನಾನ ದೇವತಾ ಆರಾಧನೆಯನ್ನು ಮಾಡುವದರಿಂದ ಎಷ್ಟು ಪುಣ್ಯ ಫಲ! ಅದರಲ್ಲಿ ನೀನು ಈಗಾಗಲೇ ಪಡೆದದ್ದು ಎಷ್ಟು ?''

**೩೨. ಇಹಸ್ಥಾಂ ತ್ವಾಂ ಸಮಾಭಾಷ್ಯ ಗಮಿಷ್ಯಾಮಿ ಪ್ರಥೂದಕಮ್ ।**
**ಪೃಚ್ಛಾಮಿ ಯದಹಂ ತ್ವಾಂ ವೈ ತತ್ರ ಕ್ರೋದ್ಧುಮರ್ಹಸಿ ॥**

**ಭಿಕ್ಷು :** ನಾನು ಮೊದಲು ಪ್ರಯಾಗದಲ್ಲಿ ಮಿಂದು ಬಂದೆನು. ಅನಂತರ ಕುಬ್ಜಾಮ್ರ ಜಯಂತ, ಚಂಡಿಕೇಶ್ವರ ಮುಂತಾದ ಪುಣ್ಯ ತೀರ್ಥಗಳಲ್ಲಿ ಸ್ನಾನ ಮಾಡಿದೆನು. ಬಂಧೂವೃಂದ ತೀರ್ಥದಲ್ಲಿಯೂ ಕರ್ಕಂಧು ತೀರ್ಥದಲ್ಲಿಯೂ ಕನಖಲ ತೀರ್ಥದಲ್ಲಿಯೂ ನಾನು ಸ್ನಾನ ಮಾಡಿ ಬಂದೆ. ಸರಸ್ವತೀ ನದಿಯ ಅಗ್ನಿಕುಂಡ ತೀರ್ಥದಲ್ಲಿಯೂ ಭದ್ರಾ ನದಿಯ ತ್ರಿವಿಷ್ಟಪ ತೀರ್ಥದಲ್ಲಿಯೂ ನಾನು ಮುಳುಗು ಹಾಕಿದೆ. ಹಾಗೇ ಕೌನಟ ಕೋಟಿ ತೀರ್ಥ ಮತ್ತು ತಕ್ಷಕ ಎಂಬ ತೀರ್ಥಗಳಲ್ಲಿ ಯಾವ ಫಲಾಶೆ ಇಲ್ಲದೇ ನಿಷ್ಕಾಮ ಬುದ್ಧಿಯಿಂದ ಸ್ನಾನ ಮಾಡಿ ಅನಂತರ ಈ ನಿನ್ನ ಆಶ್ರಮಕ್ಕೆ ಬಂದಿದ್ದೇನೆ. ಇಲ್ಲಿರುವ ನಿನ್ನ ಜೊತೆಗೆ ಮಾತನಾಡಿ ನಿನ್ನ ಯೋಗಕ್ಷೇಮವನ್ನು ವಿಚಾರಿಸಿ ಪೃಥೂದಕ ತೀರ್ಥಕ್ಕೆ ತೆರಳುತ್ತೇನೆ. ಆದರೆ ಈಗ ತಳೋದರಿಯೇ, ನಾನು ಕೆಲವು ವಿಷಯಗಳನ್ನು ನಿನ್ನಲ್ಲಿ ಕೇಳಬೇಕೆಂದಿದ್ದೇನೆ. ಇದಕ್ಕೆ ನೀನು ಕೋಪಿಸಕೂಡದು.

**೩೩. ಅಹಂ! ಕಾ ಯಸ್ತಪಸಾತ್ಮಾನಂ ಶೋಷಯಾಮಿ ಕೃಶೋದರಿ ।**
**ಬಾಲ್ಯೇಽಪಿ ಸಂಯತತನುಃ ತತಃ ಶ್ಲಾಘ್ಯಂ ದ್ವಿಜನ್ಮನಾಮ್ ॥**

ಕೃಶೋದರಿ, ನಾನು ಉಗ್ರ ತಪಸ್ಸಿನಿಂದ ನನ್ನ ದೇಹವನ್ನು ಒಣಗಿಸುತ್ತಲಿದ್ದೇನೆ. ಇದು ನನಗೆ ಯೋಗ್ಯ. ಯಾಕೆಂದರೆ ನಾನು ಬ್ರಾಹ್ಮಣ. ಎಳೆತನದಿಂದಲೂ ಯಮ ನಿಯಮಗಳಿಂದ ದೇಹವನ್ನು ದಂಡಿಸುವದು ನನಗೆ ಅಭ್ಯಾಸವಾಗಿದೆ. ಆದುದರಿಂದ ನನ್ನಂಥ ಬ್ರಾಹ್ಮಣರಿಗೆ ಇದು ಶ್ಲಾಘ್ಯವೇ ಸರಿ.

**೩೪. ಕಿಮರ್ಥಂ ಭವತೀ ರೌದ್ರಂ ಪ್ರಥಮೇ ವಯಸಿ ಸ್ಥಿತಾ ।**
**ತಪಃ ಸಮಾಶ್ರಿತಾ ಭೀರು ಸಂಶಯಃ ಪ್ರತಿಭಾತಿ ಮೇ ॥**

ಆದರೆ ನೀನು ಇನ್ನೂ ಇಷ್ಟು ಚಿಕ್ಕ ವಯಸ್ಸಿನಲ್ಲೇ ಇಂಥ ರುದ್ರ ಭೀಕರವಾದ ತಪಸ್ಸನ್ನು ಏಕೆ ಕೈಕೊಂಡಿರುವಿ? ಮೊದಲೇ ಹೆಂಗಸರದು ಹೆದರುವ ಸ್ವಭಾವ. ನೀನು ಹೆಣ್ಣಾಗಿಯೂ ಇಂಥ ಉಗ್ರ ತಪವನ್ನು ಈ ಎಳಮೆಯಲ್ಲಿ ಕೈಕೊಂಡ ಕಾರಣವೇನಿರ ಬಹುದು? ನನಗೆ ಸಂಶಯ ಬರುತ್ತಲಿದೆ.

೩೫. ಪ್ರಥಮೇ ವಯಸಿ ಸ್ತ್ರೀಣಾಂ ಸಹಭರ್ತ್ರಾ ವಿಲಾಸಿನಿ ।
ಸುಭೋಗಾ ಭೋಗಿತಾಃ ಕಾಲಾ ವ್ರಜಂತಿ ಸ್ಥಿರಯೌವನೇ ॥

ಸ್ತ್ರೀಯರು ತಮ್ಮ ಪ್ರಾಯದ ಪ್ರಥಮ ವಯಸ್ಸಿನಲ್ಲಿ ಪತಿಗಳೊಂದಿಗೆ ವಿವಿಧ ವಿಲಾಸಗಳನ್ನು ಅನುಭವಿಸುವರು. ಅವರ ಯೌವನದ ಕಾಲವೆಲ್ಲವೂ ಭೋಗೋಪಭೋಗಗಳಿಂದ ಅನುಭವಿಸುವದರಲ್ಲಿಯೇ ಕಳೆಯುವದು.

೩೬. ತಪಸಾ ವಾಂಛಯಂತೀಹ ಗಿರಿಜೇ ಸಚರಾಚರಾಃ ।
ರೂಪಾಭಿಜನಮೈಶ್ವರ್ಯಂ ತಚ್ಚ ತೇ ವರ್ತತೇ ಬಹು ॥

ವಿಲಾಸಿನಿ ಇನ್ನೊಂದು ವಿಷಯವನ್ನು ನನಗೆ ನಿನ್ನಲ್ಲಿ ಕೇಳಬೇಕಾಗಿದೆ. ಈ ಚರಾಚರ ಪ್ರಪಂಚದಲ್ಲಿ ತಪಸ್ಸು ಮಾಡಿ ಪಡೆಯುವ ವಸ್ತು ಮೂರು. ದಿವ್ಯ ಸೌಂದರ್ಯ. ದೊಡ್ಡ ಮನೆತನದಲ್ಲಿ ಜನನ, ವಿಪುಲ ಐಶ್ವರ್ಯ. ಹಿಮರಾಜ ನಂದಿನಿಯೇ ಈ ಮೂರು ನಿನಗೆ ಹುಟ್ಟಿನೊಡನೇ ಹತ್ತಿ ಬಂದಿವೆ. ಸಮೃದ್ಧವಾಗಿ ಇದೆ. ಅಂದ ಬಳಿಕ ನಿನ್ನ ಈ ಕಠೋರ ತಪಸ್ಸು ಏತಕ್ಕಾಗಿ!

೩೭. ತತ್ಕಿಮರ್ಥಮಪಾಸ್ಯೈತಾನಲಂಕಾರಾನ್ ಜಟಾ ಧೃತಾಃ ।
ಚೀನಾಂಶುಕಂ ಪರಿತ್ಯಜ್ಯ ಕಿಂ ತ್ವಂ ವಲ್ಕಲಧಾರಿಣೀ ॥

ಚಿನ್ನ ರನ್ನದ ಆಭರಣಗಳನ್ನು ದೂರ ಎಸೆದು ಈ ತಪೋದೀಕ್ಷೆಯನ್ನು ಕೈಕೊಂಡದ್ದು ಏಕೆ? ಕೋಮಲವಾದ ಈ ನಿನ್ನ ಕೇಶಪಾಶಗಳನ್ನು ಈ ಕೌಮಾರದಲ್ಲಿಯೇ ಜಡೆಗಟ್ಟಿಸಿರುವ ಕಾರಣವೇನು? ಪಟ್ಟೆಪಿತಾಂಬರಗಳನ್ನು ತೊಟ್ಟುಕೊಳ್ಳದೇ ನಾರು ಬಟ್ಟೆಯನ್ನು ಉಟ್ಟಿರುವದು ಏಕೆ ? ಎಂದು ಮುಂತಾಗಿ ಪ್ರಶ್ನೆಗಳ ಸುರಿಮಳೆಯನ್ನೇ ಆ ತರುಣಭಿಕ್ಷುಕನು ಪಾರ್ವತಿಗೆ ಮಾಡಿದನು,

೩೮. ತತಸ್ತು ತಪಸಾ ವೃದ್ಧಾ ದೇವ್ಯಾಃ ಸೋಮಪ್ರಭಾ ಸಖೀ ।
ಭಿಕ್ಷವೇ ಕಥಯಾಮಾಸ ಯಥಾವತ್ ಸಾ ಹಿ ನಾರದ ॥

**ಪುಲಸ್ತ್ಯ** : ಅದೇ ಆಶ್ರಮದಲ್ಲಿ ಕಾಳೀಕುಮಾರಿಯ ಗೆಳತಿಯೊಬ್ಬಳಿದ್ದಳು. ಅವರಿಬ್ಬರೂ ವಯಸ್ಸಿನಿಂದಲ್ಲ-ತಪಸ್ಸಿನಿಂದ ಗೆಳತಿಯರು. ತಪತಪಸಿ ಹಣ್ಣಾದ ಸೋಮಪ್ರಭೆ ಎಂಬ ಒಬ್ಬ ಹೆಣ್ಣುಮಗಳು ಪಾರ್ವತಿಯ ಎಳೆವರೆಯದ ಅತ್ಯುಗ್ರ ತಪಸ್ತೀಕ್ಷ್ಣತೆಯನ್ನು ಕಂಡು ಅವಳ ಗೆಳೆತನ ಬಯಸಿ ಬಂದಿದ್ದಳು. ಅವಳ ಪರಿಚಾರಿಕೆಯಾಗಿ ಅವಳ ಆಶ್ರಮದಲ್ಲಿಯೇ ನಿಂತಿದ್ದಳು. ಕಾಳೀ ದೇವಿಯ ಈ ಮುದಿ ಗೆಳತಿಯು ವಟುವೇಷದ ಆ ತರುಣ ಭಿಕ್ಷುಕನ ಪ್ರಶ್ನೆಗಳಿಗೆ ಸರಿಯಾಗಿ ಉತ್ತರ ಕೊಡಲು ಮೊದಲು ಮಾಡಿದಳು.

೩೯. ತಪಶ್ಚರ್ಯಾ ದ್ವಿಜಶ್ರೇಷ್ಠ ಪಾರ್ವತ್ಯಾ ಯೇನ ಹೇತುನಾ ।
ತಂ ಶೃಣುಷ್ವ ಮಹಾಕಾಲೀ ಹರಂ ಭರ್ತಾರಮಿಚ್ಛತಿ ॥

''ಬ್ರಾಹ್ಮಣೋತ್ತಮನೇ, ನನ್ನ ಗೆಳತಿ ಪಾರ್ವತಿಯು ಯಾವ ಉದ್ದೇಶದಿಂದ ತಪಸ್ಸನ್ನು ಕೈಕೊಂಡಿದ್ದಾಳೆ ಎಂಬುದನ್ನು ಹೇಳುತ್ತೇನೆ ಕೇಳು. ಈ ಮಹಾಕಾಳಿಯು ಮಹಾದೇವನನ್ನು ಪತಿಯನ್ನಾಗಿ ಅಪೇಕ್ಷಿಸುತ್ತಿದ್ದಾಳೆ.''

೪೦. ಸೋಮಪ್ರಭಾಯ ವಚನಂ ಶ್ರುತ್ವಾ ಸಂಕಂಪ್ಯ ವೈ ಶಿರಃ ।
ವಿಹಸ್ಯ ಚ ಮಹಾಹಾಸಂ ಭಿಕ್ಷುರಾಹ ವಚಸ್ತ್ವಿದಮ್ ॥

**ಪುಲಸ್ತ್ಯ :** ಸೋಮಪ್ರಭೆಯ ಮಾತನ್ನು ಕೇಳಿ ಆ ಭಿಕ್ಷುಕ ಯುವಕನಿಗೆ ಭಾರೀ ನಗೆ ಬಂದಿತು. ಅವನು ಬಿದ್ದು ಬಿದ್ದು ನಕ್ಕನು. ತಲೆಯನ್ನು ಜಾಡಿಸಿದನು. ಅಟ್ಟ ಹಾಸಗೈದನು. ಅನಂತರ ನುಡಿದನು. (೪೧)

೪೧. ವದಾಮಿ ತೇ ಪಾರ್ವತಿ ವಾಕ್ಯಮೇಕಂ ಕೇನ ಪ್ರದತ್ತಾ ತವ
ಬುದ್ಧಿರೇಷಾ । ಕಥಂ ಕರಃ ಪಲ್ಲವಕೋಮಲಸ್ತೇ ಸಮೇಷ್ಯತೇ
ಶಾರ್ವಕರಂ ಸಸರ್ಪಮ್ ॥

''ಪಾರ್ವತಿ ನಾನೊಂದು ಮಾತನ್ನು ಹೇಳುತ್ತೇನೆ ಕೇಳು. ನಿನಗೆ ಯಾರು ಇಂಥ ಬುದ್ಧಿಯನ್ನು ಕೊಟ್ಟವರು? ಎಂಥ ವಿಸಂಗತವಾದ ಬಯಕೆಯನ್ನು ಬಗೆಯಲ್ಲಿ ಹೊತ್ತು ಬನ್ನಪಡುತ್ತರುವಿಯಲ್ಲ! ತುಸು ಯೋಚಿಸಿ ನೋಡು. ನೀನು ಶಂಕರನ ಕೈಹಿಡಿಯಬೇಕೆಂದು ಬಯಸುವಿ. ಚಿಗುರೆಲೆಯಂತೆ ಚೆಲುವಾದ ನಿನ್ನ ಕೈ ಹಾವಿನಕಡಗ ತೊಟ್ಟ ಹರನ ಕೈಯನ್ನು ಹಿಡಿಯುವದೆಂತು? ನೀನೇ ವಿಚಾರಿಸು.

೪೨. ತಥಾ ದುಕೂಲಾಂಬರಧಾರಿಣೀ ತ್ವಂ ಮೃಗಾರಿ
ಚರ್ಮಾಭಿವೃತಸ್ತು ರುದ್ರಃ ।
ತ್ವಂ ಚಂದನಾಕ್ತಾ ಸ ಚ ಭಸ್ಮಭೂಷಿತೋ ನ
ಯುಕ್ತರೂಪಂ ಪ್ರತಿಭಾತಿ ಮೇತ್ವಿದಮ್ ॥

ನೀನು ಉಟ್ಟದ್ದು ಪೀತಾಂಬರ, ತೊಟ್ಟದ್ದುದು ಕೂಲಾಂಬರ. ಆದರೆ ಆ ರುದ್ರನು ಮಾತ್ರ ಹಸಿಹುಲಿದೊಗಲನ್ನು ಹೊತ್ತು ಹಾಗೇ ಸುತ್ತಿ ಕೊಂಡಿರುತ್ತಾನೆ. ನಿನ್ನ ಈ ಚೆಲುವಿನ ಮೈ ಚಂದನಚರ್ಚಿತವಾಗಿ ಸುಂದರವಾಗಿರುತ್ತದೆ. ಆದರೆ ನಿನ್ನ ಆ ಭಾವೀಪತಿ ಭವನು ಮಾತ್ರ ಮೈತುಂಬ ಬೂದಿಬಳಿದುಕೊಂಡು ನಿಂತಿರುತ್ತಾನೆ. ಹೀಗೆ ಪರಸ್ಪರ ವಿರುದ್ಧ ವೇಷಭೂಷಣಗಳುಳ್ಳ ನಿಮ್ಮಿಬ್ಬರಲ್ಲಿ ಹೊಂದಾಣಿಕೆ ಯಾಗುವದೆಂತು! ನನಗಂತೂ ಆ ಶಿವನನ್ನು ಅಪೇಕ್ಷಿಸುವದು ಯೋಗ್ಯವೆನಿಸುವದಿಲ್ಲ.''

**ಪುಲಸ್ತ್ಯ :** ಆ ತರುಣ ಭಿಕ್ಷುಕನು ಹೀಗೆ ನಿಷ್ಠುರವಾಗಿ ನುಡಿಯಲು ಪಾರ್ವತಿಯು ಅವನನ್ನು ಅಷ್ಟಕ್ಕೇ ತಡೆದು ಉತ್ತರ ಕೊಟ್ಟಳು -

೪೩. ಏವಂ ವಾದಿನಿ ವಿಪ್ರೇಂದ್ರ ಪಾರ್ವತೀ ಭಿಕ್ಷುಮಬ್ರವೀತ್ ।
ಮಾಮ ಮೈವಂ ವದ ಭಿಕ್ಷೋ ತ್ವಂ ಹರಃ ಸರ್ವಗುಣಾಧಿಕಃ॥

''ಭಿಕ್ಷುಕನೇ ಇದು ಹಾಗಿಲ್ಲ. ನೀನು ಹಾಗೆ ತಿಳಿಯಕೂಡದು ಮತ್ತು ನೀನು ಹಾಗೆ ನುಡಿಯಕೂಡದು. ಶಿವನು ಸರ್ವ ಗುಣಗಳಿಂದಲೂ ಶ್ರೇಷ್ಠನಾಗಿದ್ದಾನೆ.

೪೪. ಶಿವೋ ವಾಪ್ಯಥವಾ ಭೀಮಃ ಸಧನೋ ನಿರ್ಧನೋಽಥವಾ ।
ಅಲಂಕೃತೋ ವಾ ದೇವೇಶಸ್ತಥಾ ವಾಪ್ಯನಲಂ ಕೃತಃ ।
ಯಾದೃಶಸ್ತಾದೃಶೋ ವಾಪಿ ಸ ಮೇ ನಾಥೋ ಭವಿಷ್ಯತಿ ॥

ಅವನು ಶಂಕರನೇ ಇರಲಿ, ಭಯಂಕರನೇ ಇರಲಿ, ಧನವಂತನೇ ಆಗಿರಲಿ ಅಥವಾ ದರಿದ್ರನೇ ಆಗಿರಲಿ, ಅವನು ಅಲಂಕಾರವನ್ನು ತೊಟ್ಟರೂ ಅಷ್ಟೇ ಬಿಟ್ಟರೂ ಅಷ್ಟೇ, ಆಭರಣಗಳನ್ನು ಇಟ್ಟರೂ ಸರಿ ಬಿಟ್ಟರೂ ಸರಿ. ಹೇಗೇ ಇರಲಿ. ಹರನೇ ನನಗೆ ವರ. ಎಂತಿದ್ದರೂ ಎಲ್ಲಿದ್ದರೂ ಅವನೇ ನನ್ನ ನಲ್ಲ. ನನ್ನ ನಾಥ.

**೪೫. ನಿರ್ವಾರ್ಯತಾಮಯಂ ಭಿಕ್ಷುಃ ವಿವಕ್ಷುಃ ಸ್ಫುರಿತಾಧರಃ ।**
**ನ ತಥಾ ನಿಂದಕಃ ಪಾಪೀ ಯಥಾ ಶ್ರೋತಾ ಶಶಿಪ್ರಭೇ ॥**

''ಸೋಮಪ್ರಭೆಯೇ. ಈ ಭಿಕ್ಷುಕನನ್ನು ಹೊರಗೆ ಹಾಕು. ಮತ್ತೆ ಇವನು ಮಹಾದೇವನನ್ನು ನಿಂದಿಸಲು ಬಾಯ್ಬಿಡುವ ಲಕ್ಷಣ ತೋರುತ್ತದೆ. ಇವನ ಮುಂದುಟಿ ಹಂದಾಡುತ್ತಲಿದೆ. ಮಾತನಾಡುವ ಹವಣಿಕೆಯಲ್ಲಿ ಮಾತ ನಾಡುವ ಮೊದಲೇ ಈ ಮಹನ್ನಿಂದಕನನ್ನು ದೂರಕಳಿಸು. ದೊಡ್ಡವರ ನಿಂದೆ ಮಾಡು ವವನಿಗಿಂತ, ಅದನ್ನು ಆದರದಿಂದ ಕೇಳುವವನೇ ಮಹಾಪಾಪಿ.

**೪೬. ಇತ್ಯೇವಮುಕ್ತ್ವಾ ವರದಾ ಸಮುತ್ಥಾ ತಾಮಥೈಚ್ಛತ ।**
**ತತೋಽತ್ಯಜದ್ ಭಿಕ್ಷುರೂಪಂ ಸ್ವರೂಪಸ್ಥೋಽಭವದ್ ಭವಃ**

ಅಥವಾ ಈ ಬಂದ ಬ್ರಾಹ್ಮಣನನ್ನು ಹೊರಗೆ ಹಾಕುವದಕ್ಕಿಂತ ಹರನಿಂದೆಯನ್ನು ತಪ್ಪಿಸಲು ನಾನೇ ಇಲ್ಲಿಂದ ಬೇರೆಡೆಗೆ ಹೋಗುತ್ತೇನೆ'' ಎಂದು ಹೇಳಿ ವರಪ್ರದಳಾದ ಆ ಕಾಳೀಕುಮಾರಿಯು ಅಲ್ಲಿಂದ ಎಳ ಹೊರಟಳು. ಕೂಡಲೇ ಆಗ ಆ ಮಹಾದೇವನು ತನ್ನ ಭಿಕ್ಷುಕ ರೂಪವನ್ನು ಬಿಟ್ಟು ಅವಳೆದುರು ಭವಾಕಾರದ ನಿಜರೂಪದಿಂದ ನಿಂತು ಕೊಂಡನು. ಆಗ ನಲುಮೆದುಂಬಿ ಆ ನೀಲಕಂಠನು ತನ್ನ ನೆಚ್ಚಿನ ನಲ್ಲೆಗೆ ಹೇಳಿದನು.

**೪೭. ಭೂತ್ವೋವಾಚ ಪ್ರಿಯೇ ಗಚ್ಛ ಸ್ವಮೇವ ಭವನಂ ಪಿತುಃ**
**ತವಾರ್ಥಾಯ ಪ್ರಹೇಷ್ಯಾಮಿ ಮಹರ್ಷೀನ್ ಹಿಮವದ್ಗೃಹೇ ॥**

''ಪ್ರೇಯಸಿಯೇ, ನೀನು ಇನ್ನು ತಪಸ್ಸನ್ನು ಬಿಟ್ಟು ನಿನ್ನ ತಂದೆಯ ಮನೆಗೆ ಹೋಗು. ನನಗಾಗಿ ನಿನ್ನನ್ನು ಯಾಚಿಸಲು ಮಹರ್ಷಿಗಳನ್ನು ಕಳಿಸಿಕೊಡುತ್ತೇನೆ.

**೪೮. ಯಚ್ಚೇಹ ರುದ್ರಮೀಹಾಂತ್ಯಾ ಮೃಣ್ಮಯಶ್ಚೇಶ್ವರಃ ಕೃತಿಃ ।**
**ಅಸಾ ಭದ್ರೇಶ್ವರೇತ್ಯೇವಂ। ಖ್ಯಾತೋ ಲೋಕೇ ಭವಿಷ್ಯತಿ॥**

ರುದ್ರದೇವನಾದ ನನ್ನನ್ನೇ ನಾಥನಾಗಬೇಕೆಂದು ಬಯಸಿ ನೀನು ಮಣ್ಣಿನಿಂದ ಮಹಾದೇವರ ಲಿಂಗವನ್ನು ಮಾಡಿ ಈ ಸ್ಥಳದಲ್ಲಿ ಪೂಜೆ ಮಾಡುತ್ತಿದ್ದೆ. ನೀನು ಮಾಡಿದ ಆ ಮೃಣ್ಮಯ ಮೂರ್ತಿಯು ಇನ್ನು ಮೇಲೆ ಈ ಮಹಿಮಂಡಲದಲ್ಲಿ ಭದ್ರೇಶ್ವರ ಎಂದು ಖ್ಯಾತಿಯನ್ನು ಪಡೆಯುವದು.

**೪೯. ಇತ್ಯೇವಮುಕ್ತ್ವಾ ದೇವೇನ ಗಿರಿರಾಜ ಸುತಾ ಮುನೇ ।**
**ಜಗಾಮಾಂಬರ ಪೂವಿಶ್ಯ ಸ್ವಮೇವ ಭವನಂ ಪಿತಃ ॥**

ಶುಭವನ್ನು ಬಯಸುವ ದೇವದಾನವರು ಗಂಧರ್ವ ಯಕ್ಷರು ಪನ್ನಗ ಕಿನ್ನರರು ಮನುಜದನುಜರು ನಿತ್ಯ ನಿರಂತರವೂ ನನ್ನ ಈ ಭದ್ರೇಶ್ವರ ಲಿಂಗವನ್ನು ಪೂಜಿಸುವರು.

ಮಹಾದೇವನು ಹೀಗೆ ಸ್ನೇಹದಿಂದ ನುಡಿಯಲು ಶೈಲಕುವರಿಯಾದ ಪಾರ್ವತಿಯು ಆನಂದದಿಂದ ಆಕಾಶಕ್ಕೇ ನೆಗೆದಳು. ಹಾಗೇ ಆ ಸಮಾರ್ಗದಿಂದ ತಂದೆಯ ಮನೆಗೆ ನಡೆದಳು.

೫೦. ಶಂಕರೋಽಪಿ ಮಹಾತೇಜಃ ವಿಸೃಜ್ಯ ಗಿರಿಕನ್ಯಕಾಂ ।
ಪೃಥೂದಕಂ ಜಗಾಮಾಥ ಸ್ನಾನಂ ಚಕ್ರೆ ವಿಧಾನತಃ ॥

ಮಹಾತೇಜಸ್ವಿಯಾದ ಶಂಕರನೂ ಕೂಡ ಆ ಗಿರಿಬಾಲೆಯನ್ನು ಬಿಟ್ಟು ಪೃಥೂದಕ ಕ್ಷೇತ್ರಕ್ಕೆ ಹೋದನು. ಅಲ್ಲಿ ವಿಧಿಪೂರ್ವಕವಾಗಿ ಸ್ನಾನ ಮಾಡಿದನು.

ದೇವಶ್ರೇಷ್ಠನಾದ ಮಹೇಶ್ವರನು ಪೃಥೂದಕದಲ್ಲಿ ಮಿಂದು ಕಲ್ಮಷವನ್ನೆಲ್ಲ ಕಳೆದು ಕೊಂಡು ತನ್ನ ವಾಹನವಾದ ಎತ್ತಲಾದ ಎತ್ತನ್ನು ಹತ್ತಿ ಗಣಂಗಳಿಂದ ಸಹಿತದಿಂದ ಮಂದರ ಮಹಾಗಿರಿಗೆ ಬಂದನು.

೫೧. ಯಾತಿ ತ್ರಿಪುರಾಂತಕೇ ಸಹಗಣೈಃ ಪರ್ಯಾಯತಸಪ್ತಭಿಃ ।
ಆರೋಹತ್ಪುಲಕೋ ಬಭೌ ಗಿರಿವರಃ ಸಂಹೃಷ್ಟ ಚಿತ್ತಃ ಕ್ಷಣಾತ್॥
ಚಕ್ರೇದಿವ್ಯಫಲೈರ್ಜನೇನ ಶುಚಿನಾ ಮೂಲೈಶ್ಚ ಕಂದಾದಿಭಿಃ ।
ಪೂಜಾಂ ಸರ್ವಗುಣೇಶ್ವರೈಃ ಸಹ ವಿಭೋರದ್ರಿಸ್ತ್ರೀನೇತ್ರಸ್ಯತು॥

ತ್ರಿಪುರನಾಶಕನಾದ ಪರಮೇಶ್ವರನು ತನ್ನ ಗಣಗಳೊಂದಿಗೆ ತನ್ನಲ್ಲಿಗೆ ಬಂದುದನ್ನು ನೋಡಿ ಮಂದರರಾಜನಿಗೆ ಅತ್ಯಂತ ಆನಂದವಾಯಿತು. ಅದರ ಏಳು ಶಿಖರಗಳೂ ಫಲಪುಷ್ಪಗಳಿಂದ ಪುಲಕಗೊಂಡು ನಿಂತವು. ದಿವ್ಯ ಹಣ್ಣು, ಹಂಪಲು, ಶುಚಿರುಚಿಯಾದ ಗೆಡ್ಡೆ ಗೆಣಸು, ಸವಿಕಟ್ಟಾದ ನೀರುಗಳಿಂದ ಸಪರಿವಾರನಾದ ಆ ಮುಕ್ಕಣ್ಣನನ್ನು ಆನಂದ ತುಂದಿಲನಾದ ಆ ಮಂದರಾಚಲವು ಸಂಭ್ರಮದಿಂದ ಆ ಪ್ರಭುವಿನ ಪ್ರಭಾವಕ್ಕೆ ತಕ್ಕಂತೆ ಪೂಜೆಯನ್ನು ಮಾಡಿದನು.

ವಾಮನ ಮಹಾಪುರಾಣದಲ್ಲಿ ಐವತ್ತೊಂದನೇ ಅಧ್ಯಾಯವು ಮುಗಿದುದು.

—o—

## ಮಹಾದೇವನ ಮದುವೆಯ ಮಾತು

**ಅಧ್ಯಾಯ- ೫೨**

**೫೨. ಸಂಸ್ಮೃತಾಸ್ತೇತು ಋಷಯಃ ಶಂಕರೇಣ ಮಹಾತ್ಮನಾ ।**
**ಸಮಾಜಗ್ಮುರ್ಮಹಾಶೈಲಂ ಮಂದರಂ ಚಾರುಕಂದರಮ್ ॥**

**ಪುಲಸ್ತ್ಯ** : ಅನಂತರ ಮಂದರಬೆಟ್ಟವು ಮಾಡಿದ ಆದರಪೂರ್ವಕವಾದ ಅರ್ಚನೆಯಿಂದ ಪರಮೇಶ್ವರನಿಗೆ ಬಹಳ ಪ್ರೀತಿಯಾಯಿತು. ಆಗ ಅವನು ಅರುಂಧತೀಸಹಿತರಾದ ಸಪ್ತ ಋಷಿಗಳ ಸ್ಮರಣವನ್ನು ಮಾಡಿದನು. ಮಹಾದೇವನು ನೆನೆಯುವದೊಂದೇ ತಡ. ಕೂಡಲೇ ಆ ಮಹರ್ಷಿಗಳು ಅನೇಕ ಕಂದರಗಳಿಂದ ಸುಂದರವಾದ ಮಂದರ ಪರ್ವತಕ್ಕೆ ಬಂದರು. ಅವರ ಶುಭಾಗಮನವನ್ನು ಕಂಡು ತ್ರಿಪುರಾರಿಯು ಎದ್ದು ನಿಂತು ಸ್ವಾಗತ ಮಾಡಿದನು. ಆದರದಿಂದ ಪೂಜಿಸಿದನು. ಅನಂತರ ಮಾತನಾಡಿದನು.

**೫೩. ಧನ್ಯೋಽಯಂ ಪರ್ವತಃ ಶ್ರೇಷ್ಠಃ ಶ್ಲಾಘ್ಯಃ ಪೂಜ್ಯಶ್ಚದೈವತೈಃ।**
**ಧೂತಪಾಪಸ್ತಥಾ ಜಾತೋ ಭವತಾಂ ಪಾದ ಪಂಕಜೈಃ ॥**

''ಮಹಾಮುನಿಗಳೇ, ತಮ್ಮ ಅಡಿದಾವರೆಗಳ ಸೋಕಿನಿಂದ ಈ ಗಿರಿರಾಜ ಮಂದರನು ಧನ್ಯನಾಗಿದ್ದಾನೆ. ದೇವತೆಗಳೂ ಇಂದು ಇವನನ್ನು ಪೂಜಿಸಿ ಶ್ಲಾಘಿಸುವಂತಾಗಿದೆ. ಇವನ ಪಾಪಗಳೆಲ್ಲವೂ ನಿಮ್ಮ ಪಾದಸ್ಪರ್ಶದಿಂದ ತೊಳೆದುಹೋಗಿವೆ. ಈ ಬೆಟ್ಟದ ಮೇಲಿರುವ ರಮಣೀಯವಾದ ಈ ತಪ್ಪಲು ಪ್ರದೇಶದಲ್ಲಿ ಹೊಂದಾವರೆಯಂತೆ ಸುಂದರವಾದ ಹಾಸುಗಲ್ಲುಗಳನ್ನು ಹಾಸಿದೆ. ನುಣುಪಾದ ಮತ್ತು ಮಿದುವಾದ ಈ ಶಿಲಾಸನಗಳ ಮೇಲೆ ಕುಳಿತುಕೊಳ್ಳಿರಿ.''

**ಪುಲಸ್ತ್ಯ** : ಶಂಕರದೇವನ ಈ ಸವಿನುಡಿಗಳನ್ನು ಕೇಳಿ ಮಹರ್ಷಿಗಳು ಅರುಂಧತೀದೇವಿಯೊಂದಿಗೆ ಬಂದು ಹರನು ತೋರಿದ ಪಾಷಾಣಪೀಠಗಳ ಮೇಲೆ ಕುಳಿತು ಕೊಂಡರು. ಕೂಡಲೇ ದೇವಗಣದ ಮುಂದಾಳೂ ನಂದೀಶ್ವರನು ಬಂದು ಶಿಲಾಸನಗಳ ಮೇಲೆ ಆಸೀನರಾದ ಋಷಿಗಳನ್ನು ಭಕ್ತಿಪೂರ್ವಕವಾಗಿ ಅರ್ಘ್ಯಪಾದ್ಯಾದಿಗಳಿಂದ ಪೂಜಿಸಿದನು.

**೫೪. ತತೋಽಬ್ರವೀತ್ಸುರಪತಿರ್ಧರ್ಮ್ಯಂ ವಾಕ್ಯಂ ಹಿತಂ ಸುರಾನ್ ।**
**ಆತ್ಮನೋ ಯಶಸೋ ವೃದ್ಧ್ಯೈ ಸಪ್ತರ್ಷಿನ್ ವಿನಯಾನ್ವಿತಾನ್ ॥**

ಅನಂತರ ದೇವತೆಗಳ ಒಡೆಯನಾದ ಶಂಭುವು ಸುರ ಸಂದೋಹಕ್ಕೆಲ್ಲ ಆನಂದದಾಯಕವಾದ ಹಾಗೂ ತನಗೂ ಯಶಸ್ಕರವಾದ ಧರ್ಮಾನು ರೂಪ ವಚನವನ್ನು ವಿನಯದಿಂದ ಒಡಗೂಡಿದ ಸಪ್ತರ್ಷಿಗಳನ್ನು ಕುರಿತು ನುಡಿದನು.

**೫೫. ಕಶ್ಯಪಾತ್ರೇ ವಾರುಣೇಯ ಗಾಧೇಯ ಶೃಣು ಗೌತಮ ।**
**ಭರದ್ವಾಜ ಶೃಣುಷ್ವ ತ್ವಂ ಅಂಗಿರಸ್ತ್ವಂ ಶೃಣುಷ್ವ ಚ**

''ಎಲೈ, ಕಶ್ಯಪನೇ, ಅತ್ರಿಮುನಿಯೇ, ವಶಿಷ್ಠ ಋಷಿಯೇ ಹಾಗೂ ವಿಶ್ವಾಮಿತ್ರ, ಗೌತಮ, ಭರದ್ವಾಜ, ಅಂಗಿರಸ ಮುಂತಾದ ಮಹರ್ಷಿಗಳೇ, ನನ್ನ ಮಾತನ್ನು ಕೇಳಿರಿ.

**೫೬. ಮಮಾಸೀದ್ದಕ್ಷತನಯಾ ಪ್ರಿಯಾ ಸಾ ದಕ್ಷಕೋಪತಃ ।**
**ಉತ್ಸಸರ್ಜ ಸತೀ ಪ್ರಾಣಾನ್ ಯೋಗಂ ದೃಷ್ಟ್ವಾ ಪುರಾ ಕಿಲ॥**

ನಾನು ಹಿಂದೆ ದಕ್ಷನ ಮಗಳಾದ ದಾಕ್ಷಾಯಣಿಯನ್ನು ಮದುವೆಯಾಗಿದ್ದೆ. ಅವಳು ನನ್ನ ಪ್ರೇಯಸಿಯೂ ಅಹುದು. ಅವಳು ದಕ್ಷನ ಮೇಲಿನ ಕೋಪದಿಂದ ತನ್ನ ಪಂಚಪ್ರಾಣಗಳನ್ನೂ ಯೋಗಶಕ್ತಿಯಿಂದ ತ್ಯಾಗ ಮಾಡಿದ್ದು ನಿಮಗೆಲ್ಲ ತಿಳಿದಿದೆಯಷ್ಟೇ!

**೫೭. ಸಾದ್ಯ ಭೂಯಃ ಸಮುದ್ಭೂತಾ ಶೈಲರಾಜ ಸುತಾ ಉಮಾ ।**
**ತಾಂ ಮದರ್ಥಾಯ ಶೈಲೇಂದ್ರೋ ಯಾಚ್ಯತಾಂ ದ್ವಿಜಸತ್ತಮಾಃ॥**

ಅದೇ ದಾಕ್ಷಾಯಣಿಯು ಈಗ ಉಮಾ ಎಂಬ ಹೆಸರಿನಿಂದ ಪರ್ವತೇಶ್ವರ ಹಿಮಾಲಯದ ಪುತ್ರಿಯಾಗಿ ಮತ್ತೆ ಹುಟ್ಟಿ ಬಂದಿದ್ದಾಳೆ. ಬ್ರಾಹ್ಮಣ ಶ್ರೇಷ್ಠರಾದ ನೀವು ಹಿಮಗಿರಿಯ ಬಳಿಗೆ ಹೋಗಿ ನನಗಾಗಿ ಆ ಪಾರ್ವತಿಯನ್ನು ಯಾಚಿಸಿರಿ.

**೫೮. ಸಪ್ತರ್ಷಯಶ್ಚೈವ ಮುಕ್ತಾಃ ಬಾಢಮಿತ್ಯಬ್ರುವನ್ ವಚಃ ।**
**ಓಂ ನಮಃ ಶಂಕರಾಯೇತಿ ಪ್ರೋಕ್ತ್ವಾ ಜಗ್ಮುರ್ಹಿಮಾಲಯಮ್ ॥**

**ಪುಲಸ್ತ್ಯ** : ಚಂದ್ರಚೂಡನ ಈ ವಚನವನ್ನು ಕೇಳಿ ಋಷಿಗಳಿಗೆ ಹಿಗ್ಗಾಗಿ ''ಹಾಗೇ ಆಗಲಿ'' ಎಂದು ನುಡಿದರು. ''ಓಂ ನಮಃ ಶಂಕರಾಯ'' ಎಂದು ಗರ್ಜನೆ ಮಾಡುತ್ತ ಆ ಬ್ರಹ್ಮರ್ಷಿಗಳು ಹಿಮಾಲಯ ಪರ್ವತಕ್ಕೆ ನಡೆದರು.'' ಅಲ್ಲಿಯೇ ಸಿಂಹಾಸನದ ಮೇಲೆ ಕುಳಿತ ಅರುಂಧತೀದೇವಿಗೆ ಶಿವನು ನುಡಿದನು.

**೫೯. ತತೋಽಸ್ಯರುಂಧತೀಂ ಶರ್ವಃ ಪ್ರಾಹ ಗಚ್ಛಸ್ವ ಸುಂದರಿ ।**
**ಪುರಂಧ್ರ್ಯೋಹಿ ಪುರಂಧ್ರೀಣಾಂ ಗತಿ ಧರ್ಮಸ್ಯ ವೈ ವಿದುಃ ॥**

''ಮುನಿ ಮಾನಿನಿಯೇ, ನೀನೂ ಹಿಮವಂತನ ಮನೆಗೆ ಹೊರಡು. ಸೂಕ್ಷ್ಮವಾದ ಹೆಣ್ಣಿನ ಮನಸ್ಸಿನ ಒಲವನ್ನು ಮತ್ತೂ ಧರ್ಮ ಪ್ರವೃತ್ತಿಯನ್ನು ತಿಳಿಯಬೇಕಾದರೆ ಧರ್ಮಜ್ಞಳಾದ ಹೆಂಗಸೇ ಬೇಕು'' ಎಂದು ಹಿರಿಯರು ಹೇಳುವರು.

**೬೦. ಇತ್ಯೇವ ಮುಕ್ತಾ ದುರ್ಲಂಘ್ಯ ಲೋಕಾಚಾರಾ ಹ್ಯರುಂದತೀ।**
**'ನಮಸ್ತೇ ರುದ್ರ' ಇತ್ಯುಕ್ತ್ವಾ ಜಗಾಮ ಪತಿನಾ ಸಹ ॥**

ಮಹಾದೇವರ ಈ ಮಾತನ್ನು ಮನ್ನಿಸಿ ಆ ಋಷಿರಮಣೀಯು ಕೂಡಲೇ ಹೊರಟು ನಿಂತಳು. ಅನೂಚಾನವಾದ ಅವಶ್ಯಕ ಲೋಕಾಚಾರವನ್ನು ಆ ಅರುಂಧತೀ ದೇವಿಯು ಚೆನ್ನಾಗಿ ಅರಿತಳಲ್ಲವೇ! ಅದಕ್ಕಾಗಿ ಅವಳು ಕೂಡಲೇ ''ನಮಸ್ತೇ ರುದ್ರ'' ಎಂದು ನುಡಿದು ಆ ಪಶುಪತಿಗೆ ಪ್ರಣಾಮಗೈದು ತನ್ನ ಪತಿ ವಶಿಷ್ಠರನ್ನು ಹಿಂಬಾಲಿಸಿದಳು.

**೬೧. ತತಸ್ಸಂಪೂಜ್ಯಮಾನಾಸ್ತೇ ಶೈಲಯೋಷಿದ್ಭಿರಾದರಾತ್ ।**
**ಸುನಾಭಾದಿಭಿರವ್ಯಗ್ರೈಃ ಪೂಜ್ಯಮಾನಾಶ್ಚ ಪಾರ್ವತೈಃ ॥**

ಅರುಂಧತೀ ಸಹಿತರಾದ ಆ ಏಳು ಜನ ಋಷಿಗಳು ಹಿಮಾಚಲದ ಶಿಖರ ಸೀಮೆಗೆ ಹೋದರು. ಅಲ್ಲಿ ಇಂದ್ರನ ಅಮರಾವತಿಯಂತೆ ಎಸೆಯುವ ಔಷಧಿಪ್ರಸ್ಥ ಎಂಬ ಪರ್ವತೇಶ್ವರನ ರಾಜಧಾನಿಯನ್ನು ನೋಡಿದರು. ಶೈಲಶಿಖರದಲ್ಲಿರುವ ಆ ಗಿರಿಪುರಿಯ ಹೆಬ್ಬಾಗಿಲಲ್ಲಿಯೇ ಅನೇಕ ವನಸುಂದರಿಯರು ಅವರನ್ನು ಆದರದಿಂದ ಪೂಜಿಸಿದರು.

ಸುನಾಭ ಮೊದಲಾದವರು ಬಂದು ಮುನಿವೃಂದವನ್ನು ವಂದಿಸಿ ಒಳಗೆ ಕರೆದು ಕೊಂಡು ನಡೆದರು. ಆ ನಗೋತ್ತಮನ ನಗರಿಯಲ್ಲಿ ಇರುವ ಗಂಧರ್ವ, ಕಿನ್ನರ, ಯಕ್ಷ, ಮುಂತಾದ ಎಲ್ಲ ನಾಗರೀಕರೂ ಪಾರ್ವತಿಯ ಭಕ್ತರೇ ಆಗಿದ್ದರು. ಅವರೆಲ್ಲರೂ ಈ ಮಹಾ ಮಹರ್ಷಿಗಳನ್ನು ಅತ್ಯಾದರದಿಂದ ಹಿಮರಾಜನ ರಮ್ಯವಾದ ಹೊನ್ನಿನ ಅರಮನೆಗೆ ಕರೆತಂದರು. ಅರಮನೆಯ ತಲೆಬಾಗಿಲಲ್ಲಿ ಸುಂದರಗಿರಿಯಾದ ಗಂಧಮಾದನನು ನಿಂತುಕೊಂಡಿದ್ದನು. ತಪಸ್ಸಿನ ಪ್ರಭಾವದಿಂದ ಪಾಪಗಳನ್ನೆಲ್ಲ ತೊಳೆಯುವ ಆ ಮಹಾತ್ಮರು ಆ ದ್ವಾರಪಾಲಕನ ಬಳಿಗೆ ಬಂದು ಹೇಳಿದರು.

೬೨. ತತಃಸರ್ವೇ ಮಹಾತ್ಮಾನಃ ತಪಸಾ ಧೌತಕಲ್ಮಷಾಃ ।
ದ್ವಾರ ಸಂಸ್ಥ ಗಿರಿಂ ಪ್ರಾಹುಃ ಗತ್ವಾ ಶೈಲಪತಿಂಶುಭಮ್ ।
ನಿವೇದಯಾಸ್ಮಾನ್ ಸಂಪ್ರಾಪ್ತಾನ್
ಮಹತ್ಕಾರ್ಯಾರ್ಥಿನೋವಯಮ್ ।

"ಶೈಲರಾಜನಿಗೆ ನಾವು ಬಂದದ್ದನ್ನು ತಿಳಿಸು. ದೊಡ್ಡ ಕಾರ್ಯಕ್ಕಾಗಿ ಬಂದಿದ್ದೇವೆ ಎಂದು ಹೇಳು."

೬೩. ನಿಪಣ್ಣೋ ಭುವಿ ಜಾನುಭ್ಯಾಂ ದತ್ವಾ ಹಸ್ತೌ ಮುಖೇ ಗಿರಿಃ ।
ದಂಡಂ ನಿಕ್ಷಿಪ್ಯ ಕಕ್ಷಾಯಾಮಿದಂ ವಚನಮಬ್ರವೀತ್ ॥

ಮುನಿ ಮಹರ್ಷಿಗಳ ಈ ಮಾತನ್ನು ಕೇಳಿ ಕೈಯಲ್ಲಿ ಪದ್ಮರಾಗ ಮಣಿಮಯವಾದ ಬಡಿಗೆಯನ್ನು ಬಗಲಲ್ಲಿ ಹಿಡಿದು ಗಂಧಮಾದನನು ಶೈಲರಾಜ ಹಿಮಾಲಯನು ಇರುವ ಸ್ಥಾನಕ್ಕೆ ಹೋದನು. ಒಳಗೆ ಪೀಠದಲ್ಲಿ ಮಂಡಿಸಿದ ಗಿರಿಸಾರ್ವಭೌಮನ ಎದುರು ಈ ಗಂಧಮಾದನ ಗಿರಿಯು ಮಂಡೆ ಮಡಿಚಿ ನಮಸ್ಕರಿಸಿ, ರನ್ನದ ಬಡಿಗೆಯನ್ನು ಬಗಲಲ್ಲಿ ಹಿಡಿದು ವಿನಯದಿಂದ ಬಾಗಿ ಮಾತನಾಡಿದನು. ಮಾತನಾಡುವಾಗ ತನ್ನ ಉಸಿರು ಅದ್ರಿರಾಜನಿಗೆ ಬಡಿಯಬಾರದು ಎಂದು ತನ್ನ ಮುಖದ ಮುಂದೆ ತನ್ನ ಕೈ ಹಿಡಿದು ಮೆಲ್ಲನೆ ಹೇಳಿದನು. "ಗಿರಿರಾಜರೇ, ತಮ್ಮ ಅರಮನೆಯ ಅಂಗಳದಲ್ಲಿ ಋಷಿಗಳು ಬಂದಿದ್ದಾರೆ. ತಮ್ಮಲ್ಲಿ ಅವರಿಗೆ ಬಹು ಮುಖ್ಯವಾದ ಕಾರ್ಯವಿದೆಯಂತೆ. ತಮ್ಮನ್ನು ಕಾಣಲು ಕಾತುರರಾಗಿ ಬಾಗಿಲ ಬಳಿ ಕಾಯುತ್ತಿದ್ದಾರೆ."

೬೪. ಧ್ವಾಸ್ಥವಾಕ್ಯಂ ಸಮಾಕರ್ಣ್ಯ ಸಮುತ್ಥಾಯಾಚಲೇಶ್ವರಃ ।
ಸ್ವಯಮಭಾಗ್ಯಗಮದ್ವಾರಿ ಸಮಾದಾಯಾರ್ಘ್ಯಮುತ್ತಮಮ್ ॥

**ಪುಲಸ್ತ್ಯ:** ದ್ವಾರಪಾಲಕ ಧರಣೀಧರನಾದ ಗಂಧಮಾದನನ ಈ ಮಾತನ್ನು ಕೇಳಿ ಬೆಟ್ಟಗಳ ಒಡೆಯನಾದ ಹಿಮವಂತನು ತಕ್ಷಣದಲ್ಲಿ ಎದ್ದು ನಿಂತನು. ಅರ್ಘ್ಯಪಾದ್ಯಾದಿಗಳನ್ನು ತೆಗೆದುಕೊಂಡು ತಾನಾಗಿಯೇ ಬಾಗಿಲ ಬಳಿ ಧಾವಿಸಿದನು. ಅಲ್ಲಿಯೇ ಅವರೆಲ್ಲರನ್ನು ಅವುಗಳಿಂದ ಪೂಜಿಸಿ ಸಭಾಮಂಟಪಕ್ಕೆ ಕರೆತಂದನು. ಎತ್ತರದ ಆಸನದ ಮೇಲೆ ಅತ್ಯಾದರಗಳಿಂದ ಕುಳ್ಳಿರಿಸಿದನು. ಮಾತಿನ ಮರ್ಮವನ್ನು ಅರಿತ ಆ ಶೈಲೇಶನು ಮಾತನಾಡಿದನು.

೬೫. ಅನಭ್ರವೃಷ್ಟಿಃ ಕಿಮಿಯಮುತಾಹೋಽ ಕುಸುಮಂ ಫಲಮ್ ।
ಅಪ್ರತರ್ಕ್ಯಮಚಿಂತ್ಯಂ ಚ ಭವದಾಗಮನಂ ತ್ವಿದಮ್ ।

**ಹಿಮಾಲಯ :** ಸ್ವಾಮಿ, ಇದೇನು ನನ್ನ ಭಾಗ್ಯ! ಇದೊಂದು ಮೋಡವಿಲ್ಲದೇ ಮಳೆ ಬಂದಂತೆ ಆಯಿತು. ಒಮ್ಮೆಲೇ ಅಕಸ್ಮಿಕವಾಗಿ ತಾವು ಇಲ್ಲಿ ದಯಮಾಡಿಸಿದ್ದು ಹೂ ಬಿಡದೇ ಒಮ್ಮೆಲೇ ಹಣ್ಣೇ ಕೈಗೆ ಬಂದಂತಾಗಿದೆ. ನನ್ನ ಪಾಲಿಗೆ ತಮ್ಮ ಈ ಶುಭಾಗಮನ. ಹೀಗೆ ತಾವು ಅನಿರೀಕ್ಷಿತವಾಗಿ ದಯೆದೋರಿ ಇತ್ತ ಬಿಜಯ ಮಾಡಿ ಸುವಿರೆಂದು ನಾನು ಎಣಿಸಿರಲಿಲ್ಲ. (೬೫)

**೬೬. ಅದ್ಯ ಪ್ರಭೃತಿ ಧನ್ಯೋಽಸ್ಮಿ ಶೈಲರಾಜೋಽಸ್ಮಿ ಸತ್ತಮಾಃ ।**
**ಸಮಶುದ್ಧದೇಹೋಽಸ್ಮ್ಯದ್ಯೈವ ಯದ್ಭವಂತೋ ಮಮಾಜಿರಮ್॥**

ನಿಜವಾಗಿಯೂ ಇಂದು ನಾನು ಧನ್ಯನಾದೆ. ಇಂದಿನಿಂದ ನಾನು ನಿಜವಾಗಿಯೂ ಗುಡ್ಡಗಳಿಗೆಲ್ಲ ಮಹಾರಾಜ ಎನಿಸಿಕೊಂಡು ನಿಜವಾದ ಧನ್ಯತೆಯನ್ನು ಪಡೆದಿದ್ದೇನೆ. ನನ್ನ ಕಾಯವು ಪವಿತ್ರವಾಯಿತು.

**೬೭. ಅಸತ್ಸಂಸರ್ಗ ಸಂಶುದ್ಧಂ ಕೃತವಂತೋ ದ್ವಿಜೋತ್ತಮಾಃ ।**
**ದೃಷ್ಟಿಪೂತಂ ಪದಾಕ್ರಾಂತಂ ತೀರ್ಥಂ ಸಾರಸ್ವತಂ ಯಥಾ ॥**

ಇಂದು ತಾವು ನನ್ನ ಮನೆಯ ಅಂಗಳದ ನೆಲವನ್ನು ತುಳಿದಿದ್ದರಿಂದ ನನ್ನ ಗೇಹವೂ ದೇಹದೊಡನೆ ಪರಿಶುದ್ಧವಾಯಿತು. ಜೀವನವೂ ಪಾವನವಾಯಿತು. ಅಸತ್ ಪದಾರ್ಥಗಳ ಸಂಸರ್ಗದಿಂದ ನಮ್ಮ ಬೆಟ್ಟಗಳ ಬಾಳಿನಲ್ಲಿ ಬಂದ ಅಶುದ್ಧಿಯನ್ನೆಲ್ಲ ತಮ್ಮ ಈ ಆಗಮನವು ತೊಡೆದು ಹಾಕಿದೆ. ತಮ್ಮಂಥವರ ದೃಷ್ಟಿ ಬಿದ್ದದ್ದೆಲ್ಲ ಕ್ಷೇತ್ರ. ಕಾಲನ್ನಿರಿಸಿದ್ದೆಲ್ಲ ತೀರ್ಥ. ಮಾತನಾಡಿದರಂತೂ ಸರಸ್ವತಿಯೇ ಅವತರಿಸಿದಂತೆ.

**೬೮. ಸದಾರೋಽಹಂ ಸಮಂ ಪುತ್ರೈಭೃತ್ಯೈರ್ನ ಪ್ರಭುರವ್ಯಯಃ**
**ಕಿಂಕರೋಽಸ್ಮಿಸ್ಥಿತೊ ಯುಷ್ಮದಾಜ್ಞಾಕಾರೀ ತದುಚ್ಯತಾಮ್ ।**

ನಾನು ಹಿಂದೆ ಮಾಡಿದ ಪುಣ್ಯ ಫಲ ಇಂದು ಒದಗಿ ಬಂದಿದೆ. ಅಂತೆಯೇ ತಮ್ಮಂಥ ಮಹಾಪುರುಷರು ಕಾರ್ಯಾರ್ಥಿಗಳಾಗಿ ನನ್ನ ಮನೆಯವರೆಗೆ ದಯ ಮಾಡಿದ್ದೀರಿ. ಬ್ರಾಹ್ಮಣರೇ ನಾನು ನಿಮ್ಮ ದಾಸ. ನನ್ನ ಬಳಿಗೆ ತಮ್ಮ ಕಾರ್ಯವು ಯಾವದು ಅಪ್ಪಣೆ ಕೊಡಿಸಬೇಕು. ನಾನು ನನ್ನ ಮಡದಿ ಮಕ್ಕಳು ಭೃತ್ಯ ಪರಿವಾರದವರು ಎಲ್ಲರೂ ತಮ್ಮ ಕೈಂಕರ್ಯಕ್ಕಾಗಿ ಕೈಕಟ್ಟಿಕೊಂಡು ನಿಂತಿದ್ದೇವೆ. ನಿಮ್ಮ ಆಜ್ಞೆಗಾಗಿ ಕಾಯುತ್ತಿದ್ದೇವೆ. ಯಾವ ಸಂಕೋಚವೂ ಇಲ್ಲದೇ ಅಪ್ಪಣೆಯನ್ನು ನೀಡಬೇಕು.

**ಪುಲಸ್ತ್ಯ :** ಶೈಲರಾಜನಾದ ಹಿಮಗಿರಿಯ ಮಾತನ್ನು ಕೇಳಿ ಶುದ್ಧಾತ್ಮರಾದ ಋಷಿಗಳು ವೃದ್ಧರಾದ ಅಂಗಿರಸ ಮುನಿಗೆ ತಾವು ಬಂದ ಕಾರ್ಯವನ್ನು ಗಿರಿರಾಜನಲ್ಲಿ ನಿವೇದಿಸಲು ತಿಳಿಸಿದರು. ಕಶ್ಯಪಾದಿ ಋಷಿಗಳ ಪ್ರೇರಣೆಗನುಸಾರವಾಗಿ ಅಂಗಿರಸ ಋಷಿಗಳು ಅದ್ರಿಗಳ ಅರಸನನ್ನು ಕುರಿತು ಇಂತು ಮಾತಾಡಿದರು.

**ಅಂಗಿರಸ :** ಶೈಲಸಾರ್ವಭೌಮನೇ, ಅರುಂಧತೀದೇವಿಯೊಂದಿಗೆ ನಾವೆಲ್ಲರೂ ನಿನ್ನ ಮನೆಗೆ ಬಂದ ಉದ್ದೇಶವನ್ನು ತಿಳಿಸುತ್ತೇನೆ ಕೇಳು-

**೬೯. ಯೋಽಸೌ ಮಹಾತ್ಮಾ ಸರ್ವಾತ್ಮಾ ದಕ್ಷಯಜ್ಞ ಕ್ಷಯಂಕರಃ ।**
**ಶಂಕರಃ ಶೂಲಭೃತ್ ಶರ್ವಃ ತ್ರಿಣೇತ್ರೋ ವೃಷವಾಹನಃ ॥**

ಸುನಾಭ ಮೊದಲಾದವರು ಬಂದು ಮುನಿವೃಂದವನ್ನು ವಂದಿಸಿ ಒಳಗೆ ಕರೆದು ಕೊಂಡು ನಡೆದರು. ಆ ನಗೋತ್ತಮನ ನಗರಿಯಲ್ಲಿ ಇರುವ ಗಂಧರ್ವ, ಕಿನ್ನರ, ಯಕ್ಷ, ಮುಂತಾದ ಎಲ್ಲ ನಾಗರೀಕರೂ ಪಾರ್ವತಿಯ ಭಕ್ತರೇ ಆಗಿದ್ದರು. ಅವರೆಲ್ಲರೂ ಈ ಮಹಾ ಮಹರ್ಷಿಗಳನ್ನು ಅತ್ಯಾದರದಿಂದ ಹಿಮರಾಜನ ರಮ್ಯವಾದ ಹೊನ್ನಿನ ಅರಮನೆಗೆ ಕರೆತಂದರು. ಅರಮನೆಯ ತಲೆಬಾಗಿಲಲ್ಲಿ ಸುಂದರಗಿರಿಯಾದ ಗಂಧಮಾದನನು ನಿಂತುಕೊಂಡಿದ್ದನು. ತಪಸ್ಸಿನ ಪ್ರಭಾವದಿಂದ ಪಾಪಗಳನ್ನೆಲ್ಲ ತೊಳೆಯುವ ಆ ಮಹಾತ್ಮರು ಆ ದ್ವಾರಪಾಲಕನ ಬಳಿಗೆ ಬಂದು ಹೇಳಿದರು.

೬೨. ತತಃಸರ್ವೇ ಮಹಾತ್ಮಾನಃ ತಪಸಾ ಧೌತಕಲ್ಮಷಾಃ ।
ದ್ವಾರ ಸಂಸ್ಥ ಗಿರಿಂ ಪ್ರಾಹುಃ ಗತ್ವಾ ಶೈಲಪತಿಂಶುಭಮ್ ।
ನಿವೇದಯಾಸ್ಮಾನ್ ಸಂಪ್ರಾಪ್ತಾನ್
ಮಹತ್ಕಾರ್ಯಾರ್ಥಿನೋವಯಮ್ ।

"ಶೈಲರಾಜನಿಗೆ ನಾವು ಬಂದದ್ದನ್ನು ತಿಳಿಸು. ದೊಡ್ಡ ಕಾರ್ಯಕ್ಕಾಗಿ ಬಂದಿದ್ದೇವೆ ಎಂದು ಹೇಳು."

೬೩. ನಿಷಣ್ಣೋ ಭುವಿ ಜಾನುಭ್ಯಾಂ ದತ್ವಾ ಹಸ್ತೌ ಮುಖೇ ಗಿರಿಃ ।
ದಂಡಂ ನಿಕ್ಷಿಪ್ಯ ಕಕ್ಷಾಯಾಮಿದಂ ವಚನಮಬ್ರವೀತ್ ॥

ಮುನಿ ಮಹರ್ಷಿಗಳ ಈ ಮಾತನ್ನು ಕೇಳಿ ಕೈಯಲ್ಲಿ ಪದ್ಮರಾಗ ಮಣಿಮಯವಾದ ಬಡಿಗೆಯನ್ನು ಬಗಲಲ್ಲಿ ಹಿಡಿದು ಗಂಧಮಾದನನು ಶೈಲರಾಜ ಹಿಮಾಲಯನು ಇರುವ ಸ್ಥಾನಕ್ಕೆ ಹೋದನು. ಒಳಗೆ ಪೀಠದಲ್ಲಿ ಮಂಡಿಸಿದ ಗಿರಿಸಾರ್ವಭೌಮನ ಎದುರು ಈ ಗಂಧಮಾದನ ಗಿರಿಯು ಮಂಡೆ ಮಡಿಚಿ ನಮಸ್ಕರಿಸಿ, ರನ್ನದ ಬಡಿಗೆಯನ್ನು ಬಗಲಲ್ಲಿ ಹಿಡಿದು ವಿನಯದಿಂದ ಬಾಗಿ ಮಾತನಾಡಿದನು. ಮಾತನಾಡುವಾಗ ತನ್ನ ಉಸಿರು ಅದ್ರಿರಾಜನಿಗೆ ಬಡಿಯಬಾರದು ಎಂದು ತನ್ನ ಮುಖದ ಮುಂದೆ ತನ್ನ ಕೈ ಹಿಡಿದು ಮೆಲ್ಲನೆ ಹೇಳಿದನು. "ಗಿರಿರಾಜರೇ, ತಮ್ಮ ಅರಮನೆಯ ಅಂಗಳದಲ್ಲಿ ಋಷಿಗಳು ಬಂದಿದ್ದಾರೆ. ತಮ್ಮಲ್ಲಿ ಅವರಿಗೆ ಬಹು ಮುಖ್ಯವಾದ ಕಾರ್ಯವಿದೆಯಂತೆ. ತಮ್ಮನ್ನು ಕಾಣಲು ಕಾತುರರಾಗಿ ಬಾಗಿಲ ಬಳಿ ಕಾಯುತ್ತಿದ್ದಾರೆ."

೬೪. ಧ್ವಾಸ್ಥವಾಕ್ಯಂ ಸಮಾಕರ್ಣ್ಯ ಸಮುತ್ಥಾಯಾಚಲೇಶ್ವರಃ ।
ಸ್ವಯಮಭಾಗ್ಯಗಮದ್ವಾರಿ ಸಮಾದಾಯಾರ್ಘ್ಯಮುತ್ತಮಮ್ ॥

**ಪುಲಸ್ತ್ಯ**: ದ್ವಾರಪಾಲಕ ಧರಣೀಧರನಾದ ಗಂಧಮಾದನನ ಈ ಮಾತನ್ನು ಕೇಳಿ ಬೆಟ್ಟಗಳ ಒಡೆಯನಾದ ಹಿಮವಂತನು ತಕ್ಷಣದಲ್ಲಿ ಎದ್ದು ನಿಂತನು. ಅರ್ಘ್ಯಪಾದ್ಯಾದಿಗಳನ್ನು ತೆಗೆದುಕೊಂಡು ತಾನಾಗಿಯೇ ಬಾಗಿಲ ಬಳಿ ಧಾವಿಸಿದನು. ಅಲ್ಲಿಯೇ ಅವರೆಲ್ಲರನ್ನು ಅವುಗಳಿಂದ ಪೂಜಿಸಿ ಸಭಾಮಂಟಪಕ್ಕೆ ಕರೆತಂದನು. ಎತ್ತರದ ಆಸನದ ಮೇಲೆ ಅತ್ಯಾದರ ಗಳಿಂದ ಕುಳ್ಳಿರಿಸಿದನು. ಮಾತಿನ ಮರ್ಮವನ್ನು ಅರಿತ ಆ ಶೈಲೇಶನು ಮಾತನಾಡಿದನು.

೬೫. ಅನಭ್ರವೃಷ್ಟಿಃ ಕಿಮಿಯಮುತಾಹೋಽ ಕುಸುಮಂ ಫಲಮ್ ।
ಅಪ್ರತರ್ಕ್ಯಮಚಿಂತ್ಯಂ ಚ ಭವದಾಗಮನಂ ತ್ವಿದಮ್ ।

**ಹಿಮಾಲಯ :** ಸ್ವಾಮಿ, ಇದೇನು ನನ್ನ ಭಾಗ್ಯ! ಇದೊಂದು ಮೋಡವಿಲ್ಲದೇ ಮಳೆ ಬಂದಂತೆ ಆಯಿತು. ಒಮ್ಮೆಲೇ ಅಕಸ್ಮಿಕವಾಗಿ ತಾವು ಇಲ್ಲಿ ದಯಮಾಡಿಸಿದ್ದು ಹೂ ಬಿಡದೇ ಒಮ್ಮೆಲೇ ಹಣ್ಣೇ ಕೈಗೆ ಬಂದಂತಾಗಿದೆ. ನನ್ನ ಪಾಲಿಗೆ ತಮ್ಮ ಈ ಶುಭಾಗಮನ. ಹೀಗೆ ತಾವು ಅನಿರೀಕ್ಷಿತವಾಗಿ ದಯೆದೋರಿ ಇತ್ತ ಬಿಜಯ ಮಾಡಿ ಸುವಿರೆಂದು ನಾನು ಎಣಿಸಿರಲಿಲ್ಲ. (೬೫)

೬೬. ಅದ್ಯ ಪ್ರಭೃತಿ ಧನ್ಯೋಽಸ್ಮಿ ಶೈಲರಾಜೋಽಸ್ಮಿ ಸತ್ತಮಾಃ ।
ಸಮಶುದ್ಧದೇಹೋಽಸ್ಮ್ಯದ್ಯೈವ ಯದ್ಭವಂತೋ ಮಮಾಜಿರಮ್॥

ನಿಜವಾಗಿಯೂ ಇಂದು ನಾನು ಧನ್ಯನಾದೆ. ಇಂದಿನಿಂದ ನಾನು ನಿಜವಾಗಿಯೂ ಗುಡ್ಡಗಳಿಗೆಲ್ಲ ಮಹಾರಾಜ ಎನಿಸಿಕೊಂಡು ನಿಜವಾದ ಧನ್ಯತೆಯನ್ನು ಪಡೆದಿದ್ದೇನೆ. ನನ್ನ ಕಾಯವು ಪವಿತ್ರವಾಯಿತು.

೬೭. ಅಸತ್ಸಂಸರ್ಗ ಸಂಶುದ್ಧಂ ಕೃತವಂತೋ ದ್ವಿಜೋತ್ತಮಾಃ ।
ದೃಷ್ಟಿಪೂತಂ ಪದಾಕ್ರಾಂತಂ ತೀರ್ಥಂ ಸಾರಸ್ವತಂ ಯಥಾ ॥

ಇಂದು ತಾವು ನನ್ನ ಮನೆಯ ಅಂಗಳದ ನೆಲವನ್ನು ತುಳಿದಿದ್ದರಿಂದ ನನ್ನ ಗೇಹವೂ ದೇಹದೊಡನೆ ಪರಿಶುದ್ಧವಾಯಿತು. ಜೀವನವೂ ಪಾವನವಾಯಿತು. ಅಸತ್ ಪದಾರ್ಥಗಳ ಸಂಸರ್ಗದಿಂದ ನಮ್ಮ ಬೆಟ್ಟಗಳ ಬಾಳಿನಲ್ಲಿ ಬಂದ ಅಶುದ್ಧಿಯನ್ನೆಲ್ಲ ತಮ್ಮ ಈ ಆಗಮನವು ತೊಡೆದು ಹಾಕಿದೆ. ತಮ್ಮಂಥವರ ದೃಷ್ಟಿ ಬಿದ್ದದ್ದೆಲ್ಲ ಕ್ಷೇತ್ರ. ಕಾಲನ್ನಿರಿಸಿದ್ದೆಲ್ಲ ತೀರ್ಥ. ಮಾತನಾಡಿದರಂತೂ ಸರಸ್ವತಿಯೇ ಅವತರಿಸಿದಂತೆ.

೬೮. ಸದಾರೋಽಹಂ ಸಮಂ ಪುತ್ರೈರ್ಭೃತ್ಯೈರ್ನ ಪ್ರಭುರವ್ಯಯಃ
ಕಿಂಕರೋಽಸ್ಮಿಸ್ಥಿತೊ ಯುಷ್ಮದಾಜ್ಞಾಕಾರೀ ತದುಚ್ಯತಾಮ್ ।

ನಾನು ಹಿಂದೆ ಮಾಡಿದ ಪುಣ್ಯ ಫಲ ಇಂದು ಒದಗಿ ಬಂದಿದೆ. ಅಂತೆಯೇ ತಮ್ಮಂಥ ಮಹಾಪುರುಷರು ಕಾರ್ಯಾರ್ಥಿಗಳಾಗಿ ನನ್ನ ಮನೆಯವರೆಗೆ ದಯ ಮಾಡಿದ್ದೀರಿ. ಬ್ರಾಹ್ಮಣರೇ ನಾನು ನಿಮ್ಮ ದಾಸ. ನನ್ನ ಬಳಿಗೆ ತಮ್ಮ ಕಾರ್ಯವು ಯಾವದು ಅಪ್ಪಣೆ ಕೊಡಿಸಬೇಕು. ನಾನು ನನ್ನ ಮಡದಿ ಮಕ್ಕಳು ಭೃತ್ಯ ಪರಿವಾರದವರು ಎಲ್ಲರೂ ತಮ್ಮ ಕೈಂಕರ್ಯಕ್ಕಾಗಿ ಕೈಕಟ್ಟಿಕೊಂಡು ನಿಂತಿದ್ದೇವೆ. ನಿಮ್ಮ ಆಜ್ಞೆಗಾಗಿ ಕಾಯುತ್ತಿದ್ದೇವೆ. ಯಾವ ಸಂಕೋಚವೂ ಇಲ್ಲದೇ ಅಪ್ಪಣೆಯನ್ನು ನೀಡಬೇಕು.

**ಪುಲಸ್ತ್ಯ :** ಶೈಲರಾಜನಾದ ಹಿಮಗಿರಿಯ ಮಾತನ್ನು ಕೇಳಿ ಶುದ್ಧಾತ್ಮರಾದ ಋಷಿಗಳು ವೃದ್ಧರಾದ ಅಂಗಿರಸ ಮುನಿಗೆ ತಾವು ಬಂದ ಕಾರ್ಯವನ್ನು ಗಿರಿರಾಜನಲ್ಲಿ ನಿವೇದಿಸಲು ತಿಳಿಸಿದರು. ಕಶ್ಯಪಾದಿ ಋಷಿಗಳ ಪ್ರೇರಣೆಗನುಸಾರವಾಗಿ ಅಂಗಿರಸ ಋಷಿಗಳು ಅದ್ರಿಗಳ ಅರಸನನ್ನು ಕುರಿತು ಇಂತು ಮಾತಾಡಿದರು.

**ಅಂಗಿರಸ :** ಶೈಲಸಾರ್ವಭೌಮನೇ, ಅರುಂಧತೀದೇವಿಯೊಂದಿಗೆ ನಾವೆಲ್ಲರೂ ನಿನ್ನ ಮನೆಗೆ ಬಂದ ಉದ್ದೇಶವನ್ನು ತಿಳಿಸುತ್ತೇನೆ ಕೇಳು-

೬೯. ಯೋಽಸೌ ಮಹಾತ್ಮಾ ಸರ್ವಾತ್ಮಾ ದಕ್ಷಯಜ್ಞ ಕ್ಷಯಂಕರಃ ।
ಶಂಕರಃ ಶೂಲಭೃತ್ ಶರ್ವಃ ತ್ರಿಣೇತ್ರೋ ವೃಷವಾಹನಃ ॥

**ಯಮೀಶ್ವರಂ ವದಂತ್ಯೇಕೇ ಶಿವಂ ಸ್ಥಾಣುವರಂ ಹರಮ್ ।**
**ವಯಂ ತೇನ ಪ್ರೇಷಿತಾಃ ಸ್ಮಃ ತ್ವತ್ಸಕಾಶಂ ಗಿರೀಶ್ವರ ।**

''ಸರ್ವಾತ್ಮನೂ, ಮಹಾತ್ಮನೂ ಆದ ಶೂಲಪಾಣಿ ಶಂಕರನನ್ನು ನೀನು ಬಲ್ಲೆಯಷ್ಟೇ! ಎತ್ತಿನ ಮೇಲೆ ಪ್ರಯಾಣ ಬೆಳೆಸುವ ಆ ಮುಕ್ಕಣ್ಣನು ದಕ್ಷ ಪ್ರಜಾಪತಿಯ ಯಜ್ಞವನ್ನು ವಿಧ್ವಂಸಗೊಳಿಸಿದ್ದು ಸರ್ವರಿಗೂ ವಿದಿತವೇ ಇದೆ.

**೭೦. ಇಯಂ ಯಾ ತ್ವತ್ಸುತಾ ಕಾಲೀ ಸರ್ವಲೋಕೇಷು ಸುಂದರೀ ।**
**ತಾಂ ಪ್ರಾರ್ಥಯತಿ ದೇವೇಶಃ ತಾಂ ಭವಾನ್ ದಾತುಮರ್ಹತಿ॥**

ಶತ್ರುಗಳನ್ನು ಸಂಹರಿಸುವ ಮಹಾಪ್ರಭು ಪರಮೇಶ್ವರನನ್ನು ಸ್ವಯಂಯಜ್ಞ ಭೋಕ್ತಾರನಾಗಿದ್ದಾನೆ. ಅದೇ ಶಿವನನ್ನು ಕೆಲವರು ಈಶ್ವರ, ಸ್ಥಾಣು ಹರ, ಭೀಮ ಉಗ್ರ, ಮಹೇಶ, ಪಶುಪತಿ, ಮಹಾದೇವ ಎಂದು ಮುಂತಾಗಿ ಹಲವು ನಾಮಗಳಿಂದ ಕರೆಯುತ್ತಾರೆ. ಇಂಥ ಪರಮೇಶ್ವರನೇ ನಮ್ಮನ್ನು ನಿನ್ನ ಬಳಿಗೆ ಕಳಿಸಿದ್ದಾನೆ.

**೭೧. ಏಷ ಧನ್ಯೋ ಹಿ ಪಿತಾ ಯಸ್ಯ ಪುತ್ರೀ ಪತಿಂ ಶುಭಮ್ ।**
**ರೂಪಾಭಿಜನಸಂಪತ್ತ್ಯಾ ಪ್ರಾಪ್ನೋತಿ ಗಿರಿಸತ್ತಮ ।**

ಗಿರೀಶ್ವರ, ನಿನ್ನ ಮಗಳಾದ ಕಾಳಿದೇವಿಯು ತ್ರಿಲೋಕ ಸುಂದರಿಯಾಗಿದ್ದಾಳೆ. ಅವಳನ್ನು ಮಹಾದೇವರು ತನಗೆ ಕೊಡಬೇಕೆಂದು ನಿನ್ನನ್ನು ಪ್ರಾರ್ಥಿಸಲಿಕ್ಕಾಗಿ ನಮ್ಮನ್ನೆಲ್ಲ ಕೊಟ್ಟು ಕಳಿಸಿದ್ದಾರೆ. ಈ ಶುಭಾಂಗಿಯನ್ನು ಆ ಶಿವನಿಗೆ ನೀನು ಕೊಡುವದು ಎಲ್ಲ ರೀತಿಯಿಂದಲೂ ಉಚಿತವಾಗಿದೆ. ಸೌಂದರ್ಯ, ಸತ್ಕುಲಗಳಿಂದ ಸಂಪನ್ನನಾದ ಒಳ್ಳೆ ವರನು ಹೆಣ್ಣು ಮಕ್ಕಳಿಗೆ ದೊರೆತರೆ ತಂದೆ ತಾಯಂದಿರು ಧನ್ಯರಾಗುತ್ತಾರೆ. ಅಂಥ ಸರ್ವಗುಣ ಸಂಪನ್ನನಾದ ಶಿವನಂಥ ಶ್ರೇಷ್ಠ ವರನು ತಾನಾಗಿ ನಿನ್ನ ಮಗಳನ್ನು ಮದುವೆಯಾಗುವೆನೆಂದು ಹೇಳಿ ಕಳಿಸಿದ್ದು ನಿನ್ನ ಸೌಭಾಗ್ಯ ಹಾಗೂ ಪಾರ್ವತಿಯ ಪುಣ್ಯ.

**೭೨. ಯಾವಂತೋ ಜಂಗಮಾಽಗಮ್ಯಾ ಭೂತಾಃ ಶೈಲ ಚತುರ್ವಿಧಾಃ ।**
**ತೇಷಾಂ ಮಾತಾ ತ್ವಿಯಂ ದೇವೀ ಯತಃ ಪ್ರೋಕ್ತಃ ಪಿತಾ ಹರಃ॥**

ಶೈಲರಾಜನೇ, ಈ ಪ್ರಪಂಚದಲ್ಲಿ ನಾಲ್ಕು ಬಗೆಯಾದ ಜೀವ ಜಂತುಗಳು ಇರುತ್ತವೆ. ದೇವ, ಮಾನವ, ತಿರ್ಯಕ್ (ಪಶುಪಕ್ಷಿ) ಮತ್ತು ಸ್ಥಾವರ ಅರ್ಥಾತ್ ಗಿಡಗಂಟಿ. ಈ ನಾಲ್ಕು ವಿಧವಾದ ಪ್ರಾಣಿಗಳಿಗೆ ಆ ಪರಮೇಶ್ವರನು ತಂದೆಯಾಗಿದ್ದಾನೆ. ನಿನ್ನ ಮಗಳು ಅವನ ಮಡದಿಯಾದರೆ ಜಗತ್ತಿನ ಜೀವಜಂತು ಜಂಗುಳಿಗೆಲ್ಲ ನಿನ್ನ ಮಗಳು ಮಾತೆ ಅರ್ಥಾತ್ ಜಗದಂಬೆ ಎನಿಸುವಳು.

**೭೩. ಪ್ರಣಮ್ಯ ಶಂಕರಂ ದೇವಾಃ ಪ್ರಣಮಂತು ಸುತಾಂ ತವ ।**
**ಕುರುಷ್ವ ಪಾದಂ ಶತ್ರೂಣಾಂ ಮೂರ್ಧ್ನಿ ಭಸ್ಮ ಪರಿಪ್ಲುತಮ್ ।**

ಎಲ್ಲ ದೇವತೆಗಳು ಶಿವನನ್ನು ನಮಿಸಿ ನಂತರ ನಿನ್ನ ಮಗಳನ್ನು ನಮಸ್ಕರಿಸುವಂತಾಗಲಿ. ನೀನು ಶಂಕರನಿಗೆ ಹೆಣ್ಣು ಕೊಟ್ಟು ಮಾವನಾದರೆ, ನಿನ್ನ ವೈರಿಗಳ ತಲೆಯ ಮೇಲೆ ನಿನ್ನ ಬೂದಿ ಬಳಿದ ಚರಣವನ್ನು ಇರಿಸುವಂತಾಗುವದು.

೭೪. ಯಾಚಿತಾರೊ ವಯಂ ಶರ್ವಃ ಪರೋ ದಾತಾ ತ್ವಮಪ್ಯಮಾ ।
ವಧೂಃ ಸರ್ವಜಗನ್ಮಾತಾ ಕುರು ಯಚ್ಛ್ರೇಯಸೇ ತವ ।

ಎಲ್ಲ ದೇವಾಧಿದೇವತೆಗಳೂ ಆ ಪರಶಿವನನ್ನು ನಮಸ್ಕರಿಸಿದರೆ ಆ ವಿಶ್ವವಂದ್ಯನಾದ ಹರನು ಮಾವನಾದ ನಿನಗೆ ನಮಿಸುವನು. ಭಸ್ಮ ಗುಂಠಿತವಾದ ಅವನ ಶಿರಸ್ಸಂಪರ್ಕದಿಂದ ನಿನ್ನ ಪಾದವೂ ಭಸ್ಮಲೇಪಿತವಾಗಿ ವೈರಿಗಳ ಶಿರಗಳನ್ನು ಮಣಿಸಿ ಮರ್ದಿಸುವದು. ಯಾಚನೆ ಮಾಡುವವರು ಬ್ರಹ್ಮರ್ಷಿಗಳಾದ ನಾವು. ಹರನೇ ವರ. ಜಗನ್ಮಾತೆಯಾದ ಉಮೆಯೇ ವಧು. ಕನ್ಯೆ ಕೊಡುವವನು ನೀನು. ನಿನಗೆ ಸರಿಕಂಡಂತೆ ಶ್ರೇಯಸ್ಕರವಾಗುವಂತೆ ಮಾಡು.

೭೫. ತದ್ವಚೋಽಗಿರಸಃ ಶ್ರುತ್ವಾ ಕಾಲೀ ತಸ್ಥೌ ಅಧೋಮುಖೀ ।
ಹರ್ಷಮಾಗಮ್ಯಾ ಸಹಸಾ ಪುನರ್ದೈನ್ಯಮುಪಾಗತಾ ॥

**ಪುಲಸ್ತ್ಯ** : ಅಂಗಿರಸ ಮುನಿಯ ಈ ಮಾತನ್ನು ಕೇಳಿ ಕಾಳೀದೇವಿಯು ಅತ್ಯಂತ ಆನಂದಭರಿತಳಾಗಿ ನಾಚಿಕೆಯಿಂದ ತಲೆತಗ್ಗಿಸಿಕೊಂಡು ನಿಂತಳು. ಈ ಮುನಿಗಳ ಮಾತಿಗೆ ತಂದೆ ಏನು ಅನ್ನಬಹುದು ಎಂಬ ಚಿಂತಾದೈನ್ಯವು ಅವಳ ಮುಖದಲ್ಲಿ ಒಡೆದು ಕಾಣುತ್ತಿತ್ತು. ಆಗ ಶೈಲಸಾರ್ವಭೌಮನಾದ ಹಿಮವಂತನು ಗಂಧಮಾಧದ ಗಿರಿಯನ್ನು ಕರೆದು ''ಹೋಗು ಹಿಮಗಿರಿಗಳನ್ನೆಲ್ಲ ಇಲ್ಲಿಗೆ ಕರೆದುಕೊಂಡು ಬಾ'' ಎಂದು ಅಪ್ಪಣೆ ನೀಡಿದನು.

೭೬. ತೇಪ್ಯಾಜಗ್ಮುಃ ತ್ವರಾವಂತಃ ಕಾರ್ಯಂ ಮತ್ವಾ ಮಹತ್ತದಾ ।
ವಿವಿಶುರ್ವಿಸ್ಮಯಾವಿಷ್ಟಾಃ ಸೌವರ್ಣೇಷ್ವಾಸನೇಷು ಚ ॥

ಆ ಕ್ಷಣವೇ ಗಂಧಮಾದನನು ಅಲ್ಲಿಂದ ತೆರಳಿದನು. ಬನ ಬನಗಳ ಮನೆ ಮನೆಗಳಿಗೆ ಹೋಗಿ ನಗಾಧಿ ರಾಜನ ನಿರ್ದೇಶನವನ್ನು ತಲ್ಪಿಸಿ ಕೂಡಲೇ ಬರಬೇಕೆಂದು ಆಮಂತ್ರಣ ಕೊಟ್ಟು ಬಂದನು. ಅದ್ರಿರಾಜನ ಆದೇಶವನ್ನು ಕೇಳಿದ ತಕ್ಷಣದಲ್ಲಿಯೇ ಎಲ್ಲ ಕುಲಗಿರಿಗಳಾದ ಮೇರುಮಂದಾರ ಮುಂತಾದ ಮಹಾಪರ್ವತಗಳು ಕಾರ್ಯದ ಮಹತ್ವವನ್ನು ಅರಿತು ಅವಸರದಿಂದ ಬಂದವು. ಹಿಮಗಿರಿಯು ಇಷ್ಟು ತ್ವರೆಯಿಂದ ನಮ್ಮನ್ನೆಲ್ಲ ಕರೆಕಳಿಸಲು ಕಾರಣವೇನಿರ ಬಹುದು? ಎಂಬ ಕುತೂಹಲ ಪ್ರತಿಯೊಬ್ಬನಿಗೂ.

೭೭. ತತೋ ಗಿರೀಶಃ ಸ್ವಾಂ ಭಾರ್ಯಾಂ ಮೇನಾಮಾಹೂತವಾನ್ ತದಾ ।
ಸಮಾಗಚ್ಛತು ಕಲ್ಯಾಣೀ ಸಮಂ ಪುತ್ರೇಣ ಭಾಮಿನೀ ॥

ಎಲ್ಲರೂ ಆತುರದಿಂದ ಅದ್ರಿರಾಜನ ಅರಮನೆಯ ಒಳಗೆ ಬಂದರು. ಅಲ್ಲಿ ಹಾಸಿದ ಬಂಗಾರದ ಆಸನಗಳ ಮೇಲೆ ಕುಳಿತುಕೊಂಡರು. ಶೈಲರಾಜನ ಆಸ್ಥಾನದ ಸುವರ್ಣ ಪೀಠಗಳಲ್ಲಿ ಉದಯಾಚಲ, ಹೇಮಕೂಟ, ರಮ್ಯಕ, ಮಂದಗಿರಿ, ಉದ್ದಾಲಕಾದ್ರಿ, ವರುಣಗಿರಿ, ವರಾಹ ಶೈಲ, ಗರುಡಾಸನ, ಶಕ್ತಿಮಂತ, ವೇಗಸಾನು, ದೃಢಶೃಂಗ, ಚಿತ್ರಕೂಟ, ತ್ರಿಕೂಟ ಮುಂತಾದ ಮುಖ್ಯ ಮುಖ್ಯ ಮಹಾಪರ್ವತಗಳು ಮಂಡಿಸಿದ್ದವು. ಉಳಿದ ಚಿಕ್ಕಪುಟ್ಟ ಬೆಟ್ಟಗಳೂ ತಮ್ಮ ತಮ್ಮ ಆಸನಗಳ ಮೇಲೆ ಆಸೀನರಾಗಿದ್ದರು. ಈ ಎಲ್ಲ ಶೈಲ ಸಭಾಸದರು ಅಲ್ಲಿ ನೆರೆದ ಮಹಾಮುನಿಗೆ ಮೊದಲು ವಂದಿಸಿದರು. ಅನಂತರ ಗಿರಿರಾಜನಾದ ಹಿಮವಂತನು ತನ್ನ ಮಡದಿ ಮೇನಾದೇವಿಗೆ ಮಗನೊಂದಿಗೆ ಸಭಾಂಗಣಕ್ಕೆ ಬರಬೇಕೆಂದು ಹೇಳಿ ಕಳಿಸಿದನು.

೭೮. ಸಾಭಿವಂದ್ಯ ಋಷೀಣಾಂ ಚ ಶರಣಾಂಶ್ಚ ತಪಸ್ವಿನೀ ।
ಸರ್ವಾನ್ ಜ್ಞಾತೀನ್ ಸಮಾಭಾಷ್ಯ ವಿವೇಶ ಸಸುತಾ ತದಾ ॥

ಆ ಶೈಲರಾಜನ ಶುಭಾಂಗಿಯೂ ತನ್ನ ಮಗನೊಂದಿಗೆ ಬಂದು ಏಳು ಜನ ಋಷಿಗಳ ಕಾಲಿಗೆ ನಮಸ್ಕರಿಸಿದಳು. ತನ್ನ ಜ್ಞಾತಿಗಳಾದ ಎಲ್ಲ ಬೆಟ್ಟ ಬಂಧುಗಳನ್ನು ಬಂದು ಭೆಟ್ಟಿಯಾಗಿ ಕುಶಲ ಪ್ರಶ್ನೆ ಮಾಡಿದಳು. ಯೋಗ ಕ್ಷೇಮವನ್ನು ವಿಚಾರಿಸಿದಳು. ಅನಂತರ ಮಗನೊಂದಿಗೆ ತನ್ನ ಪರ್ವತ ಪತಿಯ ಪಾದಗಳಿಗೆ ನಮಿಸಿ ಅವನ ಪಕ್ಕದಲ್ಲಿ ನಿಂತುಕೊಂಡಳು. ಅನಂತರ ಅಭ್ಯಾಗತರಾದ ಪರ್ವತ ಪ್ರಮುಖರೆಲ್ಲರೂ ತಮ ತಮಗೆ ಉಚಿತವಾದ ಪೀಠಗಳಲ್ಲಿ ಕುಳಿತಿರುವುದನ್ನು ಕಂಡು ಪರ್ವತ ಸಾರ್ವಭೌಮನಾದ ಹಿಮಾಲಯನು ತನ್ನ ಮಧುರ ಮಾತುಗಳಿಂದ ಮಾತನಾಡಿಸಿ ಅನಂತರ ನುಡಿದನು.

೭೯. ಇಮೇ ಸಪ್ತರ್ಷಯಃ ಪುಣ್ಯಾಃ ಯಾಚಿತಾರಃ ಸುತಾಂ ಮಮ ।
ಮಹೇಶ್ವರಾರ್ಥಂ ಕನ್ಯಾಂ ತು ತಚ್ಚಾವೇದ್ಯಂ ಭವತ್ಸು ವೈ ॥

**ಹಿಮಾಲಯ** : ನನ್ನ ಪ್ರೀತಿಯ ಗಿರಿಗೆಳೆಯರೇ, ಪವಿತ್ರ ಮೂರ್ತಿಗಳಾದ ಈ ಸಪ್ತರ್ಷಿಗಳು ನನ್ನ ಮಗಳಾದ ಉಮೆಯನ್ನು ಮಹೇಶ್ವರನಿಗೆ ಕೇಳಲು ಬಂದಿದ್ದಾರೆ. "ಕಾಳಿಯನ್ನು ಕೈಲಾಸಪತಿಗೆ ಕೊಟ್ಟು ಕಲ್ಯಾಣ ಮಹೋತ್ಸವವನ್ನು ನೆರವೇರಿಸು" ಎಂದು ಹೇಳುತ್ತಿದ್ದಾರೆ

೮೦. ತದ್ವದಧ್ವಂ ಯಥಾನ್ಯಾಯಂ ಜ್ಞಾತಯೋ ಯೂಯಮೇವ ಮೇ ।
ನೋಲ್ಲಂಘ್ಯ ಯುಷ್ಮಾನ್ ದಾಸ್ಯಾಮಿ ತತ್‌ಕ್ಷಮಂ ವಕ್ತುಮರ್ಹಥ ॥

ಈ ವಿಷಯವನ್ನು ನಿಮ್ಮಲ್ಲಿ ನಿವೇದಿಸಿ ನಿಮ್ಮೆಲ್ಲ ಬೆಟ್ಟ ಬಂಧುಗಳ ಸಲಹೆ ಸಮ್ಮತಿಗಳನ್ನು ಪಡೆಯಬೇಕೆಂದು ಎಲ್ಲರನ್ನು ಇಲ್ಲಿಗೆ ಕರೆ ಕಳಿಸಿದ್ದೇನೆ. ನನ್ನ ಪ್ರೀತಿಯ ಜ್ಞಾತಿಗಳೆಂದರೆ ನೀವೇ ಅಲ್ಲವೇ? ನಿಮ್ಮ ಮಾತನ್ನು ಮೀರಿ ನಾನು ಏನೂ ಮಾಡುವದಿಲ್ಲ. ಯಾರಿಗೂ ಕನ್ಯೆಯನ್ನು ಕೊಡುವದಿಲ್ಲ. ಆದುದರಿಂದ "ನಾನು ಏನು ಮಾಡಬೇಕು ಎಂಬುದನ್ನು ತಿಳಿಸಿರಿ. ನಿಮಗೆ ನ್ಯಾಯವೆನಿಸಿದ್ದನ್ನು ನುಡಿಯಿರಿ. ಯೋಗ್ಯ ಎನಿಸಿದ್ದನ್ನು ಹೇಳಿರಿ. ನಿಮ್ಮ ಮನಸ್ಸಿಗೆ ಉಚಿತ ಎನಿಸಿದ್ದನ್ನು ತಿಳಿಸಲು ಯಾವ ಸಂಕೋಚವೂ ಬೇಡ."

**ಪುಲಸ್ತ್ಯ** :-ಹೇಮಾದ್ರಿಯ ಈ ವಚನವನ್ನು ಕೇಳಿ ಮೇರು ಮೊದಲಾದ ಮುಖ್ಯ ಮಹಾಚಲಗಳು ಪೀಠಗಳಲ್ಲಿ ಕುಳಿತೇ ಮಾತನಾಡಿದರು -

೮೧. ಯಾಚಿತಾರಶ್ಚ ಮುನಯೋ ವರಸ್ತ್ರಿಪುರಹಾ ಹರಃ ।
ದೀಯತಾಂ ಶೈಲ ಕಾಲೀಯಂ ಜಾಮಾತಾಭಿಮತೋ ಹಿ ನಃ ॥

"ಮಹಾರಾಜ, ಯಾಚಿಸುವವರು ಸಪ್ತರ್ಷಿಗಳು. ವರ ತ್ರಿಪುರಾಂತಕನಾದ ಹರ. ಅಂದ ಬಳಿಕ ಶೈಲೇಂದ್ರನೇ ಇಲ್ಲಿ ಕೇಳುವದೇನಿದೆ! ಈ ಕಾಳಿ ಕುಮಾರಿಯನ್ನು ಪರಮೇಶ್ವರನಿಗೆ ಕೊಟ್ಟುಬಿಡು. ಮದುವೆ ಮಾಡಿಬಿಡು. ಆ ಚಂದ್ರಶೇಖರನು ನಿನ್ನ ಅಳಿಯನಾಗುವದು ನಮ್ಮೆಲ್ಲರಿಗೂ ಸಮ್ಮತವಾಗಿದೆ." ಕುಲಗಿರಿಗಳೆಲ್ಲವೂ ತಮ್ಮ ಅಭಿಪ್ರಾಯವನ್ನು ತಿಳಿಸಿದ ಬಳಿಕ ಮಹಿಳಾ ಮಣಿಯಾದ ಮೇನೆಯು ತನ್ನ ಪತಿಗೆ ಹೇಳಿದಳು.

೮೨. ಮೇನಾಥ ಪ್ರಾಹ ಭರ್ತಾರಂ ಶೃಣು ಶೈಲೇಂದ್ರ ಮೇ ವಚಃ ।
ಪಿತೃಭಿಃ ತನಯಾ ಮಹ್ಯಂ ದತ್ತಾ ತೇನೈವ ಹೇತುನಾ ॥

"ಶೈಲ ಸಾರ್ವಭೌಮರೇ, ಈ ವಿಷಯದಲ್ಲಿ ನಾನೂ ಒಂದು ಮಾತನ್ನು ತಮ್ಮಲ್ಲಿ ವಿಜ್ಞಾಪಿಸಬೇಕಾಗಿದೆ. ಪಿತೃಗಳು ಈ ಉದ್ದೇಶದಿಂದಲೇ ಈ ಪಾರ್ವತಿಯನ್ನು ನಮಗೆ ಮಗಳನ್ನಾಗಿ ಕರುಣಿಸಿ ಕೊಟ್ಟಿದ್ದಾರೆ.

೮೩. ಯಸ್ತಸ್ಯಾಂ ಭೂತಪತಿನಾ ಪುತ್ರೋ ದತ್ತೋ ಭವಿಷ್ಯತಿ ।
ಸ ಹನಿಷ್ಯತಿ ದೈತ್ಯೇಂದ್ರಂ ಮಹಿಷಂ ತಾರಕಂ ತಥಾ ॥

ಇವಳಲ್ಲಿ ಭೂತನಾಥನಾದ ಭವನಿಂದ ಜನಿಸುವ ಮಗನು ಮಹಿಷಾಸುರನನ್ನು, ತಾರಕಾಸುರನನ್ನು ಕೊಲ್ಲುವನು. ಹೀಗೆ ಈ ಪಾರ್ವತೀ ಪರಮೇಶ್ವರರ ವಿವಾಹವು ಒಂದು ದೈವೀ ಸಂಕೇತವೇ ಆಗಿರುತ್ತದೆ. ಹೀಗೆ ಮಡದಿ ಮೇನೆಯ ಮಾತುಗಳನ್ನೂ, ಸಕಲ ಶೈಲ ಮಿತ್ರರ ಸಲಹೆ-ಸಮ್ಮತಿ ಯನ್ನೂ ಕೇಳಿಕೊಂಡು ಅದ್ರಿಗಳ ಅಧಿರಾಜನಾದ ಹಿಮವಂತನು ತನ್ನ ಕನ್ಯೆ ಕಾಳೀ ದೇವಿಗೆ ಹೇಳಿದನು -

೮೪. ಇತ್ಯೇವಂ ಮೇನಯಾ ಪ್ರೋಕ್ತಃ ಶೈಲೈ-ಶೈಲೇಶ್ವರಃ ಸುತಾಮ್ ।
ಪ್ರೋವಾಚ ಪುತ್ರಿ ದತ್ತಾಸಿ ಶರ್ವಾಯ ತ್ವಂ ಮಯಾಧುನಾ॥

"ಮಗಳೇ, ನಿನ್ನನ್ನು ಇಂದೇ ನಾನು ಮಹಾದೇವನಿಗೆ ಕೊಟ್ಟಿದ್ದೇನೆ."

೮೫. ಋಷೀನುವಾಚ ಕಾಲೀಯಂ ಮಮ ಪುತ್ರೀ ತಪೋಧನಾಃ ।
ಪ್ರಣಾಮಂ ಶಂಕರವಧೂಃ ಭಕ್ತಿನಮ್ರಾ ಕರೋತಿ ವಃ ।

ಅನಂತರ ಅಲ್ಲಿಯೇ ಮಂಡಿಸಿದ ಮಹರ್ಷಿಗಳ ಕಡೆ ತಿರುಗಿ, "ತಪೋಧನರೇ, ನನ್ನ ಮಗಳಾದ ಈ ಕಾಳೀ ಕುಮಾರಿಯನ್ನು ಶಿವನಿಗೆ ಕೊಡುವ ಸಂಕಲ್ಪ ಮಾಡಿದ್ದೇನೆ. ಇಂದೇ ಅವಳು ಶಿವವಧು. ಭಕ್ತಿ ನಮ್ರಳಾದ ಈ ನವ ಭವ ಭಾಮಿನಿಯು ಈಗ ನಿಮಗೆ ನಮಸ್ಕಾರ ಮಾಡುತ್ತಾಳೆ" ಎಂದು ಹೇಳಿದನು.

೮೬. ತತೋಽಪ್ಯರುಂಧತೀ ಕಾಲೀಮಂಕಮಾರೋಪ್ಯ ಚಾಟುಕೈಃ ।
ವಿಲಜ್ಜಮಾನಾಮಾಶ್ವಾಸ್ಯ ಹರನಾಮೋಚಿತೈಃ ಶುಭೈಃ ॥

ಕೂಡಲೇ ಅರುಂಧತೀದೇವಿಯು ಕಾಳಿಯನ್ನು ತನ್ನ ತೊಡೆಯ ಮೇಲೆ ಎತ್ತಿ ಕುಳ್ಳಿರಿಸಿಕೊಂಡು "ಕಾಳಿ, ಇನ್ನು ನೀನು ಹರನ ಹೆಂಡತಿ. ಶಿವಸತಿ. ಇನ್ನು ನಿನ್ನ ಮುಡಿ ಯಲ್ಲಿ ಚಂದ್ರ. ಕೈಯಲ್ಲಿ ಹಾವು. ಹಣೆಯಲ್ಲಿ ಮೂರು ಕಣ್ಣು. ಮೈ ತುಂಬ ಭಸ್ಮ. ನೀನೀನ್ನು ಬರೀ ಪರ್ವತ ಪುತ್ರಿಯಲ್ಲ. ಜಗದಂಬೆ. ಶಿವಶಿವೆ. ಭವ ಭವ ಭವಾನಿ" ಎಂದು ಮುಂತಾಗಿ ವಿನೋದದ ನುಡಿಗಳನ್ನಾಡಿದಳು. ಹರನ ಹೆಸರಿಗೆ ತನ್ನನ್ನು ಜೋಡಿಸಿ ತನ್ನ ಹೆಸರನ್ನು ಕೂಡಿಸಿ ಅರುಂಧತಿ ಆಡುವ ನರ್ಮೋಕ್ತಿ ಮರ್ಮೋಕ್ತಿ ಗಳೆಲ್ಲವೂ ಪಾರ್ವತಿಯ ಹೃದಯಕ್ಕೆ ಹಿತವೆನಿಸಿ ಹಿಗ್ಗನ್ನುಂಟು ಮಾಡುತ್ತಿದ್ದವು. ಆದರೂ ಅವಳಿಗೆ ನಾಚಿಕೆಯೆನಿಸಿ ತಲೆತಗ್ಗಿಸಿದಳು. "ಬೇಗನೇ ನಿನ್ನನ್ನು ಹರನಿಗೇ ಕೊಟ್ಟು ಮದುವೆ ಮಾಡುತ್ತೇವೆ. ಏನೂ

ಚಿಂತಿಸಬೇಡ'' ಎಂದು ನಗೆನುಡಿ ನಿಜನುಡಿಗಳಿಂದ ಆ ಹಿರಿಯಳಾದ ಋಷಿರಮಣಿಯು ಕಾಳಿಗೆ ಆಶ್ವಾಸನೆಯಿತ್ತು ಸಂತೈಸಿ ಸಂತೋಷ ಪಡಿಸಿದಳು.

೮೭. ಉತ್ತರಾ ಫಲ್ಗುಣೀ ಯೋಗಂ ತೃತೀಯೇಽಹ್ನಿ ಹಿಮಾಂಶುಮಾನ್।
ಗಮಿಷ್ಯತಿ ಚ ತತ್ರೋಕ್ತೋ ಮುಹೂರ್ತೋ ಮೈತ್ರನಾಮಕಃ ।

ಅನಂತರ ಸಪ್ತರ್ಷಿಗಳು ಮದುವೆಯ ಮುಹೂರ್ತದ ಬಗೆಗೆ ಮಾತನಾಡುತ್ತ ''ಮಹಾರಾಜ ನಿನ್ನ ಮಗಳ ಮದುವೆಗೆ ಮಂಗಳಕರವಾದ ಎಲ್ಲ ಶುಭಯೋಗದಿಂದ ಕೂಡಿದ ಒಳ್ಳೇ ಮುಹೂರ್ತವನ್ನು ಹೇಳುತ್ತೇವೆ ಕೇಳು. ಮುಂದಿನ ತೃತಿಯಾ ದಿನ ಚಂದ್ರನು ಉತ್ತರಾ ಫಲ್ಗುಣೀ ನಕ್ಷತ್ರಗಳ ಯೋಗವನ್ನು ಹೊಂದುತ್ತಾನೆ. ಆಗಿನ ಮೈತ್ರ ಎಂಬ ಮುಹೂರ್ತ ಮದುವೆಯ ಕಾರ್ಯಕ್ಕೆ ಒಳ್ಳೇ ಮಂಗಳಕರ ಎಂದು ಉಕ್ತವಾಗಿದೆ.

೮೮. ತಸ್ಯಾಂ ತಿಥೌ ಹರಃ ಪಾಣಿಂ ಗ್ರಹೀಷ್ಯತಿ ಸಮಂತ್ರಕಮ್ ।
ತವ ಪುತ್ರ್ಯಾ ವಯಂ ಯಾಮಃ ತದನು ಜ್ಞಾತುಮರ್ಹಸಿ ॥

ಆ ಮೈತ್ರ ಮುಹೂರ್ತದಲ್ಲಿ ಮಹೇಶ್ವರನೂ, ನಿನ್ನ ಮಗಳಾದ ಈ ಕಾಳೀ ಕುಮಾರಿಯ ಕೈಯನ್ನು ಮಂತ್ರಪೂರ್ವಕವಾಗಿ ಹಿಡಿಯುವವನು. ಇನ್ನು ನಮಗೆ ಹೋಗಲು ಅಪ್ಪಣೆ ಕೊಡು'' ಎಂದು ತಿಳಿಸಿದರು. ಅನಂತರ ಶೈಲ ಸಮ್ರಾಟನು ಋಷಿ ಪುಂಗವರನ್ನೆಲ್ಲ ಹಣ್ಣುಹಂಪಲು, ಕಂದ ಮೂಲಗಳನ್ನು ಕೊಟ್ಟು ಉಪಹಾರ ಉಪಚಾರಗಳನ್ನು ಮಾಡಿ ಆದರಿಸಿದನು. ಪ್ರಣಾಮ ಪೂರ್ವಕವಾಗಿ ಸತ್ಕರಿಸಿ ಅವರೆಲ್ಲರನ್ನೂ ಬೀಳ್ಕೊಟ್ಟನು. ಆ ನಗನಾಥನಿಗೆ ನಿರೋಪ ಹೇಳಿ ಆ ಮಹರ್ಷಿಗಳೆಲ್ಲರೂ ಅತ್ಯಂತ ವೇಗದಿಂದ ಹೈಮಾಚಲದ ಶೈಲ ಶ್ರೇಣಿಗಳನ್ನೆಲ್ಲ ದಾಟಿ ಮಂದರ ಪರ್ವತಕ್ಕೆ ಬಂದರು. ಅಲ್ಲಿ ಇರುವ ಶಂಕರನ ಸಂದರ್ಶನವನ್ನು ತೆಗೆದುಕೊಂಡರು. ಭಕ್ತಿಯಿಂದ ಆ ಭಗವಂತನಿಗೆ ನಮಸ್ಕರಿಸಿ ನುಡಿದರು -

೮೯. ಪ್ರಣಮ್ಯೋಚುರ್ಮಹೇಶನಂ ಭವಾನ್ ಭರ್ತಾಽದ್ರಿಜಾವಧೂಃ।
ಸಬ್ರಹ್ಮಕಾಸ್ತ್ರಯೋ ಲೋಕಾಃ ದ್ರಕ್ಷ್ಯಂತಿ ಘನವಾಹನಮ್ ॥

''ಭಗವನ್ ನೀನೇ ವರ. ಗುಡ್ಡದ ಮಗಳಾದ ಆ ಕಾಳಿಯೇ ಕನ್ಯೆ. ನಿಮ್ಮಿಬ್ಬರ ಮದುವೆಯ ಮಂಗಳ ಪ್ರಸಂಗವನ್ನು ಬ್ರಹ್ಮಾದಿ ದೇವತೆಗಳೂ, ಮೂರು ಲೋಕದ ಎಲ್ಲ ಮಾನವರೂ ಬೇಗನೇ ನೋಡುವರು. ನೀನು ನಿನ್ನ ಮನದನ್ನೆಯಾದ ಆ ಪಾರ್ವತಿಯೊಂದಿಗೆ ಮೇಘಮಂಡಲದ ಮೇಲೆ ಏರಿ ಸ್ವಚ್ಛಂದವಾಗಿ ವಿಹರಿಸುವದನ್ನು ಬೇಗನೇ ಎಲ್ಲರೂ ಕಾಣುವರು. ಮಹರ್ಷಿಗಳ ಈ ಮಾತುಗಳನ್ನು ಕೇಳಿ ಮಹೇಶ್ವರನಿಗೆ ಮಹದಾನಂದವಾಯಿತು. ಅವನು ಅರುಂಧತೀ ದೇವಿಯೊಂದಿಗೆ ಎಲ್ಲ ಮುನಿ ಮಾನ್ಯರನ್ನು ಸರತಿಯಂತೆ ಸತ್ಕರಿಸಿ ವಿಧಿಪೂರ್ವಕವಾಗಿ ಪೂಜಿಸಿದನು.

೯೦. ತತಃ ಸಂಪೂಜಿತಾ ಜಗ್ಮುಃ ಸುರಾಣಾಂ ಮಂತ್ರಣಾಯ ತೇ ।
ತೇಽಥಾಜಗ್ಮುಃ ಹರಂ ದ್ರಷ್ಟುಂ ಬ್ರಹ್ಮವಿಷ್ಣ್ವಿಂದ್ರಭಾಸ್ಕರಾಃ ॥

ಹೀಗೆ ಪರಮೇಶ್ವರನಿಂದ ಪೂಜಿತರಾಗಿ ಎಲ್ಲ ಋಷಿಗಳು ದೇವಲೋಕಗಳಿಗೆ ಹೋಗಿ ಎಲ್ಲ ಸುರಶ್ರೇಷ್ಠರಿಗೂ ಮದುವೆಯ ಆಮಂತ್ರಣವನ್ನು ಮುಟ್ಟಿಸಿದರು. ಅದನ್ನು ಕೇಳಿ

ಬ್ರಹ್ಮ, ವಿಷ್ಣು, ಇಂದ್ರ, ಸೂರ್ಯ ಮುಂತಾದ ದೇವತೆಗಳೆಲ್ಲರೂ ಕೈಲಾಸ ಪರಿಯನ್ನು ಕಾಣಬೇಕೆಂದು ಕುತೂಹಲದಿಂದ ಬಂದರು.

**೯೧. ದೇವೈರ್ಗಣೈಶ್ಚಾಪಿ ವೃತೋಗಣೇಶಃ**
**ಸಂಶೋಭತೆ ಮುಕ್ತಜಟಾಗ್ರಭಾರಃ ॥**
**ಯಥಾವನೆ ಸರ್ಜಕದಂಬ ಮಧ್ಯೇ**
**ಪ್ರರೋಹ ಮೂಲೋಽಥವನಸ್ಪತಿರ್ವಾ ॥**

ಅವರೆಲ್ಲರೂ ಮಂದರ ಪರ್ವತದಲ್ಲಿ ಇರುವ ಚಂದ್ರಶೇಖರನ ಮಂದಿರಕ್ಕೆ ಬಂದು ಅವನನ್ನು ವಂದಿಸಿ ಕುಳಿತುಕೊಂಡರು. ಅನಂತರ ಶಂಕರನು ನಂದಿಯೇ ಮೊದಲಾದ ಗಣಾಧೀಶರನ್ನು ನೆನೆದನು. ಕೂಡಲೇ ಗಣಗಳೆಲ್ಲರೂ ಅಲ್ಲಿಗೆ ಬಂದು ಪರಮೇಶ್ವರನಿಗೆ ಪ್ರಣಾಮ ಮಾಡಿ ಅವನ ಎದಿರು ಆಸೀನರಾದರು. ಹೀಗೆ ದೇವವೃಂದದಿಂದಲೂ ಮತ್ತೂ ತನ್ನ ಭೃತ್ಯ ಗಣಗಳಿಂದಲೂ ಸುತ್ತು ವರಿಯಲ್ಪಟ್ಟ ಜಟಾಧಾರಿಯಾದ ಆ ಮಹಾದೇವರು ಅರಣ್ಯದಲ್ಲಿ ಸರ್ಜ, ಕದಂಬಾದಿ ಮರಗಳ ಮಧ್ಯದಲ್ಲಿ ಬಿಳಲು ಬಿಟ್ಟ ಆಲದ ಮರದಂತೆ ಶೋಭಿಸಿದರು.

ವಾಮನ ಮಹಾಪುರಾಣದಲ್ಲಿ ಮಹಾದೇವನ ಮದುವೆಯ ಮಾತು ಎಂಬ
ಐವತ್ತೆರಡನೇಯ ಅಧ್ಯಾಯವು ಮುಗಿದುದು.



## ಶಿವನ ಶೋಭಾಯಾತ್ರೆ

**ಅಧ್ಯಾಯ - ೫೩**

**೯೨. ಸಮಾಗತಾನ್ ಸುರಾನ್ ದೃಷ್ಟ್ವಾ ನಂದಿರಾಖ್ಯಾತವಾನ್ ವಿಭೋಃ ।**
**ಅಥೋತ್ಥಾಯ ಹರಿಂ ಭಕ್ತ್ಯಾ ಪರಿಷ್ವಜ್ಯ ನ್ಯಪೀಡಯತ್ ॥**

**ಪುಲಸ್ತ್ಯ** : ದೇವತೆಗಳು ಬಂದ ಸಮಾಚಾರವನ್ನು ನಂದಿಯು ಮಹೇಶ್ವರನಿಗೆ ತಿಳಿಸಿದರು. ಕೂಡಲೇ ಕೈಲಾಸಪತಿಯು ಎದ್ದು ಆ ಭಗವಂತನನ್ನು ಭಕ್ತಿಯಿಂದ ಬಿಗಿ ದಪ್ಪಿದನು. ಬಲವಾಗಿತ್ತು ಆ ನೇಹದ ಅಪ್ಪುಗೆ.

**೯೩. ಬ್ರಹ್ಮಾಣಂ ಶಿರಸಾ ನತ್ವಾ ಸಮಾಭಾಷ್ಯ ಶತಕ್ರತುಮ್ ।**
**ಆಲೋಕ್ಯಾನ್ಯಾನ್ ಸುರಗಣಾನ್ ಸಂಭಾವಯತ್ಸುಸಶಂಕರಃ।**

ಆ ಬಳಿಕ ಶಿವನು ಬ್ರಹ್ಮನಿಗೆ ತಲೆಬಾಗಿ ನಮಿಸಿದನು. ಇಂದ್ರನನ್ನು ಯೋಗಕ್ಷೇಮ ವಿಚಾರಿಸಿದನು. ಬಳಿಕ ದೇವತೆಗಳನ್ನು ಸ್ನೇಹಪೂರ್ಣವಾಗಿ ನೋಡಿ ದೃಷ್ಟಿಕ್ಷೇಪದಿಂದಲೇ ಗೌರವಿಸಿದನು.

**೯೪. ಗಣಾಶ್ಚ ಜಯ ದೇವೇತಿ ವೀರಭದ್ರಪುರೋಗಮಾಃ ।**
**ಶೈವಾಃ ಪಾಶುಪತಾದ್ಯಾಶ್ಚ ವಿವಿಶುಃ ಮಂದರಾಚಲಮ್ ॥**

ಅಷ್ಟರಲ್ಲೇ ವೀರಭದ್ರನೇ ಮೊದಲಾದ ಗಣಗಳು ಅನೇಕ ಶೈವರು ಪಾಶುಪತರು ''ಜಯ ಜಯ ಮಹಾದೇವ'' ''ಹರ ಹರ ಮಹಾದೇವ'' ಎನ್ನುತ್ತ ಮಂದರಾಚಲದಲ್ಲಿ ಪ್ರವೇಶ ಮಾಡಿದರು.

೯೫. ತತಸ್ತಸ್ಮಿನ್ ಮಹಾಶ್ಶೈಲೇ ದೇವಮಾತಾಽದಿತಿಃ ಶುಭಾ ।
ಸುರಭಿಃ ಸುರಮಾ ಚಾನ್ಯಾಃ ಚಕ್ರುರ್ಮಂಡನಮಾಕುಲಾಃ ॥

ಅನಂತರ ಪೂಜ್ಯನಾದ ಪರಮೇಶ್ವರನು ಆ ಎಲ್ಲ ಅಮರ ಗಣಗಳಿಂದ ಕೂಡಿಕೊಂಡು ತನ್ನ ಮದುವೆಯ ಮಂಗಳ ಕಾರ್ಯಮಾಡಿ ಮುಗಿಸಬೇಕೆಂದು ತಾನಿದ್ದ ಮಂದರ ಪರ್ವತವನ್ನು ಬಿಟ್ಟು ಹಿಮಾಲಯ ಶೈಲಕ್ಕೆ ಬಿಜಯಗೈದನು. ಆ ಮಹಾಶೈಲದಲ್ಲಿ ದೇವಮಾತೆಯಾದ ಅಧಿದೇವತೆಯೂ ಸುರಭಿ ಸುರಮಾ ಮುಂತಾದ ಇತರ ದೇವಮಹಿಳೆಯರೂ ಸಂಭ್ರಮದಿಂದ ವೈವಾಹಿಕ ಅಲಂಕಾರವನ್ನು ಸಿದ್ಧಗೊಳಿಸಿದರು.

೯೬. ಮಹಾಸ್ಥಿಶೇಖರೀ ಚಾರು ರೋಚನಾತಿಲಕೋ ಹರಃ ।
ಸಿಂಹಾಜಿನೀ ಚಾತಿನೀಲ ಭುಜಂಗಕೃತಕುಂಡಲಃ ॥
ಮಹಾಹಿರತ್ನ ವಲಯ ಹಾರ ಕೇಯೂರನೂಪುರಃ ।
ಸಮುನ್ನತ ಜಟಾಭಾರಃ ವೃಷಭಸ್ಥೋ ವಿರಾಜತೇ ॥

ಮದುಮಗನಾದ ಮಹೇಶನ ಮುಡಿಯಲ್ಲಿ ಚಾರು ಚಂದ್ರನು ಹೊಳೆಯುತ್ತಿದ್ದನು. ಹಣೆಯಲ್ಲಿ ಗೋರೋಚನಾ ತಿಲಕವು ಶೋಭಿಸುತ್ತಿತ್ತು. ಕರಿಹಾವಿನ ಕುಂಡಲಗಳು ಕಿವಿಗಳಲ್ಲಿ ಒಪ್ಪುತ್ತಿದ್ದವು. ಸಿಂಹದ ಚರ್ಮವನ್ನು ಚೆನ್ನಾಗಿ ಧರಿಸಿದ್ದನು, ವರನಾದ ಆ ಹರ. ಅವನ ಕೊರಳಲ್ಲಿ ಹಾವಿನ ಹಾರ, ಕೈಯಲ್ಲಿ ಸರ್ಪದ ಕಡಗ, ಭುಜಗಳಲ್ಲಿ ಹಾವುಗಳ ತೋಳುಬಳೆ. ಕಾಲ್ಗಡಗವೂ ಹಾವುಗಳದೇ. ಕಪ್ಪು ಕೂದಲಿನ ಜಡೆ ಮುಡಿಗಳ ಹೊರೆಯನ್ನು ಕೂಡ ಹಾವಿನ ಹಾರದಿಂದಲೇ ಎತ್ತಿ ಕಟ್ಟಲಾಗಿತ್ತು.

೯೭. ವೈನತೇಯಂ ಸಮಾರೂಢಃ ಸಹಲಕ್ಷ್ಮ್ಯಾ ಜನಾರ್ದನಃ ।
ಪ್ರಯಾತಿ ದೇವಪಾರ್ಶ್ವಸ್ಥೋ ಹಂಸೇನ ಚ ಪಿತಾಮಹಃ ।

ಇಂಥಸರ್ಪಭೂಷಣನಾದಶಂಕರನುತನ್ನ ವಾಹನವಾದಎತ್ತಿನಮೇಲೆಹತ್ತಿಕೊಂಡು ಸಡಗರದಿಂದ ನಡೆದಿದ್ದನು. ಮಹಾದೇವರ ಮುಂದೆ ಮುಂದೆ ಎಲ್ಲ ಗಣಂಗಳವರು ತಮ್ಮ ತಮ್ಮ ವಾಹನಗಳನ್ನು ಏರಿಕೊಂಡು ಸಂಭ್ರಮದಿಂದ ಚಲಿಸಿದರು. ಅಗ್ನಿಯೇ ಮೊದಲಾದ ದೇವತೆಗಳು ಆ ಮೆರವಣಿಗೆಯಲ್ಲಿ ಸಾಗಿದರು. ಲಕ್ಷ್ಮೀನಾರಾಯಣರು ಗರುಡನನ್ನು ಆರೋಹಣ ಮಾಡಿಕೊಂಡು ಮದುಮಗನ ಬಲಭಾಗದಲ್ಲಿಯೂ, ಬ್ರಹ್ಮನು ಹಂಸಾರೂಢನಾಗಿ ಶಿವನ ಎಡಭಾಗದಲ್ಲಿಯೂ ಮುನ್ನಡೆದಿದ್ದರು.

೯೮. ಗಜಾಧಿರೂಢೋ ದೇವೇಂದ್ರಃ ಛತ್ರಂ ಶುಕ್ಲಪಟಂ ವಿಭೋಃ ।
ಧಾರಯಾಮಾಸ ವಿತತಂ ಸಹೇಂದ್ರಾಣ್ಯಾ ಸಹಸ್ರದೃಕ್ ॥

ಶೂಲಪಾಣಿಯ ಹಿಂದೆ ಐರಾವತದ ಮೇಲೆ ಕುಳಿತು ದೇವೇಂದ್ರ ದಂಪತಿಗಳು ಶ್ವೇತಛತ್ರವನ್ನು ಬಿಡಿಸಿಹಿಡಿದಿದ್ದರು. ಶಚಿಯೊಂದಿಗೆ ಸುರನಾಥನು ಶಿವನ ಹಿಂದೆ ಛತ್ರಧಾರಿಯಾಗಿ ನಿಂತದ್ದರಿಂದ ಸಾವಿರಗಣ್ಣಿನ ನವಿಲುಗರಿ ಹಿನ್ನೆಲೆಯಲ್ಲಿ ಇರಿಸಿದಂತಾಗಿತ್ತು.

೯೯. ಯಮುನಾ ಸರಿತಾಂ ಶ್ರೇಷ್ಠಾ ವಾಲವ್ಯಜನಮುತ್ತಮಮ್ ।
ಶ್ವೇತಂ ಪ್ರಗೃಹ್ಯ ಹಸ್ತೇನ ಕಚ್ಛಪೇ ಸಂಸ್ಥಿತಾ ಯಯೌ ।

ಹಂಸಕುಂದೇಂದುಸಂಕಾಶಂ ವಾಲವ್ಯಜನಮುತ್ತಮಮ್ ।
ಸರಸ್ವತೀ ಸರಿಚ್ಛ್ರೇಷ್ಠಾ ಗಜಾರೂಢಾ ಸಮಾದಧೇ

ಹೊಳೆಗಳಲ್ಲಿ ಹಿರಿಯ ಹೊಳೆ ಎನಿಸಿದ ಯಮುನೆಯು ಆಮೆಯ ಮೇಲೆ ಆರೂಢಳಾಗಿ ಬಿಳಿ ಚಾಮರವನ್ನು ಬೀಸುತ್ತಿದ್ದಳು. ಮತ್ತೊಂದು ಶ್ರೇಷ್ಠ ನದಿಯಾದ ಸರಸ್ವತಿಯು ಆನೆಯ ಮೇಲೆ ಏರಿ ಇನ್ನೊಂದು ಬದಿಯಲ್ಲಿ ಚಾಮರವನ್ನು ಬೀಸುತ್ತಿದ್ದಳು.

೧೦೦. ಋತವಃ ಷಟ್ ಸಮಾದಾಯ ಕುಸುಮಂ ಗಂಧಸಂಯುತಮ್ ।
ಪಂಚವರ್ಣಂ ಮಹೇಶಾರ್ಥೆ ಜಗ್ಮುಸ್ತೇ ಕಾಮಚಾರಿಣಃ ॥

ಹಂಸಪಕ್ಷಿಯಂತೆ ಕುಂದಕುಸುಮದಂತೆ ಚಂದ್ರಕಿರಣಗಳಂತೆ ಅಚ್ಚ ಬಿಳಿಬಣ್ಣದ್ದಿತ್ತು ಅವಳು ಬೀಸುವ ಬಿಳಿ ಚಾಮರ. ಆರೂ ಋತುಗಳು ಸುಗಂಧವಾಸನೆಯುಳ್ಳ ಐದು ಬಣ್ಣದ ಪಂಚರಂಗೀ ಪುಷ್ಪಗಳನ್ನು ಮಹಾದೇವರ ಮೇಲೆ ಎರಚುತ್ತ ಸ್ವೈರಗತಿಯಿಂದ ಹೊರಟಿದ್ದರು.

೧೦೧. ಗಂಧರ್ವಾಸ್ತುಂಬುರುಮುಖಾಃ ಗಾಯಂತೋ ಮಧುರಸ್ವರಮ್
ಅನುಜಗ್ಮುರ್ಮಹಾದೇವಂ ವಾದಯಂತಶ್ಚ ಕಿನ್ನರಾಃ ॥

ತನ್ನ ಅಭಿಮಾನಿ ದೇವತೆಯ ರೂಪದಿಂದ ಪೃಥೂದಕ ತೀರ್ಥವು ಎತ್ತರ ಐರಾವತ ದಂತಿರುವ ಮತ್ತಗಜವನ್ನು ಏರಿ ಚಂದನ ಗಂಧವನ್ನು ಹಿಡಿದುಕೊಂಡು ಶಿವನನ್ನು ಅನುಸರಿಸುತ್ತಿತ್ತು. ಆ ಹರನ ಹಿಂಬದಿಯಲ್ಲಿಯೇ ಗಂಧರ್ವರ ಗಾಯನ, ತುಂಬುರರ ತಂಬೂರಿ, ಕಿನ್ನರರ ಪಕ್ಕವಾದ್ಯ. ಹೀಗೆ ಮಧುರ ಸಂಗೀತದ ರಂಗಮಂಟಪವೇ ಸಾಗಿ ಬರುತ್ತಿತ್ತು. ಶಿವನ ಹಿಂದೆ

೧೦೨. ನೃತ್ಯಂತ್ಯಪ್ಸರಸಶ್ಚೈವ ಸ್ತುವಂತೋ ಮುನಯಸ್ತಥಾ ।
ಗಂಧರ್ವಾ ಯಾಂತಿ ದೇವೇಶಂ ತ್ರಿನೇತ್ರಂ ಶೂಲಪಾಣಿನಮ್॥

ಅವರ ಮುಂದೆಯೇ ಕುಣಿಯುವ ಅಪ್ಸರೆಯರು. ಸ್ತುತಿಸುವ ಮುನಿಗಳು, ಹಾಡುವ ಗಂಧರ್ವರು. ಪಾಡಿ ಪರಿಸುವ ಸಿದ್ಧ ತಾಪಸರು. ಎಲ್ಲರೂ ಶೂಲಪಾಣಿ ಮುಕ್ಕಣ್ಣನನ್ನು ಹೊಗಳಿ ಹಾಡಿ ಪಾಡಿ ಭಜಿಸಿ ಒಲಿದು ಉಲಿದು ನಲಿದಾಡುತ್ತ ನಡೆದಿದ್ದರು ಆ ಮದುವೆಯ ಮೆರವಣಿಗೆಯಲ್ಲಿ.

೧೦೩. ಅಸಂಖ್ಯಾತಾನಿ ಯಾನಾನಿ ಯಕ್ಷಕಿನ್ನರರಕ್ಷಸಾಮ್ ।
ಅನುಜಗ್ಮುರ್ಮಹೇಶಾನಂ ವಿವಾಹಾಯ ಸಮಾಕುಲಾಃ ॥

ಹನ್ನೊಂದು ಕೋಟಿ ರುದ್ರಗಣಗಳು ಆ ಮೆರವಣಿಗೆಯಲ್ಲಿ ಭಾಗವಹಿಸಿದ್ದರು. ದ್ವಾದಶ ಆದಿತ್ಯರ ನೇತೃತ್ವದಲ್ಲಿ ಹನ್ನೆರಡು ಕೋಟಿ ದೇವತೆಗಳೂ ಅಷ್ಟವಸುಗಳ ನೇತೃತ್ವದಲ್ಲಿ ಎಂಟು ಕೋಟಿ ದೇವತೆಗಳೂ, ಅರವತ್ತೇಳು ಕೋಟಿ ಪ್ರಮಥಗಣ ಗಳೊಂದಿಗೆ ಶಿವನ ಶೋಭಾಯಾತ್ರೆಯಲ್ಲಿ ಪಾಲುಗೊಂಡಿದ್ದರು. ಊರ್ಧ್ವರೇತಸ್ಕರಾದ ಬಾಲ ಬ್ರಹ್ಮಚಾರಿ ಋಷಿಪುಂಗವರು ಇಪ್ಪತ್ತು ನಾಲ್ಕು ಗುಂಪುಗಳಲ್ಲಿ ಪಾದಚಾರಿಗಳಾಗಿ ನಡೆದಿದ್ದರು. ಇವರಲ್ಲದೇ ಅಸಂಖ್ಯ ಯಕ್ಷರು ರಾಕ್ಷಸರು ಕಿನ್ನರರು ತಂಡೋಪತಂಡವಾಗಿ ಹಿಂಡುಹಿಂಡಾಗಿ ಮದುವೆಗೆ ಹೊರಟ ಮಹಾದೇವನ ಹಿಂದೆ ಬರುತ್ತಲಿದ್ದರು. ಎಲ್ಲರ ಮೈಯಲ್ಲಿಯೂ ಮದುವೆಯ ಮಹೋತ್ಸವದ ಹುರುಪು ತುಂಬಿತ್ತು. ಎಲ್ಲರ ಮುಖದ ಮೇಲೆಯೂ ಸಂಭ್ರಮ ಸಂತಸಗಳು ತುಳುಕುತ್ತಿದ್ದವು.

೧೦೪. ತತೋ ನನಾಮ ಭಗವಾನ್ ತ್ರಿನೇತ್ರಃ ಸ್ಥಾವರಾಧಿಪಮ್ ।
ಶೈಲಾಃ ಪ್ರಣೇಮುರೀಶಾನಂ ತತೋಽಸೌ ಮುದಿತೋಽಭವತ್॥

ಹೀಗೆ ಹೊರಟ ಮಹಾದೇವನು ಪರ್ವತಗಳ ಸಾರ್ವಭೌಮನಾದ ಹಿಮಾಚಲದ ಹತ್ತಿರ ಬಂದನು. ಇವರನ್ನೆಲ್ಲ ಸ್ವಾಗತಿಸಲು ಅನೇಕ ಪರ್ವತಾಭಿಮಾನಿ ಪುರುಷರು ಆನೆಗಳನ್ನು ಏರಿಕೊಂಡು ಅವಸರದಿಂದ ಬಂದರು. ಅನಂತರ ಮೂರುಗಣ್ಣಿನ ಮಹಾದೇವರು ಶೈಲಸಾಮ್ರಾಟನಾದ ಹಿಮಾಚಲನಿಗೆ ನಮಸ್ಕಾರ ಮಾಡಿದನು. ಅನಂತರ ಉಳಿದೆಲ್ಲ ಪರ್ವತಗಳೂ ತಮ್ಮ ತಮ್ಮ ಪರ್ವತಾಭಿಮಾನಿ ದೇವತೆಗಳ ಮುಖಾಂತರ ಮಹಾದೇವನಿಗೆ ನಮಸ್ಕರಿಸಿದವು. ಇದರಿಂದ ಶಂಕರನಿಗೆ ಅತ್ಯಂತ ಸಂತೋಷವಾಯಿತು. ಆ ಬಳಿಕ ಎತ್ತನ್ನು ಆರೋಹಣ ಮಾಡಿದ ಶಂಭುವು ಎಲ್ಲ ದೇವತೆಗಳಿಂದಲೂ ಹಾಗೂ ತನ್ನ ಅಕ್ಕಪಕ್ಕದಲ್ಲಿರುವ ಅನುಚರ ಗಣಗಳಿಂದಲೂ ಕೂಡಿಕೊಂಡು ಹಿಮಾಚಲದ ರಾಜಧಾನಿಯನ್ನು ಪ್ರವೇಶಿಸಿದರು. ನಂದೀಶ್ವರನು ಮುಂದೆ ಸಾಗಿ ಮಾರ್ಗದರ್ಶನ ಮಾಡಿಸುತ್ತಿದ್ದನು.

೧೦೫. ಜಿಮೂತಕೇತುರಾಯಾತ ಇತ್ಯೇವಂ ನಗರಸ್ತ್ರಿಯಃ
ನಿಜಕರ್ಮ ಪರಿತ್ಯಜ್ಯ ದರ್ಶನಾಯಾದೃತಾಭವನ್ ॥

ಆ ನಗರಾಜನ ನಗರದಲ್ಲಿ ಬರುತ್ತಲಿರುವ ಶಿವನನ್ನು ನೋಡಲು ಆ ಊರಿನ ನಾರಿಯರೆಲ್ಲ ತಮ್ಮ ತಮ್ಮ ಮನೆಗೆಲಸಗಳನ್ನು ಬಿಟ್ಟು ಧಾವಿಸಿ ಬಂದರು. "ಮೋಡಗಳ ಮೇಲೆ ಓಡಾಡುವವ ನಮ್ಮ ನಾಡಿನ ನೆಲದಲ್ಲಿ ನಡೆದು ಬರುತ್ತಲಿದ್ದಾನೆ. ಅವನನ್ನು ನೋಡಬೇಕು" ಎಂಬ ಕುತೂಹಲ ಆ ಕಾಮಿನಿಯರಿಗೆ.

೧೦೬. ಮಾಲ್ಯದಾಮ ಸಮಾದಾಯ ಕರೇಣೈಕೇನ ಭಾಮಿನೀ ।
ಕೇಶಪಾಶಂ ದ್ವಿತೀಯೇನ ಶಂಕರಾಭಿಮುಖೀ ಸತೀ ॥

ಹೆರಳು ಹಾಕಿಕೊಳ್ಳಲು ಹೋದ ಹೆಣ್ಣುಮಗಳೊಬ್ಬಳು ಬೀದಿಯಲ್ಲಿ ವರ ಬಂದಿದೆ ಎಂಬ ಸಮಾಚಾರ ಕೇಳಿ ಹಾಗೇ ಓಡಿ ಬಂದು ಹರನ ಮುಂದೆ ನಿಂತಳು. ಅವಳ ಒಂದು ಕೈಯಲ್ಲಿ ಹೂವಿನಮಾಲೆ, ಇನ್ನೊಂದು ಕೈಯಲ್ಲಿ ಮುಡಿಗೆದರಿದ ಹಿಡಿಕೂದಲು. ಬಾಚಣಿಕೆ.

೧೦೭. ಅನ್ಯಾ ಸರಶನಂ ನಾಸಃ ಪಾಣೇನಾದಾಯ ಸುಂದರೀ ।
ಉನ್ಮತ್ತೇವಾಗಮನ್ನಗ್ನಾ ಹರದರ್ಶನಲಾಲಸಾ ॥

ಇನ್ನೊಬ್ಬ ನಾರಿಯು ತನ್ನ ಒಂದು ಅಡಿದಾವರೆಗೆ ಅಲತಿಗೆ ರಸವನ್ನು ಬಳಿದು ಕೊಂಡು ಹಾಗೇ ಬೀದಿಗೆ ಬಂದಿದ್ದಳು. ಇನ್ನೊಂದು ಕಾಲು ಒಣ ಒಣಗಾಗಿಯೇ ಉಳಿದಿತ್ತು. ಮತ್ತೊಬ್ಬ ಮುಗುದೆಯು ಮಹಾದೇವರ ಮೆರವಣಿಗೆ ತನ್ನ ಮನೆಯ ಮುಂದೆ ಬಂದದ್ದನ್ನು ಕೇಳಿ ಕಡ್ಡಿ ಕಾಡಿಗೆ ಸಹಿತವಾಗಿಯೇ ಓಡಿ ಬಂದಳು. ಅವಳ ಒಂದು ಕಣ್ಣಿಗೆ ಅಂಜನದ ರಂಜನವಾಗಿದ್ದರೆ, ಇನ್ನೊಂದು ಕಣ್ಣು ಬರಿ ಬೆಳ್ಳಗೆ ಭಣ ಭಣ. ಮಗದೊಬ್ಬ ಮಾನಿನಿಯು ಸೀರೆಯುಡುವಾಗ ಶಿವ ಬಂದ ಎಂಬ ಸಮಾಚಾರವನ್ನು ಕೇಳಿ ಎಚ್ಚರವಿಲ್ಲದೇ ಒಂದು ಕೈಯಲ್ಲಿ ಬಟ್ಟೆ ಇನ್ನೊಂದು ಕೈಯಲ್ಲಿ ಬಂಗಾರದ ಪಟ್ಟಿ ಹಿಡಿದುಕೊಂಡು ಹುಟ್ಟಿದ ರೂಪದಲ್ಲಿಯೇ ಹರನನ್ನು ನೋಡಲು ಬಂದಳು.

೧೦೮. ಅನ್ಯಾತಿಕ್ರಾಂತಮೀಶಾನಂ ಶ್ರುತ್ವಾ ಸ್ತನಭರಾಲಸಾ ।
ಅನಿಂದತ ಕುಚೌ ಬಾಲಾ ಯೌವನಂ ಸ್ವಂ ಕೃಶೋದರೀ॥

ಇನ್ನೊಬ್ಬ ಅಬಲೆಯ ಪರಿಸ್ಥಿತಿ ಇನ್ನೂ ಶೋಚನೀಯ. ಮುಕ್ಕಣ್ಣನ ಮೆರವಣಿಗೆ ಬಂದಿದೆ ಎಂಬ ಸುದ್ದಿಯನ್ನು ಕೇಳಿದ ಕೂಡಲೇ ಅವಳು ನೋಡಲು ಭರದಿಂದ ಹೊರಟಳು. ಆದರೆ ಪರಿಪುಷ್ಟವಾದ ಎದೆಯ ಭಾರದಿಂದ ಆ ಹರೆಯದ ಹೆಣ್ಣಿಗೆ ಅವಸರದಿಂದ ಹೆಜ್ಜೆ ಇಡಲಿಕ್ಕೆ ಆಗದೇ ಶಿವನ ಸವಾರಿ ಮುಂದೆ ಹೋಗಿಬಿಟ್ಟಿತು. ಆಗ ದುಃಖಿತಳಾದ ಆ ತರಳೆಯು ತಾರುಣ್ಯವನ್ನು, ಉಬ್ಬಿದ ಎದೆಯನ್ನೂ ನಿಂದಿಸಿದಳು.

೧೦೯. ಇತ್ಥಂ ಸ ನಾಗರಸ್ತ್ರೀಣಾಂ ಕ್ಷೋಭಂ ಸಂಜನಯನ್ ಹರಃ
ಜಗಾಮ ವೃಷಭಾರೂಢಃ ದಿವ್ಯಂ ಶ್ವಶುರಮಂದಿರಮ್ ॥

ಹೀಗೆ ಚೆಲುವಿನ ಚಂದ್ರಮನಂತಿರುವ ಚಂದ್ರಚೂಡನನ್ನು ನೋಡಲು ತವಕಿಸುವ ಆ ಪರ್ವತ ಪಟ್ಟಣದ ಪ್ರಮದೆಯರಿಗೆಲ್ಲ ಸಂಭ್ರಮವೋ ಸಂಭ್ರಮ. ಸಂತಸವೋ ಸಂತಸ. ಹೀಗೆ ಸಡಗರದಿಂದ ಶಂಕರನು ತನ್ನ ವೃಷಭವಾಹನವನ್ನು ಆರೋಹಣ ಮಾಡಿ ಸುಂದರವಾದ ತಮ್ಮ ಮಾವನ ಮಂದಿರಕ್ಕೆ ಬಂದನು.

೧೧೦. ತತಃ ಪ್ರವಿಷ್ಟಂ ಪ್ರಸಮೀಕ್ಷ್ಯ ಶಂಭುಃ ।
ಶೈಲೇಂದ್ರವೇಶ್ಮನ್ಯಬಲಾ ಬ್ರುವಂತಿ ॥
ಸ್ಥಾನೇ ತಪೋ ದುಶ್ಚರಮಂಬಿಕಾಯಾ ।
ಶ್ಚೀರ್ಣಂ ಮಾಹಾನೇಷ ಸುರಸ್ತು ಶಂಭುಃ ॥

ಹಿಮಗಿರಿಯ ಅರಮನೆಯಲ್ಲಿ ಕಾಲಿರಿಸಿದ ಕೈಲಾಸಪತಿಯನ್ನು ಅಂತಃಪುರದ ಅಂಗನೆಯನ್ನು ನೋಡಿನುಡಿದರು-''ನಮ್ಮ ರಾಜಕುಮಾರಿ ಅಂಬಿಕೆಯುಸರಿಯಾದ ವರನನ್ನು ನೋಡಿಯೇವರಿಸಿದ್ದಾಳೆ. ಇಂಥದಿವ್ಯಸೌಂದರ್ಯವುಇವನಿಗೆಇದ್ದುದರಿಂದಲೇ ನಮ್ಮ ಕಾಳೀಕುಮಾರಿಯುಇವನಿಗಾಗಿತಪಸ್ಸು ಮಾಡಿದಳು. ಉಚಿತವಾಗಿತ್ತು ಅವಳ ಆ ತಪಸ್ಸು, ಆತಪಸ್ಸಿಗೆತಕ್ಕವನಾಗಿದ್ದಾನೆಈವರ. ದೇವಗಣದಲ್ಲಿಯೂಇವನಸ್ಥಾನ-ಮಾನ ಹಿರಿದಾದುದು. ಅದಕ್ಕಾಗಿಯೇಮಹಾದೇವಎಂದುಇವನಿಗೆಹೆಸರು.

೧೧೧. ಸ ಏಷ ಯೇನಾಂಗಮನಂಗತಾಂ ಕೃತಂ ।
ಕಂದರ್ಪನಾಮ್ನಃ ಕುಸುಮಾಯುಧಸ್ಯ ॥
ಕ್ರತೋಃ ಕ್ಷಯಿ ದಕ್ಷವಿನಾಶಕರ್ತಾ ।
ಭಗಾಕ್ಷಿಹಾ ಶೂಲಧರಃ ಪಿನಾಕೀ ॥

ಹೂವಿನ ಬಿಲ್ಲು ಬಾಣಗಳುಳ್ಳ ಕಾಮನ ಅಂಗಭಂಗವನ್ನುಂಟುಮಾಡಿ ಅವನನ್ನು ಅನಂಗನನ್ನಾಗಿ ಮಾಡಿದ ಧೀರನು ಇವನೇ. ದಕ್ಷ ಪ್ರಜಾಪತಿಯ ಯಜ್ಞವನ್ನು ವಿಧ್ವಂಸಗೊಳಿಸಿ ಭಗನ ಕಣ್ಣನ್ನು ಕೀಳಿದ ಇವನಿಗೆ ಶೂಲಧರ ಪಿನಾಕಿ ಎಂದು ಹೆಸರುಗಳು.

೧೧೨. ಇತ್ಥಂ ಸಂಸ್ತೂಯಮಾನಃ ಸುರಪತಿ ವಿಧ್ಯೇನಾತಪತ್ರೇಣ ಶಂಭುಃ
ಸಿದ್ಧೈರ್ವಿದ್ಯಸ್ವಕ್ಷೈರಹಿಕೃತವಲಯಃ ಚಾರುಭಸ್ಮೋಪಲಿಪ್ತಃ ।

**ಅಗ್ರಸ್ಥಾನಾಗ್ರಜೇನ ಪ್ರಮುದಿತಮನಸಾ ವಿಷ್ಣುನಾ ಚಾನುಗೇನ ।**
**ವೈವಾಹೀಂ ಮಂಗಲಾಢ್ಯಾಂ ಹುತವಹಸಹಿತಾಮಾರುರೋಹಾಥವೇದಿಮ್॥**

''ಹುಲಿದೊಗಲನ್ನು ಹೊದ್ದು ತ್ರಿಶೂಲವನ್ನು ಹಿಡಿದು ಕಾಲಾಂತಕನಾದ ಶಂಕರನಿಗೆ ನಮ್ಮ ನಮಸ್ಕಾರ. ಹಿರಿಹಾವುಗಳ ಹಾರ ಹಾಕಿಕೊಂಡು ಕೃಷ್ಣ ಸರ್ಪ ಕುಂಡಲಗಳನ್ನು ಧರಿಸಿದ ಈ ಪಾರ್ವತೀಪತಿಗೆ ನಮೋ ನಮಃ.'' ಹೀಗೆ ವಧೂಗೃಹಕ್ಕೆ ಬಂದ ಶಂಭುವನ್ನು ಕನ್ಯಾಂತಃಪುರದ ಕಾಮಿನಿಯರು ಹೊಗಳುತ್ತಿದ್ದರು. ಹಿಂದೆ ಇಂದ್ರನು ಬಿಡಿಸಿ ಹಿಡಿದ ಕೊಡೆ. ಮುಂದೆ ವಂದಿಸುವ ಸಿದ್ಧ ಸುರೇಶ್ವರರು. ಕೈತುಂಬ ಹಾವು. ಮೈತುಂಬ ಭಸ್ಮ. ಸಂತಸ ತುಂಬಿದ ಬ್ರಹ್ಮನನ್ನು ಮುಂದು ಮಾಡಿಕೊಂಡು ವಿಷ್ಣುವಿನ ಬೆಂಬಲ ಪಡೆದು ಆ ಮಹೇಶ್ವರನು ಯಜ್ಞಾಗ್ನಿ ಉರಿಯುತ್ತಿರುವ ಮದುವೆಯ ಮಂಗಳವೇದಿಕೆಯನ್ನು ಏರಿದನು.

೧೧೩. **ಆಯಾತಃ ತ್ರಿಪುರಾಂತಕಃ ಸಹಚರೈಃ ಸಾರ್ಧಂ ಚ ಸಪ್ತರ್ಷಿಭಿಃ**
**ವ್ಯಗ್ರೋಽಭೂದ್ಗಿರಿರಾಜವೇಶ್ಮನಿ ಜನಃ ಕನ್ಯಾ ಸಮಾಲಂಕೃತಾ।**
**ವ್ಯಾಕುಲ್ಯಂ ಸಮುಪಾಗತಾಶ್ಚ ಗಿರಯಃ ಪೂಜಾದಿನಾ ದೇವತಾಃ**
**ಪ್ರಾಯೋ ವ್ಯಾಕುಲಿತಾ ಭವಂತಿ ಸುಹೃದಃ ಕನ್ಯಾವಿವಾಹೋತ್ಸುಕಾಃ ॥**

ಸಪ್ತರ್ಷಿಗಳು ಹಾಗೂ ತನ್ನ ಅನುಚರರೊಂದಿಗೆ ಶಂಕರನು ವಿವಾಹ ವೇದಿಕೆಗೆ ಬರುತ್ತಲಿದ್ದಾನೆ ಎಂಬ ಸಮಾಚಾರವನ್ನು ಕೇಳಿಯೇ ಅರಮನೆಯ ಅಂತಃಪುರದಲ್ಲಿ ಕನ್ಯೆಯನ್ನು ಅಲಂಕರಿಸಿ ಸಿಂಗರಿಸತೊಡಗಿದ ಸಖೀ ಸೇವಿಕೆಯರಲ್ಲಿ ಒಮ್ಮೆಲೇ ಗಡಿಬಿಡಿ ಉಂಟಾಯಿತು. ವ್ಯವಸ್ಥಾಪಕ ಗಿರಿಗಳೆಲ್ಲ ವ್ಯಾಕುಲಗೊಂಡವು. ವೈವಾಹಿಕ ಪೂರ್ವಭಾವಿ ಪೂಜಾದಿಗಳನ್ನು ಮಾಡುತ್ತಲಿರುವ ದೇವತೆಗಳು ಸಂಭ್ರಮಗೂಡಿದರು. ಕನ್ಯೆಯ ವಿವಾಹದಲ್ಲಿ ಉತ್ಸುಕಿತರಾದ ಪರಿವಾರ ವರ್ಗದಲ್ಲಿ ಅಕ್ಷತಾರೋಪಣ ಸಮಯವು ಸಮೀಪಿಸಿದಾಗ ಇಂಥ ಗೊಂದಲ ಗಡಿಬಿಡಿಗಳು ಉಂಟಾಗುವದು ಸಹಜವೇ ತಾನೆ? ಅನಂತರ ಹೆಂಗಳೆಯರು ಆ ಮಂಗಳಾಂಗಿಯನ್ನು ಪಟ್ಟೆ ಪೀತಾಂಬರ ಆಭರಣ ಅಲಂಕಾರಗಳಿಂದ ಶೃಂಗರಿಸಿದರು. ಆ ಮಹೋತ್ಸವದಲ್ಲಿ ಮಂಗಳವಾದ್ಯಗಳು ಮೊಳಗುತ್ತಿರುವಾಗ ಸೋದರ ಸುನಾಭನು ಬಳ್ಳಿಮೈಯಿಂದ ಬಳುಕುವ ಆ ಬಾಲೆಯನ್ನು ಶಂಕರನ ಸಮೀಪಕ್ಕೆ ಕರೆತಂದನು.

೧೧೪. **ತತಃ ಶುಭೇ ಹರ್ಮ್ಯತಲೇ ಹಿರಣ್ಮಯೇ ।**
**ಸ್ಥಿತಾಃ ಸುರಾಃ ಶಂಕರಕಾಲಿಚೇಷ್ಟಿತಮ್ ॥**
**ಪಶ್ಯಂತಿ ದೇವ್ಯೋಽಪಿ ಸಮಂ ಕೃಶಾಂಗ್ಯಾ ।**
**ಲೋಕಾನುಜುಷ್ಟಂ ಪದಮಾಸಸಾದ ॥**

ಅನಂತರ ಅರಮನೆಯ ಹೊನ್ನಿನ ಉಪ್ಪರಿಗೆಯ ಮೇಲೆ ಕುಳಿತುಕೊಂಡು ದೇವತೆಗಳು ನವವಧೂ-ವರರಾದ ಶಿವಸತಿಯರ ಶೃಂಗಾರ ಚೇಷ್ಟೆಯನ್ನು ಕೌತುಕದಿಂದ ನಿರೀಕ್ಷಿಸುತ್ತಲಿದ್ದರು. ಆ ದೇವ ದೇವಿಯರಿಬ್ಬರೂ ಲೋಕ ವಿಡಂಬನೆ ಗೈಯುತ್ತ ಕಡೆ ನೋಟ ಕುಡಿ ನೋಟಗಳಿಂದ ನೋಡಿ ಮಂದಹಾಸ ಮಾಡಿ ನಾಚಿ ಸಕ್ಕುನಲಿದು ಉಲಿದಾಡಿದರು.

೧೧೫. ಯತ್ರ ಕ್ರೀಡಾವಿಚಿತ್ರಾಃ ಸಕುಸುಮತರವೋ ವಾರಿಣೋ ಬಿಂದುಪಾತೈಃ।
ಗಂಧಾಢ್ಯೈಃ ಗಂಧಚೂರ್ಣೈಃಪ್ರವಿರಲಮವನೌ ಗುಂಠಿತೈರ್ಗುಂಡಿಕಾಯಾಂ ॥
ಮುಕ್ತಾದಾಮ್ನೈಃ ಪ್ರಕಾಮಂ ಹರಗಿರಿತನಯಾಕ್ರೀಡನಾರ್ಥಂ ತದಾಘ್ನನ್
ಪಶ್ಚಾತ್ ಸಿಂಧೂರಪುಂಜೈರವಿರತವಿತತೈಶ್ಚಕ್ರತುಃ ಕ್ಷ್ಮಾಂ ಸುರಕ್ತಾಮ್ ॥

ಆಗ ಆ ವಿವಾಹ ಮಂಟಪದಲ್ಲಿ ಹರ ಪಾರ್ವತಿಯರ ವಿಹಾರಕ್ಕೆ ತಕ್ಕಂತೆ ವಿವಿಧ ಕ್ರೀಡಾ ಭವನಗಳೂ, ಕುಸುಮಿತವಾದ ವೃಕ್ಷಗಳೂ, ಜಲ ಯಂತ್ರಗಳೂ ಸುಗಂಧಿ ಚೂರ್ಣಗಳಿಂದ ಕೂಡಿದ ತೆಗ್ಗು ತವರಿನ ಭೂಪ್ರದೇಶಗಳೂ ಮುತ್ತಿನ ಮಾಲೆಗಳಿಂದ ಕೂಡಿದ ವಿಹಾರ ಸ್ಥಳಗಳೂ ನಿರ್ಮಿಸಲ್ಪಟ್ಟವು. ಆ ವಿಹಾರ ಭವನಗಳ ಸುತ್ತಲೂ ಹಿಡಿಹಿಡಿಯಾಗಿ ಕೆಂಪುಡಿಯನ್ನು ಚಿಮುಕಿಸಿ ನೆಲವೆಲ್ಲವೂ ಪರಾಗ ರಂಗಿತವಾಗುವಂತೆ ಮಾಡಲಾಗಿತ್ತು. ಅಲ್ಲಿಲ್ಲ ಶಿವನು ಆ ಗಿರಿಬಾಲೆಯೊಂದಿಗೆ ಲೀಲಾ ವಿನೋದವನ್ನು ಮಾಡಿ ಋಷಿಗಳು ಕುಳಿತಿರುವ ದಕ್ಷಿಣ ವೇದಿಕೆಗೆ ಬಂದನು.

ಆಗ ಹಿಮಗಿರಿಯು ಶುಚಿರ್ಭೂತನಾಗಿ ಬಿಳಿಬಟ್ಟೆಯುಟ್ಟು, ಬೆರಳಿಗೆ ಪವಿತ್ರ ಇಟ್ಟು ಮಧುಪರ್ಕವನ್ನು ಹಿಡಿದುಕೊಂಡು ಬಂದನು. ಶಿವನು ಪೂರ್ವಾಭಿಮುಖನಾಗಿ ಕುಳಿತನು. ಹಿಮವಂತನು ಆಸನದ ಮೇಲೆ ಕುಳಿತುಕೊಂಡು ಸಪ್ತರ್ಷಿಗಳಿಗೆ ಗೌರವದ ದೃಷ್ಟಿಯಿಂದ ನೋಡಿ ನಮಿಸಿ ಕೈಜೋಡಿಸಿ ಶಂಕರನನ್ನು ಉದ್ದೇಶಿಸಿ ತನ್ನ ಧರ್ಮ ಸಾಧನೆಗೆ ಅನುಗುಣವಾಗಿ ಈ ಮಾತನ್ನು ಹೇಳಿದನು.

೧೧೬. ಮತ್ಸುತಾಂ ಭಗವನ್ ಕಾಲೀಂ ಪೌತ್ರೀಂ ಚ ಪುಲಹಾಗ ಜೇ ।
ಪಿತೃಣಾಮಪಿ ದೌಹಿತ್ರೀಂ ಪ್ರತೀಚ್ಛೇಮಾಂ ಮಯೋದಿತಾಮ್ ॥

''ಬ್ರಹ್ಮದೇವರ ಮೊಮ್ಮಗಳೂ, ಪಿತೃಗಳ ದೌಹಿತ್ರಿಯೂ, ನನ್ನ ಮಗಳೂ ಆದ ಈ ಕಾಲಿಯನ್ನು ಪೂಜ್ಯನಾದ ಶಿವನೇ, ನಾನು ನಿನಗೆ ಕೊಡುತ್ತೇನೆ. ನೀನು ಇವಳನ್ನು ಸ್ವೀಕರಿಸು.''

೧೧೭. ಇತ್ಯೇವಮುಕ್ತ್ವಾ ಶೈಲೇಂದ್ರೋ ಹಸ್ತಂ ಹಸ್ತೇನ ಯೋಜಯನ್ ।
ಪ್ರಾದಾತ್ಪ್ರತೀಚ್ಛ ಭಗವನ್ ಇದಮುಚ್ಚೈರುದೀರಯನ್ ॥

ಹೀಗೆ ಹೇಳಿ ಶೈಲರಾಜನು ಹರ ಪಾರ್ವತಿಯರ ಕೈ ಕೈ ಕೂಡಿಸಿದನು. ಮಗಳ ಕೈಯನ್ನು ಮಹೇಶ್ವರನ ಕೈಯಲ್ಲಿರಿಸುತ್ತ ''ಭಗವಂತನೇ, ಈ ಕನ್ನಿಕೆಯ ಕೈಹಿಡಿದು ಕಾಪಾಡು'' ಎಂದು ಗಟ್ಟಿಯಾಗಿ ದೊಡ್ಡ ದನಿಯಿಂದ ಉದ್ಘೋಷಿಸಿದನು.

೧೧೮. ನ ಮೇಽಸ್ತಿ ಮಾತಾ ನ ಪಿತಾ ತಥೈವ ।
ನ ಜ್ಞಾತಯೋ ವಾಪಿ ಚ ಬಾಂಧವಾದ್ಯಾಃ ।
ನಿರಾಶ್ರಯೋಽಹಂ ಗಿರಿಶೃಂಗವಾಸೀ ।
ಸುತಾಂ ಪ್ರತೀಚ್ಛಾಮಿ ತವಾದ್ರಿರಾಜ ॥

**ಮಹಾದೇವ** - ''ನನಗೆ ತಾಯಿ ಇಲ್ಲ. ತಂದೆ ಇಲ್ಲ. ಬಂಧುಗಳಿಲ್ಲ ಜ್ಞಾತಿಗಳೂ ಇಲ್ಲ. ಇರಲು ಮನೆಯೂ ಇಲ್ಲ. ಆದುದರಿಂದ ನಿಲ್ಲಲು ನೆಲೆಇಲ್ಲದ ನಾನು ಬೆಟ್ಟದ

ತುದಿಯಲ್ಲಿ ಶಿಖರದ ಬದಿಯಲ್ಲಿ ವಾಸಿಸುತ್ತೇನೆ. ಅಡವಿಗಳ ಅರಸನೇ, ಇಂಥ ನಾನು ನಿನ್ನ ಮಗಳನ್ನು ಪತ್ನಿಯೆಂದು ಸ್ವೀಕರಿಸಿದ್ದೇನೆ.''

೧೧೯. ಇತ್ಯೇವಮುಕ್ತೋ ವರದೋऽ ವಪೀಡಯತ್ ।
ಕರಂ ಕರೇಣಾದ್ರಿಕುಮಾರಿಕಾಯಾಃ ॥
ಸಾ ಚಾಪಿ ಸಂಸ್ಪರ್ಶಮವಾಪ್ಯ ಶಂಭೋಃ ।
ಪರಾಂ ಮುದಂ ಲಬ್ಧವತೀ ಸುಖೇನ ॥

ಹೀಗೆ ಹೇಳಿ ಬೇಡಿದ ವರ ನೀಡುವ ಹರನು ಶೈಲ ಕುಮಾರಿಯ ಕೈಯನ್ನು ತನ್ನ ಕೈಯಿಂದ ಮಿದುವಾಗಿ ಹಿಡಿದು ಒತ್ತಿದನು. ಪಾರ್ವತಿಯೂ ಕೂಡ ಶಂಕರನ ಸುಖಕರವಾದ ದೇಹಸ್ಪರ್ಶದಿಂದ ಪರಮಾನಂದವನ್ನು ಹೊಂದಿದಳು. ಹಾಗೆ ವಿವಾಹ ವೇದಿಕೆಯನ್ನು ಹತ್ತಿದ ಶಂಕರನು ಗಿರಿಜೆಯೊಡನೆ ಮಧುಪರ್ಕವನ್ನು ಸೇವಿಸಿ ಭತ್ತರಳುಗಳನ್ನು ಹಾರಿಸಿದನು. ಆಗ ಚತುರ್ಮುಖನು ಆ ಗಿರಿಬಾಲೆಗೆ ಹೇಳಿದನು.

೧೨೦. ತತೋಽಂಬಿಕಾ ಹರಮುಖೇ ದೃಷ್ಟೇಶ್ಯೈತ್ಯಮುಪಾಗತಾ ।
ಯಥಾರ್ಕ ರಶ್ಮಿ ಸಂತಪ್ತಾ ಪ್ರಾಪ್ಯ ವೃಷ್ಟಿಮಿವಾವನಿಃ ॥

''ಕಾಲಿ, ಚಂದ್ರನಂತೆ ಚಲುವಾದ ಶಿವನ ಸುಂದರ ಮುಖವನ್ನು ನೋಡು. ಸಮದೃಷ್ಟಿಯಿಂದ ಶಂಕರನನ್ನು ನೋಡಿ ಶಾಂತತೆಯಿಂದ ಅಗ್ನಿ ಪ್ರದಕ್ಷಿಣೆಯನ್ನು ಮಾಡು.'' ಆಗ ಅಂಬಿಕೆಯು ಮಹಾದೇವನ ಮುಖವನ್ನು ನೋಡಿದಳು. ಬಿಸಿಲಿನಿಂದ ಬೆಂದುಹೋದ ಭೂಮಿಗೆ ಮಳೆ ಬಂದಂತಾಯಿತು. ಶಿವ ದರ್ಶನ ಮಾತ್ರದಿಂದಲೇ ಶೈಲ ಬಾಲೆಗೆ ತಂಪು ತಣಿವುಗಳು ಉಂಟಾದವು.

೧೨೧. ಭೂಯಃ ಪ್ರಾಹವಿಭೋರ್ವಕ್ತ್ರಮೀಕ್ಷಸ್ವೇತಿ ಪಿತಾಮಹ ।
ಲಜ್ಜಯಾ ಸಾಪಿ ದೃಷ್ಟೇತಿಶನೈಬ್ರಹ್ಮಾಣಮಬ್ರವೀತ್ ॥

ಮತ್ತೆ ಬ್ರಹ್ಮದೇವರು ಪಾರ್ವತಿಗೆ 'ಪರಮೇಶ್ವರನ ಮುಖವನ್ನು ನೋಡು' ಎಂದು ಹೇಳಿದನು. ಅವಳು ನಾಚಿಕೆಯಿಂದ 'ನೋಡಿದ್ದೇನೆ' ಎಂದು ಮೆಲ್ಲನೇ ನುಡಿದಳು. ಅನಂತರ ಧೂರ್ಜಟಿಯು ಗಿರಿಜೆಯೊಡನೆ ಮೂರು ಸಲ ಅಗ್ನಿ ಪ್ರದಕ್ಷಿಣೆಯನ್ನು ಮಾಡಿ ಹವಿಸ್ಸಿನೊಡನೆ ಭತ್ತರಳುಗಳನ್ನು ಅಗ್ನಿಯಲ್ಲಿ ಹೋಮಮಾಡಿದನು. ಆಗ ಕಾಳಿಯ ಗೆಳತಿಯಾದ ಮಾಲಿನಿಯು ಪಾರಿತೋಷಕವನ್ನು ಪಡೆಯಲು ಶಿವನ ಕಾಲನ್ನು ಹಿಡಿದಳು. ಆಗ ಹರನು ''ಮಾಲಿನೀ, ನೀನು ಕೇಳಿದ್ದನ್ನು ಕೊಡುತ್ತೇನೆ, ನನ್ನನ್ನು ಬಿಡು'' ಎಂದು ಹೇಳಿದನು. ಆಗ ಮಾಲಿನಿಯು ಶಂಕರನಿಗೆ ''ನನ್ನ ಗೆಳತಿಯ ಸೌಭಾಗ್ಯವನ್ನು ನನ್ನ ವಂಶಕ್ಕೆ ತಕ್ಕಂತೆ ನನಗೂ ದಯಪಾಲಿಸು. ಅಂದರೆ ಮಾತ್ರ ನಾನು ನಿನ್ನ ಕಾಲನ್ನು ಬಿಡುವೆನು.''

೧೨೨. ಯೋऽಸೌ ಪೀತಾಂಬರಧರಃ ಶಂಖಧೃಕ್ ಮಧುಸೂದನಃ
ಏತದೀಯಂ ಹಿ ಸೌಭಾಗ್ಯಂ ದತ್ತಂ ಮದ್ಗೋತ್ರಮೇವ ಹಿ ॥

ಆಗಮಹಾದೇವನು ನಿನ್ನ ಗೆಳತಿಯ ಸೌಭಾಗ್ಯವನ್ನು ನಿನಗೂ ಕೊಟ್ಟಿದ್ದೇನೆ. ಅವಳ ವಂಶಪರಂಪರೆಯಸೌಭಾಗ್ಯವೆಂದರೆ ಪೀತಾಂಬರಧಾರಿಯಾದ ಶಂಖಚಕ್ರಗಳನ್ನು ಧರಿಸಿದ

ಆಮಧುಸೂಧನನೇಸರಿ. ಭಗವದ್ ಭಕ್ತಿಯುನನಗೂಪಾರ್ವತಿಗೂಪಿತೃಪರಂಪರೆಯಿಂದ ಬಳುವಳಿಯಾಗಿಬಂದಮಹಾಭಾಗ್ಯವಾಗಿದೆ. ಇದನ್ನೇನಿನಗೂನಾನುಕೊಡುತ್ತೇನೆ.

೧೨೩. ಯದಾ ಹರೋ ಹಿ ಮಾಲಿನ್ಯಾ ಗೃಹೀತಃ ಚರಣೇ ಶುಭೇ ।
ತದಾ ಕಾಲೀಮುಖಂ ಬ್ರಹ್ಮದದರ್ಶ ಶಶಿನೋಽಧಿಕಮ್ ॥

ಮಹಾದೇವನು ಹೀಗೆ ವಚನ ಕೊಡಲು ಮಾಲಿನಿಯು ಅವನ ಪಾದಗಳನ್ನು ಬಿಟ್ಟಳು. ಶಿವನ ಈ ವರದಿಂದ ಅವಳ ವಂಶದಲ್ಲಿ ಒಳ್ಳೆ ಶೀಲ ಭಕ್ತಿ ಚಾರಿತ್ರ್ಯಗಳು ಸಾಲು ಸಾಲಾಗಿ ಸರಗಟ್ಟಿ ಬೆಳಗುವಂತಾಯಿತು. ಮಾಲಿನಿಯು ಶಿವನ ಪಾದಗಳನ್ನು ಹಿಡಿದಾಗ ಪಾರ್ವತಿಯ ಮುಖವು ಮಂದಹಾಸ ದಿಂದ ಸುಂದರವಾಗಿ ಚಂದ್ರನಿಗಿಂತ ಚಲುವಾಗಿ ಕಂಡಿತು.

೧೨೪. ತದ್ ದೃಷ್ಟ್ವಾ ಮೋಹಮಗಮತ್ ಶುಕ್ರಚ್ಯುತಿಮವಾಪ ಹ ।
ತಚ್ಛುಕ್ರಂ ವಾಲುಕಾಯಾಂ ಚ ಖಲೀಚಕ್ರೇ ಸಸಾಧ್ವಸಃ ॥

ಈ ಸಂದರ್ಭದಲ್ಲಿ ಚತುರ್ಮುಖನು ಕಾಳಿಯ ಆ ಚಾರುಮುಖವನ್ನು ನೋಡಿದನು. ಅದರ ಚಲುವು ಚಾರಿಮೆಯನ್ನು ಕಂಡು ವಿರಿಂಚಿಯ ಮನಸ್ಸು ಚಂಚಲವಾಯಿತು. ಮರಳಿನಲ್ಲಿ ನಿಂತಲ್ಲಿಯೇ ಅವನಿಗೆ ವೀರ್ಯ ಪಾತವಾಯಿತು. ಆಗ ಭಯಭ್ರಾಂತನಾದ ಬ್ರಹ್ಮನು ಅದನ್ನು ಕಾಲಿನಿಂದ ಉಸುಕಿನಲ್ಲಿ ಹೊಸೆದು ತುಳಿದು ಛಿದ್ರ ಛಿದ್ರವಾಗಿ ಮಾಡಿದನು. ಅದು ಹರನ ಕಣ್ಣಿಗೆ ಬಿತ್ತು. ಕೂಡಲೇ ಅವನು ವಿಧಾತನಿಗೆ -

೧೨೫. ತತೋಽಬ್ರವೀದ್ ಹರೋ ಬ್ರಹ್ಮನ್ ನ ದ್ವಿಜಾನ್ ಹಂತುಮರ್ಹಸಿ।
ಅಮೀ ಮಹರ್ಷಯೋ ಧನ್ಯಾಃ ವಾಲಖಿಲ್ಯಾಃ ಪಿತಾಮಹ ॥

"ಪಿತಾಮಹನೇ, ನಿನ್ನ ವೀರ್ಯವನ್ನು ಒದೆದು ಒಡೆದು ಮರಳು ಕಣಗಳಲ್ಲಿ ತುಳಿದು ತುಣುಕು ಮಾಡಿ ಹಾಳು ಮಾಡಬೇಡ. ಅದರಿಂದ ವಾಲಖಿಲ್ಯ ಎಂಬ ಮಹರ್ಷಿಗಳು ಮೈದಾಳಿದ್ದಾರೆ. ಮರಳು ರಾಶಿಯಲ್ಲಿ ಮಗುಚಿ ಹಾಕಿ ಮುನಿಗಳನ್ನು ಸಂಹರಿಸುವದು ನಿನಗೆ ಯೋಗ್ಯವಲ್ಲ."

೧೨೬. ತತೋ ಮಹೇಶವಾಕ್ಯಾಂತೇ ಸಮುತ್ತಸ್ಥುಃ ತಪೋಧನಾಃ ।
ಅಷ್ಟಾಶೀತಿಸಹಸ್ರಾಣಿ ವಾಲಖಿಲ್ಯಾ ಇತಿ ಸ್ಮೃತಾಃ ॥

ಮಹೇಶನ ಮಾತು ಮುಗಿಯುವಷ್ಟರಲ್ಲಿ ಮಳಲು ರಾಶಿಯಿಂದ ಎಂಬತ್ತೆಂಟು ಸಾವಿರ ಮುನಿಗಳು ಎದ್ದು ನಿಂತರು. ವಾಲುಕೆಯಲ್ಲಿ ಎಂದರೆ ಉಸುಕಿನಲ್ಲಿ ಖಿಲರಾಗಿ ಎಂದರೆ ಛಿದ್ರ ಛಿದ್ರವಾಗಿ ಹುಟ್ಟಿ ಬಂದದ್ದರಿಂದ ಅವರಿಗೆ ವಾಲಖಿಲ್ಯ ಎಂಬ ಹೆಸರು ಬಂದಿತು. ಹೀಗೆ ವಿವಾಹ ಸಮಾರಂಭವು ಸಂಭ್ರಮದಿಂದ ಮುಕ್ತಾಯವಾಯಿತು. ಕಂಕಣ ಕಟ್ಟಿಕೊಂಡ ಪರಮೇಶ್ವರನು ಉಮೆಯೊಂದಿಗೆ ಪ್ರಥಮ ರಾತ್ರಿಯಲ್ಲಿ ಆನಂದದಿಂದ ವಿಹರಿಸಿದನು. ಸುಪ್ರಭಾತವಾಯಿತು. ಶಿವನು ಶೈಯ್ಯಾಗಾರದಿಂದ ಹೊರಬಿದ್ದನು. ಶೈಲಸುತೆಯೊಡನೆ ಪ್ರಸನ್ನ ಮನಸ್ಸಿನಿಂದ ಪಶುಪತಿಯು ಹಿಮಾಲಯನ ಬಳಿಗೆ ಬಂದನು.

೧೨೭. ತತೋಽದ್ರಿಪುತ್ರೀಂ ಸಮವಾಪ್ಯ ಶಂಭುಃ ।
ಸರ್ವೈಃ ಸಮಃ ಭೂತಗಣೈಶ್ಚ ಹೃಷ್ಟಃ ॥

**ಸಂಪೂಜಿತಃ ಪರ್ವತಪಾರ್ಥಿವೇನ ।**
**ಸ್ವಮಂದಿರಂ ಶೀಘ್ರಮುಪಾಜಗಾಮ ॥**

ಪರ್ವತೇಶ್ವರನು ಪ್ರಮಥಪರಿವಾರ ಸಹಿತನಾದ ಪರಮೇಶ್ವರನನ್ನು ಆದರದಿಂದ ಪೂಜಿಸಿದನು. ಅನಂತರ ಆ ಹರನು ಪಾರ್ವತಿಯನ್ನು ಕರೆದುಕೊಂಡು ಹಿಮಾಲಯದಿಂದ ಹೊರಟು ತನ್ನ ಮಂದಿರವಿರುವ ಮಂದರಾಚಲಕ್ಕೆ ಬಂದನು. ಅಲ್ಲಿ ಬ್ರಹ್ಮ, ವಿಷ್ಣು, ಇಂದ್ರನೇ ಮೊದಲಾದ ದೇವತೆಗಳನ್ನೆಲ್ಲ ಅವರವರ ಯೋಗ್ಯತಾನುಸಾರವಾಗಿ ನಮಸ್ಕರಿಸಿ ಪೂಜಿಸಿ ಆದರಿಸಿ ಗೌರವಿಸಿ ಬೀಳ್ಕೊಟ್ಟನು. ಅನಂತರ ತಾನು ತನ್ನ ಭೂತಗಣದೊಂದಿಗೆ ಆ ಮಂದರ ಗಿರಿಯಲ್ಲಿಯೇ ಅಷ್ಟಮೂರ್ತಿಯಾಗಿ ವಾಸಮಾಡಿದನು.

ವಾಮನ ಮಹಾಪುರಾಣದಲ್ಲಿ ಶಿವನ ಶೋಭಾಯಾತ್ರೆ ಎಂಬ
ಐವತ್ತಮೂರನೇಯ ಅಧ್ಯಾಯವು ಮುಗಿದುದು

—o—

## ಗಿರಿಕನ್ಯೆಯ ಜನ್ಮಾಂತರ

**ಅಧ್ಯಾಯ - ೫೪**

**"ತತೋ ಗಿರೌ ವಸುಃ ರುದ್ರಃ ಸ್ವೇಚ್ಛಯಾ ವಿಚರನ್ ಮುನೇ ।**
**ವಿಶ್ವಕರ್ಮಾಣಮಾಹೂಯ ಅವೋಚತ್ ಕುರು ಮೇ ಗೃಹಮ್ ॥**

ಅನಂತರ ಮಂದರಗಿರಿಯಲ್ಲಿ ನೆಲೆಸಿ ಸ್ವಚ್ಛಂದವಾಗಿ ಶಂಕರನು ಸಂಚರಿಸುತ್ತಿದ್ದನು. ಒಂದು ದಿನ ಅವನು ದೇವತೆಗಳ ಬಡಿಗನಾದ ವಿಶ್ವಕರ್ಮನನ್ನು ಕರೆದು "ನನಗೊಂದು ಮನೆಯನ್ನು ನಿರ್ಮಿಸು" ಎಂದು ಹೇಳಿದನು. ಅವನ ಅಪ್ಪಣೆಯಂತೆ ವಿಶ್ವಕರ್ಮನು ಸ್ವಸ್ತಿಕ ಲಕ್ಷಣವುಳ್ಳ ಅರವತ್ತು ನಾಲ್ಕು ಯೋಜನ ಪ್ರಮಾಣದ ಸುವರ್ಣ ಮಂದಿರವನ್ನು ನಿರ್ಮಿಸಿದನು.

**೧೨೮. ಪಂಚತೋರಣನಿರ್ಯೂಹಂ ಮುಕ್ತಾಕಾಲಾಂತರಂ ಶುಭಮ್**
**ಶುದ್ಧಸ್ಫಟಿಕಸೋಪಾನಂ ವೈಡೂರ್ಯಕೃತರೂಪಕಮ್ ॥**
**ಸಪ್ತಕಕ್ಷಂ ಸುವಿಸ್ತೀರ್ಣಂ ಸರ್ವಂ ಸಮುದಿತಂ ಗುಣೈಃ ॥**

ಐದು ಬಾಗಿಲುಗಳು ಆ ಮನೆಗೆ. ಎಲ್ಲ ಬಾಗಿಲುಗಳಿಗೂ ಇಂದ್ರಚಾಪದ ತೋರಣ, ಕಿಟಕಿಗಳಿಗೆಲ್ಲ ಮುತ್ತಿನ ಪರದೆ. ಅಲ್ಲಲ್ಲಿ ವೈಢೂರ್ಯದ ಬೊಂಬೆಗಳನ್ನು ಮಾಡಿ ನಿಲ್ಲಿಸಲಾಗಿತ್ತು. ಮೇಲು ಮಾಳಿಗೆಗೆ ಸ್ಫಟಿಕದ ಮೆಟ್ಟಲುಗಳು, ಏಳು ತೊಟ್ಟಿಗಳುಳ್ಳ ಆ ದಿವ್ಯಭವನವು ಬೃಹದಾಕಾರವೂ ಆಗಿತ್ತು. ಸೌಕರ್ಯ, ಸೌಂದರ್ಯ, ಸ್ವಚ್ಛತೆ, ಮಾಂಗಲ್ಯ ಮುಂತಾದ ಒಳ್ಳೆ ಮನೆಯ ಲಕ್ಷಣಗಳೆಲ್ಲವೂ ಅಲ್ಲಿ ಎದ್ದು ತೋರುತ್ತಿದ್ದವು. ಇಂಥ ಮಹಾನ್ ಮಂದಿರದಲ್ಲಿ ಆ ದೇವ ಕುಲಲಲಾಮನು ಯಜ್ಞವನ್ನು ಪ್ರಾರಂಭಿಸಿದನು. ಯಜ್ಞವೇ ಗೃಹಸ್ಥ ಜೀವನದ ಲಕ್ಷಣವಲ್ಲವೇ! ಹೀಗೆ ಆ ತ್ರಿಲೋಚನನು ಮಡದಿಯೊಡನೆ ಮನೆ ಮಾಡಿಕೊಂಡು ಸುಖವಾಗಿ ಇದ್ದನು.

೧೨೯. ರಮತಃ ಸಹ ಪಾರ್ವತ್ಯಾ ಧರ್ಮಾವೇಕ್ಷೀ ಜಗತ್ಪತಿಃ ।
ತತಃ ಕದಾಚಿದ್ಬ್ರಹ್ಮಾರ್ಥಂ ಕಾಲೀತ್ಯುಕ್ತಾ ಭವೇನ ಹಿ ॥
ಪಾರ್ವತೀ ಮನ್ಯುನಾವಿಷ್ಟಾ ಶಂಕರಂ ವಾಕ್ಯಮಬ್ರವೀತ್ ॥

ಬಹು ದೀರ್ಘಕಾಲವು ಕಳೆಯಿತು. ಹೀಗೆ ಪಾರ್ವತಿಯೊಡನೆ ಪರಮೇಶ್ವರನು ವಿವಿಧ ಕೇಲೀವಿಲಾಸಗಳನ್ನು ಮಾಡುತ್ತ ವಿಹಾರ ವಿನೋದಗಳಿಂದ ಸಂತೋಷದಲ್ಲಿ ಕಾಲ ಕಳೆಯುತ್ತಿರುವಾಗ ಒಂದು ದಿನ ಶಂಕರನು ಯಾವುದೋ ಧರ್ಮಕಾರ್ಯಕ್ಕಾಗಿ ಮಡದಿಯನ್ನು ಕರೆಯುವ ಸಂದರ್ಭದಲ್ಲಿ ಪಾರ್ವತಿಯು ಮೈಬಣ್ಣವನ್ನು ಅನುಲಕ್ಷಿಸಿ ''ಕಾಳೀ'' ಎಂದು ಕರೆದನು. ''ತನ್ನ ಕಪ್ಪುಬಣ್ಣವನ್ನು ಕಂಡು ಮೂದಲಿಸಿ ಮಾತನಾಡಿದ್ದಾನೆ, ತನ್ನ ಮನದನ್ನ'' ಎಂದು ಪಾರ್ವತಿಗೆ ಬಹಳ ಸಿಟ್ಟು ಬಂದಿತು. ಅವಳು ರೋಷದುಂಬಿ ನುಡಿದಳು-

೧೩೦. ಸಮರೋಹತೀಷುಣಾ ವಿದ್ಧಂ ವನಂ ಪರಶುನಾ ಹತಮ್ ॥

''ಕೊಡಲಿಯಿಂದ ಕಡಿದರೆ ವನವು ಮತ್ತೆ ಬೆಳೆಯುತ್ತದೆ. ಬಾಣದಿಂದ ಕತ್ತರಿಸಿದರೆ ಮರವು ಪುನಃ ಚಿಗುರುತ್ತದೆ. ಖಡ್ಗದಿಂದ ಕಡಿದ ದೇಹದ ಭಾಗವೂ ಮತ್ತೆ ಗುಣವಾಗಿ ಮೊದಲಿನಂತಾಗುತ್ತದೆ. ಆದರೆ ಬಿರುನುಡಿಯಿಂದ ಛಿನ್ನ ಭಿನ್ನವಾದ ಮನಸ್ಸು ಮಾತ್ರ ಗಾಯ ಮಾಯದೆ ಎಂದೂ ಮೊದಲಿನಂತೆ ಗುಣವಾಗುವದಿಲ್ಲ.

೧೩೧. ವಾಚಾ ದುರುಕ್ತಂ ಭೀಭತ್ಸಂ ಚ ಪರೋಹತಿ ವಾಕ್ಕ್ಷತಮ್ ॥
ವಾಕ್ಸಾಯಕಾ ವದನಾ ನ್ನಿಷ್ಪತಂತಿ ತೈರಾಹತಃ ಶೋಚತಿ
ರಾತ್ರ್ಯಹಾನಿನ ತಾನ್ವಿಮುಂಚೇತ ಹಿ ಪಂಡಿತೋ ಜನಃ ತದದ್ಯ
ಧರ್ಮಂ ವಿತಥಂ ತ್ವಯಾ ಕೃತಮ್ ।

ಬಾಯಿಂದ ಹೊರಬಿದ್ದ ನುಡಿಬಾಣಗಳು ತಾಕಿ ತಾಡಿತನಾದ ಮನುಷ್ಯನು ಹಗಲಿರುಳೂ ದುಃಖದಿಂದ ಅಳುತ್ತಾನೆ. ಪಂಡಿತರಾದ ಪರರ ಮರ್ಮಾಂತಕವಾದ ಇಂಥ ವಾಗ್ಬಾಣಗಳನ್ನು ಎಸೆಯಕೂಡದು.

೧೩೨. ತಸ್ಮಾದ್ವ್ರಜಾಮಿ ದೇವೇಶ ತಪಸ್ತಪ್ತುಮನುತ್ತಮಮ್
ತಥಾ ಯತಿಷ್ಯೇ ನ ಯಥಾ ಭವಾನ್ ಕಾಲೀತಿ ವಕ್ಷ್ಯತಿ ॥

ಈ ನೀತಿಯ ತತ್ವವನ್ನು ನೀವು ಮೀರಿ ಮಾತನಾಡಿದಿರಿ. ದಾಂಪತ್ಯ ಧರ್ಮ ಸುಳ್ಳು ಮಾಡಿದೆ. ಆದುದರಿಂದ ದೇವೇಶನೇ, ನಾನು ಇಲ್ಲಿಂದ ಹೊರಟು ಹೋಗುತ್ತೇನೆ. ಮತ್ತೆ ಘೋರವಾದ ತಪಸ್ಸನ್ನು ಆಚರಿಸುತ್ತೇನೆ. ಪುನಃ ನೀನು ಕಪ್ಪು ಬಣ್ಣದ ಕಾಡುಹೆಣ್ಣು ಎನ್ನುವ ಅರ್ಥದಲ್ಲಿ ನನ್ನನ್ನು ಕಾಳೀ ಎಂದು ಎಂದೂ ಕರೆಯದಂತೆ ಮಾಡಲು ಪ್ರಯತ್ನಿಸುತ್ತೇನೆ. ಹೀಗೆ ಹೇಳಿ ಗಿರಿಜೆಯು ಮಹೇಶ್ವರನಿಗೆ ಸಾಷ್ಟಾಂಗ ವಂದನೆಗೈದಳು. ತನ್ನ ರಮಣಿಯ ರೋಷಾವೇಶದ ರಭಸವನ್ನು ಕಂಡು ಮುಕ್ಕಣ್ಣನು ಮೌನದಿಂದಲೇ ಅವಳ ಮಾತಿಗೆ ಸಮ್ಮತಿಯನ್ನಿತ್ತನು. ಕೂಡಲೇ ಆ ಕಾಳಿಯು ವೇಗದಿಂದ ಮುಗಿಲಿಗೇ ಜಿಗಿದಳು. ಆಗಸಕ್ಕೆ ಏರಿದಳು.

೧೩೩. ಸಮಮುತ್ಪತ್ಯ ಚ ವೇಗೇನ ಹಿಮಾದ್ರೇಃ ಶಿಖರಂ ಶಿವಮ್
ಟುಕಚ್ಛಿನ್ನಂ ಪ್ರಯತ್ನೇನ ವಿಧಾತ್ರಾ ನಿರ್ಮಿತಂ ಯಥಾ ॥

ಹೀಗೆ ಆಕಾಶಮಾರ್ಗದಿಂದ ವೇಗ ಗತಿಯಿಂದ ಹಿಮವತ್‌ಪರ್ವತದ ಶಾಂತ ಸುಂದರವಾದ ಒಂದು ಶಿಖರಕ್ಕೆ ಹಾರಿಬಂದಳು. ವಿಧಾತನು ಉಳಿಗಳಿಂದ ಕೊರೆದು ಕೊಟ್ಟಿ ಪ್ರಯತ್ನಪೂರ್ವಕವಾಗಿ ಮಾಡಿದಂತೆ ಅತ್ಯಂತ ರಮಣೀಯವಾಗಿತ್ತು ಕಡಿದಾದ ಆ ಗಿರಿಶಿಖರ.

೧೩೪. ........ ವರ್ತೀಯ ಸಸ್ಮಾರ ಜಯಾಂ ಚ ವಿಜಯಾಂ ತಥಾ
ಜ.................. ಪುಣ್ಯಾಂ ಚತುರ್ಥೀಮಪರಾಜಿತಾಮ್ ॥

ಹೈಮಾಚಲದ ಆ ರಮ್ಯವಾದ ಉತ್ತುಂಗಶೃಂಗಾಂಗಣದಲ್ಲಿ ಇಳಿದು ಪಾರ್ವತಿಯು ಜಯಾ ಎಂಬ ಗೆಳತಿಯನ್ನು ನೆನೆದಳು, ವಿಜಯೆಯನ್ನು ಸ್ಮರಿಸಿದಳು. ಮಹಾಪುಣ್ಯಶಾಲಿನಿಯಾದ ಜಯಂತೀ ಎಂಬ ಸಖಿಯನ್ನು ಸ್ಮರಣೆ ಮಾಡಿದಳು. ಅಪರಾಜಿತ ಎಂಬ ನಾಲ್ಕನೇಯ ಮೈತ್ರಿಯನ್ನು ಮನದಲ್ಲಿಯೇ ನೆನೆಸಿದಳು. ಅವಳು ನೆನೆಯುವುದೊಂದೇ ತಡ, ಅವಳ ಆ ನಾಲ್ಕು ಒಡನಾಡಿಯಾದ ದೇವತಾಸ್ತ್ರೀಯರೂ ಅವಳನ್ನು ನೋಡಲಿಕ್ಕೆ ಅಲ್ಲಿಗೆ ಬಂದರು. ಕಾಳೀದೇವಿಯ ಅಪ್ಪಣೆಪಡೆದು ಅವಳ ಸೇವೆಗೆ ಅಣಿಯಾಗಿ ಅಲ್ಲಿಯೇ ನಿಂತರು. ಹೀಗೆ ಆ ಪರ್ವತಪುತ್ರಿಯು ಉಗ್ರವಾದ ತಪೋಷ್ಠಾನವನ್ನು ಕೈಕೊಂಡು ಆ ಹಿಮಕಂದರದಲ್ಲಿ ನಿಂತುಕೊಂಡಾಗ ಒಂದು ದಿನ ಅಲ್ಲಿಗೆ ಆ ಕಾಡಿನ ಕೊಳ್ಳದಿಂದ ಒಂದು ಹುಲಿಯು ಎದ್ದು ಬಂದಿತು. ಹದನವಾದ ಹಲ್ಲು ಮತ್ತು ಅದರ ಉಗುರುಗಳು ಆಯುಧಗಳಂತೆ ಇದ್ದವು.

"ಏಕಪಾದಸ್ಥಿತಾಯಾಂ ವೈ ದೇವ್ಯಾಂ ವ್ಯಾಘ್ರಸ್ತ್ವಚಿಂತಯತ್ ॥

ಆಗ ಕಾಳೀದೇವಿಯು ಒಂಟಿಗಾಲ ಮೇಲೆ ನಿಂತು ತಪಂಗೈಯುತ್ತಿದ್ದಳು. ಅದನ್ನು ನೋಡಿ ಆ ಹುಲಿಯು-

೧೩೫. "ಯದಾ ಪತಿಷ್ಯತೇಚೇಷ್ಟಂ ತದಾದಾಸ್ಯಾಮಿ ವೈ ಅಹಮ್ ॥

"ಒಂಟಿಗಾಲ ಮೇಲೆ ನಿಂತ ಈ ಹೆಣ್ಣುಮಗಳು ತೂಕತಪ್ಪಿ ಜೋಲಿಹೋಗಿ ಹೊರಳಿ ಬಿದ್ದ ಕೂಡಲೇ ಇವಳನ್ನು ಹಿಡಿದು ಹೊಡೆದು ಕೊಂದು ತಿಂದುಹೋಗಬೇಕು" ಎಂದು ಮನಸ್ಸಿನಲ್ಲಿ ಚಿಂತಿಸಿ ಅವಳನ್ನೇ ನೋಡುತ್ತ ಕುಳಿತುಕೊಂಡಿತು. ಆ ಹುಲಿಯು ಕಣ್ಣು ಪಿಳಿಕಿಸಿದೆ ತಪಃ ಸಮಾಧಿಯಲ್ಲಿ ಒಂದು ಕಾಲಿನ ಮೇಲೆಯೇ ತಪತಪಿಸುವ ಜಪ ಜಪಿಸುವ ಆ ಗಿರಿಬಾಲೆಯನ್ನು ಏಕಾಗ್ರಚಿತ್ತದಿಂದ ಬಿಟ್ಟು ಬಿಡದೆ ನೆಟ್ಟ ದೃಷ್ಟಿಯಿಂದ ನೋಡುತ್ತ ನಿಂತುಕೊಂಡಿತು. ಹೀಗೆ ಆ ಹುಲಿಯು ಆ ಹರಪತ್ನಿಯ ಕಣ್ಣಲ್ಲಿ ಕಣ್ಣಿಟ್ಟು ನೋಡ ನೋಡುತ್ತ ಸತಿಯೊಡನೆ ಏಕದೃಷ್ಟಿಯುಳ್ಳದ್ದಾಗಿ ತಾನೂ ಒಂದು ತಪಸ್ವಿಯಾದಂತೆ, ಸ್ಥಿರ ಸಮಾಧಿಯಲ್ಲಿ ಕುಳಿತುಕೊಂಡಂತೆ ಅಲ್ಲಿಯೇ ನಿಂತುಬಿಟ್ಟಿತು.

೧೩೬. "ತತೋ ವರ್ಷಶತಂ ದೇವೀ ಗೃಣಂತೀ ಬ್ರಹ್ಮಣಃ ಪದಮ್ ॥
ತಪೋಽತಪತ್ತತೋಽಗಾದ್ ಬ್ರಹ್ಮಾತ್ರಿಭುವನೇಶ್ವರಃ ॥

ಹೀಗೆ ಆ ಕಾಳೀದೇವಿಯು ಬ್ರಹ್ಮನನ್ನು ಮನದಲ್ಲಿ ನೆನೆಯುತ್ತ ಅವನ ಹೆಸರನ್ನು ಬಾಯಿಂದ ಜಪಿಸುತ್ತ ಒಂದು ನೂರು ವರ್ಷ ತಪಸ್ಸಮಾಧಿಯಲ್ಲಿ ನಿಂತುಕೊಂಡಳು.

೧೩೭. ಪಿತಾಮಹಸ್ತದೋವಾಚ ದೇವಿಂ ಪ್ರೀತೋಸ್ಮಿ ಶಾಶ್ವತೇ ।
ತಪಸಾ ಧೂತ ಪಾಪಾಸಿ ವರಂ ವೃಣುಯ ಥೇಪ್ಸಿತಮ್ ॥

ಆಗ ಮೂರುಲೋಕದ ಒಡೆಯನಾದ ಬ್ರಹ್ಮದೇವನು ಪ್ರಸನ್ನನಾಗಿ ನುಡಿದನು- "ಸ್ಥಿರ ಪ್ರಕೃತಿಯ ಪರಮೇಶ್ವರಿಯೇ ನಿನ್ನ ತಪಸ್ಸಿನಿಂದ ನಾನು ಪ್ರೀತನಾಗಿದ್ದೇನೆ. ನೀನೂ ಪವಿತ್ರಳಾಗಿರುವಿ. ನಿನಗೆ ಬೇಕಾದ ವರವನ್ನು ಕೇಳು." ಆಗ ಕಾಳಿಯು ಹೇಳಿದಳು -

೧೩೮. ಅಥೋವಾಚ ವಚಃ ಕಾಲೀ ವ್ಯಾಘ್ರಸ್ಯ ಕಮಲೋದ್ಭವ ।
ವರದೋ ಭವ ತೇನಾಹಂ ಯಾಸ್ಯೇ ಪ್ರೀತಿಮನುತ್ತಮಾಮ್ ॥

"ಕಮಲೋದ್ಭವನೇ, ಮೊದಲು ನನ್ನೆದುರು ನನ್ನನ್ನು ತಿನ್ನಬೇಕೆಂದು ಆಸೆಯಿಂದ ನಿಂತುಕೊಂಡ ಈ ಹೆಬ್ಬುಲಿಗೆ ವರವನ್ನು ಕೊಡು. ಅದರಿಂದ ನನಗೆ ಇನ್ನಿಲ್ಲದ ಸಂತೋಷ. ಅತ್ಯಂತ ಪ್ರೀತಿ ಉಂಟಾಗುವದು" ಎಂದು ಬಿನ್ನವಹಿಸಿದಳು.

೧೩೯. ತತಃ ಪ್ರಾದಾದ್ವರಂ ಬ್ರಹ್ಮಾ ವ್ಯಾಘ್ರಸ್ಯಾದ್ಭುತಕರ್ಮಣಃ
ಗಾಣಪತ್ಯಂ ವಿಭೌ ಭಕ್ತಿಂ ಅಜೇಯತ್ವ ಚ ಧರ್ಮಿತಾಮ್॥

ಅವಳ ಅಪೇಕ್ಷೆಯಂತೆ ಚತುರ್ಮುಖನು ಆ ಹುಲಿಗೆ ಮೊದಲು ವರವನ್ನು ಕೊಟ್ಟನು. ನೂರುವರ್ಷ ನೆಟ್ಟು ದೃಷ್ಟಿಯಿಂದ ಕಾಳಿಯನ್ನೇ ನೋಡುತ್ತ ನಿಂತುಕೊಂಡ ಆ ಹುಲಿಯ ಗೈಮೆ ಸಾಮಾನ್ಯವಾದುದಲ್ಲ. ಶತಮಾನ ಶತಮಾನಗಳ ದೇವೀದರ್ಶನದ ಅದರ ಸಾಧನಾನುಷ್ಠಾನವು ವ್ಯರ್ಥವಾಗಲಿಲ್ಲ. ಅದಕ್ಕೆ ಬ್ರಹ್ಮದೇವರು ಶಿವಗಣದ ಆಧಿಪತ್ಯವನ್ನೂ ಹರನಲ್ಲಿ ಭಕ್ತಿಯನ್ನೂ ಯಾರಿಂದಲೂ ಗೆಲ್ಲಲು ಅಶಕ್ಯವಾದ ಅಜೇಯತ್ವವನ್ನೂ ಮತ್ತು ನಿರಂತರ ಧರ್ಮಬುದ್ಧಿಯನ್ನೂ ವರರೂಪವಾಗಿ ಕೊಟ್ಟು ಅನುಗ್ರಹಿಸಿದನು. ಆ ಬಳಿಕ ಗಿರಿಜೆಯು ತನಗಾಗಿ ಆ ಲೋಕ ಪಿತಾಮಹನಾದ ಬ್ರಹ್ಮದೇವರಲ್ಲಿ ವರವನ್ನು ಬೇಡಿಕೊಂಡಳು-

೧೪೦. ತತೋ ವರಂ ಗಿರಿಸುತಾ ಪ್ರಾಹ ದೇವೀ ಪಿತಾಮಹಮ್ ।
ವರಃ ಪ್ರದೀಯಾತಾಂ ಬ್ರಹ್ಮನ್ ವರ್ಣಂ ಕನಕಸನ್ನಿಭಮ್ ॥

"ಬ್ರಹ್ಮನೇ, ನೀನು ನನ್ನ ಮೇಲೆ ಪ್ರಸನ್ನನಾಗಿದ್ದರೆ ನನಗೆ ಹೊನ್ನಿನಂತೆ ಹೊಳೆಯುವ ಹೊಂಬಣ್ಣವನ್ನು ಕರುಣಿಸು. ಅವಳ ಮಾತಿಗೆ ಆ ಪಿತಾಮಹನು "ಅಸ್ತು" ಆಗಲಿ. ನಿನ್ನ ಮೈ ಬಂಗಾರ ಬಣ್ಣದ್ದಾಗುವದು" ಎಂದು ಹೇಳಿ ಸತ್ಯಲೋಕಕ್ಕೆ ತೆರಳಿದನು. ಅನಂತರ ಆ ವಿಧಾತನ ವರಕ್ಕೆ ಅನುಗುಣವಾಗಿ ಸತಿಯು ಮೈ ಮೇಲಿನ ಕಪ್ಪು ಕೋಶದಂತೆರುವ ಕೃಷ್ಣವರ್ಣವನ್ನು ಕಳಚಿ ಹಾಕಿದಳು. ಕನಕದಂತೆ ಕೆಂಪುಕಾಂತಿಯಿಂದ ಅವಳ ಶರೀರವು ಕಳೆಗೊಂಡು ನಳನಳಿಸಿತು.

೧೪೧. ಕೋಶಂ ಕೃಷ್ಣಂ ಪರಿತ್ಯಜ್ಯ ಪದ್ಮಕಿಂಜಲ್ಕ ಸನ್ನಿಭಾ ।
ತಸ್ಮಾತ್ ಕೋರಾಚ್ಚ ಸಾ ಜಾತಾ ಭೂಯಃ ಕಾತ್ಯಾಯಿನೀ ಶುಭಾ ॥

ಕಮಲಕೋಶದಲ್ಲಿಯ ಪರಾಗದಿಂದ ಮೈತುಂಬ ಲೇಪಿಸಿದಂತೆ ಕಮನೀಯವಾದ ಕಾಂತಿಯು ಅವಳ ಅಂಗಾಂಗಗಳಿಂದ ಸೂಸತೊಡಗಿತು. ತನ್ನ

ಮೊದಲಿನ ಕೃಷ್ಣಕೋಶ ವನ್ನು ಬಿಟ್ಟು ಹೊಂಬಣ್ಣದ ಹೊಸಹುಟ್ಟನ್ನು ಅದೇ ಕಾತ್ಯಾಯನಿಯು ಪಡೆದು ಬಂದಳು. ಕೋಶದಿಂದ ಮರಳಿ ಹುಟ್ಟಿದ ಆ ಗಿರಿಬಾಲೆಯನ್ನು ದಕ್ಷಿಣೆಯ ರೂಪದಿಂದ ದೇವೇಂದ್ರನು ಸ್ವೀಕರಿಸಿ ನುಡಿದನು -

೧೪೨. ಇಯಂ ಪ್ರದೀಯತಾಂ ಮಹ್ಯಂ ಭಗಿನೀ ಮೇಽಸ್ತು ಕಾಳಿಕೇ ।
ತ್ವತ್‌ಕೋಶಸಂಭವಾ ಚೇಯಂ ಕೌಶಿಕೀ ಕೌಶಿಕೋಽಪ್ಯಹಮ್ ॥

''ಇವಳು ಸುರರ ಯೋಗ ಕ್ಷೇಮಕ್ಕಾಗಿ ಸ್ವರ್ಗಕ್ಕೆ ಬರಲಿ. ನನಗೆ ಸೋದರಿಯಾಗಿ ಅಲ್ಲಿಯೇ ಇರಲಿ. ಇವಳನ್ನು ನನಗೆ ಭಗಿನಿಯಾಗಿ ಕೊಡಿರಿ. ಇವಳು ನಿನ್ನ ಕೋಶದಿಂದ ಸುವರ್ಣವರ್ಣ ಭಾಸುರಳಾಗಿ ಹುಟ್ಟಿದ್ದರಿಂದ ಇವಳಿಗೆ ಕೌಶಿಕೀ ಎಂದು ಹೆಸರು ಬಂದಿದೆ. ನನ್ನ ಹೆಸರು ಕೌಶಿಕ ಎಂದು ಇರುತ್ತದೆ.

ಕೌಶಿಕನಾದ ನನ್ನ ಸೋದರಿಯಾದುದರಿಂದ ಅವಳ ಕೌಶಿಕೀ ಎಂಬ ಹೆಸರೂ ಸಾರ್ಥಕವಾಗುತ್ತದೆ'' ಎಂದು ಗಿರಿಜೆಯ ಎದುರು ಅವಳಿಗೆ ಕೋಶದ ಮೂಲಕ ಪುನರ್ಜನ್ಮವನ್ನಿತ್ತ ಬ್ರಹ್ಮನೊಡನೆ ವಿಶೇಷವಾಗಿ ಮಾತನಾಡಿದಂತೆ ಮಾಡಿ ಅವನು ತನಗೆ ಈ ಸೋದರಿಯನ್ನು ಕೊಟ್ಟಿದ್ದಾನೆಂದು ಬಗೆದನು. ಅನಂತರ ಆ ಸೌಂದರ್ಯ ಶಾಲಿನಿಯಾದ ಕೌಶಿಕಿಯನ್ನು ಕರೆದುಕೊಂಡು ಆ ಸಾಸಿರಗಣ್ಣನ ಸುರೇಶನು ವೇಗದಿಂದ ವಿಂಧ್ಯ ಪರ್ವತಕ್ಕೆ ನಡೆದನು.

೧೪೩. ತತ್ರ ಗತ್ವಾಥೋವಾಚ ತಿಷ್ಠ ಪಾತ್ರ ಮಹಾ ಚಲೇ
ಪೂಜ್ಯಮಾನಾ ಸುರೈರ್ನಾಮ್ನಾ ಖ್ಯಾತಾ ತ್ವಂ ವಿಂಧ್ಯವಾಸಿನೀ ।

ವಿಂಧ್ಯಾಚಲಕ್ಕೆಹೋಗಿಆಕೌಶಿಕಿಗೆ''ಸೋದರಿಯೇ, ನೀನುಇಲ್ಲಿಯೇವಾಸಮಾಡು. ದೇವತೆಗಳುನಿನ್ನನ್ನು ಪೂಜಿಸುವರು. ವಿಂಧ್ಯವಾಸಿನೀಎಂಬಹೆಸರಿನಿಂದನೀನು ಜಗದಲ್ಲಿ ಪ್ರಖ್ಯಾತಳಾಗುವಿ'' ಎಂದುಹೇಳಿಆಗಿರಿಗರ್ಭದಲ್ಲಿ ಅವಳನ್ನು ಸ್ಥಾಪನೆಮಾಡಿದನು.

೧೪೪. ತತ್ರಸ್ಥಾನಂ ಹರಿರ್ದೇವೀಂ ದತ್ವಾಸಿಂಹಂ ಚ ವಾಹನಮ್
ಭವಾಮರಾರಿಹಂತ್ರೀ ಚರೇತ್ಯುಕ್ತ್ವಾ ಸ್ವರ್ಗಮುಪಾಗಮತ್ ॥

ಅವಳಿಗೆ ವಾಹನವೆಂದು ಒಂದು ಸಿಂಹವನ್ನು ಕೊಟ್ಟು ಈ ಸುರರ ಶತ್ರುಗಳಾದ ದಾನವರನ್ನು ನೀನು ಸಂಹರಿಸು ಎಂದು ಹೇಳಿ ಸ್ವರ್ಗಕ್ಕೆ ಹೋದನು.

೧೪೫. ಉಮಾಪಿ ತಂ ವರಂ ಲಬ್ಧ್ವಾಮಂದಿರಂ ಪುನರೇತ್ಯ ಚ ।
ಪ್ರಣಮ್ಯ ಚ ಮಹೇಶಾನಂ ಸ್ಥಿತಾ ಸವಿನಯಂ ಮುನೇ ॥

ಉಮಾದೇವಿಯು ಬ್ರಹ್ಮದೇವರ ವರವನ್ನೂ, ದೇವೇಂದ್ರನ ಹಾರೈಕೆಯನ್ನೂ ಪಡೆದು ತನ್ನ ಮನೆಗೆ ಬಂದಳು. ಮಹಾದೇವರಿಗೆ ನಮಸ್ಕಾರ ಮಾಡಿ ವಿನಯ ಪೂರ್ವಕವಾಗಿ ಅವರೊಂದಿಗೆ ವಾಸಮಾಡಿದಳು.

೧೪೬. ತತೋಽ ಮುಗುರುಃ ಶ್ರೀಮಾನ್ ಪಾರ್ವತ್ಯಾ ಸಹಿತೋಽವ್ಯಯಃ
ತಸ್ಥೌ ವರ್ಷಸಹಸ್ರಂ ಹಿ ಮಹಾಮೋಹನಕೇ ಮುನೇ ॥

ಅನಂತರ ದೇವತೆಗಳಿಗೆ ಗುರುವಾದ ಮಹಾದೇವನು ಬಂಗಾರದ ಬಣ್ಣದಿಂದ ಸರ್ವಾಂಗ ಸುಂದರಿಯಾಗಿ ನಳಿನಳಿ ತನ್ನ ನಳಿನಾಕ್ಷಿಯೊಡನೆ ಪ್ರೇಮದಿಂದ ಕಾಮಕೇಳಿಗೆ ಇಳಿದನು. ಸಾವಿರ ವರ್ಷಗಳವರೆಗೆ ಸಾಗಿತ್ತು ಪಾರ್ವತಿ ಪರಮೇಶ್ವರರ ಆ ಬೇಟ ಕೂಟಗಳ ಸರಸಾಟ.

**೧೪೭. ಮಹಾ ಮೋಹಸ್ಥಿತೇ ರುದ್ರೇ ಭುವನಾಶ್ಚೇಲು ರುದ್ಧತಾಃ**
**ಚುಕ್ಷುಭುಃ ಸಾಗರಾಸ್ಸಪ್ತ ದೇವಾಶ್ಚ ಭಯಮಾಗಮಾನ್ ॥**

ಮಹಾದೇವ ದಂಪತಿಗಳ ಪ್ರಣಯಲೀಲೆಯು ಹೀಗೆ ತುದಿಮೊದಲಿಲ್ಲದೆ ನಿರಂತರ ನಡೆಯಲು ನೆಲವೆಲ್ಲವೂ ನಡುಗಿತು. ನಾಡುಗಳೆಲ್ಲವೂ ಕಂಪಿಸಿದವು. ಸಾಗರಗಳು ಕ್ಷೋಭೆಗೊಂಡವು. ಸುರರೆಲ್ಲ ಸಂಭ್ರಾಂತರಾದರು.

**೧೪೮. ತತಃ ಸುರಾ ಮಹೇಂದ್ರೇಣ ಬ್ರಹ್ಮಣಃ ಸದನಂ ಗತಾಃ ।**
**ಪ್ರಣಮ್ಯೋಚುರ್ಮಹೇಶಾನಂ ಜಗತ್‌ಕ್ಷುಬ್ಧಂ ತು ಕಿಂತ್ವಿದಮ್॥**

ಅನಂತರ ಎಲ್ಲ ದೇವತೆಗಳು ಮಹೇಂದ್ರನನ್ನು ಮುಂದೆ ಮಾಡಿಕೊಂಡು ಬ್ರಹ್ಮದೇವರ ಮನೆಗೆ ಹೋದರು. ಅವನಿಗೆ ನಮಸ್ಕರಿಸಿ, ''ಪ್ರಪಂಚದ ಈ ಪ್ರಕ್ಷೋಭಕ್ಕೆ ಕಾರಣವೇನು ?'' ಎಂದು ಕೇಳಿದರು.

ಅದಕ್ಕೆ ಉತ್ತರವಾಗಿ ಆ ಹಂಸವಾಹನನು ದೇವತೆಗಳನ್ನು ಕುರಿತು ''ರುದ್ರ ದೇವನು ತನ್ನ ರಮಣಿಯೊಂದಿಗೆ ರತಿಕ್ರೀಡೆಯಲ್ಲಿ ತೊಡಗಿದ್ದಾನೆ. ಅದರ ರೌದ್ರರಭಸದಿಂದ ಮೂರು ಲೋಕಗಳೂ ಇಂಥ ಕ್ಷೋಭೆಯಿಂದ ಕಂಪಿಸುತ್ತಿವೆ'' ಎಂದು ಹೇಳಿ ಸುಮ್ಮನಾದನು. ಈ ವಿಧಿಯ ವಾಣಿಯನ್ನು ಕೇಳಿದ ಕೂಡಲೇ ದೇವತೆಗಳು ತಮ್ಮ ಒಡೆಯನಿಗೆ ನುಡಿದರು -

**೧೪೯. ಸಮಾಪ್ತೇ ಮೋಹನೇ ಬಾಲೋ ಯಃ ಸಮುತ್ಪತ್ಸ್ಯತೇಽವ್ಯಯಃ**
**ಸ ನೂನಂ ದೇವರಾಜಸ್ಯ ಪದಮೈಂದ್ರಂ ಹರಿಷ್ಯತಿ ॥**

''ದೇವೇಂದ್ರನೇ, ಬೇಗ ಹೊರಡು. ಮಹಾದೇವನ ಈ ಮಹಾವಿಹಾರವು ಮುಗಿಯುವ ಮೊದಲೇ ನಾವು ಅಲ್ಲಿಗೆ ಹೋಗಬೇಕು. ಅವರೀರ್ವರ ಈ ಕಾಮಕೇಳೀ ವಿಲಾಸವು ಕೊನೆಗೊಂಡ ಬಳಿಕ ಅದರಿಂದ ಹುಟ್ಟುವ ರುದ್ರಕುಮಾರನು ಖಂಡಿತವಾಗಿಯೂ ಇಂದ್ರಸಿಂಹಾಸನವನ್ನು ಅಪಹರಿಸುತ್ತಾನೆ.''

**೧೫೦. ತತೋಽಮರಾಣಾಂ ವಚನಾದ್ದಿವ ಕೋಬಲಘಾತಿನಃ ।**
**ಭಯಾತ್ ಜ್ಞಾನಂ ತತೋ ನಷ್ಟಂ ಭಾವಿಕರ್ಮಪ್ರಚೋದನಾತ್॥**

ತನ್ನ ಸುರ ಸಂಗಾತಿಗಳ ಹೇಳಿಕೆಯನ್ನು ಕೇಳಿ ದೇವೇಂದ್ರನ ಜಂಘಾಬಲವೇ ಉಡುಗಿದಂತಾಯಿತು. ತಮ್ಮ ದೈವೀಶಕ್ತಿಯನ್ನು ನಾಶಪಡಿಸಬಲ್ಲ ರುದ್ರ ಸಂತತಿಯ ಕಲ್ಪನೆಯಿಂದಲೇ ಸ್ವರ್ಗದ ಸಾರ್ವಭೌಮನ ವಿವೇಕ ಶಕ್ತಿಯು ಅಳಿಯಿತು. ತಿಳುವಳಿಕೆಯು ನಷ್ಟವಾಯಿತು. ಜೀವಿಗಳ ಕರ್ಮಗಳು ಅವರವರ ಭವಿತವ್ಯಕ್ಕೆ ಅನುಗುಣವಾಗಿ ಪ್ರೇರಣೆಯನ್ನು ನೀಡುತ್ತವೆ.

೧೫೧. ತತಃ ಶಕ್ರಃ ಸುರೈಃ ಸಾರ್ಧಂ ವಹ್ನಿನಾ ಚ ಸಹಸ್ರದೃಕ್
ಜಗಾಮ ಮಂದರಗಿರಿಂ ತಚ್ಛೃಂಗೇಷ್ವಪಿ ಸತ್ತಮ ॥

ಅನಂತರ ಸುರೇಂದ್ರನು ಅಗ್ನಿಯನ್ನು ಮುಂದೆ ಮಾಡಿಕೊಂಡು ಎಲ್ಲ ಅಮರರೊಂದಿಗೆ ಮಂದರ ಪರ್ವತಕ್ಕೆ ನಡೆದನು. ಅವನು ಮೈತುಂಬ ಕಣ್ಣು ಮಾಡಿಕೊಂಡು ಆ ಮಹಾಗಿರಿಗೆ ಬಂದು ಮುಟ್ಟಿದನು.

೧೫೨. ಅಶಕ್ತಾಃ ಸರ್ವ ಏವೈತೇ ಪ್ರವೇಷ್ಟುಂ ತದ್ಭವಾಜಿರಂ ।
ಚಿಂತಯಿತ್ವಾ ತು ಸುಚಿರಂ ಪಾವಕಂ ತೇ ವ್ಯಸರ್ಜಯನ್ ॥

ಆದರೆ ಆದರ ಉತ್ತುಂಗವಾದ ಶೃಂಗಾಂಗಣಗಳಲ್ಲಿ ಪ್ರವೇಶಿಸಲು ಯಾವ ಸುರ ಪುಂಗವನಿಗೂ ಸಾಧ್ಯವಾಗಲಿಲ್ಲ. ಅದು ಮಹಾದೇವನ ಮನೆಯ ಅಂಗಳವಲ್ಲವೇ? ಅವರೆಲ್ಲರೂ ಈ ವಿಷಯದಲ್ಲಿ ಬಹಳ ಹೊತ್ತು ವಿಚಾರವನ್ನು ಮಾಡಿಯೇ ಮಾಡಿದರು. ಕೊನೆಗೆ ತಾವೆಲ್ಲರೂ ಅಲ್ಲಿಯೇ ಕೆಳಗಡೆ ನಿಂತುಕೊಂಡು ಅಗ್ನಿಯನ್ನು ಭವನ ಬಳಿಗೆ ಅಟ್ಟಿದರು.

೧೫೩. ಸ ಚಾಭ್ಯೇತ್ಯ ಸುರಶ್ರೇಷ್ಠೋ ದೃಷ್ಟ್ವಾ ದ್ವಾರೇ ಚ ನಂದಿನಂ ।
ದುಷ್ಪ್ರವೇಶಂ ಚ ತಂ ದೃಷ್ಟ್ವಾ ಚಿಂತಾಂ ವಹ್ನಿಃ ಪರಾಂಗತಃ ।

ಅಗ್ನಿಯು ಆ ಶಿವಮಂದಿರಕ್ಕೆ ಬಂದು ನೋಡುತ್ತಾನೆ. ಬಾಗಿಲಲ್ಲಿಯೇ ನಂದೀಶ್ವರ. ಮೈತುಂಬ ಕಣ್ಣು. ಕಣ್ಣ ತುಂಬ ಎಚ್ಚರಿಕೆ. ಒಳಗೆ ಹೋಗುವದು ಅಶಕ್ಯ ವೆನಿಸಿತು. ಆ ಅಗ್ನಿದೇವನಿಗೆ ಚಿಂತೆಯು ಆ ಬೆಂಕಿಯ ಹೃದಯವನ್ನೇ ಸುಡತೊಡಗಿತು. ಆ ಅಗ್ನಿಯು ಚಿಂತೆಯ ಸಮುದ್ರದಲ್ಲೇ ಮುಳುಗಿಹೋದ.

೧೫೪. ಸ ಚ ಚಿಂತಾರ್ಣವೇ ಮಗ್ನಃ ಪ್ರಾಪಶ್ಯತ್ ಶಂಭುಸದ್ಮನಃ
ನಿಷ್ಕ್ರಾಮಂತೀಂ ಮಹಾಪಂಕ್ತಿಂ ಹಂಸಾನಾಂ ವಿಮಲಾಂ ತಥಾ ॥

ಅದೇ ವೇಳೆಯಲ್ಲಿ ಶಿವಸದನದಿಂದ ಅರಸಂಚೆಗಳ ದೊಡ್ಡ ಸಾಲು ಹೊರಬಿದ್ದು ಹೋಗುತ್ತಿರುವದು ಆ ಅಗ್ನಿಯ ಕಣ್ಣಿಗೆಬಿದ್ದಿತು.

೧೫೫. ಅಸಾವುಪಾಯ ಇತ್ಯುಕ್ತ್ವಾ ಹಂಸರೂಪೀ ಹುತಾಶನಃ ।
ವಂಚಯಿತ್ವಾ ಪ್ರತೀಹಾರಂ ಪ್ರವಿವೇಶ ಹರಾಜಿರಮ್ ॥

''ಆ ! ಇದೇ ಇದಕ್ಕೆ ಉಪಾಯ'' ಎಂದು ನುಡಿದು ಆ ಅಗ್ನಿದೇವನು ತಕ್ಷಣದಲ್ಲಿಯೇ ಒಂದು ರಾಜಹಂಸದ ರೂಪವನ್ನು ತೆಗೆದುಕೊಂಡನು. ಬಾಗಿಲ ಬಳಿ ಕುಳಿತ ನಂದೀಶ್ವರನ ಕಣ್ಣಿಗೆ ಮಣ್ಣೆರಚಿ ಉಪಾಯದಿಂದ ಶಿವಮಂದಿರದ ಒಳಗೆ ತೂರಿಕೊಂಡು ಸಾರಿದನು.

೧೫೬. ಪ್ರವಿಶ್ಯ ಸೂಕ್ಷ್ಮ ಮೂರ್ತಿಶ್ಚ ಶಿರೋದೇಶೇ ಕಪರ್ದಿನಃ ।
ಪ್ರಾಹ ಪ್ರಹಸ್ಯ ಗಂಭೀರಂ ದೇವಾ ದ್ವಾರಿ ಸ್ಥಿತಾ ಇತಿ ।

ಅಂತಃಪುರದ ಏಕಾಂತದಲ್ಲಿ ಕಾಂತೆಯೊಡನೆ ರತಿಲೀಲಾಲೋಲನಾದ ರುದ್ರದೇವನ ತಲೆಯ ಮೇಲೆ ಅತ್ಯಂತ ಸೂಕ್ಷ್ಮ ರೂಪದಿಂದ ಸೇರಿಕೊಂಡನು ಮತ್ತು ವಿಲಾಸಲಾಲಸ

ನಾದ ಗೌರೀಪತಿಯನ್ನು ಕುರಿತು ತನ್ನ ಸೂಕ್ಷ್ಮ ರೂಪದಿಂದಲೇ ನಕ್ಕು ಗಂಭೀರವಾಗಿ ''ದೇವತೆಗಳು ಬಾಗಿಲ ಬಳಿ ನಿಂತು ತಮಗಾಗಿ ಕಾಯುತ್ತಲಿದ್ದಾರೆ'' ಎಂದು ಪಿಸು ಮಾತಿನಲ್ಲಿ ಉಸುರಿದನು.

೧೫೭. ತಚ್ಛ್ರುತ್ವಾತಲ್ಪಮುತ್ಥಾಯ ಪರಿತ್ಯಜ್ಯ ಗಿರೇಃ ಸುತಾಮ್ ।
ವಿನಿಷ್ಕ್ರಾಂತೋಽಜಿರಾತ್ ಶರ್ವೋ ವಹ್ನಿನಾ ಸಹ ನಾರದ ॥

ಈ ಸಮಾಚಾರವು ಕಿವಿಗೆ ಬೀಳುವುದೊಂದೇ ತಡ, ಕೈಲಾಸಪತಿಯು ತನ್ನ ಶೃಂಗಾರ ರಂಗಮಂಚದಿಂದ ಕೂಡಲೇ ಎದ್ದನು. ರತಿರಸಿಕಳಾದ ತನ್ನ ರಮಣೀ ಮಣಿಯನ್ನು ತೊರೆದು ಕೇಳಿ ಮಂದಿರದಿಂದ ಅಗ್ನಿಯೊಡನೆ ಹೊರಬಿದ್ದು ಬಂದನು.

೧೫೮. ವಿನಿಷ್ಕ್ರಾಂತೇ ಸುರಪತೌ ದೇವಾ ಮುದಿತ ಮಾನಸಾಃ ।
ಶಿರೋಭಿರವನೀಂ ಜಗ್ಮುಃ ಸೇಂದ್ರಾರ್ಕಶಶಿಪಾವಕಾಃ ॥

ಹೊರ ಬಂದ ಹರನನ್ನು ಕಂಡಕೂಡಲೇ ಸುರರಿಗೆಲ್ಲ ಪರಮಾನಂದವಾಯಿತು. ಸೂರ್ಯ, ಚಂದ್ರ, ಇಂದ್ರ, ಅಗ್ನಿ ಮುಂತಾದ ದೇವತೆಗಳೆಲ್ಲರೂ ಶಿವ ನಿಂತ ನೆಲಕ್ಕೆ ತಲೆಹಚ್ಚಿ ನಮಿಸಿದರು. ಆ ನಿಲಿಂಪರ ಗುಂಪನ್ನು ಕಂಡು ಪರಮೇಶ್ವರನಿಗೆ ಪ್ರೀತಿ ಉಕ್ಕಿ ಬಂದಿತು. ಪ್ರಸನ್ನ ಮನಸ್ಸಿನಿಂದ ಅವನು ಕೇಳಿದನು.

೧೫೯. ತತಃ ಪ್ರೀತ್ಯಾ ಸುರಾನಾಹ ವದಧ್ವಂ ಕಾರ್ಯಮಾಶು ವೈ ।
ಪ್ರಣಾಮಾವನತಾಃವೋ ಹಿ ದಾಸ್ಯೇಽಹಂ ವರಮುತ್ತಮಮ್ ॥

''ಸುರರೇ, ಬೇಗ ಹೇಳಿ, ಏನು ಬೇಕಾಗಿದೆ? ಯಾವ ಕಾರ್ಯಕ್ಕಾಗಿ ಬಂದಿದ್ದೀರಿ? ಇಷ್ಟೇಕೆ ಬಾಗಿ ನಮಿಸಿ ನಿಂತಿದ್ದೀರಿ ? ನೀವು ಬೇಡಿದ ವರವನ್ನು ನೀಡುತ್ತೇನೆ. ಬೇಕಾದ ನಿಮ್ಮ ಕಾರ್ಯವನ್ನು ಮಾಡುತ್ತೇನೆ.''

೧೬೦. ಯದಿ ತುಷ್ಟೋಽಸಿ ದೇವಾನಾಂ ವರಂ ದಾತುಮಿಹೇಚ್ಛಸಿ ।
ತದಿಹ ತ್ಯಜ್ಯತಾಂ ತಾವನ್ಮಹಾಮೈಥುನಮೀಶ್ವರ ॥

**ದೇವತೆಗಳು :** ಮಹೇಶ್ವರನೇ, ನಮ್ಮೆಲ್ಲ ದೇವತೆಗಳ ಮೇಲೆ ನೀನು ಪ್ರೇರಿತ ನಾಗಿದ್ದರೆ ನೀನು ಈಗ ಪಾರ್ವತಿಯೊಡನೆ ನಡೆಸಿದ ಸಂತತ ಶೃಂಗಾರ ಕ್ರೀಡೆಯನ್ನು ಇಲ್ಲಿಗೆ ಸಾಕು ಮಾಡು. ಇದೇ ನಾವು ನಿನ್ನಲ್ಲಿ ಬೇಡುತ್ತಿರುವ ವರ.

೧೬೧. ಏವಂ ಭವತು ಸಂತ್ಯಕ್ತೋ ಮಯಾ ಭಾವೋಽಮರೋತ್ತಮಾಃ ।
ಮಮೇದಂ ತೇಜ ಉದ್ರಿಕ್ತಂ ಕಶ್ಚಿದೇವ ಪ್ರತೀಚ್ಛತು ॥

**ಈಶ್ವರ :** ಹಾಗೇ ಆಗಲಿ. ನಾನು ಮನಸ್ಸಿನಲ್ಲಿಯ ವಿಹಾರದ ವಿಚಾರವನ್ನೇ ಬಿಟ್ಟು ಬಿಡುತ್ತೇನೆ. ಆದರೆ ಸ್ವಸ್ಥಳದಿಂದ ಚಲಿಸಿ ಈಗಾಗಲೇ ಉದ್ರಿಕ್ತವಾದ ನನ್ನ ಈ ತೇಜಸ್ಸನ್ನು ಯಾರಾದರೂ ಒಬ್ಬರು ಗ್ರಹಿಸಬೇಕು.

೧೬೨. ಇತ್ಯುಕ್ತಾಃ ಶಂಭುನಾ ದೇವಾಃ ಸೇಂದ್ರಚಂದ್ರದಿವಾಕರಾಃ ।
ಅಸೀದಂತ ಯಥಾ ಮಗ್ನಾಃ ಪಂಕೇಗಾವಸ್ತಥಾ ಸುರಾಃ ॥

**ಪುಲಸ್ತ್ಯ** : ಶಂಭುವಿನ ಈ ಮಾತನ್ನು ಕೇಳಿ ಇಂದ್ರ, ಚಂದ್ರ, ಸೂರ್ಯ ಮುಂತಾದ ದೇವತೆಗಳೆಲ್ಲರೂ ಕುಳಿತಲ್ಲಿಯೇ ಕುಸಿದರು. ಹುದುವಿನಲ್ಲಿ ಸಿಕ್ಕ ಹಸುಗಳಂತಾಯಿತು ಅವರ ಪಾಡು.

**೧೬೩. ಸೀದತ್ಸು ದೇವತೇಷ್ವೇವಂ ಹುತಾಶೋಽಭ್ಯೇತ್ಯ ಶಂಕರಂ ।**
**ಪ್ರೋವಾಚ ಮುಂಚ ತೇಜಸ್ತ್ವಂ ಪ್ರತೀಚ್ಛಾಮ್ಯೇವ ಶಂಕರ ॥**

ಹೀಗೆ ನಿರಾಶೆಯಿಂದ ನಿರ್ವಿಣ್ಣರಾಗಿ ಸುರರೆಲ್ಲ ಖೇದದಿಂದ ಕೈಚೆಲ್ಲಿ ಕುಳಿತುಕೊಂಡುದನ್ನು ಕಂಡು ಅಗ್ನಿಯು ಮತ್ತೆ ತಾನೇ ಮುಂದೆ ಬಂದನು.

**೧೬೪. ತತೋ ಮುಮೋಚ ಭಗವಾನ್ ತದ್ರೇತಃ ಸ್ಕನ್ನಮೇವ ಚ ।**
**ಜಲಂ ತೃಷಾರ್ತೋ ವೈ ಯದ್ವತ್ ತೈಲಪಾನಂ ಪಿಪಾಸಿತಃ ॥**

''ಶಂಕರನೇ ನಿನ್ನ ತೇಜಸ್ಸನ್ನು ಬಿಡು. ನಾನೇ ಅದನ್ನು ಸ್ವೀಕರಿಸುತ್ತೇನೆ'' ಎಂದು ಧೈರ್ಯದಿಂದ ಹೇಳಿದನು. ಆಗ ಭಗವಾನ್ ಶಂಕರನು ತನ್ನ ತೇಜಸ್ಸನ್ನು ಸಡಿಲುಬಿಟ್ಟನು. ಸ್ಖಲಿತವಾದ ಆ ಶೈವ ವೀರ್ಯವನ್ನು ಬಾಯಾರಿಕೆಯಿಂದ ಬಳಲಿ ಬೆಂದ ಮನುಷ್ಯನು ತಣ್ಣೀರನ್ನು ಕುಡಿಯುವಂತೆ ಗಟಗಟ ಕುಡಿದುಬಿಟ್ಟನು ಆ ಅಗ್ನಿದೇವ.

**೧೬೫. ತತಃ ಪೀತೇ ರೇತಸಿ ವೈ ಶಾರ್ವೇ ದೇವೇನ ವಹ್ನಿನಾ ।**
**ಸ್ವಸ್ಥಾಃ ಸುರಾಃ ಸಮಾಮಂತ್ರ್ಯಹರಂ ಜಗ್ಮುಃತ್ರಿವಿಷ್ಟಪಮ್ ॥**

ಹಸಿದ ಮನುಷ್ಯನು ಕರಿದ ಹುರಿದ ಭಕ್ಷ್ಯಗಳನ್ನು ಗಬಗಬ ತಿಂದು ನೀರು ಕುಡಿಯುವಂತೆ ವೈಶ್ವಾನರನು ಆ ರುದ್ರನ ರೇತಸ್ಸನ್ನೆಲ್ಲ ಪಾನಮಾಡಿದ್ದನ್ನು ಕಂಡು ದೇವತೆಗಳಿಗೆಲ್ಲ ನಿಶ್ಚಿಂತೆಯಾಯಿತು. ಸಮಾಧಾನದ ಉಸಿರನ್ನು ಬಿಟ್ಟು ಭವನಿಂದ ಬೀಳ್ಕೊಂಡು ಅವರೆಲ್ಲರೂ ತಮ್ಮ ಸ್ವರ್ಗಸ್ಥಾನಕ್ಕೆ ಹೊರಟುಹೋದರು. ದೇವತೆಗಳೆಲ್ಲ ಅತ್ತ ಹೋದ ಬಳಿಕ ಇತ್ತ ಮಹಾದೇವನೂ ಮನೆಗೆ ಬಂದು ತನ್ನ ಮನದನ್ನೆಯನ್ನು ಕುರಿತು ಇಂತು ನುಡಿದನು -

**೧೬೬. ದೇವಿ ದೇವೈರಿಹಾಗತ್ಯ ಯತ್ನಾತ್ ಪ್ರೇಷ್ಯ ಹುತಾಶನಮ್ ।**
**ತತಃ ಪ್ರೋಕ್ತೋ ನಿಷಿದ್ಧಶ್ಚ ಪುತ್ರೋತ್ಪತ್ತಿಂ ತವೋದರಾತ್ ॥**

''ದೇವಿ, ದೇವತೆಗಳು ಇಲ್ಲಿಯವರೆಗೆ ಬಂದಿದ್ದರು. ಬಹುಪ್ರಯಾಸದಿಂದ ಅಗ್ನಿಯನ್ನು ನನ್ನ ಬಳಿಗೆ ಕಳಿಸಿದ್ದರು ಮತ್ತು ನಾನು ನಿನ್ನಲ್ಲಿ ಮಗನನ್ನು ಹುಟ್ಟಿಸಬಾರದು ಎಂದು ನಿಷೇಧಿಸಿದ್ದಾರೆ''.

**೧೬೭. ಸಾಪಿ ಭರ್ತುರ್ವಚಃ ಶ್ರುತ್ವಾ ಕ್ರುದ್ಧಾ ರಕ್ತಾಂತಲೋಚನಾ ।**
**ಶಶಾಪ ದೇವತಾಃ ಸರ್ವಾ ನಷ್ಟಪುತ್ರೋದ್ಭವಾ ಶಿವಾ ॥**

ಪಶುಪತಿಯ ಈ ಮಾತುಗಳು ಕಾತ್ಯಾಯಿನಿಯ ಕಿವಿಗೆ ಬಿದ್ದ ಕೂಡಲೇ ಅವಳ ಕಂಗಳು ಕ್ರೋಧದಿಂದ ಕಿಡಿಯುಗುಳಿದವು. ಬಂಜೆತನ ಬಂತೆಂಬ ಕೋಪದಿಂದ ಎಲ್ಲ ದೇವತೆಗಳಿಗೂ ಅವಳು ಶಾಪ ಹಾಕಿದಳು.

೧೬೮. ಯಸ್ಮಾನ್ನೇಚ್ಛಂತಿ ತೇ ದುಷ್ಟಾ ಮಮ ಪುತ್ರಂ ಮಮೌರಸಂ ।
ತಸ್ಮಾತ್ತೇ ನ ಜನಯಿಷ್ಯಂತಿ ಸ್ವಾಸು ಯೋಷಿತ್ಸು ಪುತ್ರಕಾನ್ ॥

"ಎಲ್ಲ ದೇವತೆಗಳಲ್ಲಿ ಸಂತಾನ ಉತ್ಪತ್ತಿಯೇ ನಷ್ಟವಾಗಿ ಹೋಗಲಿ. ಅವರೆಲ್ಲರೂ, ಗುಟ್ಟಾಗಿ ನನ್ನ ಹೊಟ್ಟೆಯಿಂದ ಮಕ್ಕಳೇ ಹುಟ್ಟದಂತೆ ಹೊಂಚು ಹಾಕಿದ್ದಾರೆ, ಆದುದರಿಂದ ಅವರಿಗೂ, ಅವರವರ ಮಡದಿಯರಿಂದ ಮಕ್ಕಳು ಹುಟ್ಟದಿರಲಿ."

೧೬೯. ಏವಂ ಶಪ್ತ್ವಾ ಸುರಾನ್ ಗೌರೀ ಶೌಚಶಾಲಾಮುಪಾಗಮತ್ ।
ಆಹೂಯ ಮಾಲಿನೀಂ ಸ್ನಾತುಂ ಮತಿಂ ಚಕ್ರೇ ತಪೋಧನ ॥

ಹೀಗೆ ಸುರರನ್ನೆಲ್ಲ ಶಪಿಸಿ ಗೌರಿಯು ಸ್ನಾನದ ಮನೆಗೆ ಬಂದಳು. ಮಾಲಿನಿ ಎಂಬ ತನ್ನ ಸಖಿಯನ್ನು ಕರೆದು ನಾನು ಸ್ನಾನಮಾಡಬೇಕಾಗಿದೆ. ಅದಕ್ಕೆ ತಕ್ಕ ಏರ್ಪಾಟನ್ನು ಮಾಡು ಎಂದು ಹೇಳಿದಳು.

೧೭೦. ಮಾಲಿನೀ ಸುರಭಿಂ ಗೃಹ್ಯ ಶ್ಲಕ್ಷ್ಣಮುದ್ವರ್ತನಂ ಶುಭಾ ।
ದೇವ್ಯಂಗಮುದ್ವರ್ತಯತೇ ಕರಾಭ್ಯಾಂ ಕನಕಪ್ರಭಾ ॥

ಆಗ ಮಾಲಿನಿಯು ಘಮಘಮ ಸುಗಂಧವುಳ್ಳ ನುಣುಪಾದ ಮೈ ಉಜ್ಜುವ ಚೂರ್ಣವನ್ನು ತೆಗೆದುಕೊಂಡು ಮಹಾದೇವಿಯ ಅಂಗಾಂಗಗಳನ್ನು ತನ್ನ ಎರಡೂ ಕೈಯಿಂದ ತಿಕ್ಕಿ ತೊಳೆದಳು. ಅಭ್ಯಂಗ ಸ್ನಾನದಿಂದ ಮಹಾದೇವಿಯ ಮೈಯಲ್ಲಿ ಕನಕದ ಕಾಂತಿಯು ಮಿಂಚಾಡ ತೊಡಗಿತು. ಆ ಮಹಾದೇವಿಯ ತಿಕ್ಕಿ ತೊಳೆದ ಮೈಯಿಂದ ಹೊರಟ ಕೊಳೆಯಲ್ಲಿ ಜೀವಕಳೆತುಂಬಿ ಅದು ಆ ನೀರಮನೆಯಲ್ಲಿ ಹರದಾಡಹತ್ತಿತ್ತು. ಅದೊಂದು ಕೀಟವಿರ ಬಹುದೆಂದು ಪಾರ್ವತಿಯು ಗಮನಿಸಲಿಲ್ಲ.

೧೭೧. ತಸ್ಯಾಂ ಗತಾಯಾಂ ಶೈಲೇಯೀ ಮಲಾಚ್ಚಕ್ರೇ ಗಜಾನನಮ್

ಹೀಗೆ ಆ ಶಿವಸತಿಯ ಅಂಗಾಂಗಗಳನ್ನು ಸ್ವಚ್ಛವಾಗಿ ಸುಗಂಧಿಪುಡಿಯನ್ನು ಮೈಗೆ ಹಚ್ಚಿ ತಿಕ್ಕಿ ಉಜ್ಜಿ ಮಾಲಿನಿಯು ಬೇರೆ ಸ್ನಾನದ ಉಪಕರಣಗಳನ್ನು ತರಲು ಹೊರಬಿದ್ದು ಇನ್ನೊಂದು ಕೋಣೆಗೆ ತೆರಳಿದಳು. ಅವಳು ಹೋದ ಬಳಿಕ ಶೈಲಸುತೆಯಾದ ಸತೀದೇವಿಯು ಆ ತನ್ನ ಹರಿದು ಹೋಗುವ ಮೈಯಲ್ಲಿಯ ಮಣ್ಣಿನಿಂದಲೇ ಗಣಪತಿಯನ್ನು ನಿರ್ಮಿಸಿದಳು.

೧೭೨. ಚತುರ್ಭುಜಂ ಪೀನವಕ್ಷಃ ಪುರುಷಂ ಲಕ್ಷಣಾನ್ವಿತಮ್ ।
ಕೃತ್ವೋತ್ಸಸರ್ಜ ತ ಭೂಮೌ ಸ್ಥಿತಾ ಭದ್ರಾಸನೇ ಪುನಃ ॥

ನಾಲ್ಕು ತೋಳು ಹರವಾದ ಎದೆ ಮಹಾಪುರುಷರ ಲಕ್ಷಣಗಳೆಲ್ಲವೂ ಅವನಲ್ಲಿ ಪೂರ್ಣವಾಗಿದ್ದವು. ಹೀಗೆ ಗಣಪತಿಯನ್ನು ಸ್ವಯಂ ರಚಿಸಿ ಅವನನ್ನು ನೆಲದ ಮೇಲೆ ಬಿಟ್ಟಳು. ಮತ್ತೆ ತಾನು ಭದ್ರಾಸನದ ಮೇಲೆ ಮಂಡಿಸಿದಳು.

೧೭೩. ಕಿಮರ್ಥಂ ಭೀರು ಶನಕೈರ್ಹಸಸಿ ತ್ವಮತೀವ ಚ ।
ಸಾಥೋವಾಚ ಹಸಾಮ್ಯೇವಂ ಭವತ್ಯಾಸ್ತನಯಃ ಕಿಲ ॥

ಅಷ್ಟರಲ್ಲಿ ಮಾಲಿನಿಯು ಮರಳಿ ಬಂದು ಪಾರ್ವತಿಯ ತಲೆಗೆ ಚೂರ್ಣ ಹಚ್ಚಿ ತಿಕ್ಕಿ ನೀರು ಹಾಕಿದಳು. ಜೀವಗೊಂಡು ಬಚ್ಚಲ ಮನೆಯಲ್ಲಿ ಹರಿದಾಡುವ ಕಾಳಿಯ ಕೊಳೆಯ ಕೂಸನ್ನು ಕಂಡು ಮಾಲಿನಿಗೆ ನಗೆ ಬಂದಿತು. ''ನಗೆಯ ಕಾರಣವೇನು? ನೀನು ಏಕೋ ಬಹಳ ಮಂದಹಾಸ ಮಾಡುತ್ತಿರುವಿ. ಏಕೆ?'' ಎಂದು ಪಾರ್ವತಿ ಕೇಳಿದಳು.

೧೭೪. ಭವಿಷ್ಯತೀತಿ ದೇವೇನ ಪ್ರೋಕ್ತೋ ನಂದಿಗಣಾಧಿಪಃ ।
ತಚ್ಛ್ರುತ್ವಾ ಮಮ ಹಾಸೋಽಯಂ ಸಂಜಾತೋಽದ್ಯ ಕೃಶೋದರಿ॥

ಆಗ ಮಾಲಿನಿಯು ''ನಿನಗೆ ಗಂಡು ಮಗು ಜನಿಸಿದ್ದಾನೆ. ಶಂಕರನು ನಿನಗೊಬ್ಬ ಗಂಡಸು ಮಗನು ಆಗುವನೆಂದು ನಂದಿಯ ಮುಂದೆ ಹೇಳಿದ್ದನಂತೆ. ಆದರೆ ದೇವತೆಗಳು ನಿನಗೆ ಮಕ್ಕಳಾಗಬಾರದೆಂದು ಶಿವನನ್ನು ಬೇಡಿಕೊಂಡು ನಿನ್ನೊಡನೆ ಅವನ ವಿಹಾರವನ್ನೇ ತಡೆದಿದ್ದರು. ಆದರೆ ಅವರ ಉದ್ದೇಶವು ಈಡೇರಲಿಲ್ಲ. ಶಿವನ ಸಂಗವನ್ನು ನಿನಗೆ ಅವರು ಈಗ ತಡೆದಿದ್ದರೂ ನೀನು ಒಬ್ಬ ಮಗನನ್ನು ಪಡೆದೇ ಬಿಟ್ಟೆಯಲ್ಲವೇ! ಅದಕ್ಕಾಗಿ ನನಗೆ ನಗೆ ಬಂದಿತು.''

೧೭೫. ಏತಚ್ಛ್ರುತ್ವಾ ವಚೋ ದೇವೀ ಸಸ್ನೌ ತತ್ರ ವಿಧಾನತಃ ।
ಸ್ನಾತ್ವಾರ್ಚ್ಯ ಶಂಕರಂ ಜಪ್ತ್ವಾ ಸಮಭ್ಯಾಗಾತ್ ಗೃಹಂ ಪ್ರತಿ ॥

ಮಾಲಿನಿಯ ಈ ಮಾತನ್ನು ಕೇಳಿ ಪಾರ್ವತಿಯು ಪುತ್ರ ಪ್ರಸವ ನಿಮಿತ್ತಕ್ಕಾಗಿ ತಲೆಯ ಮೇಲೆ ನೀರನ್ನು ಹಾಕಿಕೊಂಡು ವಿಧಿಪೂರ್ವಕವಾಗಿಯೇ ಸ್ನಾನವನ್ನು ನೆರವೇರಿಸಿ ದಳು. ಸ್ನಾನಮಾಡಿ ಭಕ್ತಿಯಿಂದ ಶಿವಪ್ರಭುವನ್ನು ಪೂಜಿಸಿ ವಾಸಗೃಹಕ್ಕೆ ಬಂದಳು.

೧೭೬. ಸ್ನಾತಸ್ತಸ್ಯ ತತಸ್ತಸ್ಮಾತ್ ಸ್ಥಿತಃ ಸಮಲಪೂರುಷಃ ।
ಉಮಾಸ್ವೇದಭವಸ್ವೇದಂ ಜಲಭೂಮಿ ಸಮನ್ವಿತಮ್ ॥

ಅನಂತರ ಪರಮೇಶ್ವರನೂ ಕೂಡ ಸ್ನಾನಮಾಡಿ ಆ ಭದ್ರಾಸನದ ಮೇಲೆ ಕುಳಿತು ಕೊಂಡನು. ಮಹಾದೇವಿಯ ಮೈಮಣ್ಣಿನಿಂದ ರೂಪಗೊಂಡ ಆ ಗಣಪತಿಯು ಅಲ್ಲಿಯೇ ನಿಂತುಕೊಂಡಿದ್ದನು. ಪಾರ್ವತಿಯ ಮೈಮೇಲೆ ಹರಿದ ಮಹಾದೇವರ ಬೆವರು ಮತ್ತು ಉಮಾದೇವಿಯ ಮೈ ಬೆವರು ಇವೆರಡಕ್ಕೂ ಭೂಮಿಯ ಮೇಲಿನ ಮಣ್ಣು ನೀರು ಮಿಶ್ರಿತವಾಗಿ ಇವೆಲ್ಲವುಗಳ ಸಮುಚಿತ ಸಂಪರ್ಕದಿಂದ ಗಣಪತಿಯು ಮೈದಾಳಿ ಎದ್ದು ಬಂದನು.

೧೭೭. ತತ್ಸಂಪರ್ಕಾತ್ ಸಮುತ್ತಸ್ಥೌ ಪೂತ್ಕೃತ್ಯ ಕರಮುತ್ತಮಮ್ ।
ಅಪತ್ಯಂ ಹಿಂ ವಿದಿತ್ವಾ ಚ ಪ್ರೀತಿಮಾನ್ ಭುವನೇಶ್ವರಃ ॥

ತನ್ನ ಶುಂಡಾದಂಡದಿಂದ ಫೂತ್ಕರಿಸಿ ಬಳಿಗೆ ಬಂದ ಆ ಬಾಲಗಣಪತಿಯನ್ನು ಕಂಡು ಲೋಕೇಶ್ವರನಾದ ಶಿವನು ಅವನನ್ನು ತನ್ನ ಮಗನೆಂದು ತಿಳಿದನು. ಅವನ ಮೇಲೆ ಹರನಿಗೆ ವಿಶೇಷವಾದ ಪ್ರೀತಿ ಉಂಟಾಯಿತು. ಅವನನ್ನು ಎತ್ತಿಕೊಂಡು ಮಹಾದೇವನು ನಂದಿಗೆ, ಇವನೇ ನಾನು ಹೇಳಿದ ನನ್ನ ಮಗ ಎಂದು ತಿಳಿಸಿದನು.

೧೭೮. ರುದ್ರಃ ಸ್ನಾತ್ವಾರ್ಚ್ಯ ದೇವಾದೀನ್ವಾಗ್ಭಿರಗ್ನಿಂ ಪಿತೃನಪಿ ।
ಜಪ್ತ್ವಾ ಸಹಸ್ರನಾಮಾನಮುಮಾಪಾರ್ಶ್ವಮುಪಾಗತಃ ॥

ಅನಂತರ ರುದ್ರ ದೇವರು ಸ್ನಾನ ಮಾಡಿ ದೇವರ ಪೂಜೆ ಮಾಡಿ ಪಿತೃಗಳನ್ನು ತೀರ್ಥದಿಂದಲೂ, ಅಗ್ನಿಯನ್ನು ಹವಿರ್ದ್ರವ್ಯಗಳಿಂದಲೂ ಸಂತೋಷಪಡಿಸಿ ವಿಷ್ಣುಸಹಸ್ರನಾಮ ಪಾರಾಯಣ ಮಾಡಿ ಪಾರ್ವತಿಯ ಬಳಿಗೆ ಬಂದರು.

೧೭೯. ಪ್ರಾಹ ತ್ವಂ ಪಶ್ಯ ಶೈಲೇಯಿ ತ್ವತ್ಸುತಂ ಗುಣಸಂಯುತಮ್ ।
ಯಃತ್ವದಂಗ ಮಲಾದ್ದಿವ್ಯಃ ಕೃತೋ ಜಗಮುಖೋ ನರಃ ।

ಅವಳನ್ನು ಕುರಿತು ಮುಗುಳು ನಗುತ್ತ ''ಶೈಲ ನಂದಿನಿ, ಈ ನಿನ್ನ ಮಗನನ್ನು ನೋಡು. ಒಳ್ಳೇ ಸದ್ಗುಣಿಯಾಗಿದ್ದಾನೆ.'' ನಿನ್ನ ದೇಹದ ಕೊಳೆಯಿಂದ ಈ ಅದ್ಭುತ ಪುರುಷನು ಮೈದಾಳಿದ್ದಾನೆ. ಈ ನಿನ್ನ ದಿವ್ಯ ಪುತ್ರನಿಗೆ ಆನೆಯ ಮುಖ, ಮಾನವರ ದೇಹ ಇರುತ್ತದೆ. ಇಂಥ ಅದ್ಭುತ ಆಕಾರದ ಸದ್ಗುಣ ಮೂರ್ತಿಯಾದ ಈ ನಿನ್ನ ಪುತ್ರನನ್ನು ಚೆನ್ನಾಗಿ ನೋಡು'' ಎಂದು ಅವನನ್ನು ತೋರಿಸಿದನು.

೧೮೦. ತತಃ ಪ್ರೀತಾ ಗಿರಿಸುತಾ ತಂ ಪುತ್ರಂ ಪರಿಷಸ್ವಜೇ ॥

ಅವನನ್ನು ಕಂಡು ಆ ಪರ್ವತ ಪುತ್ರಿಗೆ ಪ್ರೀತಿ ಉಕ್ಕಿ ಬಂದು ಆ ತನ್ನ ಮಗನನ್ನು ಭರದಿಂದ ಬಿಗಿದಪ್ಪಿದಳು. ನೆತ್ತಿಯನ್ನು ಮೂಸಿದಳು. ಅದರಂತೆ ತ್ರಿಪುರಾಂತಕನಾದ ಸ್ಥಾಣುವು ಕೂಡಾ ಆ ಮಗನನ್ನು ಮುದ್ದಾಡಿ ಉಮಾದೇವಿಗೆ ಹೇಳಿದನು-

೧೮೧. ನಾಯಕೇನ ವಿನಾ ದೇವಿ ಮಯಾ ಭೂತೋಪಿ ಪುತ್ರಕಃ ।
ಯಸ್ಮಾಜ್ಜಾತಸ್ತತೋ ನಾಮ್ನಾ ಭವಿಷ್ಯತಿ ವಿನಾಯಕಃ ॥

''ದೇವಿಯೇ, ನಾಯಕನಾದ ನನ್ನ ಸಂಪರ್ಕವಿಲ್ಲದೇ ನೀನು ಈ ಮಗನನ್ನು ಹಡೆದಿದ್ದಿಯೇ. ಆದುದರಿಂದಲೇ ಇವನಿಗೆ ವಿನಾಯಕ ಎಂಬ ಹೆಸರು ಉಂಟಾಗುವದು.''

೧೮೨. ಪೂಜಯಿಷ್ಯಂತಿ ದೇವಾಶ್ಚ ದೇವಿ ಲೋಕಾಶ್ಚರಾಚರಾಃ ।
ಏಷ ವಿಘ್ನ ಸಹಸ್ರಾಣಿ ದೇವಾದೀನಾಂ ಹನಿಷ್ಯತಿ ॥

''ಇವನು ದೇವತೆಗಳ ಹಾಗೂ ಭಕ್ತ ಭಾವುಕರ ಸಹಸ್ರಾರು ವಿಘ್ನಗಳನ್ನು ಪರಿಹರಿಸುತ್ತಾನೆ. ಇದಲ್ಲದೇ ದೇವಿ, ಇವನನ್ನು ಎಲ್ಲ ದೇವತೆಗಳೂ ಪೂಜಿಸುತ್ತಾರೆ. ಚರಾಚರವಾದ ಜಗತ್ತೆಲ್ಲವೂ ಇವನನ್ನು ಪೂಜಿಸುವದು.'' ಹೀಗೆ ಹೇಳಿ ಪಾರ್ವತಿದೇವಿಗೆ ಆ ಮಗುವನ್ನು ಕೊಟ್ಟನು. ಅವನಿಗೆ ಸಹಾಯಕನಾಗಿ ಘಟೋದರ ಎಂಬ ಪ್ರಸಿದ್ಧನಾದ ಗಣಶ್ರೇಷ್ಠನನ್ನು ಸಹಾಯಕನನ್ನಾಗಿ ನೇಮಿಸಿದನು.

೧೮೩. ತೇ ಸರ್ವೇ ಪರಮೇಶೇನ ದೇವ್ಯಾಃ ಪ್ರೀತ್ಯೋಪಪಾದಿತಾಃ ।
ದೇವೀ ಚ ತಂ ಸುತಂ ದೃಷ್ಟ್ವಾ ಪರಾಂ ಮುದಮವಾಪ ಚ ॥

ಅವರೆಲ್ಲರೂ ದೇವಿಯ ಪ್ರೀತಿಯನ್ನು ಪುರಸ್ಕರಿಸಿ ಪರಮೇಶ್ವರನಿಂದಲೇ ಏರ್ಪಾಡಿಸಲ್ಪಟ್ಟರು. ದೇವಿಯು ಕೂಡ ಸಹಾಯಕರಿಂದೊಡಗೂಡಿದ ಮಗ ವಿನಾಯಕನನ್ನು ಕಂಡು ಪರಮಾನಂದವನ್ನು ಹೊಂದಿದಳು.

೧೮೪. ರೇಮೇಽಥ ಶಂಭುನಾ ಸಾರ್ಧಂ ಮಂದಿರೇ ಚಾರುಕಂದರೇ ।
ಏವಂ ಭೂಯೋಽಭವದ್ದೇವೀ ಇಯಂ ಕಾತ್ಯಾಯಿನೀ ವಿಭೋಃ ।

ಅನಂತರ ಪಾರ್ವತಿಯು ತಮ್ಮ ತಂದೆಯ ಹಾಗೂ ತಮ್ಮ ಮಂದಿರಗಳಲ್ಲಿಯೂ, ಸುಂದರವಾದ ಕಂದರಗಳಲ್ಲಿಯೂ ಶಂಭುವಿನೊಂದಿಗೆ ವಿಹರಿಸಿದಳು.

೧೮೫. ಯಾ ಜಘಾನ ಮಹಾದೈತ್ಯೌ ಪುರಾ ಶುಂಭನಿಶುಂಭಕೌ ।
ಏತತ್ತ್ವೋಕ್ತಂ ವಚನಂ ಸುಭಾಷ್ಯಂ ।

ಹೀಗೆ ಮೊದಲು ದಾಕ್ಷಾಯಣಿಯಾಗಿದ್ದ ಸತಿದೇವಿಯು ಮತ್ತೆ ಈಗ ಕಾತ್ಯಾಯಿನಿಯಾಗಿ ಅವತರಿಸಿದ್ದಾಳೆ. ಇವಳೇ ಮುಂದೆ ಶುಂಭ, ನಿಶುಂಭರನ್ನು ಸಂಹರಿಸಿದಳು.

೧೮೬. ಯತೋದ್ಭವಃ ಪರ್ವತತೋ ಮೃಡಾನ್ಯಾಃ ॥
ಸ್ವರ್ಗ್ಯಂ ಯಶಸ್ಯಂ ಚ ತಥಾಘಹಾರಿ ।
ಆಖ್ಯಾನಮೂರ್ಜಸ್ಕರಮದ್ರಿಪುತ್ರ್ಯಾಃ ॥

ಈ ಪ್ರಕಾರ ನಿನಗೆ ನಾನು ಹೇಳಿದ ಪಾರ್ವತೀದೇವಿಯು ಪುನಃ ಹುಟ್ಟಿ ಪರ್ವತ ಪುತ್ರಿಯಾಗಿ ಹೇಗೆ ಜನಿಸಿದಳೆಂಬುದನ್ನು ಹೇಳಿದ್ದೇನೆ. ಈ ಗಿರಿಕನ್ಯೆ ಗೌರಿಯ ಪುನರ್ಜನ್ಮದ ಕಥೆಯನ್ನು ಕೇಳಿದವರಿಗೆ ಎಲ್ಲ ಪಾಪಗಳು ಪರಿಹಾರವಾಗಿ ದಿವ್ಯವಾದ ಸ್ವರ್ಗಸದ್ಗತಿಯು ಉಂಟಾಗಲಿ. ಇಂಥ ಪರ್ವತಪುತ್ರಿಯ ಈ ಆಖ್ಯಾನವು ಸರ್ವಜನರಿಗೂ ಉತ್ಕರ್ಷದಾಯಕವಾಗಿದೆ.

ವಾಮನ ಮಹಾಪುರಾಣದಲ್ಲಿ ಗಿರಿಕನ್ಯೆಯ ಜನ್ಮಾಂತರ ಎಂಬ
ಐವತ್ತನಾಲ್ಕನೇಯ ಅಧ್ಯಾಯವು ಮುಗಿದುದು.



## ಸಿಂಹವಾಹನೆಯ ರಣೋತ್ಸಾಹ — ಅಧ್ಯಾಯ - ೫೫

೧೮೭. ಕಶ್ಯಪಸ್ಯ ದನುರ್ನಾಮ್ನಾ ಭಾರ್ಯಾಸೀದ್ದ್ವಿಜಸತ್ತಮ ।
ತಸ್ಯಾಃ ಪುತ್ರತ್ರಯಂ ಚಾಸೀತ್ಸಹಸ್ರಾಕ್ಷಾದ್ಬಲಾಧಿಕಂ ॥

**ಪುಲಸ್ತ್ಯ** : ಕಶ್ಯಪ ಋಷಿಯ ಹೆಂಡತಿ ಹೆಸರು ದನು. ಆ ಮುನಿಗೆ ಈ ಮಡದಿಯಲ್ಲಿ ಮೂವರು ಮಕ್ಕಳು. ಅವರಲ್ಲಿ ಪ್ರತಿಯೊಬ್ಬರು ಬಲದಲ್ಲಿ ಇಂದ್ರನಿಗೆ ಮಿಗಿಲಾಗಿದ್ದರು.

೧೮೮. ಜ್ಯೇಷ್ಠಃ ಶುಂಭ ಇತಿ ಖ್ಯಾತೋ ನಿಶುಂಭಶ್ಚಾಪರೋಽಸುರಃ ।
ತೃತೀಯೋ ನಮುಚಿರ್ನಾಮ ಮಹಾಬಲಸಮನ್ವಿತಃ ॥

ಹಿರಿಯ ಮಗನ ಹೆಸರು ಶುಂಭ. ಎರಡನೆಯವನೇ ನಿಶುಂಭ, ಮೂರನೇಯ ಮಗನೇ ನಮುಚಿ, ಮಹಾಬಲಿಷ್ಠ.

೧೮೯. ಯೋಽಸೌ ನಮುಚಿರಿತ್ಯೇವಂ ಖ್ಯಾತೋ ದನುಸುತೋಽಸುರಃ ॥
ತಂ ಹಂತುಮಿಚ್ಛತಿ ಹರಿಃ ಪ್ರಗೃಹ್ಯಕುಲಿಶಂ ಕರೇ ॥

೧೯೦. ತ್ರಿದಿವೇಶಂ ಸಮಾಯಾತಂ ನಮುಚಿಸ್ತು ಭಯಾದಥ ।
ಪ್ರವಿವೇಶ ರಥಂ ಭಾನೋಃ ತತೋ ನಾಶಕದಚ್ಯುತಃ ॥

ದನುದೇವಿಯ ಮೂರನೇ ಮಗನಾದ ನಮುಚಿಯನ್ನು ಕೊಲ್ಲಬೇಕೆಂದು ಇಂದ್ರನ ಉತ್ಕಟ ಇಚ್ಛೆ. ವಜ್ರಾಯುಧವನ್ನು ಎತ್ತಿಕೊಂಡೇ ಬಂದ ದೇವೇಂದ್ರ. ವಜ್ರಪಾಣಿಯಾಗಿ ಬಂದ ಆ ಸ್ವರ್ಗದೊಡೆಯನನ್ನು ಕಂಡು ನಮುಚಿಯು ಹೆದರಿದ. ಭಯಭ್ರಾಂತನಾಗಿ ಸೂರ್ಯನ ರಥದಲ್ಲಿ ಸೇರಿಕೊಂಡು ಬಿಟ್ಟ. ಆಗ ಇಂದ್ರನಿಗೆ ಅವನನ್ನು ಕೊಲ್ಲುವದು ಅಶಕ್ಯವಾಯಿತು.

೧೯೧. ಶಕ್ರಸ್ತೇನಾಥ ಸಮಯಂ ಪ್ರಚಕ್ರೇ ಸ ಮಹಾಮನಾಃ ।
ಅವಧ್ಯತ್ವಂ ವರಂ ಪ್ರಾದಾತ್ ಶಸ್ತ್ರೈರಸ್ತ್ರೈಶ್ಚ ನಾರದ ॥

೧೯೨. ತತೋಽವಧ್ಯತ್ವಮಾಜ್ಞಾಯ ಶಸ್ತ್ರೈರಸ್ತ್ರೈಶ್ಚನಾರದ
ಸಂತ್ಯಜ್ಯ ಭಾಸ್ಕರರಥಂ ಪಾತಾಲಮುದಯಾದಥ ॥

ಇದರಿಂದ ಭಾಸ್ಕರನ ತೇರಿನ ಪಯಣವೇ ನಿಂತುಹೋಯಿತು. ಹೀಗೆ ಕಾಲಚಕ್ರಕ್ಕೆ ನಮುಚಿಯಿಂದ ತಡೆ ಉಂಟಾದುದನ್ನು ಕಂಡು ಚತುರಮತಿಯಾದ ಶಚೀಪತಿಯು ಆ ನಮುಚಿಯೊಡನೆ ಸಂಧಿಮಾಡಿಕೊಂಡನು. ಶಸ್ತ್ರ ಅಸ್ತ್ರಗಳಿಂದ ಅವಧ್ಯತ್ವ ವರವನ್ನು ಕೊಟ್ಟನು.

೧೯೩. ಸ ನಿಮಜ್ಜನ್ನಪಿ ಜಲೇ ಸಾಮುದ್ರಂಫೇನಮುತ್ತಮಮ್ ।
ದದೃಶೇ ದಾನವಪತಿಃ ತಂ ಪ್ರಗೃಹ್ಯೇದಮಬ್ರವೀತ್ ॥

ಹೀಗೆ "ಯಾವ ಶಸ್ತ್ರಾಸ್ತ್ರಗಳಿಂದಲೂ ಕೊಲ್ಲಲ್ಪಡುವದಿಲ್ಲ" ಎಂದು ಇಂದ್ರನಿಂದ ವರರೂಪವಾದ ಆಶ್ವಾಸನೆಯನ್ನು ಪಡೆದ ಬಳಿಕ ನಮುಚಿ ದಾನವನು ಭಾಸ್ಕರನ ರಥವನ್ನು ಬಿಟ್ಟು ಪಾತಾಳಕ್ಕೆ ಪ್ರಯಾಣ ಬೆಳೆಸಿದನು.

೧೯೪. ಯದುಕ್ತಂ ದೇವಪತಿನಾ ವಾಸವೇನ ವಚೋಽಸ್ತು ತತ್ ।
ಅಯಂ ಸ್ಪೃಶತು ಮಾಮ್ ಫೇನಃ ಕರಾಭ್ಯಾಂ ಗೃಹ್ಯ ದಾನವಃ॥

ಅಲ್ಲಿ ಸಮುದ್ರದ ನೀರಿನಲ್ಲಿ ಮುಳುಗಿದಾಗ ಸಾಗರದ ಬೆಳ್ಳಗಿನ ಬುರುಗನ್ನು ಅವನು ನೋಡಿದನು. ಬುರುಗನ್ನು ಕೈಯಲ್ಲಿ ಹಿಡಿದು "ದೇವನಾಯಕನಾದ ಇಂದ್ರನು ಹೇಳಿದಂತೆಯೇ ಆಗಲಿ. ಈ ಸಮುದ್ರದ ನೊರೆಯು ನನ್ನನ್ನು ಮುಟ್ಟಲಿ ನೋಡೋಣ."

೧೯೫. ಮುಖನಾಸಾದಿಕರ್ಣಾದೀನ್ಸಮಾಪೂರ್ಯ ಯಥೇಚ್ಛಯಾ ।
ತಸ್ಮಿನ್ ಶಕ್ರೋಽಶೃಕದ್ವಜ್ರಮಂತರ್ಹಿತಮಪೀಶ್ವರಃ ॥

ಎಂದು ನುಡಿಯುತ್ತ ತನ್ನ ಕಣ್ಣು ಮೂಗು, ಬಾಯಿಗಳಲ್ಲಿ ಆ ಬುರುಗನ್ನೇ ಯಥೇಚ್ಛವಾಗಿ ತುಂಬಿಕೊಂಡು ಮನಬಂದಂತೆಲ್ಲ ಆ ನೊರೆಯ ನೆರೆಯನ್ನು ಅಪ್ಪಳಿಸುತ್ತ ಇಂದ್ರನನ್ನು ಉಪಹಾಸಗೈಯತೊಡಗಿದನು. ಇದನ್ನೆಲ್ಲ ನಿಗೂಢವಾಗಿ ನೋಡುತ್ತಿರುವ ಸಾವಿರಗಣ್ಣಿನ ಶಕ್ರನು ಆ ಸಮುದ್ರದ ನೊರೆಯಲ್ಲಿಯೇ ತನ್ನ (ಗುಟ್ಟಾಗಿ) ವಜ್ರಾಯುಧದ ಸಾರವನ್ನು ಮರೆಯಾಗಿ ಇಟ್ಟನು.

೧೯೬. ತೇನಾಸೌ ರುದ್ಧನಾಸಾಸ್ಯಃ ಪಪಾತ ಚ ಮಮಾರ ಚ ।
ಸಮಯೇನ ತಥಾ ನಷ್ಟ ಬ್ರಹ್ಮಹತ್ಯಾಸ್ಪೃಶದ್ಧರಿಂ ॥

ಅದೇ ಬುರುಗಿನಿಂದ ನಮುಚಿಯ ಕಣ್ಣು, ಮೂಗು, ಮುಖಗಳೆಲ್ಲಕ್ಕೂ ವಜ್ರದ ಸನ್ನಿಧಾನದಿಂದ ಭಯಂಕರ ಪೆಟ್ಟುಬಿದ್ದು ಉಸಿರುಗಟ್ಟಿತು. ಕೂಡಲೇ ನಮುಚಿಯು ನೆಲಕ್ಕುರುಳಿ ಮರಣ ಹೊಂದಿದನು. ಅವನು ದೇವೇಂದ್ರನೊಂದಿಗೆ ಮಾಡಿಕೊಂಡ ಕಟ್ಟು ಪಾಡಿಗೆ ಒಳಗಾಗಿ ಮರಣ ಹೊಂದಿದ್ದರೂ ಅವನು ಬ್ರಾಹ್ಮಣ ಶ್ರೇಷ್ಠರಾದ ಕಶ್ಯಪ ಮಹರ್ಷಿಗಳ ಕುಮಾರನಷ್ಟೇ! ಅವನನ್ನು ಕೊಂದದ್ದರಿಂದ ಇಂದ್ರನಿಗೆ ಬ್ರಹ್ಮಹತ್ಯಾ ಪಾಪವು ಬಂದಿತು.

೧೯೭. ಸ ಚೈತತ್ತೀರ್ಥಮಾಸಾದ್ಯ ಸಾತಃ ಪಾಪಾದಮುಚ್ಯತ ।
ತತೋಽಸ್ಯ ಭ್ರಾತರೌ ವೀರೌ ಕ್ರುದ್ಧೌಶುಂಭನಿಶುಭಂಕೌ ॥

ಆ ನಮುಚಿದಾನವನನ್ನು ಕೊಂದಪಾಪವನ್ನು ಕಳೆದುಕೊಳ್ಳಲಿಕ್ಕಾಗಿ ದೇವೇಂದ್ರನು ಈ ತೀರ್ಥಕ್ಕೆ ಬಂದನು. ಇದರ ಪವಿತ್ರ ಜಲದಲ್ಲಿ ಮಿಂದನು. ಬ್ರಹ್ಮಹತ್ಯಾ ಪಾಪದಿಂದ ಬಿಡುಗಡೆ ಹೊಂದಿದನು.

೧೯೮. ಉದ್ಯೋಗಂ ಸುಮಹತ್ ಕೃತ್ವಾ ಸುರಾನ್ ಬಾಧಿತುಮಾಗತೌ ।
ಸುರಾಸ್ತೇಽಪಿ ಸಹಸ್ರಾಕ್ಷಂ ಪುರಸ್ಕೃತ್ಯ ವಿನಿರ್ಯಯುಃ ॥

ಅನಂತರ ನಮುಚಿಯ ಸಹೋದರನಾದ ಶುಂಭ, ನಿಶುಂಬರು ಸಿಟ್ಟಿಗೆದ್ದು ದೇವತೆಗಳ ಮೇಲೆ ಸೇಡು ತೀರಿಸಿಕೊಳ್ಳಲು ಉಜ್ಜುಗಿಸಿದರು. ವೀರರಾದ ಅವರು ಸ್ವರ್ಗಕ್ಕೆ ಬಂದು ದೇವತೆಗಳನ್ನು ಪೀಡಿಸತೊಡಗಿದರು. ಆಗ ದೇವತೆಗಳು ಕೂಡ ಇಂದ್ರನನ್ನು ಮುಂದೆ ಮಾಡಿಕೊಂಡು ಆ ದಾನವವೀರರೊಂದಿಗೆ ಹೋರಾಡಿದರು. ಆದರೆ ಆ ಘೋರ ಯುದ್ಧದಲ್ಲಿ ದೇವತೆಗಳ ಪ್ರಚಂಡ ಸೈನ್ಯವು ಸೋಲನ್ನು ಅನುಭವಿಸಬೇಕಾಯಿತು.

೧೯೯. ಜಿತಾಸ್ತ್ವಾಕ್ರಮ್ಯ ದೈತ್ಯಾಭ್ಯಾಂ ಬಲಾಃ ಸಪದಾನುಗಾಃ ।
ಶಕ್ರಸ್ಯಾಹೃತ್ಯ ಚ ಗಜಂ ಯಾಮ್ಯಂ ಚ ಮಹಿಷಂ ಬಲಾತ್॥

ದೈತ್ಯವೀರರು ಸುರರಾಜನ ಐರಾವತವನ್ನು ಅಪಹರಿಸಿದರು. ಯಮನ ಕೋಣ ವನ್ನು ಹಿಡಿದುಕೊಂಡು ಹೋದರು.

೨೦೦. ವರುಣಸ್ಯ ಮಣಿಂ ಛತ್ರಂ ಗದಾಂ ವೈ ಮಾಧವಸ್ಯ ಚ ।
ನಿಧಯಃಶಂಖ ಪದ್ಮಾದ್ಯಾಃ ಹೃತಾಸ್ತ್ವಾಕ್ರಮ್ಯ ದಾನವೈಃ ॥

ವರುಣನಮಣಿಯನ್ನು ಕಿತ್ತುಕೊಂಡರು. ಶ್ವೇತಚ್ಛತ್ರವನ್ನು ಕಸಿದರು. ಮಾಧವನ ಕೈಯಲ್ಲಿಯ ಗದೆಯನ್ನು ಸೆಳೆದರು. ಇವಲ್ಲದೇಕುಬೇರನಶಂಖ, ಪದ್ಮ ಮುಂತಾದ ನಿಧಿಗಳನ್ನು ಆಕ್ರಮಿಸಿಎತ್ತಿ ಹಾಕಿದರು. ನಾರದರೇ ಹೀಗೆ ದೈತ್ಯವೀರರಾದ ಆಶುಂಭನಿಶುಂಭರುಮೂರುಲೋಕಗಳನ್ನು ಗೆದ್ದುಕೊಂಡು ಭೂಲೋಕಕ್ಕೆ ಬಂದರು. ಆಗ ಇಲ್ಲಿ ರಕ್ತಬೀಜ ಎಂಬ ದೈತ್ಯರ ದೊರೆ ಆಳುತ್ತಲಿದ್ದನು. ಅವನನ್ನು ಕಂಡು, ನೀನು ಯಾರು? ಎಂದು ಕೇಳಿದರು.

೨೦೧. ''ತ್ರಿಲೋಕೀ ವಶಗಾಚಸ್ತೇಽನಯೋರ್ನಾರದ ದೈತ್ಯಯೋಃ
ಆಜಗ್ಮತುರ್ಮಹೀಪೃಷ್ಠಂ ದದೃಶಾತೇ ಮಹಾಸುರಂ

೨೦೨. ರಕ್ತಬೀಜಮಥೋಚುಃ ಕೋ ಭವಾನಿತಿ ಸೋಽಬ್ರವೀತ್ ।
ಸ ಚಾಹ ದೈತ್ಯೋಽಸ್ಮಿ ವಿಭೋ ಸಚಿವೋ ಮಹಿಷಸ್ಯ ತು ॥

೨೦೩. ರಕ್ತಬೀಜೇತಿ ವಿಖ್ಯಾತೋ ಮಹಾವೀರ್ಯೋ ಮಹಾಭುಜಃ ।
ಅಮಾತ್ಯೌ ರುಚಿರೌ ವೀರೌ ಚಂಡಮುಂಡಾವಿತಿಶ್ರುತೌ ॥

೨೦೪. ತಾವಾಸ್ತಾಂ ಸಲಿಲೇ ಮಗ್ನೌ ಭಯಾದ್ದೇವ್ಯಾ ಮಹಾಭುಜೌ ॥

೨೦೫. ಯಸ್ತ್ವಾಸೀತ್ ಪ್ರಭುರಸ್ಮಾಕಂ ಮಹಿಷೋ ನಾಮ ದಾನವಃ
ನಿಹತೋಽಸೌ ಮಹಾದೇವ್ಯಾ ವಿಂಧ್ಯಶೈಲೇ ಸುವಿಸ್ತೃತೇ ॥

ಅದಕ್ಕೆ ಆ ದೈತ್ಯನು "ನಾನು ರಕ್ತಬೀಜ. ಪ್ರಭುಗಳೇ ಜಾತಿಯಿಂದ ನಾನೂ ದೈತ್ಯನೇ ಆಗಿದ್ದೇನೆ. ನಾನು ಮಹಿಷಾಸುರನ ಮಂತ್ರಿ. ಮಹಾಬಲಶಾಲಿಯೂ, ಬಾಹುಶಾಲಿಯೂ ಆದ ನನಗೆ ರಕ್ತಬೀಜ ಎಂದು ಹೆಸರು. ನಮ್ಮ ದೊರೆಯಾದ ಮಹಿಷಾಸುರನಿಗೆ ಚಂಡ, ಮುಂಡ ಎಂಬ ಇಬ್ಬರು ವೀರಮಂತ್ರಿಗಳಿದ್ದರು. ಅವರಿಬ್ಬರೂ ದೇವಿಯ ಭಯದಿಂದ ನೀರಿನಲ್ಲಿ ಮುಳುಗಿಹೋದರು. ನಮ್ಮ ಒಡೆಯನಾದ ಮಹಿಷಮಹಾಪ್ರಭುವನ್ನು ವಿಂಧ್ಯಶೈಲದಲ್ಲಿ ಆ ಮಹಾದೇವಿಯೇ ಕೊಂದು ಹಾಕಿದಳು.

೨೦೬. ಭವಂತೌ ಕಸ್ಯ ತನಯೌ ಕಿಂವಾ ನಾಮ್ನಾ ಪರಿಶ್ರುತೌ
ಕಿಂವೀರ್ಯೌ ಕಿಂಪ್ರಭಾವೌ ಚ ಏತಚ್ಛಂಸಿತುಮರ್ಹಥ ॥

ನೀವಿಬ್ಬರೂ ಯಾರ ಮಕ್ಕಳು? ನಿಮ್ಮ ಹೆಸರೇನು? ನಿಮ್ಮ ಶಕ್ತಿ ಎಂಥದು? ನಿಮ್ಮ ಪ್ರಭಾವವು ಎಷ್ಟಿದೆ? ಇದನ್ನೆಲ್ಲ ತಿಳಿಸಿರಿ.

೨೦೭. ಶುಂಭ ಉವಾಚ - ಅಹಂ ಶುಂಭ ಇತಿಖ್ಯಾತೋ ದನೋಃ
ಶುತ್ರುರ್ದರ್ಪಹಾ ।
ನಿಶುಂಭೋಽಯಂ ಮಮ ಭ್ರಾತಾ ಕನೀಯಾನ್ ಔರಸಸ್ಸುತಃ ॥

ಶುಭನಾನುಶಂಭ. ದನುದೇವಿಯ ಔರಸಪುತ್ರ. ಇವನುನನ್ನ ಕೊನೆಯಸೋದರ. ಇಂದ್ರನಸೊಕ್ಕುಸದ್ದುಗಳನ್ನು ಅಡಗಿಸಿದ ಇವನ ಹೆಸರು ನಿಶುಂಭ, ಇಂದ್ರ, ರುದ್ರ, ಸೂರ್ಯ, ಮೊದಲಾದದೇವತೆಗಳುಎಲ್ಲರೂಕೂಡಿಏರಿಬಂದರೂಇವನೊಬ್ಬನೇಅನೇಕ ಬಾರಿಅವರೆಲ್ಲರನ್ನೂ ಸೋಲಿಸಿದ್ದಾನೆ. ಆದರೆಮಹಿಷಾಸುರನನ್ನು ಆದೇವಿಯುಕೊಂದದ್ದು ಹೇಗೆ? ಆಮಹಿಷನವೈರಿಗಳನ್ನು ಸೇನಾಪರಿವಾರಸಹಿತವಾಗಿನಾವುಸಂಹರಿಸುತ್ತೇವೆ. ಆದುದರಿಂದಆಮಹಿಷಾಸುರಮಾರಣದಸಂದರ್ಭವನ್ನು ನಮಗೆತಿಳಿಸಿರಿ.

೨೦೮. ಇತ್ಥಂ ತಯೋಸ್ತು ವದತೋ ನರ್ಮದಾಯಾಸ್ತಟೇ ಮುನೇ
ಜಲವಾಸಾದ್ವಿನಿಷ್ಕ್ರಾಂತೌ ಚಂಡ ಮುಂಡೌ ಚ ದಾನವೌ ॥

ಶುಂಭನಿಶುಂಭರು ಹೀಗೆ ಮಾತನಾಡುತ್ತಿರುವಾಗಲೇ ನರ್ಮದೆಯ ನದೀ ನೀರಿನ ನಟ್ಟನಡುವೆ ದೇವಿಯ ಭಯದಿಂದ ಮುಳುಗಿದ ಚಂಡ, ಮುಂಡ ಎಂಬ ದಾನವರಿಬ್ಬರೂ ನೀರಿನಿಂದ ಹೊರಬಿದ್ದು ಮೇಲೆದ್ದು ಬಂದರು.

ಅವರಿಬ್ಬರೂ ದಾನವ ಧುರೀಣರೂ ರಕ್ತಬೀಜನ ಬಳಿಗೆ ಬಂದು ಅಲ್ಲಿ ಶುಂಭ ನಿಶುಂಭರು ನಿಂತಿದ್ದನ್ನು ನೋಡಿ "ಇವರು ಯಾರು?" ಎಂದು ಕೇಳಿದರು.

೨೧೯. ಏತಾವಾಶ್ರಿತ್ಯ ತಾಂ ದುಷ್ಟಾಂ ಮಹಿಷಘ್ನೀಂ ನ ಸಂಶಯಃ
ಅಹಂ ವಿವಾಹಯಿಷ್ಯಾಮಿ ರತ್ನಭೂತಾಂ ಜಗತ್ರಯೇ ॥

"ಇವನು ಶುಂಭ. ಇವನೊಬ್ಬನು ಇವನ ಕೊನೆಯ ತಮ್ಮನಾದ ನಿಶುಂಭ, ಇವರಿಬ್ಬರೂ ದೇವಘಾತಕರು. ಮಹಾಶೂರರು. ಇವರಿಬ್ಬರ ಬೆಂಬಲದಿಂದ ನಾನು ಮಹಿಷನನ್ನು ಕೊಂದ ಆ ದುಷ್ಟ ದೇವಿಯನ್ನು ಸೋಲಿಸುತ್ತೇನೆ.

ಮೂರ್ಲೋಕಕ್ಕೆಲ್ಲಾ ಆ ಹೆಣ್ಣು ಒಂದು ರತ್ನದಂತೆ ಇದೆ. ಅವಳನ್ನು ನಾನು ಖಂಡಿತವಾಗಿಯೂ ಗೆದ್ದು ಮದುವೆಯಾಗುವೆ.

೨೨೦. ನ ಸಮ್ಯಗುಕ್ತಂ ಭವತಾ ರತ್ನಾರ್ಹೋऽಸಿ ನ ಸಾಂಪ್ರತಮ್
ಯಃ ಪ್ರಭುಃ ಸ್ಯಾತ್ ಸ ರತ್ನಾರ್ಹಃ ತಸ್ಮಾತ್ ಶುಂಭಾಯ ಯೋಜ್ಯತಾಮ್ ।

**ಚಂಡ :** ನಿನ್ನ ಮಾತು ಸರಿಯಲ್ಲ, ನ್ಯಾಯವೂ ಅಲ್ಲ. ನೀನು ಈಗ ಅಂಥ ರಮಣೀ ರತ್ನವನ್ನು ಪಡೆಯಲು ಅರ್ಹನಾಗಿಲ್ಲ. ಒಳ್ಳೊಳ್ಳೆ ರತ್ನಗಳೆಲ್ಲ ದಾನವನ ದೊರೆಯಾದುದರಿಂದ ಆ ದೇವಿಯನ್ನು ಶಂಭನಿಗೆ ಕೊಡುವ ಏರ್ಪಾಟನ್ನು ಮಾಡು." ಈ ಮಾತನ್ನು ಶುಂಭನಿಶುಂಭರಿಗೂ ತಿಳಿಸಿದನು. ಆ ಕಾಳೀದೇವಿಯು ತನ್ನ ಮೊದಲಿನ ಕಪ್ಪು ಬಣ್ಣವನ್ನು ಕಳೆದುಕೊಂಡು ಕೋಶದಿಂದ ಹುಟ್ಟಿ ಕೌಶಿಕೀ ಎಂಬ ಪುನರ್ಜನ್ಮವನ್ನು ಪಡೆದಿರುವಳೆಂದೂ ಮೊದಲಿಗಿಂತ ಅವಳ ಸೌಂದರ್ಯವು ಮಿಸುನಿ ಬಣ್ಣದಿಂದ ಹೆಚ್ಚು ಮೋಹಕವಾಗಿದೆಯೆಂದೂ ತಿಳಿಸಿದನು.

೨೨೧. ಸ ಗತ್ವಾ ತದ್ವಚಃ ಶ್ರುತ್ವಾ ದೇವ್ಯಾತ್ಮಯ ಮಹಾಸುರಃ
ನಿಶುಂಭಶುಂಭಾವಾಹೇದಂ ಮನ್ಯುನಾಭಿ ಪರಿಪ್ಲುತಃ ॥

ಇದನ್ನು ಕೇಳಿ ಶುಂಭನು ಸುಗ್ರೀವ ಎಂಬ ಹೆಸರಿನ ದೈತ್ಯನನ್ನು ತನ್ನ ದಾನವ ದೂತನಾಗಿ ವಿಂಧ್ಯವಾಸಿನಿಯಾದ ದೇವಿಯ ಬಳಿಗೆ ಕಳುಹಿಸಿದನು. ಆ ಸುಗ್ರೀವನು ದೇವಿಯ ಬಳಿಗೆ ಹೋಗಿ ಅವಳಿಗೆ ಶುಂಭನ ಸಂದೇಶವನ್ನು ತಲ್ಪಿಸಿದನು. ಅದಕ್ಕೆ ಅವಳು ಕೊಟ್ಟ ಉತ್ತರದಿಂದ ಕುಪಿತನಾಗಿಯೇ ಮರಳಿ ಬಂದು ಶುಂಭ ನಿಶುಂಭರಿಗೆ ಅವಳ ಅಭಿಪ್ರಾಯವನ್ನು ತಿಳಿಸಿದನು.

**ಸುಗ್ರೀವ:** ನಿಮ್ಮಿಬ್ಬರ ಅಪ್ಪಣೆಯಂತೆ ನಾನು ಆ ದೇವಿಯ ಬಳಿಗೆ ಹೋದೆನು. ದೈತ್ಯ ನಾಯಕನಾದ ನಿಮ್ಮಿಬ್ಬರ ಸಂದೇಶವನ್ನು ಅಂದೇ ನಾನು ಅವಳಿಗೆ ಈ ರೀತಿಯಾಗಿ ಹೇಳಿದೆ.

೨೨೨. ಯಾನಿ ಸ್ವರ್ಗೇ ಮಹೀಪೃಷ್ಠೇ ಪಾತಾಲೇ ಚಾಪಿ ಸುಂದರಿ ।
ರತ್ನಾನಿ ಸಂತಿ ತಾವಂತಿ ಮಮ ವೇಶ್ಮನಿ ನಿತ್ಯಶಃ ॥

"ಶುಂಭನು ದೈತ್ಯರಲ್ಲಿ ಅತ್ಯಂತ ಶ್ರೇಷ್ಠನಾಗಿದ್ದಾನೆ. ಆ ದಾನ ದೊರೆಯು ನಿನ್ನನ್ನು ಕುರಿತು ಹೀಗೆ ಹೇಳಿ ಕಳುಹಿದ್ದಾನೆ. 'ಈ ಮೂರು ಲೋಕಕ್ಕೆಲ್ಲ ಈಗ ನಾನೇ ಮಹಾಪ್ರಭು

ಆಗಿದ್ದೇನೆ. ಸ್ವರ್ಗದಲ್ಲಿ ಆಗಲೀ, ಭೂತಲದಲ್ಲಿ ಆಗಲೀ, ಪಾತಾಳದಲ್ಲಿ ಆಗಲೀ, ಇರುವ ಒಳ್ಳೊಳ್ಳೆ ರತ್ನಗಳೆಲ್ಲವೂ ನನ್ನ ಮನೆ ಸೇರಿವೆ.

**೨೧೩. ತ್ವಮುಕ್ತಾ ಚಂಡಮುಂಡಾಭ್ಯಾಂ ರತ್ನಭೂತಾ ಕೃಶೋದರೀ ।**
**ತಸ್ಮಾದ್ ಭಜಸ್ವ ಮಾಂ ವಾ ತ್ವಂ ನಿಶುಂಭಂ ವಾ ಮಮಾನುಜಮ್ ॥**

ನಾರೀಕುಲದಲ್ಲಿ ನೀನು ಒಂದು ಶ್ರೇಷ್ಠವಾದ ರತ್ನ ಎಂದು ಚಂಡ ಮುಂಡರು ಹೇಳಿದ್ದಾರೆ. ಆದುದರಿಂದ ನೀನು ನನ್ನನ್ನು ಮದುವೆಯಾಗು. ಇಲ್ಲವೆ ನನ್ನ ತಮ್ಮನಾದ ನಿಶುಂಭನನ್ನಾದರೂ ಮದುವೆಯಾಗು.''

**೨೧೪. ಯೋ ಮಾಂ ವಿಜಯತೇ ಯುದ್ಧೇ ಸ ಭರ್ತಾ ಸ್ಯಾನ್ಮಹಾಸುರ।**
**ಮಯಾ ಚೋಕ್ತಾವಲಿಪ್ತಾಸಿ ಯೋಜಯೇ ಜಯೇತ್ಸ ಸುರಾಸುರಾನ್॥**

ಹೀಗೆ ನಾನು ಹೇಳಿದ್ದನ್ನು ಕೇಳಿ ಉಪಹಾಸ ಮಾಡಿ ಅವಳು ಮಾತನಾಡಿದಳು. ''ಸುಗ್ರೀವನೇ, ನನ್ನ ಮಾತನ್ನು ಕೇಳು. ಶುಂಭನು ಮೂರು ಲೋಕಕ್ಕೆ ಪ್ರಭು ಆದದ್ದು ನಿಜ. ಮೂರು ಲೋಕದ ಒಡೆಯನು ಒಳ್ಳೊಳ್ಳೆ ರತ್ನಗಳನ್ನು ಪಡೆಯಲು ಅರ್ಹನೇ ಸರಿ. ಆದರೆ ನಾನು ಅಂಥ ಸುಲಭದ ಹೆಣ್ಣು ಅಲ್ಲ. ಧೀರಳಾದ ನನ್ನ ಮನಸ್ಸಿನಲ್ಲಿ ಒಂದು ಅಪೇಕ್ಷೆ ಇದೆ. ಯುದ್ಧದಲ್ಲಿ ನನ್ನನ್ನು ಗೆದ್ದವನನ್ನು ಮಾತ್ರ ನಾನು ಪತಿ ಎಂದು ವರಿಸುತ್ತೇನೆ.

**೨೧೫. ಸ ತ್ವಾಂ ಕಥಂ ನ ಜಯತೇ ಸಾ ತ್ವಮುತ್ತಿಷ್ಠ ಭಾಮಿನಿ ॥**

ಆ ದೇವಿಯ ಈ ಬಿರುನುಡಿಗಳನ್ನು ಕೇಳಿ ನಾನು ಮತ್ತೆ ಅವಳಿಗೇ ಹೇಳಿದೆ. ''ನೀನು ಬಹಳ ಮದಾಂಧಳಾಗಿರುವಿ. ಜಗತ್ತಿನಲ್ಲಿರುವ ವೀರಾಧಿವೀರರಾದ ಎಲ್ಲ ದೇವತೆಗಳನ್ನೂ, ದೈತ್ಯರನ್ನೂ ಸೋಲಿಸಿ ಬಂದ ಮಹಾಪರಾಕ್ರಮಿಶಾಲಿಯಾದ ಆ ದಾನವ ಸಾಮ್ರಾಟನನ್ನು ನೀನೆಂತು ಗೆಲ್ಲಬಲ್ಲೆ? ಇಂಥ ವಿಶ್ವವಿಜಯಿಯಾದ ದೈತ್ಯನಾಯಕನು ಅಬಲೆಯಾದ ನಿನ್ನನ್ನು ಗೆಲ್ಲಲ್ಲಾರನೇ! ಆದುದರಿಂದ ಭಾಮಿನಿ, ಕೇಳು ನಮ್ಮ ಒಡೆಯನನ್ನು ವರಿಸು.'' ಅನಂತರ ಆ ದೇವಿಯು ನನಗೆ ಹೇಳಿದಳು.

**೨೧೬. ಸಾಥ ಮಾಂ ಪ್ರಾಹ ಕಿಂ ಕುರ್ಮೋ ಯದನಾಲೋಚಿತಃ ಕೃತಃ**
**ಮನೋರಥಸ್ತು ತದ್ಗಚ್ಛ ಶುಂಭಾಯ ತ್ವಂ ನಿವೇದಯ ॥**

''ದೈತ್ಯನೇ, ಮಾಡುವದೇನು! ನಾನು ಮೊದಲು ಯಾವ ವಿಚಾರವನ್ನು ಮಾಡದೇ ಹಾಗೆ ಸಂಕಲ್ಪವನ್ನು ಮಾಡಿಬಿಟ್ಟಿದ್ದೇನೆ. ಈಗ ಅದನ್ನು ಬದಲಿಸುವದೆಂತು? ಆದುದರಿಂದ ನೀನು ಈಗ ಇಲ್ಲಿಂದ ಹೋಗು. ಯುದ್ಧದಲ್ಲಿ ಗೆದ್ದವರನ್ನೇ ವಿವಾಹ ವಾಗುವ ನನ್ನ ಪ್ರತಿಜ್ಞೆಯನ್ನು ನೀನು ಶಂಭುವಿಗೆ ತಿಳಿಸು.'' ಹೀಗೆ ದೇವಿಯು ನನಗೆ ಹೇಳಿದಳು. ಅವಳ ಮಾತನ್ನು ಕೇಳಿಕೊಂಡು ನಾನು ನಿನ್ನ ಬಳಿಗೆ ಬಂದಿದ್ದೇನೆ. ಒಂದು ಕೋಟಿ ಬೆಂಕಿಯ ಬೆಟ್ಟಗಳಿಗೆ ಸಮಾನವಾಗಿದೆ ಅವಳ ತೇಜಸ್ಸು. ಇದನ್ನು ತಿಳಿದು ನಿನಗೆ ಯೋಗ್ಯವೆನಿಸಿದ್ದನ್ನು ಮಾಡು. ಆಗ ಶುಂಭನು ಧೂಮ್ರಲೋಚನ ಎಂಬ ದೈತ್ಯ ದೂತನನ್ನು ಕರೆದು ಹೇಳಿದನು-

**೨೧೭. ಧೂಮ್ರಾಕ್ಷ ಗಚ್ಛ ತಾಂ ದುಷ್ಟಾಂ ಕೇಶಾಕರ್ಷಣ ವಿಹ್ವಲಾಮ್**
**ಸಾಪರಾಧಾಂ ಯಥಾ ದಾಸೀಂ ಕೃತ್ವಾ ಶೀಘ್ರಮಿಹಾನಯ ॥**

''ಧೂಮ್ರಾಕ್ಷನೇ, ನೀನು ಅಲ್ಲಿಗೆ ಹೋಗು. ಆ ದುಷ್ಟಳಾದ ದೇವಿಯನ್ನು ಅಪರಾಧ ಮಾಡಿದ ದಾಸಿಯಂತೆ ಕೂದಲು ಹಿಡಿದು ಎಳೆದು ವಿಲಿವಿಲಿ ಒದ್ದಾಡುವಂತೆ ಮಾಡಿ ಕರೆದುಕೊಂಡು ಬಾ.

**೨೧೮. ಯಶ್ಚಾಸ್ಯಾಃ ಪಕ್ಷಕೃತ್ ಕಶ್ಚಿತ್ ಭವಿಷ್ಯತಿ ಮಹಾಜನಃ ।**
**ಸ ಹಂತವ್ಯೋಽವಿಚಾರ್ಯೈವ ಯದಿಹ ಸ್ಯಾತ್ಪಿತಾಮಹಃ ॥**

ಯಾರಾದರೂ ಅವಳ ಸಹಾಯಕ್ಕೆ ಬಂದರೆ ಅವರನ್ನೂ ಕೊಂದು ಬಿಡತಕ್ಕದ್ದು. ಅವನು ಬೇಕಾದಷ್ಟು ಬಲಿಷ್ಠನಿರಲಿ, ಸಾಕ್ಷಾತ್ ಬ್ರಹ್ಮದೇವರೇ ಬಂದರೂ ವಿಚಾರಿಸ ಬೇಡ. ಹೊಡೆದು ಕೊಂದುಬಿಡು.'' ಶುಂಭನ ಈ ಆದೇಶವನ್ನು ಹೊತ್ತು ಧೂಮ್ರಾಕ್ಷನು ದೇವಿಯನ್ನು ಕೈಸೆರೆಗೊಂಡು ಕರೆತರಲಿಕ್ಕಾಗಿ ಕದನದ ಸಿದ್ಧತೆಯಲ್ಲಿ ಹೊರಟನು. ನೂರು ಅಕ್ಷೋಹಿಣಿ ಸೈನ್ಯ ಅವನ ಹಿಂದೆ. ಆರು ಸೇನಾಪತಿಗಳು ಅವನ ಬೆಂಬಲಕ್ಕೆ. ಮಹಾತೇಜಸ್ವಿಯಾದ ಧೂಮ್ರಾಕ್ಷನು ಈ ಸೈನ್ಯಸನ್ನಾಹದೊಂದಿಗೆ ವಿಂಧ್ಯ ಪರ್ವತಕ್ಕೆ ಬಂದನು. ಅಲ್ಲಿ ದುರ್ಗಾದೇವಿಯನ್ನು ನೋಡಿ ಭ್ರಾಂತನಾಗಿ ಅವಳಿಗೆ ನುಡಿದನು-

**೨೧೯. ಏಹ್ಯೇಹಿ ಮೂಢೇ ಭರ್ತಾರಂ ಶುಂಭಮಿಚ್ಛಸ್ವ ಕೌಶಿಕಿ ।**
**ನ ಚೇದ್ ಬಲಾನ್ನಯಿಷ್ಯಾಮಿ ಕೇಶಾಕರ್ಷಣ ವಿಹ್ವಲಾಮ್ ॥**

''ಮೂಢಳೇ, ಬಾ, ನನ್ನೊಡನೆ ನಡೆ. ತಿಳುವಳಿಕೆ ಇಲ್ಲದ ಕೌಶಿಕಿಯೇ ಶುಂಭನನ್ನೇ ಪತಿಯಾಗಿ ಪಡೆಯಲು ಅಪೇಕ್ಷಿಸು. ಇಲ್ಲದಿದ್ದರೆ ನಿನ್ನನ್ನು ಕೂದಲು ಹಿಡಿದು ದರದರ ಎಳೆಯುತ್ತ ಬಲಾತ್ಕಾರದಿಂದ ಕರೆದೊಯ್ಯುತ್ತೇನೆ.

**೨೨೦. ಪ್ರೇಷಿತೋಽಸೀಹ ಶುಂಭೇನ ಬಲಾನ್ನೇತುಂ ಹಿ ಮಾಂ ಕಿಲ**
**ತತ್ರ ಕಿಂ ಹ್ಯಬಲಾ ಕುರ್ಯಾದ್ ಯಥೇಚ್ಛಸಿ ತಥಾ ಕುರು ॥**

**ದೇವಿ :** ಶುಂಭನು ನನ್ನನ್ನು ಬಲಾತ್ಕಾರದಿಂದ ಎಳೆದು ತರಲು ನಿನ್ನನ್ನು ಕಳುಹಿಸಿರುವನಷ್ಟೆ! ನಾನಂತೂ ಅಬಲೆ. ಹೆಂಗಸಾದ ನಾನು ಏನು ಮಾಡಬಲ್ಲೆ? ನೀನು ನಿನಗೆ ತಿಳಿದಂತೆ ಮಾಡು.

**೨೨೧. ಏವಮುಕ್ತೋ ವಿಭಾವರ್ಯಾ ಬಲವಾನ್ ಧೂಮ್ರಲೋಚನಃ**
**ಹುಂಕಾರೇಣೈವ ತಂ ಭಸ್ಮಸಾಚ್ಚಕಾರಾಂಬಿಕಾ ತದಾ ॥**

ಆಗ ಧೂಮ್ರಲೋಚನನು ತನ್ನ ಬಲವನ್ನು ತೋರಿಸಹೊರಟನು. ಕೂಡಲೇ ಆ ಅಂಬಿಕಾದೇವಿಯು ''ಹುಂ'' ಎಂದು ಕೋಪದಿಂದ ಗುಡುಗಿದಳು. ಅವಳ ಹುಂಕಾರ ಮಾತ್ರದಿಂದ ಬಲಿಷ್ಠನಾದ ಧೂಮ್ರಾಕ್ಷನು ಬೂದಿಯಾಗಿ ಬಿದ್ದನು. ಕೌಶಿಕಿಯ ದೃಷ್ಟಿಕ್ಷೇಪ ಮಾತ್ರದಿಂದಲೇ ಭಸ್ಮೀಭೂತನಾಗಿ ಬಿದ್ದ ದೈತ್ಯನನ್ನು ಕಂಡು ಚರಾಚರ ಪ್ರಪಂಚದಲ್ಲಿ ಒಮ್ಮೆಲೇ ಹಾಹಾಕಾರ ಉಂಟಾಯಿತು. ದೇವಿಯ ಹುಂಕಾರ ನಾದವು ದೂರದಲ್ಲಿದ್ದ ಶುಂಭನ ಕಿವಿಗೂ ಕೇಳಿಸಿತು. ಕೂಡಲೇ ಅವನು ಬಲಿಷ್ಠರಾದ ಚಂಡ,

ಮುಂಡ, ರುರು ಮುಂತಾದ ದೈತ್ಯವೀರರನ್ನು ಯುದ್ಧಕ್ಕಾಗಿ ಕಳಿಸಿಕೊಟ್ಟನು. ಅವರೆಲ್ಲರೂ ಆನಂದದಿಂದ ಆನೆ, ಕುದುರೆ, ಕಾಲಾಳು, ರಥ ಮೊದಲಾದ ಚತುರಂಗ ಸೇನೆಯೊಂದಿಗೆ ಕೌಶಿಕೀದೇವಿಯ ಮೇಲೆ ಏರಿ ಬಂದರು. ಕೋಟಿಕೋಟಿ ಸಂಖ್ಯೆಯಲ್ಲಿ ಕದನಕ್ಕಾಗಿ ನುಗ್ಗಿ ಬಂದ ದೈತ್ಯರ ಸೈನ್ಯವನ್ನು ಕಂಡು ದೇವಿಯ ವಾಹನವಾದ ಸಿಂಹವು ಕೆರಳಿನಿಂತಿತು.

೨೨೨. ಅಥ ಸಿಂಹೋ ಧುತಸಟಃ ಪಾಟಯನ್ ದಾನವಾನ್ ರಣೇ ।
ಕಾಂಶ್ಚಿತ್ ಕರಪ್ರಹಾರೇಣ ಕಾಂಶ್ಚಿದಾಸ್ಯೇನ ಲೀಲಯಾ ॥

ರಣೋತ್ಸಾಹದಿಂದಅದರಕೂದಲುಗಳುನಿಮಿರಿನಿಂತವು. ದಾನವರಸೇನೆಯಮೇಲೆ ಒಮ್ಮೆಲೇಎರಗಿಅಸಂಖ್ಯದೈತ್ಯರನ್ನು ತನ್ನ ಉಗುರಿನಪಂಜರದಿಂದಹೊಡೆದುಕೊಂದಿತು.

೨೨೩. ತಾವಾರ್ತಂ ಸ್ವಬಲಂ ದೃಷ್ಟ್ವಾ ಕೋಪಪ್ರಸ್ಫುರಿತಾಧರೌ ।
ಸಮಾದ್ರವೇತಾಂ ದುರ್ಗಾಂ ವೈ ಪತಂಗಾವಿವ ಪಾವಕಮ್ ॥

ಎಷ್ಟೋ ದೈತ್ಯರನ್ನು ಸೀಳಿ ಹಾಕಿತು. ಹಲವರನ್ನು ಹಲ್ಲಿನಿಂದ ಹೊಡೆದು ಸೀಳಿತು. ಕೈಯಿಂದ ಕೊಂದವರಿಗಂತೂ ಲೆಕ್ಕವೇ ಇಲ್ಲ. ಮೈಮೇಲೆ ಬಿದ್ದು, ತಲೆ ಮೇಲೆ ಹಾರಿ, ಎದೆಯನ್ನು ಸೀಳಿ, ಗಂಟಲು ಹರಿದು, ಬೆನ್ನಲ್ಲಿ ಇರಿದು, ಕರುಳನ್ನು ಕತ್ತರಿಸಿ ದಾನವ ಸೈನಿಕರನ್ನೆಲ್ಲ ಆ ದೇವಿಯ ವಾಹನವಾದ ಸಿಂಹವು ಅಡ್ಡಾಡುತ್ತಲೇ ಕೊಂದು ಹಾಕಿತು. ಹೀಗೆ ವಿಂಧ್ಯಗಿರಿಯ ಕಂದರದಲ್ಲಿದ್ದ ಕೇಸರಿಯೂ ಮತ್ತು ದೇವಿಯ ಅನುಚರವಾದ ಭೂತಗಳೂ ದೈತ್ಯರ ಸೇನೆಯನ್ನು ನುಚ್ಚು ನೂರಾಗಿ ಮಾಡಿದ್ದನ್ನು ನೋಡಿ, ಚಂಡ ಮುಂಡರಿಗೆ ಬಹಳ ಕೋಪ ಬಂದಿತು. ಅವರು ತುಟಿ ನಡುಗಿಸುತ್ತ ದೇವಿಯ ಮೇಲೆ ಏರಿ ಬಂದರು. ಎರಡು ದೀಪದ ಹುಳುಗಳು ಅಗ್ನಿಯ ಮೇಲೆ ಏರಿ ಬಂದತ್ತಿತ್ತು.

೨೨೪. ಭ್ರುಕುಟೀಕುಟಿಲಾದ್ದೇವ್ಯಾ ಲಲಾಟಫಲಕಾದ್ ದ್ರುತಮ್ ।
ಕಾಲೀ ಕರಾಲವದನಾ ನಿಸ್ಸೃತಾ ಯೋಗಿನೀ ಶುಭಾ ॥

ತನ್ನನ್ನು ಎದುರಿಸಲು ಬರುತ್ತಿರುವ ಆ ಭಯಂಕರ ದೈತ್ಯರನ್ನು ಕಂಡು ದೇವಿಗೆ ಕೋಪ ಬಂದಿತು. ಅವಳ ಹುಬ್ಬು ಗಂಟುಹಾಕಿತು. ಹಣೆಯ ಮೇಲಿನ ಮೂರು ಗೆರೆಗಳು ವಕ್ರವಾಗಿ ಮಣಿದವು. ಅವಳ ಲಲಾಟ ಫಲಕದ ವಕ್ರವಾದ ಭ್ರುಕುಟಿಯಿಂದ ಕೂಡಲೇ ಓರ್ವ ಕಪ್ಪು ಬಣ್ಣದ ಯೋಗಿನಿಯು ಒಮ್ಮೆಲೇ ಹೊರಹೊಮ್ಮಿ ಬಂದಳು.

೨೨೫. ಕುಂಜರಂ ಸಹಯಂತ್ರೇಣ ಪ್ರಚಿಕ್ಷೇಪ ಮುಖೇಽಂಬಿಕಾ ।
ಸ ಚಕ್ರಕೂಬರರಥಂ ಸಸಾರಥಿಂ ತುರಂಗಮಮ್ ।
ಸಮಂ ಯೋಧೇನ ವದನೇ ಕ್ಷಿಪ್ಯ ಚರ್ವಯತೇಽಂಬಿಕಾ ।

ಕ್ರೂರ ಮುಖಮುದ್ರೆಯ ಆ ಕಾಳಿಯು ಒಂದು ಕೈಯಲ್ಲಿ ಘೋರ ಖಡ್ಗವನ್ನೂ, ಇನ್ನೊಂದು ಕೈಯಲ್ಲಿ ತಲೆ ಬರುಡೆಯನ್ನು ಹಿಡಿದುಕೊಂಡು ಮೈತುಂಬ ನೆತ್ತರ ಮೆತ್ತಿ ಹೊರಬಿದ್ದಳು. ರಾಜರ ತಲೆಬುರುಡೆಗಳ ಮಾಲೆಯು ಅವಳ ಕೊರಳಲ್ಲಿತ್ತು. ಅವಳು ತನ್ನ ಕೈಯಿಂದ ಒರೆಹಿರಿದ ಝಳಿಸುವ ಖಡ್ಗದಿಂದ ಅನೇಕ ದಾನವರ ರುಂಡಗಳನ್ನು ಚೆಂಡಾಡಿದಳು. ಸಿಟ್ಟಿಗೆದ್ದು ಅವಳು ಆನೆಗಳನ್ನು ತರಿದಳು, ರಥಗಳನ್ನು ಪುಡಿ

ಮಾಡಿದಳು. ವೈರಿಗಳನ್ನೆಲ್ಲ ಹೊಸೆದು ಹಾಕಿದಳು. ಎಷ್ಟೋ ಆನೆ, ಕುದುರೆ, ಖಡ್ಗ, ಡಾಲು, ಬಿಲ್ಲುಬಾಣ ಉಳಿದ ಅನೇಕಾನೇಕ ಆಯುಧಗಳನ್ನು ಪಕಪಕ ಬಾಯಲ್ಲಿ ಹಾಕಿಕೊಂಡು ತಿನ್ನತೊಡಗಿದಳು. ಎಷ್ಟೋ ಆನೆಗಳನ್ನು ನುಂಗಿದಳು. ಕುದುರೆ ಸಾರಥಿ ಸಹಿತ ರಥಗಳನ್ನೇ ಬಾಯಲ್ಲಿ ಹಾಕಿ ಹಲ್ಲುಗಳಿಂದ ನುರಿಸಿದಳು. ಅನೇಕ ರಥಿಕರು ರಥ, ಗಾಲಿ, ಈಸು, ನೊಗ, ಧ್ವಜ, ಆಯುಧ, ಸಾರಥಿ ಸಹಿತವಾಗಿಯೇ ಅವಳ ಭೀಕರವಾದ ಬಾಯಿ ಯಂತ್ರದಲ್ಲಿಯೇ ನುಚ್ಚು ನೂರಾದರು.

೨೨೬. ಸಾ ಜಾತಾ ಸುತರಾಂ ರೌದ್ರೀ ತೈಲಾಭ್ಯಕ್ತಶಿರೋರುಹಾ ।
ಕೃಷ್ಣಾರ್ಧಮರ್ಧಶುಕ್ಲಂ ಚ ಧಾರಯಂತೀ ಸ್ವಕಂ ವಪುಃ ॥

ಆ ಭೈರವಿಯು ಒಬ್ಬನನ್ನು ಜುಟ್ಟು ಹಿಡಿದು ಎತ್ತಿದರೆ ಇನ್ನೊಬ್ಬನನ್ನು ಕುತ್ತಿಗೆ ಹಿಡಿದೇ ಕೊಂದು ಹಾಕುತ್ತಿದ್ದಳು. ಮಗದೊಬ್ಬನನ್ನು ಕಾಲಿನಿಂದ ತುಳಿದು ಯಮನ ಸಮೀಪಕ್ಕೆ ಕಳುಹಿಸುತ್ತಿದ್ದಳು. ಹೀಗೆ ಸೈನ್ಯ ಸೇನಾಪತಿಗಳನ್ನು ಕೊಂದು ತಿಂದು ಕುಳಿತದ್ದನ್ನು ಕಂಡು ಕೋಪೋದ್ರಿಕ್ತನಾದ ರುರು ದೈತ್ಯನು ಸ್ವಯಂ ತಾನೇ ಅವಳ ಮೇಲೆ ಸಾಗಿ ಹೋದನು. ಅದನ್ನು ಕಂಡು ದೇವಿಯು ತನ್ನ ಕೈಯಲ್ಲಿರುವ ತಲೆಬುರುಡೆಯ ಪಾತ್ರೆಯಿಂದ ಆ ದೈತ್ಯನ ತಲೆಗೆ ಬಲವಾದ ಏಟನ್ನು ಕೊಟ್ಟಳು. ಆ ಪ್ರಹಾರದಿಂದ ರುರುದಾನವನು ಬುಡ ಕಡಿದ ಗಿಡದಂತೆ ನೆಲದ ಮೇಲೆ ಉರುಳಿದನು. ಆಗ ಆ ಕಾಳಿಯು ಕೈಯಿಂದ ಕಾಲಿನವರೆಗೆ ಅವನ ದೇಹವನ್ನು ಸೀಳಿ ಆ ಚರ್ಮದಿಂದ ತನ್ನ ಜಡೆಯನ್ನು ಸುತ್ತಿದಳು. ಆ ಚರ್ಮದ ಪಟ್ಟಿಯಲ್ಲಿ ಕಟ್ಟಲು ಬಾರದೇ ಹಾಗೇ ಉಳಿದ ತನ್ನ ಕೆಲವು ಕೂದಲುಗಳ ಸೂಡನ್ನು ಚಟ್ಟನೆ ತಲೆಯಿಂದ ಕಿತ್ತಿ ನೆಲದ ಮೇಲೆ ಅಪ್ಪಳಿಸಿದಳು. ಕೂಡಲೇ ಕಿತ್ತಿ ಎಸೆದ ಅವಳ ಆ ಜಡೆಗೂದಲಿನಿಂದ ಓರ್ವ ರಣಭೈರವಿಯು ಉದಿಸಿ ಎದ್ದುನಿಂತಳು. ಅವಳ ಕೂದಲುಗಳಿಂದ ಇನ್ನೂ ಎಣ್ಣೆ ಬಸಿಯುತ್ತಿತ್ತು. ಅವಳ ಅರ್ಧ ದೇಹವು ಕಪ್ಪು ಕಪ್ಪಾಗಿದ್ದರೆ ಇನ್ನರ್ಧ ದೇಹವು ಬೆಳ್ಳಂಬಿಳಿದಾಗಿತ್ತು.

೨೨೭. ಪ್ರಾಹ ಗಚ್ಛಸ್ವ ಸುಭಗೇ ಚಂಡಮುಂಡಾವಿಹಾನಯ ।
ಸ್ವಯಂ ಹಿ ಮಾರಯಿಷ್ಯಾಮಿ ತಾವಾನೇತುಂ ತ್ವಮರ್ಹಸಿ ॥

ನಾನು ಬಲಿಷ್ಠನಾದ ಓರ್ವ ದೈತ್ಯನನ್ನು ಕೊಲ್ಲುತ್ತೇನೆ. ಎಂದು ಹೇಳಿದಳು ದೇವಿಯ ಹುಬ್ಬುಗಂಟಿನಿಂದ ಹುಟ್ಟಿದ ಕಾಳೀದೇವಿಯು ಅವಳಿಗೆ ಚಂಡಮಾರಿ ಎಂದು ಹೆಸರನ್ನಿಟ್ಟು 'ಶೋಭನಾಂಗಿಯೇ, ಚಂಡ ಮುಂಡ ದೈತ್ಯರನ್ನು ಇಲ್ಲಿ ಕರೆದುಕೊಂಡು ಬಾ. ಆ ದುಷ್ಟನನ್ನು ನಾನೇ ಕೊಂದು ಹಾಕುತ್ತೇನೆ.

೨೨೮. ತತಸ್ತಾವಪಿ ಲಗೇನ ಪ್ರಧಾವತ್ ತ್ಯಕ್ತವಾಸಸಾ ।
ಸಾಧಿರುಹ್ಯ ಮಹಾವೇಗಂ ರಾಸಭಂ ಗರುಡೋಪಮಮ್ ॥

''ಅವನನ್ನು ಹಿಡಿದುಕೊಂಡು ಬರಲು ನೀನೊಬ್ಬಳೇ ಸಮರ್ಥಳು'' ಎಂದು ಹೇಳಿದಳು. ಇದನ್ನು ಕೇಳಿ ಆ ಚಂಡಮುಂಡ ದೈತ್ಯರಿಬ್ಬರನ್ನು ಹಿಡಿದು ತರಲು ಚಂಡಮಾರಿಯು ಧಾವಿಸಿದಳು. ಆಗ ಹೆದರಿ ಹೌಹಾರಿದ ಆ ಚಂಡ-ಮುಂಡರಿಬ್ಬರೂ

ಉಟ್ಟ ಬಟ್ಟೆಯ ಪರಿವೇ ಇಲ್ಲದೇ ದಕ್ಷಿಣ ದಿಕ್ಕಿಗೆ ಓಡಿದರು. ಚಂಡಮಾರಿಯು ಗರುಡನಂತೆ ವೇಗದಿಂದ ಓಡುವ ಒಂದು ಕತ್ತೆಯನ್ನು ಹತ್ತಿಕೊಂಡು ಆ ದೈತ್ಯನನ್ನು ಬೆನ್ನಟ್ಟಿದಳು.

೨೨೯. ಸಾ ದದರ್ಶ ತದಾ ಪೌಂಡ್ರಂ ಮಹಿಷಂ ವೈ ಯಮಸ್ಯ ಚ ।
ಸಾ ತಸ್ಯೋತ್ಪಾಟಯಾಮಾಸ ವಿಷಾಣಂ ಭುಜಗಾಕೃತಿಮ್ ॥
ಸಂಪ್ರಗೃಹ್ಯ ಕರೇಣೈವ ದಾನವಾನನ್ವಗಾಜ್ಜವಾತ್ ॥

ದಾರಿಯಲ್ಲಿ ಅವನ ಕಣ್ಣಿಗೆ ಯಮದೇವರ ಪೌಂಡ್ರ ಎಂಬ ಹೆಸರಿನ ಕೋಣವು ಕಾಣಿಸಿತು. ಕೂಡಲೇ ಅವಳು ಆ ಕೋಣದ ಹಾವಿನಾಕಾರದ ಕೋಡನ್ನು ಕಿತ್ತಿ ಕೊಂಡಳು. ಅದನ್ನು ಕೈಯಲ್ಲಿ ಹಿಡಿದುಕೊಂಡು ಬಟ್ಟೆ ಕಳೆದು ಓಡುತ್ತಿರುವ ದಾನವರನ್ನು ಅಟ್ಟಿಸಿ ಹೋದಳು. ಆಗ ಚಂಡ ಮುಂಡರು ನೆಲದ ಮೇಲೆ ಓಡಿಓಡಿ, ಕಾಲು ಸೋತು ಗಗನಕ್ಕೆ ಹಾರಿದರು. ಚಂಡಮಾರಿಯು ಅಲ್ಲಿಯೂ ಅವರನ್ನು ರಾಸಭಾರೂಢಳಾಗಿಯೇ ಬೆನ್ನಟ್ಟಿದಳು.

೨೩೦. ಭಯಾರ್ತಶ್ಚೈವ ಗರುಡೋ ಮಾಂಸ ಪಿಂಡೋಪಮೋ ಬಭೌ ।
ನ್ಯಪತಂಸ್ತಸ್ಯ ಪತ್ರಾಣಿ ರೌದ್ರಾಣಿ ಹಿ ಪತತ್ರಿಣಃ ॥

ದಾರಿಯಲ್ಲಿ ಮುಗಿಲು ಮಾರ್ಗದಲ್ಲಿ ಹಾರಿಹೋಗುವ ಗರುಡನು ಅವಳ ಕಣ್ಣಿಗೆ ಬಿದ್ದನು. ಕರ್ಕೋಟಕವೆಂಬ ಸರ್ಪವನ್ನು ಕಂಡು ಅದರ ಮೇಲೆ ಎರಗಲು ಗರುಡನು ಗರಿ ನಿಮಿರಿಸಿಕೊಂಡು ಹೊರಟಿದ್ದನು. ಈ ಚಂಡಮಾರಿಯನ್ನು ಕಂಡ ಕೂಡಲೇ ಅವನು ಗಾಬರಿಗೊಂಡು ಭಯದಿಂದ ಮುದುರಿ ಮುದ್ದೆಯಾದನು. ಮಾಂಸ ಪಿಂಡದಂತ ಅವಸ್ಥೆಯಿಂದ ಒಮ್ಮೆಲೇ ಮೈಮುದುಡಿಕೊಂಡಿದ್ದರ ಮೂಲಕ ಗರುಡ ದೇಹದ ಕೆಲವು ಗರಿಗಳು ಸಿಡಿದು ಕೆಳಗೆಬಿದ್ದವು.

೨೩೧. ಖಗೇಂದ್ರ ಪತ್ರಾಣ್ಯಾದಾಯ ನಾಗಂ ಕರ್ಕೋಟಕಂ ತಥಾ ।
ವೇಗೇನಾಥಾಸರದ್ದೇವೀ ಚಂಡಮುಂಡೌ ಮಹಾಸರೌ ।
ಬದ್ಧ್ವಾ ಕರ್ಕೋಟಕೇನೈವ ಬದ್ಧ್ವಾ ವಿಂಧ್ಯಮುಪಾಗತಮ್ ॥

ಚಂಡಮಾರಿಯು ಆ ಗರುಡನ ಗರಿಗಳನ್ನೂ ಮತ್ತು ಕರ್ಕೋಟಕ ಹಾವನ್ನೂ ಕೈಯಲ್ಲಿ ಹಿಡಿದುಕೊಂಡು ಭಯಭ್ರಾಂತರಾಗಿ ಓಡುತ್ತಿರುವ ಚಂಡ ಮುಂಡರಿದ್ದ ಕಡೆ ಧಾವಿಸಿದಳು. ಅರೆಚಣದಲ್ಲಿ ಆ ಇಬ್ಬರು ದೊಡ್ಡ ದೈತ್ಯರನ್ನು ಹಿಡಿದು ಕರ್ಕೋಟಕ ಹಾವಿನಿಂದಲೇ ಬಿಗಿದು ವಿಂಧ್ಯಪರ್ವತಕ್ಕೆ ತಂದಳು. (೨೩೧)

೨೩೨. ತಂ ಶೇಖರಂ ಶಿವಾ ಗೃಹ್ಯ ಚಾಮುಂಡಾ ಮೂರ್ಧ್ನಿ ವಿಸ್ತೃತಂ।
ಬಬಂಧ ಪ್ರಾಹ ಚೈವೇನಾಂ ಕೃತಂ ಕರ್ಮ ಸುಧಾರಣಮ್ ।

ಮತ್ತು ಕೌಶಿಕೀದೇವಿಗೆ ಅವರ ಚರ್ಮ ಸುಲಿದು ಕರುಳು ಹುರಿಯಿಂದ ಅನೇಕ ದೈತ್ಯರ ತಲೆಬುರುಡೆಗಳ ಮಾಲೆ ಮಾಡಿ ನಡನಡುವೆ ಗರುಡಗರಿಗಳನ್ನು ಕುಚ್ಚಗಳಂತೆ ಕಟ್ಟಿ ಅರ್ಪಿಸಿದಳು. ಸಿಂಹದ ಚರ್ಮದಿಂದ ಮಾಡಿದ ಘರ್ಘರ ಎಂಬ ವಾದ್ಯವನ್ನೂ ಈ ಮುಂಡಮಾಲೆಯನ್ನೂ ಆ ಚಂಡಿಕಾದೇವಿಗೆ ಚಂಡಮಾರಿಯು ಸಮರ್ಪಿಸಿದಳು. ಮತ್ತೊಂದು ಅಂಥದೇ ಮಾಲೆಯನ್ನು ಮಾಡಿ ತಾನೂ ಧರಿಸಿದಳು.

ಮತ್ತು ತನ್ನ ತಲೆಯ ಮೇಲೆ ಹಲವಾರು ಗರುಡಗರಿಗಳನ್ನು ಸಿಕ್ಕಿಸಿಕೊಂಡಳು. ದೈತ್ಯರ ರಕ್ತವನ್ನು ಪಾನ ಮಾಡಿದಳು. ಚಂಡಮುಂಡರ ರುಂಡಗಳನ್ನು ಕತ್ತರಿಸಿ ಆ ದುರ್ಗೆಯು ತಲೆಕಿರೀಟವನ್ನು ಮಾಡಿದಳು. ಅದನ್ನು ತೆಗೆದುಕೊಂಡು ಹುಬ್ಬಿನಿಂದ ಹುಟ್ಟಿದ ಶರ್ವೆಯೊಡನೆ ಚಂಡಮಾರಿಯು ಕೌಶಿಕಿಯ ಹತ್ತಿರ ಬಂದು ದೈತ್ಯರ ತಲೆಗಳನ್ನು ಹಾವಿನಿಂದ ಕೂಡಿಸಿ ಮಾಡಿದ ಈ ಮುಂಡಮಾಲೆಯನ್ನೂ ಮತ್ತು ಶಿರೋಭೂಷಣ ವನ್ನೂ ಸ್ವೀಕರಿಸಬೇಕು ಎಂದು ಬೇಡಿಕೊಂಡನು. ಚಂಡಮುಂಡರ ಎರಡೂ ತಲೆ ಬುರುಡೆಗಳನ್ನೂ ಕರ್ಕೋಟಕ ಹಾವಿನಿಂದ ಒಂದರ ಮೇಲೊಂದು ಕಟ್ಟಿ ನಿರ್ಮಿಸಿದ ಆ ಕಿರೀಟವನ್ನು ಕೌಶಿಕಿಯು ನೋಡಿ ಆನಂದಪಟ್ಟು ತನ್ನ ಕೈಯಲ್ಲಿ ತೆಗೆದುಕೊಂಡಳು. ಅದನ್ನು ಕಷ್ಟಪಟ್ಟು ಮಾಡಿದ ದುರ್ಗಿಗೇ ತಿರುಗಿ ಕೊಟ್ಟು ತನ್ನ ಕೈಯಿಂದಲೇ ಅವಳ ತಲೆಗೆ ಕಟ್ಟಿ ಹೇಳಿದಳು.

೨೩೩. **ಶೇಖರಂ ಚಂಡಮುಂಡಾಭ್ಯಾಂ ಯಸ್ಮಾದ್ಧಾರಯಸೇ ಶುಭಮ್**
**ತಸ್ಮಾತ್ ಲೋಕೇ ತವ ಖ್ಯಾತಿಶ್ಚಾಮುಂಡೇತಿ ಭವಿಷ್ಯತಿ ॥**

ನೀನು ಈ ದುಷ್ಟ ದಾನವರ ಸಂಹಾರರೂಪವಾದ ಘೋರ ಕಾರ್ಯವನ್ನು ಮಾಡಿರುವಿ, ಆದುದರಿಂದ ಇದನ್ನು ನೀನೇ ಧರಿಸು. ಚಂಡಮುಂಡರ ಶಿರಗಳಿಂದ ನಿರ್ಮಿತವಾದ ಈ ಮುಕುಟವನ್ನು ಧರಿಸಿದ್ದರಿಂದ ನೀನು ಚಾಮುಂಡಾ ಎಂದು ಜಗತ್ತಿನಲ್ಲಿ ಹೆಸರಾಗುವಿ.

೨೩೪. **ಇತ್ಯೇವಮುಕ್ತ್ವಾ ವಚನಂ ತ್ರಿನೇತ್ರಾಂ ತಾಂ ಚಂಡಮುಂಡ**
**ಸೃಜಧಾರಿಣೀಂ ವೈ ॥ ದಿಗ್ವಾಸಸಂ ಚಾಭ್ಯವದ್ಧತೀತಾ**
**ನಿಷೂದಯಸ್ವಾರಿಬಲಾನ್ಯಮೂನಿ ॥**

ಹೀಗೆ ಚಂಡಮುಂಡ ಮಾಲೆಯನ್ನು ಧರಿಸಿ ದಿಗ್‌ದುಕೂಲಳಾಗಿಯೇ ನಿಂತ ಮೂರು ಕಣ್ಣಿನ ಆ ದುರ್ಗೆಗೆ ಇಂತು ನುಡಿದು ''ಈ ಎಲ್ಲ ವೈರಿಗಳನ್ನು ಸಂಹರಿಸು'' ಎಂದು ಹೇಳಿದಳು. ಈ ಪ್ರಕಾರ ದೇವಿಯಿಂದ ಪ್ರೇರಿತಳಾದ ಚಾಮುಂಡಿಯು ಯಮನ ಕೋಣದ ಕೋಡಿನಿಂದ ಬಿಲ್ಲನ್ನು ನಿರ್ಮಿಸಿ ಬಿರುಸಿನಿಂದ ಬಾಣಗಳ ಮಳೆಗರೆದು ಘೋರವಾದ ಶತ್ರು ಸೈನ್ಯವನ್ನೆಲ್ಲ ಕೊಚ್ಚಿ ಹಾಕಿದಳು. ಉಳಿದವರನ್ನೆಲ್ಲ ತಿಂದು ತೇಗಿದಳು. ಅನಂತರ ದುರ್ಗಿ ಹಾಗೂ ದೇವಿಯ ಸಿಂಹ ಮತ್ತು ಭೂತಪರಿವಾರಗಳ ಹೊಡೆತ ಬಡೆತಗಳ ಪೆಟ್ಟಿಗೆ ಸಿಕ್ಕು ಎಲ್ಲ ದೈತ್ಯ ದಾನವರೂ ಸೋತು ಸುಣ್ಣಾಗಿ ಆ ಸಿಂಹಕ್ಕೆ ಶರಣು ಬಂದರು.

ವಾಮನ ಮಹಾಪುರಾಣದಲ್ಲಿ ಸಿಂಹವಾಹನೆಯ ರಣೋತ್ಸಾಹ ಎಂಬ
ಐವತ್ತೈದನೆಯ ಅಧ್ಯಾಯ ಮುಗಿದುದು.

—o—

## ಆರುಮುಖಗಳಿಂದ ಸ್ತನ್ಯಪಾನ ಮಾಡಿದವ | ಅಧ್ಯಾಯ - ೫೬

**೨೩೫. ಪುಲಸ್ತ್ಯ - ಚಂಡಮುಂಡೌ ಚ ನಿಹತೌ ದೃಷ್ಟ್ವಾ ಸೈನ್ಯಂ ಚ ।**
**ವಿದ್ರುತಮ್ ಸಮಾದಿದೇಶಾಬಲಂ ರಕ್ತಬೀಜಂ ಮಹಾಸುರಮ್ ।**

ಚಂಡಮುಂಡ ದೈತ್ಯರು ಇಬ್ಬರೂ ಮಡಿದು ದೈತ್ಯ ಸೈನ್ಯವೆಲ್ಲ ದುರ್ಗಿಯ ರಣರಭಸವನ್ನು ತಾಳದೇ ಹೆದರಿ ಚೆದರಿ ಹೋದದ್ದನ್ನು ಕಂಡು ಶುಂಭನು ಅತ್ಯಂತ ಬಲಿಷ್ಠನಾದ ರಕ್ತಬೀಜನಿಗೆ ಯುದ್ಧಕ್ಕೆ ಹೋಗಿ ದೇವಿಯನ್ನು ಎದುರಿಸಲು ಆದೇಶವಿತ್ತನು. ಮೂವತ್ತು ಅಕ್ಷೋಹಿಣಿ ದೈತ್ಯಸೇನೆಯು ಕೋಟಿ ಕೋಟಿ ಸಂಖ್ಯೆಯಲ್ಲಿ ಆ ರಕ್ತಬೀಜ ರಕ್ಕಸನನ್ನು ಬೆಂಬಲಿಸುತ್ತಿತ್ತು.

**೨೩೬. ಮುಮೋಚ ಸಿಂಹನಾದಂ ವೈ ಕಾಲ್ಯಾ ಸಹ ಮಹೇಶ್ವರೀ ।**
**ನಿನದಂತ್ಯಾಸ್ತತೋ ದೇವ್ಯಾ ಬ್ರಹ್ಮಾಣೀ ಮುಖತೋಽಭವತ್ ॥**

ತನ್ನ ಮೇಲೆ ಏರಿಬರುವ ದೈತ್ಯರ ಸೇನಾಬಲವನ್ನು ಕಂಡು ಚಂಡೀದೇವಿಯು ಕಾಳೀದೇವಿಯೊಡನೆ ಸಿಂಹನಾದ ಮಾಡಿದಳು. ಹೀಗೆ ಗರ್ಜಿಸುತ್ತಿರುವ ಅವಳ ಮುಖದಿಂದ ಬ್ರಹ್ಮಾಣಿಯು ಆವಿರ್ಭವಿಸಿದಳು. ಹಂಸವನ್ನು ಹೂಡಿದ ವಿಮಾನದಲ್ಲಿ ಕುಳಿತ ಆ ಬ್ರಹ್ಮಾಣಿಯು ಅಕ್ಷಮಾಲೆಯನ್ನು ಧರಿಸಿ ಕೈಯಲ್ಲಿ ಕಮಂಡಲವನ್ನು ಪಿಡಿದಿದ್ದಳು. ಅನಂತರ ತ್ರಿಶೂಲವನ್ನು ಧರಿಸಿದ ಮೂರು ಕಣ್ಣಿನ ಮಾಹೇಶ್ವರಿಯು ಎತ್ತನ್ನು ಹೊತ್ತಿಕೊಂಡು ಹೊರಬಿದ್ದಳು. ಆ ಬಳಿಕ ಹಾವುಗಳ ಕಡಗವನ್ನು ಧರಿಸಿ ನವಿಲುಗರಿಗಳನ್ನು ಅಲಂಕಾರವಾಗಿ ಮಾಡಿಕೊಂಡ ಕೌಮಾರೀ ದೇವಿಯು ಶಕ್ತ್ಯಾಯುಧವನ್ನು ಧರಿಸಿ ಆ ಕ್ಷಣದಲ್ಲಿ ಅವತರಿಸಿ ಬಂದಳು.

ಅವಳ ನಂತರ ನವಿಲನ್ನೇರಿ ಕೈಯಲ್ಲಿ ಶಂಖ, ಚಕ್ರ, ಗದಾ, ಪದ್ಮಗಳನ್ನು ಧರಿಸಿ ಗರುಡಾರೂಢಳಾದ ವೈಷ್ಣದೇವಿಯು ಪ್ರಾದುರ್ಭೂತಳಾದಳು. ಪೃಷ್ಠಭಾಗದಿಂದ ಉಗ್ರವಾದ ಒನಕೆಯನ್ನು ಹಿಡಿದು ಆದಿಶೇಷನ ಮೇಲೆ ಕುಳಿತ ವಾರಾಹೀದೇವಿಯು ಕೋರೆದಾಡೆಗಳಿಂದ ಭೂಮಿಯನ್ನು ಸೀಳುತ್ತ ಉದ್ಭವಿಸಿದಳು. ಮತ್ತು ಚಂಡೀದೇವಿಯ ಹೃದಯದಿಂದ ಗ್ರಹನಕ್ಷತ್ರ ತಾರೆಗಳನ್ನೂ ಕೂಡ ತನ್ನ ನಿಮಿರಿನಿಂತ ಕೇಶಪಾಶಗಳಿಂದ ಅಪ್ಪಳಿಸುವ ನಾರಸಿಂಹದೇವಿಯು ತನ್ನ ಚೂಪಾದ ಉಗುರುಗಳಿಂದ ಘೋರ ರೂಪವನಾಂತು ಉದಿಸಿಬಂದಳು.

**೨೩೭. ಅಭ್ಯೇತ್ಯ ವಂದ್ಯ ಚೈವೇನಾಂ ಪ್ರಾಹ ವಾಕ್ಯಂ ತದಾಂಬಿಕಾಂ ।**
**ಸಮಾಯಾತೋಽಸ್ಮಿ ವೈ ದುರ್ಗೇ ದೇಹ್ಯಾ ಜ್ಞಾಂ**
**ಕಿಂಕರೋಽಸ್ಮಿತೇ । ತದ್ವಾಕ್ಯಸಮಕಾಲಂ ಚ**

ಈ ಎಲ್ಲ ದೇವಿಯರು ಅಸುರರ ಬಲವನ್ನು ಕಬಳಿಸತೊಡಗಿದರು. ಅದನ್ನು ಕಂಡು ರಕ್ತಬೀಜನು ಸಿಂಹನಾದ ಮಾಡಿದನು. ಅದಕ್ಕೆ ಪ್ರತಿಯಾಗಿ ಚಂಡಿಕಾದೇವಿಯು ನಿರ್ಭಯಳಾಗಿ ಮತ್ತೆ ಗುಡುಗಿ ಗರ್ಜಿಸಿದಳು. ಅದರ ನಾದನಿನಾದವು ಮೂರು ಲೋಕಗಳನ್ನೂ ತುಂಬಿ ಪ್ರತಿಧ್ವನಿಗೊಂಡಿತು. ಆ ಭೀಷಣ ನಾದವನ್ನು ಕೇಳಿ ದೇವತೆಗಳ

ಒಡೆಯನಾದ ಮುಕ್ಕಣ್ಣನು ಕೈಯಲ್ಲಿ ಶೂಲವನ್ನು ಹಿಡಿದು ಅಲ್ಲಿಗೆ ಆಗಮಿಸಿದನು. ಅವನು ಬಂದ ಆ ಚಂಡಿಯನ್ನು ನಮಸ್ಕರಿಸಿ ''ದುರ್ಗಾದೇವಿಯೇ ನಾನು ಬಂದಿದ್ದೇನೆ. ನಾನೊಬ್ಬ ನಿನ್ನ ಕಿಂಕರ ಅಪ್ಪಣೆ ನೀಡು, ನಾನು ಏನು ಮಾಡಬೇಕು'' ಎಂದು ಕೇಳಿದನು.

೨೩೮. ದೇವ್ಯಾ ದೇಹೋದ್ಭವಾಶುಭಾ ।
ಜಾತಾ ಸಾ ಚಾಹ ದೇವೇಶಂ ಗಚ್ಛ ದೌತ್ಯೇನ ಶಂಕರ ॥

ಹೀಗೆ ಶಿವನು ಮಾತನಾಡುತ್ತಿರುವ ಕಾಲದಲ್ಲಿಯೇ ಆ ಚಂಡಿಯ ದೇಹದಿಂದ ಶಿವಾದೇವಿಯು ಉದಿಸಿ ಬಂದಳು. ಅವಳು ಮಹಾದೇವನಿಗೆ ಹೀಗೆ ಹೇಳಿದಳು.

೨೩೯. ಬ್ರೂಹಿ ಶುಂಭ ನಿಶುಂಭಂ ಚ ಯದಿ ಜೀವಿತುಮಿಚ್ಛಥ ।
ತದ್ಗಚ್ಛದ್ಧ್ವಂ ದುರಾಚಾರಾ ಸಪ್ತಮಂ ಹಿ ರಸಾತಲಂ ॥

ಶಂಕರನೇ ನೀನು ಈಗ ದೂತನಾಗಿ ಹೋಗು. ಆ ಶಂಭುನಿಶುಂಭರ ಬಳಿಗೆ ಹೋಗಿ ಅವರಿಗೆ ತಿಳಿಸು, ''ಎಲೈ ದುರಾಚಾರಿಗಳೇ, ನಿಮಗೆ ಬದುಕಬೇಕೆಂಬ ಇಚ್ಛೆ ಇದ್ದರೆ ಈ ತಿರೆಯನ್ನು ತೊರೆಯಿರಿ. ಕೆಳಗೆ ಇಳಿಯಿರಿ. ಏಳನೆಯ ರಸಾತಳಕ್ಕೆ ಹೋಗಿ ನೆಲೆಸಿರಿ. ಇಂದ್ರನು ತನ್ನ ಸ್ವರ್ಗ ಸಾಮ್ರಾಜ್ಯವನ್ನು ಪಡೆಯಲಿ. ದೇವತೆಗಳ ದುಃಖ ದುಮ್ಮಾನಗಳೆಲ್ಲ ದೂರಾಗಲಿ. ಬ್ರಾಹ್ಮಣರೇ ಮೊದಲಾದ ಎಲ್ಲ ವರ್ಣದವರು ಯಥಾ ತಮ್ಮ ತಮ್ಮ ಯಜ್ಞಯಾಗಾದಿ ಪುಣ್ಯಕಾರ್ಯವನ್ನು ಮಾಡಲಿ. ಇಲ್ಲದಿದ್ದರೆ ನಿಮ್ಮ ಸಾಮರ್ಥ್ಯದ ಗರ್ವದಿಂದ ನನ್ನೊಡನೆ ಯುದ್ಧಮಾಡಲು ಇಚ್ಛಿಸುತ್ತಿದ್ದರೆ ಬನ್ನಿರಿ. ನನಗೇನೂ ಹೆದರಿಕೆ ಇಲ್ಲ. ನಾನೇ ನಿಮ್ಮನ್ನೆಲ್ಲ ಮರ್ದಿಸಿ ಮರಣಗಾಣಿಸುತ್ತೇನೆ'' ಎಂದು ಅವರಿಗೆ ತಿಳಿಸು.

೨೪೦. ಯತಸ್ತು ಸಾ ಶಿವಂ ದೌತ್ಯೇ ನ್ಯಯೋಜಯತ ನಾರದ
ತತೋ ನಾಮ ಮಹಾದೇವ್ಯಾಃ ಶಿವದೂತೀತ್ಯಜಾಯತ ॥

ಹೀಗೆ ಹೇಳಿ ಆ ಚಂಡಿಕೆಯು ಶಿವನನ್ನೇ ದೂತನನ್ನಾಗಿ ಮಾಡಿಕೊಟ್ಟು ಕಳುಹಿಸಿದಳು. ಇದರಿಂದ ಅವಳಿಗೆ ಶಿವನೆ ದೂತನಾಗಿ ಉಳ್ಳ ಶಿವದೂತೀ ಎಂಬ ಹೆಸರು ಬಂದಿತು. ಮಹಾದೇವನು ಶಿವದೂತಿಯ ವಚನದಂತೆ ಶುಂಭನಿಶುಂಬರ ಬಳಿಗೆಹೋಗಿ ಅವಳ ಎಚ್ಚರಿಕೆಯ ನುಡಿಯನ್ನು ಉಸುರಿದನು. ಶಂಕರನ ಮುಖಾಂತರ ಬಂದ ಆ ದೇವಿಯ ಮಾತು ಗರ್ವೋಕ್ತಿ ಎಂದು ಆ ದೈತ್ಯರಿಗೆ ತೋರಿತು. ಅವರೆಲ್ಲರೂ ಹೂಂಕಾರಗೈಯುತ್ತ ಕಾತ್ಯಾಯಿನೀದೇವಿ ಇದ್ದಲ್ಲಿಗೆ ಧಾವಿಸಿದರು. ಶುಂಭನಿಶುಂಭರು ಬಾಣ, ಅಂಕುಶ, ಕೊಡಲಿ, ತ್ರಿಶೂಲ, ಭುಶುಂಡಿ, ಖಡ್ಗ ಬರ್ಚಿ, ಚೂಪಾದ ಸರಳು ಸಳಿ ಮುಂತಾದ ಬಗೆಬಗೆಯ ಘೋರಾಯುಧಗಳ ಮಳೆ ಯನ್ನೇ ಆ ದೇವಿಯ ಮೇಲೆ ಸುರಿಸಿದರು. ಅವಳಾದರೂ ತನ್ನ ಉತ್ತಮ ಬಿಲ್ಲಿನಿಂದ ಬಾಣ ಬಿಟ್ಟು ಆ ಇಬ್ಬರೂ ದೈತ್ಯರ ಶಸ್ತ್ರಾಸ್ತ್ರಗಳನ್ನೆಲ್ಲ ಕತ್ತರಿಸಿಹಾಕಿದಳು. ಹಾಗೂ ರಣಧೀರಳಾದ ಆ ಮಹೇಶ್ವರಿಯು ನೂರಾರು ಬಾಣಗಳನ್ನು ಬಿಟ್ಟು ದೈತ್ಯರನ್ನು ಸಂಹರಿಸಿದಳು. ಚಂಡಮಾರಿಯು ತನ್ನ ತ್ರಿಶೂಲದಿಂದಲೂ, ಕೌಶಕಿಯು ತನ್ನ ಕೈಯಲ್ಲಿಯ ತಲೆಯಪರಟೆಯನ್ನು ಅಪ್ಪಳಿಸಿಯೂ, ಬ್ರಾಹ್ಮಿಯು ತನ್ನ ಜಲ ಪ್ರವಾಹವನ್ನು ತುಳುಕಿಸಿಯೂ, ಮಾಹೇಶ್ವರಿಯೂ ತನ್ನ ತ್ರಿಶೂಲದಿಂದ ತಿವಿದೂ, ವೈಷ್ಣವಿಯೂ ತನ್ನ ತೇಜೋಗ್ನಿಯಿಂದಲೂ,

ಕುಮಾರಿಯೂ ಶಕ್ತ್ಯಾಯುಧದಿಂದಲೂ ಚಂಡಿಯು ವಜ್ರ ದಿಂದಲೂ, ವಾರಾಹಿಯು ಚಕ್ರದಿಂದಲೂ ನಾರಸಿಂಹಿಯು ಉಗುರುಗಳಿಂದಲೂ, ಶಿವದೂತಿಯು ಅಟ್ಟಹಾಸಗಳಿಂದಲೂ, ಶಿವನು ತನ್ನ ತ್ರಿಶೂಲದಿಂದಲೂ, ಗಣಪತಿಯು ತನ್ನ ಕೈ ಕೊಡಲಿಯಿಂದಲೂ ದಾನವರನ್ನು ಕದನದಲ್ಲಿ ಕೊಚ್ಚಿ ಕೊಂದುಹಾಕಿದರು.

೨೪೧. ಏವಂ ದೇವ್ಯಾ ವಿವಿಧೈಸ್ತು ರೂಪೈಃ ನಿಪಾತಮಾನಾ
ದನುಪುಂಗವಾಸ್ತೇ
ಪೇತುಃ ಪೃಥಿವ್ಯಾಂ ಭುವಿ ಚಾಪಿ ಭೂತೈಃ ತೇ ಭಕ್ಷಮಾಣಾಃ
ಪ್ರಲಯಂ ಪ್ರಜಗ್ಮುಃ ॥

ಹೀಗೆ ದೇವಿಯ ವಿವಿಧ ರೂಪಗಳು ಬಂದು ದೈತ್ಯರನ್ನು ಕೊಂದು ಕೆಡವಿದ ಕೂಡಲೇ ನೆಲದಲ್ಲಿ ಬಿದ್ದ ಅವರನ್ನು ಭೂತಗಳು ತಿಂದು ಹಾಕುತ್ತಲಿದ್ದವು.

೨೪೨. ಯೋ ರಕ್ತಬಿಂದುರ್ನ್ಯಪತತ್ ಪೃಥಿವ್ಯಾಂ
ಸ ತತ್ಪ್ರಮಾಣಸ್ತ್ವಪರೋಽಪಿ ಜಜ್ಞೇ ॥

ದೇವತಾರೂಪಿಣಿಯರಾದ ಆ ಎಲ್ಲ ಮಾತೃದೇವಿಯರಿಂದ ಪ್ರಹಾರ ಸಂಹಾರಗಳನ್ನು ಅನುಭವಿಸಿ ಗಾಬರಿಗೊಂಡ ಎಲ್ಲ ದೊಡ್ಡ ದೈತ್ಯರೂ ಭಯಭ್ರಾಂತರಾಗಿ ಮುಡಿಕೆದರಿ ರಕ್ತಬೀಜನಿಗೆ ಶರಣುಹೋದರು. ಆ ರಕ್ತಬೀಜನೂ ಕೂಡ ಒಮ್ಮೆಲೇ ಅಲ್ಲಿಗೆ ಬಂದು ನಿಶಿತವಾದ ಅಸ್ತ್ರವನ್ನು ಹಿರಿದು ಆ ಮಾತೆಯರ ಮಂಡಳದಲ್ಲಿ ನುಗ್ಗಿದನು. ಸುತ್ತಲೂ ಇರುವ ಭೂತಗಳನ್ನೆಲ್ಲ ಓಡಿಸಿದನು. ಕೋಪದಿಂದ ಅವನ ಕೆಳದುಟಿ ಅದುರುತ್ತಿತ್ತು. ತಮ್ಮೆಡೆಗೆ ಬರುತ್ತಿರುವ ಆ ರಕ್ಕಸನನ್ನು ಕಂಡು ಆ ಶಕ್ತಿರೂಪಿಣಿಯರಾದ ಮಾತೆಯರು ಹದನವಾದ ಬಾಣಗಳನ್ನು ಆ ದೈತ್ಯನ ಮೇಲೆ ಮಳೆಗೆರೆದರು. ಅವನ ಮೈಯಿಂದ ಒಂದು ಹನಿ ರಕ್ತವು ಬಿದ್ದಲ್ಲೆಲ್ಲ ರಕ್ತಬೀಜನಷ್ಟೇ ಅಳತೆಯುಳ್ಳ ಮತ್ತೊಬ್ಬ ರಕ್ಕಸನು ಹುಟ್ಟುತ್ತಿದ್ದನು.

೨೪೩. ತತಶ್ಚ ಮಾರೀ ಸ್ವಯಮಂಬಿಕಾಥ ಪ್ರಹಸ್ಯತಾಂ
ಸಾಂಪ್ರತಮಿತ್ಯುವಾಚ ॥
ಪಿಬಸ್ವ ಚಂಡೇ ರುಧಿರಂ ತ್ವರಾ ತೇ ವಿತನ್ಯ ವಕ್ತ್ರಂ
ವಡವಾನಲಾಭಮ್ ॥

ಅನಂತರ ಚಂಡಮಾರಿಯು ಚರ್ಮಮುಂಡಾಂಬಿಕೆಯನ್ನು ಕುರಿತು "ಎಲೈ ಚಂಡಿಯೇ, ಬಡಬಾಗ್ನಿಯಂತೆ ಭಯಂಕರವಾದ ನಿನ್ನ ಬಾಯಿತೆರೆದು ಈ ದಾನವರ ರಕ್ತವನ್ನೆಲ್ಲ ಪಾನಮಾಡಿ ಇವನನ್ನು ಕೊಲ್ಲಬೇಕು" ಎಂದಳು. ಹೀಗೆ ಹೇಳಲ್ಪಟ್ಟ ಚರ್ಮಮುಂಡಾಂಬಿಕೆಯು ಭಯಂಕರವಾದ ತನ್ನ ಬಾಯನ್ನು ತೆರೆದು ಆಕಾಶವನ್ನೂ ಭೂಮಿಯನ್ನು ವ್ಯಾಪಿಸಿರುವಂತೆ ಮಾಡಿ ಹಾಗೇ ನಿಂತಳು. ಆಗ ಅಂಬಿಕೆಯು ಆ ದಾನವನ ಕೇಶವನ್ನು ಸೆಳೆದು ಶೂಲಾಯುಧದಿಂದ ಹೃದಯದಲ್ಲಿ ಇರಿದು ತನ್ನ ಬಾಯಲ್ಲಿ ಹಾಕಿಕೊಂಡಳು. ಅವನ ರಕ್ತಬಿಂದುವಿನಿಂದ ಹುಟ್ಟಿದವರೂ ಸಹ ಆ ಅವಳ ಬಾಯಿಯಲ್ಲೇ ಬಿದ್ದರು.

೨೪೪. ತಥಾ ಪರೇ ವಿಲುಲಿತಕೇಶಪಾಶಾ ವಿಶೀರ್ಣಚರ್ಮಾಭರಣಾ ದಿಗಂಬರಾಃ ॥
ನಿಪಾತಿತಾ ಧರಣೀತಲೇ ಮೃಡಾನ್ಯಾ
ಪ್ರದುದ್ರುವುರ್ಗಿರಿವರಮಾದಿದೈತ್ಯಾಃ ॥

ಉಳಿದ ರಕ್ತವೆಲ್ಲವೂ ಹೀಗೆಯೇ ನಾಶವಾಗಲಾಗಿ ಅವನೂ ಹೀನಬಲನಾದನು. ಆಗ ಅಸಮರ್ಥನಾಗಿ ಬಿದ್ದ ಅವನನ್ನು ದೇವಿಯು ಸುವರ್ಣಭೂಷಿತವಾದ ತನ್ನ ಚಕ್ರದಿಂದ ತುಂಡುತುಂಡಾಗಿ ಛೇದಿಸಿದಳು. ಆ ದಾನವನಾಥ ಹತನಾದುದನ್ನು ನೋಡಿ ಅಲ್ಲಿದ್ದ ದಾನಿಯರೆಲ್ಲರೂ ದೀನರಾಗಿ ಆತ್ಮಸ್ವರೂಪದಿಂದ ಕೂಗಿದರು. ''ಎಲೈ ತಂದೆಯೇ, ಎಲ್ಲಿ ಹೋದೆ, ಎಲೈ ಅಣ್ಣನೇ ಎಲ್ಲಿ ಹೋದೆ, ಎಲ್ಲ ಹೋಗುತ್ತಿದ್ದೀಯೇ. ಸ್ವಲ್ಪಕಾಲ ನಿಲ್ಲು'' ಎಂದು ಆರ್ತಧ್ವನಿಯು ಅಲ್ಲೆಲ್ಲಾ ಆವರಿಸಿತು. ಮತ್ತೆ ಕೆಲವು ದಾನವರು ಕೆದರಿದ ಕೂದಲುಗಳುಳ್ಳವರಾಗಿಯೂ, ಮುರಿದು ಹೋಗಿರುವ ಚರ್ಮಾಯುಧವೇನು, ಆಭರಣಗಳೇನು ಇವುಗಳಿಂದ ಕೂಡಿ ದೇವಿಯಿಂದ ಉರುಳಿಸಲ್ಪಟ್ಟು ಬೆಟ್ಟಗುಡ್ಡಗಳ ಕಡೆಗೆ ಓಡಿದರು.

೨೪೫. ತಂ ಸ್ತಭಿತಂ ವೀಕ್ಷ್ಯ ಸುರಾರಿಮಗ್ರೇ
ಪ್ರೋವಾಚ ದೇವೀ ವಚನಂ ವಿಹಸ್ಯ ॥
ಅನೇನ ವೀರ್ಯೇಣ ಸುರಾ ಜಿತಾಸ್ತ್ವಯಾ
ಅನೇನ ಮಾಂ ಪ್ರಾರ್ಥಯಸೇ ಬಲೇನ ।

ಆಗ ನಿಶುಂಭನು ಗುರಾಣಿ ಮತ್ತು ಭೂಷಣಗಳು ಎಲ್ಲವನ್ನೂ ಚೂರುಚೂರಾಗಿ ಮಾಡಿಕೊಂಡು ದೀನನಾಗಿ ನಿಂತಿರುವ ಆ ಬಲವನ್ನು ನೋಡಿ ರಥದ ಚಕ್ರ ಮತ್ತು ಅಚ್ಚುಗಳು ಮುರಿದುಹೋದರೂ ಕೋಪದಿಂದ ಮೃಡಾನಿಯನ್ನು ಎದುರಿಸಲು ಎದುರಾಗಿ ಬಂದನು. ಹಾಗೆ ಬಂದ ದಾನವನು ಕತ್ತಿಯನ್ನೂ ಗುರಾಣಿಯನ್ನೂ ತೆಗೆದುಕೊಂಡು ತಲೆಯನ್ನು ಕೋಪದಿಂದ ಅಲ್ಲಾಡಿಸುತ್ತಾ ದೇವಿಯ ಸಮೀಪಕ್ಕೆ ಬಂದು ಅವಳ ಆ ರೂಪವನ್ನು ನೋಡಿದೊಡನೆಯೇ ಮೋಹಿತನಾಗಿ ಆ ಮೋಹವನ್ನು ಸ್ವಲ್ಪ ತಡೆದುಕೊಂಡು ನಿಂತನು. ಆದರೂ ಅವಳ ಪ್ರಾಪ್ತಿಯ ವಿಷಯದಲ್ಲುಂಟಾದ ಸಂದೇಹದಿಂದ ವಿರಹಜ್ವರಪೀಡಿತನಾಗಿ ಚಿತ್ರದ ಪ್ರತಿಮೆಯಂತೆ ಸ್ತಬ್ಧನಾಗಿ ನಿಂತನು. ಈ ರೀತಿ ಸ್ತಂಭಿತನಾಗಿ ನಿಂತ ಅವನನ್ನು ನೋಡಿ ದೇವಿಯು ನಗುತ್ತಾ ದಾನವನ ಎದುರಿಗೆ ನಿಂತು ''ಈ ಪರಾಕ್ರಮದಿಂದಲೇ ಅಲ್ಲವೇ ನೀನು ದೇವತೆಗಳನ್ನು ಜಯಿಸಿದ್ದು'' ಎಂದು ಹಾಸ್ಯ ಮಾಡಿ ''ಈ ಬಲದಿಂದಲೇ ನನ್ನನ್ನು ಹೊಂದಲು ಪ್ರಾರ್ಥಿಸುತ್ತಿರುವೆಯಲ್ಲವೇ'' ಎಂದಳು.

೨೪೬. ಸುಕುಮಾರಶರೀರಾ ತ್ವಂ ಮಚ್ಛಸ್ತ್ರಪಾತನಾದಪಿ
ಶತಧಾ ಯಾಸ್ಯಸೇ ಭೀರು ಆಮಪಾತ್ರಮಿವಾಂಭಸಿ ॥

ಕೌಶಕಿಯ ಈ ಮಾತನ್ನು ಕೇಳಿ ದಾನವನು ಸ್ವಲ್ಪಕಾಲ ವಿಚಾರಮಾಡಿ ದೇವಿಯನ್ನು ಕುರಿತು, ''ಮಾತಿನ ಪ್ರೌಢಿಮೆಯಿಂದ ಸುಕುಮಾರ ಶರೀರಳಾದ ನೀನು ನನ್ನ ಶಸ್ತ್ರ ಪತನದಿಂದ ಹಸಿಯಾದ ಮಣ್ಣಿನಪಾತ್ರೆಯು ನೀರಿನಲ್ಲಿ ಕರಗಿ ಹೋಗುವಂತೆ ಚೂರು

ಚೂರಾಗಿ ಹೋಗುವೆಯಲ್ಲಾ ಎಂದು ಆಲೋಚಿಸಿ ಸುಂದರಿಯಾದ ನಿನ್ನನ್ನು ನಾನು ಪ್ರಹರಿಸಲು ಮನಸ್ಸು ಮಾಡಲಿಲ್ಲ.''

**೨೪೭. ಮಮ ಖಡ್ಗನಿಪಾತಂ ಹಿ ನೇಂದ್ರೋ ಧಾರಯಿತುಂ ಕ್ಷಮಃ ।**
**ನಿವರ್ತಯ ಮತಿಂ ಯುದ್ಧಾದ್ ಭಾರ್ಯಾ ಮೇ ಭವ ಸಾಂಪ್ರತಮ್ ॥**

ಆದುದರಿಂದ, ''ಎಲೈ ವಿಶಾಲನೇತ್ರಿಯೇ, ನಿನ್ನ ಸೌಂದರ್ಯಕ್ಕೂ, ನನ್ನ ಪ್ರಾರ್ಥನೆಗೂ ತಕ್ಕಂತೆ ನನ್ನನ್ನು ಹೊಂದು. ನನ್ನ ಈ ಕತ್ತಿಯ ಪ್ರಹಾರವನ್ನು ಸಹಿಸಲು ಇಂದ್ರನೂ ಸಮರ್ಥನಾಗಲಾರನು. ಆದುದರಿಂದ ನೀನು ಯುದ್ಧಮಾಡಬೇಕೆಂಬ ಬುದ್ಧಿಯನ್ನು ಬಿಡು. ಈ ನನಗೆ ಪತ್ನಿಯಾಗು'' ಎಂದನು.

**೨೪೮. ನಾಜಿತಾಹಂ ರಣೇ ವೀರ ಭವೇ ಭಾರ್ಯಾ ಹಿ ಕಸ್ಯಚಿತ್ ।**
**ಭವಾನ್ ಯದೀಹ ಭಾರ್ಯಾರ್ಥೀ ತತೋ ಮಾಜಯ ಸಂಯುಗೇ ॥**

ಈ ಪ್ರಕಾರವಾದ ನಿಶುಂಬನ ವಚನವನ್ನು ಮಾಹೇಶ್ವರಿಯೂ ಕೇಳಿ ನಗುತ್ತಾ ಅವನನ್ನು ಕುರಿತು ಭಾವಗರ್ಭಿತವಾಗಿ ''ಎಲೈ ವೀರನೇ, ನಾನು ಯುದ್ಧದಲ್ಲಿ ಜಿತಳಾಗದೆ ಯಾರಿಗೂ ಭಾರ್ಯೆಯಾಗುವ ಸಂಭವವೇ ಇಲ್ಲ. ನೀನು ಭಾರ್ಯಾರ್ಥಿಯಾಗುವ ಪಕ್ಷದಲ್ಲಿ ನನ್ನನ್ನು ಯುದ್ಧದಲ್ಲಿ ಜಯಿಸು'' ಎಂದು ಉತ್ತರ ಹೇಳಿದಳು. ದೇವಿಯು ಹೀಗೆ ಹೇಳಿದೊಡನೆಯೇ ಆ ದಾನವನು ಕತ್ತಿಯನ್ನು ಕತ್ತರಿಸಿ ವೇಗದಿಂದ ಕೌಶಕಿಯ ಮೇಲೆ ಪ್ರಯೋಗಿಸಿದನು. ಆಗ ಕೌಶಿಕಿಯು ತನ್ನ ಮೇಲೆ ಬರುತ್ತಿರುವ ಆ ಖಡ್ಗವನ್ನು ಗರಿಗಳಿಂದ ವೇಗಶಾಲಿಗಳಾದ ಆರು ಬಾಣಗಳಿಂದ ಕತ್ತರಿಸಿ ಕಡಿದು ಹಾಕಿದಳು. ದೇವಿಯ ಸಮರ ವ್ಯಾಪಾರವು ಎಲ್ಲರಿಗೂ ಆಶ್ಚರ್ಯಕರವಾಗಿ ತೋರಿತು. ಅನಂತರ ಆ ಅಸುರನು ಶಕ್ತಿಗುರಾಣಿಗಳು ನಾವಾದ ಮೇಲೆ ಗದೆಯನ್ನು ಧರಿಸಿ ವಾಯುವೇಗದಿಂದ ಆಕ್ರಮಿಸಲು ಬಂದನು. ಆ ಅಂಬಿಕೆಯು ಅವನು ಬರುತ್ತಿರುವಾಗಲೇ ಕೌಶಕಿಯನ್ನು ಧೃಢವಾದ ಅವನ ಕೈಯ್ಗಳನ್ನು ನಿಶಿತವಾದ ಬಾಣಗಳಿಂದ ಆಯುಧದೊಡನೆ ಕತ್ತರಿಸಿ ಕೆಳಕ್ಕೆ ಕೆಡಹಿದಳು. ಅದರಿಂದ ರೌದ್ರಾಕಾರನಾದ ಆ ಅಸುರನು ಭಯಂಕರಾಕಾರದಿಂದ ಕೆಳಗೆ ಬಿದ್ದನು. ಆಗ ಚಂಡಿಯೇ ಮೊದಲಾದ ಮಾತೃಗಣಗಳು ಸಂತೋಷದಿಂದ ಕಿಲಕಿಲ ಧ್ವನಿಮಾಡಿದರು.

**೨೪೯. ಗಗನಸ್ಥಾ ತತೋ ದೇವಾ ಶತಕ್ರತು ಪುರೋಗಮಾಃ ।**
**ಜಯಸ್ವ ವಿಜಯೇತ್ಯೂಚುಃ ಹೃಷ್ಟಾಃ ಶತ್ರೌ ನಿಪಾತಿತೇ ॥**

ಆಗ ಇಂದ್ರನೇ ಮೊದಲಾದ ದೇವತೆಗಳೆಲ್ಲರೂ ಆಕಾಶದಲ್ಲಿ ನಿಂತು ಶತ್ರುನಾಶ ದಿಂದ ಸಂತುಷ್ಟರಾಗಿ ''ವಿಜಯೆಯೇ, ನೀನು ಜಯಶಾಲಿಯಾಗು'' ಎಂದು ಉಚ್ಚ ಧ್ವನಿಯಿಂದ ಕೂಗಿದರು. ಆಗ ಭೂತಸಂಘಗಳೆಲ್ಲವೂ ಸಂತೋಷದಿಂದ ವಿಜಯಾರ್ಥವಾದ ತೂರ್ಯಧ್ವನಿ ಮಾಡಿದವು. ದೇವತೆಗಳೆಲ್ಲರೂ ಕಾತ್ಯಾಯಿನಿಯ ಮೇಲೆ ಹೂಮಳೆಗರೆದರು. ನಿಶುಂಭನು ಕೆಳಗೆ ಬಿದ್ದ ಮೇಲೆ ಶುಂಭನು ಬಹಳ ಕ್ರೋಧಾವಿಷ್ಟವಾಗಿ ವೃಂದಾಕರವೆಂಬ ತನ್ನ ಆನೆಯನ್ನು ಹತ್ತಿ ಪ್ರಾಸಾಯುಧಧಾರಿಯಾಗಿ ಯುದ್ಧಕ್ಕೆ ಬಂದನು.

೨೫೦. ತಸ್ಯಾವರ್ಜಿತನಾಗಸ್ಯ ಶುಂಭಸ್ಯಾಪ್ಯುತ್ಪತಿಷ್ಯತಃ
ಶಿರಶ್ಚಿಚ್ಛೇದ ಬಾಣೇನ ಕುಂಡಲಾಲಂಕೃತಂ ಶಿವಾ ॥

ಹಾಗೆ ಗಜಾರೂಢನಾಗಿ ಬರುತ್ತಿರುವ ದಾನವರಾಜನಾದ ಶುಂಭನನ್ನು ನೋಡಿ ದೇವಿಯು ಅರ್ಧಚಂದ್ರಾಕಾರದಿಂದ ಜ್ವಲಿಸುವ ನಾಲ್ಕು ಬಾಣಗಳನ್ನು ತೊಟ್ಟಳು. ಹಸನ್ಮುಖಿಯಾಗಿ ಲೀಲಾಮಾತ್ರದಿಂದ ಆ ಆನೆಯ ಎರಡೂ ಕಾಲುಗಳನ್ನೂ ತೀಕ್ಷ್ಣವಾದ ಎರಡು ಬಾಣಗಳಿಂದ ಕತ್ತರಿಸಿ ಮತ್ತೆರಡು ಬಾಣಗಳಿಂದ ಕುಂಭಸ್ಥಲದಲ್ಲಿ ಪ್ರಹರಿಸಿದಳು. ಅನಂತರ ಆ ಆನೆಯು ಕಾಲುಗಳೆರಡೂ ಕತ್ತರಿಸಲ್ಪಡಲಾಗಿ ಇಂದ್ರನ ವಜ್ರಾಯುಧದಿಂದ ಹೊಡೆಯಲ್ಪಟ್ಟ ಪರ್ವತದ ಶಿಖರದಂತೆ ಕೆಳಗೆ ಬಿದ್ದಿತು. ಆನೆಯು ಕೆಳಗೆ ಬೀಳುವಾಗ ಅದನ್ನೇ ಆಶ್ರಯಿಸಿಕೊಂಡಿದ್ದ ಶುಂಭನು ಮೇಲಕ್ಕೆ ಜಿಗಿದನು. ಆಗ ಕುಂಡಲಾಲಂಕೃತನಾದ ಅವನ ಶಿರಸ್ಸನ್ನು ದೇವಿಯು ಬಾಣದಿಂದ ಕತ್ತರಿಸಿದಳು. ದೇವಿಯಿಂದ ತಲೆಯು ಕತ್ತರಿಸಲ್ಪಟ್ಟ ಮೇಲೆ ಆ ಶುಂಭನು ತನ್ನ ಆನೆಯೊಡನೆ ಷಣ್ಮುಖನಿಂದ ಮಹಿಷನೊಡನೆ ನಾಶಪಡಿಸಲ್ಪಟ್ಟ ಕ್ರೌಂಚವು ನೆಲಕ್ಕೆ ಬಿದ್ದಂತೆ ಕೆಳಗೆ ಬಿದ್ದನು.

ಶ್ರುತ್ವಾ ಸುರಾಸುರಿಪೂ ನಿಹತೌ ಮೃಡಾನ್ಯಾ ।
ಸೇಂದ್ರಾಃ ಸೂರ್ಯ ಮರುದಶ್ವಿವಸು ಪ್ರಧಾನಾಃ ॥
ಆಗತ್ಯತಂ ಗಿರಿವರಂ ವಿನಯಾವನಮ್ರಾಃ ।
ದೇವ್ಯಾಸ್ತದಾಶ್ರುತಿಸುಖಂ ತ್ರಿದಶಮೀರಯಂತಃ ॥

ಈ ರೀತಿ ಸುರಶತ್ರುಗಳಾದ ಶುಂಭ ನಿಶುಂಭರು ದೇವಿಯಿಂದ ಹತರಾದುದನ್ನು ಕೇಳಿ ಇಂದ್ರ, ಸೂರ್ಯ, ವಾಯು, ಅಶ್ವಿನೀ ದೇವತೆಗಳು, ವಸುಗಳು ಇವರನ್ನೊಳಗೊಂಡ ದೇವತೆಗಳೆಲ್ಲರೂ ಆ ಪರ್ವತಕ್ಕೆ ಬಂದು ಭಕ್ತಿಯಿಂದ ತಲೆ ಬಾಗಿದವರಾಗಿ ದೇವಿಯನ್ನು ಕುರಿತು ಶ್ರುತಿ ಸುಖವಾದ ಈ ಸ್ತೋತ್ರವನ್ನು ಮಾಡಿದರು.

೨೫೧. ನಮೋಽಸ್ತು ತೇ ಭಗವತಿ ಪಾಪನಾಶಿನಿ ।
ನಮೋಸ್ತು ತೇ ಸುರರಿಪುದರ್ಪಶಾತನಿ ॥

೨೫೨. ನಮೋಸ್ತು ತೇ ಹರಹರರಾಜ್ಯದಾಯಿನಿ
ನಮೋಸ್ತು ತೇ ಮುಖಭುಜಕಾರ್ಯಕಾರಿಣೆ ।

ಷಡ್ಗುಣೈಶ್ವರ್ಯಪರಿಪೂರ್ಣಳಾಗಿಯೂ ಪಾಪನಾಶಕಳಾಗಿಯೂ ಇರುವ ದೇವಿಯೇ, ನಿನಗೆ ನಮಸ್ಕಾರಗಳು. ದಾನವರನ್ನು ನಾಶಮಾಡಿ ಹರಿಹರನಿಗೆ ರಾಜ್ಯ ಪ್ರಧಾನ ಮಾಡಿದ ದೇವಿಯೇ ನಿನಗೆ ನಮಸ್ಕಾರಗಳು. ಯಜ್ಞ ಜೀವಿಗಳಾದ ದೇವತೆಗಳ ಕಾರ್ಯಗಳನ್ನು ನಿರ್ವಾಹ ಮಾಡಿದ ನಿನಗೆ ಅನಂತ ನಮಸ್ಕಾರಗಳು.

೨೫೩. ನಮೋಸ್ತುತೇ ತ್ರಿದಶರಿಪುಕ್ಷಯಂಕರಿ
ನಮೋಸ್ತುತೇ ಶತಮಖಪಾದಪೂಜಿತೇ ।
ನಮೋಸ್ತುತೇ ಮಹಿಷಾವಿನಾಶಕಾರಿಣೆ
ನಮೋಸ್ತುತೇ ಹರಿಹಯಭಾಸ್ಕರಸ್ತುತೇ ॥

೨೫೪. ನಮೋಸ್ತುತೇಷ್ಟಾದಶ ಬಾಹುಶಾಲಿನಿ
ನಮೋಸ್ತುತೇ ಶುಂಭನಿಶುಂಭಭಘಾತಿನಿ
ನಮೋಸ್ತುತೇ ಚಾರ್ತಿಹರೇ ತ್ರಿಶೂಲಿನಿ
ನಮೋಸ್ತು ನಾರಾಯಣಿ ಚಕ್ರಧಾರಿಣಿ

ಸುರಶತ್ರುಗಳನ್ನು ನಾಶಿಸುತ್ತ ಇಂದ್ರನಿಂದಪಾದಪೂಜೆಹೊಂದುತ್ತಿರುವನಿನಗೆಅನಂತ ನಮಸ್ಕಾರಗಳು. ಮಹಿಷನಾಶಕಳಾಗಿಯೂ, ಇಂದ್ರಸೂರ್ಯರಿಂದಹೊಗಳಲ್ಪಡುವನಿನಗೆ ನಮಸ್ಕಾರಗಳು. ಹದಿನಾರುಭುಜಗಳನ್ನು ಹೊಂದಿಶುಂಭನಿಶುಂಭನಾಶಕಗಳಾಗಿರುವನಿನಗೆ ಅನಂತ ನಮಸ್ಕಾರಗಳು. ಪೀಡೆಪರಿಹಾರಕಳಾಗಿಯೂತ್ರಿಶೂಲಧಾರಿಯಾಗಿಯೂ ಚಕ್ರಾಯುಧವನ್ನು ಹೊಂದಿನಾರಾಯಣನಅಂಶವಾಗಿಯೂಇರುವನಿನಗೆಅನಂತನಮಃ.

೨೫೫. ನಮೋಸ್ತು ವಾರಾಹಿ ಸದಾಧರಾಧರೆ
ತ್ವಾಂ ನಾರಸಿಹ್ಮೀಂ ಪ್ರಣತಾ ನಮೋಸ್ತುತೇ
ನಮೋಸ್ತುತೇ ವಜ್ರಧರೆ ಗಜಧ್ವಜೆ
ನಮೋಸ್ತು ಕೌಮಾರಿ ಮಯೂರವಾಹಿನಿ ॥

೨೫೬. ನಮೋಸ್ತು ಪೈತಾಮಹಹಂಸವಾಹನೆ ।
ನಮೋಸ್ತು ಮಾಲಾವಿಕಟೆ ಸುಕೇಶಿನಿ ॥
ನಮೋಸ್ತುತೇ ರಾಸಭಪೃಷ್ಠವಾಹಿನಿ ।
ನಮೋಸ್ತು ಸರ್ವಾರ್ತಿಹರೇ ಜಗನ್ಮಯೆ ॥

ಎಲೈ ಭೂಧಾರಿಣಿಯಾದ ವಾರಾಹಿಯೇ ನಿನಗೆ ನಮಸ್ಕಾರಗಳು. ಎಲೈ ನಾರಸಿಂಹಿಯೇ ನಿನ್ನನ್ನು ಪ್ರಣಾಮಪೂರ್ವಕವಾಗಿ ನಮಸ್ಕರಿಸುತ್ತೇನೆ. ಎಲೈ ವಜ್ರಧಾರಿಣಿಯೇ, ಗಜವಾಹಿನಿಯೇ, ತೇಜಸ್ವಿನಿಯಾದ ಕೌಮಾರಿಯೇ ನಿನಗೆ ವಂದನೆಗಳು.

೨೫೭. ನಮೋಸ್ತು ವಿಶ್ವೇಶ್ವರಿ ಪಾಹಿ ವಿಶ್ವಂ ನಿಷೂದಯಾರಿಂ
ದ್ವಿಜದೇವತಾನಾಂ ।
ನಮೋಸ್ತು ತೇ ಸರ್ವಮಂಗಲ ತ್ರಿನೇತ್ರೆ ನಮೋ ನಮಸ್ತೆ
ವರದೇ ಪ್ರಸೀದ ॥

ಎಲೈ ಚತುರ್ಮುಖಹಂಸವಾಹಿನಿಯೇ, ನಿಬಿಡವಾದ ಮೂಲಾಧಾರಿಣಿಯಾದ ಸುಕೇಶಿನಿಯೇ, ನಿನಗೆ ನಮಸ್ಕಾರಗಳು. ಎಲೈ ರಾಸಭವಾಹಿನಿಯೇ ಸರ್ವಪೀಡಾನಾಶಕನಾದ ಜಗನ್ಮಯಮೂರ್ತಿಯೇ ನಿನಗೆ ನಮಸ್ಕಾರಗಳು.

೨೫೮. ಬ್ರಹ್ಮಾಣಿ ತ್ವಂ ಮೃಡಾನೀ ವರಶಿಖಿಗಮನಾ ಶಕ್ತಿಹಸ್ತಾಕುಮಾರೀ।
ವಾರಾಹೀ ತ್ವಂ ಸುವಕ್ತ್ರಾ ಘುರುಘುರಿತರವಾ ತ್ವಂ
ತಥೈಂದ್ರೀ ಸವಜ್ರಾ
ತ್ವಂ ಮಾರೀ ಚರ್ಮಮುಂಡಾ ಶಿವಗಮನರತಾ
ಯೋಗಿನೀ ಯೋಗಸಿದ್ಧಾ

ಎಲೈ ವಿಶ್ವನಾಥಯೇ, ಜಗತ್ತನ್ನು ನೀನು ಹೀಗೆಯೇ ರಕ್ಷಿಸು. ದೇವ ಬ್ರಾಹ್ಮಣರ ಶತ್ರುಗಳನ್ನು ನಾಶಪಡಿಸು. ಎಲೈ ಸರ್ವಮಂಗಳ ಸ್ವರೂಪಿಯೇ, ತ್ರಿನೇತ್ರಳೇ, ವರ ಪ್ರದಳೇ ನಿನಗೆ ನಮಸ್ಕಾರಗಳು. ನಮ್ಮ ವಿಷಯದಲ್ಲಿ ಪ್ರಸನ್ನಳಾಗಿರು.

೨೫೯. ಓಂ ನಮಸ್ತೇ ತ್ರಿನೇತ್ರೇ ಭಗವತಿ ತವ ಚರಣಾನುಚ್ಛ್ರಿತಾ ಯೇ ।
ಅಹರಹರ್ವಿನತ ಶಿರೋಧರಾಂಸನಮ್ರಾಃ ।
ನಹಿ ನಹಿ ಪರಮಸ್ತ್ಯಶುಭಂ ಸತತಂ ಸ್ತುತಿ ಬಲಕುಸುಮಕರಾಃ ಸಂತತಂ ಯೇ ॥

ಎಲೈ ದೇವಿಯೇ, ನೀನೇ ಬ್ರಾಹ್ಮಣಿಯಾಗಿಯೂ, ಮೃಡಾನಿಯಾಗಿಯೂ, ಮಯೂರವಾಹನೆಯಾಗಿಯೂ, ಶಕ್ತ್ಯಾಯುಧಧಾರಿಣಿಯಾದ ಕುಮಾರಿಯಾಗಿಯೂ, ವಾರಾಹಿಯಾಗಿಯೂ, ಗರುಡವಾಹನೆಯಾದ ಶಾರ್ಙ್ಗಧಾರಿಯಾದ ವೈಷ್ಣವಿಯಾಗಿಯೂ, ಮುಖವಿಕಾರ ಹೊಂದಿ ಘುರಘುರ ಎಂದು ಶಬ್ದ ಮಾಡುತ್ತಿರುವ ನಾರಸಿಂಹಿರೂಪ ಳಾಗಿಯೂ, ವಜ್ರಾಯುಧಧಾರಿಣಿಯಾದ ಐಂದ್ರಿಯಾದ ಚಂಡಮಾರಿಯಾಗಿಯೂ ಶಿವಗಮನದಲ್ಲಿ ಪ್ರೀತಿಯುಳ್ಳ ಚರ್ಮಮುಂಡಾರೂಪಳಾಗಿಯೂ, ಯೋಗ ಸಿದ್ಧಿ ಹೊಂದಿರುವ ಯೋಗಿನಿಯಾಗಿಯೂ ನಾನಾ ರೂಪದಿಂದಿರುವೆ.

೨೬೦. ಓಂ, ಏವಂ ಸ್ತುತಾ ಸುರವರ್ಯೈಃ ಸುರಶತ್ರುನಾಶಿನೀ
ಪ್ರಾಹ ಪ್ರಹಸ್ಯ ಸುರಸಿದ್ಧ ಮಹರ್ಷಿವರ್ಯಾನ್ ।
ಪ್ರಾಪ್ತೋ ಮಯಾದ್ಭುತತಮೋ ಭವತಾಂ
ಪ್ರಸಾದಾತ್ಸಂಗ್ರಾಮಮೂರ್ಧ್ನಿ ಸುರಶತ್ರುಜಯಃ ಪ್ರಮರ್ದಾತ್ ॥

ಮಹಾಮಹಿಮಳಾದ ತ್ರಿನೇತ್ರೆಯೇ, ನಿನಗೆ ನಮಸ್ಕಾರಗಳು. ಪ್ರತಿದಿನವೂ ಯಾರು ನಿನ್ನ ಚರಣಗಳಲ್ಲಿ ಭಕ್ತಿಯಿಂದ ನಮಸ್ಕರಿಸಿ ನಮ್ರತೆಯಿಂದ ವರ್ತಿಸುತ್ತಾರೋ, ಯಾರು ನಿನ್ನನ್ನು ಪುಷ್ಪಹಸ್ತರಾಗಿ ಭಕ್ತಿಯಿಂದ ಪೂಜಿಸುತ್ತಾರೋ ಅವರಿಗೆ ಅಮಂಗಲವೆಂಬುದೇ ಇರುವದಿಲ್ಲ.

೨೬೧. ಇಮಾಂ ಸ್ತುತಿಂ ಭಕ್ತಿಪರಾ ನರೋತ್ತಮಾ
ಭವದ್ಭಿರುಕ್ತಾಮನುಕೀರ್ತಯಂತಿ ।
ದುಃಸ್ವಪ್ನನಾಶೋ ಭವಿತಾ ನಸಂಶಯೋ
ವರಸ್ತಥಾನ್ಯೋ ವ್ರಿಯತಾಮಭೀಪ್ಸಿತಃ ॥

ಈ ಪ್ರಕಾರ ದೇವತೆಗಳಿಂದ ಸ್ತೋತ್ರ ಮಾಡಲ್ಪಟ್ಟ ಅಸುರನಾಶಿನಿಯಾದ ದೇವಿಯು ನಗುತ್ತಾ ದೇವತೆಗಳು, ಸಿದ್ಧರು, ಮಹರ್ಷಿಗಳು ಇವರನ್ನು ಕುರಿತು ನಿಮ್ಮ ಅನುಗ್ರಹದಿಂದ ಅಸುರ ಯುದ್ಧದಲ್ಲಿ ಪರಾಕ್ರಮದಿಂದ ಅದ್ಭುತವಾದ ವಿಜಯವನ್ನೇ ನಾನು ಹೊಂದಿದೆನು.

## ದೇವಾ ಉವಾಚ

೨೬೨. ಯದಿ ವರದಾ ಭವತೀ ತ್ರಿದಶಾನಾಂ ದ್ವಿಜಶಿಶುಗೋ ಹಿತಾಯ ಯತಸ್ವ।
ಪುನರಪಿ ದೇವರಿಪೂನಪರಾಂಸ್ತ್ವಂ ಪ್ರದಹ ಹುತಾಶನತುಲ್ಯಶರೀರೇ ॥

ಭಕ್ತಿಶಾಲಿಗಳಾದ ಮನುಷ್ಯರು ನಿಮ್ಮ ಈ ಸ್ತುತಿಯನ್ನು ಸರ್ವಕಾಲದಲ್ಲೂ ಪಠಣಮಾಡಿದಲ್ಲಿ ಅವರಿಗೆ ದುಃಸ್ವಪ್ನ ನಾಶವು ನಿಸ್ಸಂಶಯವಾಗಿಯೂ ಉಂಟಾಗುತ್ತದೆ. ನಿಮಗೆ ಇಷ್ಟವಾದ ಮತ್ತೊಂದು ವರವನ್ನು ಕೇಳಿಕೊಳ್ಳಿರಿ ಎಂದಳು. ಆಗ ದೇವತೆಗಳು ದೇವಿಯನ್ನು ಕುರಿತು ಹೇಳುತ್ತಾರೆ.

## ದೇವ್ಯುವಾಚ

೨೬೩. ಭುವೋ ವಧಿಷ್ಯಾಮಿ ಸುರಾರಿ ಮುತ್ತಮಂ ।
ಸಂಭೂಯನಂದಸ್ಯ ಗೃಹೇ ಯಶೋದಯಾ ।
ತತ್ರಾನತೀರ್ಣಾ ಲವಣಂ ತಥಾ ಪರೌ ಶುಂಭಂ
ನಿಶುಂಭಂ ದಶನಪ್ರಹಾರಿಣೀ ॥

ಎಲೈ ದೇವಿಯೇ, ನೀನು ದೇವತೆಗಳ ವಿಷಯದಲ್ಲಿ ವರಪ್ರದಳಾಗಿದ್ದಲ್ಲಿ ಬ್ರಾಹ್ಮಣ ಶಿಶುಗಳ ಮತ್ತು ಗೋವುಗಳ ಹಿತಕ್ಕಾಗಿ ಪ್ರಯತ್ನಿಸು. ಉಳಿದಿರುವ ದೇವಶತ್ರುಗಳನ್ನೆಲ್ಲ ಅಗ್ನಿಯಂತೆ ಜ್ವಲಿಸುವ ಶರೀರವುಳ್ಳ ನೀನು ಭಸ್ಮ ಮಾಡು ಎಂದು ಪ್ರಾರ್ಥಿಸಿದರು.

೨೬೪. ಭೂಯಸ್ಸುರಾಸ್ತಿಷ್ಯಯುಗೇ ನಿರಾಶನಾನ್ನಿರೀಕ್ಷ್ಯ
ಮಾರೀಚಗೃಹೇ ಶತಕ್ರತೋಃ ।
ಸಂಭೂಯ ದೇವ್ಯಾ ಇತಿ ಸಪ್ತಧಾ ಮಯಾ
ಸುರಾನ್ ಭರಿಷ್ಯಾಮಿ ಚ ಶೋಕಸಂಕರೈಃ ॥

ಆಗ ದೇವಿಯು ಪುನಃ "ನಾನು ನಂದಗೋಪನ ಮನೆಯಲ್ಲಿ ಜನಿಸಿ ಯಶೋದೆಯ ಮಗಳಾಗಿ ಪ್ರಮುಖರಾದ ಸುರಶತ್ರುಗಳನ್ನೆಲ್ಲ ನಾಶ ಮಾಡುತ್ತೇನೆ. ಲವಣಾಸುರನನ್ನೂ ಶುಂಭನಿಶುಂಭರೆಂಬ ಇತರ ದೈತ್ಯರನ್ನು ದಾನವರನ್ನೂ ನಾಶಪಡಿಸುತ್ತೇನೆ.

೨೬೫. ಭೂಯೋವಿಪಕ್ಷ ಕ್ಷಪಣಾಯ ದೇವಾ
ವಿಂಧ್ಯೆ ಭವಿಷ್ಯಾಮ್ಯಪಿ ರಕ್ಷಣಾರ್ಥಂ ।
ದುರ್ವೃತ್ತ ಚೇಷ್ಟಾನ್ವಿನಿಹತ್ಯ ದೈತ್ಯಾನ್ ಭೂಯಃ
ಸಮೇಷ್ಯಾಮಿ ಸುರಾಜಯಂಹಿ ॥

ಎಲೈ ದೇವತೆಗಳಿರಾ, ಪುನಃ ನಾನು ಮಾರೀಚ ಗೃಹದಲ್ಲಿ ಅವತರಿಸಿ ಸಪ್ತ ಮಾತೃಕಾ ರೂಪದಿಂದ ನಿಂತು ಕಲಿಯುಗದಲ್ಲಿ ನಿರಶನರಾಗಿರುವ ದೇವತೆಗಳನ್ನು ನೋಡಿ ಅವರೆಲ್ಲರನ್ನೂ ಶೋಕಾದಿಗಳಿಂದ ರಕ್ಷಿಸುತ್ತೇನೆ.

೨೬೬. ಇತ್ಯೇವಮುಕ್ತ್ವಾ ವರ ಸುರಾಣಾಂ ಕೃತ್ವಾದಾ ಪ್ರಣಾಮಂ
ದ್ವಿಜಪುಂಗವಾನಾಂ ।
ವಿಸೃಜ್ಯ ಭೂತಾನಿ ಜಗಾಮ ದೇವೀ ಖಂ
ಸಿದ್ಧಸಂಘೈರನುಗಮ್ಯಮಾನಾ ॥

ಪುನಃ ನಾನು ಋಷಿಗಳ ರಕ್ಷಣಾರ್ಥವಾಗಿ ಶತ್ರುನಾಶ ಮಾಡಲು ವಿಂಧ್ಯಪರ್ವತದಲ್ಲಿಯೇ ಸಾನಿಧ್ಯ ಹೊಂದಿರುವೆನು. ದುಷ್ಟರಾದ ದೈತ್ಯರನ್ನು ನಾಶಪಡಿಸಿ ವಿಜಯವನ್ನು ಹೊಂದುತ್ತೇನೆ

**೨೬೮. ಇದಂ ಪುರಾಣಂ ಪರಮಂ ಪವಿತ್ರಂ ದೇವ್ಯಾ ಜಯಂ**
**ಮಂಗಲದಾಯಿಪುಂಸಾಂ ।**
**ಶ್ರೋತವ್ಯಮೇತನ್ನಿಯತೈಸ್ಸದೈವ ರಕ್ಷೋಘ್ನಮೇತದ್ಭಗವಾನುವಾಚ॥**

ಕ್ರೋಧದಿಂದ ಕೆಂಗಣ್ಣುಳ್ಳ ಅಸುರನು ಆವಿರ್ಭವಿಸುವಾಗಲೆಲ್ಲಾ ದೇವತೆಗಳ ಹಿತಕ್ಕಾಗಿ ನಾನು ಆವರ್ಭವಿಸುತ್ತೇನೆ. ಮಹಾಲಿಂಗರೂಪದಿಂದ ನಾಶಪಡಿಸಿ ಅವರನ್ನು ಪುನಃ ಸ್ವರ್ಗವನ್ನು ಸೇರುತ್ತೇನೆ.

## ಪುಲಸ್ತ್ಯ ಉವಾಚ

**೨೬೯. ಯದಾರುಣಾಕ್ಷೋ ಭವಿತಾ ಮಹಾಸುರಃ ತದಾ ಭವಿಷ್ಯಾಮಿ**
**ಹಿತಾಯ ದೇವತಾಃ ॥**
**ಮಹಾಲಿ ರೂಪೇಣ ವಿನಷ್ಟ ಜೀವಿತಂ ಕೃತ್ವಾ ಸಮೇಷ್ಯಾಮಿ**

**ಪುನಸ್ತ್ರಿವಿಷ್ಟಪಂ ।**

**ಪುಲಸ್ತ್ಯರು ಹೇಳುತ್ತಾರೆ :** ವರಪ್ರದಳಾದ ದೇವಿಯು ದೇವತೆಗಳಿಗೆ ಹೀಗೆ ಅಭಯಪ್ರಧಾನ ಮಾಡಿ ಬ್ರಾಹ್ಮಣರಿಗೆ ನಮಸ್ಕರಿಸಿ ಭೂತಗಣಗಳನ್ನು ಅಲ್ಲಿಯೇ ಬಿಟ್ಟಿಸಿದ್ದರಿಂದ ಸೇವಿಸಲ್ಪಡುತ್ತ ಆಕಾಶಮಾರ್ಗದಿಂದ ಹೊರಟುಹೋದಳು. ಪವಿತ್ರಕರವಾಗಿಯೂ, ಉತ್ತಮವಾಗಿಯೂ ಇರುವ ದೇವಿಯು ವಿಜಯ ಪ್ರಕಾಶ ವಾದ ಈ ಪುರಾಣವು ಪಠನಾದಿಗಳಿಂದ ಸೇವಿಸುವವರಿಗೆ ಬಹಳ ಮಂಗಳವಾದದ್ದು. ರಕ್ಷ ಪಿಶಾಚಾಕರ ನಿಖಿಲ ಪೀಡಾಪರಿಹಾರಕವಾದ ಈ ಪುರಾಣವನ್ನು ಎಲ್ಲರೂ ಸರ್ವಕಾಲದಲ್ಲಿಯೂ ನಿಯಮದಿಂದಿದ್ದು ಕೇಳಬೇಕೆಂದು ಭಗವಂತನ ಅಪ್ಪಣೆಯೂ ಇದೆ.

ವಾಮನ ಮಹಾಪುರಾಣದಲ್ಲಿ ಆರುಮುಖಗಳಿಂದ ಸ್ತನ್ಯಪಾನ ಮಾಡಿದವ ಎಂಬ
ಐವತ್ತಾರನೆಯ ಅಧ್ಯಾಯವು ಮುಗಿಯಿತು.

—○—

೨೬೯. ಕಥಂ ಮಹಿಷಃ ಸ ಕ್ರೌಂಚೋಭಿನ್ನ ಸಂಸ್ತಂದೇನಸುವ್ರತ
ಏತನ್ಮೇ ವಿಸ್ತರಾದ್ ಬ್ರಹ್ಮನ್ ಕಥಯಸ್ವಾಮಿತದ್ಯುತೇ ॥

೨೭೦. ಪುಲಸ್ತ್ಯ - ಶ್ರುಣಷ್ವ ಕಥಯಿಷ್ಯಾಮಿ ಕಥಾಂ ಪುಣ್ಯಾಂ
ಪುರಾತನೀಮ್ । ಯಶೋವೃದ್ಧಿಂ ಕುಮಾರಸ್ಯ
ಕಾರ್ತಿಕೇಯಸ್ಯ ನಾರದ ॥

ಅನಂತರ ನಾರದರು ಪುಲಸ್ತ್ಯರನ್ನು ಕುರಿತು, ಎಲೈ ತೇಜೋಮೂರ್ತಿಯೇ, ಕೌಂಚದಿಂದೊಡಗೂಡಿದ ಆ ಮಹಿಷನು ಸ್ಕಂದನಿಂದ ಹೇಗೆ ನಾಶಮಾಡಲ್ಪಟ್ಟ ನೆಂಬುದನ್ನು ವಿಸ್ತಾರವಾಗಿ ಅಪ್ಪಣೆ ಕೊಡಿಸಬೇಕೆಂದು ಪ್ರಶ್ನಿಸಿದನು. ಪುಲಸ್ತ್ಯರು ಪುರಾತನವಾಗಿಯೂ, ಪುಣ್ಯಕರವಾಗಿಯೂ ಇರುವ ಈ ಕಥೆಯನ್ನು ಹೇಳುತ್ತೇನೆ ಕೇಳು, ಎಂದು ಉಪಕ್ರಮಿಸಿ ಈ ಕಥೆಯು ಕಲ್ಯಾಣವನ್ನುಂಟುಮಾಡತಕ್ಕದ್ದು ಎಂದು ಪ್ರಶಂಸಿಸಿ ಹೇಳುತ್ತಾರೆ. ಪಾರ್ವತಿಯೊಡನೆ ಶಿವನು ಸೇರಿದ್ದ ಕಾಲದಲ್ಲಿ ದೇವತೆಗಳ ಸನ್ನಾಹದಿಂದ ಸುರತಮಧ್ಯದಲ್ಲೇ ಬಿಡುಗಡೆ ಹೊಂದಿದ ಅವನ ಶುಕ್ರವನ್ನು ಅಗ್ನಿಯು ಹೀರಿದ್ದನು. ಆ ಶಿವನ ವೀರ್ಯವ್ಯಾಪ್ತಿಯಿಂದ ಅಗ್ನಿಯು ತೇಜೋಹೀನನಾಗುತ್ತ ಬಂದನು. ಅನಂತರ ಆ ಅಗ್ನಿಯು ತನ್ನ ಈ ದುಸ್ಥಿತಿಯನ್ನು ತಿಳಿಸಿ ದೇವತೆಗಳ ಸಮೀಪಕ್ಕೆ ಹೋಗಿ ಅವರನ್ನು ಬೇಡಿದನು. ಆ ದೇವತೆಗಳ ಪ್ರೇರಣೆಯಿಂದ ಬ್ರಹ್ಮ ಲೋಕಕ್ಕೆ ಹೋದನು.

ದಾರಿಯಲ್ಲಿ ಹೋಗುತ್ತ ಆ ಅಗ್ನಿಯು ಕುಟಿಲೆಯೆಂಬ ಗಂಗೆಯನ್ನು ನೋಡಿದನು. ಅವಳನ್ನು ನೋಡಿ, ''ಎಲೈ ಕುಟಿಲೆ, ಮಹೇಶ್ವರನಿಂದ ಬಿಡಲ್ಪಟ್ಟ ಈ ತೇಜಸ್ಸು ಧರಿಸಲಶಕ್ಯವಾಗಿದೆ. ಇದನ್ನು ನಾನು ಬಿಟ್ಟು-ಬಿಟ್ಟಲ್ಲಿ ಪ್ರಪಂಚವನ್ನೇ ಇದು ಸುಟ್ಟು ಬಿಟ್ಟೀತು. ಆದುದರಿಂದ ನೀನು ಇದನ್ನು ಪರಿಗ್ರಹಿಸು. ಈ ತೇಜಸ್ಸಿನಿಂದ ನಿನಗೆ ಧನ್ಯನಾದ ಮಗನು ಉಂಟಾಗುತ್ತಾನೆ'' ಎಂದನು. ಅಗ್ನಿಯಿಂದ ಹೀಗೆ ಹೇಳಲ್ಪಟ್ಟ ಆ ಕುಟಿಲೆಯು ಇದು ತನಗೆ ಅಭಿಮತವೆಂದು ತಿಳಿದು ಅಗ್ನಿಯನ್ನು ಕುರಿತು ''ನನ್ನ ನೀರಿನಲ್ಲಿ ಈ ತೇಜಸ್ಸನ್ನು ಹಾಕಿಬಿಡು'' ಎಂದಳು. ನಂತರ ಅಗ್ನಿಯಿಂದ ಬಿಡಲ್ಪಟ್ಟ ಆ ಶಾರ್ವ ತೇಜಸ್ಸನ್ನು ಕುಟಿಲೆಯು ಧರಿಸಿ ಪೋಷಿಸಿದಳು. ಈ ಕುಟಿಲೆಯೇ ಪಾರ್ವತಿಗೆ ಸಹೋದರಿಯಾಗಿ ಹುಟ್ಟಿ ಚತುರ್ಮುಖನ ಶಾಪದಿಂದ ನದಿಯಾಗಿ ಪರಿಣಮಿಸಿದವಳು.

೨೭೧. ರೋಮಶ್ಮಶ್ರ್ವಕ್ಷಿಕೇಶಾದ್ಯಾಃ ಸರ್ವೇಜಾತಾ ಹಿರಣ್ಮಯಾಃ ।
ಹಿರಣ್ಯರೇತಾ ಲೋಕೇಕ್ಷು ತೇನಗೀತಶ್ಚ ಪಾವಕಃ ॥

ಅಗ್ನಿಯು ಸಹ ಮೊದಲು ಐದುಸಾವಿರ ವರ್ಷಸೌಂದರ್ಯಂತ ಆ ಗರ್ಭವನ್ನು ತಾನು ಧರಿಸಿ ಕಾಮುಚಾರಿಯಾಗಿ ಅಲೆದನು. ಆಗ ಅಗ್ನಿಯ ಮಾಂಸ, ಮೂಳೆ ರಕ್ತ ಮೇದಸ್ಸು, ರೋಮಗಳು, ಗಡ್ಡಮೀಸೆಗಳು, ಕಣ್ಣುಗಳು ಎಲ್ಲವೂ ಆ ಈಶ್ವರ ತೇಜಸ್ಸಂಬಂಧದಿಂದ ಚಿನ್ನದಂತೆ ಜ್ವಲಿಸಿದವು. ಆದುದರಿಂದಲೇ ಅಗ್ನಿಗೆ ಹಿರಣ್ಯರೇತಾ ಎಂಬ ಹೆಸರು. ಅದು ಮೊದಲು ಲೋಕದಲ್ಲಿ ಪ್ರಚಾರಕ್ಕೆ ಬಂದಿತು.

ಕುಟಿಲೆಯೂ ಆತೇಜಸ್ಸನ್ನು ಗರ್ಭರೂಪದಿಂದ ಐದುಸಾವಿರ ವರ್ಷಪರ್ಯಂತ ಧರಿಸಿದಳು. ಗರ್ಭದಲ್ಲೇ ಅದು ಅಗ್ನಿಯಂತೆ ಜ್ವಲಿಸುತ್ತಿದ್ದುದರಿಂದ ಅವಳೂ ಅದನ್ನು ಬಹಳ ಶ್ರಮದಿಂದ ಧರಿಸುತ್ತ ಚತುರ್ಮುಖಲೋಕಕ್ಕೆ ಬಂದು ಸೇರಿದಳು. ಹಾಗೆ ಸಂತಾಪದಿಂದ ಬಂದು ಆ ಕುಟಿಲೆಯನ್ನು ಚತುರ್ಮುಖನು ನೋಡಿ, ''ಈ ಗರ್ಭವು ಯಾರಿಂದ ಕೊಡಲ್ಪಟ್ಟಿತು?'' ಎಂದು ಪ್ರಶ್ನೆ ಮಾಡಿದನು. ಕುಟಿಲೆಯೂ ಸಹ, ''ಶಂಕರನ ಶುಕ್ರವನ್ನು ಹೀರಿದ ಅಗ್ನಿಯು ತಾನು ಧರಿಸಲಶಕ್ತನಾಗಿ ಆ ಗರ್ಭವನ್ನು ನನ್ನಲ್ಲಿಟ್ಟನು. ನಾನೂ ಕೂಡ ಐದು ಸಾವಿರ ವರ್ಷದಿಂದಲೂ ಇದನ್ನು ಧರಿಸಿರುವೆನು. ಇದಕ್ಕೆ ಇನ್ನೂ ದಿವಸಗಳು ತುಂಬಿಲ್ಲವೆಂದು ತೋರುತ್ತದೆ. ಆದುದರಿಂದ ಎಲ್ಲಿಯೂ ಇದು ಬೀಳುವಂತಿಲ್ಲ'' ಎಂದಳು.

೨೭೨. ಸಾ ಶ್ರುತ್ವಾ ಬ್ರಹ್ಮಣೋ ವಾಕ್ಯಂ ರೂಪಿಣೇಗಿರಿಮಾಗತಾ ।
ಆಗತ್ಯ ಗರ್ಭಂ ತತ್ಯಾಜ ಮುಖೇನೈವಾದ್ರಿನಂದಿನೀ ॥

ಆ ಮಾತನ್ನು ಕೇಳಿ ಬ್ರಹ್ಮನು ''ನೀನು ಉದಯಗಿರಿಗೆ ಹೋಗು. ಅಲ್ಲಿ ನೂರುಯೋಜನ ವಿಸ್ತಾರವುಳ್ಳ ಶರವಣವೆಂಬ ರೌದ್ರವಾದ ಮಹಾಕ್ಷೇತ್ರವಿದೆ. ಅಲ್ಲಿರುವ ವಿಸ್ತಾರವಾದ ಪರ್ವತದ ತಪ್ಪಲಿನಲ್ಲಿ ಈ ಗರ್ಭವನ್ನು ಬಿಡು. ಇದು ಹತ್ತುಸಾವಿರ ವರ್ಷದ ನಂತರ ಜನಿಸಿ ನಂತರ ಅಲ್ಲಿ ಬಾಲನಾಗಿ ಪರಿಣಮಿಸುತ್ತದೆ'' ಎಂದನು. ಬ್ರಹ್ಮನ ಈ ಮಾತನ್ನು ಅದ್ರಿಕನ್ಯೆಯಾದ ಆ ಕುಟಿಲೆಯು ಚತುರ್ಮುಖನ ಮಾತಿನಂತೆ ಆ ಗರ್ಭವನ್ನು ಬಾಯಿಯಿಂದ ಅಲ್ಲಿ ಬಿಟ್ಟಳು. ಅಲ್ಲಿ ಗರ್ಭವನ್ನು ಬಿಟ್ಟೊಡನೆಯೇ ಚತುರ್ಮುಖನನ್ನು ಬಂದು ಸೇರಿದಳು. ಅಲ್ಲಿ ಅಪೋಮಯ ಮಂತ್ರಪ್ರಭಾವದಿಂದ ಪುನಃ ಪೂರ್ವಾವಸ್ಥೆಗೆ ಬಂದಳು. ಆ ಶರ್ವ ತೇಜಸ್ಸಿನಿಂದ ಶರವಣಕ್ಷೇತ್ರವೆಲ್ಲವೂ ಅಲ್ಲಿ ವಾಸಮಾಡುತ್ತಿದ್ದ ಪಕ್ಷಿಗಳೂ ಅಲ್ಲಿದ್ದ ಮರಗಳೂ ಸಹ ಚಿನ್ನದ ತೇಜಸ್ಸಿನಿಂದ ಹೊಳೆದವು. ಅನಂತರ ಹತ್ತುಸಾವಿರ ವರ್ಷಗಳು ಪೂರ್ಣವಾಗಲು ಬಾಲಸೂರ್ಯನಂತೆ ಜ್ವಲಿಸುವ ಕಮಲ ಲೋಚನನಾದ ಬಾಲಕನು ಅಲ್ಲಿ ಉದ್ಭವಿಸಿದನು. ಆ ಶರವಣ ಕ್ಷೇತ್ರದಲ್ಲಿ ಮೇಲ್ಮುಖನಾಗಿ ಮಲಗಿರುವ ಮಹಾಮಹಿಮಾಶಾಲಿಯಾದ ಆ ಬಾಲಕನು ಬಾಯಿಯಲ್ಲಿ ಕಾಲಿನ ಅಂಗುಷ್ಠವನ್ನಿಟ್ಟು ಮೇಘಧ್ವನಿಗೆ ಸಮಾನವಾದ ಧ್ವನಿಯಿಂದ ಅಳಲು ಆರಂಭಿಸಿದನು. ಆ ಸಮಯದಲ್ಲಿ ಸ್ವೇಚ್ಛೆಯಿಂದ ಅಲ್ಲಿ ಸಂಚರಿಸುತ್ತಿದ್ದ ತೇಜಸ್ವಿನಿಗಳಾದ ಕೃತ್ತಿಕಾ ದೇವತೆಗಳು ಅಳುತ್ತಿದ್ದ ಆ ಸ್ಕಂದನನ್ನು ನೋಡಿದರು. ದಯೆಯಿಂದ ಅವನ ಸಮೀಪಕ್ಕೆ ಬಂದು ನಾನು ಮುಂದೆ ತಾನು ಮುಂದೆ ಎಂದು ಸ್ತನ್ಯ ಕೊಡಲು ಹೋರಾಡಿದರು. ಅವರ ಆ ವಿವಾದವನ್ನು ಕೇಳಿ ಸ್ಕಂದನೂ ಷಣ್ಮುಖನರೂಪದಲ್ಲಿ ಬಂದು ಆರುಮುಖಗಳಿಂದ ಕ್ಷೀರಪಾನ ಮಾಡಿದನು. ಆ ಕೃತ್ತಿಕಾ ದೇವತೆಗಳು ಶಿಶು ಸ್ನೇಹದಿಂದ ಯಥೇಚ್ಛವಾಗಿ ಸ್ತನ್ಯವನ್ನು ಕೊಟ್ಟು ಸ್ಕಂದನನ್ನು ತೃಪ್ತಿಪಡಿಸಿದರು.

೨೭೩. ಅಬೀಭರಂಶ್ಚ ತಾಃ ಸರ್ವಾಃ ಶಿಶು ಸ್ನೇಹಾಚ್ಚ ಕೃತ್ತಿಕಾಃ ।
ಕಾರ್ತಿಕೇಯ ಇತಿ ಖ್ಯಾತೋ ಜಾತಃ ಸಬಲಿನಾಂ ವರಃ ॥

ಎಲೈ ಮುನಿಯೇ, ಆ ಕೃತ್ತಿಕಾ ದೇವತೆಗಳಿಂದ ತೃಪ್ತಿಪಡಿಸಲ್ಪಟ್ಟ ಆ ಬಾಲನು ವೃದ್ಧಿಹೊಂದಿ ಕಾರ್ತಿಕೇಯನೆಂದು ಪ್ರಸಿದ್ಧಿ ಹೊಂದಿದನು.

ಬಲಾಢ್ಯರಲ್ಲೆಲ್ಲ ಅಗ್ರೇಸರನಾದರು. ಈ ಮಧ್ಯದಲ್ಲಿ ಚತುರ್ಮುಖನು ಅಗ್ನಿಯನ್ನು ಕುರಿತು ''ನಿನ್ನ ಪುತ್ರನಾದ ಗುಹನು ಈಗ ಎಷ್ಟು ಪ್ರಮಾಣದಲ್ಲಿದ್ದಾನೆ?'' ಎಂದು ಪ್ರಶ್ನಿಸಿದನು. ಆ ಮಾತನ್ನು ಕೇಳಿ ಅಗ್ನಿಯು ತನ್ನ ಮಗನೆಂದು ತಿಳಿದಿದ್ದರೂ ತಿಳಿಯದವನಂತೆ ''ಗುಹನು ಯಾವನೋ ನನಗೆ ಗೊತ್ತಿಲ್ಲ'' ಎಂದು ಬ್ರಹ್ಮನಿಗೆ ಉತ್ತರ ಹೇಳಿದನು. ಬ್ರಹ್ಮನು ಅವನನ್ನು ಕುರಿತು ಸಂತೋಷದಿಂದ ಮೊದಲು ನೀನು ಪಾನ ಮಾಡಿದ ತ್ರ್ಯಂಬಕನ ತೇಜಸ್ಸು ಶರವಣ ಕ್ಷೇತ್ರದಲ್ಲಿ ಲೋಕನಾಥನಾದ ಶಿಶುವಾಗಿ ಉದಯಿಸಿದೆ'' ಎಂದು ತಿಳಿಸಿದನು.

೨೭೪. ಸಾಬ್ರವೀತ್ತನಯೋ ಮಹ್ಯಂ ಮಮೇತ್ಯಾಹ ಚ ಪಾವಕಃ
ವಿವದಂತೌ ದದರ್ಶಾಥ ಸ್ವೇಚ್ಛಾಚಾರೀ ಜನಾರ್ದನಃ ॥

ಚತುರ್ಮುಖನ ಮಾತನ್ನು ಕೇಳಿದೊಡನೆಯೇ ಅಗ್ನಿಯು ತ್ವರೆಯಿಂದ ಗುಹನ ಸಮೀಪಕ್ಕೆ ಓಡತೊಡಗಿದನು. ಅವನು ವೇಗಶಾಲಿಯಾದ ಮೇಷವನ್ನೇರಿ ಹೋಗುತ್ತಿರುವದನ್ನು ಕುಟಿಲೆಯು ನೋಡಿದಳು. ಆಗ ಅವಳು ಅಗ್ನಿಯನ್ನು ಕುರಿತು ''ಕವಿಯೇ ಇದೆಲ್ಲಿಗೆ ನೀನು ವೇಗದಿಂದ ಹೋಗುತ್ತಿದ್ದೀಯೇ ?'' ಎಂದು ಕೇಳಿದಳು. ಆಗ ಅಗ್ನಿಯು ಶರವಣದಲ್ಲಿ ಹುಟ್ಟಿದ ಪುತ್ರನನ್ನು ನೋಡಲು ನಾನು ಹೋಗುತ್ತಿದ್ದೇನೆ'' ಎಂದನು. ಆಗ ಕುಟಿಲೆಯು ಅವನು ನನ್ನ ಮಗನೆಂದಳು. ಅಗ್ನಿಯೂ ನನ್ನ ಮಗನೆಂದು ವಿವಾದಿಸಿದನು. ಹೀಗೆ ವಿವಾದ ಮಾಡುತ್ತಿರುವ ಇವರನ್ನು ಸ್ವೇಚ್ಛೆಯಿಂದ ಸಂಚಾರ ಮಾಡುತ್ತಿರುವ ಜನಾರ್ದನನು ನೋಡಿದನು. ಆಗ ಅವನು ಇವರನ್ನು ನೋಡಿ, ''ಏತಕ್ಕೆ ಹೀಗೆ ವಿವಾದ ಮಾಡುತ್ತಿದ್ದೀರಿ?'' ಎಂದು ಕೇಳಿದನು. ಆಗ ಅವರು ತಮ್ಮ ಪುತ್ರನಿಗಾಗಿ ವಿವಾದವೆಂದು ಉತ್ತರವಿತ್ತರು. ಆಗ ವಾಸುದೇವನು ಈ ಪುತ್ರನು ರುದ್ರನಿಂದ ಹುಟ್ಟಿದವನಾದುದರಿಂದ ಅವನಲ್ಲಿ ಹೋಗಿ ನೀವು ಈ ವಿವಾದವನ್ನು ಪರಿಹರಿಸಿಕೊಳ್ಳಬೇಕೆಂದೂ, ಅವನು ಈ ವಿಷಯದಲ್ಲಿ ಏನು ಹೇಳುತ್ತಾನೆ, ಅದರಂತೆ ನೀವು ನಡೆದುಕೊಳ್ಳಬೇಕೆಂದೂ ತೀರ್ಮಾನಿಸಿದನು. ಹೀಗೆ ಹೇಳಲ್ಪಟ್ಟ ಕುಟಿಲೆ ಮತ್ತು ಅಗ್ನಿ ಇಬ್ಬರೂ ಹರನ ಸಮೀಪಕ್ಕೆ ಹೋಗಿ ಅಲ್ಲಿ ತಮ್ಮ ಬಾಧ್ಯತೆಗೆ ತಕ್ಕಂತೆ ನಡೆದ ಸಂಗತಿಯನ್ನು ಹೇಳಿ ತಮ್ಮ ಪುತ್ರನೆಂದು ವಾದಿಸಿದರು. ಹರನು ವೃತ್ತಾಂತವನ್ನು ಕೇಳಿ ಹರ್ಷದಿಂದ ಪೂರ್ಣನಾಗಿ ಶಹಬಾಸ್ ಎಂದು ಪಾರ್ವತಿಯನ್ನು ಪ್ರಶಂಶಿಸಿ ತಾನೂ ಸಂತೋಷದಿಂದ ರೋಮಾಂಚಿತನಾದನು. ಪಾರ್ವತಿಯನ್ನು ಕುರಿತು ಈ ವಿವಾದ ಹೇಳಿದನು.

೨೭೫. ತತೋಂಬಿಕಾ ಪ್ರಾಹ ಹರಂ ದೇವ ಗಚ್ಛಾವ ತಂ ಶಿಶುಮ್
ಪ್ರಷ್ಟುಂ ಸಮಾಶ್ರಯೇದ್ಯಂ ಸ ಸ ತಸ್ಯ ಪುತ್ರೋ ಭವಿಷ್ಯತಿ॥

ಆಗ ಪಾರ್ವತಿಯು ಹರನನ್ನು ಕುರಿತು ''ಪ್ರಭುವೇ, ನಾವೆಲ್ಲರೂ ಆ ಬಾಲಕನನ್ನೇ ಕೇಳಲು ಹೋಗೋಣ. ಆ ಶಿಶುವು ಯಾರ ಹತ್ತಿರಕ್ಕೆ ಪ್ರೀತಿಯಿಂದ ಬರುತ್ತದೆಯೋ ಅದು ಅವರ ಮಗು'' ಎಂದಳು.

೨೭೬. ದದೃಶುಃ ಶಿಶುಕಂ ತಂ ಚ ಕೃತ್ತಿಕೋತ್ಸಂಗ ಶಾಯಿನಮ್
ಯೋಗಾಚ್ಚತುರ್ಮೂರ್ತಿರಭೂತ್ ಶಿಶುತ್ವೇಽಪಿ ಚ ಷಣ್ಮುಖಃ ॥

ಹಾಗೆಯೇ ಆಗಲೆಂದು ಅಂಗೀಕರಿಸಿ ಶಂಕರನೂ, ಪಾರ್ವತಿ, ಕುಟಿಲಾ, ಅಗ್ನಿ ಇವರೂ ಸಹ ಅಲ್ಲಿಗೆ ಹೊರಟರು. ಅಲ್ಲಿ ಕೃತ್ತಿಕಾದೇವಿಗಳ ತೊಡೆಯ ಮೇಲೆ ಮಲಗಿದ್ದ ಶಿಶುವನ್ನು ನೋಡಿದರು. ಆಗ ಆ ಶಿಶುವು ಎಲ್ಲರ ಅಭೀಷ್ಟವನ್ನು ತಿಳಿದು ಇವರನ್ನು ಆದರಿಸಲು ಷಣ್ಮುಖನಾಗಿ ಶಿಶುವಾಗಿದ್ದರೂ ತನ್ನ ಯೋಗಮಹಿಮೆಯಿಂದ ನಾಲ್ಕು ಮೂರ್ತಿಯಾಗಿ ಪರಿಣಮಿಸಿತು.

೨೭೭. ಕುಮಾರಃ ಶಂಕರಮಗಾದ್ ವಿಶಾಖೋ ಗಿರಿಜಾಮಗಾತ್ ।
ಕುಟಿಲಾಮಭ್ಯಗಾತ್ ಶಾಖೋ ನೈಗಮೇಯೋಽಗ್ನಿಮಭ್ಯಗಾತ್ ।

ಆಮೂರ್ತಿಗಳಲ್ಲಿ ಕುಮಾರನೆಂಬಮೂರ್ತಿಯುಶಂಕರನಸಮೀಪವನ್ನು ಸೇರಿತು. ವಿಶಾಖವೆಂಬಮೂರ್ತಿಯುಗಿರಿಜೆಯನ್ನೂ, ಶಾಖವೆಂಬಮೂರ್ತಿಯುಕುಟಿಲೆಯಸಮೀಪವನ್ನೂ ಹೊಂದಿತು. ನೈಗಮೇಯ ಎಂಬ ಮೂರ್ತಿಯು ಅಗ್ನಿಯ ಸಮೀಪವನ್ನು ಆಶ್ರಯಿಸಿತು.

೨೭೮. ಏವಮೇಷ ಮಹಾಯೋಗೀ ಪೃಥ್ವಿವ್ಯಾಂ ಖ್ಯಾತಿಮೇಷ್ಯತಿ ।
ಷಡಂಶತ್ವಾತ್ ಮಹಾಬಾಹುಃ ಷಣ್ಮುಖೋ ನಾಮ ಗೀಯತೇ ॥

ಅನಂತರ ರುದ್ರ, ಪಾರ್ವತಿ, ಕುಟಿಲಾ ಅಗ್ನಿ ಇವರೆಲ್ಲರೂ ಅವನಲ್ಲಿ ಪುತ್ರವಾತ್ಸಲ್ಯದಿಂದ ಬಹಳ ಸಂತೋಷಪಟ್ಟರು. ಅನಂತರ ಕೃತ್ತಿಕಾ ದೇವತೆಗಳು ಈ ಷಣ್ಮುಖನು ಹರನ ಮಗನೇ ಎಂದು ಪ್ರಶ್ನಿಸಲಾಗಿ, ಹರನು ಪ್ರೀತಿಯಿಂದ ಅವರವರ ಪುತ್ರನ ವಿಶೇಷನಾಮಗಳನ್ನು ಈ ರೀತಿ ನಿರ್ಧರಿಸಿ ಹೇಳಿದನು. ''ಕಾರ್ತಿಕೇಯನೆಂಬ ಹೆಸರಿನಿಂದ ಇವನು ನಿಮ್ಮ (ಕೃತ್ತಿಕಾದೇವತೆಗಳ) ಪುತ್ರನಾಗಿರುತ್ತಾನೆ. ಕುಮಾರನೆಂಬ ಹೆಸರಿನಿಂದ ಕುಟಿಲೆಯ ಪುತ್ರನಾಗಿರುವನು. ಸ್ಕಂದನೆಂಬ ಹೆಸರಿನಿಂದ ಗೌರಿಗೆ ಪುತ್ರನಾಗಿರುವನು. ಗುಹನೆಂಬ ಹೆಸರಿನಿಂದ ನನಗೆ ಪುತ್ರನಾಗಿರುವನು. ಮಹಾಸೇನನೆಂಬ ಹೆಸರಿನಿಂದ ಅಗ್ನಿಗೆ ಪುತ್ರನಾಗಿರುವನು. ಈ ರೀತಿ ಮಹಾ ಯೋಗಿಯಾದ ಈ ಬಾಲಕನು ಆರು ನಾಮಗಳಿಂದ ಕೂಡಿದವನಾಗಿ ಷಡಂಶನಾದುದರಿಂದ ಷಣ್ಮುಖನೆಂದು ಪೃಥ್ವಿಯಲ್ಲಿ ಪ್ರಖ್ಯಾತನಾಗಿರುತ್ತಾನೆ. ಹೀಗೆಂದು ಹೇಳಿ ಹರನು ಬ್ರಹ್ಮನನ್ನೂ, ದೇವತೆಗಳನ್ನು ನೆನೆದನು. ಕೂಡಲೇ ಅವರು ಶಂಕರನನ್ನೂ ಪಾರ್ವತಿಯನ್ನೂ ನಮಸ್ಕರಿಸಿ ಅಲ್ಲಿದ್ದ ಅಗ್ನಿಯನ್ನು ಕುಟಿಲೆ ಯನ್ನು ಕೃತ್ತಿಕಾ ದೇವತೆಗಳನ್ನು ಪ್ರೀತಿಯಿಂದ ಸತ್ಕರಿಸಿದರು.

೨೭೯. ತದುತ್ತಿಷ್ಠ ವ್ರಜಾಮೋಽದ್ಯ ತೀರ್ಥಮೋಜಸಮವ್ಯಯಮ್ ।
ಕುರುಕ್ಷೇತ್ರಂ ಸರಸ್ವತ್ಯಾಮಭಿಷಿಂಚಾಮ ಷಣ್ಮುಖಮ್ ॥

ಸೂರ್ಯನಂತೆತೇಜಸ್ವಿಯಾಗಿಜ್ವಲಿಸುತ್ತಿರುವಆಬಾಲಕನನ್ನು ನೋಡಿದರು. ಆ ಬಾಲಕನು ತನ್ನ ತೇಜಸ್ಸಿನಿಂದ ನೋಡುವವರ ಕಣ್ಣುಗಳನ್ನು ಸೆಳೆಯುವಷ್ಟು ತೇಜಸ್ವಿಯಾಗಿದ್ದನು. ಆ ಆಶ್ಚರ್ಯದಿಂದಲೂ, ಕುತೂಹಲದಿಂದಲೂ ಕೂಡಿದ ದೇವತೆಗಳು, ''ದಿವ್ಯಾಗ್ನಿ ರೂಪವಾಗಿರುವ ನಿನ್ನಿಂದ ದೇವಕಾರ್ಯವು ಸಾಂಗವಾಗಿ ನಡೆಸಲ್ಪಟ್ಟಿತು. ಏಳು, ಕುರುಕ್ಷೇತ್ರಕ್ಕೆ ಹೋಗಿ ಓಜಸತೀರ್ಥದಲ್ಲಿ ಈ ಷಣ್ಮುಖನನ್ನು ಸರಸ್ವತೀತೀರ್ಥದಲ್ಲಿ ಅಭಿಷೇಕ ಮಾಡೋಣ. ಇವನೇ ದೇವತಾಸೈನ್ಯಕ್ಕೆ ಸೇನಾಪತಿ

ಯಾಗಿರಲಿ. ಇವನೇಮಹಿಷಾಸುರನನ್ನೂ, ಕ್ರೂರವಾದತಾರಕಾಸುರನನ್ನೂ ನಾಶಮಾಡಲಿ'' ಎಂದು ಹೇಳಿದರು. ಹಾಗೇ ಆಗಬಹುದೆಂದು ಶಂಕರನು ಹೇಳಲು ದೇವತೆಗಳೆಲ್ಲರೂ ಕುಮಾರಸ್ವಾಮಿಯೊಡನೆಮಹಾಫಲಪ್ರದವಾದ ಆಕುರುಕ್ಷೇತ್ರಕ್ಕೆ ಬಂದುಸೇರಿದರು.

೨೮೦. ತತೋಂಬುನಾ ಸಪ್ತಸಮುದ್ರವಾಹಿನಾ ।
ನದೀಜಲೇನಾಪಿ ಮಹಾಫಲೇನ ॥
ಮಹೌಷಾಧಿಷ್ಟೇ ಸಹಸ್ರ ಮೂರ್ತಿಭಿಃ
ತಮಭ್ಯಷಿಂಚಂತ ಹರಾಚ್ಯುತಾದಯಃ ॥

ಅಲ್ಲಿ ಇಂದ್ರ, ರುದ್ರ, ಬ್ರಹ್ಮ, ಜನಾರ್ದನ ಇವರನ್ನು ಪುರಸ್ಕರಿಸಿಕೊಂಡು ದೇವತೆಗಳೆಲ್ಲರೂ ಮಹರ್ಷಿಗಳೊಡನೆ ಅಭಿಷೇಕಕ್ಕೆ ತಕ್ಕ ಪ್ರಯತ್ನವನ್ನೆಲ್ಲ ಮಾಡಿದರು. ಅನಂತರ ಏಳು ಸಮುದ್ರಗಳಿಂದ ತರಲ್ಪಟ್ಟ ತೀರ್ಥದಿಂದಲೂ, ಫಲಪ್ರದವಾದ ಮಹಾನದಿ ತೀರ್ಥಗಳಿಂದಲೂ, ವನೌಷಧಿಗಳಿಂದಲೂ ಹರ ವಿಷ್ಣು ಮುಂತಾದ ದೇವತೆಗಳು ಷಣ್ಮುಖನಿಗೆ ಅಭಿಷೇಕ ಮಾಡಿದರು. ಕುಮಾರಸ್ವಾಮಿಯನ್ನು ಸೇನಾಪತಿಯಾಗಿ ಅಭಿಷೇಕ ಮಾಡಿದೊಡನೆಯೇ ಗಂಧರ್ವರೂ, ಋಷಿಗಳೂ ಹರ್ಷದಿಂದ ಗಾನಮಾಡಿದರು. ಅಪ್ಸರೆಯರೆಲ್ಲರೂ ನರ್ತನ ಮಾಡಿದರು. ಅಭಿಷೇಕ ಹೊಂದಿದ ಕುಮಾರಸ್ವಾಮಿಯನ್ನು ಪಾರ್ವತಿಯು ಪ್ರೀತಿಯಿಂದ ನಿರೀಕ್ಷಿಸಿ ವಾತ್ಸಲ್ಯದಿಂದ ತೊಡೆಯ ಮೇಲೆ ಕೂರಿಸಿಕೊಂಡು ಬಾರಿಬಾರಿಗೂ ಅವನ ತಲೆಯನ್ನು ಆಘ್ರಾಣ ಮಾಡಿದಳು. ಅಭಿಷೇಕದಿಂದ ನೆನೆದಿರುವ ಕಾರ್ತಿಕೇಯನ ಮುಖವನ್ನು ಆಘ್ರಾಣ ಮಾಡುತ್ತಿರುವ ಪಾರ್ವತಿಯು ಪೂರ್ವದಲ್ಲಿ ತ್ರಿಲೋಕಾಧಿಪತಿ ಯಾದ ಇಂದ್ರನನ್ನು ಆಘ್ರಾಣ ಮಾಡಿದ ಅದಿತಿಯಂತೆ ತೋರಿದಳು. ಅಭಿಷಿಕ್ತನಾದ ಪುತ್ರನನ್ನು ನೋಡಿ ಶಂಕರನೂ ಸಂತೋಷಗೊಂಡನು. ಆಗ ಕೃತ್ತಿಕಾ ಕುಟಿಲಾ ಇವರೂ ಸಂತುಷ್ಟರಾದರು.

೨೮೧. ಸ್ಥಾಣುಬ್ರಹ್ಮಾ ಗಣಂ ಪ್ರಾದಾತ್ ವಿಷ್ಣುಃ ಪ್ರಾದಾದ್ ಗಣತ್ರಯಮ್
ಸಂಕ್ರಮಂ ವಿಕ್ರಮಂ ಚೈವ ತೃತೀಯಂ ಚ ಪರಾಕ್ರಮಮ್ ॥

ಅನಂತರಸೇನಾಪತಿಯಾಗಿಅಭಿಷಕ್ತನಾದಗುಹನಿಗೆಶಂಕರನುಸಮರ್ಥನಾಗಿಯೂ, ಪರಾಕ್ರಮಶಾಲಿಯಾಗಿಯೂ ಇರುವ ಘಂಟಾಕರ್ಣ, ಲೋಹಿತಾಕ್ಷ, ನಂದಿಷೇಣ, ಕುಮುದಮಾಲಿ ಎಂಬ ನಾಲ್ಕು ಜನಪ್ರಮಥಗಣದ ವೀರರನ್ನು ಕೊಟ್ಟನು. ಹರನು ಈ ರೀತಿ ಗಣಗಳನ್ನು ಕೊಟ್ಟುದನ್ನು ನೋಡಿ ದೇವತೆಗಳೂ ಸಹ ಬ್ರಹ್ಮನು ಮೊದಲಾದವರು ತಮ್ಮ ತಮ್ಮ ಗಣಗಳನ್ನು ಕೊಟ್ಟರು. ಬ್ರಹ್ಮನು ನಾಲ್ಕು ಗಣವನ್ನೂ, ವಿಷ್ಣುವು ಸಂಕ್ರಮ, ವಿಕ್ರಮ ಪರಾಕ್ರಮವೆಂಬ ಮೂರು ಗಣಗಳನ್ನೂ ಕೊಟ್ಟನು. ಇಂದ್ರನು ಇತ್ಕೇಶ ಪಂಕರನ್ನೂ ಸೂರ್ಯನು ದಂಡಕ ಪಿಂಜಲರನ್ನು, ಚಂದ್ರನು ಮಣಿವಸುಮಣಿಗಳನ್ನೂ, ಅಶ್ವಿನೀ ದೇವತೆಗಳು ವತ್ಸನಂದಿಗಳನ್ನು, ಅಗ್ನಿಯು ಜ್ಯೋತಿ ಮತ್ತು ಜ್ವಲಿಸುವ ನಾಲಿಯುಳ್ಳ ಪುರನನ್ನೂ, ದಾತೃವು ಕುಂದ ಮುಕುಂದ ಕುಸುಮರೆಂಬ ಮೂರು ಅನುಚರರನ್ನೂ ಕೊಟ್ಟರು.

ತ್ವಷ್ಟನು ಚಕ್ರ ಅನುಚಕ್ರರನ್ನೂ, ಮೇಧಾ ದೇವತೆಯು ನಿಸ್ಥಿರ ಸುಸ್ಥಿರರನ್ನೂ ಪೂಷಾ ಎಂಬ ದೇವತೆಯು ಪ್ರಾಣಿತ ಚ ಕಾಲಿಕರೆಂಬವರನ್ನೂ ಕೊಟ್ಟರು. ಹಿಮವಂತನು

ಸ್ವರ್ಣಮಾಲಾ, ಘನಾಹ್ವರೆಂಬ ಪ್ರಮಥರನ್ನೂ ಕೊಟ್ಟರು. ಸರ್ಪಗಳು ವಿಂಧ್ಯವು ಅತಿಕೃಷ್ಣ ಪಾರ್ಷದರನ್ನೂ, ವರುಣನು ಸುವಚಸ ಅತಿವರ್ಚಸರನ್ನೂ ಕೊಟ್ಟರು. ಸರ್ಪಗಳು ಸಂಗ್ರಹ ವಿಗ್ರಹರನ್ನೂ, ಅಂಬಿಕೆಯು ಜಯ ಪರಾಜಯ ಉನ್ಮಾದ ಶಂಕುವರ್ಣ ಪುಷ್ಪದಂತ ಎಂಬವರನ್ನೂ ವಾಯುವು ಘಸ ಅತಿಘಸರೆಂಬ ಭೃತ್ಯರನ್ನು ಕೊಟ್ಟರು. ಅಂಶುಮಂತನು ಪರಿಘವಟಕ ಭೀಮ ದಾಹ ಅತಿದಹನರೆಂಬ ಐದು ಪ್ರಮಥಗಳನ್ನು ಷಣ್ಮುಖನಿಗೆ ಕೊಟ್ಟನು. ಹಾಗೆಯೇ ಯಮನು ಪ್ರಮಥ ಉನ್ಮಾಥ ಕಾಲಸೇನ ಮಹಾಮುಖ ತಾಲಪುತ್ರ. ಕಾಲಜಂಘರೆಂಬ ಆರು ಭೃತ್ಯರನ್ನು ಷಣ್ಮುಖನಿಗೆ ಕೊಟ್ಟರು. ಧಾತೃವು ಸುಪ್ರಭ ಶುಭಕರ್ಮರೆಂಬ ಗಣೇಶ್ವರರನ್ನು ಕೊಟ್ಟನು. ಮಿತ್ರನು ಸುವ್ರತ ಸತ್ಯಸಂಧರನೆಂಬ ಇಬ್ಬರನ್ನು ಕೊಟ್ಟನು. ಯಕ್ಷರೆಲ್ಲರೂ ಸೇರಿ ಅನಂತ, ಶಂಕುಪೀಠ, ನಿಶುಂಭ, ಕುಮುದ, ಅಂಬುಜ, ಏಕಾಕ್ಷ, ಕುನಟೀ ಚಕ್ಷುಃ ಕಿರೀಟೀ ಕುಲಶೋಧರ ಸೂಚೀವಕ್ತ್ರ, ಕೋಕನದ, ಪ್ರಹಾಸ, ಪ್ರಿಯಕ ಎಂಬ ಹದಿನೈದು ಗುಣಗಳನ್ನು ಗುಹನಿಗೆ ಕೊಟ್ಟರು.

ಕಾಲಿಂದೀ ನದಿಯಿಂದ ಕುಲಕಂದನೂ, ನರ್ಮದೆಯಿಂದ ರಸೋತ್ಕಟನೂ, ಗೋದಾವರಿಯಿಂದ ಸಿದ್ಧ ಯಾತ್ರನೂ, ತಮಸಾನದಿಯಿಂದ ಸೌದ್ರಿಕಂಪಕರಗಳೂ ಕೊಡಲ್ಪಟ್ಟರು. ಶೀತಾನದಿಯು ಸಹಸ್ರ ಬಾಹುವನ್ನೂ, ವಂಜುಲಾನದಿಯೂ ಸ್ಮಿತೋದರನನ್ನೂ, ಮಂದಾಕಿನಿಯು ಗಂಧನನ್ನೂ, ವಿಪಾಶಾನದಿಯು ಪ್ರಿಯಂಕರನನ್ನೂ, ನಿರಾವತಿನದಿಯು ಚತುರ್ದಂಷ್ಟ್ರನನ್ನೂ, ವಿಷೊತಸ್ತಾನದಿಯು ಷೋಡಶನನ್ನೂ, ಕೌಶಿಕೀನದಿಯು ಮಾರಿಜಯನ್ನೂ ಕೊಟ್ಟರು. ಹಾಗೆಯೇ ಗೌತಮಿಯು ಕ್ರಥ ಕ್ರೌಂಚರುಗಳನ್ನೂ, ಬಾಹುನನದಿಯು ಶತಶೀರ್ಷನನ್ನೂ, ವಾಹಾನದಿಯು ಗೋನಂದ ನಂದಿಕರನ್ನೂ ಭೀಮರಥಿಯು ಭೀಮನನ್ನೂ, ಸರಯೂನದಿಯೂ ವೇಗಾರಿಯನ್ನೂ ಕೊಟ್ಟರು. ಕಾಲಿಯು ಅಷ್ಟಬಾಹುವನ್ನೂ, ಗಂಡಕಿಯು ಸುಬಾಹುವನ್ನೂ, ಮಹಾನದಿಯು ಚಿತ್ರದೇವನನ್ನೂ, ಶಿಪ್ರಾನದಿಯು ಚಿತ್ರರಥನನ್ನೂ, ಕುಹುವು ಕುವಲಯನನ್ನೂ, ಮಧೂಕೆದಯು ಮಧುವರ್ಣನನ್ನೂ, ಧೂತಪಾಪೆಯು ಜಂಬುಕನನ್ನೂ, ವೇತ್ರಾನದಿಯು ಶ್ವೇತಾನನನ್ನೂ ಕೊಟ್ಟರು.

ವರ್ಣಾನದಿಯುಸ್ತುತನೆಂಬಪ್ರಮಥನನ್ನೂ, ರೇವಾನದಿಯುಸಾಗರವೇಗಿಯನ್ನೂ, ಕಾಂಚನೆಯು ಸಮರ್ಥನಾದ ಕಯುಕೇಕ್ಷನನ್ನೂ ಕೊಟ್ಟನು. ವಿಮಲಾನದಿಯು ಗೃದ್ರವಕ್ತ್ರನನ್ನೂ, ಮನೋಹರೆಯೂಚಾರುಪತ್ರವನ್ನೂ, ಧೂತಪಾಪೆಮಾಹರಾವನನ್ನೂ, ಕರ್ಣಾನದಿಯುವಿದ್ರುಮಸನ್ನಿಭವನ್ನೂ ಓಷವತಿಯುಸುಪ್ರಸಾದ, ಸುವೇಣು, ಜಿಷ್ಣು ಇವರನ್ನೂ ಕೊಟ್ಟರು. ವಿಶಾಲಾವದಿಯುಯಜ್ಞಬಾಹುವನ್ನೂ ಸರಸ್ವತಿಯಶಾಖೆಗಳುಈ ರೀತಿಗುಣಗಳನ್ನು ಕೊಟ್ಟವು. ಕುಟಿಲೆಯುಇಂದ್ರನಂತೆಬಲಶಾಲಿಗಳಾದಮೂವತ್ತು ಮಕ್ಕಳನ್ನು ಕೊಟ್ಟಳು. ಜಟಾಧರೆಯುಕರಾಲ, ನೀತಿಕೇಶ, ಕೃಷ್ಣಕೇಶರನ್ನು ಕೊಟ್ಟಳು.

ಕೃತ್ತಿಕಾದೇವಿಯರು, ಮೇಘನಾದ, ಚತುರ್ದಂಷ್ಟ್ರ, ವಿದ್ಯುಜ್ಜಿಹ್ವ, ದಶಾನನ, ಸೋಮಾಪ್ಯಾಯನ ದೇವಯಾಜಿ, ಹಂಸಾಸ್ಯ, ಕುಂಡಜಠರ, ಮುದ್ಗಗ್ರೀವ, ಹಯಾನನ

ಕೂರ್ಮಗ್ರೀವರುಗಳನ್ನು ಪುತ್ರನಾದ ಷಣ್ಮುಖನಿಗೆ ಕೊಟ್ಟರು. ಋಷಿಗಳು, ಸ್ಥಾಣುಜಂಘ, ಕುಂಭವಕ್ತ್ರ, ಲೊಹಜಂಘ, ಮಹಾನನ, ಪಿಂಡಾಕರ ಈ ಐದು ಜನಗಳನ್ನು ಸ್ಕಂದನಿಗಾಗಿ ಕೊಟ್ಟರು. ಪೃಥುಕ ತೀರ್ಥವು ನಾಗಜಿಹ್ವ, ಚಂದ್ರಹಾಸ, ಪಾಣಿಕೂರ್ಮ, ಶಿಕ್ಷಕ, ಚಾಷವಕ್ತ್ರ, ಜಂಬೂಕ ಇವರನ್ನು ಕೊಟ್ಟಿತು. ಚಕ್ರತೀರ್ಥವು ಪಂಚಶಿವನೆಂಬ ಗಣವನ್ನು ಕೊಟ್ಟವು. ಗಯಾಶಿರ ತೀರ್ಥವು ಬಂಧುದತ್ತನನ್ನೂ ಪುಷ್ಕರ ತೀರ್ಥವು ಓಶನಶ ತೀರ್ಥವು ರುದ್ರನನ್ನೂ, ಇತರ ಮಾತೃಗಳು ಮತ್ತೆ ಕೆಲವರನ್ನೂ ಕೊಟ್ಟರು. ಸೋಮತೀರ್ಥವು ವಸುಧಾಮನನ್ನೂ, ಪ್ರಭಾಸತೀರ್ಥವು ನಂದಿನಿಯನ್ನೂ ಕೊಟ್ಟವು.

ಇಂದ್ರತೀರ್ಥವು ವಿಶೋಕೆಯನ್ನೂ ಉದಪಾನ ತೀರ್ಥವು ಘನಸ್ವನೆಯನ್ನೂ, ಸಪ್ತಸಾರಸ್ವತತೀರ್ಥವು ನಾಲ್ಕುಜನ ಮಾತೃದೇವಿಗಳನ್ನೂ, ನಾಗತೀರ್ಥಗೀತಪ್ರಿಯಾ, ಮಾಧವೀ, ತೀರ್ಥನೇಮಿ, ಸ್ಮಿತಾನನ, ಏಕಚೂಡಾ ಎಂಬುವವರನ್ನೂ ಕುರುಕ್ಷೇತ್ರವು ಫಲಾಸ್ಪದನನ್ನೂ, ದ್ವಿರದಪಾವನ ತೀರ್ಥವು ರೋಂಡೀ, ಸೇಂಡೀ, ಪೋಷಭೇದೀ ಎಂಬವರನ್ನೂ ಕೊಟ್ಟರು. ಮಹೀದೇವಿಯು ಮೋಪಲೀಯೂ ಎಂಬವಳನ್ನೂ ಮಾನಸಹೃದವು ಶಾಲಿಕೆ ಯನ್ನು ಶತಾನಂದೆಯ ಶತಘಂಟೆಯನ್ನೂ ಬದರಿಕಾಶ್ರಮವೂ ಉಕ್ಷಗಖಲಮೇಖಲಾ ಪದ್ಮಾವತಿ ಮಾಧವೀಯರನ್ನೂ ಕೊಟ್ಟರು. ದೇವಿಯು ಸುಷಮಾ, ಏಕಚೂಡಾ ಧಮಧಮಾ ಎಂಬವರನ್ನೂ ಉತ್ಯಾಥನಿಯು ವೇದಮಂತ್ರೆಯನ್ನೂ, ಕೇದಾರೆಯು ಮಾತೃಗಳನ್ನೂ ಕೊಟ್ಟರು. ರೌದ್ರಮಹಾಲಯವು ಸುನಕ್ಷತ್ರ, ಕಲಾಲೂ, ಸುಪ್ರಭಾತ, ಸುಮಂಗಲ, ದೇವಮಿತ್ರ, ಚಿತ್ರಸೇನ ಇವರನ್ನು ಕೊಟ್ಟಿತು. ಪ್ರಯೋಗವು ಕೊಟ್ಟಿರಾ. ಊರ್ಧ್ವವೇಣೀ, ಶ್ರೀಮತೀ, ಬಾಹುಪುತ್ರಿಕಾ, ಪತಿತಾ, ಕಮಲಾಕ್ಷೀ ಎಂಬ ಮಾತೃವರ್ಗ ವನ್ನು ಕೊಟ್ಟಿತು.

೨೮೨. ಗಣೈರ್ವೃತೋ ಮಾತೃಭಿರನ್ವಯಾತೋ ।
ಮಯೂರಸಂಸ್ಥೋ ವರ ಶಕ್ತಿ ಪಾಣಿಃ ॥
ಸೇನಾಧಿಪತ್ಯೇ ಚ ಕೃತೋ ಭವೇನ
ರರಾಜ ಸೂರ್ಯೇವ ಮಹಾವಪುಷ್ಮಾನ್ ॥

ಸ್ವರಪಾಪವಿಮೋಚನಾ ತೀರ್ಥವು ಸುಂಯಾಮಾ, ಮಧುಪಿಂಗಾ, ಕ್ಷಾನ್ತಿ, ದಹ ಖೇಟಕರಾ ಇವರನ್ನು ಕೊಟ್ಟಿತು. ಸುಧಾಮ ಎಂಬ ತೀರ್ಥವು ಸಂತಾನಿಕ, ವಿಕಲಾ, ಕ್ರಮುಟಸಿನಿ ಜಲೇಶ್ವರೀ, ಕುರ್ಕುಕಾಂಬರ, ಲೋಹಮೇಖಲಾ ಇವರನ್ನೂ ಕೊಟ್ಟಿತು. ವಪುಷ್ಮತಿಯು ಉಲ್ಕು ಕಾಕ್ಷಿ ಯನ್ನೂ ಕೋಕತೀರ್ಥವು ಮಹಾಸನಿಯನ್ನೂ ರೌದ್ರ ತೀರ್ಥವು ಕರ್ಕಟಿಯನ್ನೂ, ಶ್ವೇತ ತೀರ್ಥವು ತುಂಡಾ ಎಂಬವಳನ್ನೂ ಮಾತೃಗಳನ್ನೂ ನೋಡಿ ಮಹಾತ್ಮನಾದ ಗರುಡನು ತನ್ನ ಮಗನಾದ ಮಯೂರನನ್ನೂ ಕೊಟ್ಟನು. ಹಾಗೆಯೇ ಅರುಣನು ತನ್ನ ಮಗನಾದ ತಾಮ್ರಚೂಡನನ್ನೂ ಒಪ್ಪಿಸಿದನು. ಅಗ್ನಿಯು ಶಕ್ತಿಯನ್ನೂ, ಪಾರ್ವತಿಯು ವಸ್ತ್ರವನ್ನೂ, ಗುಹನು ದಂಡವನ್ನೂ, ಕುಟಿಲೆಯು ಕಮಂಡಲವನ್ನೂ ಕೊಟ್ಟರು. ಹಾಗೆಯೇ ಹರಿಯು ಮಾಲಿಕೆಯನ್ನೂ ಶಂಕರನು ಬಾವುಟವನ್ನೂ, ಇಂದ್ರನು ತಾನು ಧರಿಸಿದ್ದ ಹಾರವನ್ನೂ ಕೊಟ್ಟರು. ಈ ರೀತಿ

ಶಕ್ತ್ಯಾಯುಧಪಾಣಿಯಾಗಿಯೂ, ಮಯೂರವಾಹನನಾಗಿಯು ಇರುವ ಷಣ್ಮುಖನು ಗುಣಗಳಿಂದಲೂ, ಮಾತೃಗಳಿಂದಲೂ ಸುತ್ತುವರಿಯಲ್ಪಟ್ಟ ರುದ್ರನಿಂದ ಸೇನಾಪತಿಯಾಗಿ ನಿಯಮಿಸಲ್ಪಟ್ಟು ದೇಹಧಾರಿಯಾಗಿ ಬಂದಿರುವ ಸೂರ್ಯನಂತೆ ಜ್ವಲಿಸಿದನು.

ಶ್ರೀ ವಾಮನ ಮಹಾಪುರಾಣದಲ್ಲಿ ಐವತ್ತೇಳನೇಯ ಅಧ್ಯಾಯವು ಮುಗಿದುದು.



## ಮಹಿಷನ ಹನನ

**ಅಧ್ಯಾಯ - ೫೮**

**೨೮೩. ಸೇನಾಪತ್ಯೇಭಿಷಿಕ್ತಸ್ತು ಕುಮಾರೋ ದೈವತ್ಯೆರಥ ।**
**ಪ್ರಣಿಪತ್ಯ ಭವಂ ಭಕ್ತ್ಯಾ ಗಿರಿಜಾಂ ಪಾವಕಂ ಶುಚಿಮ್ ॥**

**೨೮೪. ಷಟ್ ಕೃತ್ತಿಕಾಶ್ಚ ಸರಸಾಂ ಪ್ರಣಮ್ಯ ಕುಟಿಲಾಮಪಿ ।**
**ಬ್ರಹ್ಮಾಣಂ ಚ ನಮಸ್ಕೃತ್ಯ ಇದಂ ವಚನಬ್ರವೀತ್॥**

**ಪುಲಸ್ತ್ಯರು ಹೇಳುತ್ತಾರೆ** :- ಕುಮಾರಸ್ವಾಮಿಯನ್ನು ದೇವತೆಗಳು ಅಭಿಷೇಕ ಮಾಡಿ ಸೇನಾಪತಿಯನ್ನಾಗಿ ನಿಲ್ಲಿಸಿದ ಮೇಲೆ ಆ ಕುಮಾರಸ್ವಾಮಿಯು ಶಂಕರನನ್ನೂ ಪಾರ್ವತಿಯನ್ನೂ, ಅಗ್ನಿಯನ್ನೂ, ಕೃತ್ತಿಕಾದೇವತೆಗಳನ್ನೂ, ಪ್ರೀತಿಯುಕ್ತಳಾಗಿರುವ ಕುಟಿಲೆಯನ್ನೂ, ಬ್ರಹ್ಮನನ್ನೂ ಭಕ್ತಿಯಿಂದ ನಮಸ್ಕರಿಸಿ ಎಲ್ಲ ದೇವತೆಗಳನ್ನೂ ಕುರಿತು ಹೀಗೆ ಹೇಳುತ್ತಾನೆ.

**೨೮೫. ನಮೋ ಭಗವತೀಂ ದೇವೀಮೋಂ ನಮೋಽಸ್ತು ತಪೋಧನಾಃ ।**
**ಯುಷ್ಮತ್ ಪ್ರಸಾದಾಜ್ಜೇಷ್ಯಾಮಿ ಶತ್ರೂ ಮಹಿಷತಾರಕೌ ॥**

''ಪೂಜ್ಯಳಾದ ದೇವಿಗೂ ತಪಸ್ವಿಗಳಾಗಿರುವ ಮಹರ್ಷಿಗಳಿಗೂ ನಮಸ್ಕಾರ. ನಿಮ್ಮ ಈ ಅನುಗ್ರಹಬಲದಿಂದ ಸುರಶತ್ರುಗಳಾಗಿರುವ ಮಹಿಷ ಮತ್ತು ತಾರಕಾಸುರ ನನ್ನು ಜಯಿಸುತ್ತೇನೆ. ನಾನು ಇನ್ನೂ ಮಗುವಾಗಿರುವೆನು. ನಿಮ್ಮ ಪ್ರೀತಿಗೆ ತಕ್ಕಂತೆ ಹೆಚ್ಚಾಗಿ ಮಾತನಾಡಲು ನಾನರಿಯನು. ಈ ಚತುರ್ಮುಖನ ಅನುಗ್ರಹವು ನನಗೆ ಉಂಟುಮಾಡಲ್ಪಡಲಿ''. ಕುಮಾರಸ್ವಾಮಿಯು ಹೀಗೆ ಹೇಳಲಾಗಿ ದೇವತೆಗಳೆಲ್ಲರೂ ಆ ಮಹಾತ್ಮನ ಮುಖ ನೋಡಿಯೇ ನಾವು ದಾನವರ ಭಯದಿಂದ ಪಾರಾದೆವೆಂದು ತಿಳಿದು ನಿರ್ಭಯರಾದರು. ಶಂಕರನೂ ಸಹ ಷಣ್ಮುಖನ ಪ್ರೀತಿಗಾಗಿ ಮೇಲಕ್ಕೆದ್ದು ಕೂರಿಸಿದನು. ಆಗ ಪಾರ್ವತಿಯು ಪುತ್ರನನ್ನು ''ನೋಡಿ ಶತ್ರುನಾಶಕನಾದ ಎಲೈ ಮಗನೇ ಇಲ್ಲಿ ಬಾ, ಲೋಕಪೂಜ್ಯನಾಗಿರುವ ಈ ವಿಷ್ಣುವಿನ ಪಾದಗಳಿಗೆ ನಮಸ್ಕರಿಸು'' ಎಂದಳು. ಆಗ ಗುಹನು ನಗುತ್ತ ''ಅಮ್ಮಾ ಇವನು ಯಾರು ? ನಮ್ಮಂತಹವರೆಲ್ಲರೂ ಇವನಿಗೆ ಆದರದಿಂದ ಪ್ರಣಾಮ ಮಾಡುತ್ತಿರುವೆವು. ಇವನಾರೆಂಬುದು ನನಗೆ ಹೇಳು'' ಎಂದನು.

**೨೮೬. ಕೇವಲಂ ತ್ವಿಹ ಮಾಂ ದೇವ ತ್ವತ್ಪಿತಾ ಪ್ರಾಹ ಶಂಕರಃ**
**ನಾನ್ಯಃ ಪರತರೋಽಸ್ಮಾದ್ಧಿ ವಯಮನ್ಯೇಚ ದೇಹಿನಃ ॥**

ಆಗ ತಾಯಿಯಾದ ಪಾರ್ವತಿಯು ''ಮಗನೇ, ನಿನ್ನ ಅಸಾಧಾರಣವಾದ ಕಾರ್ಯವು ನೆರವೇರಿಸಲ್ಪಟ್ಟ ಮೇಲೆ ಈ ಮಹಾತ್ಮನಾದ ಗರುಡಧ್ವಜನು ಯಾರು, ಎಂತಹ ಮಹಿಮೆ ಉಳ್ಳವನೆಂಬುದನ್ನು ಬ್ರಹ್ಮನೇ ನಿನಗೆ ವಿಸ್ತಾರವಾಗಿ ಹೇಳುತ್ತಾನೆ. ನಿನ್ನ ತಂದೆಯಾದ ಶಂಕರನು ''ಈ ಜನಾರ್ದನನಿಗಿಂತಲೂ ಮೇಲ್ಪಟ್ಟ ದೇವತೆಯು ಯಾರೂ ಇಲ್ಲ. ನಾನೂ, ಇತರ ದೇವತೆಗಳೂ ಕೂಡ ಇವನಿಗಿಂತ ಕೆಳಮಟ್ಟದ ಚೇತನರು ಮಾತ್ರವೇ'' ಎಂದು ನನ್ನಲ್ಲಿ ಇಷ್ಟು ಮಾತ್ರ ಹೇಳಿದ್ದಾನೆ ಎಂದಳು.

೨೮೭. ಪಾರ್ವತ್ಯಾ ಗದಿತೇ ಸ್ಕಂದಃ ಪ್ರಣಿಪತ್ಯ ಜನಾರ್ದನಮ್ ।
ತಸ್ಥೌ ಕೃತಾಂಜಲಿ ಪುಟಸ್ತ್ವಾಜ್ಞಾಂ ಪ್ರಾರ್ಥಯತೇಽಚ್ಯುತಾತ್ ॥

ಪಾರ್ವತಿಯು ಹೀಗೆ ಹೇಳಿದೊಡನೆಯೇ ಸ್ಕಂದನು ಜನಾರ್ದನನ್ನು ನಮಸ್ಕರಿಸಿ ಅಂಜಲಿಬಂಧ ಪೂರ್ವಕನಾಗಿ ಅವನ ಆಜ್ಞಾಪೇಕ್ಷಿಯಾಗಿ ನಿಂತನು.

೨೮೮. ಶೃಣು ಸ್ವಸ್ತ್ಯಯನಂ ಪುಣ್ಯಂ ಯತ್ಪ್ರಾಹ ಭಗವಾನ್ ಹರಿಃ ।
ಸ್ಕಂದಸ್ಯ ವಿಜಯಾರ್ಥಾಯ ವಧಾಯ ಮಹಿಷಸ್ಯಚ ॥

ಅಂತಹ ಭಕ್ತಿ ನಮ್ರನಾದ ಸ್ಕಂದನನ್ನು ನೋಡಿ ಸರ್ವಭೂತನಿಯಾಮಕನಾದ ವಿಷ್ಣುವು ಅವನಿಗೆ ಮಂಗಳವನ್ನು ಆಶಂಸನಮಾಡಿ ಅಪ್ಪಣೆಯಿತ್ತನು. ಆಗ ನಾರದರು ಪುಲಸ್ತ್ಯರನ್ನು ಕುರುತು ಗರುಡಧ್ವಜನಾದ ವಿಷ್ಣುವು ಕುಮಾರ ಸ್ವಾಮಿಗೆ ಮಾಡಿದ ಪುಣ್ಯಕರ ವಾದ ಮಂಗಲಾಶಂಸೆಯನ್ನು ದಯವಿಟ್ಟು ಹೇಳಬೇಕೆಂದು ಪ್ರಶ್ನಿಸಲಾಗಿ ಪುಲಸ್ತ್ಯರು ''ಕೇಳು ಪೂಜ್ಯನಾದ ಗರುಡಧ್ವಜನು ಮಹಿಷನ ನಾಶಕ್ಕಾಗಿಯೂ ಅದರಿಂದ ಆಗಬಹುದಾದ ಸ್ಕಂದನ ವಿಜಯಕ್ಕಾಗಿಯೂ ಪುಣ್ಯಕರವಾದ ಈ ಮಂಗಲ ವನ್ನು ಹರಸಿದರು.

೨೮೯. ಓಂ ಸ್ವಸ್ತಿ ಕುರುತಾಂ ಬ್ರಹ್ಮಾ ಪದ್ಮಯೊನೇರಜೋಗುಣಃ ।
ಸ್ವಸ್ತಿ ಚಕ್ರಾಂಕಿತರೋ ವಿಷ್ಣುಸ್ತೇ ವಿದಧಾತ್ವಜಃ ।

ಪದ್ಮಸಂಭವನಾಗಿಯೂ, ರಜೋಗುಣಪ್ರಧಾನನಾಗಿಯೂ ಇರುವ ಬ್ರಹ್ಮನು ನಿನಗೆ ಮಂಗಲವನ್ನುಂಟು ಮಾಡಲಿ. ಚಕ್ರಪಾಣಿಯಾಗಿಯೂ, ಅವ್ಯಯನಾಗಿಯೂ ಇರುವ ವಿಷ್ಣುವು ಮಂಗಲವನ್ನುಂಟು ಮಾಡಲಿ.

೨೯೦. ಸ್ವಸ್ತಿ ತೇ ಶಂಕರೋ ಭಕ್ತ್ಯಾ ಸಪತ್ನೀಕೋ ವೃಷಧ್ವಜಃ ।
ಪಾವಕಃ ಸ್ವಸ್ತಿ ತುಭ್ಯಂಚ ಕರೋತು ಶಿಖಿವಾಹನಃ ॥

ಭಕ್ತನಾದ ನಿನಗೆ ಸಪತ್ನೀಕನಾದ ಶಂಕರನು ಮಂಗಲವನ್ನುಂಟು ಮಾಡಲಿ. ಅಗ್ನಿಯೂ ನಿನಗೆ ಮಂಗಲವನ್ನುಂಟು ಮಾಡು.

೨೯೧. ದಿವಾಕರಃ ಸ್ವಸ್ತಿಕರೋಸ್ತು ತೇ ಸದಾ ।
ಸೋಮಃ ಸಭೌಮಃ ಸಬುಧೋ ಗುರುಶ್ಚ ॥

೨೯೨. ಕಾವ್ಯಸ್ಸದಾ ಸ್ವಸ್ತಿಕರೋಸ್ತು ತುಭ್ಯಂ ।
ಶನೈಶ್ಚರಃ ಸ್ವಸ್ತ್ಯಯನಂ ಕರೋತು ॥

ಮತ್ತು ಸೂರ್ಯ, ಚಂದ್ರ, ಅಂಗಾರಕ, ಬುಧ, ಗುರು, ಶುಕ್ರ, ಶನಿ ಇವರು ನಿನಗೆ ಸರ್ವಕಾಲದಲ್ಲಿಯೂ ಮಂಗಲವನ್ನೀಯಲಿ.

೨೯೩. ಮರೀಚಿ ರತ್ರಿಃ ಪುಲಹಃ ಪುಲಸ್ತ್ಯಃ ।
ಕ್ರತುರ್ವಸಿಷ್ಠೋ ಭೃಗುರಂಗಿರಾಶ್ಚ ॥
ಮೃಗಾಂಕಜಸ್ತೇ ಕುರುತಾದ್ಧಿ ಮಂಗಲಂ ।
ಮಹರ್ಷಯಸ್ಸಪ್ತದಿವಿ ಸ್ಥಿತಾಶ್ಚ ಯೇ ॥

ಹಾಗೂ ಮರೀಚಿ, ಅತ್ರಿ, ಪುಲಹ, ಪುಲಸ್ತ್ಯ, ಕೃತು, ವಸಿಷ್ಠ, ಭೃಗು, ಅಂಗಿರಸ, ಬುಧ ಇವರೂ, ಗಗನದಲ್ಲಿ ಶಾಶ್ವತವಾಗಿ ಸ್ಥಿತಿ ಹೊಂದಿರುವ ಸಪ್ತರ್ಷಿಗಳೂ ನಿನಗೆ ಮಂಗಳವನ್ನುಂಟು ಮಾಡಲಿ.

೨೯೪. ವಿಶ್ವೇಶ್ವಿನಾ ಸಾಧ್ಯ ಮರುದ್ಗುಣಾಗ್ನಯೋ ।
ದಿವಾಕರಾಃ ಶೂಲಧರಾ ಮಹೇಶ್ವರಾಃ ।
ಯಕ್ಷಾಃ ಪಿಶಾಚಾ ವಸವೊಥ ಕಿನ್ನರಾ ।
ಸ್ತೇಸ್ವಸ್ತಿ ಕುರ್ವಂತು ಸದೋದ್ಯತಾಸ್ತ್ವಮೀ ॥

ಮತ್ತು ವಿಶ್ವದೇವತೆಗಳೂ ಸಾಧಾರಣ ಮರುತ್ತುಗಳೂ, ಅಗ್ನಿಗಳು, ದ್ವಾದಶಾದಿತ್ಯರು ಶೂಲಧಾರಿಗಳಾದ ಏಕಾದಶ ರುದ್ರರು, ಯಕ್ಷರು ಪಿಶಾಚಿಗಳು ಅಷ್ಟವಸುಗಳು, ಕಿನ್ನರರು ಇವರು ಸಹ ಯಾವಾಗಲೂ ಸಿದ್ಧರಾಗಿದ್ದು ನಿನಗೆ ಮಂಗಲವನ್ನುಂಟು ಮಾಡಲಿ.

೨೯೫. ನಾಗಾಃಸುಮಪರ್ಣಾ ಸರಿತಃ ಸರಾಂಸಿ ।
ತೀರ್ಥಾನಿ ಪುಣ್ಯಾನಿ ಹೃದಾಃ ಸಮುದ್ರಾಃ ।
ಮಹಾಬಲಾ ಭೂತಗಣಾ ಗಜೇಂದ್ರಾಃ
ತೇಸ್ವಸ್ತಿ ಕುರ್ವಂತು ಸದೋತದ್ಯತಾಸ್ತ್ವಮೀ ॥

ಸರ್ಪಗಳು, ಗರುಡಪಕ್ಷಿಗಳು, ನದಿಗಳು, ಸರೋವರಗಳು, ಪುಣ್ಯತೀರ್ಥಗಳು, ಪುಣ್ಯ ಸಮುದ್ರಗಳು, ಬಲಶಾಲಿಯಾದ ಭೂತಗಣಗಳು, ಗಣೇಶ್ವರರು ಇವರೆಲ್ಲರೂ ಯಾವಾಗಲೂ ಸಿದ್ಧರಾಗಿದ್ದು ನಿನಗೆ ಮಂಗಲವನ್ನು ಮಾಡಲಿ.

೨೯೬. ಸ್ವಸ್ತಿದ್ವಿ ಪಾದಿಕೆಪಭ್ಯಶ್ಚ ಚತುಷ್ಪಾದೇಭ್ಯ ಏವ ಚ ।
ಸ್ವಸ್ತಿತೇ ಬಹುಪಾದೇಭ್ಯಃ ಅಂಪಾದೇಭೋಸ್ತ್ವನಾಮಯಂ ॥

ಮತ್ತು ಎರಡುಪಾದವುಳ್ಳಪ್ರಾಣಿಗಳಿಂದಲೂ, ನಾಲ್ಕುಪಾದವುಳ್ಳಪ್ರಾಣಿಗಳಿಂದಲೂ, ಬಹುಪಾದಗಳುಳ್ಳಮತ್ತುಪಾದವಿಲ್ಲದಪ್ರಾಣಿಗಳಿಂದಲೂನಿನಗೆಮಂಗಲವಾಗಲಿ.

೨೯೭. ಪ್ರಾಗ್ದಿಶಂ ರಕ್ಷತಾದ್ವಜ್ರೀ ದಕ್ಷಿಣಾಂ ದಂಡನಾಯಕಃ ।
ಪಾಶೀಪ್ರತಿಮವತು ಯಕ್ಷೇಶಃ ಪಾತು ಚೋತ್ತರಂ

ನನ್ನ ಪೂರ್ವದಿಕ್ಕನ್ನು ಇಂದ್ರನೂ, ದಕ್ಷಿಣ ದಿಕ್ಕನ್ನು ಯಮನೂ, ಪಶ್ಚಿಮ ದಿಕ್ಕನ್ನು ವರುಣನೂ, ಉತ್ತರ ದಿಕ್ಕನ್ನು ಕುಬೇರನೂ ರಕ್ಷಿಸಲಿ.

೨೯೮. ವಹ್ನಿರ್ದಕ್ಷಿಣಪೂರ್ವಾಂ ತು ಕುಬೇರೋ ದಕ್ಷಿಣಾಪರಾಂ ।
ಪ್ರತೀಚೀಮುತ್ತರಾಂ ವಾಯುಃ ಶಿವಃ ಪೂರ್ವೋತ್ತರಾಮಪಿ ॥

ಮತ್ತು ಅಗ್ನಿಯು ಆಗ್ನೇಯ ದಿಕ್ಕನ್ನು, ಕುಬೇರನು ನೈಋತ್ಯ ದಿಕ್ಕನ್ನೂ, ವಾಯುವು ವಾಯುವ್ಯ ದಿಕ್ಕವನ್ನೂ, ಶಿವನು ಈಶಾನ್ಯ ದಿಕ್ಕನ್ನೂ ನಿನಗಾಗಿ ರಕ್ಷಿಸಲಿ.

೨೯೮. ಉಪರಿಷ್ಟಾತ್ ಭುವಃಮಪಾತು ಹ್ಯಧಸ್ತಾಚ್ಚ ಧಾಧರಃ ।
ಮುಸಲೀ ಲಾಂಗಲೀ ವಜ್ರೀ ಧನುಷ್ಮಾನ್ ಇಂದ್ರಏವ ತು

ಭೂಮಿಯ ಮೇಲ್ಭಾಗದಲ್ಲಿಯೂ, ಕೆಳಭಾಗದಲ್ಲಿಯೂ ಮೇಷಗಳು ರಕ್ಷಿಸಲಿ. ಮಧ್ಯದ ಅಂತರಗಳಲ್ಲಿ ಮುಸಲಲಾಂಗಲಧಾರಿಯಾದ ರಾಮನೂ, ಧನುರ್ಧಾರಿಯಾದ ಇಂದ್ರನೂ ರಕ್ಷಿಸಲಿ.

೨೯೯. ವಾರಾಹೋಂಬುನಿಧೌ ಪಾತು ದುರ್ಗೆ ಪಾತು ನೃಕೇಸರೀ ॥

ವರಾಹಮೂರ್ತಿಯು ಜಲಮಧ್ಯದಲ್ಲಿಯೂ, ನೃಸಿಂಹನೂ ದುರ್ಗಾಸ್ಥಾನಗಳಲ್ಲಿಯೂ, ಸಾಮವೇದಧ್ವನಿಯುಳ್ಳ ಮಾಧವನು ಎಲ್ಲಾ ಕಡೆಯಲ್ಲೂ ನಿನ್ನನ್ನು ರಕ್ಷಿಸಲಿ. ಹೀಗೆ ವಿಷ್ಣುವು ಆಶೀರ್ವಚವನ್ನು ಹೇಳಿ ಹರಸಿದ ಬಳಿಕ ಶಕ್ತ್ಯಾಯುಧವನ್ನು ಹಿಡಿದು ಸ್ಕಂದನು ಎಲ್ಲ ದೇವತೆಗಳಿಗೆ ನಮಸ್ಕಾರಮಾಡಿ ನೆಲದಿಂದ ನಭೋಮಂಡಲಕ್ಕೆ ಹಾರಿದನು. ಅವನನ್ನು ಅನುಸರಿಸಿ ಕಾಮರೂಪಿಗಳಾದ ಎಲ್ಲಾ ಗಣಾಂಗಗಳೂ, ಮುನಿಗಳೂ, ದೇವತೆಗಳೂ ಹಕ್ಕಿಗಳಂತೆ ಅವನನ್ನು ಹಿಂಬಾಲಿಸಿ ಮುಗಿಲಿಗೆ ಹಾರಿದರು. ಇದರಂತೆ ದೈತ್ಯರನ್ನು ಕೊಲ್ಲುವ ತವಕವುಳ್ಳ ಎಲ್ಲ ಮಾತೆಯರೂ ಆ ಸ್ಕಂದನೊಂದಿಗೆ ಆಗಸಕ್ಕೆ ಏರಿದರು. ಹೀಗೆ ಮುಗಿಲು ಮಾರ್ಗದಲ್ಲಿ ಬಹು ದೂರ ದಾರಿಯನ್ನು ಕ್ರಮಿಸಿದ ಬಳಿಕ ಸ್ಕಂದನು ''ಗಣಾಧೀಶರೇ ನೀವೆಲ್ಲರೂ ಬೇಗನೆ ಯಾವದಾದರೂ ಭೂಖಂಡದಲ್ಲಿ ಇಳಿಯಿರಿ'' ಎಂದು ಅಪ್ಪಣೆ ಮಾಡಿದನು. ಅವನ ಆದೇಶದಂತೆ ಆ ಎಲ್ಲ ಸ್ಕಂದನ ಸೇವಕ ವೃಂದವು ನೆಲಕ್ಕೆ ಇಳಿದರು. ಸಮೀಪದಲ್ಲಿರುವ ಒಂದು ಪರ್ವತಕ್ಕೆ ಹೋದರು. ಸಿಂಹನಾದವನ್ನು ಮಾಡಿದರು. ಅವರ ಧ್ವನಿಯ ಸಮುದ್ರದರಂಧ್ರದಿಂದ ದಾನವರ ನಿವಾಸವಾದ ಪಾತಾಳಲೋಕದವರೆಗೂ ಹಬ್ಬಿ ಪ್ರತಿಧ್ವನಿಸಿತು. ಅದನ್ನು ಕೇಳಿ ಮಹಿಷ, ತಾರಕಾಸುರ, ವಿರೋಚನ, ಕುಂಭ ನಿಕುಂಭ ಮುಂತಾದ ದೈತ್ಯ ಧುರೀಣರೆಲ್ಲರೂ ಬೆಚ್ಚಿ ಬೆರಗಾದರು. ''ಒಮ್ಮೆಲೇ ಇಂದ್ರನ ವಜ್ರವೇ ಬಿದ್ದಂತಿರುವ ಈ ಭಯಂಕರನಾದವು ಏನು? ಎಲ್ಲಿಂದ ಬಂತು?'' ಎಂದು ಎಲ್ಲರೂ ಕೂಡಿ ಆಲೋಚನೆ ಗೈದರು. ಕೊನೆಗೆ ಅವರೆಲ್ಲರೂ ಸೇರಿ ಅಂಧಕಾಸುರನ ಬಳಿಗೆ ಬಂದರು. ಈ ಎಲ್ಲ ದಾನವ ಕುಲದ ಮುಂದಾಳುಗಳು ಅಂಧಕನ ಜೊತೆಗೆ ಕೂಡಿಕೊಂಡು ಆ ಭೀಕರಶಬ್ದದ ಬಗೆಗೆ ಗುಪ್ತವಿಚಾರ ಮಾಡಿದರು. ಪ್ರತಿಯೊಬ್ಬರ ಮುಖದ ಮೇಲೆಯೂ ಚಿಂತೆ ವಿಷಾದದ ಕಪ್ಪು ನೆಳಲು ಬಿದ್ದಿತ್ತು.

೩೦೦. ಮಂತ್ರಯತ್ಸು ಚ ದೈತ್ಯೇಷು ಪಾತಾಲಾತಂ ಸೂಕರಾನನಃ
ಪಾತಾಲಕೇತುಃ ದೈತ್ಯೇಂದ್ರಃ ಸಂಪ್ರಾಪ್ತೋಽಥ ರಸಾತಲಮ್ ॥

ಹೀಗೆ ಆ ದೈತ್ಯರೆಲ್ಲರೂ ಸೇರಿ ಮಂತ್ರಾಲೋಚನೆ ಮಾಡುತ್ತಿರುವಾಗಲೇ ಪಾತಾಳ ಲೋಕದಿಂದ ಪಾತಾಳಕೇತು ಎಂಬ ಒಬ್ಬ ದೈತ್ಯರಾಜನು ಅವರಿದ್ದಲ್ಲಿಗೆ ಬಂದನು.

ಹಂದಿಯ ಮೋರೆಯ ಆ ದಾನವ ದೊರೆಯ ಮೈಯಲ್ಲಿ ಬಾಣ ನೆಟ್ಟಿತ್ತು. ದನಿ ನಡುಗುತ್ತಿತ್ತು. ಅವನು ಅಂಧಕನ ಬಳಿಗೆ ಬಹಳ ದೈನ್ಯದಿಂದ ಹೀಗೆ ಹೇಳುತ್ತಾನೆ -

''ಎಲೈ ದೈತ್ಯರಾಜನೇ, ನಾನು ಗಾಲವರ ಆಶ್ರಮಕ್ಕೆ ಹೋಗಿದ್ದೆನು. ಅವರ ಆ ಆಶ್ರಮವನ್ನು ಧ್ವಂಸಮಾಡಲು ಯತ್ನಿಸಿ ಹಂದಿಯ ರೂಪವನ್ನು ಧರಿಸಿ ಆಶ್ರಮವನ್ನು ಪ್ರವೇಶಿಸುವಷ್ಟರಲ್ಲಿಯೇ ಯಾವ ಮನುಷ್ಯನಿಗಿಂತನನಗೆ ಬಾಣವು ಹೊಡೆಯಲ್ಪಟ್ಟಿತೋ ಅವನನ್ನು ನಾನು ತಿಳಿಯಲಾಗಲಿಲ್ಲ. ಅವನ ಬಾಣದಿಂದ ದೇಹದ ಸಂಧಿ ಬಂಧವು ಭಿನ್ನವಾದುದರಿಂದ ಭಯಾರ್ತವಾಗಿ ವೇಗದಿಂದ ಓಡಿದೆನು. ಆಗ ಆಶ್ರಮದಿಂದ ನನ್ನನ್ನು ಒಬ್ಬನು ಓಡಿಸಿಕೊಂಡು ಬಂದನು. ಸೂಕರರೂಪಿಯಾಗಿದ್ದ ನನ್ನ ಹಿಂದೆ ನಿಲ್ಲು ನಿಲ್ಲು ಎಂದು ಹೇಳುತ್ತಾ ಓಡಿಬಂದನು. ಅವನು ಬರುವಾಗ ಕುದುರೆಗಳ ಕಾಲಿನ ಅದ್ಭುತವಾದ ಶಬ್ದವು ಕೇಳಿ ಬರುತ್ತಿತ್ತು. ಅವನಿಗೆ ಭಯಪಟ್ಟು ನಾನು ದಕ್ಷಿಣ ಸಮುದ್ರಕ್ಕೆ ಪ್ರವೇಶಿಸಿದೆನು.

**೨೦೧. ಅನ್ಯೇ ಚೋಚು ರ್ವಯಂ ನೂನಂ ನಿಹನ್ಮೋ ಮಹಿಷಾಸುರಂ।**
**ತಾರಕಂ ಘಾತಯಾಮೋಽದ್ಯ ವದಂತ್ಯನ್ಯೇ ಸುತೇಜಸಃ ॥**

ಆಗ ಸಮುದ್ರದಲ್ಲಿ ಪ್ರವೇಶಿಸಿದ ನಾನು ತಿರುಗಿ ನೋಡುವಾಗ ಅಲ್ಲಿ ನಾನಾ ವಿಧವಾದ ವೇಷ ಮತ್ತು ಆಕಾರವುಳ್ಳ ಜನರನ್ನು ನೋಡಿದೆನು. ಅವರಲ್ಲಿ ಕೆಲವರು ಗರ್ಜಿಸುತ್ತಲೂ, ಕೆಲವರು ಪ್ರತಿಗರ್ಜಿಸುತ್ತಲೂ ಇದ್ದರು. ಮತ್ತೆ ಕೆಲವರು ಮಹಿಷನನ್ನು ನಾನೇ ಕೊಲ್ಲುವೆನೆಂದೂ, ಇನ್ನು ಕೆಲವರು ತಾರಕನನ್ನು ಕೊಲ್ಲುವುವೆಂದೂ ತೇಜಸ್ವಿಗಳಾಗಿ ವಾದಿಸುತ್ತಿದ್ದರು. ಅದನ್ನು ಕೇಳಿ ಎಲೈ ದೊರೆಯೇ, ಸತ್ಯವಾಗಿಯೂ ನನಗೆ ಭಯವೇ ಆಯಿತು. ಆಗ ಆ ಮಹಾಸಮುದ್ರವನ್ನು ಬಿಟ್ಟು ಭಯದಿಂದ ಇಲ್ಲಿಗೆ ಓಡಿಬಂದೆನು. ನಾನು ಭೂಮಿಯ ಗರ್ತವನ್ನು ಹೊಕ್ಕು ಬರುವಾಗ ಅಲ್ಲಿಗೂ ಅವನು ನನ್ನನ್ನು ಅನುಸರಿಸಿ ಬಂದನು.

**೨೦೨. ತತ್ ಶ್ರುತ್ವಾ ಚಾಂಧಕೋ ವಾಕ್ಯಂ ಪ್ರಾಹ ಮೇಘಸ್ವನಂ ವಚಃ ।**
**ನ ಭೇತವ್ಯಂ ತ್ವಯಾ ತಸ್ಮಾತ್ಸತ್ಯಂ ಗೋಪ್ತಾಸ್ಮಿ ದಾನವ ॥**

ಆ ಭಯದಿಂದ ನನ್ನ ಹಿರಣ್ಯಪುರವನ್ನು ಬಿಟ್ಟು ನಿನ್ನಲ್ಲಿ ಬಂದಿದ್ದೇನೆ. ನೀನು ಅನುಗ್ರಹ ಮಾಡಿ ನನ್ನನ್ನು ರಕ್ಷಿಸಿರಿ ಎಂದನು. ಆ ಮಾತನ್ನು ಕೇಳಿ ಅಂಧಕನು ಅವನನ್ನು ಕುರಿತು, ''ನೀನು ಭಯಪಡಬೇಡ, ನಾನು ನಿನ್ನನ್ನು ರಕ್ಷಿಸುವೆ''ನೆಂದು ಸಮಾಧಾನಪಡಿಸಿದನು. ಆ ಸಮಯದಲ್ಲಿ ಮಹಿಷತಾರಕ ಬಲಿಪುತ್ರನಾದ ಬಾಣ ಇವರು ಈ ವೃತ್ತಾಂತವನ್ನು ಕೇಳಿ ತಮ್ಮ ತಮ್ಮ ಪರಿಕರಗಳೊಡನೆ ಅಂಧಕನಿಗೆ ತಿಳಿಯಪಡಿಸಿದಂತೆಯೇ ಭೂಮಿಯಲ್ಲಿ ಯುದ್ಧಕ್ಕಾಗಿ ಹೊರಟರು. ಎಲ್ಲಿ ಆ ಗಣಗಳು ಭಯಂಕರವಾದ ಸಿಂಹನಾದ ಮಾಡುತ್ತಿದ್ದರೊ ಅಲ್ಲಿಗೆ ಆ ದೈತ್ಯರು ಆಯುಧ ಸಹಿತರಾಗಿ ಬಂದು ಸೇರಿದರು. ಆ ದೈತ್ಯ ಮುಖ್ಯರು ಷಣ್ಮುಖನ ಗುಣಗಳನ್ನು ನೋಡಿ ಅಲ್ಲಿ ಮಾತೃಮಂಡಲದ ಮೇಲೆ ವೇಗದಿಂದ ಎರಗಿದರು. ಅವರಲ್ಲಿ ಮುಂದಾಳಾದ ಸ್ಥಾಣುವು ಪರಿಘಾಯುಧಧಾರಿಯಾಗಿ ಕಾಲರುದ್ರನು ಪಶುಗಳನ್ನು ಕೊಲ್ಲುವಂತೆ ಶತ್ರುಬಲವನ್ನು ನಾಶಪಡಿಸತೊಡಗಿದನು. ಹಾಗೆ ಕಾದುತ್ತಿರುವ ಇವನನ್ನು ನೋಡಿ ಕಲಶೋದರನು

ಕೈಯಲ್ಲಿ ಕೊಡಲಿ ಹಿಡಿದು ಅಸುರರನ್ನು ಕೊಲ್ಲುತ್ತ ಹೊರಟನು. ಜ್ವಾಲಾಮುಖನು ಭಯಂಕರವಾದ ಕೈಗಳಿಂದ ಅಸುರರನ್ನು ರಥ, ಗಜ, ಅಶ್ವಸಹಿತವಾಗಿ ವಿಶಾಲವಾದ ತನ್ನ ಬಾಯನಲ್ಲಿ ಹಾಕಿಕೊಳ್ಳತೊಡಗಿದನು. ದಂಡಕನೂ ಕೋಪಗೊಂಡು ಪ್ರಾಸಾಯುಧ ಧಾರಿಯಾದ ಮಹಾಸುರರನ್ನು ವಾಹನಸಹಿತವಾಗಿ ಎತ್ತಿ ಸಮುದ್ರಕ್ಕೆ ಎಸೆಯಲಾರಂಭಿಸಿದನು. ಶಂಕುಕರ್ಣನು ಮುಸಲಾಯುಧವನ್ನು ಧರಿಸಿ ಹಲಾಯುಧದಿಂದ ಹೊಡೆದು ಪೌರುಷವಿಲ್ಲದ ರಾಜನನ್ನು ನಾಶಮಾಡುವಂತೆ ಪುಡಿ ಪುಡಿ ಮಾಡುತ್ತಾನೆ. ಗಣಾಧಿಪತಿಯಾದ ಪುಷ್ಪದಂತನು ಕತ್ತಿ ಗುರಾಣಿಗಳನ್ನು ಧರಿಸಿ ದಾನವರನ್ನು ಎರಡಾಗಿಯೂ ಅನೇಕ ವಿಧವಾಗಿ ಸೀಳಲಾರಂಭಿಸಿದನು. ಪಿಂಗಲನು ದಂಡ ಮುಂಡರೊಡನೆ ಎಲ್ಲಿ ಎಲ್ಲಿ ಓಡುತ್ತಾನೆಯೋ ಅಲ್ಲಲ್ಲಿ ದಾನವರು ರಾಶಿರಾಶಿಯಾಗಿ ಸೇರುತ್ತಿದ್ದಾರೆ. ಸಹಸ್ರನಯನನು ಗಣಾಗ್ರಗಣ್ಯನಾಗಿ ಶೂಲವನ್ನು ತಿರುಗಿಸುತ್ತ ಗಜಾಶ್ವವೇ ಮೊದಲಾದ ವಾಹನಗಳೊಡನೆ ಅಸುರರನ್ನು ನಾಶಪಡಿಸಿದನು. ಭೀಮನು ಭಯಂಕರವಾದ ಶರವೃಷ್ಟಿಯಿಂದ ಮುಂದೆ ಬಂದ ಅಸುರರೆಲ್ಲರನ್ನು ವಜ್ರಾಯುಧದಿಂದ ಇಂದ್ರನು ಪರ್ವತಗಳನ್ನು ನಾಶಪಡಿಸುವಂತೆ ಹೊಡೆದು ನಾಶ ಮಾಡಿದನು. ಭಯಂಕರವಾದ ಶಕಟಚಕ್ರನೆಂಬ ಗಣವು ಮುದ್ಗರಾಯುಧವನ್ನು ತಿರುಗಿಸುತ್ತ ಶತ್ರುಗಳನ್ನು ನಾಶಪಡಿಸಲು ತ್ವರಿತನಾದನು. ಗಿರಿಭೇದೀಯು ಮಾವಟಿಗನೊಡನೆ ಆನೆಯನ್ನು ಅಂಗೈಯಿಂದಲೇ ಅಪ್ಪಳಿಸಿ ಮಹಾವೇಗದಿಂದ ರಥಗಳೊಡನೆ ನಾಶಪಡಿಸಿದನು. ನಾಡೀ ಜಂಘನು ಮುಷ್ಟಿಪಾತಗಳಿಂದಲೂ ಮಂಡಿಯ ಪ್ರಹಾರದಿಂದಲೂ ವಜ್ರಸದೃಶ್ಯವಾದ ಕೀಲಾಯುಧಗಳಿಂದಲೂ ಶತ್ರುಗಳನ್ನು ಬಲವಾಗಿ ಪ್ರಹರಿಸಿದನು. ಕೂರ್ಮಗ್ರೀವನು ತಲೆಯಿಂದಲೂ, ಹಯಗ್ರೀವನು ಪಾದದಿಂದಲೂ ವಾಹನ ಸಹಿತರಾದ ದೈತ್ಯರನ್ನು ನಾಶಪಡಿಸಿದರು. ಪಿಂಡಾಕರನು ಮುಖದಿಂದಲೂ, ಕಲಿಪ್ರಿಯನು ಕೊಂಬುಗಳಿಂದಲೂ ಯುದ್ಧದಲ್ಲಿ ಕೊಬ್ಬಿದ್ದ ದಾನವರನ್ನು ಸೀಳಿದರು. ಆ ರೀತಿ ತನ್ನ ಬಲವೆಲ್ಲವೂ ಗಣಗಳಿಂದ ನಾಶವಾಗುತ್ತಿರುವದನ್ನು ನೋಡಿ ಯೂಥಪತಿಗಳಾದ ಮಹಿಷನೂ, ತಾರಕನೂ ಯುದ್ಧೋನ್ಮುಖರಾಗಿ ಓಡಿ ಬಂದರು. ಆಗ ಪ್ರಮಥರೆಲ್ಲರೂ ದಾನವರ ಆಯುಧಗಳಿಂದ ಪೆಟ್ಟು ತಿಂದು ಬಹಳ ಕೋಪದಿಂದ ದಾನವರನ್ನು ಸುತ್ತುವರೆದು ಯುದ್ಧಮಾಡಲಾರಂಭಿಸಿದರು. ಹಂಸಾಸ್ಯನು ಪಟ್ಟಿಶಾಯುಧದಿಂದಲೂ ಷೋಡಾಶಾಸ್ಯನು ತ್ರಿಶೂಲದಿಂದಲೂ, ಶತಶೀರ್ಷನು ಖಡ್ಗದಿಂದಲೂ, ಶ್ರುತಾಯುಧನು ಗದೆಯಿಂದಲೂ, ವಿಶೋಕನು ಮುಸಲಾಯುಧದಿಂದಲೂ, ಬಂಧುದತ್ತನು ಶೂಲದಿಂದಲೂ, ಮಹಿಷನನ್ನು ಪ್ರಹರಿಸಿದರು. ಹಾಗೆಯೇ ಅವರ ಇತರ ಅನುಯಾಯಿಗಳೂ ಶೂಲ, ಶಕ್ತಿ ಪಟ್ಟಿಶರಿಂದಲೂ ಹಿಂಸಿಸಲ್ಪಡುತ್ತಿರುವ ಆ ಮಹಿಷನು ಮೈನಾಕ ಪರ್ವತದಂತೆ ನಿಶ್ಚಲನಾಗಿದ್ದನೇ ಹೊರತು ಸ್ವಲ್ಪವೂ ಅಲುಗಾಡಲಿಲ್ಲ. ಹಾಗೆಯೇ ತಾರಕನನ್ನು ಭದ್ರಕಾಲಿಯೂ, ಉಲೂಖಲೆಯೂ ಅನೇಕಚೂಡೆಯೂ ಸಹ ನಾನಾವಿಧವಾಗಿ ಆಯುಧಗಳಿಂದ ಸೀಳಿದರು.

೩೦೩. ಮಹಿಷೋ ಗದಯಾ ತೂರ್ಣಂ ಪ್ರಹಾರ್ಯೈಃ ಪ್ರಮಥಾನಪಿ
ಪರಾಜಿತ್ಯ ಪ್ರಯಾತ್ಯೇವ ಕುಮಾರಂ ಪ್ರತಿ ಸಾಯುಧಃ ॥

ಆ ವೀರರಿಬ್ಬರೂ ಪ್ರಮಥರಿಂದಲೂ, ದೇವತೆಗಳಿಂದಲೂ ಅಷ್ಟು ಮಟ್ಟಿಗೆ ಪ್ರಹರಿಸಲ್ಪಟ್ಟರೂ ತಾವು ಎದೆಗುಂದದೇ ಗಣಗಳನ್ನೆಲ್ಲಾ ನಡುಗಿಸುತ್ತ ನಿಂತರು. ಆಗ ಮಹಿಷನು ಗದಾಧಾರಿಯಾಗಿ ರಭಸದಿಂದ ಪ್ರಮಥಗಳೆಲ್ಲರನ್ನೂ ಪ್ರಹಾರದಿಂದ ಪರಾಜಯಗೊಳಿಸಿ ಆಯುಧಧಾರಿಯಾಗಿ ಕುಮಾರಸ್ವಾಮಿಯ ಸಮೀಪಕ್ಕೆ ಬಂದೇ ಬಂದನು. ಹಾಗೇ ಬರುತ್ತಿರುವ ಆ ಮಹಿಷನನ್ನು ಸುಚಕ್ರಾಷನು ನೋಡಿ ತನ್ನ ಚಕ್ರವನ್ನು ಎತ್ತಿ ಹಿಡಿದು ಕೋಪದಿಂದ ಆ ಮಹಿಷನನ್ನು ತಡೆದನು.

೩೦೪. ಗದಾಂ ಭಿತ್ವಾ ಸುತೀಕ್ಷ್ಣಾರಂ ಚಕ್ರಂ ಮಹಿಷ ಮಾದ್ರವತ್
ತತ ಉಚ್ಚುಕ್ರುಶು ದೈರ್ತ್ಯಾ ಹಾ ಹತೋ ಮಹಿಷಸ್ತ್ವಿತಿ ॥

ಗದಾಚಕ್ರಗಳಿಂದ ಯುದ್ಧಭೂಮಿಯಲ್ಲಿ ಮಹಿಷ ಮತ್ತು ಸುಚಕ್ರಾಕ್ಷರಿಬ್ಬರೂ ಬಹಳ ಲಘುವಾಗಿಯೂ, ಆಶ್ಚರ್ಯಕರವಾಗಿಯೂ ಇರುವ ಈ ಯುದ್ಧ ನೈಪುಣ್ಯವನ್ನು ತೋರಿಸಿದರು. ಆಗ ಮಹಿಷನು ಗದೆಯನ್ನೆತ್ತಿ ಗಣಾಗ್ರಣ್ಯನ ಮೇಲೆ ಪ್ರಹರಿಸಿದನು. ಸುಚಕ್ರಾಕ್ಷನೂ ತನ್ನ ಚಕ್ರವನ್ನು ಅವನ ರಥದ ಮೇಲೆ ಪ್ರಯೋಗಿಸಿದನು. ಆ ಚಕ್ರವು ತೀಕ್ಷ್ಣವಾದ ಮುಳ್ಳುಗಳುಳ್ಳ ಆ ಗದೆಯನ್ನು ಕತ್ತರಿಸಿ ಮಹಿಷನನ್ನು ಓಡಿಸಿಕೊಂಡು ಬಂದಿತು. ಆಗ ದೈತ್ಯರೆಲ್ಲರೂ ಹಾಹಾ ಮಹಿಷನು ಹತನಾದನು ಎಂದು ಘಟ್ಟಿಯಾಗಿ ಕಿರಿಚಿದರು. ಆ ಧ್ವನಿಯನ್ನು ಕೇಳಿದೊಡನೆಯೇ ಬಾಣನು ಪ್ರಾಸಾಯುಧವನ್ನು ಧರಿಸಿ ವೇಗ ದಿಂದ ಅಲ್ಲಿಗೆ ಓಡಿ ಬಂದನು. ಬಂದೊಡನೆಯೇ ಕೆಂಪಾದ ಅಚ್ಚುಳ್ಳ ಭಯಂಕರವಾದ ಆ ಚಕ್ರವನ್ನು ಐನೂರು ಮುಷ್ಟಿ ಪ್ರಹಾರದಿಂದ ಹೊಡೆದನು. ಐದುನೂರು ಬಾಣಗಳಿಂದ ಚುಚಕ್ರಾಕ್ಷನನ್ನು ಬಾಣನು ಬಂಧಿಸಿಯೂ ಆಯಿತು. ಬಲಿಷ್ಠನಾದ ಆ ಚುಕ್ರಾಕ್ಷನನ್ನು ಬಾಣನ ಬಂಧನದಿಂದ ನಿರೋಧಿಸಲ್ಪಟ್ಟು ನಿಷ್ಪ್ರಯತ್ನನಾಗಿಯೂ, ನಿರ್ಗತಿಯಾಗಿಯೂ ಆದನು. ಹಾಗೆ ಬಾಣಾಸುರನಿಂದ ಬದ್ಧನಾದ ಸುಚಕ್ರಾಕ್ಷನನ್ನು ನೋಡಿ ಬಲಶಾಲಿಯಾದ ಮಕರಾಕ್ಷನು ಗದಾಪಾಣಿಯಾಗಿ ಓಡಿ ಬಂದನು. ಗದೆಯಿಂದ ಬಾಣನ ತಲೆಯ ಮೇಲೆ ವೇಗವಾಗಿ ಹೊಡೆದನು. ಬಾಣನೂ ಸಹ ಆ ಪ್ರಹಾರವನ್ನು ಸಹಿಸಿಕೊಂಡು ದೃಢಬುದ್ಧಿ ಯಿಂದ ಲಜ್ಜೆಗೊಂಡು ಯುದ್ಧವನ್ನು ಬಿಟ್ಟು ಶಾಲಿ ಗ್ರಾಮಕ್ಷೇತ್ರಕ್ಕೆ ಹೊರಟುಬಂದನು. ಮಕರಾಕ್ಷನಿಂದ ಹೊಡೆಯಲ್ಪಟ್ಟ ಬಾಣನು ಪರಾಙ್ಮುಖನಾಗಿಯೇ ಆದನು.

೩೦೫. ತತಃ ಸ್ವ ಬಲಮೀಕ್ಷ್ಯೈದ ಪ್ರಭಗ್ನಂ ತಾರಕೋ ಬಲೀ
ಖಡ್ಗೋದ್ಯತಕರೋ ದೈತ್ಯಃ ಪ್ರದುದ್ರಾವಗಣೇಶ್ವರಾನ್ ।

ಎಲೈ ಸುಮುನಿಯೇ, ಆ ದೈತ್ಯಬಲವೆಲ್ಲವೂ ಭಗ್ನವಾಗಿ ಹೋಯಿತು. ಆಗ ಗಣಾಧಿಪತಿಗಳೆಲ್ಲರೂ ಭಗ್ನರಾದ ದೈತ್ಯ ಸೇನೆಯನ್ನು ಯುದ್ಧಭೂಮಿಯಿಂದ ಓಡಿಸಿದರು. ಆಗ ಬಲಿಷ್ಠನಾದ ತಾರಕಾಸುರನು ಭಗ್ನವಾದ ತನ್ನ ಬಲವನ್ನು ನೋಡಿ ಖಡ್ಗಧಾರಿಯಾದ ಗಣಾಧಿಪರೆಲ್ಲರನ್ನೂ ಎದುರಿಸಲು ವೇಗದಿಂದ ಬಂದನು.

ಗಣಗಳೆಲ್ಲವೂ ಭಯದಿಂದ ಭಗ್ನವಾದುದನ್ನು ನೋಡಿ ಷಣ್ಮುಖನು ಆ ಖಡ್ಗಧಾರಿ ಯಾದ ಆ ತಾರಕನಿಂದ ಹಂಸ ಹಂಸವಕ್ತ್ರನೇ ಮೊದಲಾದ ಗಣಾಧಿಪರೂ ಮಾತೃವರ್ಗವೂ ಸಹ ಪರಾಜಿತರಾಗಿ ಭಯದಿಂದ ಓಡಿಬಂದು ಸ್ಕಂದನನ್ನು ಶರಣು ಹೊಕ್ಕರು.

೩೦೬. ಭಗ್ನಾನ ಗಣಾನ್ವೀಕ್ಷ ಮಹೇಶ್ವರಾತ್ಮಜ
ತಂ ತಾರಕಂ ಸಾಸಿನಮಾಪಂತತಮ ॥
ದೃಷ್ಟ್ವೈವ ಶಕ್ತ್ಯಾ ಹೃದಯೇ ಬಿಭೇದ
ಸ ಭಿನ್ನ ಮರ್ಮಾ ನ್ಯಪಿತತ್ ಪೃಥಿವ್ಯಾಮ್ ॥

ಆಗ ಸ್ಕಂದನು ತಾರಕನನ್ನು ನೋಡಿ ಶಕ್ತ್ಯಾಯುಧದಿಂದ ಅವನ ಹೃದಯದಲ್ಲಿ ಪ್ರಹರಿಸಿದನು. ಕೂಡಲೇ ತಾರಕನು ಮರ್ಮಭೇದಹೊಂದಿ ಭೂಮಿಯಲ್ಲಿ ಬಿದ್ದನು. ಆ ಭಾತೃವು ನಷ್ಟವಾದುದನು ತಿಳಿದು ಮಹಿಷನು ಬಹಳ ಭಯಾಕ್ರಾಂತನಾಗಿ ಯುದ್ಧಭೂಮಿಯನ್ನು ಬಿಟ್ಟು ಹಿಮಪರ್ವತಕ್ಕೆ ಓಡಿದನು. ಆಗ ಶೂರನಾದ ತಾರಕನು ಯುದ್ಧದಲ್ಲಿ ಮರಣಹೊಂದಿದನು. ಮಹಿಷನು ಹಿಮಪರ್ವತಕ್ಕೆ ಓಡಿದುದನ್ನು ನೋಡಿ ಬಾಣನೂ ಭಯಪಟ್ಟು ಅಪರಾಧಿಯಾದ ದೈತ್ಯಬಲವು ಹೊಡೆಯಲ್ಪಡುತ್ತಿದ್ದರೂ ಸಹ ತಾನು ಮಾತ್ರ ಸಮುದ್ರವನ್ನು ಪ್ರವೇಶಿಸಿ ಅಲ್ಲಿ ಮರೆಯಾದನು.

ಆಗ ಕುಮಾರಸ್ವಾಮಿಯು ತಾರಕನನ್ನು ಯುದ್ಧದಲ್ಲಿ ಕೊಂದು ಶಕ್ತ್ಯಾಯುಧವನ್ನು ಧರಿಸಿ ಮಹಿಷನನ್ನೂ ಕೊಲ್ಲಲು ತನ್ನ ಮಯೂರದ ಮೇಲೆ ಕುಳಿತು ವೇಗದಿಂದ ಹೊರಟನು. ಆ ಮಹಿಷನೂ ಸಹ ಹಿಂಬಾಲಿಸಿ ಬರುತ್ತಿರುವ ಮಯೂರವಾಹನ ನಾಗಿಯೂ ಶಕ್ತಿಧಾರಿಯಾಗಿಯೂ ಇರುವ ಕುಮಾರನನ್ನು ನೋಡಿ ಕೈಲಾಸವನ್ನೂ ಹಿಮಾಚಲವನ್ನೂ ಬಿಟ್ಟು ಕ್ರೌಂಚಪರ್ವತಕ್ಕೆ ಹೋಗಿ ಅಲ್ಲಿ ಗುಹೆಯಲ್ಲಿ ಅಡಗಿ ಕೊಂಡನು. ಹಾಗೆ ಗುಹೆಯಲ್ಲಿ ಅಡಗಿಕೊಂಡ ಆ ದೈತ್ಯನನ್ನು ಕ್ರೌಂಚವು ಅಲ್ಲಿಯೇ ಭದ್ರವಾಗಿ ರಕ್ಷಿಸಿತು. ಕುಮಾರಸ್ವಾಮಿಯು ಅಂತಹ ಕ್ರೌಂಚವನ್ನು ನೋಡಿ ತನ್ನ ಬಂಧುವನ್ನು ತಾನು ಹೇಗೆ ನಾಶಮಾಡಲಿ ಎಂಬ ಚಿಂತೆಯಿಂದ ಹಾಗೆಯೇ ನಿಂತನು.

೩೦೭. ಗಾಂ ಬ್ರಾಹ್ಮಣಂ ವೃದ್ಧಮಥಾಪಿ ಚಾಢ್ಯಂ
ಬಾಲಂ ಸ್ವ ಬಂಧುಂ ಲಲನಾಂ ಸುದುಷ್ಟಾಮ್ ॥
ಕೃತಾಪರಾಧಾಮಪಿ ನೈವ ವಧ್ಯಾದ್
ಆಚಾರ್ಯಮುಖ್ಯಾ ಗುರವಸ್ತಥೈವ ।

ಅನಂತರ ಚತುರ್ಮುಖನನ್ನು ಹರನು ವಿಷ್ಣುವು ಇಂದ್ರನೂ ಸಹ ಅಲ್ಲಿ ಬಂದರು. ಇಂದ್ರನು ಕುಮಾರನನ್ನು ಕುರಿತು ಶೈಲಸಮೇತನಾದ ಈ ಮಹಿಷನನ್ನು ನಾಶಪಡಿಸು. ದೇವತೆಗಳ ಕಾರ್ಯವನ್ನು ನೀನು ಮಾಡಿದಂತಾಗುವದೆಂದು ಪ್ರೋತ್ಸಾಹಿಸಿದನು. ಆಗ ಷಣ್ಮುಖನು ಪ್ರಿಯವಾಗಿಯೂ ಸತ್ಯವಾಗಿಯೂ ಇರುವ ಆ ಮಾತನ್ನು ಕೇಳಿ ನಗುತ್ತ ದೇವತೆಗಳನ್ನು ಕುರಿತು ಹೀಗೆಂದನು. ''ಮಾತಾಮಹನಾದ ಹಿಮವಂತನಿಗೆ ಮೊಮ್ಮಗ ನಾಗಿಯೂ ಮತ್ತೊಂದು ವಿಧದಲ್ಲಿ ನನಗೆ ಬಂಧುವಾಗಿಯೂ ತಾಯಿಗೆ ಭ್ರಾತೃಪುತ್ರ ನಾಗಿಯೂ ಇರುವ ಕ್ರೌಂಚನನ್ನೂ ಹೇಗೆ ನಾಶಪಡಿಸಲಿ. ವೇದಜ್ಞರಾದ ಮಹರ್ಷಿಗಳೂ ಸಹ ಯಾವ ಪುರಾತನವಾದ ವೇದವಾಣಿಯನ್ನು ಅವಲಂಬಿಸಿ ಸ್ವರ್ಗಗಾಮಿ ಗಳಾಗುವರೋ, ಪಾಪಿಗಳೂ ಸ್ವರ್ಗಹೊಂದುವರೋ, ಅಂತಹ ಶ್ರುತಿಯನ್ನು ಹೇಗೆ ಅತಿಕ್ರಮಿಸಲಿ? ಆ ವಚನವೂ ಸಹ ಗೋವನ್ನೂ, ಬ್ರಾಹ್ಮಣನನ್ನೂ, ವೃದ್ಧನನ್ನೂ ಆಚಾರ್ಯ

ಗುರು ಇವರನ್ನು ಸಹ ಅಪರಾಧಿಗಳಾಗಿದ್ದರೂ ಕೊಲ್ಲಕೂಡದೆಂದು ಹೇಳುತ್ತಿದೆಯಲ್ಲ ?'' ಎಂದನು. ಎಲೈ ಸುರಾಗ್ರೇಸರರೇ, ಈ ರೀತಿಯಾದ ಧರ್ಮರಹಸ್ಯವನ್ನು ತಿಳಿದ ನಾನು ಭ್ರಾತೃವಾಗಿಯೂ, ಮಾತುಲ (ಮಾವ) ಪುತ್ರನಾಗಿಯೂ ಇರುವ ಕ್ರೌಂಚನನ್ನು ವಧಿಸುವದಿಲ್ಲ. ಆದರೆ ಆ ದೈತ್ಯನು ಗುಹೆಯಿಂದ ಹೊರಗೆ ಬರುವಂತೆ ಮಾಡಿ ಅವನನ್ನು ಶಕ್ತ್ಯಾಯುಧದಿಂದ ನಾಶಪಡಿಸುತ್ತೇನೆ ಎಂದನು.

೩೦೮. ಶ್ರುತ್ವಾ ಕುಮಾರವಚನಂ ಭಗವಾನ್ ಮಹರ್ಷೇ
ಕೃತ್ವಾ ಮತಂ ಸ್ವಹೃದಯೇ ಗುಹಮಾಹ ಶಕ್ರಃ ॥
ಮತ್ತೋ ಭವಾನ್ ಮತಿಮಾನ್ ವದಸೇ ಕಿಮಿತ್ಥಂ
ವಾಕ್ಯಂ ಶೃಣುಷ್ವ ಹರಿಣಾ ಗದಿತಂ ಹಿ ಪೂರ್ವಮ್

ಆಗ ಇಂದ್ರನು ಕುಮಾರಸ್ವಾಮಿಯ ಈ ಮಾತನ್ನು ಕೇಳಿ ಇವನ ಅಭಿಪ್ರಾಯವನ್ನೂ ತಿಳಿದು ಅವನನ್ನು ಕುರಿತು ಹೀಗೆ ಹೇಳುತ್ತಾನೆ. ''ಕುಮಾರ, ನನಗಿಂತಲೂ ನೀನು ಬುದ್ಧಿವಂತನೇ ? ಹೀಗೆ ಏಕೆ ಹೇಳುತ್ತಿಯೇ? ಮೊದಲೇ ಹರಿಯು ಹೇಳಿದ ಮಾತನ್ನು ಗಮನಿಸಿ (ಕುರುದೇವ ಕಾರ್ಯಂ) ಅದರಂತೆ ನಡೆದುಕೋ ?

೩೦೯. ನೈಕಸ್ಯಾರ್ಥೇ ಬಹೂನ್ ಹನ್ಯಾದಿತಿ ಶಾಸ್ತ್ರೇಷು ನಿಶ್ಚಯಃ ॥
ಏಕಂ ಹನ್ಯಾದ್ಬಹೂನಾಂ ಹಿ ನ ಪಾಪಿ ತೇನ ಜಾಯತೇ ।

ಶಾಸ್ತ್ರಗಳಲ್ಲಿ ಇರುವ ಧರ್ಮದ ರಹಸ್ಯಾರ್ಥ ಹೀಗಿದೆ. ನೋಡು, ಒಬ್ಬನ ಹಿತಕ್ಕಾಗಿ ಬಹಳ ಜನರನ್ನು ಕೊಲ್ಲಬಾರದು. ಬಹುಜನಗಳ ಹಿತಕ್ಕಾಗಿ ಒಬ್ಬನನ್ನು ಕೊಲ್ಲಬಹುದು. ಆದರಿಂದ ಅವನಿಗೆ ಪಾಪವಿಲ್ಲ. ಇದನ್ನು ತಿಳಿದೇ ನಾನು ಪೂರ್ವದಲ್ಲಿ ಸೋದರನಾಗಿಯೂ, ಏಕೋದರನಾಗಿಯೂ ನಮುಚಿಯನ್ನು ಮಯನೊಡನೆ ಕೊಂದೆನು. ಆದುದರಿಂದ ಅನೇಕರ ಹಿತಕ್ಕಾಗಿ ಕ್ರೌಂಚ ಸಹಿತನಾದ ಮಹಿಷನನ್ನು ಕಾಲಿನಿಂದ ಆಕ್ರಮಿಸಿ ಅಗ್ನಿದತ್ತವಾಗಿರುವ ಶಕ್ತ್ಯಾಯುಧದಿಂದ ನಾಶಪಡಿಸು.

೨೧೦. ಶಕ್ರಃ ಪ್ರಾಹಾಥ ಬಲವಾನ್ ಜಾಯತೇ ಕೃತ್ತಿಕಾಸುತ ।
ಪ್ರದಕ್ಷಿಣಂ ಶೀಘ್ರತರಂ ಯಃ ಕುರ್ಯಾತ್ ಕ್ರೌಂಚಮೇವಹಿ ॥

ಇಂದ್ರನ ಮಾತನ್ನು ಕೇಳಿ ಕೋಪದಿಂದ ಕೆಂಗಣ್ಣುಳ್ಳ ಕುಮಾರನು ವೇಗದಿಂದ ನಡುಗುತ್ತ ಇಂದ್ರನನ್ನು ಕುರಿತು ''ಎಲೈ ಮೂಢನೇ, ನಿನ್ನ ಬಾಹುಬಲವು ಎಷ್ಟಿರಬಹುದು! ಪ್ರಪಂಚದಲ್ಲೆಲ್ಲಾ ತಾನೇ ಬುದ್ಧಿವಂತನೆಂದು ತಿಳಿದು ನನ್ನನ್ನೇ ನಿಂದಿಸುತ್ತಿದ್ದೀಯೇ'' ಎಂದನು. ಅದಕ್ಕೆ ಪ್ರತಿಯಾಗಿ ಇಂದ್ರನು ''ಗುಹ ನಾನು ನನ್ನಿಂದಲೇ ಬಲಶಾಲಿಯಾಗಿದ್ದೇನೆ'' ಎಂದನು. (ನಿನ್ನಂತೆ ಇತರರ ಸಹಾಯದಿಂದ ಬಲ ಹೊಂದಿಲ್ಲವೆಂದು ಗೂಢವಾದ ನಿಂದೆ ತೋರುತ್ತದೆ.) ಆಗ ''ಗುಹನು ನೀನು ಬಲಶಾಲಿಯಾಗಿದ್ದರೆ ಬಾ, ಯುದ್ಧಕ್ಕೆ ಬಾ'' ಎಂದು ಇಂದ್ರನನ್ನು ಕರೆದನು. ಆಗ ಇಂದ್ರನು ''ಈ ಕ್ರೌಂಚಪರ್ವತವನ್ನು ಯಾರು ಶೀಘ್ರವಾಗಿ ಪ್ರದಕ್ಷಿಣೆ ಮಾಡುವರೋ ಅವರೇ ಬಲಶಾಲಿ'' ಎಂದು ಭಾವಿಸಲ್ಪಡತಕ್ಕದ್ದು ಎಂದನು. ಈ ಮಾತನ್ನು ಕೇಳಿದೊಡನೆಯೇ ಸ್ಕಂದನು ಮಯೂರವನ್ನು ಬಿಟ್ಟು ಆ ಕ್ಷಣದಲ್ಲಿಯೇ ಪಾದಚಾರಿಯಾಗಿ ಪ್ರದಕ್ಷಿಣೆ

ಮಾಡಲು ಹೊರಟನು. ಇಂದ್ರನೂ ಆನೆಯಿಂದಿಳಿದು ನಿಂತಲ್ಲಿಯೇ ಪಾದಗಳಿಂದ ಪ್ರದಕ್ಷಿಣೆ ಮಾಡಿ ನಿಂತನು. ಆಗ ಗುಹನು ಪ್ರದಕ್ಷಿಣೆ ಮಾಡಿ ಇಂದ್ರನ ಸಮೀಪಕ್ಕೆ ಬಂದು, ''ಎಲೈ ಮೂಢನೇ, ಏಕೆ ಹಾಗೆಯೇ ನಿಂತೆ ?'' ಎಂದು ಕೇಳಲಾಗಿ, ಇಂದ್ರನು ಕೌಟಿಲ್ಯದಿಂದ ''ನಾನು ಮೊದಲೇ ಪ್ರದಕ್ಷಿಣೆ ಮಾಡಿ ಬಂದೆನು'' ಎಂದನು. ''ನೀನೇ ಮೊದಲು ಪ್ರದಕ್ಷಿಣೆ ಮಾಡಿ ಬಂದೆಯಾ?'' ಎಂದು ಕುಮಾರನು ಇಂದ್ರನನ್ನು ಕೇಳಿದನು.

**೩೧೧. ಅಥೋವಾಚ ಹರಿಃ ಸ್ಕಂದಂ ಪ್ರಷ್ಟುಮರ್ಹಸಿ ಪರ್ವತಂ ।**
**ಯೋಽಯಂ ವಕ್ಷ್ಯತಿ ಪೂರ್ವಂ ಸ ಭವಿಷ್ಯತಿ ಮಹಾಬಲಃ ॥**

ನಾನು ಮೊದಲು ನಾನು ಮೊದಲು ಎಂದು ವಿವಾದಮಾಡುತ್ತ ಶಂಕರ, ಬ್ರಹ್ಮ, ವಿಷ್ಣು ಇವರುಗಳ ಸಮೀಪಕ್ಕೆ ಬಂದು ತಮ್ಮ ವಿವಾದವನ್ನು ಹೇಳಿಕೊಂಡರು. ಆಗ ಹರಿಯು ಸ್ಕಂದನನ್ನು ಕುರಿತು ಈ ವಿಷಯದಲ್ಲಿ ನೀನು ಆ ಪರ್ವತವನ್ನೇ ಕೇಳಬೇಕು. ಆ ಪರ್ವತವು ಯಾರು ಮೊದಲು ಎಂದು ಹೇಳುತ್ತದೆಯೋ ಅವರೇ ಬಲಶಾಲಿಗಳೆಂದು ತಿಳಿಯಬೇಕು ಎಂದನು.

**೩೧೨. ಏವಂ ಬ್ರುವಂತಂ ಕ್ರಾಂಚಂ ಸ ಕ್ರೋಧಾತ್ ಪ್ರಸ್ಫುರಿತಾಧರಃ**
**ಬಿಭೇದ ಶಕ್ತ್ಯಾಕೌಟಲ್ಯಾನ್ಮಹಿಷೇಣ ಸಮಂ ತದಾ ॥**

ಹರಿಯ ಆ ಮಾತನ್ನು ಕೇಳಿ ಸ್ಕಂದನು ಕ್ರೌಂಚಪರ್ವತಕ್ಕೆ ಹೋಗಿ ''ಯಾರು ನಿನ್ನನ್ನು ಮೊದಲು ಪ್ರದಕ್ಷಿಣೆ ಮಾಡಿದ''ರೆಂದು ಕೇಳಲು, ಆ ಕ್ರೌಂಚವು ಇಂದ್ರನೇ ಮೊದಲು ಪ್ರದಕ್ಷಿಣೆ ಮಾಡಿದನೆಂದೂ, ಅನಂತರ ನೀನು ಮಾಡಿದೆ ಎಂದೂ ಸೂಕ್ಷ್ಮ ದೃಷ್ಟಿಯಿಂದ ಉತ್ತರ ಹೇಳಿತು. ಹೀಗೆ ಹೇಳಿದ ಆ ಕ್ರೌಂಚನನ್ನು ನೋಡಿ ಕೋಪದಿಂದ ನಡುಗಿದ ತುಟಿಯುಳ್ಳ ಆ ಕುಮಾರನು ಕೌಟಿಲ್ಯವನ್ನಾಶ್ರಯಿಸಿ ಮಹಿಷನೊಡಗೂಡಿದ ಕ್ರೌಂಚನನ್ನು ಶಕ್ತ್ಯಾಯುಧದಿಂದ ಭೇದಿಸಿದನು.

**೩೧೩. ಸ್ವಮಾತುಲಂ ವೀಕ್ಷ್ಯ ಬಲೀ ಕುಮಾರಃ**
**ಶಕ್ತಿಂ ಸಮುತ್ಪಾಟ್ಯ ನಿಹಂತುಕಾಮಃ ॥**
**ನಿವಾರತಶ್ಚಕ್ರಧರೇಣ ವೇಗಾ -**
**ದಾಲಿಂಗ್ಯ ದೋರ್ಭ್ಯಾಂ ಗುರುರಿತ್ಯುದೀರ್ಯ ।**

ಆಗ ಮಗನಾದ ಕ್ರೌಂಚನು ಹತನಾದುದನ್ನು ಕಂಡು ಹಿಮವತ್ಪುತ್ರನಾದ ಸುನಾಭನು ವೇಗದಿಂದ ಓಡಿಬಂದನು. ಬ್ರಹ್ಮ, ಇಂದ್ರ, ರುದ್ರ ಮರುತ್ತುಗಳು ಇವರೆಲ್ಲರೂ ಗುಹನಿಂದ ಸತ್ತ ಮಹಿಷನನ್ನು ನೋಡಿ ಸ್ವರ್ಗಕ್ಕೆ ನಡೆದರು. ಆಗ ಓಡಿಬಂದ ಮಾವನಾದ ಸುನಾಭನನ್ನು ಕುಮಾರಸ್ವಾಮಿಯು ಶಕ್ತ್ಯಾಯುಧದಿಂದ ನಾಶಪಡಿಸಲು ಪ್ರಯತ್ನಿಸಿದನು. ಆಗ ಹರಿಯು ವೇಗದಿಂದ ಓಡಿಬಂದು ತನ್ನ ತೋಳುಗಳಿಂದ ಆ ಸುನಾಭನನ್ನು ತಟ್ಟಿ ಹಿಡಿದು ಗುರುಜನರನ್ನು ಕೊಲ್ಲಕೂಡದೆಂದು ಹೇಳುತ್ತ ತಡೆದನು.

ಆಗ ಹಿಮವಂತನು ಪುತ್ರಶೋಕದಿಂದ ದುಃಖಿಸುತ್ತಿರುವ ಸುನಾಭನ ಸಮೀಪಕ್ಕೆ ಬಂದು ಕೈಯಿಂದ ಅವನನ್ನು ಹಿಡಿದುಕೊಂಡು ಸಮಾಧಾನಪಡಿಸಿ ಕರೆದುಕೊಂಡು ಹೋದನು. ಗರುಡವಾಹನನಾದ ಹರಿಯೂ ಸಹ ಮಯೂರವಾಹನನಾದ ಕುಮಾರನನ್ನು

ಸಮಾಧಾನಪಡಿಸಿಸ್ವರ್ಗಲೋಕಕ್ಕೆ ಒಯ್ದನು. ಅನಂತರ ಗುಹನು ಸುರಾಗ್ರಣ್ಯವಾದ ಹರಿಯನ್ನು ಕುರಿತು ''ಎಲೈ ಪೂಜ್ಯನೇ'' ನನ್ನ ಅಜ್ಞಾನದಿಂದ ವಿವೇಕಿಯಾಗಿಯೂ ಭ್ರಾತೃವಾಗಿಯೂ ಮಾತುಲಪುತ್ರನಾಗಿಯೂ ಇದ್ದ ಕ್ರೌಂಚನು ನಷ್ಟನಾದನು. ಇಂತಹ ಅಕಾರ್ಯಕ್ಕೆ ಒಳಗಾದ ನಾನು ಅನುತಾಪದಿಂದ ಪ್ರಾಯಶ್ಚಿತ್ತ ರೂಪವಾದ ಕಾಯಶೋಷವನ್ನು ಹೊಂದುತ್ತೇನೆ ಎಂದನು. ಆಗ ಹರಿಯು ಅವನ ಅನುತಾಪವನ್ನು ನೋಡಿ ''ಕುಮಾರನೇ, ದುಃಖಪಡಬೇಡ. ಪೃಥೂದಕವೆಂಬ ಸರ್ವಪಾಪನಾಶಕವಾದ ತೀರ್ಥವಿದೆ. ಅಲ್ಲಿ ಹೋಗಿ ಓಘವತಿಯಲ್ಲಿ ಸ್ನಾನಮಾಡಿ ಅಲ್ಲಿರುವ ಶಂಕರನನ್ನು ಭಕ್ತಿಯಿಂದ ದರ್ಶನಮಾಡಿದಲ್ಲಿ ಸಕಲಪಾಪಗಳನ್ನೂ ಹೋಗಲಾಡಿಸಿಕೊಂಡು ಸೂರ್ಯನಂತೆ ಪ್ರಕಾಶಹೊಂದಿ ಬೆಳಗುತ್ತಿಯೇ ಎಂದು'' ಸಮಾಧಾನಗೊಳಿಸಿದನು. ಹೀಗೆ ಹರಿಯಿಂದ ಹೇಳಲ್ಪಟ್ಟ ಕುಮಾರನು ಪೃಥೂದಕತೀರ್ಥಕ್ಕೆ ಹೋಗಿ ಅಲ್ಲಲ್ಲಿ ಸ್ನಾನಮಾಡಿ ಶಂಭುವನ್ನು ದರ್ಶನಮಾಡಿ ದೇವತೆಗಳನ್ನು ಪೂಜಿಸಿ ನಿಷ್ಕಲ್ಮಷನಾಗಿ ಸೂರ್ಯನಂತೆ ಜ್ವಲಿಸುತ್ತ ಹರನ ವಾಸಸ್ಥಾನವಾದ ಪರ್ವತಕ್ಕೆ ಹೊರಟುಹೋದನು.

೩೧೪. ತಮಾಹ ವಿಷ್ಣುಃ ವ್ರಜಃ ತೀರ್ಥವರ್ಯಂ
ಪೃಥೂದಕಂ ಪಾಪ ಹರಂ ಕುಮಾರ ॥
ಸ್ನಾತ್ವೌಘ ವತ್ಯಾಂ ಹರಮೀಕ್ಷ್ಯ ಭಕ್ತ್ಯಾ
ಭವಿಷ್ಯಸೇ ಸೂರ್ಯ ಸಮ ಪ್ರಭಾವಃ ॥

ಸುಚಕ್ರನೇತ್ರನೂ ಸಹ ವಾಯು ಭಕ್ಷನಾಗಿ ಮಹಾಶ್ರಮದಲ್ಲಿಯೇ ತಪಸ್ಸನ್ನು ಮಾಡಿ ಶಂಕರನನ್ನು ಪ್ರೀತಿಗೊಳಿಸಿದನು. ಸಂತುಷ್ಟನಾದ ಶಂಕರನನ್ನು ಕ್ರೌಂಚನಾಶಕನಾದ ಕುಮಾರನಂತೆ ತಾನೂ ಬಾಣನ ಬಾಹುವನ್ನು ಕತ್ತರಿಸಬೇಕೆಂದೂ ಅದಕ್ಕಾಗಿ ತನಗೆ ಆಯುಧವು ವರರೂಪದಿಂದ ಕೊಡಲ್ಪಡಬೇಕೆಂದೂ ಪ್ರಾರ್ಥಿಸಿದನು. ಆಗ ಶಂಕರನು ಅವನನ್ನು ಕುರಿತು ''ಆಗಲಿ ನೀನು ಹೊರಡು, ನಿನ್ನ ಚಕ್ರಾಯುಧಕ್ಕೆ ಆ ವರವನ್ನು ಕೊಟ್ಟಿದ್ದೇನೆ. ನಿಸ್ಸಂಶಯ ವಾಗಿಯೂ ನೀನು ಬಾಣಸುರನ ಬಾಹುವನ್ನು, ವನವನ್ನು ಜಯಿಸುತ್ತಿಯೇ'' ಎಂದನು. ಶಂಭುವಿನಿಂದ ಈ ಪ್ರಕಾರವಾದ ವರವು ದೊರೆತ ಮೇಲೆ ಗಣೇಶ್ವರನಾದ ಆ ಸುಚಕ್ರನೇತ್ರನು ಸ್ಕಂದನ ಸಮೀಪಕ್ಕೆ ಅವನ ಪಾದಗಳಿಗೆ ವಂದಿಸಿ ತನಗೆ ದೊರೆತ ಶಂಕರಾನುಗ್ರಹವನ್ನು ಸಂತೋಷದಿಂದ ಸ್ಕಂದನಿಗೆ ಹೇಳಿದನು. ಈ ಪ್ರಕಾರ ಶಂಕರ ಪುತ್ರನಾದ ಷಣ್ಮುಖನ ಶಕ್ತ್ಯಾಯುಧದಿಂದ ಮಹಿಷಾಸುರ ಮತ್ತು ತಾರಕಾಸುರ ಇವರು ಹತರಾದುದನ್ನು ನಿನಗೆ ಹೇಳಿಯಾಯಿತು. ಈ ಉಪಾಖ್ಯಾನವು ಕ್ರೌಂಚನ ಮೃತ್ಯುವಿಗೆ ಬೋಧಕವಾಗಿಯೂ, ಶರಣಾಗತರಾದ ಭಕ್ತರಿಗೆ ಪಾಪನಾಶಕವಾಗಿಯೂ ಪುಣ್ಯವರ್ಧಕವಾಗಿಯೂ ಇರುತ್ತದೆ.

ವಾಮನ ಮಹಾಪುರಾಣದಲ್ಲಿ ಮಹಿಷನ ಹನನ ಎಂಬ ಐವತ್ತೆಂಟನೆಯ ಅಧ್ಯಾಯವು ಮುಗಿದುದು

—o—

ಉವಾಚ-ಯೋಽಸೌಮಂತ್ರಯತಾಂ ಪ್ರಾಪ್ತೋದೈತ್ಯಾನಾಂಶರತಾಡಿತಃ ॥
ಸ ಕೇನ ವದ ನಿರ್ಭಿನ್ನಃ ಶರೇಣಃ ದಿತಿಜೇಶ್ವರ ॥

ಪುಲಸ್ತ್ಯ ಉವಾಚ

೩೧೫. ಆಸಿನ್ನೃಪೋರಘು ಕುಲೇ ರಿಪುಜನ್ಮಹರ್ಷೇ
ತಸ್ಯಾತ್ಮಜೋ ಗುಣಾಗಣೈಕನಿಧಿರ್ಮಹಾತ್ಮಾ ॥
ಶೂರೋಽರಿ ಸೈನ್ಯ ದಮನೋ ಬಲವಾನ್ ಸುಧೃಷ್ಟೋ
ವಿಪ್ರಾಂಧದೀನ ಕೃಪಣಾರ್ತಿ ಶಮಃ ಪೃಥಿವ್ಯಾಮ್

೩೧೬. ಋತಧ್ವಜೋ ನಾಮ ಮಹಾಮಹೀಶಃ
ಸ ಗಾಲವಾರ್ಥೆ ತುರಗಾಧಿರೂಢಃ ॥
ಪಾತಾಲಕೇತುಂ ನಿಜಘಾನ ಪೃಷ್ಠೇ
ಬಾಣೇನ ಚಂದ್ರಾರ್ಧನಿಭೇನ ವೇಗಾಃ ।

''ಪಾತಾಳದಲ್ಲಿ ದೈತ್ಯಧುರೀಣರೆಲ್ಲ ಗುಪ್ತ ಮಂತ್ರಾಲೋಚನೆ ನಡಿಸಿದಾಗ ಬಾಣ ನಟ್ಟು ಗಾಯಗೊಂಡ ಪಾತಾಳಕೇತು ಎಂಬ ದಾನವನು ಅಲ್ಲಿಗೆ ಬಂದನೆಂದು ತಾವು ಹಿಂದೆ ಹೇಳಿದಿರಿ. ಪಾತಾಳ ಕೇತುವಿಗೆ ಅಂಥ ಭೀಕರ ಬಾಣವನ್ನು ಬಿಟ್ಟು ನೆತ್ತರು ಬಸಿಯುವಂತೆ ಮಾಡಿದವರು ಯಾರು? ಅದನ್ನು ತಿಳಿಸಬೇಕು'' ಎಂದು ನಾರದರು ಪ್ರಶ್ನೆ ಮಾಡಿದರು. ಅದಕ್ಕೆ ಉತ್ತರ ರೂಪವಾಗಿ ಪುಲಸ್ತ್ಯಮುನಿಗಳು ನುಡಿದರು - ''ರಘುವಂಶದಲ್ಲಿ ಸದ್ಗುಣಗಳಿಗೆ ಗಣಿಯಂತೆ ಇರುವ ಓರ್ವ ಮಹಾತ್ಮನಾದ ಮಹಾರಾಜನು ಆಗಿಹೋದನು. ಅವನಿಗೆ ಶತ್ರುಗಳ ಸೈನ್ಯವನ್ನು ಸದೆಬಡಿಯಬಲ್ಲ ಶೂರ ವೀರ ಧೀರನಾದ ಋತಧ್ವಜ ಎಂಬ ಹೆಸರಿನ ಬಲಿಷ್ಠ ಮಗನಿದ್ದನು. ಅವನು ಧರಿಣೀ ಮಂಡಲದಲ್ಲಿದ್ದ ಬ್ರಾಹ್ಮಣ, ಕುರುಡ, ದರಿದ್ರ, ದೀನ, ಅನಾಥ ಊನ, ಹೀನ ಜನರ ದುಃಖಗಳನ್ನೆಲ್ಲ ದೂರ ಮಾಡುತ್ತಿದ್ದನು. ಬಡವರ ಕೈವಾರಿಯಾದ ಈ ಮಹಾರಾಜನು ಒಂದು ದಿನ ಕುದುರೆ ಏರಿ ಗಾಲವ ಋಷಿಯ ದರ್ಶನಕ್ಕಾಗಿ ಹೊರಟಿದ್ದನು. ಅದೇ ವೇಳೆಯಲ್ಲಿಯೇ ಅವನು ತನ್ನ ಅರ್ಧ ಚಂದ್ರಾಕಾರದ ಬಾಣದಿಂದ ಪಾತಾಳ ಕೇತುವಿನ ಬೆನ್ನಿನಲ್ಲಿ ಹೊಡೆದನು.

**ನಾರದ** :- ಆ ನರನಾಥನು ಗಾಲವ ಮುನಿಯ ಅಶ್ರಮಕ್ಕೆ ಹೋದದ್ದೇಕೆ? ಪಾತಾಳ ಕೇತುವಿನನ್ನು ಹೊಡೆದದ್ದೇಕೆ?

೩೧೭. ನ ಚೇಸ್ಕತೇಽಸೌ ತಪಸೋ ವ್ಯಯಂಹಿ
ಶಕ್ನೋತಿ ಕರ್ತುಂ ತ್ವಥ ಭಸ್ಮಸಾತ್ ತಮ್ ।
ಆಕಾಶಮೀಕ್ಷಾಥ ಸ ದೀರ್ಘಮುಷ್ಣಂ
ಮುಮೋಚ ನಿಶ್ವಾಸಮನುತ್ತಮಂ ಹಿ ।

ಪುಲಸ್ತ್ಯ - ಪೂರ್ವಕಾಲದಲ್ಲಿ ಗಾಲವ ಋಷಿಯು ಉಗ್ರವಾದ ತಪೋನುಷ್ಠಾನವನ್ನು ಕೈಕೊಂಡಿದ್ದನು. ತಮ್ಮ ಅಶ್ರಮದಲ್ಲಿಯೇ ಕುಳಿತು ತಪವನ್ನು ತಪಿಸುವ ಈ ಮಹಾ

ಮುನಿಯಧ್ಯಾನ ಸಮಾಧಿಗೆ ದುಷ್ಟನಾದ ಪಾತಾಳ ಕೇತುವಿಘ್ನವನ್ನುಂಟು ಮಾಡುತ್ತಿದ್ದನು. ತನ್ನ ತಪೋಭಂಗವನ್ನು ಮಾಡುವ ಈ ದುರುಳ ದಾನವನನ್ನು ಗಾಲವನು ಬಿರುಗಣ್ಣಿನಿಂದ ನೋಡಿ ಆಕ್ಷಣದಲ್ಲಿ ಸುಟ್ಟು ಬೂದಿ ಮಾಡಲು ಸಮರ್ಥನಾಗಿದ್ದನು. ಆದರೆ ಇದರಿಂದ ತನ್ನ ತಪಸ್ಸು ಹಾಳಾಗುವದು ಎಂದು ಬಗೆದು ಅವನು ಕೋಪವನ್ನು ಮಾಡಲಿಲ್ಲ.

ಶಾಪವನ್ನೂ ಕೊಡಲಿಲ್ಲ. ಸಮರ್ಥನಾದರೂ ಶಪಿಸದೇ ಸಹನ ಮಾಡಿ ಕೊಂಡಿದ್ದನು. ಇದರಿಂದ ಪಾತಾಳಕೇತುವಿನ ಉಪಟಳ ಹೆಚ್ಚುತ್ತ ಹೋಯಿತು. ಆಗ ಸಹಾಯನಾದ ಆ ಮುನಿಯು ಮುಗಿಲ ಕಡೆಗೆ ಮುಖವೆತ್ತಿನೋಡಿ ನಿಡಿದಾದ ನಿಟ್ಟುಸಿರು ಬಿಟ್ಟು ಸುಮ್ಮನೆ ಕುಳಿತುಕೊಂಡನು.

**೩೧೮. ತತೋಽಂಬರಾದ್ ವಾಜಿವರಃ ಪಪಾತ**
**ಬಭೂವ ವಾಣೀ ತ್ವಶರೀರಿಣೀ ಚ**
**ಅಸೌ ತುರಂಗೋ ಬಲವಾನ್ ಕ್ರಮೇತ**
**ತ್ವಹ್ನಾ ಸಹಸ್ರಾಣಿತ ಯೋಜನಾನಾಮ್**

ಅಷ್ಟರಲ್ಲಿ ಅಂತರಿಕ್ಷದಿಂದ ಶ್ರೇಷ್ಠವಾದ ಕುದುರೆಯೊಂದು ಒಮ್ಮೆಲೇ ನೆಲಕ್ಕೆ ಇಳಿದು ಬಂದಿತು. ಆ ಅಶ್ವದ ಬೆನ್ನ ಹಿಂದೆಯೇ ಅಶರೀರವಾಣಿ, ''ಈ ಬಲಿಷ್ಟವಾದ ಕುದುರೆಯು ಒಂದು ದಿನದಲ್ಲಿ ಸಾವಿರ ಯೋಜನ ಅಂತರವನ್ನು ಕ್ರಮಿಸಬಲ್ಲದು.'' ಈ ಬಾಸುಲಿಯನ್ನು ಕೇಳಿ ಗಾಲವ ಮುನಿಯು ಆ ಗಗನ ಕುದುರೆಯನ್ನು ಅಸ್ತ್ರಧಾರಿಯಾದ ಋತಧ್ವಜ ರಾಜನಿಗೆ ಒಪ್ಪಿಸಿ ಶತ್ರುಗಳ ನಿಗ್ರಹವನ್ನು ಮಾಡಲು ಆದೇಶವಿತ್ತು ತಾನು ತಪಸ್ಸಮಾಧಿಯಲ್ಲಿ ಕುಳಿತನು. ಆ ಋತಧ್ವಜರಾಜನು ಮುನಿಯ ತಪೋ ಭಂಗ ಮಾಡಲು ಬಂದ ಪಾತಾಳ ಕೇತುವಿನ ಬೆನ್ನಿನಲ್ಲಿ ಬಾಣಬಿಟ್ಟು ದುಷ್ಟನಿಗ್ರಹವನ್ನು ಮಾಡಿದನು.

**ನಾರದ** - ಆಕಾಶದಿಂದ ಒಂದು ಕುದುರೆ ಬಂದಿತೆಂದು ಹೇಳಿದಿರಲ್ಲವೇ! ಹೀಗೆ ಆಕಸ್ಮಿಕವಾಗಿ ಆಗಸದಿಂದ ಆ ಅಶ್ವವನ್ನು ಯಾರು ಕಳಿಸಿದರು. ಮತ್ತು ಅಶರೀರವಾಣಿ ಯಾಯಿತೆಂದು ಹೇಳಿದಿರಿಷ್ಟೇ! ಹೀಗೆ ಅಂತರಿಕ್ಷದಲ್ಲಿ ನಿಂತು ಅಶರೀರವಾಣಿಯ ಮುಖಾಂತರ ಮಾತಾಡಿದವರು ಯಾರು?

**೩೧೯. ವಿಶ್ವಾವಸುರ್ನಾಮ ಮಹೇಂದ್ರಗಾಯಕೋ**
**ಗಂಧರ್ವರಾಜೋ ಬಲವಾನ್ ಯಶಸ್ವೀ ॥**
**ನಿಸೃಷ್ಟವಾನ್ ಭೂನಿಲಯೇ ತುರಂಗಂ**
**ಋತಧ್ವಜಸ್ಯೈವ ಸುತಾರ್ಥಮಾಶು**

**ಪುಲಸ್ತ್ಯ** - ಇಂದ್ರನ ಅಸ್ಥಾನದಲ್ಲಿಯ ಸಂಗೀತ ವಿದ್ವಾಂಸನಾದ ವಿಶ್ವಾವಸು ಎಂಬ ಗಂಧರ್ವರಾಜನು ತನ್ನ ಮಗಳ ಸಲುವಾಗಿ ಋತಧ್ವಜರಾಜನ ಕಡೆಗೆ ಆ ಕುದುರೆಯನ್ನು ಕಳಿಸಬೇಕೆಂದು ಭೂಮಿಗೆ ಇಳಿಸಿದ್ದನು.

**ನಾರದ** - ಆ ಗಂಧರ್ವರಾಜನಿಗೆ ಭೂಮಿಯಲ್ಲಿ ಏನು ಕೆಲಸ? ಅತ್ಯಂತ ವೇಗಗಾಮಿ ಯಾದ ಆ ಕುದುರೆಯನ್ನು ಈ ರಾಜಕುಮಾರನ ಬಳಿಗೆ ಕಳಿಸಲು ಕಾರಣವೇನು?

**ಪುಲಸ್ತ್ಯ** - ವಿಶ್ವಾವಸು ಗಂಧರ್ವನಿಗೆ ಶೀಲ ಸೌಂದರ್ಯ, ಸೌಜನ್ಯ ಮುಂತಾದ ಸದ್ಗುಣಗಳಿಂದ ಒಡಗೂಡಿದ ಮದಾಲಸಾ ಎಂಬ ಹೆಸರಿನ ಒಬ್ಬ ಮಗಳಿದ್ದಳು. ಲಾವಣ್ಯರಾಶಿಯಂತಿದ್ದ ಆ ಲಲನೆಯ ಚೆಲುವು ಚಾರಿಮೆಗಳು ಚಂದ್ರನಿಗೆ ಸಮಾನವಾಗಿದ್ದವು.

ಒಂದು ದಿನ ಆ ಗಂಧರ್ವನಂದಿನಿಯು ಸ್ವರ್ಗದ ನಂದನ ವನದಲ್ಲಿ ಆನಂದದಿಂದ ಆಟವಾಡುತ್ತಿರುವಾಗ ಪಾತಾಳಕೇತುವು ಕಂಡು ಅವಳನ್ನು ಅಪಹರಿಸಿದನು.

**೩೨೦. ತಾಂ ನಂದನೀ ದೇವರಿಪುಸ್ತ್ವರಸ್ವೀ**
**ಸಂಕ್ರೀಡತೀಂ ರೂಪವತೀಂ ದದರ್ಶ**
**ಪಾತಾಲಕೇತುಸ್ಸ ಜಹಾರ ತನ್ವೀಂ**
**ತಸ್ಯಾರ್ಥತ ಸೋಽಶ್ವರಃ ಪ್ರದತ್ತಃ**

ಪಾತಾಳ ಕೇತುವಿನಿಂದ ಮದಾಲಸೆಯನು ಬಿಡಿಸಲಿಕ್ಕಾಗಿ ಗಂಧರ್ವ ರಾಜನು ತನ್ನ ವೇಗಗಾಮಿ ಅಶ್ವವನ್ನು ಆಗಸದಿಂದ ಇಳಿಸಿ ರಾಯ ಋತಧ್ವನ ಬಳಿಗೆ ಕಳಿಸಿದನು.

ಆ ಋತಧ್ವಜನು ಪಾತಾಳಕೇತುವನ್ನು ಹೊಡೆದುಕೊಂದು ಗಂಧರ್ವನಂದಿನಿಯಾದ ಆ ಮದಲಾಸಿಯನ್ನು ಸೆರೆಯಿಂದ ಬಿಡಿಸಿ ವಿಶ್ವಾವಸುವಿಗೆ ತಂದು ಒಪ್ಪಿಸಿದನು. ಮದಾಲಸೆಯು ಪ್ರೇಮ ಪೂರ್ಣಕಟಾಕ್ಷದಿಂದ ತನ್ನನ್ನು ದುರುಳ ದಾನವನ ಬಂಧನದಿಂದ ಪಾರು ಮಾಡಿದ ರಾಜಕುಮಾರಿಯನ್ನು ಕೃತಜ್ಞತಾಭಾವಭರಿತಳಾಗಿ ನೋಡಿದಳು.

ಅವರೀರ್ವರ ಮನೋಭಾವವನ್ನು ಅರಿತು ಗಂಧರ್ವರಾಜನು ತನ್ನ ಮಗಳನ್ನು ಋತಧ್ವಜನಿಗೆ ಕೊಟ್ಟು ಮದುವೆಮಾಡಿದನು. ಶಚೀಸುರೇಂದ್ರರಂತಿತ್ತು ರಾಜಕುಮಾರ ಗಂಧರ್ವಕುಮಾರಿಯರ ಆ ಒಲವಿನ ಜೋಡಿ.

**ನಾರದ** - ಅಂತೂ ಮಹಿಷನು ಮಡಿದ. ತಾರಕ ತೀರಿಕೊಂಡ. ಪಾತಾಲಕೇತು ಪ್ರಣಷ್ಟನಾದ ಹೀಗೆ ದೈತ್ಯಧುರ್ಯರು ಒಬ್ಬೊಬ್ಬರೇ ಸತ್ತುಹೋದ ಬಳಿಕ ಹಿರಣ್ಯಾಕ್ಷ ಪುತ್ರನಾದ ಅಂಧಕಾಸುರನು ಏನು ಮಾಡಿದನು? ಅದನ್ನು ತಿಳಿಸಿರಿ.

**ಪುಲಸ್ತ್ಯ** - ಮಹಿಷ ತಾರಕಾಸುರ ಇಬ್ಬರೂ ಯುದ್ಧದಲ್ಲಿ ಮೃತರಾದದ್ದನ್ನು ನೋಡಿ ದುರ್ಬುದ್ಧಿಯ ದಾನವನಿಗೆ ಭಯಂಕರ ಕೋಪ ಬಂದಿತು. ದೇವತೆಗಳ ಸೈನ್ಯವನ್ನೆಲ್ಲ ಕಡಿದು ಕೊಚ್ಚಿ ಹಾಕಬೇಕೆಂಬ ಹೇವ ಹೊತ್ತು ಆ ದುಷ್ಟದೈತ್ಯನು ಅಲ್ಪ ಪರಿವಾರದೊಂದಿಗೆ ಕೈಯಲ್ಲಿ ಉಕ್ಕಿನ ಅಗಳಿಯನ್ನು ಎತ್ತಿಕೊಂಡು ಪಾತಾಳಲೋಕದಿಂದ ಎದ್ದು ಮೇಲೆಬಂದನು. ನೆಲದುದ್ದಕ್ಕೂ ಆ ನೃಶಂಸ ದಾನವನು ತಿರುಗಾಡಿದನು.

**೩೨೧. ತತೋ ವಿಚರತಾ ತೇನ ಮಂದರೇ ಚಾರು ಕಂದರೇ ।**
**ದೃಷ್ಟಾ ಗೌರೀ ಚ ಗಿರಿಜಾ ಸಖೀ ಮಧ್ಯಸ್ಥಿತಾ ಶುಭ**

ಒಂದು ದಿನ ಆ ದೈತೇಂದ್ರನು ಸುಂದರ ಕಂದರಗಳುಳ್ಳ ಮಂದಿರದ ಗಿರಿಗೆ ಬಂದನು. ಆ ಬೆಟ್ಟದ ಬೆನ್ನಿನ ಮೇಲೆ ಒಂದೆಡೆ ಗೆಳತಿಯರೊಂದಿಗೆ ಕುಳಿತುಕೊಂಡ ಪಾರ್ವತಿಯು ಆಕಸ್ಮಾತ್ತಾಗಿ ಆ ದಾನವನ ಕಣ್ಣಿಗೆ ಬಿದ್ದಳು.

**೩೨೨. ತತೋऽಭೂತ್ ಕಾಮಬಾಣಾರ್ತಃ ಸಹಸೈವಂಧಕಾಸುರಃ**
**ತಾಂ ದೃಷ್ಟ್ವಾ ಚಾರು ಸರ್ವಾಂಗೀಂ ಗಿರಿರರಾಜಸುತಾಂ ಮುನೇ**

ಆ ಗಿರಿರಾಜನಂದಿನಿ ಸರ್ವಾಂಗ ಸುಂದರಿ. ಅಡಿಯಿಂದ ಮುಡಿಯವರೆಗೂ, ಚೆಲುವಿ, ಚಾರುಗಾತಿ. ಅವಳನ್ನು ಕಂಡು ಮೊದಲೇ ಕಾಮುಕನಾದ ಆ ಅಂಧಕನ ಮನಸ್ಸು ಮಾರುಹೋಯಿತು. ಕಾಮನ ಬಾಣಗಳು ಅವಳ ಹೃದಯವನ್ನು ಗಾಸಿಗೊಳಿಸದವು. ಕಾಮಾಂಧನಾದ ಅಂಧಕ ಮೋಹಾಂಧನಾಗಿ ಉದ್ಗಾರ ತೆಗೆದ.

**೩೨೩. ಇಯಂ ಯದಿ ಭವೇನ್ನೈವ ಮಮಾಂತಃಪುರ ವಾಸಿನೀ**
**ತನ್ಮದೀಯೇನ ಜೀವೇನ ಕ್ರಿಯತೇ ನಿಷ್ಫಲೇನ ಕಿಂ ।**

''ನಖಾಶಿಖಾಂತ ಸೌಂದರ್ಯ ಸೂಸುವ ಈ ಚೆಲುವೆ ಯಾರಾಗಿರಬಹುದು! ಇಂಥ ಲಾವಣ್ಯವತಿಯೂ ಈ ಬನಕ್ಕೇಕೆ ಬಂದಿಬಹುದು! ಈ ಚೆಲುವಿನ ಪುಥ್ಥಳಿ ನನ್ನ ಅಂತಃಪುರದಲ್ಲಿ ಇರದಿದ್ದರೆ ನಾನು ಬದುಕಿದ್ದೂ ವ್ಯರ್ಥ.

**೩೨೪. ಯದಸ್ಯಾಃ ತನುಮಧ್ಯಾಯಾಃ ನ ಪರಿಷ್ವಂಗವಾನಹಮ್**
**ಅತೋ ಧಿಕ್ ಮಮ ರೂಪೇಣ ಕಿಂ ಸ್ಥಿರೇಣ ಪ್ರಯೋಜನಂ**

ಈ ರೂಪವತಿಯಾದ ರಮಣೀಯನ್ನು ಬಿಗಿದಪ್ಪಿ ಆನಂದ ಪಡೆಯದಿದ್ದರೆ ನನ್ನ ರೂಪಕ್ಕೆ ಧಿಕ್ಕಾರ. ನನ್ನ ಯೌವನವೇ ವ್ಯರ್ಥ. ನನ್ನ ಜೀವನವೇ ನಿಷ್ಫಲ. (೩೨೪) ಈ ಚಿಗರೆಗಂಗಳ ಚೆಲುವೆಯೊಡನೆ ನನಗೆ ಸಂಬಂಧವುಂಟಾಗುವಂತೆ ಮಾಡಿದ ಮಹನೀಯನೇ ನನ್ನ ಬಂಧು. ಇವಳೊಡನೆ ನನ್ನನ್ನು ಕೂಡಿಸಿದವನೇ ನನ್ನ ನಿಜವಾದ ಮಂತ್ರಿ ಯೋಗ್ಯ ಸೋದರ.'' ಹೀಗೆ ಅಸುರರ ಇಂದ್ರನಾದ ಅಂಧಕಾಸುರನ ಉದ್ಗಾರ ಅಲ್ಲಿಯೇ ನಿಂತ ಪ್ರಲ್ಹಾದನ ಕಿವಿಗೆ ಬಿದ್ದಿತು. ಬುದ್ಧಿಯ ಸಾಗರದಂತಿರುವ ಪ್ರಲ್ಹಾದನು ಎರಡೂ ಕಿವಿ ಗಳನ್ನು ಮುಚ್ಚಿ ತಲೆಯನ್ನು ಅಲುಗಾಡಿಸಿದನು.

**೩೨೫. ಮಾಕುರುಷ್ವ ಸದುರ್ಬುದ್ಧಿಂ ಸದ್ಯಃ ಕುಲವಿನಾಶಿನೀಮ್ ।**
**ಭವತಃ ಪರದಾರೇಯಂ ಮಾ ನಿಮಜ್ಜರಸಾತಲೇ ॥**

''ದೈತ್ಯರಾಜ, ನೀನು ಇಂಥ ಮಾತನ್ನು ಆಡಬೇಡ. ಇವಳು ಜಗತ್ತಿನ ತಾಯಿ. ಲೋಕದೊಡೆಯನಾದ ಶಂಕರನ ಮಡದಿ. ಇವಳ ಮೇಲೆ ನೀನು ಮನಸ್ಸನ್ನು ಮಾಡಿದರೆ ನಿನ್ನ ವಂಶವೆಲ್ಲ ಧ್ವಂಸವಾಗುವದು. ಇವಳು ಪರಸ್ತ್ರೀ. ಇವಳನ್ನು ಕಾಮುಕ ದೃಷ್ಟಿಯಿಂದ ನೋಡಿದರೆ ನರಕವಾಸವು ತಪ್ಪಿದ್ದಲ್ಲ.

**೩೨೬. ಕಿಂ ವ ಶ್ರುತೋ ದೈತ್ಯನಾಥೇನ ಕಿಂ ನು ।**
**ಗೀತಃ ಶ್ಲೋಕೋ ಗಾಧಿನಾ ಪಾರ್ಥಿವೇನ ॥**
**ದೃಷ್ಟ್ವಾ ಸೈನ್ಯಂ ವಿಪ್ರಯಾತಂ ಪ್ರಸಕ್ತಂ ॥**
**ಪಥ್ಯಂ ತಥ್ಯಂ ಸರ್ವಲೋಕೇ ಹಿತಂ ಚ ॥**

ಪರಸ್ತ್ರೀಯರನ್ನು ಬಯಸುವದು ಸಜ್ಜನರಲ್ಲಿಯೂ ದುರ್ಜನರಲ್ಲಿಯೂ ಕುತ್ಸಿತಕರ್ಮ ಎಂದು ನಿಂದ್ಯವಾಗಿದೆ. ಇಂಥ ದುಷ್ಟ ಕೃತ್ಯವನ್ನು ನಿನ್ನ ವೈರಿಗಳು ಮಾಡಿ

ಹಾಳಾಗಿ ಹೋಗಲಿ. ನೀನು ಮಾತ್ರ ಇಂಥ ದುರ್ವ್ಯಾಪಾರವನ್ನು ಮಾಡಬೇಡ. ದೈತ್ಯರಾಜನಾದ ನೀನು ಗಾಧಿರಾಜನ ಈ ಪದ್ಯವನ್ನು ಕೇಳಿಲ್ಲವೇ? ಅವನ ಸೈನ್ಯವು ನಿಷ್ಕಾರಣವಾಗಿ ಶತ್ರುಗಳನ್ನು ಸಂಹರಿಸಲು ಹೊರಟಾಗ ಅವನು ಸತ್ಯವೂ ಪಥ್ಯವೂ ಆದ ಈ ಹಿತ ನುಡಿಯನ್ನು ಆಡಿದನು.

೩೨೭. ವರಂ ಪ್ರಾಣಾಃ ತ್ಯಾಜ್ಯಾಃ ನ ಬತ ಪರಾಹಿಂಸಾತ್ವಭಿಮತಾ ।
ವರಂ ಮೌನಂ ಕಾರ್ಯಂ ನ ಚ ವಚನ ಮುಕ್ತಂ ಯದನೃತಮ್॥
ವರಂ ಕ್ಲೀಬೈರ್ಭಾವ್ಯಂ ನಚ ಪರಕಲತ್ರಾಭಿಗಮನಂ
ವರಂ ಭಿಕ್ಷಾರ್ಥಿತ್ವಂ ನಚ ಪರಧನಾನಾಂ ಹಿ ಹರಣಮ್ ॥

ಪ್ರಾಣಬಿಡುವ ಪ್ರಸಂಗ ಬಂದರೂ ಚಿಂತೆಯಿಲ್ಲ. ಪರರ ಹಿಂಸೆಯನ್ನು ಮಾತ್ರ ಎಂದೂ ಮಾಡಬಾರದು. ಮಾತನಾಡದೆ ಮೌನವಾಗಿ ಕುಳಿತರೂ ಲೇಸು....ಸುಳ್ಳನ್ನು ಮಾತ್ರ ನುಡಿಯಬಾರದು.. ಷಂಡನಾಗಿರುವದೂ ಒಂದು ದೃಷ್ಟಿಯಿಂದ ಒಳ್ಳೆಯದೇ. ಆದರೆ ಪರಸ್ತ್ರೀ ಸಹವಾಸವನ್ನು ಮಾತ್ರ ಎಂದಿಗೂ ಮಾಡತಕ್ಕದ್ದಲ್ಲ. ಹೆರವರ ಹಣವನ್ನು ಕದಿಯುವದಕ್ಕಿಂತ ಭಿಕ್ಷೆ ಬೇಡುವದು ಲೇಸು.

೩೨೮. ಪ್ರಲ್ಹಾದಸ್ಯ ವಚಃ ಶ್ರುತ್ವಾ ಕ್ರೋಧಾಂಧೋ ಮದನಾತುರಃ ।
ಇಯಂ ಸಾ ಶತ್ರು ಜನನೀತ್ಯೇವ ಮುಕ್ತ್ವಾ ಪ್ರದುದ್ರುವೇ ॥

ಪ್ರಲ್ಹಾದನ ಈ ಮಾತುಗಳನ್ನು ಕೇಳಿ ಮೊದಲೇ ಕಾಮಾಂಧನಾಗಿದ್ದ ಅಂಧಕಾಸುರನು ಕ್ರೋಧಾಂಧನೂ ಆಗಿ "ಓ! ಇವಳು ನಮ್ಮ ವೈರಿಗಳ ತಾಯಿ" ಎಂದು ಹೇಳಿ ಅವಳ ಮೇಲೆ ಏರಿ ಹೋದನು. ಅವನ ಅನುಚರರಾದ ಅನೇಕ ದೈತ್ಯ ವೀರರು ಕವಣೆಯಿಂದ ಬೀಸಿದ ಕಲ್ಲುಗಳಂತೆ ದೇವಿ ಇದ್ದ ಸ್ಥಾನಕ್ಕೆ ಧಾವಿಸಿದರು. ಆಗ ನಂದೀಶ್ವರನು ಕೈಯಲ್ಲಿ ಚಕ್ರವನ್ನು ಹಿಡಿದು ಮಯ, ತಾರ ಮುಂತಾದ ದಾನವರನ್ನು ಹೊಡೆದು ಹಾಕಿದನು. ವಜ್ರಾಯುಧದಿಂದ ಪ್ರಹರಿಸಿದನು. ಅವನ ಹೊಡೆತ ತಾಳಲಾರದೆ ದೈತ್ಯರೆಲ್ಲ ಹೆದರಿ ಹತ್ತು ದಿಕ್ಕಿಗೆ ಚೆದರಿದರು. ಒಬ್ಬ ನಂದಿಯು ದೈತ್ಯ ವೃಂದವನ್ನೇ ಶಸ್ತ್ರಾಸ್ತ್ರಗಳಿಂದ ಕೊಂದುಹಾಕುತ್ತಿರುವುದನ್ನು ಕಂಡು ಅಂಧಕನಿಗೆ ಕೋಪ ಬಂದಿತು. ಅವನು ಒಂದು ದೊಡ್ಡ ಉಕ್ಕಿನ ಹಾರಿಯನ್ನು ಎತ್ತಿ ಆ ನಂದಿಯ ತಲೆಯ ಮೇಲೆ ಅಪ್ಪಳಿಸಿ ಬೀಳಿಸಿದನು.

೩೨೯. ಶೈಲೇಯಂ ಪತಿತಂ ದೃಷ್ಟ್ವಾ ಧಾವಮಾನಂ ತಥಾಂಧಕಮ್ ।
ಶತರೂಪಾಭವದ್ಗೌರೀ ಭಯಾತ್ತಸ್ಯ ದುರಾತ್ಮನಃ ॥

ಹೀಗೆ ನಂದಿಯನ್ನು ಕೆಳಗೆ ಕೆಡಹಿ ತನ್ನೆಡೆಗೆ ಧಾವಿಸಿ ಬರುತ್ತಿರುವ ಅಂಧಕನನ್ನು ಕಂಡು ಗೌರಿಯು ಹೆದರಿ ಒಮ್ಮೆಲೇ ನೂರು ರೂಪಗಳನ್ನು ಧರಿಸಿ ನಿಂತಳು.

೩೩೦. ನಪರಿಜ್ಞಾತವಾಂಸ್ತತ್ರ ಕಾತು ಸಾ ಗಿರಿ ಕನ್ಯಕಾ ।
ನಾತ್ರಾಶ್ಚರ್ಯಂ ನ ಪಶ್ಯಂತಿ ಚತ್ವಾರೋऽಮೀ ಸದೈವ ಹಿ ॥

ನೂರಾರು ದೇವಿಯರ ಗುಂಪಿನ ನಟ್ಟನಡುವೆ ನಿಂತುಕೊಂಡ ಅಂಧಕನು ಆತ್ತಿತ್ತ ನೋಡಿ ಹೆಣ್ಣಾನೆಗಳ ಹಿಂಡಿನಲ್ಲಿರುವ ಗಂಡಾನೆಯಂತೆ ಉದ್ಭ್ರಾಂತನಾಗಿಸುತ್ತ ಕಡೆಗೂ

ಸುತ್ತಾಡಿದನು. ಎತ್ತ ನೋಡಿದತ್ತೆಲ್ಲ ದೇವಿಯರೇದೇವಿಯರು. ಆಹೆಂಗಳೆಯರಹಿಂಡಿನಲ್ಲಿ ತಾನು ಮೊದಲು ನೋಡಿ ಮೋಹಗೊಂಡ ಮಾನಿನಿ ಯಾರು ಎನ್ನುವದೇ ಅವನಿಗೆ ತಿಳಿಯದಂತಾಯಿತು. ಅವನಜ್ಞಾನಶಕ್ತಿಯೇನಷ್ಟವಾಗಿಹೋಗಿತ್ತು. ಕಣ್ಣು ಕುರುಡಾಗಿತ್ತು, ವಿವೇಕನಷ್ಟವಾಗಿತ್ತು. ಇದೇನು ಆಶ್ಚರ್ಯದಮಾತಲ್ಲ. ಈಜಗತ್ತಿನಲ್ಲಿ ನಾಕುತರಹದ ಕುರುಡರುಇರುತ್ತಾರೆ. ಈನಾಲ್ವರಿಗೂ ಕಣ್ಣು ಕಾಣುವುದಿಲ್ಲ. ತಿಳುವಳಿಕೆಇರುವುದಿಲ್ಲ.

೩೩೧. ನಪಶ್ಯತೀಹ ಜಾತ್ಯಾಂಧೋ ರಾಗಾಂಧೋಽಪಿ ನಪಶ್ಯತಿ ॥
ನ ಪಶ್ಯತಿ ಮದೋನ್ಮತ್ತ ಲೋಭಾಕ್ರಾಂತೋ ನ ಪಶ್ಯತಿ ॥

ಜಾತೀಯತೆಯ ದುರಭಿಮಾನದಿಂದ ಕುರುಡನಾದವನಿಗೆ ಕಾಣುವುದಿಲ್ಲ, ಕಾಮಾಂಧನಾದವನಿಗೂ ಏನೂ ತೋರುವದಿಲ್ಲ. ಮದಾಂಧನಾದವನಿಗೂ ಕಣ್ಣು ಕಾಣುವದಿಲ್ಲ. ಇದರಂತೆ ಲೋಭಾಕ್ರಾಂತನಾದವನೂ ಕುರುಡನೇ ಸರಿ. ಈ ನಾಲ್ಕು ತರಹದ ಅಂಧತ್ವಗಳೂ ಅಂಧಕಾಸುರನಲ್ಲಿ ಒಂದುಗೂಡಿದ್ದವು, ಅಂದ ಬಳಿಕ ಅವನಿಗೆ ಹೇಗೆ ವಿವೇಕದ ಕಣ್ಣು ಮೂಡೀತು ! ಅವನ ಕಣ್ಣೆದುರೇ ಪಾರ್ವತಿಯು ನಿಂತಿದ್ದರೂ ಅವನಿಗೆ ನಿಜವಾದ ಅಂಧತೆ ಯೆಂಬಂತಾಗಿ ಅವಳು ಕಾಣಲಿಲ್ಲ. ಏನಾದರೂ ಅವನು ಕಾಮುಕನೇ ಅಲ್ಲವೇ! ಪಾರ್ವತಿಯನ್ನು ಗುರುತಿಸಲು ಆಗದಿದ್ದರೂ ಅವನ ಕಾಮವಾಸನೆ ಹಿಂಗಲಿಲ್ಲ ''ಯಾರಾದರೇನು! ಇವರೆಲ್ಲರೂ ತರುಣಿಯರೇ ತಾನೇ! ಮೇಲಾಗಿ ಅವಳಂತೆಯೇ ಎಲ್ಲರೂ ಚೆಲುವೆಯರೇ, ಆದುದರಿಂದ ಕೈಗೆ ಸಿಕ್ಕ ಕನ್ಯೆಯನ್ನೇ ಹಿಡಿದು ಕಾಮವಾಸನೆಯನ್ನು ತಣಿಸಿಗೊಂಡ ರಾಯಿತೆಂದು ಯೋಚಿಸಿ ಅವನು ಯಾರಾದರೊಬ್ಬ ಯುವತಿಯನ್ನು ಹಿಡಿಯಬೇಕೆಂದು ಓಡತೊಡಗಿದನು.

೩೩೨. ಪ್ರಧಾವನ್ನಾದದತ್ತಾಸಾಂ ಯುವತ್ಯ ಇತಿ ಚಿಂತಯನ್ ।
ತತೋ ದೇವ್ಯಾಃ ಸ ದುಷ್ಟಾತ್ಮಾ ಶತಾವರ್ಯಾ ನಿರಾಕೃತಃ
ಕುಟ್ಟಿತಃ ಪ್ರಬಲೈಃ ಶಸ್ತ್ರೈಃ ನಿಪಪಾತ ಮಹೀತಲೇ ॥

ಅವನ ಈ ದುರ್ಬುದ್ಧಿಯನ್ನು ತಿಳಿದು ಶತಾವರೀ ದೇವಿಯು ಶಸ್ತ್ರಾಸ್ತ್ರಗಳಿಂದ ಬಡಿದು ಅಂಧಕನ ನಡುನೆತ್ತಿಯನ್ನು ಕುಟ್ಟಿದಳು. ಆದರಿಂದ ಆ ದೈತ್ಯನು ನೆಲದ ಮೇಲೆ ಉರುಳಿಬಿದ್ದನು. ಅದನು ನೋಡಿ ನೂರು ರೂಪದಿಂದ ಅಲ್ಲಿ ವ್ಯಾಪಿಸಿ ನಿಂತ ಮಹಾದೇವಿಯು ಅಲ್ಲಿಂದ ಅದೃಶ್ಯಳಾದಳು. ಹೀಗೆ ಅಂಧಕಾಸುರನು ಉರುಳಿಬಿದ್ದುದನ್ನು ನೋಡಿ ದಾನವ ವೀರರು ಗರ್ಜನೆ ಮಾಡುತ್ತ ಯುದ್ಧಕ್ಕಾಗಿ ಧಾವಿಸಿ ಬಂದರು. ಅವರ ಯುದ್ಧದ ಸದ್ದುಗದ್ದಲದ ಆರ್ಭಟವನ್ನು ಆಲಿಸಿ ನಂದೀಶ್ವರನಿಗೆ ಎಚ್ಚರವಾಗಿ ಎದ್ದುಕುಳಿತನು. ಏರಿ ಬರುವ ದೈತ್ಯವೀರರಿಗೆ ಎದುರಾಗಿ ವಜ್ರಾಯುಧವನ್ನು ಎತ್ತಿ ಹಿಡಿದು ಇಂದ್ರನಂತೆ ನಿಂತುಕೊಂಡನು. ಮಯನೇ ಮೊದಲಾದ ದೈತ್ಯರ ಮುಂದಾಳುಗಳು ಒಂದಾಗಿ ಅವನೊಡನೆ ಹೋರಾಡಿದರು. ಗಣಾಧೀಶನಾದ ನಂದಿಯು ಒಬ್ಬನೇ ಆ ಎಲ್ಲ ದೈತ್ಯರನ್ನೂ ಹೊಡೆದು ಓಡಿಸಿಬಿಟ್ಟನು.

೩೩೩. ದಾನವಾನ್ ಸಮಯಾನ್ ವೀಕ್ಷ್ಯ ಪರಾಜಿತ್ಯ ಗಣೇಶ್ವರಃ
ಸಮಭ್ಯೇತ್ಯಾಂಬಿಕಾಂ ದೃಷ್ಟ್ವಾವವಂದೇ ಚರಣೌ ಶುಭೌ ॥

ಹೀಗೆ ದೈತ್ಯರೆಲ್ಲರೂ ಹೆದರಿ ಚೆದರಿದ ಬಳಿಕ ಆ ಗಣಾಧಿತಿಯು ದೇವಿಯ ಬಳಿಗೆ ಬಂದು ಅವಳ ಚರಣಗಳಿಗೆ ವಂದಿಸಿದನು. ಆಗ ಮಹಾದೇವಿಯು ತನ್ನ ನಿಜರೂಪರೇ ಆದ ನೂರು ನಾರೀಮಣಿಗಳಿಗೆ ಹೇಳಿದಳು.

೩೩೪. ಯೂಯಂ ಹರಧ್ವಂ ಮಹೀಪೃಷ್ಠೇ ಪೂಜ್ಯಮಾನಾ ನರೈರಿಹ
ವಸತಿರ್ಭವತೀನಾಂ ಚ ಉದ್ಯಾನೇಕ್ಷು ವನೇಷು ಚ ॥
ವನಸ್ಪತಿಷು ವೃಕ್ಷೇಷು ಗಚ್ಛಧ್ವಂ ವಿಗತಜ್ವರಾಃ ॥

''ನೀವೆಲ್ಲರೂ ನಿಮ್ಮ ಮನಬಂದಲ್ಲಿಗೆ ಹೋಗಬಹುದು. ಭೂಲೋಕದಲ್ಲಿ ಜನರು ನಿಮ್ಮನ್ನು ಪೂಜಿಸುವರು. ನಿಮಗೆ ಬೇಕಾದಲ್ಲಿ ವಿಹರಿಸಿರಿ. ವನ, ಉಪವನ ವೃಕ್ಷ ವನಸ್ಪತಿ ಎಲ್ಲಿಯಾದರೂ ನೆಲೆಸಿರಿ. ಪೂಜಿಸುವ ಜನರಿಗೆ ಕಲ್ಯಾಣ ಮಾಡಿರಿ.''

೩೩೫. ತತೋ ದುರಾತ್ಮಾಸ ತದಾಂಧಕೋ ಮುನೇ ।
ಪಾತಾಲಮಭ್ಯೇತ್ಯ ದಿವಾ ವ ಭುಂಕ್ತೇ ॥
ರಾತ್ರೌ ನ ಶೇತೇ ಮದನೇಷು ತಾಡಿತೋ ।
ಗೌರೀಂ ಸ್ಮರನ್ ಕಾಮಬಲಾಭಿಪನ್ನಃ ॥

ಪಾರ್ವತಿಯ ಈ ಆಜ್ಞೆ ಹೊತ್ತು ಆ ದೇವಿಯ ಪ್ರತಿಬಿಂಬರಾದ ನೂರು ನಾರೀಮಣಿಗಳು ಮಹಾದೇವಿಗೆ ನಮಸ್ಕರಿಸಿ ದಿಕ್ಕು ದಿಕ್ಕಿಗೆ ಹೊರಟು ಹೋದರು. ಕಿನ್ನರರು ಅವರನ್ನು ಸ್ತೋತ್ರ ಮಾಡುತ್ತಿದ್ದರು. ಇತ್ತ ಅಂಧಕನಿಗೂ ಎಚ್ಚರ ಬಂದಿತು. ಅವನಿಗೆ ಎಲ್ಲಿಯೂ ಗಿರಿಜೆ ಕಾಣಲಿಲ್ಲ. ಅವನ ಸೈನ್ಯವೆಲ್ಲವೂ ಸೋತು ಸುಣ್ಣಾಗಿ ಹೊಡೆತದಿಂದ ಹಣ್ಣಾಗಿ ಮರಳಿ ಬಂದಿತ್ತು, ಅದರಿಂಧ ಅವಮಾನಿತನಾದ ಆ ದೈತ್ಯನು ಪಾತಾಳಕ್ಕೆ ಓಡಿಹೋದನು. ಆದರೆ ಪಾತಾಳಕ್ಕೆ ಇಳಿದರೂ ಅವನಿಗೆ ಸಮಾಧಾನವಿಲ್ಲ. ಕಾಮಾಂಧನಿಗೆ ಎಲ್ಲಿ ಹೋದರೂ ಶಾಂತಿ ಎಲ್ಲಿ ! ಪಾರ್ವತಿಯ ರೂಪವು ಅವನ ಮನದಲ್ಲಿ ನೆಟ್ಟು ಹೋಗಿತ್ತು. ಕಣ್ಣು ಮುಚ್ಚಿದರೆ ಸಾಕು, ಗಿರಿಜೆಯ ಆಕಾರವೇ ಕಣ್ಣೆದುರು ಕಟ್ಟುತ್ತಿತ್ತು. ಕಾಮನಬಾಣದಿಂದ ತಾಡಿತನಾದ ಅವನಿಗೆ ಹಗಲು ಊಟವಿಲ್ಲ, ರಾತ್ರಿ ನಿದ್ದೆಯಿಲ್ಲ. ಹಗಲಿರುಳೂ ಆ ದುರುಳನಿಗೆ ಪಾರ್ವತಿಯದೇ ಚಿಂತೆ.

ವಾಮನ ಮಹಾಪುರಾಣದಲ್ಲಿ ಮದಾಲಸಾ - ಋತುಧ್ವಜ ಎಂಬ ೫೯ನೇ ಅಧ್ಯಾಯವು ಮುಗಿದುದು

—o—

# ರುದ್ರ ಜಪಿಸಿದ ಗಾಯತ್ರೀ



**೩೩೬. ಕ್ವಗತಃ ಶಂಕರೋ ಹ್ಯಾಸೀದ್ ಯೇನಾಂಬಾ ನಂದಿನಾ ಸಹ**
**ಅಂಧಕಂ ಯೋಧಯಾಮಾಸ ಏತನ್ಮೇ ವಕ್ತುಮರ್ಹಸಿ ॥**

**ನಾರದ** - ಪೂಜ್ಯರೇ, ಶಂಕರನು ಎಲ್ಲಿ ಹೋಗಿದ್ದನು ? ಅಂಧಕನ ಜೊತೆಗೆ ಸ್ವಯಂ ಅಂಬಿಕೆಯು ತಾನೇ ನಂದಿಯೊಡನೆ ಯುದ್ಧಮಾಡುವ ಪ್ರಸಂಗವು ಏಕೆ ಬಂದಿತು! ಇದನ್ನೆಲ್ಲ ನನಗೆ ಹೇಳಬೇಕು.

**ಪುಲಸ್ತ್ಯ** - ಒಂದು ಸಾವಿರ ವರ್ಷಗಳವರೆಗೆ ಮಹಾದೇವರು ಪಾರ್ವತಿಯೊಡನೆ ಶೃಂಗಾರ ಕೇಳಿಗಿಳಿದು ದೀರ್ಘಕಾಲ ರತಿಕ್ರೀಡೆಯಲ್ಲಿ ತೊಡಗಿದ್ದನಷ್ಟೇ! ಅದರಿಂದ ಬಹಳಷ್ಟು ವೀರ್ಯ ಹಾನಿಯಾಗಿ ಅವನು ತೇಜೋಹೀನನಾದನು. ತನ್ನ ಶಕ್ತಿ ವೀರ್ಯವೆಲ್ಲ ಪ್ರದೀರ್ಘವಿಹಾರದಿಂದ ನಾಶವಾಗಿ ತಾನು ತೇಜೋಹೀನನಾಗಿದ್ದೇನೆಂದು ಅವನಿಗೆ ತಿಳಿಯಿತು. ಆದುದರಿಂದ ನಷ್ಟವಾದ ತನ್ನ ತೇಜೋಬಲವನ್ನು ತಿರುಗಿ ಸಂಪಾದಿಸಬೇಕೆಂದು ಅವನು ನಿರ್ಧರಿಸಿದನು. ಅದಕ್ಕಾಗಿ ಪಾರ್ವತಿಯನ್ನು ಬಿಟ್ಟು ತಪೋನುಷ್ಠಾನ ಕೈಕೊಳ್ಳಬೇಕೆಂದು ಸಂಕಲ್ಪಿಸಿದನು. ಅದಕ್ಕಾಗಿ ಸವಿನುಡಿಗಳಿಂದ ಶಿವೆಯನ್ನು ಸಂತೈಸಿ ಒಪ್ಪಿಸಿ ಅವಳ ರಕ್ಷಣೆಗಾಗಿ ನಂದೀಶ್ವರನನ್ನು ನಿಯಮಿಸಿ ತಾನು ಮಹಾವ್ರತವನ್ನು ಕೈಕೊಂಡು ಭೂಲೋಕದಲ್ಲಿ ಸಂಚರಿಸಿದನು.

ವ್ರತದೀಕ್ಷೆ ತೊಟ್ಟ ಮಹೇಶ್ವರನು ಕೊರಳಿನಲ್ಲಿ ದೊಡ್ಡ ದೊಡ್ಡ ಮುದ್ರೆಗಳ ಲಾಂಛನ. ಕೈಗಳಲ್ಲಿ ಹಾವಿನ ಕಡಗಗಳು. ಸೊಂಟದಲ್ಲಿ ಶಂಖಗಳ ಸರಪಣಿ. ಬಲಗೈಯಲ್ಲಿ ಭಿಕ್ಷೆಯ ತಲೆಬುರುಡೆ. ಎಡಗೈಯಲ್ಲಿ ಕಮಂಡಲು. ಒಂದು ತಾಣದಲ್ಲಿ ಒಪ್ಪೊತ್ತೇವಾಸ. ಬೆಟ್ಟ ಬಯಲು, ಮರದಡಿ, ನದಿಯತಡಿ, ಎಲ್ಲಾಯಿತೋ ಅಲ್ಲಿಯೇ ಇರುವದು. ಮೂರುಲೋಕದಲ್ಲಿಯೇ ವಿಹಾರ. ಗಡ್ಡೆಗೆಣಸೇ ಆಹಾರ. ಅದೂ ದೊರೆಯದಿದ್ದರೆ ತೊರೆಯ ತೀರ್ಥವೇ ತಿನಿಸು, ಅದೇ ಉಣಿಸು. ಹೀಗೆ ಒಂಬೈನೂರು ವರ್ಷ ನಡೆಯಿತು ಶಂಕರನ ಈ ಉಗ್ರವ್ರತ. ಅನಂತರ ಅವನು ಬಾಯಲ್ಲಿ ಒಂದು ಬಳ್ಳಿಯ ಬೇರನ್ನು ಇಟ್ಟುಕೊಂಡು ವೀಟಾ ಎಂಬ ಯೋಗಮುದ್ರೆಯನ್ನು ಹಣೆಯಲ್ಲಿ ಧರಿಸಿ ಪ್ರಾಣಾಯಾಮದಿಂದ ಉಸಿರನ್ನು ಬಿಗಿಹಿಡಿದು ಹಿಮಾಚಲದ ಬೆನ್ನಮೇಲಿನ ಸಮತಟ್ಟಾದ ಒಂದು ಬಂಡೆಯ ಮೇಲೆ ತಪಂಗೈಯುತ್ತ ಕುಳಿತುಕೊಂಡನು. ಆಗ ಬ್ರಹ್ಮಕಪಾಲವು ವೀಟೆಯನ್ನು ಭೇದಿಸಿಕೊಂಡು ತೇಜಃಪುಂಜದಿಂದ ಕೂಡಿ ಶಂಕರನ ಜಟಾಮಧ್ಯದಿಂದ ಹೊರಟು ಭೂಮಿಯಲ್ಲಿ ಬಿದ್ದಿತು. ಹಾಗೆ ಬಿದ್ದ ವೀಟೆಯಿಂದ ಹಿಮಾಚಲದ ಗಿರಿಶೃಂಗವು ಒಡೆದುಸಿಡಿದು ನೆಲಸಮವಾಯಿತು. ಅದು ಭೂಮಿಯಲ್ಲಿ ಬಿದ್ದು ಉಂಟಾದ ತೆಗ್ಗಿನಲ್ಲಿ ನೀರು ತುಂಬಿ ಕೇದಾರ ತೀರ್ಥ ಎನಿಸಿತು. ಆ ತೀರ್ಥಕ್ಕೆ ಶಿವನು ಇಂತು ವರ ಕೊಟ್ಟನು.

''ಪಾಪಪರಿಹಾರಕವೂ, ಪುಣ್ಯಪ್ರದವೂ ಆದ ಈ ಮೋಕ್ಷಸಾಧನ ತೀರ್ಥದಲ್ಲಿ ಇಂದ್ರಿಯಗಳನ್ನು ಅಂಕೆಯಲ್ಲಿರಿಸಿ ಆರು ತಿಂಗಳವರೆಗೆ ಕಳ್ಳು ಕುಡಿಯದೇ ಮಾಂಸತಿನ್ನದೇ ಬ್ರಹ್ಮಚರ್ಯದಿಂದ ಇದ್ದು ಪರಪಾಕ ಬಿಟ್ಟು, ನನ್ನನ್ನು ಆರಾಧಿಸುವವರಿಗೆ ಮನಸ್ಸಿನಲ್ಲಿಯೇ ಮಹಾದೇವ ಹೃದಯದಲ್ಲಿಯೇ ಈ ಕೇದಾರೇಶ್ವರ ಲಿಂಗವು ಅಚಲವಾಗಿ ನೆಲೆ

ನಿಲ್ಲುವದು. ಅವರಿಗೆ ಎಂದೂ ದುಷ್ಕಾರ್ಯಗಳತ್ತ ಮನಸ್ಸು ಎಳೆಸುವದಿಲ್ಲ. ಇಲ್ಲಿ ಮಾಡಿದ ಶ್ರಾದ್ಧದಿಂದ ಪಿತೃಗಳಿಗೆ ಅಕ್ಷಯ ತೃಪ್ತಿ. ಇಲ್ಲಿ ಸ್ನಾನ, ದಾನ, ತಪ, ಹೋಮ, ಜಪ ಏನೇ ಪುಣ್ಯಕಾರ್ಯ ಮಾಡಿದರೆ ಅದೆಲ್ಲವೂ ಅಕ್ಷಯ, ಅನಂತ ಫಲಪ್ರದ ವಾಗುವದು. ಅವರಿಗೆ ಪುನರ್ಜನ್ಮವೇ ಇಲ್ಲ.'' ಹೀಗೆ ಹರನಿಂದ ವರ ಪಡೆದ ತೀರ್ಥವು ದೇವತೆಗಳನ್ನು ಆಕರ್ಷಿಸಿದೆ. ಶಿವ ವಚನದಂತೆ ಎಲ್ಲ ಜನರನ್ನೂ ಪಾವನಗೊಳಿಸುತ್ತದೆ. ಕೇದಾರ ತೀರ್ಥಕ್ಕೆ ಈ ರೀತಿ ವರವನ್ನು ಕೊಟ್ಟು ಹರನು ಪಾಪನಾಶಿನಿಯೂ ಸೂರ್ಯಪುತ್ರಿಯೂ ಆದ ಯಮುನೆಯಲ್ಲಿ ಸ್ನಾನ ಮಾಡಲು ಹೋದನು. ನದಿಯಲ್ಲಿ ಇಳಿದು ಸ್ನಾನಮಾಡಿ ಆ ಯಮುನೆಯ ಆಳವಾದ ನೀರಿನಲ್ಲಿ ಇಳಿದು ಜಲ ಸಮಾಧಿಯಲ್ಲಿ ಕುಳಿತು ಆ ಗಿರೀಶನು ಗಾಯಿತ್ರೀ ಜಪವನ್ನು ಮಾಡತೊಡಗಿದನು.

ಹೀಗೆ ಶಂಕರನು ನದೀ ನೀರಿನಲ್ಲಿ ಮುಳುಗಿ ಗಾಯತ್ರಿ ಮಂತ್ರವನ್ನು ಜಪಿಸಲು ಮೊದಲು ಮಾಡಿದ ಬಳಿಕ ಒಂದು ವರ್ಷ ಆರು ತಿಂಗಳು ಕಳೆಯಿತು. ಆದರೂ ಶಿವನು ಸಮಾಧಿ ಬಿಟ್ಟು ಏಳಲಿಲ್ಲ. ಇದನ್ನು ಕಂಡು ಬ್ರಹ್ಮನು ನಡುಗಿದನು. ಹದಿನಾಲ್ಕು ಲೋಕಗಳು ಏಳು ಸಮುದ್ರಗಳು ಎಲ್ಲ ಕುಲ ಪರ್ವತಗಳು ನಕ್ಷತ್ರ ತಾರಾಗಣ ಸಹಿತವಾದ ಅಂತರಿಕ್ಷವು ಆಂಕಪಿಸಿದವು. ಇಂದ್ರಾದಿದೇವತೆಗಳೆಲ್ಲರೂ ತಮ್ಮ ಆಸನದಿಂದ ಹೊಯ್ದಾಡಿದರು. ದೊಡ್ಡ ದೊಡ್ಡ ಮಹರ್ಷಿಗಳು ''ಲೋಕಗಳಿಗೆಲ್ಲ ಕಲ್ಯಾಣವಾಗಲಿ. ಜನರಿಗೆ ಮಂಗಳವಾಗಲಿ'' ಎಂದು ಶಾಂತಿ ಮಂತ್ರವನ್ನು ಜಪಿಸತೊಡಗಿದರು. ಹೀಗೆ ಪ್ರಪಂಚವೇ ಪ್ರಕ್ಷುಬ್ಧವಾದುದನ್ನು ಕಂಡು ಸುರ ಲೋಕದ ಹಿರಿಯರೆಲ್ಲರೂ ಬ್ರಹ್ಮಲೋಕಕ್ಕೆ ಹೋದರು. ''ಈ ಲೋಕಕ್ಷೋಭಕ್ಕೆ ಕಾರಣವೇನು?'' ಎಂದು ವಿಚಾರಿಸಿದರು. ಆಗ ತಾವರೆಯಿಂದ ಜನಿಸಿದ ಆ ವಿಧಾತನು ''ನನಗೂ ಈ ಲೋಕ ಕ್ಷೋಭದ ಕಾರಣ ತಿಳಿದಿಲ್ಲ. ಅದನ್ನು ತಿಳಿದುಕೊಳ್ಳಲು ಚಕ್ರಗದಾಧಾರಿಯಾದ ಶ್ರೀಹರಿಯ ಬಳಿಗೆ ಹೋಗುವದೇ ಯೋಗ್ಯ ಎನಿಸುತ್ತಿದೆ?'' ಎಂದು ಹೇಳಿದನು. ಚತುರ್ಮುಖನ ಈ ನುಡಿಯನ್ನು ಕೇಳಿ ಶಚೀಪತಿಯೇ ಮೊದಲಾದ ಸುರರೆಲ್ಲರು ಪಿತಾಮಹನನ್ನೇ ಮುಂದು ಮಾಡಿಕೊಂಡು ಮುರಾರಿಯ ಮಂದಿರಕ್ಕೆ ಹೋದರು.

**ನಾರದ** - ದೇವರ್ಷಿಗಳೇ, ಈ ಮುರಾರಿಯೆಂದರೆ ಯಾರು? ಇವನೇನು ದೇವತೆಯೋ, ಯಕ್ಷನೋ, ಕಿನ್ನರನೋ, ದೈತ್ಯನೋ, ರಾಕ್ಷಸನೋ, ಮನುಷ್ಯನೋ? ಯಾರಿವನು ? ಅದನ್ನು ನನಗೆ ಹೇಳಿರಿ.

**ಪುಲಸ್ತ್ಯ** - ಸತ್ವರಜಸ್‌ತಮಸ್ ಎಂಬ ತ್ರಿಗುಣಾತ್ಮಕವಾದ ಪ್ರಪಂಚವನ್ನೆಲ್ಲ ನಿರ್ಮಿಸಿ ತಾನು ಮಾತ್ರ ಆ ಪ್ರಾಕೃತ ಗುಣಗಳಿಂದ ರಹಿತನಾಗಿ ಅಖಂಡ ಬ್ರಹ್ಮಾಂಡ ವನ್ನೆಲ್ಲ ವ್ಯಾಪಿಸಿದ ಗುಣ ಪರಿಪೂರ್ಣವಾದ ಪರಬ್ರಹ್ಮನೇ ಮುರಾರಿ ಎಂದು ಕರೆಯಲ್ಪಡುತ್ತದೆ.

**ನಾರದ**- ಆವಿಷ್ಣುಗೆಮುರಾರಿಎಂಬಹೆಸರುಏಕೆಬಂದಿತು? ಮುರಎಂದರೆಯಾರು? ಅವನುಯಾರಮಗಅವನನ್ನುವಿಷ್ಣುಏಕೆಸಂಹರಿಸಿದನು? ಇದನ್ನೆಲ್ಲತಿಳಿಸಬೇಕು.

**ಪುಲಸ್ತ್ಯ** - ಓ! ಇದೊಂದು ಕೌತುಕದ ಕಥೆ. ಶ್ರೀಹರಿಯು ಆ ಮುರಾಸುರನನ್ನು ನಿಗ್ರಹಿಸಿದ್ದು ಒಂದು ವಿಚಿತ್ರ ಆಖ್ಯಾನವೇ ಆಗಿದೆ. ಪಾಪನಾಶಕವೂ ಪುಣ್ಯದಾಯಕವೂ ಆದ ಶ್ರೀಹರಿಯ ಆ ಮುರಮರ್ಧನದ ಕಥೆಯನ್ನು ಹೇಳುತ್ತೇನೆ, ಕೇಳು.

ಕಶ್ಯಪ ಋಷಿಗಳಿಗೆ ದನು ಎಂಬ ಮಡದಿಯಲ್ಲಿ ಮುರನು ಔರಸ ಪುತ್ರನಾಗಿ ಜನಿಸಿದನು. ಅವನು ದೊಡ್ಡವನಾದ ಬಳಿಕ ಭೀಕರ ಸಂಗ್ರಾಮದಲ್ಲಿ ತನ್ನ ಸೋದರರಾದ ದೈತ್ಯರೆಲ್ಲರೂ ದೇವತೆಗಳ ಹೊಡೆತ ತಿಂದು ಹತರಾದುದನ್ನು ನೋಡಿದನು. ಇದರಿಂದ ಆ ಮುರನ ಮನಸ್ಸಿನಲ್ಲಿ ಭೀತಿಯ ಭೂತವು ಮನೆ ಮಾಡಿತು. ಭಯ ಭ್ರಾಂತನಾದ ಅವನು ಬ್ರಹ್ಮದೇವರನ್ನು ಕುರಿತು ತಪಸ್ಸನ್ನು ಮಾಡಿದನು. ಅವನ ಆರಾಧನೆಯಿಂದ ಪರಿತೋಷಿತನಾದ ಪರಮೇಷ್ಠಿಯು ಪ್ರಸನ್ನನಾಗಿ ''ನಿನಗೆ ಬೇಕಾದ ವರವನ್ನು ಕೇಳಿಕೋ'' ಎಂದು ನುಡಿದನು. ಆಗ ಆ ಮುರಾಸುರನು ಬ್ರಹ್ಮದೇವರಿಗೆ ಉತ್ಸಾಹಿತನಾಗಿ ಹೀಗೆ ವರ ಬೇಡಿಕೊಂಡನು -

''ಪ್ರಭುವೇ, ಯುದ್ಧದಲ್ಲಿ ನಾನು ಕೈಯಿಂದ ಮುಟ್ಟಿದವರೆಲ್ಲರೂ ಕೂಡಲೇ ಮರಣಹೊಂದಬೇಕು. ಅವನು ಯಾವನೇ ಇರಲಿ. ದೇವನಿರಲಿ, ದಾನವನಿರಲಿ, ನನ್ನ ಹಸ್ತಸ್ಪರ್ಶ ಮಾತ್ರದಿಂದಲೇ ಹತನಾಗಿ ಬೀಳಬೇಕು.'' ಇದಕ್ಕೆ ಪಿತಾಮಹನು ''ತಥಾಸ್ತು, ಹಾಗೇ ಆಗಲಿ'' ಎಂದು ನುಡಿದು ಅವನು ಬಯಸಿದ ವರವನ್ನು ಕೊಟ್ಟು ಕಳಿಸಿದನು.

ಆ ವರದ ಬಲದಿಂದ ಅತ್ಯಂತ ಬಲಿಷ್ಠನಾದ ಮುರಾಸುರನು ಮೇರು ಮಂದರ ಹಿಮಾಚಲ ಮೊದಲಾದ ತಾಣಗಳಿಗೆ ಹೋಗಿ, ದೇವತೆಗಳನ್ನೂ ಯಕ್ಷರನ್ನೂ ಕಿನ್ನರರನ್ನೂ ಯುದ್ಧಕ್ಕಾಗಿ ಆಹ್ವಾನ ಮಾಡಿದನು. ಯಾರೂ ಅವನೊಡನೆ ಕಾದಲು ಬರಲಿಲ್ಲ. ಆಗ ಕ್ರುದ್ಧನಾದ ಆ ಉದ್ಧಟ ದೈತ್ಯನು ಸ್ವರ್ಗಕ್ಕೆ ಹಾರಿ ಅಲ್ಲಿಯ ರಾಜಧಾನಿಯಾದ ಅಮರಾವತಿಗೇ ಸಾರಿದನು. ಸ್ವಯಂ ಇಂದ್ರನನ್ನು ಕದನಕ್ಕೆ ಆಮಂತ್ರಿಸಿದನು. ಅವನಿಗೆ ಬ್ರಹ್ಮದೇವರು ಕೊಟ್ಟ ವರದ ವಿಚಾರವು ಆ ಸುರಪತಿಗೆ ತಿಳಿದಿತ್ತು. ಅವನು ಇವನೊಡನೆ ಸಮರಕ್ಕೆ ಬರಲಿಲ್ಲ. ಆಗ ಆ ಮುರಾಸುರನು ತನ್ನ ಕೈಯನ್ನೇ ಮುಂದೆ ಮಾಡಿಕೊಂಡು ಅಮರಾವತಿಯಲ್ಲಿ ಒಳಹೊಕ್ಕು ಮುಂದೆ ನಡೆದನು. ಆ ದೇವಪುರಿಯ ದಾರಿಯಲ್ಲಾಗಲಿ ಯಾರೂ ಅವನನ್ನು ತಡೆಯಲಿಲ್ಲ. ಅವನು ನೇರವಾಗಿ ಅಮರೇಶ್ವರನಾದ ಇಂದ್ರನ ಅರಮನೆಗೆ ಬಂದು ಹುಂಕರಿಸಿದನು. ''ಸಾವಿರ ಗಣ್ಣಿನ ಶಚೀಪತಿಯೇ ನನ್ನೊಡನೆ ಯುದ್ಧಕ್ಕೆ ಬಾ, ಇಲ್ಲದಿದ್ದರೆ ಈ ಸ್ವರ್ಗ ಸಾಮ್ರಾಜ್ಯವನ್ನೆಲ್ಲ ನನಗೆ ಒಪ್ಪಿಸಿ, ಇಲ್ಲಿಂದ ನೀನು ಹೊರಟುಹೋಗು'' ಎಂದು ಎಚ್ಚರಿಕೆ ಕೊಟ್ಟನು. ಮುರಾಸುರನ ಈ ಬೆದರಿಕೆಯ ನುಡಿಗಳನ್ನು ಕೇಳಿ ಹೆದರಿ ಹೋದ ದೇವೇಂದ್ರನು ಅವನನ್ನು ಎದುರಿಸುವ ಶಕ್ತಿ ಇಲ್ಲದೇ ಸ್ವರ್ಗವನ್ನು ತೊರೆದು ಹೊರಹೊರಟನು. ಇಂದ್ರನ ಐರಾವತ ಹಾಗೂ ವಜ್ರಾಯುಧ ಎರಡನೂ ಆ ದೈತ್ಯನು ಕಸಿದುಕೊಂಡನು. ಅದರಿಂದ ಇಂದ್ರನು ಪಾದಚಾರಿಯಾಗಿ ತನ್ನ ಮಡದಿ ಮಕ್ಕಳು ಹಾಗೂ ಎಲ್ಲ ದೇವತೆಗಳೊಂದಿಗೆ ಅಮರಾವತಿಯನ್ನು ಬಿಟ್ಟು ನೆಲಕ್ಕೆ ಇಳಿದುಬಂದನು. ಬರಿಗೈ ಬರಿಗಾಲಿನಿಂದ ಭೂಲೋಕಕ್ಕೆ ಇಳಿದು ಬಂದ ಆ ನಾಕಲೋಕದ ಅರಸನು ಈ ಭೂಲೋಕದಲ್ಲಿಯ ಭರತಖಂಡದಲ್ಲಿ ಹರಿಯುವ ಯಮುನಾ ನದಿಯ ದಕ್ಷಿಣ ತೀರದಲ್ಲಿ ಬಂದು ನಗರವೊಂದನ್ನು ನಿರ್ಮಿಸಿ ವಾಸ ಮಾಡಿದನು. ಅತ್ತ ಮುರದಾನವನು ಸ್ವರ್ಗದ ಸಿಂಹಾಸನವನ್ನು ಏರಿ ಲೋಕಗಳ ಮಹಾ ಸಾರ್ವಭೌಮನಾಗಿ ಸ್ವರ್ಗದ ಭೋಗಭಾಗ್ಯಗಳನ್ನೆಲ್ಲ ಯಥೇಚ್ಛವಾಗಿ ಅನುಭವಿಸ ತೊಡಗಿದನು. ಮಯ ತಾರ

ಮುಂತಾದ ದಾನವರೆಲ್ಲರೂ ಮಯಾಸುರನ ಈ ಸ್ವರ್ಗದ ದಿಗ್ವಿಜಯದ ವಾರ್ತೆಯನ್ನು ಕೇಳಿ ಹುಮ್ಮಸದಿಂದ ಎಲ್ಲರೂ ಸ್ವರ್ಗಕ್ಕೆ ನಡೆದರು. ಅಮರಾವತಿಯಲ್ಲಿ ಅವರಿಗೆ ಭೋಗ್ಯ ಭಾಗ್ಯಗಳ ಬಾಗಿಲವೇ ತೆರೆದಿಟ್ಟಿತ್ತು. ತಮ್ಮ ಸಾಮ್ರಾಟ ಮುರಾಸುರನೊಂದಿಗೆ ದೇವಲೋಕದ ದಿವ್ಯಭೋಗ ಹಾಗೂ ಸಿರಿ ಸಂಪದಗಳನ್ನೆಲ್ಲ ಸೂರೆಗೊಂಡರು.

ಮುಂದೆ ಒಂದು ದಿನ ಆ ಮುರ ಮಹಾರಾಜನು ಮಹೀತಳಕ್ಕೆ ಸಹಜವಾಗಿ ಬಂದನು. ಭೂಮಂಡಲದಲ್ಲಿ ಸಾನಂದ ಸ್ವೈರ ಸಂಚಾರಗೈಯುತ್ತ ಅವನು ಆನೆಯನ್ನು ಏರಿಕೊಂಡು ಸರಯೂ ನದಿಯ ತೀರಕ್ಕೆ ಬಂದನು. ಆ ಕಾಲದಲ್ಲಿ ಸರಯೂ ನದಿಯ ದಂಡೆಯ ಮೇಲೆ ಸೂರ್ಯವಂಶದ ಶೂರ ರಾಜನಾದ ರಘುರಾಜನು ದೀಕ್ಷೆ ಪಡೆದ ಯಜ್ಞವನ್ನು ಮಾಡುತ್ತಲಿದ್ದನು. ಗಜಾರೂಢನಾದ ಮುರ ಪ್ರಭುವಿನ ಸವಾರಿ ಅಲ್ಲಿಗೆ ಚಿತ್ತೈಸಿತು. ಯಜ್ಞದೀಕ್ಷಿತನಾದ ಆ ರಘುರಾಜನಿಗೆ ಮುರನು ಹೇಳಿದನು. ''ರಘುರಾಜನೇ, ನನ್ನೊಡನೆ ಯುದ್ಧಕ್ಕೆ ಬಾ. ಇಲ್ಲದಿದ್ದರೆ ಯಜ್ಞವನ್ನಾದರೂ ಇಲ್ಲಿಗೆ ನಿಲ್ಲಿಸು. ದೇವತೆಗಳಿಗೆ ಯಜ್ಞದಲ್ಲಿ ಆಹುತಿ ಕೊಡುವದು ಬೇಡ.'' ಹೀಗೆ ಯಜ್ಞಕ್ಕೆ ವಿಘ್ನ ಮಾಡಲು ಬಂದ ಆ ದೈತ್ಯನ ಬಳಿಗೆ ಪುರೋಹಿತರಾದ ವಶಿಷ್ಠರು ಸ್ವಯಂ ತಾವೇ ಬಂದು ಚತುರತೆಯಿಂದ ಮಾತನಾಡಿದರು.

''ದೈತ್ಯರಾಜನೇ, ಭೂಲೋಕದ ಈ ರಾಜರೆಲ್ಲರೂ ನಿನಗೆ ಎಂದೋ ಸೋತು ಹೋಗಿದ್ದಾರೆ. ಗೆದ್ದವರನ್ನೇ ಮತ್ತೆ ಗೆಲ್ಲುವದರಲ್ಲಿ ಯಾವ ಪುರುಷಾರ್ಥವಿದೆ? ನೀನು ಈವರೆಗೆ ಗೆಲ್ಲದ ವೀರರೊಡನೆ ಹೋರಾಡು. ಹೊಡೆಯುವ ಇಚ್ಛೆ ಇದ್ದರೆ ಆ ಯಮನನ್ನಾದರೂ ತಡೆದು ತಗ್ಗಿಸಿ ಶಾಸನ ಮಾಡು. ಈಗ ನಿನ್ನ ಆಜ್ಞೆಗೆ ತಲೆಬಾಗದ ಪ್ರಾಣಿಯೆಂದರೆ ಆ ಯಮನೊಬ್ಬನೇ. ನೀನು ಅವನೊಬ್ಬನನ್ನು ಗೆದ್ದರೆ ಪ್ರಪಂಚವನ್ನೇ ಗೆದ್ದಂತೆ.'' ಅತ್ಯಂತ ಬುದ್ಧಿವಂತರಾದ ವಶಿಷ್ಠರ ಈ ಜಾಣತನದ ನುಡಿಗಳನ್ನು ಕೇಳಿ ಆ ದಾನವ ದೊರೆಯು ಯಮಧರ್ಮನನ್ನೇ ಗೆದ್ದು ಬರಬೇಕೆಂದು ಹೊರಟನು. ಯಮಧರ್ಮನಿಗೆ ಈ ಸಮಾಚಾರವು ತಿಳಿಯಿತು. ಬ್ರಹ್ಮದೇವರು ಮುರನಿಗೆ ಕೊಟ್ಟ ವರದ ವಿಚಾರವು ಅವನಿಗೆ ಮೊದಲೇ ಗೊತ್ತಿತ್ತು. ಆದುದರಿಂದ ಅವನನ್ನು ಕೊಲ್ಲುವದು ಅಶಕ್ಯವೆಂದು ತಿಳಿದು ಮುರನ ಕಣ್ಣಿಗೆ ಬೀಳದೆ ತನ್ನ ವಾಹನವಾದ ಕೋಣವನ್ನು ಏರಿದನು. ಕೇಶವನ ಬಳಿಗೆ ಬಂದನು. ಅವನ ಕಾಲಿಗೆ ಬಿದ್ದನು. ಆ ಭಗವಂತನ ಎದುರು ಮುರಾಸುರನ ಕುಚೇಷ್ಟೆಗಳನ್ನೆಲ್ಲ ತಿಳಿಸಿದನು. ಧರ್ಮರಾಜನ ದೀನ ವಚನವನ್ನು ಕೇಳಿ ಶ್ರೀಹರಿಯು ಅವನನ್ನು ಸಂತೈಸುತ್ತ ''ಯಮನೇ, ಗಾಬರಿಯಾಗಬೇಡ. ಆ ದುಷ್ಟ ದೈತ್ಯನನ್ನು ನೀನು ಹೋಗಿ ನನ್ನ ಕಡೆಗೆ ಕಳಿಸಿಕೊಡು'' ಎಂದು ಹೇಳಿದನು.

ಆಗ ಯಮನು ಕೂಡಲೇ ಅಲ್ಲಿಂದ ಹೊರಟು ತನ್ನ ರಾಜಧಾನಿಯಾದ ಸಂಯಮನಿ ಪುರಕ್ಕೆ ಬಂದನು. ಅಷ್ಟರೊಳಗೆ ಮಯಾಸುರನು ಯಮಪಟ್ಟಣಕ್ಕೆ ದಾಳಿ ಇಟ್ಟಿದ್ದನು. ಅವನನ್ನು ಕಂಡು ಯಮನು ಕೇಳಿದನು, ''ದಾನವೇಶ್ವರನೇ, ನೀನು ಏನು ಮಾಡಬೇಕೆಂದು ಬಯಸಿರುವಿ, ನಾನು ನಿನ್ನ ವಚನದಂತೆ ನಡೆದುಕೊಳ್ಳುತ್ತೇನೆ.'' ಆಗ ಮುರನು ''ಯಮಧರ್ಮ, ನೀನು ಜಗತ್ತಿನ ಪ್ರಜೆಗಳನ್ನೆಲ್ಲ ನಿನ್ನ ನಿಯಂತ್ರಣದಲ್ಲಿ ಇಟ್ಟುಕೊಂಡಿರುವಿ. ನಿನಗೆ ಬೇಕಾದಾಗ ಜೀವಿಗಳನ್ನು ಸಂಹರಿಸಿ ಸೆಳೆದೊಯ್ಯುವಿ.

ಕಶ್ಯಪ ಋಷಿಗಳಿಗೆ ದನು ಎಂಬ ಮಡದಿಯಲ್ಲಿ ಮುರನು ಔರಸ ಪುತ್ರನಾಗಿ ಜನಿಸಿದನು. ಅವನು ದೊಡ್ಡವನಾದ ಬಳಿಕ ಭೀಕರ ಸಂಗ್ರಾಮದಲ್ಲಿ ತನ್ನ ಸೋದರರಾದ ದೈತ್ಯರೆಲ್ಲರೂ ದೇವತೆಗಳ ಹೊಡೆತ ತಿಂದು ಹತರಾದುದನ್ನು ನೋಡಿದನು. ಇದರಿಂದ ಆ ಮುರನ ಮನಸ್ಸಿನಲ್ಲಿ ಭೀತಿಯ ಭೂತವು ಮನೆ ಮಾಡಿತು. ಭಯ ಭ್ರಾಂತನಾದ ಅವನು ಬ್ರಹ್ಮದೇವರನ್ನು ಕುರಿತು ತಪಸ್ಸನ್ನು ಮಾಡಿದನು. ಅವನ ಆರಾಧನೆಯಿಂದ ಪರಿತೋಷಿತನಾದ ಪರಮೇಷ್ಠಿಯು ಪ್ರಸನ್ನನಾಗಿ ''ನಿನಗೆ ಬೇಕಾದ ವರವನ್ನು ಕೇಳಿಕೋ'' ಎಂದು ನುಡಿದನು. ಆಗ ಆ ಮುರಾಸುರನು ಬ್ರಹ್ಮದೇವರಿಗೆ ಉತ್ಸಾಹಿತನಾಗಿ ಹೀಗೆ ವರ ಬೇಡಿಕೊಂಡನು -

''ಪ್ರಭುವೇ, ಯುದ್ಧದಲ್ಲಿ ನಾನು ಕೈಯಿಂದ ಮುಟ್ಟಿದವರೆಲ್ಲರೂ ಕೂಡಲೇ ಮರಣಹೊಂದಬೇಕು. ಅವನು ಯಾವನೇ ಇರಲಿ. ದೇವನಿರಲಿ, ದಾನವನಿರಲಿ, ನನ್ನ ಹಸ್ತಸ್ಪರ್ಶ ಮಾತ್ರದಿಂದಲೇ ಹತನಾಗಿ ಬೀಳಬೇಕು.'' ಇದಕ್ಕೆ ಪಿತಾಮಹನು ''ತಥಾಸ್ತು, ಹಾಗೇ ಆಗಲಿ'' ಎಂದು ನುಡಿದು ಅವನು ಬಯಸಿದ ವರವನ್ನು ಕೊಟ್ಟು ಕಳಿಸಿದನು.

ಆ ವರದ ಬಲದಿಂದ ಅತ್ಯಂತ ಬಲಿಷ್ಠನಾದ ಮುರಾಸುರನು ಮೇರು ಮಂದರ ಹಿಮಾಚಲ ಮೊದಲಾದ ತಾಣಗಳಿಗೆ ಹೋಗಿ, ದೇವತೆಗಳನ್ನೂ ಯಕ್ಷರನ್ನೂ ಕಿನ್ನರರನ್ನೂ ಯುದ್ಧಕ್ಕಾಗಿ ಆಹ್ವಾನ ಮಾಡಿದನು. ಯಾರೂ ಅವನೊಡನೆ ಕಾದಲು ಬರಲಿಲ್ಲ. ಆಗ ಕ್ರುದ್ಧನಾದ ಆ ಉದ್ಧಟ ದೈತ್ಯನು ಸ್ವರ್ಗಕ್ಕೆ ಹಾರಿ ಅಲ್ಲಿಯ ರಾಜಧಾನಿಯಾದ ಅಮರಾವತಿಗೇ ಸಾರಿದನು. ಸ್ವಯಂ ಇಂದ್ರನನ್ನು ಕದನಕ್ಕೆ ಆಮಂತ್ರಿಸಿದನು. ಅವನಿಗೆ ಬ್ರಹ್ಮದೇವರು ಕೊಟ್ಟ ವರದ ವಿಚಾರವು ಆ ಸುರಪತಿಗೆ ತಿಳಿದಿತ್ತು. ಅವನು ಇವನೊಡನೆ ಸಮರಕ್ಕೆ ಬರಲಿಲ್ಲ. ಆಗ ಆ ಮುರಾಸುರನು ತನ್ನ ಕೈಯನ್ನೇ ಮುಂದೆ ಮಾಡಿಕೊಂಡು ಅಮರಾವತಿಯಲ್ಲಿ ಒಳಹೊಕ್ಕು ಮುಂದೆ ನಡೆದನು. ಆ ದೇವಪುರಿಯ ದಾರಿಯಲ್ಲಾಗಲಿ ಯಾರೂ ಅವನನ್ನು ತಡೆಯಲಿಲ್ಲ. ಅವನು ನೇರವಾಗಿ ಅಮರೇಶ್ವರನಾದ ಇಂದ್ರನ ಅರಮನೆಗೆ ಬಂದು ಹುಂಕರಿಸಿದನು. ''ಸಾವಿರ ಗಣ್ಣಿನ ಶಚೀಪತಿಯೇ ನನ್ನೊಡನೆ ಯುದ್ಧಕ್ಕೆ ಬಾ, ಇಲ್ಲದಿದ್ದರೆ ಈ ಸ್ವರ್ಗ ಸಾಮ್ರಾಜ್ಯವನ್ನೆಲ್ಲ ನನಗೆ ಒಪ್ಪಿಸಿ, ಇಲ್ಲಿಂದ ನೀನು ಹೊರಟುಹೋಗು'' ಎಂದು ಎಚ್ಚರಿಕೆ ಕೊಟ್ಟನು. ಮುರಾಸುರನ ಈ ಬೆದರಿಕೆಯ ನುಡಿಗಳನ್ನು ಕೇಳಿ ಹೆದರಿ ಹೋದ ದೇವೇಂದ್ರನು ಅವನನ್ನು ಎದುರಿಸುವ ಶಕ್ತಿ ಇಲ್ಲದೇ ಸ್ವರ್ಗವನ್ನು ತೊರೆದು ಹೊರಹೊರಟನು. ಇಂದ್ರನ ಐರಾವತ ಹಾಗೂ ವಜ್ರಾಯುಧ ಎರಡನೂ ಆ ದೈತ್ಯನು ಕಸಿದುಕೊಂಡನು. ಅದರಿಂದ ಇಂದ್ರನು ಪಾದಚಾರಿಯಾಗಿ ತನ್ನ ಮಡದಿ ಮಕ್ಕಳು ಹಾಗೂ ಎಲ್ಲ ದೇವತೆಗಳೊಂದಿಗೆ ಅಮರಾವತಿಯನ್ನು ಬಿಟ್ಟು ನೆಲಕ್ಕೆ ಇಳಿದುಬಂದನು. ಬರಿಗೈ ಬರಿಗಾಲಿನಿಂದ ಭೂಲೋಕಕ್ಕೆ ಇಳಿದು ಬಂದ ಆ ನಾಕಲೋಕದ ಅರಸನು ಈ ಭೂಲೋಕದಲ್ಲಿಯ ಭರತಖಂಡದಲ್ಲಿ ಹರಿಯುವ ಯಮುನಾ ನದಿಯ ದಕ್ಷಿಣ ತೀರದಲ್ಲಿ ಬಂದು ನಗರವೊಂದನ್ನು ನಿರ್ಮಿಸಿ ವಾಸ ಮಾಡಿದನು. ಅತ್ತ ಮುರದಾನವನು ಸ್ವರ್ಗದ ಸಿಂಹಾಸನವನ್ನು ಏರಿ ಲೋಕಗಳ ಮಹಾ ಸಾರ್ವಭೌಮನಾಗಿ ಸ್ವರ್ಗದ ಭೋಗಭಾಗ್ಯಗಳನ್ನೆಲ್ಲ ಯಥೇಚ್ಛವಾಗಿ ಅನುಭವಿಸ ತೊಡಗಿದನು. ಮಯ ತಾರ

ಮುಂತಾದ ದಾನವರೆಲ್ಲರೂ ಮಯಾಸುರನ ಈ ಸ್ವರ್ಗದ ದಿಗ್ವಿಜಯದ ವಾರ್ತೆಯನ್ನು ಕೇಳಿ ಹುಮ್ಮಸದಿಂದ ಎಲ್ಲರೂ ಸ್ವರ್ಗಕ್ಕೆ ನಡೆದರು. ಅಮರಾವತಿಯಲ್ಲಿ ಅವರಿಗೆ ಭೋಗ್ಯ ಭಾಗ್ಯಗಳ ಬಾಗಿಲವೇ ತೆರೆದಿಟ್ಟಿತ್ತು. ತಮ್ಮ ಸಾಮ್ರಾಟ ಮುರಾಸುರನೊಂದಿಗೆ ದೇವಲೋಕದ ದಿವ್ಯಭೋಗ ಹಾಗೂ ಸಿರಿ ಸಂಪದಗಳನ್ನೆಲ್ಲ ಸೂರೆಗೊಂಡರು.

ಮುಂದೆ ಒಂದು ದಿನ ಆ ಮುರ ಮಹಾರಾಜನು ಮಹೀತಳಕ್ಕೆ ಸಹಜವಾಗಿ ಬಂದನು. ಭೂಮಂಡಲದಲ್ಲಿ ಸಾನಂದ ಸ್ವೈರ ಸಂಚಾರಗೈಯುತ್ತ ಅವನು ಆನೆಯನ್ನು ಏರಿಕೊಂಡು ಸರಯೂ ನದಿಯ ತೀರಕ್ಕೆ ಬಂದನು. ಆ ಕಾಲದಲ್ಲಿ ಸರಯೂ ನದಿಯ ದಂಡೆಯ ಮೇಲೆ ಸೂರ್ಯವಂಶದ ಶೂರ ರಾಜನಾದ ರಘುರಾಜನು ದೀಕ್ಷೆ ಪಡೆದ ಯಜ್ಞವನ್ನು ಮಾಡುತ್ತಲಿದ್ದನು. ಗಜಾರೂಢನಾದ ಮುರ ಪ್ರಭುವಿನ ಸವಾರಿ ಅಲ್ಲಿಗೆ ಚಿತ್ತೈಸಿತು. ಯಜ್ಞದೀಕ್ಷಿತನಾದ ಆ ರಘುರಾಜನಿಗೆ ಮುರನು ಹೇಳಿದನು. ''ರಘುರಾಜನೇ, ನನ್ನೊಡನೆ ಯುದ್ಧಕ್ಕೆ ಬಾ. ಇಲ್ಲದಿದ್ದರೆ ಯಜ್ಞವನ್ನಾದರೂ ಇಲ್ಲಿಗೆ ನಿಲ್ಲಿಸು. ದೇವತೆಗಳಿಗೆ ಯಜ್ಞದಲ್ಲಿ ಆಹುತಿ ಕೊಡುವದು ಬೇಡ.'' ಹೀಗೆ ಯಜ್ಞಕ್ಕೆ ವಿಘ್ನ ಮಾಡಲು ಬಂದ ಆ ದೈತ್ಯನ ಬಳಿಗೆ ಪುರೋಹಿತರಾದ ವಶಿಷ್ಠರು ಸ್ವಯಂ ತಾವೇ ಬಂದು ಚತುರತೆಯಿಂದ ಮಾತನಾಡಿದರು.

''ದೈತ್ಯರಾಜನೇ, ಭೂಲೋಕದ ಈ ರಾಜರೆಲ್ಲರೂ ನಿನಗೆ ಎಂದೋ ಸೋತು ಹೋಗಿದ್ದಾರೆ. ಗೆದ್ದವರನ್ನೇ ಮತ್ತೆ ಗೆಲ್ಲುವದರಲ್ಲಿ ಯಾವ ಪುರುಷಾರ್ಥವಿದೆ? ನೀನು ಈವರೆಗೆ ಗೆಲ್ಲದ ವೀರರೊಡನೆ ಹೋರಾಡು. ಹೊಡೆಯುವ ಇಚ್ಛೆ ಇದ್ದರೆ ಆ ಯಮನನ್ನಾದರೂ ತಡೆದು ತಗ್ಗಿಸಿ ಶಾಸನ ಮಾಡು. ಈಗ ನಿನ್ನ ಆಜ್ಞೆಗೆ ತಲೆಬಾಗದ ಪ್ರಾಣಿಯೆಂದರೆ ಆ ಯಮನೊಬ್ಬನೇ. ನೀನು ಅವನೊಬ್ಬನನ್ನು ಗೆದ್ದರೆ ಪ್ರಪಂಚವನ್ನೇ ಗೆದ್ದಂತೆ.'' ಅತ್ಯಂತ ಬುದ್ಧಿವಂತರಾದ ವಶಿಷ್ಠರ ಈ ಜಾಣತನದ ನುಡಿಗಳನ್ನು ಕೇಳಿ ಆ ದಾನವ ದೊರೆಯು ಯಮಧರ್ಮನನ್ನೇ ಗೆದ್ದು ಬರಬೇಕೆಂದು ಹೊರಟನು. ಯಮಧರ್ಮನಿಗೆ ಈ ಸಮಾಚಾರವು ತಿಳಿಯಿತು. ಬ್ರಹ್ಮದೇವರು ಮುರನಿಗೆ ಕೊಟ್ಟ ವರದ ವಿಚಾರವು ಅವನಿಗೆ ಮೊದಲೇ ಗೊತ್ತಿತ್ತು. ಆದುದರಿಂದ ಅವನನ್ನು ಕೊಲ್ಲುವದು ಅಶಕ್ಯವೆಂದು ತಿಳಿದು ಮುರನ ಕಣ್ಣಿಗೆ ಬೀಳದೆ ತನ್ನ ವಾಹನವಾದ ಕೋಣವನ್ನು ಏರಿದನು. ಕೇಶವನ ಬಳಿಗೆ ಬಂದನು. ಅವನ ಕಾಲಿಗೆ ಬಿದ್ದನು. ಆ ಭಗವಂತನ ಎದುರು ಮುರಾಸುರನ ಕುಚೇಷ್ಟೆಗಳನ್ನೆಲ್ಲ ತಿಳಿಸಿದನು. ಧರ್ಮರಾಜನ ದೀನ ವಚನವನ್ನು ಕೇಳಿ ಶ್ರೀಹರಿಯು ಅವನನ್ನು ಸಂತೈಸುತ್ತ ''ಯಮನೇ, ಗಾಬರಿಯಾಗಬೇಡ. ಆ ದುಷ್ಟ ದೈತ್ಯನನ್ನು ನೀನು ಹೋಗಿ ನನ್ನ ಕಡೆಗೆ ಕಳಿಸಿಕೊಡು'' ಎಂದು ಹೇಳಿದನು.

ಆಗ ಯಮನು ಕೂಡಲೇ ಅಲ್ಲಿಂದ ಹೊರಟು ತನ್ನ ರಾಜಧಾನಿಯಾದ ಸಂಯಮನಿ ಪುರಕ್ಕೆ ಬಂದನು. ಅಷ್ಟರೊಳಗೆ ಮಯಾಸುರನು ಯಮಪಟ್ಟಣಕ್ಕೆ ದಾಳಿ ಇಟ್ಟಿದ್ದನು. ಅವನನ್ನು ಕಂಡು ಯಮನು ಕೇಳಿದನು, ''ದಾನವೇಶ್ವರನೇ, ನೀನು ಏನು ಮಾಡ ಬೇಕೆಂದು ಬಯಸಿರುವಿ, ನಾನು ನಿನ್ನ ವಚನದಂತೆ ನಡೆದುಕೊಳ್ಳುತ್ತೇನೆ.'' ಆಗ ಮುರನು ''ಯಮಧರ್ಮ, ನೀನು ಜಗತ್ತಿನ ಪ್ರಜೆಗಳನ್ನೆಲ್ಲ ನಿನ್ನ ನಿಯಂತ್ರಣದಲ್ಲಿ ಇಟ್ಟುಕೊಂಡಿರುವಿ. ನಿನಗೆ ಬೇಕಾದಾಗ ಜೀವಿಗಳನ್ನು ಸಂಹರಿಸಿ ಸೆಳೆದೊಯ್ಯುವಿ.

ಇಂದಿನಿಂದ ಈ ಪ್ರಜಾನಿಯಮನ ಕಾರ್ಯವನ್ನು ನೀನು ಬಿಟ್ಟು ಬಿಡಬೇಕು. ಇಲ್ಲದಿದ್ದರೆ ನಾನು ನಿನ್ನ ತಲೆಯನ್ನು ಕಡಿದು ನೆಲದ ಮೇಲೆ ಚೆಲ್ಲುತ್ತೇನೆ.'' ದೈತ್ಯರಾಜನ ಈ ಕ್ರೂರ ಕಠೋರ ವಾಕ್ಯವನ್ನು ಕೇಳಿ ಯಮನು ಮೆತ್ತಗಾಗಿ ನುಡಿದನು, ''ಇನ್ನು ಮೇಲೆ ಈ ಪ್ರಪಂಚದಲ್ಲಿಯ ಪ್ರಜಾಕೋಟಿಯನ್ನೆಲ್ಲ ನೀನೇ ನಿಯಮಿಸು. ಈಗ ಜಗದ್ರಕ್ಷನು ನೀನೇ ಅಲ್ಲವೇ. ಇನ್ನು ಮೇಲೆ ನಾನು ಮೊದಲಿನ ಜಗನ್ನಿಯಾಮಕನ ಮಾತನ್ನು ಬಿಟ್ಟು ಹೊಸ ನಿಯಾಮಕನಾದ ನಿನ್ನ ಮಾತನ್ನೇ ನಡೆಸುತ್ತೇನೆ.'' ಆಗ ಮುರನು ಮತ್ತೆ ಕೌತುಕಪೂರ್ಣನಾಗಿ ಕೇಳಿದನು - ''ಈವರೆಗೆ ನಿನಗೆ ನಿಯಾಮಕನು ಆಗಿದ್ದವನು ಯಾರು? ನಿನಗಿಂತ ಮಿಗಿಲಾದ ಆ ನಿನ್ನ ಒಡೆಯನನ್ನು ನಾನೇ ಗೆದ್ದು ಬರುತ್ತೇನೆ. ಮುಂದಿನ ನಿಯಮನ ಅಥವಾ ಅನಿಯಮನಗಳ ಸಮಾಚಾರವು ನೀನು ಗೆದ್ದ ಬಳಿಕವಲ್ಲವೇ? ಆ ಬಳಿಕ ನಿನಗೆ ಸರಿಕಂಡಂತೆ ಮಾಡಲು ಬರುವದು.

**ಯಮ** - ಹರಿಯ ಬಳಿಗೆ ಹೋಗಬೇಕೆಂದಿದ್ದರೆ ಮೊದಲು ನೀನು ಹಾಲಿನ ಕಡಲಿಗೆ ಹೋಗು, ಅದಕ್ಕೆ ಕ್ಷೀರಸಾಗರ ಎಂದು ಹೆಸರು. ಲೋಕನಾಥನು ಜಗತ್ಕಾರಣನೂ ಆದ ಪೂಜ್ಯನಾದ ಶ್ರೀಹರಿಯು ಆ ಹಾಲಿನ ಸಮುದ್ರದಲ್ಲಿ ಇರುತ್ತಾನೆ.

**ಮುರ** - ಹಾಗಿದ್ದರೆನಾನುಈಗಅಲ್ಲಿಗೇಹೋಗುತ್ತೇನೆ. ಆದರೆನಾನುಬರುವವರೆಗೆ ನೀನುಮಾನವರನ್ನು ನಿಯಮನಮಾಡಲಿಕ್ಕೆ ಹೋಗಬೇಡ. ಯಾರನ್ನೂ ಕೊಲ್ಲಬೇಡ.

**ಯಮ** - ನೀನಂತೂ ಈಗ ಅಲ್ಲಿಗೆ ಹೋಗು, ನಿನ್ನ ಅನುಚರನಾಗಿಯೇ ನಾನು ಜಗತ್ತಿನ ನಿಯಮನ ಕಾರ್ಯವನ್ನು ಮುಂದುವರಿಸುವೆ. ಹೀಗೆ ಯಮದೇವರ ಜೊತೆಗೆ ಮಾತನಾಡಿ ಮುರದೈತ್ಯನು ಕ್ಷೀರ ಸಾಗರಕ್ಕೆ ನಡೆದನು. ಆ ಹಾಲ್ಗಡಲಿನಲ್ಲಿ ಹರಿಯು ಚತುರ್ಮೂರ್ತಿಯಾಗಿ ಹಾವಿನ ಹಾಸಿಗೆಯ ಮೇಲೆ ಮಲಗಿದ್ದನು.

**ನಾರದ** - ಭಗವಾನ್ ಶ್ರೀವಿಷ್ಣು ಒಬ್ಬನೇ ಅಲ್ಲವೇ? ಸರ್ವತ್ರವ್ಯಾಪ್ತನೂ ಅವ್ಯಕ್ತನೂ ಆದ ಆ ಭಗವಂತನು ನಾಲ್ಕು ವಿಧವಾದ ಮೂರ್ತಿಸ್ವರೂಪನು ಹೇಗೆ ಆಗುವನು?

**ಪುಲಸ್ತ್ಯ** - ಅವ್ಯಕ್ತನೂ, ವಿಶ್ವವ್ಯಾಪಿಯೂ ಆಗಿದ್ದರೂ ಒಬ್ಬನೇ ಆಗಿದ್ದರೂ ಆ ಜಗನ್ನಾಥನು ಚತುರ್ಮೂರ್ತಿಯಾದ ಬಗೆಯನ್ನು ಹೇಳುತ್ತೇನೆ, ಕೇಳು - ''ಬರೀಶುಷ್ಕತರ್ಕದಿಂದ ಊಹಿಸಲು ಆ ಪರಮಾತ್ಮನು ಅಶಕ್ಯನಾಗಿದ್ದಾನೆ. ಇದಮಿತ್ಥಂ'' ''ಇವನು ಹೀಗೆ ಇಷ್ಟೇ ಇರುತ್ತಾನೆ'' ಎಂದು ನಿರ್ದಿಷ್ಟವಾಗಿ ಅವನನ್ನು ಹೇಳಲುಶಕ್ಯವಿಲ್ಲ. ದೋಷಲೇಶವೂ ಇಲ್ಲದಿರುವದರಿಂದ ಅವನು ಗುಣಪರಿಪೂರ್ಣನಾದ ಶುದ್ಧ ವಸ್ತು ಆಗಿದ್ದಾನೆ. ಆನಂದ ಪರಿಪೂರ್ಣನಾದುದರಿಂದ ಪರಮ ಶಾಂತನಾಗಿದ್ದಾನೆ. ಈ ಎಲ್ಲ ಗುಣಗಳು ಅವನಲ್ಲಿ ಇದ್ದುದರಿಂದ ಅವನು ಅಪ್ರತರ್ಕ್ಯ, ಅನಿರ್ದೇಶ್ಯ, ಶಾಂತ, ಎಂದು ನಾಲ್ಕು ಹೆಸರುಗಳಿಂದ ಕರೆಯಲ್ಪಡುತ್ತಾನೆ. ಪರಾತ್ಪರನಾದ ಇವನೇ ಪರಮಾತ್ಮ ನಾಗಿದ್ದು ಎಲ್ಲರ ಆಶ್ರಯಸ್ಥಾನನಾಗಿದ್ದಾನೆ. ಸರ್ವತ್ರವ್ಯಾಪ್ತ ಮತ್ತು ಕ್ರೀಡಾದಿಗುಣ ವಿಶಿಷ್ಟನಾದ ಮತ್ತು ಎಲ್ಲರಿಗೂ ವ್ಯಕ್ತನಾಗಿ ತೋರದಿರುವ ಆ ಭಗವಂತನಿಗೆ ವಾಸುದೇವ ಎಂದು ಹೆಸರು. ಈ ವಾಸುದೇವನು ದ್ವಾದಶ ಪತ್ರಾತ್ಮಕನಾಗಿದ್ದಾನೆ.

**ನಾರದ** - ಆ ಪರಮಾತ್ಮನು ಹೇಗೆ ಶುಕ್ಲ? ಹೇಗೆ ಶಾಂತ? ಅವನು ಎಂತು ಅಪ್ರತರ್ಕ್ಯನು? ಅವನು ಹೇಗೆ ಅನಿರ್ದೇಶ್ಯ ? ಅವನು ದ್ವಾದಶ ಪತ್ರಾತ್ಮಕನು ಹೇಗೆ? ಆ ದ್ವಾದಶಪತ್ರಗಳು ಅಂದರೆ ಹನ್ನೆರಡು ಎಲೆಗಳು ಯಾವುವು?

**ಪುಲಸ್ತ್ಯ** - ಈ ವಚನದ ರಹಸ್ಯವನ್ನು ಹಿಂದೆ ಬ್ರಹ್ಮದೇವರು ಹೇಳಿದರು. ಸನತ್ಕುಮಾರರು ಕೇಳಿದರು. ಆ ಸನತ್ಕುಮಾರನು ಮರಳಿ ಮತ್ತೆ ನನಗೆ ಹೇಳಿದರು, ಅದನ್ನು ನಾನು ನಿನಗೆ ಕಥಿಸುತ್ತೇನೆ ಕೇಳು.

**ನಾರದ** - ಈ ಸನತ್ಕುಮಾರರು ನಿನಗೆ ಹೇಳಿದ್ದೇನು? ಅದನ್ನೆಲ್ಲ ಕ್ರಮದಲ್ಲಿ ನನಗೆ ತಿಳಿಸು.

**ಪುಲಸ್ತ್ಯ** - ಧರ್ಮನಿಗೆ ಅಹಿಂಸಾ ಎಂಬ ಮಡದಿ ಇದ್ದಳು. ಅವಳಲ್ಲಿ ಅವನಿಗೆ ಯೋಗ ಶಾಸ್ತ್ರದ ವಿಚಾರ ಮಂಥನ ಮಾಡುವ ನಾಲ್ಕು ಜನ ಮಕ್ಕಳು ಹುಟ್ಟಿದರು. ಹಿರಿಯ ಮಗನೇ ಸನತ್ಕುಮಾರ. ಮರುಚಲಮಗ ಸನಾತನ, ಮೂರನೇಯವನು ಸನಕ, ಕೊನೆಯವನೇ ಸನಂದನ. ಈ ನಾಲ್ಕೂ ಧರ್ಮ ಪುತ್ರರು ಸಾಂಖ್ಯಶಾಸ್ತ್ರಜ್ಞರಾದ ಕಪಿಲ, ಆಸುರಿ, ಪಂಚಶಿಖಾಚಾರ್ಯ ಮುಂತಾದ ಯೋಗಯುಕ್ತರಾಗಿ ತಪೋನಿಧಿಗಳಿಂದ ಕೂಡಿ ಬ್ರಹ್ಮದೇವರ ಬಳಿಗೆ ಬಂದರು. ಇವರೆಲ್ಲರೂ ವಯಸ್ಸಿನಿಂದ ಕಿರಿಯರಾದರೂ ಜ್ಞಾನಕ್ಕೆ ಮಹತ್ವವನ್ನು ಕೊಡಬೇಕು ಎಂಬದನ್ನು ತಿಳಿಸಲಿಕ್ಕಾಗಿ ಸ್ವಯಂ ಬ್ರಹ್ಮದೇವರು ತಾನೇ ಅವರನ್ನೆಲ್ಲ ಗೌರವಿಸಿದನು. ಆಸನ ಕೊಟ್ಟು ಕೂಡಿಸಿದನು. ರಹಸ್ಯವಾದ ಯೋಗ ಶಾಸ್ತ್ರವನ್ನು ಆ ಕಪಿಲಾದಿಗಳಿಗೆ ತಿಳಿಸಿಹೇಳಿದನು. ಇದೇ ವೇಳೆಯಲ್ಲಿ ಕಮಲಕುಮಾರನಾದ ಬ್ರಹ್ಮದೇವರ ಬಳಿಗೆ ಸನತ್ಕುಮಾರ ಯೋಗ ವಿಜ್ಞಾನವನ್ನು ತಿಳಿಸಬೇಕೆಂದು ಕೇಳಿಕೊಂಡನು. ಆಗ ಬ್ರಹ್ಮದೇವರು ''ನೀನು ನನ್ನ ಮಗನಾದರೆ ನಾನು ಹೇಳಿದ್ದನ್ನು ಕೇಳಿ ಅದರಂತೆ ಮಾಡಿತೋರಿಸುವಿ ಎಂದು ಭರವಸೆ ನನಗೆ ಇದ್ದುದರಿಂದ ನಿನಗೆ ಆ ದಿವ್ಯ ಜ್ಞಾನವನ್ನು ಉಪದೇಶಿಸುತ್ತೇನೆ'' ಎಂದು ನುಡಿದನು.

**ಸನತ್ಕುಮಾರ** - ದೇವತೆಗಳ ಅಧೀಶನೇ ನಾನು ನಿನ್ನ ಮಗನಂತೆ ಇದ್ದೇ ಇರುತ್ತೇನೆ. ಆದರೆ ಈಗ ಶಿಷ್ಯನಾಗಿ ವಿಷಯವನ್ನೆಲ್ಲ ತಿಳಿದುಕೊಳ್ಳಬೇಕೆಂದು ಬಂದಿದ್ದೇನೆ. ಪುತ್ರನಿಗೂ ಶಿಷ್ಯನಿಗೂ ವಿಶೇಷ ಅಂತರವೂ ಏನೂ ಇಲ್ಲವಷ್ಟೇ!

**ಬ್ರಹ್ಮ** - ಶಿಷ್ಯನಿಗೂ ಪುತ್ರನಿಗೂ ಅಂತರ ಉಂಟು. ಅವರವರ ಧರ್ಮಕರ್ಮಗಳು ಬೇರೆ ಬೇರೆ ಇವೆ. ಶಿಷ್ಯನ ಧರ್ಮ ಕರ್ಮ ಬೇರೆ, ಪುತ್ರನ ಧರ್ಮಕರ್ಮ ಬೇರೆ. ತನ್ಮೂಲಕವಾಗಿ ಅವರಿಬ್ಬರಲ್ಲಿ ವಿಶೇಷವು ಇದ್ದೇ ಇದೆ. ಧರ್ಮಪುತ್ರನಾದ ನಿನ್ನಲ್ಲಿ ಮಾತ್ರ ಶಿಷ್ಯನ ಧರ್ಮಕರ್ಮಗಳೂ ಪುತ್ರನ ಧರ್ಮ ಕರ್ಮಗಳೂ ಮೇಳವಿಸಿದ್ದೇ ಒಂದು ವಿಶೇಷವಾಗಿದೆ.

ಪುತ್ ಎಂಬ ನರಕದಿಂದ ರಕ್ಷಿಸುವವನು ಪುತ್ರ ಎನಿಸಿಕೊಳ್ಳುತ್ತಾನೆ. ಗುರುವಿನ ಮಹಾಪಾಪಗಳಲ್ಲಿ ಒಂದನ್ನೂ ಶೇಷವಾಗಿ ಉಳಿಸದೇ ಎಲ್ಲವನ್ನೂ ಜ್ಞಾನಪ್ರಸಾರ ಮೂಲವಾಗಿ ಪರಿಹರಿಸುವವನು ಶಿಷ್ಯ ಎನಿಸುತ್ತಾನೆ ಎಂದು ವೈದಿಕ ಸಂಪ್ರದಾಯದಲ್ಲಿ ಹೇಳುವದನ್ನು ಕೇಳಿದ್ದೇನೆ.

**ನಾರದ** - ಪುತ್ರನು ಪಾರುಮಾಡುವ ಆ ಪುತ್ ಎಂಬ ನರಕವು ಯಾವುದು? ಯಾವ ನರಕದಿಂದ ರಕ್ಷಿಸಿದರೆ ಮಾತ್ರ ಪುತ್ರ ಎನಿಸುತ್ತಾನೆ ಮಗನು ? ಹಾಗೂ ಯಾವ ಪಾಪಗಳನ್ನು ಪರಿಹರಿಸಿದರೆ ಛಾತ್ರನು ಶಿಷ್ಯ ಎನಿಸುತ್ತಾನೆ ?

**ಬ್ರಹ್ಮ** - ಮಹರ್ಷಿಯೇ ಯೋಗಾಂಗಗಳಿಂದ ಯುಕ್ತವಾದ ಇದೆಲ್ಲವೂ ಒಂದು ಪುರಾಣವೇ ಆಗಿದೆ. ಇದು ಭಯಾಪಾಯಗಳನ್ನೆಲ್ಲ ಕಳೆಯುತ್ತದೆ. ಪುಣ್ಯವನ್ನು ನೀಡುತ್ತದೆ. ಇಂಥ ಒಳ್ಳೊಳ್ಳೇ ಜ್ಞಾನೋಪದೇಶದ ವಚನಗಳಿಂದ ಕೂಡಿದ ದಿವ್ಯ ಪುರಾಣವನ್ನು ನಿನಗಾಗಿ ಹೇಳುತ್ತೇನೆ ಕೇಳು.

ವಾಮನ ಮಹಾಪುರಾಣದಲ್ಲಿ ರುದ್ರ ಜಪಿಸಿದ ಗಾಯತ್ರೀ ಎಂಬ ೬೦ನೇಯ ಅಧ್ಯಾಯವು ಮುಗಿದುದು

—o—

## ವಾಸುದೇವನ ಉಪಾಸನೆ

**ಅಧ್ಯಾಯ - ೬೧**

### ಬ್ರಹ್ಮ ಉವಾಚ

**ಪರದಾರಾಭಿಗಮನಂ ಪಾಪಿನಾಮುಪಸೇವನಮ್**
**ಪಾರುಕ್ಷ್ಯಂ ಸರ್ವಭೂತಾನಾಂ ಪ್ರಥಮಂ ನರಕಂಸ್ಮೃತಮ್ ॥**

ಪುತ್ ಎಂಬ ನರಕದ ಬಗೆಗೆ ಹೇಳ ಹೊರಟ ಬ್ರಹ್ಮದೇವನು ಅದಕ್ಕೆ ಉಪೋದ್ಘಾತ ರೂಪವಾಗಿ ಇತರ ನರಕಗಳ ಬಗೆಗೂ ಜನರಿಗೆ ತಿಳುವಳಿಕೆ ಬರಲಿ ಎಂದು ಪ್ರಾರಂಭಿಕವಾಗಿ ಕೆಲವು ನರಕಗಳ ವಿಷಯವಾಗಿ ಹೇಳುತ್ತಾರೆ.

ಬ್ರಹ್ಮ - ಹೆರವರ ಹೆಣ್ಣನೊಂದಿಗೆ ಬೆರೆಯುವದೂ, ಪಾಪಿಪುರುಷರ ಸೇವೆ ಮಾಡುವದೂ, ಸರ್ವ ಪ್ರಾಣಿಗಳೊಡನೆ ಕುಟುಕನಂತೆ ಕ್ರೂರವಾಗಿ ವರ್ತಿಸುವದೂ ನರಕದ ಮೊಟ್ಟ ಮೊದಲಿನ ಮೆಟ್ಟಿಲಾಗಿದೆ. ಈ ಪಾಪಗಳಿಂದಾಗುವ ನರಕವು ಮೊದಲನೆಯ ನರಕ ಎನಿಸುವದು.

**"ಫಲಸ್ತೇಯಂ ಮಹಾ ಪಾಪಂ ಫಲಹೀನಂ ತಥಾಟನಮ್**
**ಛೇದನಂ ವೃಕ್ಷಜಾತೀನಾಂ ದ್ವಿತೀಯಂ ನರಕಂ ಸ್ಮೃತಮ್ ॥**

ಹಣ್ಣುಹಂಪಲ ಕದಿಯುವದು, ತೀರ್ಥಕ್ಷೇತ್ರಗಳ ಉದ್ದೇಶವಿಲ್ಲದೇ ನಿರರ್ಥಕವಾಗಿ ಸಂಚಾರ ಮಾಡುವದೂ, ತಣ್ಣೆಳಲು ತನಿವಣ್ಣುಗಳಿಂದ ಜನರಿಗೆ ಉಪಕಾರಗೈಯುವ ಗಿಡಗಳನ್ನು ಕಡಿಯುವದೂ ಮಹಾಪಾಪ. ಇದರಿಂದಾಗುವ ನರಕವು ಎರಡನೆಯ ನರಕವಾಗಿದೆ. ನಿಷಿದ್ಧ ಪದಾರ್ಥಗಳ ದಾನ ಸ್ವೀಕಾರ, ಕೊಲ್ಲಬಾರದವರನ್ನು ಕೊಲ್ಲುವದು, ಬಂಧಿಸಬಾರದವರನ್ನು ಬಂಧಿಸುವದು, ಜಾತಿಬಾಂಧವ್ಯವಿಲ್ಲದವರೊಡನೆ ವಿವಾಹ ಸಂಬಂಧ ಬೆಳೆಸುವದೇ ಮುಂತಾದ ಪಾಪಗಳು ನಾಲ್ಕನೇ ನರಕದ ಪಾಪಗಳು. ಪ್ರಾಣಹತ್ಯಾ, ಮಿತ್ರರ ವಂಚನೆ, ಸುಳ್ಳು ಮಾತು ಮಧೂರ ಮೃಷ್ಟಾನ್ನಗಳನ್ನು ಇನ್ನೊಬ್ಬರಿಗೆ ಕೊಡದೇ ತಿನ್ನುವದು ಮತ್ತು ಪರಪೀಡೆ ಇವು ಐದನೆ ನರಕ ಕಾರಣೀಭೂತ ಪಾಪಗಳಾಗಿವೆ.

ಯಾತ್ರೆ ಮಾಡಿಯೂ ಕಾಮಕ್ರೋಧಾದಿಗಳನ್ನೂ, ನಿಷಿದ್ಧ ಪದಾರ್ಥಗಳನ್ನೂ ಬಿಡದಿರುವದು, ಪ್ರತಿಷ್ಠೆಗಾಗಿ ಇಂದ್ರಿಯ ನಿಗ್ರಹ ಮಾಡುವದು, ಜನರ ಭಕ್ತಿಯನ್ನು ಹಾಳುಮಾಡುವದು, ಪ್ರಯಾಣಕ್ಕೆ ಉಪಯುಕ್ತವಾದ ವಾಹನವನ್ನು ಕದಿಯುವದು ಆರನೆಯ ನರಕ. ರಾಜರಿಗೆ ಸಲ್ಲಬೇಕಾದ ವಸ್ತುವನ್ನು ಅಪಹರಿಸುವದು, ರಾಣಿಯೊಂದಿಗೆ ಸರಸಕ್ಕೆ ಇಳಿಯುವದು ಹಾಗೂ ರಾಜದ್ರೋಹ ಇವು ಏಳನೆಯ ನರಕ. ಅತೀ ಆಸೆ, ವಿಷಯ ಸುಖದಲ್ಲಿ ಅತೀ ಆಸಕ್ತಿ, ಧರ್ಮ ಕಾರ್ಯವನ್ನು ಹಾಳುಗೈಯುವದು ಉಗುಳುಸಿಡಿಸುತ್ತ ಮಾತಾಡುವದು ಎಂಟನೆಯ ನರಕ. ಬ್ರಹ್ಮಸ್ವವನ್ನು ಕದಿಯುವದು, ಜ್ಞಾನಿಗಳನ್ನು ನಿಂದಿಸುವದು, ಧರ್ಮ ಬಂಧು ಗಳೊಡನೆ ವಿರೋಧಿಸುವದು ಒಂಭತ್ತನೆಯ ನರಕ ಎನಿಸುವದು. ಪರಂಪರಾ ಪ್ರಾಪ್ತವಾದ ಶಿಷ್ಟಾಚಾರವನ್ನು ಉಲ್ಲಂಘಿಸುವದು, ಶಿಷ್ಟ ಜನರನ್ನು ದ್ವೇಷಿಸುವದು, ಮಕ್ಕಳನ್ನು ಕೊಲ್ಲುವದು, ಕಲಿತ ಶಾಸ್ತ್ರ ವಿದ್ಯೆಯನ್ನು ಮರೆತುಬಿಡುವದು, ಜನರ ಉಪಯೋಗಕ್ಕಾಗಿ ಧರ್ಮಾರ್ಥ ಇಟ್ಟ ವಸ್ತುವನ್ನು ಉಪಯೋಗಿಸುವದು ಹತ್ತನೆಯ ನರಕಕ್ಕೆ ಸಾಧನ.

ಷಡಂಗಸಹಿತವಾದ ವೇದ ಓದಿದವರನ್ನು ಕೊಲ್ಲುವದು ಅಥವಾ ಸಹಾಯವಿಲ್ಲದೆ ಸಾಯುವಂತೆ ಮಾಡುವದು ಮತ್ತೂ ದೇವದೇವನಾದ ಪರಮಾತ್ಮನಲ್ಲಿರುವ, ಷಡ್ಗುಣಗಳನ್ನು ಅಲ್ಲಗಳೆದು ಅವನು ಗುಣಶೂನ್ಯ ಎಂದು ಉಪಾಸಿಸುವದು ಹನ್ನೊಂದನೆ ನರಕಕ್ಕೆ ಕಾರಣವಾದ ಪಾಪಗಳು. ಸಜ್ಜನರ ನಿಂದೆ ಅನಾಚಾರ ದುಷ್ಟಕಾರ್ಯ ವೇದೋಕ್ತವಾದ ಸಂಸ್ಕಾರಗಳನ್ನೂ ಮಾಡದಿರುವದು ಹನ್ನೆರಡನೆಯ ನರಕ. ಧರ್ಮ ಅರ್ಥ ಕಾಮ ಮೋಕ್ಷ ಎಂಬ ನಾಲ್ಕು ವಿಧ ಪುರುಷಾರ್ಥಗಳಿಗೆ ಉಪಯುಕ್ತವಾಗದ ವ್ಯರ್ಥ ಲೌಕಿಕ ಕಾರ್ಯಗಳನ್ನೇ ಮಾಡುವದು, ಜ್ಞಾನಿಗಳ ಮನಸ್ಸನ್ನು ನೋಯಿಸುವದೂ ಹದಿಮೂರನೆಯ ನರಕ. ಹೆರವರ ವಸ್ತುವನ್ನು ನಾಶಪಡಿಸುವದು, ಧರ್ಮವಿರುದ್ಧವಾದ ಆಚರಣೆ, ನಿಷಿದ್ಧ ಭಕ್ಷಣ ಹಾಗೂ ಬೇರೊಬ್ಬರ ಹೊಲ ಮನೆಗಳಿಗೆ ಕೊಳ್ಳಿ ಇಡುವದು ಹದಿನಾಲ್ಕನೇ ನರಕ. ಭಗವಂತನ ಸರ್ವೋತ್ತಮತ್ವವನ್ನೂ, ಮಹತ್ವವನ್ನೂ ತಿಳಿಯದಿರುವದು, ಹೊಟ್ಟೆಯ ಕಿಚ್ಚು, ಮಡಿ ಮೈಲಿಗೆ ಇಲ್ಲದಿರುವದು, ಸುಳ್ಳಾಡುವದು ಹದಿನೈದನೆಯ ನರಕ. ಧರ್ಮ ಕಾರ್ಯಕ್ಕೆ ಮೈಗಳ್ಳತನ, ಅತಿಕೋಪ ವಿಷ ಹಾಕುವದು, ಕೊಳ್ಳಿ ಕೊಡುವದು, ಪರಸ್ತ್ರೀಯರನ್ನು ಭೋಗಿಸುವದು ಹದಿನಾರನೆಯ ನರಕಕ್ಕೆ ದಾರಿಯಾಗಿದೆ.

ಶಾಸ್ತ್ರ ಓದಿದವರಲ್ಲಿ ಈರ್ಷ್ಯೆ, ದ್ವೇಷ ಭಾವನೆ ಮತ್ತೂ ಶಾಸ್ತ್ರಪಂಡಿತರೊಡನೆ ಉನ್ಮತ್ತತನದಿಂದ ನಡೆದುಕೊಳ್ಳುವದೇ ಮೊದಲಾದ ಪಾಪಗಳು ಇನ್ನೂ ಬೇರೆ ಬೇರೆ ನರಕಗಳಿಗೆ ಕಾರಣವಾಗುತ್ತದೆ. ಇವೆಲ್ಲ ಪಾಪಗಳಿಂದ ಬರುವ ನರಕಗಳಿಗೆ ಪುತ್ ಎಂಬ ಹೆಸರು. ಈ ಪುನ್ನಾಮಕ ನರಕಗಳಿಂದ ಪಾರಾಗಬೇಕಾದರೆ ದಂಪತಿಗಳು ಇಬ್ಬರೂ ಕೂಡಿ ಜಗದೊಡೆಯನಾದ ನಾರಾಯಣನನ್ನು ಆರಾಧಿಸಬೇಕು. ಗಂಡ ಹೆಂಡಿರ ಸೇವೆಯಿಂದ ಸಂತುಷ್ಟನಾದ ಆ ಶ್ರೀಹರಿಯು ಅವರಿಗೇ ಒಳ್ಳೇ ಸಂತತಿಯನ್ನು ಕೊಡುತ್ತಾನೆ. ಅನಂತರ ಆ ಮಕ್ಕಳಲ್ಲಿ ತಾನೇ ನಿಂತು ಅವರಿಂದ ಒಳ್ಳೊಳ್ಳೆ ಕಾರ್ಯಗಳನ್ನು ಮಾಡಿಸಿ ತಂದೆ ತಾತಂದಿರನ್ನು ಪುನ್ನಾಮಕ ನರಕದಿಂದ ಪಾರು ಮಾಡುತ್ತಾ, ಇಂಥ ಪುತ್ ಎಂಬ ನರಕದಿಂದ ರಕ್ಷಿಸುವದರಿಂದ ಮಗನಿಗೆ ಪುತ್ರ ಎಂಬ ಹೆಸರು ಬರುತ್ತದೆ.

ಇನ್ನು ಶಿಷ್ಯರಿಂದ ಪರಿಹಾರವಾಗಬೇಕಾದ ಶೇಷ ಪಾಪಗಳ ಸ್ವರೂಪ ಹೇಳುತ್ತೇನೆ. ದೇವತೆಗಳ ಋಷಿಗಳ ಮತ್ತೂ ಪ್ರಾಣಿಗಳ ಪಿತೃಗಳ ಹಾಗೂ ಬಂಧುಗಳ ತೀರಿಸಬೇಕಾದ ಋಣವನ್ನು ತೀರಿಸದೇ, ಕೊಡಬೇಕಾದುದನ್ನು ಕೊಡದೇ ಇರುವದು, ಹೆರವರ ಹಣವನ್ನು ಕದಿಯಬಯಸುವದು, ಎಲ್ಲ ಜಾತಿ ಒಂದೇ ಎಂದು ಹೇಳಿ ವರ್ಣಾಶ್ರಮ ಧರ್ಮಗಳನ್ನು ಉಲ್ಲಂಘಿಸುವದು, ವೇದವನ್ನು ಓದದಿರುವದು, ಗುರುವಿಗೆ ಎದುರು ವಾದಿಸುವದು, ಕೀಳು ಹೆಣ್ಣಿನೊಡನೆ ಕೂಡುವುದು, ಹಾಲು ತುಪ್ಪ ಮಾರುವದು, ಚಂಡಾಲರೊಡನೆ ವ್ಯವಹರಿಸುವದು, ತನ್ನ ದೋಷವನ್ನು ಮುಚ್ಚಿ ಇನ್ನೊಬ್ಬರ ಹುಳುಕನ್ನು ಮಾತ್ರ ಹೊರಗೆ ಹಾಕುವದು, ಅಸೂಯೆ ಪಡುವದು, ಬಿರುಸು ಮಾತು, ಪರರ ವಿಷಯದಲ್ಲಿ ಕ್ರೂರವರ್ತನೆ, ವಿಲಾಸಲೋಲುಪತೆ, ತಾಳತಂತಿ ಬಾರಿಸಿ ಹೊಟ್ಟೆ ಹೊರೆಕೊಂಬುವದು, ದೇವರ ಹೆಸರಿನಿಂದ ದುಡ್ಡು ಗಳಿಸುವದು, ದೊಡ್ಡವರ ಮಾತನ್ನು ಮುಂದೆ ಮಾಡಿ ಅಧರ್ಮಕಾರ್ಯ ಮಾಡುವದು, ನಿಷ್ಕರುಣಿಯಾಗಿರುವದು, ನಾಸ್ತಿಕನಾಗಿರುವದು, ನರಕಕ್ಕೆ ಕಾರಣವಾದ ಪಾಪಗಳು ಆಗಿರುತ್ತವೆ. ಈ ಎಲ್ಲ ಪಾಪಗಳಿಂದ ಮುಕ್ತನಾಗಬೇಕಾದರೆ ಶಂಕರನನ್ನು ಆರಾಧಿಸಬೇಕು. ಆ ಜ್ಞಾನಮೂರ್ತಿಯನ್ನು ಧ್ಯಾನಮಾಡಿ ಶಿಷ್ಯನಿಗೆ ಜ್ಞಾನೋಪದೇಶ ಮಾಡಬೇಕು. ಆಗ ಆ ಶಿಷ್ಯನು ದೇವರ ವಿಶೇಷ ಅನುಗ್ರಹದಿಂದ ಮತ್ತು ಕಲಿತ ಜ್ಞಾನಯೋಗದಿಂದ ಪ್ರಭಾವದಿಂದಲೂ ಗುರುವಿನ ಪಾಪವೆಲ್ಲವೂ ನೀಶೇಷವಾಗಿ ನಾಶವಾಗುತ್ತದೆ. ಕಾಯಿಕ, ವಾಚಿಕ, ಮಾನಸಿಕ ದೋಷಗಳು ತಂದೆ, ತಾಯಿ, ಅಣ್ಣ ತಮ್ಮ ಬಂಧುಬಳಗ ಮೊದಲಾದವರಿಂದ ಮಾಡಿದ ಪಾಪಗಳೂ ಜ್ಞಾನೋಪದೇಶ ಮಹಿಮೆಯಿಂದ ಸರ್ವವೂ ಪರಿಹಾರವಾಗುತ್ತದೆ. ಇದು ಶೇಷ ಧರ್ಮ. ಅದು ಪುತ್ರ ಧರ್ಮ.

ಪಂಡಿತನಾದವನು ಅಂಥ ಪುತ್ರನನ್ನೂ, ಇಂಥ ಶಿಷ್ಯನನ್ನೂ ಪಡೆಯಬೇಕು. ಶಿಷ್ಯನೂ ಶೇಷ ಪಾಪಗಳಿಂದ ರಕ್ಷಿಸಿದರೆ, ಪುತ್ರನು ಅಶೇಷ ಪಾಪಗಳಿಂದ ರಕ್ಷಿಸುತ್ತಾನೆ. ಈ ದೃಷ್ಟಿಯಿಂದ ಶಿಷ್ಯನಿಗಿಂತ ಪುತ್ರನೇ ಮೇಲು. ಪಿತಾಮಹನ ಈ ನುಡಿಯನ್ನು ಕೇಳಿ ಸನತ್ಕುಮಾರನು ''ದೇವನೇ, ನಾನು ನಿನ್ನ ಮಗ ಎಂಬ ಮಾತು ತ್ರಿಕಾಲಾಬಾಧಿತವಾದ ಸತ್ಯವಾಗಿದೆ. ಆದುದರಿಂದ ದಯವಿಟ್ಟು ನನಗೆ ಯೋಗ ಶಾಸ್ತ್ರದ ಬಗ್ಗೆ ಉಪದೇಶ ನೀಡಿರಿ'' ಎಂದು ವಿನಯದಿಂದ ಕೇಳಿಕೊಂಡನು.

ಅದಕ್ಕೆ ಬ್ರಹ್ಮನು ''ನಿನ್ನ ತಾಯಿ ತಂದೆಗಳು ನಿನ್ನನ್ನು ನನಗೆ ಕೊಟ್ಟರೆ ಮಾತ್ರ ನೀನು ನನ್ನ ಪುತ್ರನಾಗಿ ದಾಯಾದಿ ಎನಿಸುವಿ'' ಎಂದು ಉತ್ತರಿಸಿದನು.

**ಸನತ್ಕುಮಾರ** -ದಾಯಾದಿ ಎಂದರೆ ಏನು? ದಾಯಾದಿ ಪರಿಕಲ್ಪನೆ ಎಂತಹದು? ನೀವು ನುಡಿದ ಆ ದಾಯಾದಿ ಶಬ್ದದ ಸರಿಯಾದ ಅರ್ಥವನ್ನು ನನಗೆ ತಿಳಿಸಿಕೊಡಿರಿ.

**ಬ್ರಹ್ಮ** -ಮಕ್ಕಳು ಆರು ವಿಧ. ಔರಸ, ಕ್ಷೇತ್ರಜ, ದತ್ತ, ಕೃತ್ರಿಮ, ಗೂಢೋತ್ಪನ್ನ, ಅಪವಿದ್ಧ ಎಂದು. ಇವರೆಲ್ಲರೂ ದಾಯಾದರು ಇವರಾರು ಜನರಲ್ಲಿಯೂ ಸಾಲ ಸೊತ್ತು ಶ್ರಾದ್ಧ ಉತ್ತರ ಕ್ರಿಯೆಗಳೆಲ್ಲವೂ ಸಮಾನವಾಗಿದ್ದು ಕುಲಾಚಾರ ಗೋತ್ರಾನು ವೃತ್ತಿಗಳು ವಂಶಪರಂಪರೆಯಿಂದ ಅಚ್ಛಿನ್ನವಾಗಿ ಉಳಿಯುತ್ತವೆ.

ಕಾನೀನ, ಸಹೋಢ, ಕ್ರೀತ, ಪುನರ್ಭವ, ಸ್ವಯಂದತ್ತ ಪಾರಶವ ಎಂದು ಮತ್ತೆ ಆರು ಬಗೆಯ ಪುತ್ರರ ಪ್ರಭೇದವಿದೆ . ಇವರಿಗೆ ಸಾಲ ಸೊತ್ತು ಪಿಂಡಪ್ರದಾನಾದಿಗಳ ಸಂಬಂಧವಿಲ್ಲ. ಅವರು ಆ ಗೋತ್ರದ ಹೆಸರು ಹೇಳಲಿಕ್ಕೆ ಮಾತ್ರ ಅಧಿಕಾರಿಗಳು.

**ಸನತ್ಕುಮಾರ** - ಈ ಎಲ್ಲ ಪುತ್ರರ ವಿಶೇಷ ಲಕ್ಷಣಗಳನ್ನು ವಿವರವಾಗಿ ತಿಳಿಸಬೇಕು.

ಬ್ರಹ್ಮ - ಮಗನೇ, ನಿನಗೆ ಪುತ್ರರಲ್ಲಿಯ ವಿಶೇಷವನ್ನು ಹೇಳುತ್ತೇನೆ ಕೇಳು. ಔರಸ ಮಗ ಎಂದರೆ ಪ್ರೀತಿಯ ಗಂಡ ಹೆಂಡತಿಯರ ಹೊಟ್ಟೆಯಿಂದ ಹುಟ್ಟಿದ ಮಗ ಎಂದು ಅರ್ಥ. ಇಂಥ ಮಗನೆಂದರೆ ''ಆತ್ಮಾ ವೈ ಪುತ್ರನಾಮಾಸೀತ್'' ಎಂಬ ವಚನದಂತೆ ತಾನೇ ಹುಟ್ಟಿ ಬಂದಂತೆ. ಔರಸ ಪುತ್ರನೆಂದರೆ ತನ್ನದೇ ಪ್ರತಿಬಿಂಬ. ಕ್ಷೇತ್ರಜ್ಞ ಎಂದರೆ ಬೇರೆ ಪುರುಷನಿಂದ ಪಡೆದ ಮಗ, ಗಂಡನು ಷಂಢನಿದ್ದರೆ, ತಲೆಕೆಟ್ಟಿದ್ದರೆ ಅಥವಾ ದುರ್ವ್ಯಸನಿ ಇದ್ದರೆ ಅವನ ಅಪ್ಪಣೆಯಿಂದ ಹೆಂಡತಿಯು ಬೇರೊಬ್ಬ ಗಂಡಸಿನೊಡನೆ ಕಾಮವಾಸನೆಯಿಲ್ಲದೇ ಕೂಡಿ ಪಡೆದ ಪುತ್ರನಿಗೆ ಕ್ಷೇತ್ರಜ್ಞ ಎಂದು ಕರೆಯುತ್ತಾರೆ. ಹಡೆದ ತಾಯಿತಂದೆಗಳು ಸಂತೋಷದಿಂದ ಕೊಟ್ಟಿದ್ದರೆ ಅವನು ದತ್ತಕ ಪುತ್ರ. ಅವನು ಯಾರಿಂದ ಜನಿಸಿದ್ದು ಎಂಬುದು ತಿಳಿಯದಿದ್ದಲ್ಲಿ ಅಂಥ ಮಗುವಿಗೆ ಗೂಢೋತ್ಪನ್ನ ಎನ್ನುವರು. ಹೊರಗಿನ ಯಾವುದಾದರೊಂದು ಕೂಸನ್ನು ಮನೆಗೆ ಬೇಡಿ ತಂದು ಬೆಳೆಸಿದ್ದರೆ ಅವನು ಅವಿಪದ್ಧ ಪುತ್ರ ಎನಿಸುತ್ತಾನೆ.

ಇದರಂತೆ ಕಾನೀನ ಎಂದರೆ ಕನ್ನೆಯಿದ್ದಾಗಲೇ ಹುಟ್ಟಿದ ಮಗು ಎಂದು ಅರ್ಥ ಗರ್ಭಿಣಿಯಿದ್ದಾಗಲೇ ಮದುವೆಯಾಗಿ ಹುಟ್ಟಿದ ಮಗ ಸಹೋಢ ಎಂದು ಕರೆಯಲ್ಪಡುತ್ತಾನೆ. ಬೆಲೆಕೊಟ್ಟು ಕೊಂಡು ಮಗು ಕ್ರೀತ. ಮತ್ತೊಬ್ಬ ಗಂಡನನ್ನು ಮದುವೆಯಾಗಿ ಹುಟ್ಟಿದ ಮಗು ಪೌನರ್ಭವ ಎನಿಸಿಕೊಳ್ಳುತ್ತದೆ. ಸ್ವ ಸಂತೋಷದಿಂದ ತನ್ನನ್ನೇ ಕ್ಷಾಮ, ಸಂಕಟ ಕಾಲಗಳಲ್ಲಿ ಯಾರಿಗಾದರೂ ದತ್ತಕಕೊಟ್ಟರೆ ಸ್ವಯಂದತ್ತ ಎನಿಸುತ್ತಾನೆ. ಬ್ರಾಹ್ಮಣನಿಗೆ ಶೂದ್ರ ಸ್ತ್ರೀಯಲ್ಲಿ ಜನಿಸಿದ ಪುತ್ರನಿಗೆ ಪಾರಶವ ಎಂದು ಕರೆಯುತ್ತಾರೆ. ಆದುದರಿಂದ ನಿನ್ನನ್ನು ನೀನೇ ನನಗೆ ಕೊಡಲಿಕ್ಕೆ ಬರುವದಿಲ್ಲ. ಕಾರಣ ಬೇಗ ಹೋಗಿ ನಿನ್ನ ತಾಯಿ ತಂದೆಗಳನ್ನು ಕರೆದುಕೊಂಡು ಬಾ ಹೋಗು. ಬ್ರಹ್ಮದೇವರ ಈ ವಚನವನ್ನು ಕೇಳಿ ಸನತ್ಕುಮಾರನು ತನ್ನ ತಾಯಿ ತಂದೆಗಳಾದ ಧರ್ಮ ಅಹಿಂಸೆಯರನ್ನು ನೆನಿಸಿದನು. ಕೂಡಲೇ ಅವರಿಬ್ಬರೂ ಬ್ರಹ್ಮದೇವರನ್ನು ನೋಡಲಿಕ್ಕೆಂದು ಬಂದರು. ಭಕ್ತಿಯಿಂದ ವಂದಿಸಿ ''ಏನು ಅಪ್ಪಣೆ?'' ಎಂದು ಬಾಗಿ ಕೇಳಿದರು. ಆಗ ಅವರ ಪುತ್ರನಾದ ಸನತ್ಕುಮಾರನೇ ಬ್ರಹ್ಮದೇವರ ಎದುರು ಸುಖಾಸನಗಳ ಮೇಲೆ ಕುಳಿತ ತನ್ನ ತಾಯಿತಂದೆಗಳಿಗೆ ನಮ್ರವಾಗಿ ಹೇಳಿದನು.

''ಯೋಗಾಭ್ಯಾಸ ಮಾಡಬೇಕೆಂದು ನಾನು ಬ್ರಹ್ಮದೇವರ ಬಳಿಗೆ ಬಂದಿದ್ದೇನೆ. ಅದಕ್ಕೆ ಅವರು ನಾನು ಅವರ ಪುತ್ರನಾದರೆ ಮಾತ್ರ ಜ್ಞಾನೋಪದೇಶವನ್ನು ಮಾಡುತ್ತೇನೆನ್ನುತ್ತಾರೆ. ಅದಕ್ಕಾಗಿ ನೀವಿಬ್ಬರೂ ಆ ವಿಧಾತನಿಗೆ ನನ್ನನ್ನು ದತ್ತಕವಾಗಿ ಕೊಟ್ಟು ಬಿಡಿರಿ.'' ಆಗ ಅವನ ತಾಯಿ ತಂದೆಗಳಿಬ್ಬರೂ ಯೋಗಾಚಾರ್ಯನಾದ ಪಿತಾಮಹನಿಗೆ ''ಪ್ರಭೋ, ಇಷ್ಟು ದಿನ ನಮ್ಮ ಮಗನಾಗಿದ್ದ ಈ ಸನತ್ಕುಮಾರನು

ಇಂದಿನಿಂದ ನಿಮ್ಮ ಪುತ್ರನಾಗಿದ್ದಾನೆ. ಇವನನ್ನು ನಾವಿಬ್ಬರೂ ನಿಮಗೇ ಕೊಟ್ಟಿದ್ದೇವೆ'' ಎಂದು ಹೇಳಿದರು. ಅನಂತರ ಅವರಿಬ್ಬರೂ ಬಂದ ದಾರಿಯಿಂದ ಸ್ವರ್ಗಕ್ಕೆ ತೆರಳಿದರು.

ಬಳಿಕ ಬ್ರಹ್ಮದೇವರು ವಿನಯದಿಂದ ಒಪ್ಪುವ ಆ ಸನತ್ಕುಮಾರನನ್ನು ತಮ್ಮ ಪುತ್ರನೆಂದೇ ಭಾವಿಸಿ ಅವನಿಗೆ ದ್ವಾದಶ ಪತ್ರಾತ್ಮಕವಾದ ಯೋಗಶಾಸ್ತ್ರದ ರಹಸ್ಯವನ್ನು ತಿಳಿಸಲು ಮೊದಲು ಮಾಡಿದರು. ಈ ಚತುರ್ಮುಖನ ಉಪದೇಶದಲ್ಲಿ ವಾಸುದೇವನ ದ್ವಾದಶಾಕ್ಷರ ಮಂತ್ರವನ್ನು ಅಕ್ಷರ ಸಂಖ್ಯೆಯಿಂದ ಹನ್ನೆರಡು ಪತ್ರಗಳನ್ನಾಗಿಯೂ ವತ್ಸರರೂಪಿಯಾದ ಪರಮಾತ್ಮನಿಗೆ ಅವಯವಗಳಾಗಿ ಮೇಷಾದಿ ಮಾಸಗಳನ್ನು ರೂಪಣಮಾಡಿ ಚಾಂದ್ರಮಾಸ ದಿಂದೊಡಗೂಡಿದ ಮೇಷಾದಿ ಸೌರಮಾಸವನ್ನು ಒಂದೊಂದು ಅವಯವವಾಗಿ ರೂಪಿಸಿ ಅಲ್ಲಿ ಪ್ರಣವಾದಿ ವರ್ಣಗಳ ಸ್ಥಿತಿಯನ್ನು ವರ್ಣಿಸುತ್ತಾ ವಾಸುದೇವ ದ್ವಾದಶಾಕ್ಷರ ಮಂತ್ರವು ಕಾಲಸ್ವರೂಪಿಯಾದ ಪರಮಾತ್ಮೋಪಾಸನ ರೂಪವೆಂಬುದನ್ನು ರೂಪಿಸುತ್ತಾರೆ. ''ಓಂ ನಮೋ ಭಗವತೇ ವಾಸುದೇವಾಯ'' ಎಂಬ ದ್ವಾದಶಾಕ್ಷರ ಮಂತ್ರದಲ್ಲಿಯ ಒಂದೊಂದು ಅಕ್ಷರವೂ ಒಂದೊಂದು ಪತ್ರ ಎಂದು ನಿರೂಪಿಸಲಾಗಿದೆ. ಓಂಕಾರ ವೆಂಬುದು ಶಿಖೆಯ ಮೇಲಿರುವ ಮೊಲನೆಯ ಪತ್ರ. ವೈಶಾಖಮಾಸದಿಂದ ಕೂಡಿರುವ ಮೇಕ್ಷಮಾಸವೇ ಶಿರೋರೂಪಕವಾಗಿ ಇದಕ್ಕೆ ಅಶ್ರಯವಾಗಿದೆ. ಅನಂತರ ಸಂವತ್ಸರ ರೂಪಿಯಾದ ಪರಮಾತ್ಮನ ಮುಖದಲ್ಲಿರುವ ನಕಾರವು ಎರಡನೇಯ ಪತ್ರ. ಜೇಷ್ಠ ಮಾಸದಿಂದೊಡಗೂಡಿದ ವೃಷಭಮಾಸವೇ ಆ ಮುಖಕ್ಕೆ ಆಶ್ರಯವಾಗಿದೆ. ಮೋಕಾರವು ಮೂರನೇಯ ಪತ್ರ. ಅದು ವತ್ಸರರೂಪಿಯಾದ ಪರಮಾತ್ಮನ ಭುಜಯುಗ್ಮದಲ್ಲಿದೆ. ಆಷಾಢಮಾಸದಿಂದೊಡಗೂಡಿದ ಮಿಥುನ ಮಾಸವು ಆ ಭುಜಕ್ಕೆ ಆಶ್ರಯವಾಗಿದೆ.

ಭಕಾರವು ಆ ಪರಮಾತ್ಮನ ನೇತ್ರಯುಗ್ಮರೂಪ. ಇದು ನಾಲ್ಕನೇ ಪತ್ರ. ಶ್ರಾವಣ ಮಾಸದಿಂದೊಡಗೂಡಿದ ಕರ್ಕಾಟಕ ಮಾಸವು ಆ ನೇತ್ರಗಳಿಗೆ ಆಶ್ರಯವಾಗಿದೆ. ಗಕಾರವು ವತ್ಸರಪುರುಷನ ಹೃದಯರೂಪವಾದದ್ದು. ಇದು ಐದನೇ ಪತ್ರ ಭಾದ್ರಪದಮಾಸ ದಿಂದೊಡಗೂಡಿದ ಸಿಂಹಮಾಸವು ಆ ಹೃದಯವನ್ನು ಆಶ್ರಯಿಸಿದೆ. ವಕಾರವು ಕವಚರೂಪವಾಗಿದೆ. ಆಶ್ವಯುಜಮಾಸದಿಂದ ಕೂಡಿದ ಕನ್ಯಾಮಾಸವು ಅದನ್ನು ಆಶ್ರಯಿಸಿದೆ. ಇದು ಆರನೇ ಪತ್ರಕ. ತೇಕಾರವು ಪರಮಾತ್ಮನ ಮನೋರೂಪವಾದದ್ದು. ಕಾರ್ತಿಕಮಾಸದಿಂದೊಡಗೂಡಿದ ತುಲಾಮಾಸವು ಅದನ್ನು ಆಶ್ರಯಿಸಿದೆ. ಇದು ಆ ವತ್ಸರ ಪುರುಷನ ಏಳನೇ ಪುತ್ರಕ. ನಕಾರವು ನಾಭಿರೂಪವಾಗಿದೆ. ಮಾರ್ಗಶಿರಮಾಸದಿಂದ ಕೂಡಿದ ವೃಶ್ಚಿಕಮಾಸವು ಅದನ್ನು ಆಶ್ರಯಿಸಿದೆ. ಇದು ಎಂಟನೇ ಪತ್ರಕ. ಸುಕಾರವು ಆ ಪುರುಷನ ಜಘನರೂಪವಾಗಿದೆ. ಪುಷಮಾಸದಿಂದ ಕೂಡಿದ ಧನುರ್ಮಾಸವು ಅದನ್ನು ಆಶ್ರಯಿಸಿದೆ. ಇದು ಒಂಭತ್ತನೇ ಪತ್ರಕ. ದೇಕಾರವು ಪಾದಯುಗ್ಮ ರೂಪವಾಗಿದೆ. ಮಾಘಮಾಸದಿಂದ ಕೂಡಿದ ಮಕರಮಾಸವು ಅದನ್ನು ಆಶ್ರಯಿಸಿದೆ. ಇದು ಹತ್ತನೆಯ ಪತ್ರಕ. ವಾಕಾರವು ಎರಡು ಮಂಡಿಗಳ ರೂಪವಾಗಿದೆ. ಫಾಲ್ಗುಣಮಾಸದಿಂದ ಕೂಡಿದ ಕುಂಭಮಾಸವು ಅದನ್ನು ಆಶ್ರಯಿಸಿದೆ. ಇದು ಹನ್ನೊಂದನೇಯ ಪತ್ರಕ. ಯಕಾರವು ಪಾದದ್ವಯ ರೂಪವಾಗಿದೆ. ಚೈತ್ರ ಮಾಸದಿಂದದೊಡಗೂಡಿದ ಮೀನಮಾಸವು ಅದನ್ನು

ಆಶ್ರಯಿಸಿದೆ. ಇದು ವತ್ಸರ ರೂಪಿಯಾದ ಆ ಕೇಶವನ ಹನ್ನೆರಡನೇಯ ಪತ್ರಕ. ಹನ್ನೆರಡು ಮಾಸಗಳೆಂಬ ಅರಗಳುಳ್ಳ ಆ ಚಕ್ರವು ಆರುನಾಭಿ (ಆರು ರೇಖೆಗಳನ್ನು ಅಂಗಳ ರೂಪದಲ್ಲಿ ಹಾಕಿದರೆ ಪ್ರತಿಯೊಂದು ರೇಖೆಯೂ ಅಗ್ರಭಾಗದಲ್ಲಿ ಎರಡೆರಡು ಅರಗಳಾಗುತ್ತವೆ. ಆ ಆರು ರೇಖೆಯ ಮಧ್ಯಭಾಗವೇ ನಾಭಿಯಿಂದೊಡಗೂಡಿರುತ್ತದೆ) ಅಗ್ರಭಾಗದಲ್ಲಿ ಎರಡೆರಡು ಅರಗಳಿಂದ ಕೂಡಿರುತ್ತದೆ. ಅದರಲ್ಲಿ ಮೂರು ಗುಂಪುಗಳಾಗಿ ಅಂಶವು ವಿಭಕ್ತವಾಗಿದ್ದರೂ, ವಿಶಿಷ್ಟವಾದ ಪರಮಾತ್ಮನ ಏಕಮೂರ್ತಿಯೇ ತೋರಿ ಬರುವದು.

ಹೀಗೆ ತೋರಿಬರುವ ದ್ವಾದಶಪತ್ರಗಳುಳ್ಳ ರೂಪವೇ ಪರವಾಸುದೇವನ ಸ್ವರೂಪ. ಇಂತಹ ಮೂರ್ತಿಯನ್ನು ತಿಳಿದು ಉಪಾಸನ ಮಾಡಿದ್ದೇ ಆದರೆ ಪುನಃ ಮರಣವೇ ಉಂಟಾಗುವುದಿಲ್ಲ. (ಜನ್ಮ ಮರಣ ರೂಪವಾದ ಸಂಸಾರ ದುಃಖದಿಂದ ಬಿಡುಗಡೆ ಹೊಂದುತ್ತಾನೆಂದು ತಾತ್ಪರ್ಯ). ಆ ವಾಸುದೇವನ ಎರಡನೆಯ ಮೂರ್ತಿಯಾದರೋ ಸತ್ವಗುಣಪ್ರಚುರವಾಗಿಯೂ, ನಾಲ್ಕುವರ್ಣವುಳ್ಳದ್ದಾಗಿಯೂ, ನಾಲ್ಕು ಮುಖವುಳ್ಳದ್ದಾಗಿಯೂ, ನಾಲ್ಕು ಬಾಹುವುಳ್ಳದ್ದಾಗಿಯೂ, ಶ್ರೀವತ್ಸಧಾರಿಯಾಗಿಯೂ, ರಮಣೀಯವಾದ ಅವಯವದ ಸನ್ನಿವೇಶವುಳ್ಳದ್ದಾಗಿಯೂ, ಶಾಶ್ವತವಾಗಿಯೂ ಇರುತ್ತದೆ.

ಆ ವಾಸುದೇವನ ಮೂರನೇ ಮೂರ್ತಿಯು ತಮೋಗುಣಮಯನಾಗಿಯೂ ಶೇಷರೂಪವಾಗಿಯೂ ಸಹಸ್ರಮುಖವಾಗಿ ಪ್ರಜೆಗಳ ಪ್ರಲಯದಲ್ಲಿ ಅಧಿಕಾರ ಹೊಂದಿರು ವದು. ನಾಲ್ಕನೇಯ ಮೂರ್ತಿಯು ರಜೋಗುಣ ಪ್ರಚುರವಾಗಿಯೂ ರಕ್ತವರ್ಣ ವಾಗಿಯೂ, ನಾಲ್ಕು ಮುಖವುಳ್ಳದ್ದಾಗಿಯೂ ಭುಜಧ್ವಯದಿಂದ ಕೂಡಿ ಮಾಲಧಾರಿಯಾಗಿ ಸೃಷ್ಟಿಕಾರ್ಯಾದಿ ಕರ್ತೃವಾಗಿ ಆದಿಪುರುಷರೂಪದಿಂದಿರುತ್ತದೆ. ಅವ್ಯಕ್ತವಾದ ಪರಮಾತ್ಮ ಸ್ವರೂಪದಿಂದ ಈ ಮೂರು ಮೂರ್ತಿಗಳೂ ಅತೀಂದ್ರಿಯವಾಗಿ ಅಭಿವ್ಯಕ್ತಿ ಹೊಂದುತ್ತವೆ. ಅನಂತರ ಮರೀಚ್ಯಾದಿಗಳ ಸೃಷ್ಟಿಯು ವಿಸ್ತಾರವಾಗಿ ಉಂಟಾಗುತ್ತದೆ. (ಇಲ್ಲಿ ದ್ವಾದಶಾಕ್ಷರ ದಿಂದ ಉಪಾಸ್ಯವಾದ ಮೂರ್ತಿಯು ಪರವಾಸುದೇವ ಮೂರ್ತಿಯೆಂತಲೂ,ಎರಡನೆಯ ಮೂರ್ತಿ ಅದರಿಂದ ಅಭಿವ್ಯಕ್ತವಾದ ವ್ಯೂಹವಾಸುದೇವ ಅಥವಾ ವಿಷ್ಣುವೆಂತಲೂ ನಾಲ್ಕನೇಯ ಮೂರ್ತಿಯ ಚತುರ್ಮುಖನೆಂತಲೂ, ಮೂರನೇಯ ಮೂರ್ತಿಯು ರುದ್ರಮೂರ್ತಿಯೆಂತಲೂ, ಪೌರಾಣಿಕರು ಹೇಳುವ ವಾಡಿಕೆ ಇದೆ. ಭಗವಚ್ಛಾಸ್ತ್ರ ದೃಷ್ಟಿಯಿಂದ ಈ ಮೂರ್ತಿಗಳನ್ನು ವಾಸುದೇವ ಪ್ರದ್ಯುಮ್ನ ಸಂಕರ್ಷಣ ಅನಿರುದ್ಧ ಎಂಬುದಾಗಿ ವ್ಯವಹರಿಸಬಹುದಾಗಿದೆ.)

ಮುನಿವರ್ಯನೇ, ಮಹಾವಿಷ್ಣುವಿನ 'ಓಂ ನಮೋ ಭಗವತೇ ವಾಸುದೇವಾಯ' ಎಂಬ ದ್ವಾದಶಾಕ್ಷರ ಮಂತ್ರದ ಉಪಾಸ್ಯಸ್ವರೂಪವನ್ನು ನಿನಗೆ ನಾನು ಹೇಳಿದೆ. ಇದು ಜ್ಞಾನಪ್ರದ. ಸೌಭಾಗ್ಯದಾಯಕ. ಇಂಥ ಚತುರ್ಭುಜವಾದ ಶ್ರೀವಾಸುದೇವನ ಬಳಿಗೆ ಮುರಾಸುರನು ಯಮಧರ್ಮನ ಮಾತು ಕೇಳಿಕೊಂಡು ಯುದ್ಧ ಮಾಡಬೇಕೆಂದು ಬಂದನು. ಆ ಮಧುಸೂದನನು ತನ್ನಡೆಗೆ ಬಂದ ಮುರಾಸುರನಿಗೆ ''ದೈತ್ಯನೇ, ನೀನು ಇಲ್ಲಿಗೆ ಬರಲು ಏನು ಕಾರಣ?'' ಎಂದು ಪ್ರಶ್ನಿಸಿದನು. ''ನಿನ್ನ ಜೊತೆಗೆ ಯುದ್ಧ ಮಾಡಲಿಕ್ಕಾಗಿ'' ಎಂದು ಉತ್ತರಿಸಿದ ಮುರ ದಾನವ.

"ಯುದ್ಧಮಾಡಲು ಬಂದಿದ್ದರೆ ನಡುಗುವಿಯೇಕೆ? ನಿನ್ನ ಮೈಯೆಲ್ಲ ಜ್ವರ ಬಂದವರಂತೆ ಗದಗುಟ್ಟಿ ನಡುಗುತ್ತಿದೆ. ನಿನ್ನ ಎದೆ ಹೊಡೆದುಕೊಳ್ಳುತ್ತಿದೆ. ಇಂಥ ಅಂಜುಬುರುಕ ರಣಹೇಡಿಯೊಡನೆ ನಾನು ಯುದ್ಧಮಾಡಲಾರೆ" ಎಂದು ಶ್ರೀಹರಿಯು ಸ್ಪಷ್ಟವಾಗಿ ಹೇಳಿದ. "ಎಲ್ಲಿ? ಯಾರ ಎದೆ ನಡುಗುತ್ತಿದೆ ? ನನ್ನ ಎದೆಯಲ್ಲಿ ನಡುಗುತ್ತಿದೆ? ಇಲ್ಲ ಇಲ್ಲ ಇನಿತೂ ಹೆದರಲಿಲ್ಲ. ಎಷ್ಟು ಮಾತ್ರಕ್ಕೂ ಬೆದರಲಿಲ್ಲ. ಇಕೋ ನೋಡು, ನನ್ನ ಎದೆ ನಡುಗುತ್ತಿಲ್ಲ" ಎನ್ನುತ್ತ ಆ ಮುರದೈತ್ಯನು ತನ್ನ ಎದೆಯನ್ನು ತನ್ನ ಕೈಯಿಂದ ಮುಟ್ಟಿ ತೋರಿಸಿದನು. ಎದೆಯ ಮೇಲೆ ಕೈ ಇಟ್ಟ ಕೂಡಲೇ ಬ್ರಹ್ಮದೇವರ ವರದಂತೆ ಅವನು ಆಗ ಕೆಳಗೆ ಬಿದ್ದನು. ಶ್ರೀಹರಿಯು ಮೆಲ್ಲನೆ ಚಕ್ರವನ್ನು ಬಿಟ್ಟನು. ಆಗ ಆ ಚಕ್ರವು ಬ್ರಹ್ಮವರದಿಂದಲೇ ಕೆಳಗೆ ಬಿದ್ದ ಆ ದೈತ್ಯನ ಎದೆಯನ್ನು ಸರಳವಾಗಿ ಸೀಳಿ ಹಾಕಿತು. ಮುರಾಸುರನು ತಾನು ಪಡೆದ ವರದಿಂದ ಹತನಾಗಿ ಬಿದ್ದುದನ್ನು ನೋಡಿದ ದೇವತೆಗಳಿಗೆಲ್ಲ ಅತ್ಯಾನಂದವಾಯಿತು. ಅವನ ವರವನ್ನು ಅವನಿಗೇ ಶಾಪವಾಗುವಂತೆ ಮಾಡಿದ ಶ್ರೀಹರಿಯ ಚಾತುರ್ಯವನ್ನು ಅವರೆಲ್ಲರೂ ಬಾಯಿತುಂಬ ಹೊಗಳಿ ಹಾಡಿದರು. ಹೀಗೆ ಯುಕ್ತಿಯಿಂದಲೇ ತನ್ನ ಹದನವಾದ ಚಕ್ರದಿಂದ ಶ್ರೀಹರಿಯು ಮುರಾಸುರನನ್ನು ಸಂಹರಿಸಿದ ಆಖ್ಯಾನವನ್ನು ನಿನಗೆ ನಾನು ಹೇಳಿದ್ದೇನೆ. ಅಂದಿನಿಂದ ಶ್ರೀಹರಿಯು ಮುರಾರಿ ಎಂದು ಪ್ರಸಿದ್ಧನಾದನು. ಪ್ರಭುವಿಗೆ ನರಸಿಂಹ ಎಂದೂ ಹೆಸರಿದೆ.

ವಾಮನ ಮಹಾಪುರಾಣದಲ್ಲಿ ವಾಸುದೇವನ ಉಪಾಸನೆ ಎಂಬ ೬೧ನೇಯ ಅಧ್ಯಾಯವು ಮುಗಿಯಿತು.



## ಮಂಕಣಮುನಿಯ ಕುಣಿತ — ಅಧ್ಯಾಯ - ೬೨

**ಪುಲಸ್ತ್ಯ -**

**ತತೋ ಮರಾರಿಭವನಂ ಸಮಭ್ಯೇತ್ಯ ಸುರಾಸ್ತತಃ ।**
**ಊಚುರ್ದೇವಂ ನಮಸ್ಕೃತ್ಯ ಜಗತ್ಸಂಕ್ಷೋಭಕಾರಣಮ್ ॥**

ಅನಂತರ ದೇವತೆಗಳೆಲ್ಲರೂ ಮುರಾರಿಯಿಂದ ವಿಷ್ಣುವಿನ ಮನೆಗೆ ಬಂದು ಆ ದೇವನಿಗೆ ನಮಸ್ಕಾರ ಮಾಡಿ "ಜಗತ್ತಿನ ಸಂಕ್ಷೋಭಕ್ಕೆ ಕಾರಣವೇನು?" ಎಂದು ಕೇಳಿದರು. ಅದಕ್ಕೆ ಆ ಭಗವಂತನು "ನಾವೆಲ್ಲರೂ ಶಿವನ ಮಂದಿರಕ್ಕೆ ಹೋಗೋಣ. ಚರಾಚರನಾದ ಈ ಜಗತ್ತೆಲ್ಲವೂ ಪ್ರಕ್ಷೋಭಗೊಂಡದ್ದರ ಕಾರಣವನ್ನು ಮಹಾಜ್ಞಾನಿಯಾದ ಆ ಹರನು ಚೆನ್ನಾಗಿ ತಿಳಿದಿರುತ್ತಾನೆ" ಎಂದು ಹೇಳಿದನು. ಆಗ ಇಂದ್ರನೇ ಮೊದಲಾದ ಸುರಸತ್ತಮರೆಲ್ಲರೂ ಜನಾರ್ದನನನ್ನು ಮುಂದೆ ಮಾಡಿಕೊಂಡು ಹರನ ಮಂದಿರವಾದ ಮಂದರ ಪರ್ವತಕ್ಕೆ ಬಂದರು.

ಆದರೆ ಅಲ್ಲಿ ಮಹಾದೇವರು ಇರಲಿಲ್ಲ. ಅವನ ವಾಹನವಾದ ಎತ್ತೂ ಕಾಣಲಿಲ್ಲ. ಪಾರ್ವತಿಯೂ ತೋರಲಿಲ್ಲ. ನಂದಿಯೂ ಅಲ್ಲಿ ಕಾಣಿಸಲಿಲ್ಲ. ಅಜ್ಞಾನದ ಕತ್ತಲೆಗೂಡಿದ ದೇವತೆಗಳಿಗೆ ಆ ಮಂದರಾಚಲವು ಶೂನ್ಯವಾಗಿ ತೋರಿತು. ಮೂಢ ದೃಷ್ಟಿಯ ಆ ದೇವತೆಗಳನ್ನು ಕಂಡು ಅತ್ಯಂತ ತೇಜಸ್ವಿಯಾದ ಭಗವಾನ್ ವಿಷ್ಣು ನುಡಿದನು -

''ಆ ಮಹಾದೇವನು ನಿಮ್ಮ ಕಣ್ಣಿಗೆ ಕಾಣುವದಿಲ್ಲವೇ! ನಿಮ್ಮ ಕಣ್ಣೆದುರೇ ಆ ಮುಕ್ಕಣ್ಣನು ನಿಂತಿದ್ದಾನೆ.''

**ದೇವತೆಗಳು -** ''ನಮ್ಮ ಕಣ್ಣಿಗಂತೂ ಆ ಮಹೇಶ್ವರನು ಕಾಣಿಸಲೊಲ್ಲ. ಇದರ ಕಾರಣವೇನು? ನಮಗಂತೂ ತಿಳಿಯಲೊಲ್ಲದು. ನಮ್ಮ ದೃಷ್ಟಿಯು ಆ ದೇವನನ್ನು ಕಾಣಲಾರದಷ್ಟು ನಷ್ಟವಾಗಿ ಹೋಗಲು ಏನು ನಿಮಿತ್ತವಿರಬಹುದು ?'' ಎಂದು ದೇವತೆಗಳೆಲ್ಲ ಚಿಂತಾಕ್ರಾಂತರಾದರು.

ಆಗ ಜಗನ್ಮೂರ್ತಿಯಾದ ಶ್ರೀಹರಿಯು ಅವರಿಗೆ ''ನೀವು ಆ ಶಂಕರನ ವಿಷಯದಲ್ಲಿ ಭಯಂಕರ ಅಪರಾಧ ಮಾಡಿದ್ದೀರಿ. ಸ್ವಾರ್ಥಾಂಧರಾಗಿ ಪಾರ್ವತಿಯ ಗರ್ಭಪಾತ ಮಾಡಿದಿರಿ. ಇದರಿಂದ ಮಹಾಪಾಪಿಷ್ಠರಾದ ನಿಮ್ಮ ವಿವೇಕವು ಹಾಳಾಗಿ ಜ್ಞಾನವು ನಷ್ಟವಾಗಿ ಹೋಗಿದೆ. ಈ ಕಾರಣದಿಂದಲೇ ನಿಮ್ಮ ದೃಷ್ಟಿಯು ನಷ್ಟವಾಗಿ ನಿಮ್ಮ ಕಣ್ಣೆದುರೇ ನಿಂತಿರುವ ಮಹಾದೇವರನ್ನು ನಿಮಗೆ ಕಾಣಲು ಶಕ್ಯವಿಲ್ಲದಂತಾಗಿದೆ. ಆ ದೇವರ ದರ್ಶನವು ನಿಮಗೆ ಆಗಬೇಕಾದರೆ ಅದಕ್ಕೆ ತಕ್ಕ ದೃಷ್ಟಿಯನ್ನು ನೀವು ಪಡೆಯಬೇಕು. ಅಂಥ ದಿವ್ಯದೃಷ್ಟಿಯು ಬರಬೇಕಾದರೆ ಪಾರ್ವತಿಗೆ ಮಾಡಿದ ಅಪಚಾರದಿಂದ ಅಪವಿತ್ರವಾದ ನಿಮ್ಮ ಶರೀರವನ್ನು ಮೊದಲು ಶುದ್ಧಗೊಳಿಸಬೇಕು. ಆ ಶರೀರ ಶುದ್ಧಿಗೆ ತಪ್ತಕೃಚ್ಛ್ರ ಎಂಬ ಕಠಿಣ ವ್ರತವನ್ನು ಮಾಡಿರಿ. ಇಷ್ಟರಿಂದಲೇ ಶಿವದೃಷ್ಟಿ ಮೂಡುವಷ್ಟು ಪಾವಿತ್ರ್ಯವು ನಿಮ್ಮ ದೇಹಕ್ಕೆ ಬರುವದಿಲ್ಲ. ಅದಕ್ಕಾಗಿ ಶಿವನಿಗೆ ನೂರು ಕೊಡ ಹಾಲಿನಿಂದ ಕ್ಷೀರಾಭಿಷೇಕವನ್ನು ಮಾಡಿರಿ, ಅನಂತರ ಅರವತ್ತು ನಾಲ್ಕು ಕೊಡ ಮೊಸರಿನಿಂದ ಆ ಮಹೇಶ್ವರನಿಗೆ ಅಭಿಷೇಕ ಮಾಡಿರಿ. ಮೂವತ್ತೆರಡು ಕೊಡ ತುಪ್ಪದಿಂದ ಅಭಿಷೇಕ ಮಾಡಿರಿ. ಆ ಬಳಿಕ ಎಂಟು ಕೊಡ ಜೇನುತುಪ್ಪದಿಂದ ಅಭಿಷೇಕ ಮಾಡಿ ಹದಿನಾರು ಪಂಚಗವ್ಯ ಕಲಶಗಳನ್ನು ತುಂಬಿಡಿರಿ. ಈ ಪಂಚಾಮೃತದ ಐದೂ ಪದಾರ್ಥಗಳ ಎರಡರಷ್ಟು ಕೊಡಗಳಲ್ಲಿ ಶುದ್ಧೋದಕಗಳನ್ನು ತುಂಬಿಡಿರಿ.

ಅನಂತರ ಗೋರೋಚನದಿಂದ ಆ ಶಿವನನ್ನು ನೂರಾ ಎಂಟು ಆವರ್ತಿ ಅನುಲೇಪಿಸಿ ಅರಿಷಿಣ ಕುಂಕುಮ ಚಂದನ ಶ್ರೀಗಂಧಗಳನ್ನು ಏರಿಸಿ ನೀವು ಪೂಜಿಸಬೇಕು. ಅನಂತರ ಬಿಲ್ವಪತ್ರ ಕಮಲ ಮಂದಾರ ಮಲ್ಲಿಗೆ ಪಾರಿಜಾತ ಮುಂತಾದ ಹೂಗಳಿಂದ ಪುಷ್ಪಾರ್ಚನೆಯನ್ನು ಮಾಡಬೇಕು. ಕರ್ಪೂರ ಅಗರು ಚಂದನಗಳನ್ನು ಲೇಪಿಸಿ ಧೂಪಾರತಿಯನ್ನು ಮಾಡಬೇಕು. ಅನಂತರ ಋಗ್ವೇದೋಕ್ತ ಪದಕ್ರಮಗಳಿಂದ ಶತರುದ್ರೀಯ ಮಂತ್ರಜಪವನ್ನು ಮಾಡಿ. ಹೀಗೆ ಪಂಚಾಮೃತ ಅಭಿಷೇಕ, ಶತಕುಂಭಾಭಿಷೇಕ, ಪುಷ್ಪಾರ್ಚನೆ, ಶಿವಪೂಜೆ, ಶತರುದ್ರ ಪಾರಾಯಣ ಮೊದಲಾದವುಗಳಿಂದ ಮಾಡಿದರೆ ಮಾತ್ರ ನಿಮಗೆ ಶಿವದೃಷ್ಟಿ ಮೂಡಿ ನಿಮ್ಮ ಕಣ್ಣಿಗೆ ಆ ಮಹಾದೇವನು ಕಾಣಿಸುವನು.''

ವಾಸುದೇವ ಹೀಗೆ ಹೇಳಿದ್ದನ್ನು ಕೇಳಿ ದೇವತೆಗಳು ''ಭಗವಾನ್, ಈ ಶಿವಾರ್ಚನೆಗಿಂತ ಮೊದಲು ದೇಹಶುದ್ಧಿಗಾಗಿ ತಪ್ತ ಕೃಚ್ಛ್ರವ್ರತವನ್ನು ಮಾಡಬೇಕೆಂದು ಹೇಳಿದ್ದಿಯಲ್ಲವೇ! ಸಾರ್ವಕಾಲಿಕ ಶರೀರ ಶುದ್ಧಿಗೆ ಮತ್ತು ಸರ್ವಕಾರ್ಯ ಪಾವಿತ್ರ್ಯಕ್ಕೆ ಕಾರಣೀಭೂತನಾದ ಆ ಕೃಚ್ಛ್ರದ ವಿಧಿವಿಧಾನಗಳನ್ನು ತಿಳಿಸಬೇಕು.

**ವಾಸುದೇವ -** ಮೂರು ದಿನ ಬರೇ ಬಿಸಿನೀರನ್ನೂ, ಅನಂತರ ಮೂರು ದಿನ ಕೇವಲ ಬಿಸಿಹಾಲನ್ನೂ, ಆ ಬಳಿಕ ಮೂರು ದಿನ ಬಿಸಿ ಆಕಳ ತುಪ್ಪವನ್ನೂ, ಕುಡಿದು ಇದ್ದು ಕೊನೆಯ ಮೂರು ದಿನ ಬರಿ ಗಾಳಿಯನ್ನು ಸೇವಿಸಿ ಇರಬೇಕು. ಈ ಹಾಲು ನೀರು ತುಪ್ಪಗಳನ್ನಾದರೂಯಥೇಚ್ಛವಾಗಿ ಸೇವಿಸಬಾರದು. ಮೊದಲು ಮೂರು ದಿನ ಹನ್ನೆರಡು ಪಲ ನೀರು ಮುಂದೆ ಮೂರು ದಿನ ಎಂಟು ಪಲ ಹಾಲು, ಅದರ ನಂತರ ಆರು ಪಲ ನೀರು, ಮುಂದೆ ಮೂರು ದಿನ ಎಂಟು ಹಾಲು, ಅದರ ನಂತರ ಆರು ಪಲ ತುಪ್ಪ. ಈ ಪ್ರಮಾಣದಲ್ಲಿ ಪರಿಮಿತವಾಗಿ ನಿರ್ದಿಷ್ಟ ಪದಾರ್ಥಗಳನ್ನು ಮಾತ್ರ ಸೇವಿಸಿ ದೇವರ ಆರಾಧನೆಯಸ್ನು ಮಾಡಬೇಕು. ಇದಕ್ಕೆ ಕೃಚ್ಛ್ರವ್ರತ ಎನ್ನುತ್ತಾರೆ.

**ಪುಲಸ್ತ್ಯ -** ವಾಸುದೇವನ ಈ ಉಪದೇಶವನ್ನು ಕೇಳಿ ದೇವತೆಗಳು ಅದರಂತೆ ತಪ್ತ ಕೃಚ್ಛ್ರವ್ರತವನ್ನು ಆಚರಿಸಿದರು. ಅದರಿಂದ ಅವರ ಪಾಪಗಳೆಲ್ಲ ದೂರಾಗಿ ದೇಹ ಪವಿತ್ರವಾಯಿತು. ಆ ಮೇಲೆ ಅವರೆಲ್ಲರೂ ಶ್ರೀವಿಷ್ಣುವಿನ ಬಳಿಗೆ ಬಂದು ''ಸ್ವಾಮಿನ್, ಆ ಶಂಭುವು ಎಲ್ಲಿ ಇರುತ್ತಾನೆ. ನಿನ್ನ ಅಪ್ಪಣೆಯಂತೆ ನಾವು ಅವನಿಗೆ ಪಂಚಾಮೃತದಿಂದ ಅಭಿಷೇಕ ಮಾಡಬೇಕಾಗಿದೆ'' ಎಂದು ಕೇಳಿದರು. ಅದಕ್ಕೆ ಶ್ರೀಹರಿಯು ಆ ದೇವತೆಗಳಿಗೆ ಹೀಗೆ ಉತ್ತರ ಕೊಟ್ಟನು. ''ಆ ಶಂಕರನು ಇಲ್ಲಿಯೇ ನನ್ನ ದೇಹದಲ್ಲಿ ಯೋಗಶಕ್ತಿಯಿಂದ ಪ್ರತಿಷ್ಠಿತನಾಗಿ ದ್ದಾನೆ. ನಿಮಗೆ ಕಾಣುವದಿಲ್ಲವೇ?'' ''ಎಲ್ಲಿ! ಕಾಣುವದಿಲ್ಲವಲ್ಲ! ಆ ತ್ರಿಪುರಾಂತಕನು ನಮ್ಮ ದೃಷ್ಟಿಗೇ ಗೋಚರನಾಗ ಲೊಲ್ಲನು. ಸುರೇಶ್ವರನೇ, ಸತ್ಯವನ್ನು ಹೇಳು. ಆ ಮಹಾದೇವನು ಎಲ್ಲಿ ಇರುತ್ತಾನೆ''? ಎಂದು ದೇವತೆಗಳೆಲ್ಲರೂ ಸಂಭ್ರಾಂತರಾಗಿ ಕೇಳಿದರು. ಅದಕ್ಕೆ ನಾಶರಹಿತನಾದ ಆ ಶ್ರೀಹರಿಯು ''ಇಕೋ ಇಲ್ಲಿ ನೋಡಿರಿ, ನನ್ನ ಹೃದಯ ಕಮಲದಲ್ಲಿಯೇ ಆ ಶಂಕರನು ವಾಸಮಾಡಿದ್ದಾನೆ'' ಎಂದು ತನ್ನ ಎದೆಯಲ್ಲಿರುವ ಶಿವಲಿಂಗವನ್ನು ತೋರಿಸಿದನು. ಅದನ್ನು ನೋಡಿ ದೇವತೆಗಳಿಗೆ ಪರಮಾನಂದವಾಯಿತು. ಅನಂತರ ಆ ಅಮರರೆಲ್ಲರು ಕೂಡಿ ಹರಿಯ ಹೃದಯ ಪೀಠದಲ್ಲಿ ಮಂಡಿತವಾದ ಶಾಶ್ವತ ಶಿವಲಿಂಗಕ್ಕೆ ಹಾಲು ಮೊಸರು ತುಪ್ಪ ಜೇನುತುಪ್ಪಗಳಿಂದ ಅಭಿಷೇಕ ಮಾಡಿದರು. ಸುಗಂಧಿ ಚಂದನ ಗೋರೋಚನಗಳನ್ನು ಲೇಪಿಸಿದರು. ಕಮಲ ಬಿಲ್ವಪತ್ರ ಮುಂತಾದ ಹೂಗಳನ್ನು ಏರಿಸಿದರು, ಧೂಪವನ್ನು ಬೆಳಗಿದರು, ನೈವೇದ್ಯವನ್ನು ಸಮರ್ಪಿಸಿದರು. ನೂರಾ ಎಂಟು ಶಿವನಾಮಗಳನ್ನು ಜಪಿಸಿ ಎಲ್ಲರೂ ಸಾಷ್ಟಾಂಗ ನಮಸ್ಕಾರ ಮಾಡಿದರು.

**ನಾರದ -** ದೇವತೆಗಳು ಹೀಗೆ ಹರಿಹರರನ್ನು ಒಂದೇ ದೇಹದಲ್ಲಿ ಚಿಂತಿಸಿ ಪೂಜೆ ಮಾಡಿದ ಬಳಿಕ ಆ ಮಹೇಶ ಮಾಧವರಿಬ್ಬರೂ ದೇವರು ಮಿಲಿತ ದೇಹರಾದದ್ದು ಹೇಗೆ ವಿಷ್ಣುವು ಸತ್ವ ಮೂರ್ತಿಯು ಶಿವನು ತಮೋಮೂರ್ತಿ. ಇಂಥ ಭಿನ್ನ ಪ್ರಕೃತಿಯ ಇಬ್ಬರೂ ಒಂದೆಡೆ ಒಂದುಗೂಡಿದ್ದು ಹೇಗೆ?

**ಪುಲಸ್ತ್ಯ -** ದೇವತೆಗಳ ಈ ಆಲೋಚನೆಯನ್ನು ತಿಳಿದು, ಪ್ರಭುವಾದ ಪರಮಾತ್ಮನು ವಿಶ್ವಮೂರ್ತಿಯಾಗಿ ಸ್ವಸಂಕಲ್ಪದಿಂದಲೇ ತೋರ್ಪಡಿಸಿಕೊಂಡನು. ಹರಹರರ ಎಲ್ಲ ಲಕ್ಷಣಗಳಿಂದಲೂ, ಸರ್ವ ಆಯುಧಗಳಿಂದಲೂ ಕೂಡಿದ ತನ್ನ ಹರಹರೇಶ್ವರನ ಸ್ವರೂಪವನ್ನು ತನ್ನನ್ನು ಪೂಜಿಸುವ ದೇವತೆಗಳಿಗೆ ಪ್ರತ್ಯಕ್ಷಗೊಳಿಸಿದನು.

ದೇವತೆಗಳಿಗೆ ಪ್ರತ್ಯಕ್ಷ ದರ್ಶನ ಕೊಟ್ಟ ಆ ಹರಿಹರೇಶ್ವರನ ಮೂರ್ತಿಯಲ್ಲಿ ಒಂದು ಕಡೆ ಎರಡು ಕಣ್ಣಿದ್ದರೆ ಇನ್ನೊಂದು ಕಡೆ ಮೂರು ಕಣ್ಣು. ಒಂದು ಕಡೆ ಬಂಗಾರದ ಕಡಗವಾದರೆ, ಇನ್ನೊಂದು ಕಡೆ ಹಾವಿನಕುಂಡಲ. ಒಂದು ಕಡೆ ಕೇಶ ಜಡೆಗಟ್ಟಿದ್ದರೆ ಇನ್ನೊಂದು ಕಡೆ ಮುಡಿಯಾಗಿ ಕಟ್ಟಿ ಗಂಟು ಹಾಕಿದ ಮಿದುಗೂದಲು ಒಂದು ಭಾಗ ವೃಷಭ ಧ್ವಜ, ಇನ್ನೊಂದು ಭಾಗ ಗರುಡ ಧ್ವಜ. ಕೊರಳಲ್ಲಿ ಹಾರ ಹಾವು ಎರಡೂ ಶೋಭಿಸುತ್ತಿದ್ದವು. ಒಂದೆಡೆ ಪೀತಾಂಭರವು ಸೊಂಟದ ಮೇಲೆ ಒಪ್ಪುತ್ತಿದ್ದರೆ ಮಿಗದೊಗಲು ಮುಚ್ಚಿದ ಮೈ ಮತ್ತೊಂದು ಕಡೆ. ಒಂದು ಕೈಯಲ್ಲಿ ಶಂಖ ಚಕ್ರ ಬಿಲ್ಲು ಬಾಣ, ಮತ್ತೊಂದು ಕೈಯಲ್ಲಿ ಪಿನಾಕ, ತ್ರಿಶೂಲ, ಅಜಗವ ಒಂದು ಕೈಯಲ್ಲಿ ತಲೆಬುರುಡೆ, ಇನ್ನೊಂದು ಕೈಯಲ್ಲಿ ಶಂಖ. ಹೀಗೆ ಹರಿಹರರಿಬ್ಬರೂ ಒಂದುಗೂಡಿ ಬಂದುದನ್ನು ನೋಡಿ ಬ್ರಹ್ಮದೇವರೇ ಮೊದಲಾದ ದೇವತೆಗಳೆಲ್ಲ ''ಭಗವನ್, ನಮೋಸ್ತುತೇ, ಸರ್ವತ್ರವ್ಯಾಪ್ತನೂ ನಾಶರಹಿತನೂ ಆದ ನಿನಗೆ ನಮ್ಮ ನಮಸ್ಕಾರ'' ಎಂದು ಸ್ತೋತ್ರ ಮಾಡಿ ಆ ಇಬ್ಬರೂ ದೇವತೆಗಳನ್ನು ಏಕೋಭಾವನೆಯಿಂದ ಪೂಜಿಸಿದರು. ಹೀಗೆ ತಮ್ಮಿಬ್ಬರನ್ನು ಏಕರೂಪರನ್ನಾಗಿ ದೇವತೆಗಳೂ ತಿಳಿದಿದ್ದನ್ನು ನೋಡಿ ದೇವೋತ್ತಮನಾದ ಶ್ರೀಹರಿಯು ಆ ಎಲ್ಲ ಸುರರನ್ನು ಕರೆದುಕೊಂಡು ಕುರುಕ್ಷೇತ್ರ ದಲ್ಲಿರುವ ತನ್ನ ಆಶ್ರಮಕ್ಕೆ ಹೋದನು.

ಅಲ್ಲಿ ಸ್ಥಾಣುರೂಪದಿಂದ ನೀರಿನಲ್ಲಿ ಮುಳುಗಿರುವ ಶಂಭುವನ್ನು ಎಲ್ಲರೂ ನೋಡಿದರು. ''ಸ್ಥಾಣು, ನಿನಗೆ ನಮ್ಮ ನಮಸ್ಕಾರಗಳು'' ಎಂದು ನುಡಿದು ಎಲ್ಲರೂ ಕುಳಿತುಕೊಂಡರು. ಆಗ ಸುರರಿಗೆ ಅಧಿಪತಿಯಾದ ಇಂದ್ರನು ''ಜಗದೊಡೆಯನಾದ ಪ್ರಿಯ ಅತಿಥಿಯೇ, ಎದ್ದೇಳು. ಜಗತ್ತೆಲ್ಲವೂ ಕ್ಷೋಭಗೊಂಡಿದೆ. ನೀನು ಮೇಲೆ ಎದ್ದು ಬಾ. ನಮಗೆ ವರವನ್ನು ಕೊಡು'' ಎಂದು ಬಿನ್ನವಿಸಿದನು. ಶಚೀಪತಿಯ ಈ ಸವಿನುಡಿಯನ್ನು ಕೇಳಿ ಸರ್ವತ್ರವ್ಯಾಪನೂ ನಿರಂಜನನೂ ಆದ ಆ ವೃಷಭಧ್ವಜ ಶಿವನು ನೀರಿನಿಂದ ಮೇಲಕ್ಕೆ ಎದ್ದನು. ಮತ್ತೂ ''ಎಲ್ಲಾ ದೇವಾಧಿದೇವತೆಗಳಿಗೂ ನನ್ನ ನಮಸ್ಕಾರ'' ಎಂದು ಮಂದಹಾಸದಿಂದ ಒಡಗೂಡಿ ವಂದಿಸಿದನು. ಇವರ ಬಳಿಗೆ ಬಂದ ಆ ಹರನನ್ನು ಇಂದ್ರಾದಿ ದೇವತೆಗಳೆಲ್ಲರೂ ಸಾಷ್ಟಾಂಗ ನಮಸ್ಕಾರ ಮಾಡಿ ವಿನಯದಿಂದ ನಮ್ರರಾಗಿ ಮಾತನಾಡಿದರು-

''ಮಹಾದೇವನೇ, ನೀನು ಈಗ ಆಚರಿಸುತ್ತಿರುವ ಮಹಾವ್ರತವನ್ನು ಕೂಡಲೇ ಬಿಟ್ಟು ಬಿಡಬೇಕು. ಯಾಕೆಂದರೆ ಈಗ ನೀನು ಕೈಕೊಂಡ ವ್ರತದ ತೇಜಸ್ಸಿನಿಂದ ಮೂರು ಲೋಕಗಳೇ ಕ್ಷೋಭಗೊಂಡಿವೆ. ಆದುದರಿಂದ ಈಗಲೇ ನೀನು ಈ ನಿನ್ನ ವ್ರತವನ್ನು ಇಲ್ಲಿಗೇ ನಿಲ್ಲಿಸಿಬಿಡು.'' ಇದನ್ನು ಕೇಳಿ ಮಹಾದೇವನು ''ನಿಮ್ಮ ಅಪೇಕ್ಷೆಯಂತೆ ನನ್ನ ಈ ವ್ರತವನ್ನು ಬಿಟ್ಟುಬಿಟ್ಟಿದ್ದೇನೆ'' ಎಂದು ಹೇಳಿದನು. ಆದರಿಂದ ಸುರಪುರದ ನಾಗರಿಕರೆಲ್ಲ ಅತ್ಯಂತ ಸಂತೋಷವಾಗಿ ತಮ್ಮ ತಮ್ಮ ಮನೆಗಳಿಗೆ ಹೋದರು. ಸುರರೆಲ್ಲರೂ ಸ್ವರ್ಗಲೋಕವನ್ನು ಸೇರಿದ ಬಳಿಕ ಒಮ್ಮೆಲೇ ಭೂಕಂಪವಾಯಿತು. ನಡುಗಡ್ಡೆಗಳು ನಡುಗಿದವು. ಸಾಗರಗಳೂ ತುಳುಕಿ ತೂಗಾಡಿದವು. ಆಗ ''ಇದು ಹೀಗೇಕೆ ? ಒಮ್ಮೆಲೆ ಪ್ರಪಂಚವೆಲ್ಲವೂ ಏಕೆ ಪ್ರಕ್ಷುಬ್ಧವಾಗಿದೆ?'' ಎಂದು ಮಹಾದೇವರು ವಿಚಾರ ಮಾಡಿದರು.

ಕ್ಷೋಣೀಮಂಡಲದ ಈ ಕ್ಷೋಭಕ್ಕೆ ಕಾರಣವನ್ನು ಕಂಡುಹಿಡಿಯಬೇಕೆಂದು ಆ ವಿರೂಪಾಕ್ಷನು ಎಲ್ಲ ಕಡೆಗೂ ಸಂಚರಿಸಿದನು, ಕುರುಕ್ಷೇತ್ರಕ್ಕೂ ಬಂದನು. ಕುರುಕ್ಷೇತ್ರದ ಸುತ್ತಲೂ ಮಹಾದೇವರು ಹುಡುಕುಗಣ್ಣಿನಿಂದ ಪ್ರಕ್ಷೋಭ ಕಾರಣವನ್ನು ಸಂಶೋಧಿಸುತ್ತಿರುವಾಗ ಓಘವತೀ ನದೀತೀರದಲ್ಲಿ ಶುಕ್ರಾಚಾರ್ಯರು ತಪಸ್ಸನ್ನಾಚರಿಸುತ್ತಿರುವದು ಕಂಡುಬಂದಿತು. ಶುಕ್ರನನ್ನು ಕುರಿತು ಸುರೇಶ್ವರನಾದ ಮಹೇಶ್ವರನು ''ತಪೋನಿಧಿಯೇ, ಜಗತ್ತಿಗೆಲ್ಲ ಕ್ಷೋಭವನ್ನುಂಟು ಮಾಡುವ ಇಂಥ ಘೋರವಾದ ತಪಸ್ಸನ್ನು ನೀನು ಏತಕ್ಕಾಗಿ ಕೈಕೊಂಡಿರುವಿ'' ಎಂದು ಪ್ರಶ್ನಿಸಿದನು. ಅದಕ್ಕೆ ಶುಕ್ರಾಚಾರ್ಯರು ''ಮೂರು ಕಣ್ಣಿನ ಮಹಾದೇವನೇ ನಿನ್ನನ್ನು ಸಂತೋಷಪಡಿಸಲಿಕ್ಕಾಗಿಯೇ ನಾನು ಈ ತಪವನ್ನು ಆಚರಿಸುತ್ತೇನೆ. ನೀನು ಪ್ರಸನ್ನನಾಗಿ ದರ್ಶನವಿತ್ತದ್ದರಿಂದ ನನ್ನ ಈ ಉಗ್ರತಪಸ್ಸು ಸಾರ್ಥಕವಾಯಿತು. ನಿನ್ನಿಂದ ಸತ್ತವರನ್ನು ಬದುಕಿಸುವ ಸಂಜೀವಿನೀ ವಿದ್ಯೆಯನ್ನು ಪಡೆಯಬೇಕೆಂದು ನಾನು ಇಚ್ಛಿಸಿದ್ದೇನೆ'' ಎಂದು ತನ್ನ ಮನದ ಅಪೇಕ್ಷೆಯನ್ನು ತಿಳಿಸಿದನು.

''ತಪೋಧನನೇ ನಿನ್ನ ತಪಸ್ಸಿನಿಂದ ನಾನು ಪರಿತುಷ್ಟನಾಗಿದ್ದೇನೆ. ಆದುದರಿಂದ ಆ ಸಂಜೀವಿನೀ ವಿದ್ಯೆಯನ್ನು ಇನ್ನು ನೀನು ನನ್ನ ದಯೆಯಿಂದ ಯಥಾವತ್ತಾಗಿ ತಿಳಿದು ಕೊಳ್ಳುವಿ!'' ಎಂದು ಹರನು ಹರಸಿದನು. ವರವನ್ನೂ ಕರುಣಿಸಿದನು. ಹೀಗೆ ಹರನಿಂದ ವರವನ್ನೂ ವಿದ್ಯೆಯನ್ನೂ ಪಡೆದು ದೈತ್ಯಗುರು ಶುಕ್ರಾಚಾರ್ಯನು ಪಶ್ಚರ್ಯೆಯಿಂದ ನಿವೃತ್ತನಾಗಿ ಮನೆಗೆ ಮರಳಿದನು. ಇಷ್ಟಾದ ಬಳಿಕವೂ ಮತ್ತೆ ಭೂಮಿಯಲ್ಲಿ ಕಂಪನವು ತಲೆದೋರಿತು. ಸಾಗರಗಳು ಮೇರೆ ಮೀರಿ ಭೋರ್ಗರೆದವು. ಕುಲಪರ್ವತಗಳು ಅಲ್ಲಾಡಿದವು. ಆಗ ಮಹಾದೇವರಿಗೆ ಮತ್ತೆ ಚಿಂತೆಯಾಯಿತು. ಮತ್ತಾರದು ಈ ಕಾರಸ್ಥಾನ ಎಂದು. ಮಹಾದೇವರು ತಮ್ಮ ಸಂಶೋಧನಾತ್ಮಕ ಸಂಚಾರವನ್ನು ಮತ್ತೆ ಮುಂದುವರಿಸಿದರು. ಸಪ್ತಸಾರಸ್ವತಕ್ಷೇತ್ರದಲ್ಲಿ ಹರ್ಷೋದ್ರೇಕದಿಂದ ಕುಣಿಯುವ ಋಷಿಯೊಬ್ಬನು ಅವರ ಕಣ್ಣಿಗೆ ಬಿದ್ದನು. ಭಾವಾವೇಶದಿಂದ ಎರಡೂ ಕೈಗಳನ್ನು ಮೇಲೆ ಎತ್ತಿ ಆಚೀಚೆ ತಿರುವುತ್ತ ತನ್ಮಯತೆಯಲ್ಲಿ ಅವನ ಕುಣಿತವು ವೇಗದಿಂದ ಸಾಗಿತ್ತು. ಅವನ ಕುಣಿತದ ರಭಸಕ್ಕೆ ಬೆಟ್ಟ ಬಯಲು ಸಹಿತವಾದ ಭೂಮಿ ಎಲ್ಲವೂ ನಡುಗುತ್ತಿತ್ತು. ಆಗ ಪರಮೇಶ್ವರನು ಮಂಕಣ ಎಂಬ ಹೆಸರಿನ ಆ ಮುನಿಯ ಬಳಿಗೆ ಹೋಗಿ ಅವನ ಕೈಹಿಡಿದು ನಗುತ್ತ ಕೇಳಿದನು- ''ನೀನೇಕೆ ಹೀಗೆ ಕುಣಿಯುತ್ತಿರುವಿ? ನಿನ್ನ ಈ ಹರ್ಷೋದ್ರೇಕ ಕಾರಣವಾದರೂ ಏನು? ಅದನ್ನು ನನಗೆ ಹೇಳು.'' ಅದಕ್ಕೆ ಆ ಬ್ರಾಹ್ಮಣನು ಹೀಗೆ ಉತ್ತರಿಸಿದನು-

''ನಾನು ನನ್ನ ದೇಹ ಶುದ್ಧಿಗಾಗಿ ತಪಸ್ಸನ್ನು ಮಾಡತೊಡಗಿ ಎಷ್ಟೋ ವರ್ಷಗಳೂ ಕಳೆದವು. ಇಂದು ನನ್ನ ಕೈಗೆ ಅಕಸ್ಮಾತ್ತಾಗಿ ಗಾಯವಾದಾಗ ಒಮ್ಮೆಲೇ ನನ್ನ ಬೆರಳಿನಿಂದ ಶಾಕರಸವೇ ಸೋರತೊಡಗಿದೆ. ಇದರಿಂದ ದೇಹ ಶುದ್ಧಿಯಾಯಿತೆಂದು ಬಗೆದು ನಾನು ಅತ್ಯಂತ ಸಂತುಷ್ಟನಾಗಿದ್ದೇನೆ. ಅದರಿಂದಲೇ ನಾನು ಭಾವಪರವಶನಾಗಿ ಕುಣಿಯುತ್ತಲಿದ್ದೇನೆ'' ಆಗ ಮಹಾದೇವರು ''ಅಯ್ಯಾ, ಬ್ರಾಹ್ಮಣ, ತುಸು ಇತ್ತ ನನ್ನ ಕಡೆಗೆ ನೋಡು. ನನ್ನ ಕೈಗೆ ಏಟಹಾಕಿದ ಕೂಡಲೇ ಅತ್ಯಂತ ಶುಭ್ರವಾದ ಭಸ್ಮವೇ ಹೊರಹೊಮ್ಮಿ ಸುರಿಯುತ್ತಿದೆ. ಇಷ್ಟರಿಂದ ನನಗೇನು ಸಂತೋಷೋದ್ರೇಕವಿಲ್ಲ.

ತನ್ನೂಲಕವಾಗಿ ಮದವೂ ಇಲ್ಲ. ಆದರೆ ನೀನು ಮಾತ್ರ ಇಷ್ಟು ಅಲ್ಪಕಾರಣಕ್ಕೆ ಸಂತುಷ್ಟನೂ ಆಗಿರುವಿ. ಪ್ರಮತ್ತನೂ ಆಗಿರುವಿ.''

ಮಹಾದೇವರ ಈ ಮಾತನ್ನು ಕೇಳಿ ಮಂಕಣಮುನಿಗೆ ಆಶ್ಚರ್ಯವಾಯಿತು. ಅವನ ಗರ್ವ ಇಳಿಯಿತು. ವಿನಯದಿಂದ ನಮ್ರನಾಗಿ ಆ ವೃಷಭಧ್ವಜನ ಚರಣಗಳಿಗೆ ನಮಸ್ಕಾರ ಮಾಡಿದನು. ಅವನ ಅಕಾಂಡ ತಾಂಡವ ಅಲ್ಲಿಗೆ ನಿಂತಿತು. ಆಗ ಶಂಭುವು ಅವನ ಮೇಲಿನ ಕರುಣೆಯಿಂದ ''ಬ್ರಾಹ್ಮಣನೇ, ಬ್ರಹ್ಮಜ್ಞಾನಿಗಳಿಗೆ ಮಾತ್ರ ಯೋಗ್ಯವಾದ, ಇತರರಿಗೆ ದುರ್ಲಭವಾದ ದಿವ್ಯ ಲೋಕವನ್ನು ಕುರಿತು ನೀನು ಪ್ರಯಾಣ ಮಾಡು. ಇನ್ನು ಮೇಲೆ ಈ ಪೃಥೂದಕ ಕ್ಷೇತ್ರವು ಸುರಾಸುರ ಗಂಧರ್ವ ವಿದ್ಯಾಧರ ಕಿನ್ನರರ ಸಾನ್ನಿಧ್ಯದಿಂದ ಪರಮಪವಿತ್ರವಾದ ಸಾರಸ್ವತ ತೀರ್ಥವಾಗಿ ಧರ್ಮಸ್ಥಾನವೆಂದು ಪೃಥ್ವೀಮಂಡಲದಲ್ಲಿ ಪ್ರಸಿದ್ಧವಾಗಲಿ. ಸ್ನಾನ ಮಾಡಿದವರ ಪಾಪರೂಪ ಮಲವನ್ನು ಪರಿಹರಿಸಿ ಹೆಚ್ಚಿನ ಪುಣ್ಯ ಪ್ರದಾನವನ್ನು ಮಾಡಲಿ. ಸುಪ್ರಭಾ, ಕಾಂಚನಾಕ್ಷೀ, ಸುವೇಣು, ವಿಮಲೋದಕಾ, ಮಹೋದರಾ, ಓಘನತೀನದಿ, ವಿಶಾಲಾ ಎಂಬ ಸರಸ್ವತೀ ನದಿಯ ಏಳೂ ಶಾಖಾಗಳು ಈ ತೀರ್ಥದಲ್ಲಿ ಸನ್ನಿಹಿತವಾಗಿ ಸ್ನಾನ ಮಾಡಿದವರಿಗೆ ಸೋಮಪಾನದ ಫಲವನ್ನು ಕೊಡುತ್ತವೆ.'' ಹೀಗೆ ಹೇಳಿ ಮಹಾದೇವರು ಅಲ್ಲಿಂದ ತೆರಳಿದ ಬಳಿಕ ಮಂಕಣ ಮುನಿಯು ಆ ಕುರುಕ್ಷೇತ್ರದಲ್ಲಿ ಮಹಾದೇವರ ಮೂರ್ತಿಯೊಂದನ್ನು ಪ್ರತಿಷ್ಠಾಪಿಸಿ ಬ್ರಹ್ಮಲೋಕಕ್ಕೆ ನಡೆದನು. ಅನಂತರ ಶಂಭುವು ಭೂಮಿಕಂಪನವು ಕಡಿಮೆಯಾದುದನ್ನು ಕಂಡು ಸಮಾಧಾನದಿಂದ ಮಂದರ ಪರ್ವತದಲ್ಲಿರುವ ತನ್ನ ನಿರ್ಜರಮಂದಿರಕ್ಕೆ ಬಂದನು. ಹೀಗೆ ಶಂಕರನು ತಪಸ್ಸಿಗಾಗಿ ಹೋಗಿ ಮರಳಿ ಪಾರ್ವತಿಯ ದರ್ಶನೇಚ್ಛೆಯಿಂದ ಮಂದರ ಪರ್ವತಕ್ಕೆ ಬಂದ ಸಮಾಚಾರವನ್ನು ನಿನಗೆ ನಾನು ತಿಳಿಸಿದೆನು.

ವಾಮನ ಮಹಾಪುರಾಣದಲ್ಲಿ ಮಂಕಣಮುನಿಯ ಕುಣಿತ ಎಂಬ ೭೦ನೇಯ ಅಧ್ಯಾಯವು ಮುಗಿದುದು

—o—

## ನಾರದ ಉವಾಚ

**ಗತೋಽಂಧಕಸ್ತು ಪಾತಾಲೇ ಕಿಮಚೇಷ್ಟತ ದಾನವಃ ।**
**ಶಂಕರೋ ಮಂದರಸ್ಥೋಽಪಿ ಯಚ್ಚಕಾರ ತದುಚ್ಯತಾಮ್ ॥**

ಅನಂತರ ಪಾತಾಲಲೋಕದಲ್ಲಿ ಅಂಧಕಾಸುರನು ಏನು ಮಾಡಿದನು? ಮತ್ತು ಮಂದರಪರ್ವತದಲ್ಲಿ ಇದ್ದು ಶಂಕರನು ಏನು ಮಾಡಿದನು ? ಇದನ್ನು ನನಗೆ ಹೇಳಿರಿ.

## ಪುಲಸ್ತ್ಯ ಉವಾಚ

**ಪಾತಾಲಸ್ಥೋಽಂಧಕೋ ಬ್ರಹ್ಮನ್ ಬಾಧ್ಯತೇ ಮದನಾಗ್ನಿನಾ ।**
**ಸಂತಪ್ತ ವಿಗ್ರಹಃ ಸರ್ವಾನ್ ದಾನವಾನಿದ ಮಬ್ರವೀತ್ ॥**

ಪಾತಾಳದಲ್ಲಿರುವ ಅಂಧಕಾಸುರನು ಕಾಮಾಗ್ನಿಯ ಬೇಗೆಯಿಂದ ಬೆಂದು ಬಸವಳಿದ ಎಲ್ಲ ದಾನವರನ್ನು ಕುರಿತು ಹೇಳಿದನು - ''ಪರ್ವತಪುತ್ರಿಯಾದ ಆ ಗೌರಿಯನ್ನು ಹಿಡಿದು ಯಾರು ನನ್ನ ಬಳಿಗೆ ಕರೆತರು ವರೋ ಅವನೇ ನನ್ನ ನಿಜವಾದ ಗೆಳೆಯ. ಅವನೇ ನನಗೆ ತಕ್ಕ ತಮ್ಮ. ಯೋಗ್ಯ ಅಣ್ಣ. ಶ್ಲಾಘ್ಯ ತಂದೆ.'' ಕಾಮಾಂಧನಾದ ಅಂಧಕನ ಈ ಮಾತುಗಳನ್ನು ಕೇಳಿ ಪ್ರಲ್ಹಾದನು ಮೋಡ ಗುಡುಗಿದಂತೆ ಗಂಭೀರ ಕಂಠದಿಂದ ಹೇಳಿದನು. ''ವೀರನೇ, ನೀನು ಹಿಡಿದುತರಲು ಹೇಳಿದ ಆ ಗಿರಿಯ ಮಗಳು ಧರ್ಮ ದೃಷ್ಟಿಯಿಂದ ನಿನಗೆ ತಾಯಿಯೇ ಆಗಬೇಕು. ಮುಕ್ಕಣ್ಣನು ನಿನಗೆ ತಂದೆಯಾಗಬೇಕು. ಅದು ಹೇಗೆ ಎಂಬುದನ್ನು ಹೇಳುತ್ತೇನೆ ಕೇಳು -

ಹಿಂದೆ ನಿನ್ನ ತಂದೆಯಾದ ಹಿರಣ್ಯಾಕ್ಷನು ಮೊದಮೊದಲು ಧರ್ಮನಿಷ್ಠನಾಗಿದ್ದನು. ಆಗ ಅವನಿಗೆ ಸಂತಾನವಿರಲಿಲ್ಲ. ಮಕ್ಕಳ ಸಲುವಾಗಿ ಶಿವನನ್ನು ಅವನು ಭಕ್ತಿಯಿಂದ ಆರಾಧಿಸಿದನು. ಆಗ ಹರನು ನಿನ್ನ ತಂದೆಗೆ ತನ್ನ ಮಗನಾದ ಅಂಧಕ ಎಂಬ ಹೆಸರಿನ ನಿನ್ನನ್ನೇ ಪುತ್ರನನ್ನಾಗಿ ಕೊಟ್ಟುಬಿಟ್ಟನು. ಮತ್ತೂ ಈ ಮಾತನ್ನೂ ಹೇಳಿದನು.

''ದೈತ್ಯರಾಜನೇ ಹಿಂದೊಮ್ಮೆ ನಾನು ಯೋಗಾರೂಢನಾಗಿತಪಸ್ಸಮಾಧಿಯಲ್ಲಿದ್ದಾಗ ನನ್ನ ಒಬ್ಬ ಮೆಚ್ಚಿನ ಮಗಳು ಆಟವಾಡುತ್ತ ಬಂದು ಉನ್ಮೀಲಿತವಾದ ಮೂರು ಕಣ್ಣುಗಳನ್ನು ಮುಚ್ಚಿಬಿಟ್ಟಳು. ನನ್ನ ತ್ರಿಲೋಚನಗಳೂ ಆಮೀಲಿತವಾದ ಕೂಡಲೇ ಒಮ್ಮೆಲೇ ಕತ್ತಲೆಯ ಮೂರ್ತವೇ ಧುತ್ತೆಂದು ಎದ್ದು ನಿಂತಿತು. ಆ ಅಂಧಕಾರದ ಬಸಿರಿನಿಂದಲೇ ಈ ಅಂಧಕನು ಉದಿಸಿಬಂದನು. ಬಿರುಗಾಳಿಯಂತೆ ಭೀಕರನೂ ಮೇಘದ ಗುಡುಗಿನಂತೆ ಗರ್ಜಿಸುವವನೂ ಆದ ಈ ಅಂಧಕನು ನಿನಗೆ ಯೋಗ್ಯವಾದ ಮಗನಾಗಿದ್ದಾನೆ. ಇವನನ್ನು ನೀನು ಕರೆದುಕೊಂಡು ಹೋಗು. ಇವನು ಮುಂದೆ ಸರಿಯಾದ ದಾರಿಯಲ್ಲಿ ಇರುವವರೆಗೆ ಇವನಿಗೆ ಯಾವುದೇ ಭಯಾಪಾಯವಿಲ್ಲ. ಆದರೆ ದುರ್ಬುದ್ಧಿಯಿಂದ ಜನರ ದ್ವೇಷಮಾಡಿ ಹಿಂಸಾ ಕಾರ್ಯಕ್ಕೆ ಇಳಿದರೆ ಅಥವಾ ಮೂರುಲೋಕದ ತಾಯಿಯಾದ ಜಗದಂಬೆಯನ್ನು ಕಾಮಲಾಲಸೆಯಿಂದ ಬಯಸಿದರೆ ಮತ್ತು ಬ್ರಾಹ್ಮಣರನ್ನು ಹಿಂಸಿಸಿ ಕೊಲ್ಲತೊಡಗಿದರೆ ಮಾತ್ರ ಇವನನ್ನು ಆಗಲೇ ನಾನೇ ಕೊಲ್ಲುತ್ತೇನೆ.''

ಹೀಗೆ ಕೇಳಿ ಶಂಭುವು ಸ್ವಸ್ಥಾನವಾದ ಮಂದರಾಚಲಕ್ಕೆ ಹೋದನು. ನಿನ್ನ ತಂದೆಯಾದ ಹಿರಣ್ಯಾಕ್ಷನು ನಿನ್ನನ್ನು ಕರೆದುಕೊಂಡು ರಸಾತಲಕ್ಕೆ ನಡೆದನು. ದೈತ್ಯರಾಜನೇ, ಈ ಕಾರಣದಿಂದ ಜಗದಂಬೆಯಾದ ಪಾರ್ವತಿಯು ನಿನಗೆ ತಂದೆಯಾದ ಮಹಾದೇವನ ಮಡದಿಯಾದುದರಿಂದ ತಾಯಿಯೇ ಆಗಲಿಲ್ಲವೇ? ಪ್ರಪಂಚಕ್ಕೆ ಅವರಿಬ್ಬರೂ ತಾಯಿತಂದೆಗಳು. ನಿನಗಂತೂ ವಿಶೇಷವಾಗಿ ಸಾಕ್ಷಾತ್ ತಂದೆ ಶಿವ. ಖಾಸ ತಾಯಿ ಪಾರ್ವತಿ. ನೀನೂ ಶಾಸ್ತ್ರಗಳನ್ನು ತಿಳಿದಿರುವಿ. ಸದ್ಗುಣಿಯಾಗಿರುವಿ. ಇಂಥ ಯೋಗ್ಯನಾದ ನೀನೂ ಸಜ್ಜನನು. ಇಂಥ ಹೇಯವಾದ ಪಾಪವಿಚಾರವನ್ನು ಮಾಡತಕ್ಕದ್ದಲ್ಲ. ಕುಚ್ಛಿತವಾದ ಕಾಮವಾಸನೆಯಿಂದ ತಾಯಿಯನ್ನೇ ಎಳೆದುತರುವ ದುಸ್ಸಾಹಸಕ್ಕೆ ಇಳಿಯಬಾರದು. ಈ ಪಾರ್ವತಿಯ ಗಂಡನಾದ ಭವನು ಮೂರುಲೋಕಕ್ಕೆ ಪ್ರಭುವಾಗಿದ್ದಾನೆ. ಅವನನ್ನು ನೀನು ಎಂದಿಗೂ ಗೆಲ್ಲಲಾರೆ. ಅಂದ ಬಳಿಕ ಅವನ ಮಡದಿಯನ್ನು ಬಯಸುವದು ಮಹಾಮೂರ್ಖತನವಲ್ಲವೇ ? ಹಾಗೂ ದೇವಿಯ ಅನುಚರರಾದ ರುದ್ರಗಣಗಳನ್ನು ಗೆಲ್ಲದೇ ನಿನಗೆ ಅವಳ ಬಳಿಹೋಗುವದೇ ಶಕ್ಯವಿಲ್ಲ. ನೀನು ಬಯಸಿದ ಹೆಣ್ಣು ಅತ್ಯಂತ ದುರ್ಲಭವಾಗಿದೆ. ಘೋರ್ಗರೆವ ಭೀಕರಸಾಗರವನ್ನು ಬರಿದೋಳಿನಿಂದ ಈಸಿ ದಾಟಬಹುದು. ಮುಗಿಲಿನಲ್ಲಿಯ ಸೂರ್ಯನನ್ನೂ ನೆಲಕ್ಕೆ ಕೆಡವಬಹುದು. ಮೇರು ಮಂದರಗಿರಿಗಳನ್ನೂ ಕಿತ್ತಿ ಎತ್ತಿ ಇಡಬಹುದು. ಆದರೆ ತ್ರಿಶೂಲ ಹಿಡಿದು ನಿಂತ ಶಂಕರನನ್ನು ಗೆಲ್ಲುವುದು ಮಾತ್ರ ಯಾರಿಂದಲೂ ಶಕ್ಯವಿಲ್ಲ.

ಅವನ ಭಾರ್ಯೆಯಾದ ಭವಾನಿಯನ್ನಂತೂ ಪಡೆಯುವದು ಅತ್ಯಂತ ಅಶಕ್ಯ. ಅಸಂಭಾವಿತ. ನೀನು ಪೂರ್ವಕಾಲದ ಪರಸ್ತ್ರೀಕಾಮುಕನಾದ ದಂಡ ಎಂಬ ಮಹಾರಾಜನ ಕಥೆ ಕೇಳಿಲ್ಲವೇ! ಹಿಂದೆ ಪ್ರಚಂಡ ಸೇನಾಸನ್ನಾಹವುಳ್ಳ ದಂಡ ಎಂಬ ಒಬ್ಬ ಮಹಾರಾಜನಿದ್ದನು. ಅವನು ಅತ್ಯಂತ ತೇಜಸ್ವಿಯಾದ ಶುಕ್ರಾಚಾರ್ಯರನ್ನು ತನ್ನ ಪುರೋಹಿತರನ್ನಾಗಿ ಮಾಡಿಕೊಂಡು ಅನೇಕ ಯಜ್ಞಯಾಗಾದಿಗಳನ್ನು ಮಾಡಿದನು. ಆ ಶುಕ್ರಾಚಾರ್ಯರಿಗೆ ಅರಜಾ ಎಂಬ ಹೆಸರಿನ ಪ್ರಾಯದ ಮಗಳಿದ್ದಳು. ಒಂದು ದಿನ ಶುಕ್ರಾಚಾರ್ಯರು ಅಸುರ ರಾಜನಾದ ವೃಷಪರ್ವನ ಮನೆಗೆ ಹೋಗಿದ್ದರು. ಅವನ ವಿಶೇಷವಾದ ಆದರೋಪಚಾರದಿಂದ ಮತ್ತು ಆಗ್ರಹದಿಂದ ಅವನಲ್ಲಿಯೇ ಕೆಲವು ಕಾಲ ಉಳಿದುಕೊಂಡರು.

ಇತ್ತ ಅರಜೆಯು ತಮ್ಮ ಮನೆಯಲ್ಲಿಯೇ ತಂದೆ ಹೇಳಿದಂತೆ ಅಗ್ನಿಯ ಉಪಾಸನೆಯನ್ನು ಮಾಡುತ್ತ ವಾಸವಾಗಿದ್ದಳು. ಆಗ ಒಂದು ದಿನ ದಂಡ ಮಹಾರಾಜನು ಗುರುಗಳ ಮನೆಗೆ ಬಂದು ''ಶುಕ್ರಾಚಾರ್ಯರು ಎಲ್ಲಿ ಇದ್ದಾರೆ ?'' ಎಂದು ಕೇಳಿದನು. ಅದಕ್ಕಾಗಿ ಮನೆಯ ಪರಿಚಾರಿಕೆಯರು ''ದಾನವರ ದೊರೆಯಾದ ವೃಷಪರ್ವನ ಮನೆಗೆ ಯಜ್ಞ ಮಾಡಿಸಲಿಕ್ಕಾಗಿ ಹೋಗಿದ್ದಾರೆ'' ಎಂದು ತಿಳಿಸಿದರು. ''ಹಾಗಾದರೆ ಗುರುಶುಕ್ರರ ಆಶ್ರಮದಲ್ಲಿ ಈಗ ಯಾರು ಇರುತ್ತಾರೆ'' ಎಂದು ಮರಳಿ ಕೇಳಿದ ಮಹಾರಾಜ. ''ಗುರುಪುತ್ರಿಯಾದ ಅರಜಾ ಈಗ ಅವರ ಆಶ್ರಮದಲ್ಲಿ ಇರುತ್ತಾಳೆ'' ಎಂದು ಉತ್ತರಿಸಿದರು ಅವಳ ಗೆಳತಿಯಾದ ಗುರುಗೃಹದ ಪರಿಚಾರಿಕೆಯರು. ಆ ಆಚಾರ್ಯ ಪುತ್ರಿಯನ್ನು ಕಾಣಬೇಕೆಂಬ ತವಕ ಉಂಟಾಯಿತು. ಆ ದಂಡ ದೊರೆಗೆ. ಅವನು

ನೇರವಾಗಿ ಗುರುಗಳ ಆಶ್ರಮದ ಒಳಗೆ ಪ್ರವೇಶಿಸಿದನು. ಅಲ್ಲಿದ್ದ ಶುಕ್ರಾಚಾರ್ಯರ ಮಗಳನ್ನು ಕಂಡು ಒಮ್ಮೆಲೇ ಮಹಾರಾಜನಿಗೆ ಅವಳ ಮೇಲೆ ಮೋಹ ಉಂಟಾಯಿತು. ಅವನೇನೋ ಸೂರ್ಯವಂಶದ ಇಕ್ಷ್ವಾಕುವಿನ ಮಗ. ಆದರೆ ದುರ್ವಿಧಿ ಅವನನ್ನು ದುರ್ಮಾರ್ಗದ ಎಡೆಗೆ ಎಳೆಯುತ್ತಿತ್ತು. ಕಾಮದಿಂದ ಅವನ ವಿವೇಕದ ಕಣ್ಣು ಕುರುಡಾಯಿತು. ತನ್ನೊಡನೆ ಬಂದ ಸೇವಕರನ್ನೆಲ್ಲ ಮನೆಗೆ ಕಳಿಸಿದನು. ಗೆಳೆಯಂದಿರನ್ನು ಮತ್ತು ಅಣ್ಣ ತಮ್ಮಂದಿರರನ್ನೂ ತಿರುಗಿಹೋಗಲು ಹೇಳಿದನು. ತನ್ನ ರಾಜ ದರ್ಪದಿಂದ ಅಲ್ಲಿಂದ ಶುಕ್ರಾಚಾರ್ಯರ ಶಿಷ್ಯರನ್ನೆಲ್ಲ ಹೊರಡಿಸಿದನು. ತಾನೊಬ್ಬನೇ ಏಕಾಕಿಯಾಗಿ ಒಳಗೆ ಪ್ರವೇಶಿಸಿದನು. ಮನೆಯೊಳಗೆ ಬಂದ ಮಹಾರಾಜನನ್ನು ನೋಡಿ ವಿವೇಕಿನಿಯಾದ ಆ ಗುರು ಪುತ್ರಿಯು ಎದ್ದು ನಿಂತಳು. ಸಂತಸದಿಂದ ಸ್ವಾಗತ ನೀಡಿದಳು. ಸೋದರ ಭಾವದಿಂದ ಆದರ ಮಾಡಿದಳು. ಅತಿಥಿ ಎಂಬ ದೃಷ್ಟಿಯಿಂದ ಪೂಜಿಸಿದಳು.

ಆದರೆ ಮಹಾರಾಜನಿಗೆ ಕಾಮಬಾಧೆ ವಿಪರೀತವಾಯಿತು. ಅವನು ನೇರವಾಗಿ ಆ ಅರಜೆಯನ್ನು ಕೇಳಿಯೇ ಬಿಟ್ಟ. ''ಬಾಲೆಯೇ, ಕಾಮನು ನನ್ನನ್ನು ಬೆಂಕಿಯಾಗಿ ಬೇಯಿಸುತ್ತಿದ್ದಾನೆ. ನಿನ್ನ ಚಾರು ಚೆಲುವಿಕೆಗೆ ನಾನು ಮಾರುಹೋಗಿದ್ದೇನೆ. ನನ್ನ ಈ ಕಾಮದ ಉರಿಯನ್ನು ನಿನ್ನ ಆಲಿಂಗದ ತಣ್ಣೀರಿನಿಂದ ಶಾಂತಗೊಳಿಸು. ನಿನ್ನ ಸಹವಾಸದಿಂದ ಸಂತಪ್ತವಾದ ನನ್ನ ಮನಸ್ಸನ್ನು ಆಲ್ಹಾದಗೊಳಿಸು.'' ಎಷ್ಟಾದರೂ ಆ ಶುಕ್ರಾಚಾರ್ಯರ ಮಗಳು ಸುಸಂಸ್ಕೃತ ಕನ್ಯೆಯಾಗಿದ್ದಳು. ವಿನಯ ಪೂರ್ವಕವಾದರೂ ಖಚಿತವಾದ ದನಿಯಲ್ಲಿ ಅವಳು ಮಹಾರಾಜನಿಗೆ ಹೇಳಿದಳು.

''ಮೂಢನಾದ ಮಹಾರಾಜನೇ, ನಿನ್ನ ಬುದ್ಧಿಗೆ ಮಂಕುಕವಿದಿದೆ. ನಿನಗೆ ನಮ್ಮ ತಂದೆಯ ಸ್ವಭಾವವು ಗೊತ್ತಿಲ್ಲವೇ! ಸಿಟ್ಟಿಗೆದ್ದರೆ ಅವನು ದೇವತೆಗಳನ್ನೂ ಸುಟ್ಟು ಬಿಟ್ಟಾನು. ನೀನಾಗಿ ಮನೆಯವರೆಗೆ ಬಂದುದರಿಂದ ನಾನು ನಿನ್ನನ್ನು 'ಅಣ್ಣ' ಎಂಬ ಬುದ್ಧಿಯಿಂದ ಉಪಚರಿಸಿದೆ. ಮೂರ್ಖನೇ, ಈ ನನ್ನ ವಿಶ್ವಾಸಕ್ಕೆ ದ್ರೋಹ ಬಗೆಯಬೇಡ. ನಾನು ನಿನಗೆ ಗುರುಪುತ್ರಿಯಲ್ಲವೇ! ಈ ಧರ್ಮದೃಷ್ಟಿಯಿಂದ ವಿಚಾರ ಮಾಡಿದರೂ ನಾನು ನಿನಗೆ ಸೋದರಿಯಾಗಬೇಕು.'' ಆಗ ಕಾಮಾತುರನಾದ ದಂಡರಾಜನು ''ತರಳೆಯೇ, ನಿನ್ನ ತಂದೆ ಶುಕ್ರಾಚಾರ್ಯರು ನನ್ನನ್ನು ಈ ಸಮಾಚಾರ ತಿಳಿದು ಕಾಲಾಂತರದಲ್ಲಿ ಸುಟ್ಟು ಹಾಕಬಹುದು. ಆದರೆ ನನ್ನ ಕಾಮಾಗ್ನಿಯು ಇಂದೇ ಈಗಲೇ ಸುಡುತ್ತಲಿದೆ. ಏನು ಮಾಡಲಿ!'' ಎಂದು ಕಾಮಕಿಂಕಾರವನ್ನು ತೋರಿದನು.

''ಹಾಗಿದ್ದರೆ ತುಸು ತಾಳು. ಒಂದೆರಡು ಗಂಟೆ ಕಾಯುತ್ತಲಿರು. ಅಷ್ಟರಲ್ಲೇ ತಂದೆ ಬಂದುಬಿಡುವರು. ಅವರನ್ನೇ ನೇರವಾಗಿ ನನ್ನನ್ನು ಕೊಡಬೇಕೆಂದು ಕೇಳು. ನಿನ್ನಂಥ ಮಹಾರಾಜನಿಗೆ ಮಗಳನ್ನು ಕೊಡಲು ನನ್ನ ತಂದೆ ಎಂದೂ ಇಲ್ಲ ಎನ್ನುವದಿಲ್ಲ. ನಿಸ್ಸಂಶಯವಾಗಿ ಅವರು ನನ್ನನ್ನು ನಿನಗೆ ಧಾರೆ ಎರೆದುಕೊಡುವರು'' ಎಂದು ಅರಜೆಯು ಆ ಆತುರನಾದ ಅರಸನಿಗೆ ತಿಳಿಸಿಹೇಳಿದಳು. ಆದರೆ ಕಾಮಾತುರನಾದ ಆ ಮಹಾರಾಜನಿಗೆ ಅಲ್ಲಿಯವರೆಗೆ ತಾಳುವ ಅಥವಾ ಅವಳ ಹಿತನುಡಿಯನ್ನು ಕೇಳುವ ಪರಿಸ್ಥಿತಿಯೇ ಇರಲಿಲ್ಲ. ಅವನು ಆ ಅಬಲೆಯನ್ನು ಅವಸರಪಡಿಸುತ್ತ ''ಕೃಶಾಂಗಿಯೇ, ನಿಮ್ಮ ತಂದೆ

ಬರುವಷ್ಟು ಕಾಲ ನಾನು ಕಾಯಲಾರೆ. ಮೇಲಾಗಿ ಯಜ್ಞ ಮುಗಿಸಿಕೊಂಡು ಬಂದ ನಿಮ್ಮ ತಂದೆ ಕದಾಚಿತ್ ಇದಕ್ಕೆ ಸಮ್ಮತಿಸದೇ ವಿಘ್ನಕಾರಿಯೇ ಆಗಲಿಕ್ಕೂ ಸಾಕು. ಆದುದರಿಂದ ಈಗಲೇ ನೀನು ಈ ಏಕಾಂತದಲ್ಲಿ ನನ್ನನ್ನು ತಣಿಸು, ತೋಷಿಸು.''

ಆಗ ಶುಕ್ರಾಚಾರ್ಯರ ಮಗಳಾದ ಅರಜೆಯು ಆ ದಂಡದೊರೆಗೆ ಸ್ಪಷ್ಟವಾಗಿಯೇ ಹೇಳಿದಳು- ''ಮಹಾರಾಜನೇ, ನಮ್ಮ ತಂದೆಯನ್ನು ಕೇಳದೆ ನನ್ನನ್ನು ನಿಮಗೆ ಒಪ್ಪಿಸಲು ನನಗೆ ಅಧಿಕಾರವೇ ಇಲ್ಲ. ಅಂಗನೆಯರು ಯಾವಾಗಲೂ ಅಸ್ವಂತಂತ್ರರೇ ಸರಿ. ನಮ್ಮ ತಂದೆಯನ್ನು ಕೇಳದೆ ನಾನು ಎಂದಿಗೂ ನಿನಗೆ ನನ್ನನ್ನು ಒಪ್ಪಿಸಲಾರೆ. ನೀನು ಈಗ ಏನಾದರೂ ದುಸ್ಸಾಹಸಕ್ಕೆ ಇಳಿದರೆ ನಿನ್ನ ಬಂಧು ಭೃತ್ಯ ಪರಿವಾರ ಸಹಿತವಾಗಿ ಶುಕ್ರಾಚಾರ್ಯರ ಶಾಪದಿಂದ ನಾಶವಾಗಿ ಹೋಗುವಿ. ಆದುದರಿಂದ ನನ್ನ ತಂಟೆಗೆ ಬಾರದೇ ತಿರುಗಿಹೋಗು.''

ಹೀಗೆ ವಿನಯದಿಂದ ವಿವೇಕವನ್ನು ಹೇಳುವ ಆ ವಿಪ್ರಕುಮಾರಿಯನ್ನು ಚತುರೋಕ್ತಿ ಯಿಂದಲೇ ವಶಪಡಿಸಿಕೊಳ್ಳಬೇಕೆಂಬ ಹಂಬಲದಿಂದ ಮಹಾರಾಜನು ಅವಳಿಗೆ ಒಂದು ದೃಷ್ಟಾಂತವನ್ನು ಹೇಳಿದನು - ''ಹಿಂದೆ ಕೃತಯುಗದಲ್ಲಿ ವಿಶ್ವಕರ್ಮನಿಗೆ ಚಿತ್ರಾಂಗದಾ ಎಂಬ ಒಬ್ಬ ಮಗಳಿದ್ದಳು. ಹರೆಯದ ಸಿರಿ ರೂಪಸಿರಿ ಎರಡೂ ಅವಳಲ್ಲಿ ಕೂಡಿದ್ದವು. ಅರಳಿದ ಕಮಲದ ಬಳ್ಳಿಯಂತೆ ತಾರುಣ್ಯದಿಂದ ಲಾವಣ್ಯವು ಅವಳಲ್ಲಿ ವಿಕಾಸಗೊಂಡಿತು.

ಒಂದು ದಿನ ಗೆಳತಿಯರಿಂದ ಕೂಡಿಕೊಂಡು ಸ್ನಾನಮಾಡಬೇಕೆಂದು ನೈಮಿಷಾರಣ್ಯದ ತೀರ್ಥಕ್ಕೆ ಹೋದಳು. ಆ ಕಮಲಗಣ್ಣಿನ ಹೆಣ್ಣು ಸ್ನಾನ ಮಾಡಲಿಕ್ಕಾಗಿ ನೀರಿಗೆ ಇಳಿಯುವಷ್ಟರಲ್ಲಿ ಸುರಥ ಎಂಬ ಮಹಾರಾಜನು ಅಲ್ಲಿಗೆ ಬಂದನು. ತಿಳಿನೀರಿ ನಲ್ಲಿ ಮೈತೊಳೆಯುವ ಆ ತರಳೆಯ ದೇಹ ಸೌಂದರ್ಯವನ್ನು ಕಂಡು ಆ ರಾಜಕುಮಾರನ ಮನಸ್ಸು ಮುಗ್ಧವಾಯಿತು. ಕಣ್ಣಿನಂಚಿನಲ್ಲಿ ಕಾಮವಾಸನೆಯನ್ನು ತುಳುಕಿಸುತ್ತ ಅವನು ನದಿಯಲ್ಲಿ ಮೀಯುತ್ತಿದ್ದ ಆ ಹರೆಯದ ಹುಡುಗಿಯನ್ನು ಎವ್ವೆ ಪಿಳುಕಿಸದೆ ನೋಡುತ್ತ ನಿಂತುಕೊಂಡನು. ರಾಜಕುಮಾರನ ಎತ್ತರ ನಿಲುವು ಸ್ಪೃಹಣೀಯ ಚೆಲುವು, ರಾಜ ಗಾಂಭೀರ್ಯ, ಧೀರ ನೋಟಗಳನ್ನು ತನ್ನ ಕಡೆ ನೋಟ, ಕುಡಿನೋಟಗಳಿಂದ ವೀಕ್ಷಿಸಿದ ಆ ರಾಜಕುಮಾರಿಗೂ ಅವನ ಮೇಲೆ ಮನಸ್ಸಾಯಿತು. ಅವಳು ತನ್ನ ಸುತ್ತಲೂ ಇರುವ ಗೆಳತಿಯರಿಗೆ ''ಸಖಿಯರೇ, ಈ ರಾಜಕುಮಾರನು ನನ್ನನ್ನು ನೋಡಿ ಕಾಮಾತುರ ನಾಗಿದ್ದಾನೆ. ಹೇಗೂ ಇವನು ಅರಸುಮಗ. ಮೇಲೆ ಸ್ಫುರದ್ರೂಪಿ. ತಾನಾಗಿ ಬೇಡಿ ಬಯಸಿ ಬಂದಿದ್ದಾನೆ. ಆದುದರಿಂದ ಇವನಿಗೆ ನನ್ನನ್ನು ಒಲವಿನಿಂದ ಒಪ್ಪಿಸಿ ಬಿಡುತ್ತೇನೆ'' ಎಂದು ದಿಟ್ಟತನದಿಂದ ನುಡಿದಳು. ಆಗ ಅವಳ ಗೆಳತಿಯರು ''ಮನಬಂದವರಿಗೆ ನಿನ್ನನ್ನೇ ಕೊಡುವಷ್ಟು ನೀನು ಪ್ರೌಢಳಾಗಿಲ್ಲ. ಹೆಣ್ಣುಮಕ್ಕಳಿಗೆ ಮನಬಂದವರಿಗೆ ಮೈ ಒಪ್ಪಿಸುವ ಸ್ವಾತಂತ್ರ್ಯವು ಎಂದೂ ಇರುವದಿಲ್ಲ. ನಿಮ್ಮ ತಂದೆ ಬದುಕಿ ಇದ್ದಾನೆ. ಅವನು ಮಹಾ ಧರ್ಮಿಷ್ಠ. ಎಲ್ಲ ಶಾಸ್ತ್ರಗಳಲ್ಲಿಯೂ ಪಂಡಿತ. ಅಂಥ ತಂದೆ ಇರುವಾಗ ಅವರನ್ನು ಕೇಳದೇ ನಿನ್ನನ್ನು ಒಪ್ಪಿಸಲಿಕ್ಕೆ ನಿನಗೆ ಸರ್ವಥಾ ಅಧಿಕಾರ ಇರುವದಿಲ್ಲ. ಅದು ಯೋಗ್ಯವೂ ಅಲ್ಲ'' ಎಂದು ನಿಷೇಧಿಸಿದರು.

ಅವರು ಇಷ್ಟು ಮಾತನಾಡುತ್ತಿರುವಾಗಲೇ ಆ ರಾಜಕುಮಾರನು ಅಲ್ಲಿಗೆ ಬಂದು ಬಿಟ್ಟನು. ಕಾಮನ ಬಾಣದಿಂದ ಪೀಡಿತನಾದ ಅವನೂ ಮುಗುದೆಗೆ ಮುಂದೆ ಬಂದು ನುಡಿದನು - ''ತಾವರೆಗಣ್ಣಿನ ತರಳೆಯೇ, ನೀನು ನನ್ನನ್ನು ನೋಡಿದ ಮಾತ್ರಕ್ಕೆ ಮೋಡಿ ಮಾಡಿರುವಿ. ನಿನ್ನ ದರ್ಶನದಿಂದಲೇ ನನಗೆ ಮೋಹ ಉಂಟಾಗಿದೆ. ನಿನ್ನ ಕುಡಿನೋಟಗಳು ಬಾಣದಂತೆ ನನ್ನನ್ನು ಘಾಸಿಗೊಳಿಸಿವೆ. ನನ್ನನ್ನು ಬಿಗಿದಪ್ಪಿ ಶಯನ ಸುಖವನ್ನು ನೀಡು. ಇಲ್ಲದಿದ್ದರೆ ಸರ್ವಾಂಗ ಸುಂದರಿಯೇ, ಕಾಮನು ನನ್ನನ್ನು ಸುಟ್ಟು ಹಾಕುತ್ತಾನೆ. ನಿನ್ನನ್ನು ನೋಡನೋಡುತ್ತಲೇ ನಾನು ಪ್ರಾಣಬಿಡುತ್ತೇನೆ.''

ಅವನ ಈ ದೀನ ನುಡಿಯನ್ನು ಆ ಬೊಗಸೆಗಣ್ಣಿನ ಬಾಲೆಯು ಗೆಳತಿಯರೆಲ್ಲ ಬೇಡ ಬೇಡವೆಂದು ತಡೆದರೂ ಕೇಳದೆ ತನ್ನನ್ನು ಆ ರಾಜಕುಮಾರನಿಗೆ ಸ್ವಸಂತೋಷ ಪೂರ್ವಕ ಮಾತಿನಿಂದ ನೀಡಿದಳು. ಅದರಿಂದ ಆ ಸುರಥ ದೊರೆಯ ಪ್ರಾಣ ಉಳಿಯಿತು'' ಎಂದು ದಂಡರಾಜನು ಅರಜೆಗೆ ಹಿಂದಿನ ಕಾಲದ ಒಂದು ಕಥೆಯನ್ನು ಹೇಳಿ ಅವಳನ್ನು ಕುರಿತು ಮತ್ತೆ ''ಸುಂದರಿಯೇ, ಅದರಂತೆ ನೀನಾದರೂ ಈಗ ನಿನ್ನನ್ನು ನನಗೆ ಒಪ್ಪಿಸಿ ನನ್ನ ಪ್ರಾಣವನ್ನು ಉಳಿಸು. ಇದರಿಂದ ಇಬ್ಬರಿಗೂ ಸುಖವಾಗುವದು'' ಎಂದು ಹೇಳಿದನು. ದಂಡರಾಜನ ದೃಷ್ಟಾಂತೋದಾಹರಣ ಪೂರ್ವಕವಾದ ಈ ಮಾತುಗಳನ್ನು ವಿವೇಕವತಿಯಾದ ಆ ಅರಜೆಯು ಇಂತು ಸರಿಯಾಗಿ ಅವನಿಗೆ ಉತ್ತರವಿತ್ತಳು. ''ಮಹಾರಾಜ, ರಾಜಕುಮಾರಿಯಾದ ಆ ಚಿತ್ರಾಂಗದೆಯ ಮುಂದಿನ ಕಥೆ ನಿನಗೆ ಗೊತ್ತಿಲ್ಲ ಎಂದು ಕಾಣುತ್ತದೆ. ನಿನಗೆ ಅನುಕೂಲವಾದ ಭಾಗವನ್ನು ಮಾತ್ರ ನೀನು ಈಗ ಹೇಳಿದೆ. ಮುಂದಿನ ವೃತ್ತಾಂತವನ್ನು ನಾನು ಹೇಳುತ್ತೇನೆ ಕೇಳು'' -

''ವಿಶ್ವಕರ್ಮನ ಮಗಳಾದ ಆ ಚಿತ್ರಾಂಗದೆಯು ಹೆಣ್ಣಿಗೆ ಇಲ್ಲದಿರುವ ಸ್ವಾತಂತ್ರವನ್ನು ತಾನೇ ವಹಿಸಿ ಸುರಥರಾಜನಿಗೆ ಆತ್ಮನಿವೇದನೆಯನ್ನು ಮಾಡಿದಳಷ್ಟೇ! ಇದನ್ನು ತಿಳಿದು ತಂದೆ ವಿಶ್ವಕರ್ಮನಿಗೆ ಬಹಳ ಕೋಪ ಬಂದಿತು. ಅವನು ಕ್ರೂರ ಶಾಪವನ್ನು ತನ್ನ ಮಗಳಿಗೆ ಕೊಟ್ಟನು. ''ಮೂಢಳೇ, ನೀನು ನಿನ್ನ ಕನ್ಯಾ ಧರ್ಮವನ್ನು ಬಿಟ್ಟು ಸ್ತ್ರೀ ಸಹಜವಾದ ಚಾಪಲ್ಯದಿಂದ ನಿನ್ನನ್ನು ನೀನೇ ಮನಸ್ಸಿಗೆ ಬಂದ ವರನಿಗೆ ಒಪ್ಪಿಸಿಬಿಟ್ಟೆ. ಇದರಿಂದ ನಿನಗೆ ಮದುವೆಯೇ ಆಗದಂತೆ ಹೋಗಲಿ. ನಿನಗೆ ಗಂಡನ ಸುಖವೂ ಇಲ್ಲದಂತಾಗಲಿ. ಮಕ್ಕಳಭಾಗ್ಯವೂ ಉಳಿದ ಸಂಸಾರದ ಸುಖವೂ ನಿನಗೆ ಎಂದಿಗೂ ದೊರಕದಂತಿರಲಿ.''

ತಂದೆಯು ಹೀಗೆ ಶಾಪಕೊಟ್ಟ ಕೂಡಲೇ ಇನ್ನೂ ರಾಜಕುಮಾರಿಯು ಸಂಗಸುಖ ವನ್ನು ಹೊಂದದ ಆ ಸುರಥ ರಾಜಕುಮಾರನನ್ನು ಸರಸ್ವತಿಯ ನದಿಯು ಪ್ರವಾಹವು ಹದಿಮೂರು ಹರದಾರಿ ದೂರ ಕೊಚ್ಚಿಕೊಂಡು ಹೋಯಿತು. ನೀರಿನ ಪ್ರವಾಹದ ಸೆಳವಿನಿಂದ ರಾಜಕುಮಾರನು ದೂರ ದೂರ ಸೆಳೆದೊಯ್ಯಲ್ಪಟ್ಟಿದ್ದನ್ನು ನೋಡಿ ಚಿತ್ರಾಂಗದೆಗೆ ಅತ್ಯಂತ ದುಃಖವಾಗಿ ಮೂರ್ಛೆಬಂದು ಬಿದ್ದುಬಿಟ್ಟಳು. ಒಮ್ಮೆಲೆ ಕುಳಿತಲ್ಲಿಯೇ ಕುಸಿದುಬಿದ್ದ ಆ ರಾಜಕುಮಾರಿಯನ್ನು ಕಂಡು ಸಖಿಯರೆಲ್ಲರೂ ಶೀತೋಪಚಾರ ಮಾಡಿದರು. ತಲೆಗೆ ತಣ್ಣೀರು ತಟ್ಟಿದರು. ಮೈಗೆ ತಂಗಾಳಿ ಬೀಸಿದರು. ಏನಾದರೂ ರಾಜಕುಮಾರಿಗೆ ಎಚ್ಚರವಾಗಲಿಲ್ಲ. ಆಗ ಅವಳು ಸತ್ತೇಹೋದಳು ಎಂದು

ತಿಳಿದು ಸಖಿಯರೆಲ್ಲರೂ ಗಾಬರಿಗೊಂಡರು. ಅವಳ ಮುಂದಿನ ದೇಹ ಸಂಸ್ಕಾರ ಮಾಡಬೇಕೆಂದು ಕಟ್ಟಿಗೆ ಕುಳ್ಳು ತರಲು ಅವಸರದಿಂದ ಅಡವಿಯ ಒಳಗೆ ಹೋದರು.

ಅವರೆಲ್ಲರೂ ಅತ್ತ ಹೋದ ಬಳಿಕ ನದೀ ನೀರಿನ ಮೇಲೆ ಹಾಯ್ದು ಬಂದ ತಂಪು ಗಾಳಿಗೆ ಅರಿವು ತಿರುಗಿತು. ಎಚ್ಚರವಾಯಿತು. ಸುತ್ತುಮುತ್ತಲೂ ಬೆದರುಗಣ್ಣಿನಿಂದ ಆ ಬಾಲೆ ಸಂಭ್ರಾಂತಳಾಗಿ ನೋಡಿದಳು. ಅಲ್ಲಿ ತನ್ನ ನೆಚ್ಚಿನ ನಲ್ಲನೂ ಇಲ್ಲ, ಮೆಚ್ಚಿನ ಮೈತ್ರಿಣಿಯರೂ ಇಲ್ಲ. ಸರಸ್ವತಿಯ ನದಿಯ ಪ್ರವಾಹವು ಅವಳ ಪ್ರಿಯಕರನನ್ನು ಸೆಳೆದೊಯ್ದು ಮತ್ತೆ ಯಥಾ ಪ್ರಕಾರ ಹರಿಯುತ್ತಲಿತ್ತು. ಅದರಿಂದ ಅವಳಿಗೆ ಜೀವನದಲ್ಲಿಯೇ ನಿರಾಶೆಯಾಯಿತು. ಜುಗುಪ್ಸೆ ಮೂಡಿತು.''ಬದುಕಿಯಾದರೂ ಮಾಡುವದೇನು! ತನ್ನ ಮನದನ್ನನನ್ನು ಎಳೆದೊಯ್ದ ನದಿಯ ಪ್ರವಾಹದಲ್ಲಿಯೇ ತಾನೂ ಹರಿದು ಹೋದರಾಯಿತು'' ಎಂದು ನಿರ್ಧರಿಸಿ ಆ ಸರಸ್ವತಿಯ ಪ್ರವಾಹದಲ್ಲಿ ಹಾರಿಕೊಂಡಳು. ಕೂಡಲೇ ಕಾಂಚನಾಕ್ಷೀ ಎಂಬ ಸರಸ್ವತಿಯ ಕವಲು ನದಿಯ ತೆರೆಗಳು ಆ ತರಳೆಯನ್ನು ತಮ್ಮ ವೀಚಿಮಾಲೆಯ ತೊಟ್ಟಿಲಲ್ಲಿ ತೂಗಾಡಿಸುತ್ತ ದೂರ ಸಾಗಿಸಿದವು. ಕಾಂಚನಾಕ್ಷಿಯ ವೇಗವುಳ್ಳ ನೀರಿನ ಓಘದಿಂದ ತೆರೆಗಳ ಯತಲೆಗುಂಟ ತೇಲಾಡುತ್ತ ಆ ಚಿತ್ರಾಂಗದೆಯ ದೇಹವು ಹೊರಟಿತು. ಕಾಂಚನಾಕ್ಷಿಯ ನದೀಪ್ರವಾಹವು ಅವಳನ್ನು ಸುದೂರದವರೆಗೆ ಸಾಗಿಸಿ ಸರಸ್ವತಿಯ ಗೋಮತಿ ಎಂಬ ಶಾಖಾನದಿಯ ಹೆದ್ದೆರೆಗಳಿಂದ ವಿಜೃಂಭಿಸುವ ಪ್ರವಾಹದಲ್ಲಿ ತಂದುಹಾಕಿತು. ಗೋಮತಿ ನದಿಯಾದರೂ ಈ ಭಗ್ನ ಪ್ರೇಮಿ ಚಿತ್ರಾಂಗದೆಯ ಪಾಡನ್ನು ತಿಳಿದು ತನ್ನ ತರಂಗ ರಂಗದ ಮೇಲೆ ಅವಳನ್ನು ತೇಲಿಸುತ್ತಲೇ ಘೋರಾರಣ್ಯದ ವಿಪಿನ ಗರ್ಭದಲ್ಲಿ ಇರುವ ನಿರ್ಜನ ಏಕಾಂತ ತೀರಕ್ಕೆ ತಂದುಹಾಕಿತು. ಅವಳು ತಲುಪಿದ ಆ ನದೀ ತಟಕಾತೀರದ ಗೊಂಡಾರಣ್ಯದಲ್ಲಿ ಕ್ರೂರ ಹುಲಿ ಗಳೆಷ್ಟೋ! ಘೋರ ಸಿಂಹಗಳೆಷ್ಟೋ! ಹಿರಿಯರನ್ನು ಕೇಳದೇ ತನ್ನಷ್ಟಕ್ಕೆ ತಾನಾಗಿ ತನ್ನ ಮನಸ್ಸಿಗೆ ಬಂದ ಪುರುಷನಿಗೆ ತನ್ನನ್ನು ನೀಡಿದ ಪರಿಣಾಮ ಅವಳಿಗೆ ಏನಾಯಿತು ಗೊತ್ತೇ? ಗಂಡ ನೀರಿನ ಪಾಲಾದ. ಹೆಂಡತಿ ಅಡವಿ ಪಾಲಾದಳು. ಇದನ್ನೆಲ್ಲ ನಾನು ತಿಳಿದಿದ್ದೇನೆ. ದಂಡರಾಜ, ಆದುದರಿಂದ ನಾನು ನಾನಾಗಿ ನನ್ನನ್ನು ನಿನಗೆ ಎಂದೂ ಕೊಡಲಾರೆ. ನಮ್ಮ ಶೀಲ ರಕ್ಷಣೆಯೇ ಸ್ತ್ರೀಯರಿಗೆ ಮುಖ್ಯ. ಅಂಥ ನಾರೀ ಧರ್ಮವನ್ನು ನಿನಗಾಗಿ ನಾನು ಬಿಡಲಾರೆ. ನನ್ನನ್ನೂ ಕೊಡಲಾರೆ.'' ಅರಜೆಯ ಈ ಮಾತನ್ನು ಕೇಳಿ ಇಂದ್ರನಂತೆ ಬಲಿಷ್ಠನಾದ ದಂಡರಾಜನು ಉಪಹಾಸದ ನಗೆಯನ್ನು ನಕ್ಕು ತನ್ನ ಆತ್ಮನಾಶಕ್ಕೇ ಕಾರಣವಾದ ಈ ಮಾತನ್ನು ಆಡಿದನು -

''ತೆಳ್ಳಗಿನ ಹೊಟ್ಟೆಯುಳ್ಳ ಅರಜೆಯೇ, ಕಾಡಿನಲ್ಲಿ ಗೋಮತಿಯ ತೀರಕ್ಕೆ ಬಂದು ಬಿದ್ದ ಚಿತ್ರಾಂಗದೆಯ ಹಾಗೂ ಅವಳ ತಂದೆಯಾದ ವಿಶ್ವಕರ್ಮನ ಮತ್ತು ಅವಳ ಮೆಚ್ಚಿನ ಮನದನ್ನನಾದ ಸುರಥನ ಸ್ಥಿತಿಗಳು ಮುಂದೆ ಏನಾದವು ಎಂಬುದನ್ನು ನಾನು ಹೇಳುತ್ತೇನೆ.'' ಕೇಳು - ಸುರಥರಾಜನು ನದೀಪ್ರವಾಹದಿಂದ ಕೊಚ್ಚಿಕೊಂಡು ಹೋದ ಬಳಿಕ ನದಿಗೆ ಹಾರಿಕೊಂಡ ಚಿತ್ರಾಂಗದೆಯು ಘೋರಾರಣ್ಯದ ನದೀ ತಟಾಕದಲ್ಲಿ ಬಂದು ಬಿದ್ದಳಷ್ಟೇ! ಗಗನ ಸಂಚಾರಿಯಾದ ಓರ್ವ ಯಕ್ಷನು ಮುಗಿಲು ಮಾರ್ಗದಿಂದ ಹೋಗುವಾಗ ದೂರದಿಂದಲೇ ಅವಳನ್ನು ನೋಡಿದನು. ಕೂಡಲೇ ನಭಸ್ಥಳದಿಂದ

ನೇರವಾಗಿ ನೆಲಕ್ಕೆ ಇಳಿದು ಆ ನದೀ ತಟಾಕದಲ್ಲಿ ಅನಾಥಳಾಗಿ ಬಿದ್ದ ಚಿತ್ರಾಂಗದೆಯ ಬಳಿಗೆ ಬಂದನು. ಮಾತನಾಡಲೂ ಶಕ್ತಿ ಇಲ್ಲದೇ ಸೋತು ಸುಣ್ಣಾಗಿ ಆ ತೊರೆಯ ತಡಿಯಲ್ಲಿಯ ಮಳಲುಮಣ್ಣಿನ ಮೇಲೆ ಮೈಚೆಲ್ಲಿ ಮಲಗಿದ ಆ ರಾಜಕುಮಾರಿಗೆ ಮಾತನಾಡುವ ಶಕ್ತಿಯೂ ಇರಲಿಲ್ಲ. ಆಗ ಆ ಯಕ್ಷನು ಅಂತಃಕರಣದಿಂದ ಅವಳ ಹತ್ತಿರ ಬಂದು ಉಪಚರಿಸಿ ಪ್ರಯತ್ನಪೂರ್ವಕವಾಗಿ ಮಾತನಾಡಿಸಿದನು. ಅವಳ ಸಂಗತಿಯನ್ನೆಲ್ಲ ಕೇಳಿ ತಿಳಿದುಕೊಂಡು ಸಂತೈಸುತ್ತ ನುಡಿದನು-

''ಸುಂದರಿ, ನನ್ನ ಜೊತೆಗೆ ಬಾ. ನಿನ್ನನ್ನು ಸುರಥನ ಬಳಿಗೆ ಕಳಿಸುತ್ತೇನೆ. ನೀಲಗಣ್ಣಿನ ನಾರಿಯೇ, ನೀನು ನಿಶ್ಚಿತವಾಗಿಯೂ ನಿನ್ನ ಪತಿಯೊಡನೆ ಬೇಗನೆ ಮಿಲನ ಹೊಂದುವಿ. ಆದುದರಿಂದ ಮೊದಲು ಶ್ರೀಕಂಠೇಶ್ವರನ ದರ್ಶನವನ್ನು ತೆಗೆದುಕೊಳ್ಳುವುದಕ್ಕಾಗಿ ಬೇಗನೇ ಹೊರಡು.'' ಆ ಯಕ್ಷನ ಈ ಮಾತುಗಳನ್ನು ಕೇಳಿ ಚಿತ್ರಾಂಗದೆಗೆ ಭರವಸೆ ಮೂಡಿತು. ಉತ್ಸಾಹವಾಯಿತು. ಆ ಕ್ಷಣದಲ್ಲಿ ನದಿಯ ಉತ್ತರಕ್ಕೆ ಬಲದಂಡೆಯ ಮೇಲಿರುವ ಶ್ರೀಕಂಠೇಶ್ವರ ದೇವಸ್ಥಾನಕ್ಕೆ ಬಂದಳು. ಅಲ್ಲಿ ದೇವರ ದರ್ಶನ ತೆಗೆದುಕೊಂಡು ಮಧ್ಯಾಹ್ನದಲ್ಲಿ ಮತ್ತೊಮ್ಮೆ ಸ್ನಾನ ಮಾಡಲು ಯಮುನಾ ನದಿಗೆ ಹೋದಳು. ನದಿಯ ನೀರಿನಲ್ಲಿ ಖಿನ್ನಳಾಗಿ ತಲೆತಗ್ಗಿಸಿ ತೀರದ ಒಂದು ಬದಿಯಲ್ಲಿ ನಿಂತುಕೊಂಡಳು. ಆಗ ಶ್ರೀಕಂಠೇಶ್ವರನಿಗೆ ಸ್ನಾನಮಾಡಿಸಲು ನೀರನ್ನು ವೈಯ್ಯಲಿಕ್ಕಾಗಿ ಋತಧ್ವಜ ಎಂಬ ಹೆಸರಿನ ಪೂಜಾರಿಯು ಅಲ್ಲಿಗೆ ಬಂದನು. ಪಾಶುಪತ ಸಂಪ್ರದಾಯದ ಆಚಾರ್ಯ ಪುರುಷನಾದ ಆ ತಪೋಧನನು ಸಾಮವೇದದಲ್ಲಿ ಪಂಡಿತನಾಗಿದ್ದನು.

ಸ್ನಾನ ಮಾಡಬೇಕೆಂದು ನೀರಿಗೆ ಇಳಿದ ಆ ಆಚಾರ್ಯನ ದೃಷ್ಟಿಯು ಅಲ್ಲಿಯೇ ಮೈಮುದುಡಿಕೊಂಡು ನಿಂತ ಚಿತ್ರಾಂಗದೆಯ ಕಡೆಗೆ ಹೋಯಿತು. ಕಾಮ ಮೂಲಕನಾಗಿ ದುರ್ದೆಶೆಗೆ ಈಡಾಗಿ ಅಳುಮೋರೆಯಿಂದ ನಿಂತ ಆ ಅಬಲೆಯನ್ನು ನೋಡಿ ಆ ತಪೋಧನನು ''ಯಾರಾಗಿರಬಹುದು ಇವಳು!'' ಎಂದು ಯೋಚಿಸತೊಡಗಿದನು. ಅಷ್ಟರಲ್ಲಿ ಚಿತ್ರಾಂಗದೆಯು ಅವನ ಬಳಿಗೆ ಹೋಗಿ ನಮಸ್ಕರಿಸಿ ಕೈಮುಗಿದುಕೊಂಡು ನಿಂತಳು. ಪಾಶುಪಾತಾಚಾರ್ಯನು ಪ್ರಶ್ನೆ ಮಾಡಿದನು -

''ಮಗಳೇ, ನೀನು ಯಾರು? ದೇವಕನ್ಯೆಯಂತಿರುವ ನೀನು ಯಾರ ಮಗಳು? ಮನುಷ್ಯ ಸಂಚಾರವಿಲ್ಲದೇ ಕ್ರೂರಮೃಗಗಳಿಂದ ತುಂಬಿದ ಈ ಕಾಡಿಗೆ ಏಕೆ ಬಂದಿರುವಿ?'' ಆಗ ಆ ತಳೋದರಿಯು ಆ ಋತುಧ್ವಜ ಆಚಾರ್ಯನಿಗೆ ನಡೆದ ಸಂಗತಿಯನ್ನೆಲ್ಲ ಯಥಾರ್ಥವಾಗಿ ತಿಳಿಸಿಹೇಳಿದಳು. ಅವಳ ಕರುಣ ಕಥೆಯನ್ನು ಕೇಳಿ ಆಚಾರ್ಯನಿಗೆ ಬಹಳ ಕೋಪ ಬಂದಿತು. ಅವಳ ತಂದೆಯಾದ ವಿಶ್ವಕರ್ಮನು ಮಗಳ ವಿಷಯದಲ್ಲಿ ಇಷ್ಟು ನಿಷ್ಕರುಣೆಯಾಗಿ ನಡೆದುಕೊಂಡಿದ್ದು ಅವನಿಗೆ ತೀರ ಕೆಡಕೆನಿಸಿತು. ಆದ್ದರಿಂದ ಅವನು ಕೆರಳಿ ಕೋಪಗೊಂಡು ವಿಶ್ವಕರ್ಮನಿಗೆ ಶಾಪ ಕೊಟ್ಟನು : ''ಹೊಟ್ಟೆಯಲ್ಲಿ ಹುಟ್ಟಿದ ಹೆಣ್ಣುಮಕ್ಕಳನ್ನು ಯಾವನಾದರೂ ಒಬ್ಬ ಪುರುಷನಿಗೆ ಕೊಡಲೇಬೇಕಷ್ಟೇ! ಅಂಥ ವರನು ತಾನಾಗಿ ಬಂದಾಗ ಅವನೊಡನೆ ಮಗಳನ್ನು ಕೂಡಿಸದೆ ತಾವಾಗಿ ಕೂಡಲಿರುವ ಆ ಪತಿಪತ್ನಿಯರನ್ನು ಅಗಲಿಸಿ ಗೋಳಾಡಿಸಿದ್ದರಿಂದ ಪಾಪಿಯಾದ ಆ ವಿಶ್ವಕರ್ಮನು ಕೂಡಲೇ ಕೋತಿಯಾಗಲಿ.''

ಈ ರೀತಿಯಾಗಿ ಚಿತ್ರಾಂಗದೆಯ ತಂದೆಯನ್ನು ಶಪಿಸಿ ಆ ಪೂಜಾರಿಯು ಮತ್ತೆ ಸ್ನಾನಮಾಡಿದನು. ಗುಡಿಗೆ ಬಂದು ದೇವರ ಪೂಜೆಯನ್ನು ವಿಧಿಪೂರ್ವಕವಾಗಿ ನೆರವೇರಿಸಿದನು. ಸಾಯಂಕಾಲ ಸಂಧ್ಯಾವಂದನೆ ದೇವರಪೂಜೆ ಮುಗಿದ ಬಳಿಕ ಅಲ್ಲಿಯೇ ನಿಂತುಕೊಂಡ, ಪತಿಯನ್ನು ಪಡೆಯುವ ಉತ್ಕಂಠೆಯಿಂದ ಅಳುತ್ತಲಿರುವ ಆ ಸುಂದರಿಯನ್ನು ಕರೆದು ಹೇಳಿದನು. ''ಕಲ್ಯಾಣಿಯೇ, ನೀನು ಇಲ್ಲಿಂದ ಸಪ್ತ ಗೋದಾವರೀ ಕ್ಷೇತ್ರಕ್ಕೆ ಹೋಗು. ಅಲ್ಲಿ ಇರುವ ಹಾಟಕೇಶ್ವರ ಎಂಬ ಮಹಾದೇವರ ಸೇವೆಯನ್ನು ಮಾಡು. ನೀನು ಅಲ್ಲಿದ್ದಾಗ ಕಂದರಮಾಲಿ ಎಂಬ ದೈತ್ಯನ ಮಗಳಾದ ವೇದಾವತಿಯೂ ಅಲ್ಲಿಗೆ ಬರುತ್ತಾಳೆ. ಮತ್ತು ಅಂಜನ ಎಂಬ ಇನ್ನೊಬ್ಬ ಯಕ್ಷನ ಮಗಳಾದ ದಮಯಂತಿಯೂ ಪರ್ಜನ್ಯನ ಪುತ್ರಿಯಾದ ದೇವವತಿಯೂ ಅಲ್ಲಿಗೆ ಬರುವರು. ಸಪ್ತ ಗೋದಾವರಿ ತೀರ್ಥದ ಪವಿತ್ರ ನೀರಿನಲ್ಲಿ ಮೇಲೆ ಹೇಳಿದ ಮೂರು ಮಹಿಳೆಯರೂ ಮಿಲಿತರಾದಾಗ ಹಾಟಕೇಶ್ವರನ ಸನ್ನಿಧಾನದಲ್ಲಿ ನೀನು ನಿನ್ನ ಪತಿಯೊಡನೆ ಪುನರ್ಮಿಲನವನ್ನು ಹೊಂದುವಿ.''

ಪಾಶುಪತಾಚಾರ್ಯ ಋತಧ್ವಜಮುನಿಯ ಈ ಮಾತುಗಳನ್ನು ಕೇಳಿ ಚಿತ್ರಾಂಗದೆಯ ಮನಸ್ಸಿನಲ್ಲಿ ಪತಿಯನ್ನು ಕಾಣುವ ತವಕವು ಉತ್ಕಟವಾಯಿತು. ಅವಳು ಅವಸರದಿಂದ ಅಲ್ಲಿಂದ ಹೊರಟು ಸಪ್ತ ಗೋದಾವರೀ ಕ್ಷೇತ್ರಕ್ಕೆ ಬಂದಳು. ಅಲ್ಲಿ ದೇವತಾಗಣ ನಿಯಮಕನಾದ ಮುಕ್ಕಣ್ಣನನ್ನು ಕೇವಲ ಕಂದಮೂಲಫಲಗಳನ್ನು ಮಾತ್ರ ಆರಾಧಿಸತೊಡಗಿದಳು. ತೀರ್ಥದಲ್ಲಿ ಮಿಂದು ಮಡಿಯಿಂದ ಶುಚಿರ್ಭೂತಳಾಗಿ ಹಾಟಕೇಶ್ವರನನ್ನು ಪೂಜಿಸಿ ಧ್ಯಾನ ಮಾಡುತ್ತಿದ್ದಳು. ಇತ್ತ ಮಹಾಜ್ಞಾನಿಯಾದ ಋತಧ್ವಜ ಆಚಾರ್ಯರು ದೀನದಲಿತಳಾದ ಚಿತ್ರಾಂಗದೆಗೆ ಕಲ್ಯಾಣವನ್ನು ಉಂಟು ಮಾಡಬೇಕೆಂದು ಬಯಸಿ ಶ್ರೀಕಂಠೇಶ್ವರನ ಹೆಸರಿನಿಂದ ಒಂದು ಪತ್ರವನ್ನು ಬರೆದುಇಟ್ಟನು.

ನ ಸೋಽಸ್ತಿ ಕಶ್ಚಿತ್ ತ್ರಿದಶೋಽಸುರೋವಾ
ಯಕ್ಷೋಽಥ ಮರ್ತ್ಯೋ ರಜನೀಚರೋ ವಾ
ಇದಂ ಹಿ ದುಃಖಂ ಮೃಗಶಾವನೇತ್ರ್ಯಾಃ
ನಿಮಾರ್ಜಯೇದ್ ಯಃ ಸ್ವ ಪರಾಕ್ರಮೇಣ ॥

''ಈ ಪ್ರಪಂಚದಲ್ಲಿ ತನ್ನ ಪರಾಕ್ರಮದಿಂದ ಈ ಚಿಗರಿಗಂಗಳ ಚೆಲುವೆ ಚಿತ್ರಾಂಗದೆಯ ದುಃಖವನ್ನು ಕಳೆದು ಕಣ್ಣೀರನ್ನು ಒರಿಸುವ ವೀರನು ದೇವತೆಗಳಲ್ಲಾಗಲೀ ದೈತ್ಯರಲ್ಲಾಗಲಿ, ಮನುಷ್ಯರಲ್ಲಾಗಲಿ ಒಬ್ಬನೂ ಇರುವದಿಲ್ಲ.'' ಹೀಗೆ ಬರೆದಿಟ್ಟ ಆ ತಪೋಧನನು ಆ ಪದ್ಯದಿಂದ ದೀನ ದುಃಖಿತರ ಬಗ್ಗೆ ತನಗಿರುವ ದಯೆಯನ್ನು ವ್ಯಕ್ತಪಡಿಸಿ ''ಪುಷ್ಕರ ಕ್ಷೇತ್ರದಲ್ಲಿರುವ ಪರಮಾತ್ಮನನ್ನು ಹಾಗೂ ನಂದೀಶ್ವರನನ್ನು ನೋಡಬೇಕು, ಮುನಿವೃಂದದಿಂದ ಸೇವಿತವಾದ ಪಯೋಷ್ಣೀ ನದಿಯಲ್ಲಿ ಸ್ನಾನಮಾಡಬೇಕು'' ಎಂದು ಆಲೋಚಿಸಿ ತೀರ್ಥಯಾತ್ರೆಗೆ ಹೊರಟನು. ಆದರೆ ದಾರಿಯಲ್ಲೆಲ್ಲ ಅವನಿಗೆ ಈ ಅನಾಥಳಾದ ಬೊಗಸೆಗಣ್ಣಿನ ಬಾಲೆಯದೇ ಚಿಂತೆ. ಚಿತ್ರಾಂಗದೆಯದೇ ಆಲೋಚನೆ.

ವಾಮನ ಮಹಾಪುರಾಣದಲ್ಲಿ ಡಂಡನಿಗೆ ದಂಡನೆ ಎಂಬ ೬೩ನೇಯ ಅಧ್ಯಾಯವು ಮುಗಿದುದು.

—o—

**ಚಿತ್ರಾಂಗದಾಯಾಸ್ತ್ವರಜೇ ಸತ್ಯಾ ಯಥಾಸುಖಮ್ ।**
**ಸ್ಮರಂತ್ಯಾ ಸುರಥಂ ವೀರಂ ಮಹಾನ್ ಕಾಲಃ ಸಮತ್ಯಗಾತ್ ॥**

**ದಂಡ :** ಅರಜೇಯೇ, ಆ ಭೈರವಾಚಾರ್ಯನಾದ ಋತಧ್ವಜನ ಸಲಹೆಯಂತೆ ಚಿತ್ರಾಂಗದೆಯು ಸಪ್ತಗೋದಾವರೀ ಕ್ಷೇತ್ರಕ್ಕೆ ಬಂದು ತನ್ನ ಪತಿ ಸುರಥನನ್ನು ಧ್ಯಾನಿಸುತ್ತ ಸುಖದಿಂದ ಇರುವಾಗ ಎಷ್ಟೋ ಕಾಲವೂ ಕಳೆದುಹೋಯಿತು. ಅವಳ ತಂದೆಯಾದ ವಿಶ್ವಕರ್ಮನು ಋತಧ್ವಜ ಮುನಿಯ ಶಾಪದಿಂದ ಕೂಡಲೇ ಕುಳಿತಲ್ಲಿಯೇ ಕೋತಿಯಾಗಿಬಿಟ್ಟನು. ತಾನು ವಾಸಮಾಡಿದ ಮೇರುಶಿಖರದಿಂದ ವಿಧಿಯ ಸಂಕಲ್ಪದಂತೆ ನೆಲದ ಎದೆಯ ಮೇಲೆ ಬಂದು ಬಿದ್ದನು. ಅವನು ಬಿದ್ದ ಭೂಭಾಗವು ಶಾಲೂಕಿನೀ ನದಿಯ ತೀರದಲ್ಲಿಯ ಒಂದು ಘೋರವಾದ ಗೊಂಡಾರಣ್ಯವಾಗಿದ್ದಿತ್ತು.

ಆ ಶ್ರೇಷ್ಠವಾದ ಬೆಟ್ಟದಲ್ಲಿ ತಿನ್ನಲು ರುಚಿಕರವಾದ ಹಣ್ಣು. ಕುಡಿಯಲು ರುಚಿ ರುಚಿ ನೀರು. ವಿಹರಿಸಲು ಬಳ್ಳಿಗಳಿಂದ ನಿಬಿಡವಾದ ಅನೇಕ ಗಿಡಗಂಟೆಗಳು. ಇಂಥ ರಮ್ಯ ವನದಲ್ಲಿ ಆ ಕಪಿಯು ಕಂದಮೂಲ ಫಲಗಳನ್ನು ತಿನ್ನುತ್ತ ಬಹುಕಾಲಗಳವರೆಗೆ ಸುಖವಾಗಿ ಇದ್ದಿತು. ಒಂದು ದಿನ ದೈತ್ಯಪತಿಯಾದ ಆ ಕಂದರನು ವೇದವತಿ ಎಂಬ ತನ್ನ ಮಗಳನ್ನು ಕರೆದುಕೊಂಡು ಆಕಾಶಮಾರ್ಗವಾಗಿ ಅಲ್ಲಿಗೆ ಬಂದನು.

ತಂದೆಯೊಡನೆ ಬಂದ ದಾನವಕುಮಾರಿಯನ್ನು ನೋಡಿ ಶಾಲೂಕಿನೀ ತೀರದಲ್ಲಿರುವ ಕಪಿಯು ಬಲಾತ್ಕಾರದಿಂದ ಅವಳ ಕೈಯನ್ನು ಹಿಡಿಯಿತು. ಅವಳ ತಂದೆ ಕಂದರ ದೈತ್ಯನಿಗೆ ಅದನ್ನು ಕಂಡು ಬಹಳ ಕೋಪ ಬಂದಿತು. ಕೂಡಲೇ ಖಡ್ಗವನ್ನು ಹಿಡಿದು ಹೊಡೆಯ ಬಂದನು. ಆಗ ಆ ಕಪಿಯು ಆ ಬಾಲೆಯನ್ನು ಎತ್ತಿಕೊಂಡೇ ಹಿಮಾಲಯಕ್ಕೆ ಹಾರಿತು. ಅಲ್ಲಿ ಯಮುನಾನದೀ ದಂಡೆಯ ಮೇಲೆ ಶ್ರೀಕಂಠೇಶ್ವರ ದೇವಸ್ಥಾನದ ಬಳಿಯಲ್ಲಿ ಇರುವ ನಿರ್ಜನವಾದ ಒಂದು ಋಷಿ ಆಶ್ರಮದಲ್ಲಿ ವೇದವತಿಯನ್ನು ತಂದಿರಿಸಿತು. ಕಂದರ ದೈತ್ಯರ ಮಗಳನ್ನು ಓಡಿಸಿಗೊಂಡು ಹೊರಟ ಆ ಕೋತಿಯ ಬೆನ್ನು ಬಿಡದೇ ತಾನೂ ಧಾವಿಸಿ ಬಂದನು. ಆದರೆ ಚತುರ ಕೋತಿಯು ಅಷ್ಟರಲ್ಲಿಯೇ ಗುಹೆಯ ಮರಿಯಲ್ಲಿ ವೇದವತಿಯನ್ನು ಅಡಗಿಸಿಟ್ಟು ತಾನೊಬ್ಬನೇ ಆ ದೈತ್ಯನಿಗೆ ಕಾಣುವಂತೆ ಆಳಕೊಳ್ಳದಲ್ಲಿ ಹರಿಯುವ ಯಮುನೆಯ ಮಡುವಿನಲ್ಲಿ ಹಾರಿಕೊಂಡು ನೀರಿನಲ್ಲಿ ಮುಳುಗಿಬಿಟ್ಟಿತು. ಅದನ್ನು ನೋಡಿ ಕಂದರ ದೈತ್ಯನು ಆ ಕೋತಿಯು ಯಮುನೆಯ ಮಡುವಿನಲ್ಲಿ ಧುಮುಕಿಸುತ್ತ ಹೋಯಿತು. ತನ್ನ ಮಗಳೂ ಅದರೊಡನೆ ನೀರಿನಲ್ಲಿ ಮುಳುಗಿ ಮೃತಳಾದಳು'' ಎಂದು ತಿಳಿದು ನಿರಾಶೆಯಿಂದ ದುಃಖಪಡುತ್ತ ತನ್ನ ಪಾತಾಳಲೋಕಕ್ಕೆ ಹೋದನು. ಇತ್ತ ಯಮುನೆಯಲ್ಲಿ ಹಾರಿಕೊಂಡ ಆ ವಾನರವೂ ಕೂಡ ನದೀ ನೀರಿನ ಪ್ರವಾಹ ವೇಗದಿಂದ ಕೊಚ್ಚಿಕೊಂಡು ಶಿವ ಎಂಬ ದೇಶಕ್ಕೆ ತೇಲಾಡುತ್ತ ಹರಿದು ಬಂದಿತು. ನಿಬಿಡ ಜನದಟ್ಟಣೆಯುಳ್ಳ ಆ ದೇಶಕ್ಕೆ ಬಂದು ಮತ್ತೆ ಮರಳಿ ತಾನೂ ಆ ದೈತ್ಯಸುಂದರಿಯನ್ನು ಇಟ್ಟು ಬಂದ ಕಪಿಲಾವನಕ್ಕೆ ಹೋಗಬೇಕೆಂದು ಇಚ್ಛೆಯಿಂದ ಹೊರಟಿತು. ವೇಗದಿಂದ ಮಹಾತೇಜಸ್ವಿಯಾದ ಆ ಕಪಿಯು ಕಪಿಲವನಕ್ಕೆ ಹೋಗುವಾಗ

ದಾರಿಯಲ್ಲಿ ಅಂಕನ ಎಂಬ ಯಕ್ಷರಾಜನು ಮಗಳೊಂದಿಗೆ ಬರುತ್ತಿರುವುದನ್ನು ಕಂಡಿತು. ಆ ಯಕ್ಷಕುಮಾರಿಯ ಹೆಸರು ದಮಯಂತಿ. ಅವಳನ್ನು ನೋಡಿ ಕಪಿಯು ಇವಳೇ ''ವೇದವತಿ'' ಎಂದು ಭ್ರಮಿಸಿತು.

''ನಾನು ನೀರಿನಲ್ಲಿ ಹಾರಿಕೊಂಡದ್ದು ಇಷ್ಟು ದೂರ ಈಸಿ ಬಂದದ್ದೂ ಎಲ್ಲವೂ ವ್ಯರ್ಥವಾಯಿತು'' ಎಂದು ಮನದಲ್ಲಿಯೇ ಮಿಡುಕುತ್ತ ಆ ದಮಯಂತಿಯನ್ನೇ ಹಿಡಿಯಬೇಕೆಂದು ಓಡಿಬಂದಿತು. ಅದನ್ನು ಕಂಡು ಭಯಭ್ರಾಂತಳಾದ ಆ ದಮಯಂತಿಯು ಅತ್ತಿತ್ತ ಓಡಾಡಿ ಕೊನೆಗೆ ಮುಂದೆ ಹರಿಯುವ ಹಿರಣ್ವತೀ ನದಿಯಲ್ಲಿ ಧುಮುಕಿಬಿಟ್ಟಳು. ಹೀಗೆ ನದಿ ಪಾಲಾದ ಮಗಳು ಅದರ ಆಳವಾದ ನೀರನ ಮಡುವಿನಲ್ಲಿ ಮುಳುಗಿ ಹೋದದ್ದನ್ನು ನೋಡಿ ಅಂಜನ ಯಕ್ಷನಿಗೆ ಬಹಳ ದುಃಖವಾಯಿತು. ಕೊನೆಗೆ ಅವನು ಬಹುಶೋಕ ಮಾಡುತ್ತ ತನ್ನ ನಿವಾಸವಾದ ಅಂಕನ ಪರ್ವತಕ್ಕೆ ಹೊರಟು ಹೋದನು. ಅಲ್ಲಿ ಮೌನವಾಗಿ ತಪಸ್ಸನ್ನು ಮಾಡುತ್ತ ಎಷ್ಟೋ ವರ್ಷಗಳನ್ನು ಕಳೆದನು.

ಇತ್ತ ಹಿರಣ್ವತೀ ನದಿಯಲ್ಲಿ ಬಿದ್ದು ಹರಿದುಹೋದ ಆ ದಮಯಂತಿಯು ಸೆಳವಿನ ಗುಂಟ ತೇಲುತ್ತ ಕೋಸಲ ದೇಶಕ್ಕೆ ಬಂದು ದಂಡೆಗೆ ಹತ್ತಿದಳು. ಅಲ್ಲಿಂದ ಮೇಲೆ ಬಂದು ಮುನ್ನಡೆದಾಗ ಅವಳ ಕಣ್ಣಿಗೆ ಒಂದು ದೊಡ್ಡದಾದ ಆಲದ ಮರವು ಕಂಡಿತು. ಉದ್ದವಾಗಿ ಬಿಳಲು ಆ ಹೆಮ್ಮರವು ಜಟಾಧಾರಿಯಾದ ಈಶ್ವರನಂತೆ ತೋರುತ್ತಿತ್ತು. ಅದರ ದಟ್ಟ ನೆರಳಿನಲ್ಲಿ ಆ ಸುಂದರಿ ಒಂದು ಹಾಸುಗಲ್ಲಿನ ಮೇಲೆ ವಿಶ್ರಮಿಸಿದಳು. ಆಗ ಅವಳಿಗೆ ಒಮ್ಮೆಲೇ ಒಂದು ಧನಿ ಕೇಳಿ ಬಂದಿತು.

**''ನ ಸೋಽಸ್ತಿ ಪುರುಷಃ ಕಶ್ಚಿತ್ ಯಸ್ತಂ ಬ್ರೂಯಾತ್ ತಪೋಧನಂ**
**ಯಥಾ ಸತ ನಯಸ್ತುಭ್ಯಂ ಯದ್ಬದ್ಧೋ ವಟಪಾದಪೇ ॥''**

''ನಾನು ಈ ವಟವೃಕ್ಷದಲ್ಲಿ ಕಟ್ಟಿ ಹಾಕಲ್ಪಟ್ಟಿದ್ದೇನೆ. ನನ್ನ ಈ ಬಂಧನದ ಸಮಾಚಾರವನ್ನು ತಪಸ್ವಿಯಾದ ನನ್ನ ತಂದೆಗೆ ತಿಳಿಸುವ ಪುಣ್ಯಾತ್ಮನು ಯಾರೂ ಇಲ್ಲವೇ!'' ವಿಶಿಷ್ಟವಾದ ಈ ಕೆಲವೇ ಅಕ್ಷರವುಳ್ಳ ಈ ಪದ್ಯವನ್ನು ಒತ್ತಿ ಒತ್ತಿ ಗಟ್ಟಿಸಿ ಗಟ್ಟಿಸಿ ನುಡಿಯುವ ಆ ಅದೃಶವಾಣಿಯನ್ನು ಅಲ್ಲಿಯೇ ಗಿಡದಡಿಯ ನಿಡುಗಲ್ಲಿನ ಮೇಲೆ ವಿಶ್ರಮಿಸಿದ ದಮಯಂತಿಯು ಕೇಳಿ ಬೆರಗುವಡೆದು ಮೇಲೆ ಕೆಳಗೆ ಎಡಕೆ ಬಲಕೆ ಹುಡುಕುಗಣ್ಣಿನಿಂದ ನೋಡಿದಳು. ಆ ಗಿಡದ ತುಟ್ಟ ತುದಿಯಲ್ಲಿ ಐದು ವರ್ಷದ ಒಂದು ಕೂಸನ್ನು ಕೇಶರ ಬಣ್ಣದ ಜಡೆಗಳಿಂದ ಬಿಗಿದು ಕಟ್ಟಲಾಗಿತ್ತು. ಆ ಕೂಸು ''ಅಯ್ಯೋ ನನ್ನ ಈ ಸುದ್ದಿಯನ್ನು ಯಾರಾದರೂ ನಮ್ಮ ಅಪ್ಪನಿಗೆ ತಿಳಿಸಿರಿ'' ಎಂದು ಕರುಣಾಜನಕವಾಗಿ ಕಿರುಚುತ್ತಿತ್ತು. ಅದನ್ನು ನೋಡಿ ದಮಯಂತಿಗೆ ಅತ್ಯಂತ ದುಃಖವಾಗಿ ''ಮಗು, ಯಾವ ಪಾಪಿಯು ನಿನ್ನನ್ನು ಈ ಮರಕ್ಕೆ ಬಲವಾಗಿ ಬಿಗಿದಿದ್ದಾನೆ, ಹೇಳು'' ಎಂದು ಕರುಣೆದುಂಬಿ ಕೇಳಿದಳು. ಅದಕ್ಕೆ ಆ ಮಗು ''ಮಹಾನುಭಾವಳೆ ಒಂದು ದುಷ್ಟ ಕಪಿಯು ಬಂದು ನನ್ನನ್ನು ಜಟಾಪಾಶಗಳಿಂದ ಈ ಹೆಮ್ಮರದ ತುದಿಯಲ್ಲಿ ಬಲವಾಗಿ ಬಿಗಿದುಕಟ್ಟಿದೆ. ನನ್ನ ತಪೋ ಬಲದಿಂದಲೇ ನಾನು ಈಗ ಹೇಗೋ ಜೀವ ಹಿಡಿದು ಬದುಕಿ ಉಳಿದಿದ್ದೇನೆ. ನನ್ನದೊಂದು ಕಥೆಯೇ ಬೇರೆ ಇದೆ.

ಪೂರ್ವಕಾಲದಲ್ಲಿ ಮನುಪುರ ಎಂಬ ಪಟ್ಟಣದಲ್ಲಿ ಮಹಾದೇವನು ಭಕ್ತರ ಅಪೇಕ್ಷೆಯಂತೆ ನೆಲೆಸಿದ್ದನು. ಅವನನ್ನು ಪ್ರತಿದಿನವೂ ಪೂಜಿಸಿ ಆರಾಧಿಸುವ ಋತಧ್ವಜ ಋಷಿಯು ತಪಸ್ಸಿನ ಒಂದು ದೊಡ್ಡ ರಾಶಿಯೇ ಆಗಿದ್ದನು. ಬಹುಕಾಲದವರೆಗೆ ಯೋಗ ಸಮಾಧಿಯಲ್ಲಿಯೇ ಕುಳಿತು ನಿರಂತರ ತಪೋನುಷ್ಠಾನಗೈಯುವ ಆ ಮಹಾತ್ಮನಿಗೆ ಒಬ್ಬ ಮಗನು ಹುಟ್ಟಿದನು. ಹುಟ್ಟಿದಾಗಲೇ ಆ ಕೂಸು ಸರ್ವ ಶಾಸ್ತ್ರಗಳಲ್ಲಿಯೂ ಪಾರಂಗತವಾಗಿದ್ದಿತು. ಎಲ್ಲ ವಿದ್ಯೆಗಳೂ ಕಮಲಕ್ಕೆ ಭೃಂಗಗಳು ಮುತ್ತುವಂತೆ ಅವನ ಮಿದುಳಿಗೆ ಮುಕುರಿದ್ದವು. ಇಂಥ ಅಸಾಧಾರಣ ಯೋಗ್ಯತೆಯುಳ್ಳ ಆ ಬಾಲ ಬೃಹಸ್ಪತಿಯನ್ನು ಕಂಡು ಸಾಷ್ಟಾಂಗ ವಂದಿಸಿದನು ಅವ ತಂದೆ. ತಂದೆಯಿಂದ ವಂದಿತನಾದ ಮಗನೇ ನಾನು. ನನ್ನನ್ನು 'ಸರ್ವಜ್ಞ ಶಿಶು' ಎಂದು ಭಾವಿಸಿ ನಮಿಸಿ ನಿಂತ ಋತಧ್ವಜಮುನಿಯು ನನ್ನನ್ನು ಕುರಿತು ಕೈಮುಗಿದು ಹೇಳಿದನು.

''ಮಂಗಳಪ್ರದನೇ, ನೀನು ಸಾಕ್ಷಾತ್ ಜಾಬಾಲಿ ಮುನಿಯೇ ಆಗಿರುವಿ ಎಂಬುದು ನನಗೆ ತಿಳಿದಿದೆ. ಇನ್ನು ಮುಂದೆ ಐದು ಸಾವಿರ ವರ್ಷ ನೀನು ಬಾಲಕನಾಗಿಯೇ ಇರುವಿ ಮುಂದೆ ಹತ್ತು ಸಾವಿರ ವರ್ಷ ಕುಮಾರನಾಗಿ ಬೆಳೆಯುವಿ. ಅದರ ಅನಂತರ ಇಪ್ಪತ್ತು ಸಾವಿರ ವರುಷ ಯೌವನದಿಂದ ಕಂಗೊಳಿಸುವಿ. ಅನಂತರ ನಾಲ್ವತ್ತು ಸಾವಿರ ವರ್ಷ ಪರಪಕ್ವವಾದ ಜ್ಞಾನದಿಂದ ವೃದ್ಧಾಪ್ಯದಲ್ಲಿ ಒಪ್ಪುವೆ. ಇದು ನಿನ್ನ ಈ ಜನ್ಮದ ಆಯುಷ್ಯ ಪ್ರಮಾಣ. ಈ ಜನ್ಮದಲ್ಲಿ ನಿನಗೆ ಬಗೆ ಬಗೆಯ ದುಃಖದುರಾವಸ್ಥೆಗಳು ಕಾದಿವೆ. ನೀನು ಬಾಲಕನಾಗಿದ್ದಾಗ ಐದುನೂರು ವರ್ಷ ಬಲವಾದ ಬಂಧನದಲ್ಲಿ ಇರಬೇಕಾಗುವುದು. ಕುಮಾರಾವಸ್ಥೆಯಲ್ಲಿ ಒಂದು ಸಾವಿರ ವರ್ಷ ದೈಹಿಕ ತೊಂದರೆಯನ್ನು ಅನುಭವಿಸಬೇಕಾಗುವದು. ಆದರೆ ಯೌವನದಲ್ಲಿ ಮಾತ್ರ ಎರಡು ಸಾವಿರ ವರ್ಷ ಅಖಂಡವಾಗಿ ಎಲ್ಲ ವಿಧವಾದ ಭೋಗ ಭಾಗ್ಯಗಳನ್ನು ಅನುಭವಿಸುವ ಸೌಭಾಗ್ಯವು ನಿನ್ನದಾಗುವದು. ಮುಂದೆ ನಾಲ್ಕು ಸಾವಿರ ವರ್ಷ ಮುಪ್ಪಿನಕಾಲದಲ್ಲಿ ಮಾತ್ರ ನೀನು ಬಹಳ ಕಷ್ಟವನ್ನು ಅನುಭವಿಸಬೇಕಾಗುತ್ತದೆ. ಆ ಕಾಲದಲ್ಲಿ ನೀನು ಕೆಟ್ಟ ಕೂಳನ್ನು ತಿನ್ನಬೇಕಾಗುವದು. ನೆಲದ ಮೇಲೆಯೇ ಮಲಗ ಬೇಕಾಗುವದು. ಇದಲ್ಲದೇ ಇನ್ನೂ ಬಗೆಬಗೆಯ ಬವಣೆಗಳನ್ನು ಭೋಗಿಸ ಬೇಕಾಗುವದು.''

ನನ್ನ ಭಾವೀ ಜೀವನದ ಹಣೆಬರಹವನ್ನೆಲ್ಲ ಭವಿಷ್ಯ ದೃಷ್ಟಿಯಿಂದ ನೋಡಿ ಹೇಳಿದ ನಮ್ಮ ತಂದೆಯ ಆ ಸತ್ಯವಚನವನ್ನು ಕೇಳಿ ನಾನು ಐದು ವರ್ಷದ ಮಗು ಇದ್ದಾಗಲೇ ಮನೆ ಬಿಟ್ಟು ಹೊರಟೆ. ಭೂಮಿಯಲ್ಲಿ ಸಂಚರಿಸುತ್ತ ಹಿರಣ್ವತೀ ನದಿಗೆ ಸ್ನಾನಕ್ಕೆಂದು ಬಂದಾಗ ನನಗೊಂದು ಕೋತಿಯ ಭೇಟಿಯಾಯಿತು. ಅದು ನನ್ನನ್ನು ನೋಡಿ ''ಮೂರ್ಖನೇ, ಆಶ್ರಮದಲ್ಲಿ ನಾನು ಇರಿಸಿದ ವೇದವತಿಯನ್ನು ಕರೆದುಕೊಂಡು ಹೋಗು. ನೀನು ಎಲ್ಲಿಯೋ ಇಟ್ಟಿರುವಿ?'' ಎಂದು ಗದರಿಸಿ ನುಡಿದು ತೇಜಸ್ವಿ ಬಾಲಕ ನಾದ ನನ್ನನ್ನು ಬಲವಾಗಿ ಹಿಡಿದುಕೊಂಡಿತು. ಮತ್ತು ಗಟ್ಟಿಯಾದ ಈ ಗಿಡದ ಹಾಗೂ ನನ್ನದೇ ಬಳ್ಳಿಜಡೆಗಳಿಂದ ಈ ಹೆಮ್ಮರದ ತುದಿಯಲ್ಲಿಯೇ ನನ್ನನ್ನು ಬಿಗಿಯಾಗಿ ಕಟ್ಟಿ ಹಾಕಿತು. ಇಲ್ಲಿ ಗಟ್ಟಿಯಾದ ಲತಾಪಾಶ ಮತ್ತ ನನ್ನ ಜಡೆಗಳಿಂದ ಒಂದು ಕಗ್ಗಂಟಿನ ಜಟಿಲವನ್ನು ನಿರ್ಮಿಸಿ ಆ ದುಷ್ಟ ಕಪಿಯು ಯಾರೂ ತೆಗೆಯದಂತೆ ಬಂಧರಕ್ಷೆಯನ್ನು ಮಾಡಿರುವದು.

ಈ ರಕ್ಷಾಯಂತ್ರವನ್ನು ಎಂಟೂ ದಿಕ್ಕುಗಳಿಂದಲೂ ಒಳಗೆ ಪೋಣಿಸಿ ಹೆಣಿಗೆ ಹಾಕಿ ಬಲವಾಗಿ ಬಿಗಿದದ್ದರಿಂದ ಇದನ್ನು ಮೇಲಿನಿಂದಾಗಲೀ ಕೆಳಗಿನಿಂದಾಗಲಿ ಭೇದಿಸುವದು ಯಾರಿಗೂ ಸಾಧ್ಯವಿಲ್ಲವಾಗಿದೆ. ಇಷ್ಟು ಗಟ್ಟಿಯಾಗಿ ನನ್ನನ್ನು ಈ ಹಿರಿಮರದ ತುಟ್ಟತುದಿಯಲ್ಲಿ ಕಟ್ಟಿಹಾಕಿ ಆ ದುಷ್ಟ ಕೋತಿಯು ಸ್ವಚ್ಛಂದವಾಗಿ ಹಿಮಾಲಯಕ್ಕೆ ಹೊರಟುಹೋಯಿತು. ಇದನ್ನೆಲ್ಲ ನನ್ನ ಇಚ್ಛೆಯಿಂದ ನಾನು ತಿಳಿದು ನಿನಗೆ ಹೇಳಿದ್ದೇನೆ.

ಇನ್ನು ನೀನು ಯಾರು? ತಂದೆಯನ್ನು ತೊರೆದು ಈ ಭೀಕರ ಗೊಂಡಾರಣ್ಯಕ್ಕೆ ಏಕೆ ಬಂದೆ? ಇಂಥ ಚೆಲುವೆಯಾದ ನಿನಗೆ ತಾಯಿ ತಂದೆ ಮುಂತಾದವರ ವಿಯೋಗವಾಗಲು ಕಾರಣವೇನು? ಇದನ್ನೆಲ್ಲ ಹೇಳು.'' ವೃಕ್ಷಾಗ್ರದಲ್ಲಿ ಪಾಶಬದ್ಧನಾದ ಆ ಬಾಲಯೋಗಿಯ ಮಾತುಗಳನ್ನು ಕೇಳಿ ದಮಯಂತಿಯು ತನ್ನ ಕತೆಯನ್ನು ಹೇಳತೊಡಗಿದಳು -

''ಅಂಜನ ಎಂಬ ಹೆಸರಿನ ಯಕ್ಷ ಒಡೆಯನೇ ನನ್ನ ತಂದೆ. ಪ್ರಮ್ಲೋಚೆ ಎಂಬ ಅಪ್ಸರೆಯು ನನ್ನ ತಾಯಿ, ನನ್ನ ಹೆಸರು ದಮಯಂತಿ. ನಾನು ಚಿಕ್ಕವಳಿರುವಾಗ ನಮ್ಮ ತಂದೆಯು ಮುದ್ಗಲ ಋಷಿಗೆ ನನ್ನ ಜಾತಕವನ್ನು ತೋರಿಸಿ ಮಗಳ ಭವಿಷ್ಯವನ್ನು ಕೇಳಿದನು. ಆಗ ಆ ಮುನಿಯು ನನ್ನ ಜಾತಕ ನೋಡಿ ''ಇವಳು ಸಮ್ರಾಟನ ಮಹಿಷಿ ಆಗುತ್ತಾಳೆ. ಈ ಕನ್ಯೆಯು ಪಟ್ಟದರಸಿಯಾಗುವಲ್ಲಿ ಸಂದೇಹವೇ ಇಲ್ಲ'' ಎಂದು ಹೇಳಿದನು. ಮುದ್ಗಲ ಮುನಿಯು ಈ ಭವಿಷ್ಯವಚನವನ್ನು ನುಡಿದ ಕೂಡಲೇ ಆಕಾಶದಲ್ಲಿ ದುಂದುಭಿಗಳು ಮೊಳಗಿದವು. ಭೂಮಿಯಲ್ಲಿ ನರಿಗಳು ಅಮಂಗಳ ದನಿಯಲ್ಲಿ ಕೂಗಿದವು. ಆ ಶಕುನ ಸೂಚನೆಯನ್ನು ನೋಡಿ ಆ ಮುದ್ಗಲ ಮುನಿಯು ಮತ್ತೆ ''ಇದರಲ್ಲಿ ಏನೂ ಸಂಶಯವಿಲ್ಲ. ಇವಳು ಮಹಾರಾಣಿಯಾಗುವದು ನಿಶ್ಚಿತ. ಆದರೆ ಕನ್ಯಾವಸ್ಥೆಯಲ್ಲಿ ಮಾತ್ರ ಬಹಳ ಸಂಕಟಕ್ಕೆ ಗುರಿಯಾಗಿ ಇವಳ ಜೀವನವೇ ಸಾವು ಬದುಕುಗಳ ಸಂಶಯದ ಜೋಕಾಲಿಯಲ್ಲಿ ಜೀಕಾಡುವ ಪ್ರಸಂಗವು ಬರುವದು.''

ನಮ್ಮ ತಂದೆಯ ಎದುರು ನನ್ನ ಬಾಳಿನ ಬಗ್ಗೆ ಕಣಿ ಹೇಳಿದಂತೆ ಮಾತನಾಡಿ ಆ ಮುದ್ಗಲ ಮುನಿಯು ಅಲ್ಲಿಂದ ಹೊರಟುಹೋದನು. ಅನಂತರ ನಮ್ಮ ತಂದೆಯು ನನ್ನನ್ನು ಕರೆದುಕೊಂಡು ಈ ಹಿರಣ್ವತೀ ತೀರ್ಥಕ್ಕೆ ಬರಬೇಕೆಂದು ಹೊರಟನು. ಈ ಹಿರಣ್ವತೀ ನದಿಯ ತೀರಕ್ಕೆ ನಾವಿಬ್ಬರೂ ಬಂದ ಕೂಡಲೇ ಈ ಕಪಿಯು ನೋಡಿ ಒಮ್ಮೆಲೇ ನನ್ನನ್ನು ಹಿಡಿಯಬೇಕೆಂದು ಹಾರಿಬಂದಿತು. ಆಗ ಗಾಬರಿಯಾಗಿ ಭ್ರಾಂತಳಾದ ನಾನು ಸಮುದ್ರಕ್ಕೆ ಹೋಗಿ ಕೂಡುವ ಮಹಾನದಿ ಎನಿಸಿದ ಈ ಹಿರಣ್ವತಿಯ ಪ್ರವಾಹದಲ್ಲಿ ಹೋಗಿಬಿದ್ದೆನು. ಅನಂತರ ಇದರ ನೀರಿನ ಪ್ರವಾಹದ ಗುಂಟ ತೇಲುತ್ತ ಮನುಷ್ಯ ಸಂಚಾರ ಶೂನ್ಯವಾದ ಈ ಗಹನ ಅರಣ್ಯ ಪ್ರಾಂತಕ್ಕೆ ಬಂದೆನು.'' ದಮಯಂತಿಯು ತನ್ನ ಆತ್ಮಕತೆಯನ್ನು ಕೇಳಿ ಮರದ ಬಂಧನದಲ್ಲಿ ಬಿಗಿದ ಬಾಲತಪಸ್ವಿ ಜಾಬಾಲಿಯು ಅವಳಿಗೆ ಇಂತು ನುಡಿದನು - ''ಸುಂದರೀ, ನೀನು ಈಗ ಯಮುನಾನದೀ ದಂಡೆಯ ಮೇಲಿರುವ ಶ್ರೀಕಂಠೇಶ್ವರ ಕ್ಷೇತ್ರಕ್ಕೆ ಹೋಗು. ಅಲ್ಲಿ ಮಧ್ಯಾಹ್ನ ವೇಳೆಗೆ ಸರಿಯಾಗಿ ನಮ್ಮ ತಂದೆಯು ಶಿವಪೂಜೆಗಾಗಿ ತಪ್ಪದೇ ಬರುತ್ತಾನೆ. ಅವನ ಮುಂದೆ ನನ್ನ ಈ ಬಂಧನ ಸಮಾಚಾರನ್ನೆಲ್ಲ ಕಥಿಸು. ಅದರಿಂದ ನಿನಗೆ ಮುಂದೆ ಕಲ್ಯಾಣವಾಗುವದು, ಬೇಗ ಇಲ್ಲಿಂದ ಹೊರಡು.''

ಇದನ್ನು ಕೇಳಿ ದಮಯಂತಿಯು ಅಲ್ಲಿಂದ ಹೊರಟಳು. ತನ್ನ ಮತ್ತು ಜಾಬಾಲಿ ಮುನಿಯ ರಕ್ಷಣೆಯು ಹೇಗಾದೀತು ? ಎಂಬ ತವಕದಿಂದ ಅವಳ ನಡಿಗೆ ಚುರುಕಾಗಿತ್ತು. ವೇಗ ಗಮನದಿಂದ ಅವಳು ದೂರದ ದಾರಿಯನ್ನು ದಾಟಿ ಹಿಮಾಲಯದಲ್ಲಿ ಹರಿಯುವ ಯಮುನೆಯ ದಂಡೆಯ ಮೇಲಿದ್ದ ಶ್ರೀಕಂಠೇಶ್ವರ ದೇವಾಲಯಕ್ಕೆ ಮಧ್ಯಾಹ್ನ ಪೂಜೆ ಸಮಯಕ್ಕೆ ಸರಿಯಾಗಿ ಬಂದು ತಲುಪಿದಳು. ದಾರಿಯಲ್ಲಿ ಬರುವಾಗ ಅವಳು ಬರೀ ಗೆಡ್ಡೆ ಗೆಣಸುಗಳನ್ನು ತಿಂದು ಹೇಗೋ ಏಳುತ್ತ ಬೀಳುತ್ತ ಆ ಶಿವಮಂದಿರವನ್ನು ಅಂತು ಇಂತು ಬಂದು ಮುಟ್ಟಿದಳು. ಅಲ್ಲಿಗೆ ಬಂದು ದೇವೇಶನಾದ ಶ್ರೀಕಂಠಸ್ವಾಮಿಯ ದರ್ಶನ ತೆಗೆದುಕೊಂಡು ಕೈಮುಗಿದು ದೇವರ ಬಳಿ ನಿಂತುಕೊಂಡಾಗ ಅವಳ ಕಣ್ಣಿಗೆ ಅಲ್ಲಿ ಬರೆದಿಟ್ಟ ಒಂದು ಶ್ಲೋಕವು ಕಾಣಿಸಿತು -

ನ ಸೋಽಸ್ತಿ ಕಶ್ಚಿತ್ತ್ರಿದಶೋಽಸುರೋ ವಾ
ಯಕ್ಷೋಽಥ ಮರ್ತ್ಯೋ ರಜನೀಚರೋ ವಾ॥
ಇದಂ ಚ ದುಃಖಂ ಮೃಗಶಾವ ನೇತ್ರ್ಯಾ
ನಿಮಾರ್ಜಯೇದ್ಯಃ ಸ್ವಪರಾಕ್ರಮೇಣ.

ಈ ಹೆಣ್ಣುಮಗಳ ದುಃಖವನ್ನು ತನ್ನ ಪರಾಕ್ರಮದಿಂದ ಪರಿಹರಿಸಬಲ್ಲ ಸಮರ್ಥನು ದೇವತೆಗಳಲ್ಲಿ ದೈತ್ಯರಲ್ಲಿ, ಯಕ್ಷರಲ್ಲಿ ಮಾನವರಲ್ಲಿ ದಾನವರಲ್ಲಿ ಯಾವನೂ ಇರುವುದಿಲ್ಲವೆ! ಈ ಶ್ಲೋಕಾಕ್ಷರಗಳನ್ನು ಕಂಡಕೂಡಲೇ ದಮಯಂತಿಗೆ ಚೆನ್ನಾಗಿ ಅದರ ಅರ್ಥ ವಾಯಿತು. ಕೂಡಲೇ ಅವಳು ಜಾಬಾಲಿಯು ತನಗೆ ಹೇಳಿದ ತನ್ನ ವಿಷಯದಲ್ಲಿದ್ದ ಒಂದು ಶ್ಲೋಕವನ್ನು ಬರೆದಿರಿಸಿದಳು.

''ಮುದ್ಗತೇನಾಸ್ಮಿ ಗದಿತಾ ರಾಜಪತ್ನೀ ಭವಿಷ್ಯಸಿ
ಸಾ ಚಾವಸ್ಥಾಮಿಮಾಂ ಪ್ರಾಪ್ತಾ ಕಶ್ಚಿನ್ಮಾಂ ತ್ರಾತುಮೀಶ್ವರಃ ॥

ಇವಳು ಮಹಾರಾಣಿಯಾಗುವಳೆಂದು ಮುದ್ಗಲ ಋಷಿಯು ನನ್ನ ವಿಷಯದಲ್ಲಿ ಭವಿಷ್ಯವನ್ನು ನುಡಿದಿದ್ದಾನೆ. ನಾನಂತೂ ಈಗ ದುರವಸ್ಥೆಗೆ ಈಡಾಗಿದ್ದೇನೆ. ಯಾವನಾದರೂ ಸಮರ್ಥ ಮನುಷ್ಯನು ಬಂದು ರಕ್ಷಿಸಿರಿ. ಹೀಗೆ ಅಲ್ಲಿಯೇ ಇರುವ ಅದೇ ಶಿಲಾಫಲಕದ ಮೇಲೆ ಬರೆದಿಟ್ಟು ದಮಯಂತಿಯು ಯಮುನಾನದಿಗೆ ಸ್ನಾನಕ್ಕೆ ಹೋದಳು. ಆ ನದಿಯ ದಂಡೆಯ ಮೇಲೆಯೇ ಒಂದು ಆಶ್ರಮವಿದ್ದಿತು. ಅದರ ಸುತ್ತಲೂ ಇರುವ ತಪೋವನದಲ್ಲಿ ಮದತುಂಬಿದ ಕೋಗಿಲೆಗಳು ಕುಕಿಲುತ್ತಿದ್ದವು. 'ಜಾಬಾಲಿಯ ತಂದೆಯಾದ ಋತಧ್ವಜ ಮಹರ್ಷಿಯು ಇಲ್ಲಿಯೇ ಇರಬಹುದು' ಎಂದು ಅವಳು ಆ ಆಶ್ರಮದ ಒಳಗೆ ಹೋದಳು. ಅಲ್ಲಿ ಋಷಿಯ ಬದಲಾಗಿ ಮೋರೆ ಒಣಗಿಸಿ ಕುಳಿತ ವೇದವತಿಯನ್ನು ಕಂಡಳು. ಬಾಡಿದ ಬಳ್ಳಿಯಂತಿದ್ದ ಅವಳ ಕಣ್ಣು ಒಳನಟ್ಟಿದ್ದವು. ನಾಲಿಗೆ ಒಣಗಿತ್ತು. ದುಃಖಾರ್ತಳಾದ ಅವಳ ಪರಿಸ್ಥಿತಿಯು ಅತ್ಯಂತ ದಯನೀಯವಾಗಿತ್ತು. ಆ ಗುಹಾ ವಾಸಿನಿಯಾದ ವೇದವತಿಯು ಹೊರಗಿನಿಂದ ಒಮ್ಮೆಲೇ ನುಗ್ಗಿ ಬಂದ ಯಕ್ಷಪುತ್ರಿ ದಮಯಂತಿಯನ್ನು ಕಂಡು ''ಇವಳು ಯಾರಾಗಿರಬಹುದು?'' ಎಂದು ಯೋಚಿಸುತ್ತ ಎದ್ದು ನಿಂತಳು. ಇವಳು ಅವಳನ್ನು ನೋಡಿದಳು. ಅವಳು

ಇವಳನ್ನು ನೋಡಿದಳು. ಹೀಗೆ ಮೊದಲು ನೋಟದ ವಿನಿಮಯವಾದ ಬಳಿಕ ಮರುಚಣದಲ್ಲಿ ಇಬ್ಬರೂ ಒಬ್ಬರ ನ್ನೊಬ್ಬರು ಬಾಹುಗಳಿಂದ ಬಂಧಿಸಿ ಬಿಗಿದಪ್ಪಿದರು. ಹೀಗೆ ಗಾಢಾಲಿಂಗನವನ್ನು ಸ್ನೇಹ ದಿಂದ ತೆಗೆದುಕೊಂಡ ಬಳಿಕ ಇಬ್ಬರೂ ಪರಸ್ಪರ ಪರಿಚಯ ಪರಿಸ್ಥಿತಿಗಳನ್ನು ಕೇಳಿ ತಿಳಿದುಕೊಂಡರು. ಹೀಗೆ ಒಬ್ಬರಿಗೊಬ್ಬರ ಸ್ಥಿತಿಗತಿಗಳನ್ನು ಹೇಳಿಕೇಳಿ ಇಬ್ಬರೂ ತಿಳಿದು ಕೊಂಡ ಬಳಿಕ ಆ ಇಬ್ಬರೂ ಲಲನಾಮಣಿಗಳು ಬಗೆಬಗೆಯ ಸುದ್ದಿ ಸಮಾಚಾರ, ಕಥೆ, ವ್ಯಥೆ, ಹೇಳುತ್ತ ಹರಟೆಹೊಡೆಯುತ್ತ ಕುಳಿತುಕೊಂಡರು. ಅಷ್ಟರಲ್ಲಿ ಋತಧ್ವಜ ಮುನಿಯು ಶ್ರೀಕಂಠೇಶ್ವರನನ್ನು ಪೂಜಿಸಲಿಕ್ಕಾಗಿ ಬಂದನು. ದೇವರ ಗದ್ದುಗೆಯ ಕೆಳಗೆ ಕರಿಕಲ್ಲಿನ ಹಲಗೆಯ ಮೇಲೆ ದಮಯಂತಿಯು ಕೊರೆದಿಟ್ಟ ಪದ್ಯವು ಅವನ ಕಣ್ಣಿಗೆ ಬಿದ್ದಿತು.

''ಮುದ್ಗಲೇನಾಸ್ಮಿ ಗದಿತಾ ರಾಜಪತ್ನೀ ಭವಿಷ್ಯಸಿ
ಸಾ ಚಾವಸ್ಥಾಮಿಮಾಂ ಪ್ರಾಪ್ತಾ ಕಚ್ಚಿನ್ಮಾಂ ತ್ರಾತುಮೀಶ್ವರಃ ॥

ತಾಪಸೋತ್ತಮನಾದ ಋತಧ್ವಜಮುನಿಯು ಈ ಪದ್ಯವನ್ನು ಪೂರ್ತಿ ಚೆನ್ನಾಗಿ ಓದಿದನು. ಕೂಡಲೇ ಅದರ ಭಾವಾರ್ಥ ಅವನ ಮನಸ್ಸಿನಲ್ಲಿ ಮೂಡಿತು. ಒಂದು ಕ್ಷಣ ಅವನು ಕಣ್ಣುಮುಚ್ಚಿ ಅದರ ಮೇಲೆ ಆಲೋಚನೆಗೈದನು. ಅವನ ಒಳಗಣ್ಣಿಗೆ ವಿಷಯವೆಲ್ಲವೂ ನಿಚ್ಚಳವಾಗಿ ಕಂಡುಬಂದಿತು. ಅನಂತರ ಅವನ ಅಂದಿನ ಶ್ರೀಕಂಠಸ್ವಾಮಿಯ ಪೂಜೆಯು ಅತಿತ್ವರೆಯಿಂದಲೇ ಪೂರೈಯಿಸಿತು. ಗಡಿಬಿಡಿಯಿಂದ ಪೂಜೆ ಮುಗಿಸಿ ಆ ಋತಧ್ವಜ ಮಹರ್ಷಿಯು ಅಲ್ಲಿಂದ ಹೊರಟು ನೇರವಾಗಿ ಆಯೋಧ್ಯಾ ಪಟ್ಟಣಕ್ಕೆ ಹೋದನು. ಅಲ್ಲಿರುವ ಇಕ್ಷ್ವಾಕು ಮಹಾರಾಜನ ಬಳಿಗೆ ಬಂದು ಆ ರಾಜರ್ಷಿಯನ್ನು ಕುರಿತು ನುಡಿದನು-

''ಮಹಾರಾಜನೆ, ನಿನ್ನಲ್ಲಿ ನನ್ನದೊಂದು ವಿಜ್ಞಾಪನೆ ಇದೆ. ಎಲ್ಲ ವೇದಶಾಸ್ತ್ರಗಳಲ್ಲಿ ಪಾರಂಗತನಾದ ನನ್ನ ಸದ್ಗುಣಿ ಮಗನನ್ನು ನಿನ್ನ ರಾಜ್ಯದ ಗಡಿ ಸೀಮೆಯಲ್ಲಿಯೇ ಒಂದು ಕೋತಿಯು ಕಟ್ಟಿಹಾಕಿದೆ. ಅವನನ್ನು ಆ ಬಂಧನದಿಂದ ಬಿಡಿಸಲಿಕ್ಕೆ ನಿನ್ನ ಮಗನಾದ ಶಕುನಿಯೊಬ್ಬನೇ ಸಮರ್ಥ. ನನ್ನ ಪುತ್ರನ ಬಂಧಮೋಚನೆಯನ್ನು ಬೇರಾರೂ ಮಾಡಲಾರರು. ಅದಕ್ಕಾಗಿ ನಿನ್ನ ಮಗನನ್ನು ಕಳಿಸು.'' ಆಗ ನನ್ನ ತಂದೆಯಾದ ಆ ಇಕ್ಷ್ವಾಕುಮಹಾರಾಜನು ಈ ತಾಪಸೋತ್ತಮನ ಬಿನ್ನಹವನ್ನು ಮನ್ನಿಸಿ ತನ್ನ ಮಗನಾದ ಶಕುನಿಯೆಂಬ ರಾಜಕುಮಾರನನ್ನು ಈ ಕೆಲಸವನ್ನು ಮಾಡಿ ಸಂಬಂಧಿಸಿದವರೆಲ್ಲರಿಗೂ ಶಾಂತಿ ಸಮಾಧಾನವನ್ನು ಉಂಟುಮಾಡಲಿಕ್ಕೆಂದು ಕಳಿಸಿಕೊಟ್ಟನು. ಅನಂತರ ಇಕ್ಷ್ವಾಕುವಿನ ಚಿರಂಜೀವಿಯೂ ನನ್ನ ಶೂರ ಸಹೋದರನೂ ಆದ ಶಕುನಿಯು ಋತಧ್ವಜ ಮಹರ್ಷಿಯೊಂದಿಗೆ ಆ ಅರಣ್ಯಕ್ಕೆ ಬಂದನು. ಅಲ್ಲಿ ತನ್ನ ಕುಡಿಮಿಡಿಗಳಿಂದ ದಿಗಂತರಾಲವನ್ನು ಬೆಳಗುವ ಆ ಎತ್ತರ ವಟ ವೃಕ್ಷದ ತುದಿಯಲ್ಲಿ ಬಳ್ಳಿ ಜಡೆಯ ಪಾಶಗಳಿಂದ ಬಂಧಿಸಲ್ಪಟ್ಟ ಋಷಿಪುತ್ರನನ್ನು ರಾಜಕುಮಾರ ಶಕುನಿಯು ದೂರದಿಂದ ನೋಡಿದನು. ಮುನಿಯ ಜಡೆಯನ್ನೇ ಅವನಿಗೆ ಪಾಶವನ್ನಾಗಿ ಮಾಡಿ ಲತಾಪಾಶಗಳೊಂದಿಗೆ ಹೊಸೆದು ಹುರಿಮಾಡಿ ಅವನನ್ನು ಮರದ ಮೇಲ್ತುದಿಯಲ್ಲಿ ಬಿಗಿಯಲಾಗಿತ್ತು. ರಾಜಕುಮಾರನು ಬಿಲ್ಲನ್ನು ಬಾಗಿ ಹೆದೆ ಏರಿಸಿ ತನ್ನ ಕೈ ಚಳಕದಿಂದ

ಬಾಣಬಿಟ್ಟು ಬಳ್ಳಿ ಬಿಳಲುಗಳ ಪಾಶಗಳನ್ನು ಕತ್ತರಿಸಿದನು. ಐದು ನೂರು ವರ್ಷಗಳ ಹಿಂದೆ ಆ ಕೋತಿಯು ಹಾಕಿದ ಬಂಧನವು ಶತಮಾನಗಳ ಬಿಗುವಿನಿಂದ ಹುರಿಗೊಂಡು ಕಗ್ಗಂಟಾಗಿ ಬಿಡಿಸಲು ಬಾರದಂತಾಗಿತ್ತು. ಆದುದರಿಂದ ರಾಜಕುಮಾರ ಶಕುನಿಯು ತನ್ನ ಬಾಣಗಳಿಂದ ಆ ಋಷಿಯ ಸುತ್ತಲಿನ ಲತಾಪಾಶಗಳನ್ನೆಲ್ಲ ಒಂದೊಂದಾಗಿ ತರಿದು ಹರಿದು ಹಾಕಿದನು. ಅದರಿಂದ ಪಾಶಗಳ ಯಂತ್ರಬಂಧನದ ನಟ್ಟನಡುವೆ ಗಟ್ಟಿಯಾಗಿ ಬದ್ಧನಾದ ಋಷಿಕುಮಾರನು ಎಲ್ಲರ ಕಣ್ಣಿಗೆ ಕಾಣು ವಂತಾಯಿತು. ಆ ಅವಸ್ಥೆಯಲ್ಲಿದ್ದ ಮಗನನ್ನು ಅಂತಃಕರಣ ತುಂಬಿ ಬಂದ ಋತಧ್ವಜ ಮುನಿಯು ಮಗನನ್ನು ನೋಡಿ ಬರಲು ಒಂದು ಗಟ್ಟಿಯಾದ ಬಿಳಲನ್ನೇ ಹಗ್ಗದಂತೆ ಹಿಡಿದುಕೊಂಡು ಮೇಲಕ್ಕೆ ಏರಿದನು. ತಂದೆಯು ಬಂದಿದ್ದರೂ ತಲೆಯನ್ನು ಬಾಗಿಸಿ ನಮಸ್ಕಾರ ಮಾಡಿದನು. ಋತಧ್ವಜನು ಅಲ್ಲಿಯೇ ಬಂಧನದಲ್ಲಿದ್ದ ಮಗನನ್ನು ಬಿಗಿದಪ್ಪಿ ನೆತ್ತಿಯನ್ನು ಮೂಸಿ ನೋಡಿ ಅವನನ್ನು ಆ ಘೋರಪಾಶದಿಂದ ಬಿಡಿಸಲು ತೊಡಗಿದನು. ಆದರೆ ಯಂತ್ರಾಕಾರವಾಗಿ ಜಟಾಪಾಶಗಳನ್ನು ಹಾಸು ಹೊಕ್ಕಾಗಿ ಹೆಣೆದು ಹುರಿಗೊಳಿಸಿದ ಆ ಯಂತ್ರ ಬಂಧನವನ್ನು ಅವನಿಗೆ ಬಿಡಸಲಿಕ್ಕಾಗಲಿಲ್ಲ. ಆಗ ಕೆಳಗೆ ನಿಂತ ಶಕುನಿ ರಾಜಕುಮಾರನು ಕೂಡ ಜಾಬಾಲಿಯನ್ನು ಜಟಾಪಾಶದಿಂದ ಮುಕ್ತನನ್ನಾಗಿ ಮಾಡಲು ತಾನೇ ಬಿಲ್ಲಿನಲ್ಲಿ ಬಾಣವನ್ನು ಹೆದೆ ಏರಿಸಿಕೊಂಡು ಸರ ಸರ ಎಂದು ಆ ಮರ ಏರಿದನು. ಅವನಿಗೂ ಬಲವಾಗಿ ಬಿಗಿದ ಜಟಾಪಾಶಗಳಿಂದ ಆ ಋಷಿಕುಮಾರನ ಬಿಡಿಸಲಿಕ್ಕಾಗಲಿಲ್ಲ. ಆಗ ಆ ರಾಜಕುಮಾರನು ಋತಧ್ವಜ ಋಷಿಯೊಡನೆ ಕೆಳಗೆ ಇಳಿದು ಬಂದನು. ಬಿಲ್ಲಿಗೆ ಬಾಣಹೂಡಿ ಚಪಲತೆಯಿಂದ ಅರ್ಧ ಚಂದ್ರಾಕಾರದ ಬಾಣಗಳನ್ನು ಬಿಟ್ಟು ಶರಗಳಿಂದ ಒಂದು ಮಂಟಪವನ್ನೇ ನಿರ್ಮಿಸಿದನು. ಮತ್ತು ಮುನಿಯನ್ನು ಬಿಗಿದ ಆಲದಗಿಡದ ಟೊಂಗೆಯನ್ನು ಕತ್ತರಿಸಿದನು. ಆ ಟೊಂಗೆಯೊಡನೆ ಬಿಳಲು ಹಾಗೂ ಜಟಾಪಾಶಗಳ ಭಾರವನ್ನು ಹೊತ್ತ ಜಾಬಾಲಿ ತಪೋಧನನು ಆ ಗಿಡವನ್ನು ಬಿಟ್ಟು ಶಕುನಿಯು ನಿರ್ಮಿಸಿದ ಬಾಣಗಳ ಮೆಟ್ಟಿಲು ಮಾರ್ಗದಿಂದ ಕೆಳಗೆ ಇಳಿದು ಬಂದನು. ಹೀಗೆ ಶೂರನಾದ ರಾಜಪುತ್ರನಿಂದ ಕೆಳಗೆ ಇಳಿಸಲ್ಪಟ್ಟು ಭಾರವನ್ನು ತಲೆಯ ಮೇಲೆ ಹೊತ್ತ ಜಾಬಾಲಿಯೊಂದಿಗೆ ಋತಧ್ವಜಮುನಿಯು ಯಮುನಾನದಿಗೆ ಬಂದನು.

ವಾಮನ ಮಹಾಪುರಾಣದಲ್ಲಿ ವೇದವತಿಯ ವ್ಯಥೆ ಎಂಬ ೬೪ನೇಯ ಅಧ್ಯಾಯವು ಮುಗಿದುದು

—o—

**ಏತಸ್ಮಿನ್ನಂತರೇ ಬಾಲೆ ಯಕ್ಷಾಸುರಸುತೇ ಮುನೇ**
**ಸಮಾಗತೇ ಹರಂದೃಷ್ಟಂ ತಂ ಮುನಿಂ ಯೋಗಿನಾಂ ವರಮ್ ॥**

ದಂಡರಾಜನು ಅರಜೆಯ ಮುಂದೆ ಮುಂದಿನ ವೃತ್ತಾಂತವನ್ನು ಹೇಳುತ್ತಾನೆ- ''ಸುಂದರಿಯಾದ ಅರಜೆಯೇ ಇದೇ ವೇಳೆಯಲ್ಲಿ ಯಮುನಾನದಿಯ ದಂಡೆಯ ಮೇಲಿನ ಆಶ್ರಮದಲ್ಲಿ ಮಾತನಾಡುತ್ತ ಕುಳಿತ ದಮಯಂತಿ ಹಾಗೂ ವೇದವತಿಯರು ಶ್ರೀಕಂಠೇಶ್ವರನ ದರ್ಶನಕ್ಕಾಗಿ ಬಂದರು. ಆದರೆ ಅಲ್ಲಿ ಋತಧ್ವಜ ಮುನಿಯು ಇರಲಿಲ್ಲ. ದೇವರ ಪೂಜೆಯಾಗಿ ಎಷ್ಟೋ ಕಾಲವಾಗಿತ್ತು ಶ್ರೀಕಂಠೇಶ್ವರನ ಮೈ ಮೇಲೆ ಏರಿಸಿದ ಹೂಗಳೆಲ್ಲವೂ ಬಾಡಿ ಹೋಗಿದ್ದವು. ದೇವರ ಮೇಲಿನ ನಿರ್ಮಾಲ್ಯವನ್ನು ತೆಗೆಯುವರಿಲ್ಲದೇ ಅಲ್ಲಿಯೇ ಬಿದ್ದಿತ್ತು. ಯಕ್ಷಕುಮಾರಿಯಾದ ದಮಯಂತಿಯೂ ರಾಕ್ಷಸ ಪುತ್ರಿಯಾದ ವೇದವತಿಯೂ ಶ್ರೀಕಂಠೇಶ್ವರನ ಈ ಅವಸ್ಥೆಯನ್ನು ಕಂಡು ತಾವೇ ಸ್ನಾನ ಮಾಡಿ ನೀರು ತಂದು ಅಭಿಷೇಕ ಮಾಡಿದರು. ವಿಧಿಪೂರ್ವಕವಾಗಿ ಪೂಜೆಯನ್ನು ನಡೆಸಿದರು. ಹೀಗೆ ಹಗಲಿರುಳು ಶ್ರೀಕಂಠನ ಸೇವೆಮಾಡುತ್ತ ಅವರು ಅಲ್ಲಿ ಇದ್ದಾಗ ದೇವರ ದರ್ಶನಕ್ಕಾಗಿ ಗಾಲವ ಋಷಿಯು ಅಲ್ಲಿಗೆ ಆಗಮಿಸಿದನು. ಗರ್ಭಗುಡಿಯಲ್ಲಿ ಇಬ್ಬರು ಕನ್ಯೆಯರು. ಮುನಿಗೆ ಆಶ್ಚರ್ಯವಾಯಿತು.

''ಯಾರಾಗಿರಬಹುದು ಈ ಇಬ್ಬರು ಲಲನೆಯರು! ಎಂದು ವಿಚಾರಿಸುತ್ತಲೇ ಅವನು ನದಿಗೆ ಹೋಗಿ ಸ್ನಾನ ಮಾಡಿ ಬಂದನು. ಅನಂತರ ಯಥಾವಿಧಿಯಾಗಿ ಶ್ರೀಕಂಠೇಶ್ವರನ ಪೂಜೆ ಮಾಡಲು ಮೊದಲು ಮಾಡಿದನು. ಇತ್ತ ಇವರು ದೇವರ ಪೂಜೆಯನ್ನು ಪಾರಂಭಿಸಿದ ಕೂಡಲೇ ವೇದವತಿ ಹಾಗೂ ದಮಯಂತಿ ಇಬ್ಬರೂ ಸುಸ್ವರ ಕಂಠದಿಂದ ಹಾಡತೊಡಗಿದರು. ಅವರ ಕಂಠಮಾಧುರಿ ಗಾನವೈಖರಿ ಹಾಗೂ ಸಂಗೀತ ಚಾತುರಿಯನ್ನು ಕಂಡು ಕೇಳಿ ಗಾಲವ ಮುನಿಗೆ ಇವರೀರ್ವರೂ ಗಂಧರ್ವಕನ್ಯೆಯರು ಎಂದೇ ತಿಳುವಳಿಕೆಯಾಯಿತು. ಹಾಗೇ ಅವನು ಶ್ರೀಕಂಠೇಶ್ವರನ ಪೂಜೆಯನ್ನು ವಿಧಿ ಪ್ರಕಾರದಿಂದ ಮಾಡಿ ಪೂರೈಸಿದನು. ಅನಂತರ ತನ್ನ ಜಪಪಾರಾಯಣಾದಿಗಳನ್ನು ಮುಗಿಸಿದನು. ಅವನ ಅಂದಿನ ಆಹ್ನಿಕವೆಲ್ಲ ಮುಗಿದ ಬಳಿಕ ಅವರಿಬ್ಬರೂ ಕನ್ಯೆಯರು ಮುನಿಗೆ ಬಂದು ವಂದಿಸಿದರು.

ತನ್ನ ಪೂಜೆ ಮುಗಿಯುವವರೆಗೆ ಶಂಕರನಿಗೆ ಸಂಗೀತಸೇವೆಯನ್ನು ಸಲ್ಲಿಸಿದ ಆ ಕುಮಾರಿಯರಿಬ್ಬರನ್ನು ಕುರಿತು ಗಾಲವ ಮುನಿ ಕೇಳಿದನು. ''ನೀವು ಯಾರ ಮಕ್ಕಳು? ಭಕ್ತಿಯಿಂದ ಮಹಾದೇವರ ಈ ಮಂದಿರವನ್ನು ಅಲಂಕರಿಸಿದ ನೀವು ಜನ್ಮದಿಂದ ಯಾವ ಕುಲವನ್ನು ಅಲಂಕರಿಸಿರುವಿರಿ?'' ಆಗ ಅವರಿಬ್ಬರು ಯಕ್ಷ ದೈತ್ಯ ಕನ್ಯೆಯರು ಆ ಮುನಿಯೆದುರು ತಮ್ಮ ಕಥೆವ್ಯಥೆಗಳನ್ನೆಲ್ಲ ವಿವರಿಸಿ ಹೇಳಿದರು. ಅವರಿಬ್ಬರ ವೃತ್ತಾಂತವನ್ನೆಲ್ಲ ಕೇಳಿದ ಗಾಲವ ಮುನಿಯು ಅಂದು ರಾತ್ರಿ ಅಲ್ಲಿಯೇ ಉಳಿದುಕೊಂಡನು. ಅವರಿಬ್ಬರೂ ಕನ್ಯೆಯರು ಭಕ್ತಿಯಿಂದ ಆ ಮುನಿಪುಂಗವರನ್ನು ಪೂಜಿಸಿದರು. ಮರುದಿನ ಪಾತಃಕಾಲದಲ್ಲಿ ಆ ಋಷಿಯು ಎದ್ದು ಯಥಾಸಾಂಗವಾಗಿ

ಶ್ರೀಕಂಠೇಶ್ವರನ ಪೂಜೆಯನ್ನು ಮಾಡಿದನು. ಮತ್ತೆ ಪೂಜಾ ಕಾಲದಲ್ಲಿ ಆ ಸುಂದರಿಯರ ಸಂಗೀತಸೇವೆ ಯಥಾ ಪ್ರಕಾರ ನಡೆಯಿತು. ಪೂಜೆ ಎಲ್ಲ ಮುಗಿದ ಬಳಿಕ ಆ ಗಾಲವ ಮುನಿಯು ಆ ಕನ್ನಿಕೆಯರನ್ನು ಕುರಿತು ''ನಾನು ಈಗ ಪುಷ್ಕರಾರಣ್ಯಕ್ಷೇತ್ರಕ್ಕೆ ಹೋಗುತ್ತೇನೆ. ಸಂದರ್ಭ ಬಂದಾಗ ನಿಮ್ಮನ್ನು ಅಲ್ಲಿಗೆ ಕರಿಸಿಕೊಳ್ಳುತ್ತೇನೆ. ಈಗ ನನಗೆ ಹೋಗಲು ಅಪ್ಪಣೆ ಕೊಡಿರಿ'' ಎಂದು ಕೇಳಿದನು.

ಗಾಲವಮುನಿಯ ಈ ಮಾತನ್ನು ಕೇಳಿ ಇಬ್ಬರೂ ಕುಮಾರಿಯರು ಭಕ್ತಿಯಿಂದ ಬಾಗಿ ''ಪೂಜ್ಯರೇ, ತಮ್ಮ ದರ್ಶನವು ಅತ್ಯಂತ ದುರ್ಲಭವಾಗಿದೆ. ಪುಷ್ಕರಾರಣ್ಯಕ್ಕೆ ಇಷ್ಟು ಆದರದಿಂದ ಏಕೆ ಹೊರಟಿದ್ದೀರಿ?'' ಎಂದು ಕೇಳಿದರು. ಇದರಿಂದ ಮಹಾ ತೇಜಸ್ವಿಯಾದ ಗಾಲವ ಮುನಿಗೆ ತುಸು ಗರ್ವ ಬಂದಂತಾಗಿ, ''ಪುಷ್ಕರ ಕ್ಷೇತ್ರದಲ್ಲಿ ಕಾರ್ತಿಕಮಾಸದಲ್ಲಿ ಕೃತ್ತಿಕಾ ನಕ್ಷತ್ರದಿಂದ ಕೂಡಿದ ಪೂರ್ಣಿಮಾ ತಿಥಿಯು ಅತ್ಯಂತ ಪುಣ್ಯದಾಯಕವಾಗಿರುತ್ತದೆ. ಹುಣ್ಣಿಮೆಯ ಹತ್ತಿರದ ಮೂರು ದಿನಗಳಿಗೆ ಅಂತ್ಯಪುಷ್ಕರಣಿ ಎಂದು ಕರೆಯುತ್ತಾರೆ. ಅದಕ್ಕಾಗಿಯೇ ನಾನು ಅಲ್ಲಿಗೆ ಹೊರಟಿದ್ದೇನೆ.'' ಇದನ್ನು ಕೇಳಿ ಆ ಯಕ್ಷ ರಾಕ್ಷಸ ಕನ್ನೆಯರು ''ನೀವು ಎಲ್ಲಿ ಹೋಗುವಿರೋ ನಾವು ಅಲ್ಲಿಗೆ ಬರುತ್ತೇವೆ. ನೀವು ಹೋದ ಬಳಿಕ ನಾವಿಬ್ಬರೇ ಇಲ್ಲಿ ಇರಲಾರೆವು'' ಎಂದು ಹೇಳಿದರು. ಅವರ ಒತ್ತಾಶೆಯನ್ನು ಕಂಡು ಗಾಲವ ಮುನಿಯು ಅವರು ತನ್ನೊಡನೆ ಬರಲು ಅನುಮತಿಸಿದನು. ಅನಂತರ ಮೂವರೂ ಶ್ರೀಕಂಠೇಶ್ವರನಿಗೆ ನಮಸ್ಕಾರ ಮಾಡಿ ಪುಷ್ಕರಾರಣ್ಯಕ್ಕೆ ತೆರಳಿದರು. ಆ ಪುಷ್ಕರಾರಣ್ಯದಲ್ಲಿ ಇವರಲ್ಲದೇ ಇನ್ನೂ ಸಾವಿರಾರು ಋಷಿಗಳು ಸೇರಿದ್ದರು. ರಾಜಮಹಾರಾಜರೂ ಕೂಡಿದ್ದರು. ಎಲ್ಲ ಗ್ರಾಮಪಟ್ಟಣ ಗಳಿಂದಲೂ ಅನೇಕ ಜನರು ಅಲ್ಲಿಗೆ ಬಂದಿದ್ದರು. ಆಗ ಅಲ್ಲಿಗೆ ಬರದೇ ಇದ್ದವರೆಂದರೆ ಋತಧ್ವಜಮುನಿಯು ಒಬ್ಬನು ಮಾತ್ರ.

ಆ ಎಲ್ಲ ರಾಜರೂ ಋಷಿಗಳೂ ಕಾರ್ತೀಕ ಪೌರ್ಣಿಮೆಯ ದಿನ ಸ್ನಾನ ಮಾಡಲಿಕ್ಕೆ ತೀರ್ಥದ ದಂಡೆಗೆ ಬಂದರು. ಗಾಲವ ಮುನಿಯು ಕೂಡ ತನ್ನ ಜೊತೆಗೆ ಬಂದ ಆ ಕುಮಾರಿಯರೊಡನೆ ಪುಷ್ಕರ ಜಲದ ಮಧ್ಯದಲ್ಲಿ ಬಾಣದಾಕಾರದಲ್ಲಿ ಪುಟಿಯುವ ನೀರಿನ ಚಿಲುಮೆ ಇದ್ದಲ್ಲಿ ಸ್ನಾನ ಮಾಡಲಿಕ್ಕಾಗಿ ಬಂದಿಳಿದನು. ಅವನು ನೀರಿನಲ್ಲಿ ಮುಳುಗಿದಾಗ ತರಂಗಾಂತರಂಗದಲ್ಲಿ ಅನೇಕ ಮಚ್ಛ ಕನ್ನಿಯರಿಂದ ಕೂಡಿಕೊಂಡು ಸಂತಸದಿಂದ ಜಲವಿಹಾರ ಮಾಡುವ ದೊಡ್ಡ ಮೀನು ಬಂದದ್ದನ್ನು ಕಂಡನು. ಮತ್ಸ್ಯಕನ್ನೆಯರು ಆ ಮಹಾ ಮೀನದ ಬಳಿಗೆ ಮತ್ತೆ ಮತ್ತೆ ಬಂದು ಅದರ ಮೈಗೆ ಹತ್ತಿ ಮುತ್ತಿ ಪ್ರೀತಿಯಿಂದ ಲಲ್ಲೆಗರೆಯುತ್ತಿದ್ದವು. ಅವರಲ್ಲಿ ಸಂಭಾಷಣೆ ನಡೆದಿತ್ತು. ಗಂಡುಮೀನವು ಆ ಕನ್ಯೆಯರಿಗೆ ಹೇಳಿತು, ''ಇಲ್ಲಿ ಬಹಳ ಜನರು ನೆರೆದಿದ್ದಾರೆ, ನೀವು ನಾಚಿಕೆ ಬಿಟ್ಟು ಇಷ್ಟು ಜನರ ಎದುರೇ ನನ್ನ ಮೇಲೆ ಪ್ರೇಮವೃಷ್ಟಿ ನಡೆಸುವಿರಿ. ಹೀಗೆ ಮಾಡಿದರೆ ಜನರು ಏನಂದಾರು? ನಾನು ಏನಾದರೂ ಘೋರ ಲೋಕಾಪವಾದವನ್ನು ಮಾತ್ರ ಎಂದಿಗೂ ಸಹನ ಮಾಡಲಾರೆ.'' ಗಂಡು ಮೀನದ ಈ ಮಾತನ್ನು ಕೇಳಿ ಮಾನವತಿಯರಾದ ಆ ಮೀನ ಮಾನಿನಿಯರು ಮಾತನಾಡಿದರು - ''ಇಲ್ಲಿಯೇ ಇರುವ ತಪಸ್ವಿಗಳವರನ್ನು ನೀನು ನೋಡಿಲ್ಲವೇ! ಇಬ್ಬರು ಕನ್ಯೆ ಯರನ್ನು ಕಟ್ಟಿಕೊಂಡು ಮನಬಂದಂತೆ ಬೇಕಾದಲ್ಲಿ ಅವನು

ತಿರುಗಾಡುತ್ತಾನೆ. ಧರ್ಮಾತ್ಮನಾದ ಅಂಥ ಮಹಾಮುನಿಯೇ ಜನಾಪವಾದಕ್ಕೆ ಹೆದರದಿದ್ದಾಗ ಜಲಚರ ಪ್ರಾಣಿಗಳಾದ ನಾವು ನೀನು ಲೋಕಾಪವಾದಕ್ಕೆ ಅಷ್ಟೇಕೆ ಹೆದರಬೇಕು?'' ಆಗ ತನ್ನ ಮೀನಾಕ್ಷಿಯರ ಮಾತಿಗೆ ಆ ಮಹಾ ಮೀನವು ನುಡಿಯಿತು -

''ತಪೋಧನರಾದ ಗಾಲವನು ಈಗ ರಾಗಾಂಧನಾಗಿದ್ದಾನೆ. ಪ್ರೇಮಾನುರಾಗದಿಂದ ಅವನ ಕಣ್ಣು ಕುರುಡಾಗಿದೆ. ಈಗ ಅವನಿಗೆ ಯಾರ ಭಯವೂ ಇಲ್ಲ. ಇನಿತೂ ನಾಚಿಕೆ ಇಲ್ಲ. ಅವನು ಪೂರ್ತಿಮೂರ್ಖನಾಗಿದ್ದಾನೆ.'' ಈ ಮೀನದ ಮಾತು ಅಲ್ಲಿಯೇ ಸ್ನಾನ ಮಾಡಲು ನೀರಿನಲ್ಲಿ ಮುಳುಗಿದ ಗಾಲವ ಋಷಿಯ ಕಿವಿಗೆ ಬಿದ್ದವು. ಅದನ್ನು ಕೇಳಿ ಆ ಗಾಲವ ಋಷಿಯು ನಾಚಿಕೆಯಿಂದ ಮೇಲಕ್ಕೆ ಏಳಲೇ ಇಲ್ಲ. ಜಿತೇಂದ್ರಿಯನಾಗಿ ನೀರಿನಲ್ಲೇ ಕುಳಿತುಬಿಟ್ಟನು. ದಂಡೆಯ ಮೇಲೆ ನಿಂತ ಕನ್ನೆಯರಿಬ್ಬರೂ ಋಷಿಯು ಸ್ನಾನಮಾಡಲಿಕ್ಕೆ ನೀರಿನಲ್ಲಿ ಇಳಿದವನು ಪುನಃ ಮೇಲೆ ಏಳದೇ ಇರುವದನ್ನು ನೋಡಿ ದುಃಖಿತರಾದರು. ಅವರು ಎಷ್ಟೋ ಹೊತ್ತಿನವರೆಗೆ ಗಾಲವ ಮುನಿಯ ದಾರಿ ಕಾಯ್ದರು. ಆದರೂ ಮುಳುಗಿದ ಮುನಿ ಮತ್ತೆ ಮೇಲಕ್ಕೆ ಬರಲೇ ಇಲ್ಲ. ಪುಷ್ಕರ ತೀರ್ಥದ ಜಾತ್ರೆ ಎಲ್ಲವೂ ಮುಗಿಯಿತು. ಯಾತ್ರೆಗೆಂದು ಬಂದ ಜನರೆಲ್ಲರೂ ಬಂದ ದಾರಿ ಹಿಡಿದು ತಮ್ಮ ತಮ್ಮ ಸ್ಥಾನಗಳಿಗೆ ತಿರುಗಿ ತೆರಳಿದರು. ಋಷಿಗಳು ರಾಜ-ಮಹಾರಾಜರು ಉಳಿದ ಪ್ರೇಕ್ಷಕರು ಯಾತ್ರೆ ಮುಗಿಸಿಕೊಂಡು ಹೋದಬಳಿಕ ಅಲ್ಲಿ ಯಾರೂ ಉಳಿಯಲಿಲ್ಲ. ಇಷ್ಟಾದರೂ ಗಾಲವನು ನೀರಿನಿಂದ ಮೇಲೆ ಏಳಲಿಲ್ಲ. ಅವನನ್ನು ಬಿಟ್ಟು ಹೋಗಲು ಈ ಕನ್ಯೆಯರ ಕಾಲು ಕೀಳಲಿಲ್ಲ.

ಹೀಗೆ ಎಲ್ಲರೂ ಹೋದ ಬಳಿಕ ಅಲ್ಲಿ ಉಳಿದವರೆಂದರೆ ಇವರಿಬ್ಬರೇ. ಒಬ್ಬಳು ದೈತ್ಯ ಪುತ್ರಿ ಇನ್ನೊಬ್ಬಳು ಯಕ್ಷಪುತ್ರಿ. ಇವರಿಬ್ಬರನ್ನು ಬಿಟ್ಟರೆ ಆ ತೀರ್ಥದ ಆಚೆಯ ಉತ್ತರ ದಂಡೆಯ ಮೇಲೆ ಮೂರನೇಯವಳೊಬ್ಬಳೂ ಉಳಿದಿದ್ದಳು. ಅವಳೇ ವಿಶ್ವಕರ್ಮನ ಮಗಳಾದ ಚಿತ್ರಾಂಗದೆ. ಅವಳೂ ಕೂಡ ಈ ಕನ್ಯೆಯರಂತೆ ಯಾರದೋ ನಿರೀಕ್ಷೆಯಲ್ಲಿ ಕಾಯ್ದು ಕುಳಿತಿದ್ದಳು. ಯಮುನಾ ತೀರದ ಈಚೆಯ ಒಂದು ದಂಡೆಯಲ್ಲಿ ಚಿತ್ರಾಂಗದೆ. ಆಚೆಯ ದಂಡೆಯಲ್ಲಿ ದಮಯಂತಿ. ವೇದವತಿಯರು ನಟ್ಟನೀರಿನ ನಡುವೆ ಜಲಗರ್ಭದಲ್ಲಿ ಗಾಲವ ಮುನಿ. ಇಂಥ ಪರಿಸ್ಥಿತಿಯಲ್ಲಿ ದೇವವತಿ ಎಂಬ ಒಬ್ಬ ಗಂಧರ್ವ ಕನ್ಯೆಯು ಅಲ್ಲಿಗೆ ಬಂದಳು. ಘೃತಾಚೀ ಎಂಬ ಅಪ್ಸರೆಯಲ್ಲಿ ಪರ್ಜನ್ಯನಿಂದ ಜನಿಸಿದ ಗಂಧರ್ವ ಕುವರಿಯು ಆ ಪುಷ್ಕರತೀರ್ಥಕ್ಕೆ ಬಂದು ಅಲ್ಲಿಯ ಮಧ್ಯ ಪುಷ್ಕರಣಿಯಲ್ಲಿ ಸ್ನಾನ ಮಾಡಿ ದಕ್ಷಿಣ ದಂಡೆಗೆ ಬಂದಳು. ಆ ದಂಡೆಯ ಮೇಲೆ ಓರ್ವ ಕನ್ಯೆ ನಿಂತದ್ದು ಅವಳ ಕಣ್ಣಿಗೆ ಕಾಣಿಸಿತು. ಅವಳೇ ಚಿತ್ರಾಂಗದೆ. ಅವಳು ಚಿತ್ರಾಂಗದೆಯ ಬಳಿಗೆ ಬಂದು ಮೃದು ಮಧುಕಂಠದಿಂದ ಮೆಲ್ಲನೆ ಕೇಳಿದಳು -

''ನೀನು ಯಾರು? ಏತಕ್ಕಾಗಿ ಇಲ್ಲಿಗೆ ಬಂದಿರುವೆ? ಜನರೆಲ್ಲರೂ ಹೋದ ಬಳಿಕ ನೀನು ಇಲ್ಲಿಯೇ ನಿಂತ ಕಾರಣವೇನು?'' ಗಂಧರ್ವ ಕನ್ಯೆಯ ಈ ಪ್ರಶ್ನೆಗೆ ಚಿತ್ರಾಂಗದೆ ಉತ್ತರಿಸಿದಳು - ''ಸುಂದರಿ, ನಾನು ದೇವತೆಗಳ ಬಡಿಗನಾದ ವಿಶ್ವಕರ್ಮನ ಮಗಳು. ಚಿತ್ರಾಂಗದೆ ಎಂದು ನನ್ನ ಹೆಸರು ಪ್ರಸಿದ್ಧವಿದೆ. ಒಂದು ದಿನ ನಾನು ನೈಮಿಷಾರಣ್ಯದಲ್ಲಿರುವ ಧರ್ಮಮಾತೆ ಎಂದು ಹೆಸರಾದ ಕಾಂಚನಾಕ್ಷೀ ಎಂಬ

ಸರಸ್ವತಿಯ ಶಾಖಾನದಿಯಲ್ಲಿ ಸ್ನಾನ ಮಾಡಲಿಕ್ಕೆ ಬಂದೆನು. ಅಲ್ಲಿ ನಾನು ಸ್ನಾನಕ್ಕೆ ಇಳಿದಾಗ ಸುರಥ ಎಂಬ ರಾಜಕುಮಾರನು ಬಂದು ನೋಡಿದನು. ನನ್ನ ಸೌಂದರ್ಯದಿಂದ ಮುಗ್ಧನಾಗಿ ವಿದರ್ಭದೇಶದ ರಾಜಕುಮಾರನು ನನ್ನನ್ನು ಬೇಡಿ ಬಯಸಿ ನನಗೇ ಶರಣು ಬಂದನು. ವಾಸ್ತವಿಕವಾಗಿ ನಾನು ದೇವಕನ್ಯೆ. ದೇವತೆಗಳೇ ನನ್ನನ್ನು ವರಿಸಲಿಕ್ಕೆ ಅರ್ಹರು. ಆದರೂ ಕಾಮವಿಕಾರದಿಂದ ಹುಚ್ಚನಂತಾದ ಆ ಪ್ರಣಯಮತ್ತ ಸುರಥನ ದೀನ ಪ್ರಾರ್ಥನೆಯನ್ನು ಕೇಳಿ ಮತ್ತು ಅವನ ರೂಪವನ್ನು ಕಂಡು ನನ್ನ ಮನಸ್ಸು ಕರಗಿತು. ಸಖಿಯರೆಲ್ಲ ಬೇಡ ಎಂದು ನಿಷೇಧಿಸಿದರೂ ಕೇಳದೇ ನನ್ನನ್ನು ಅವನಿಗೆ ಒಪ್ಪಿಸಿಬಿಟ್ಟೆ. ಇದರಿಂದ ನಮ್ಮ ತಂದೆಯು ಕುಪಿತನಾಗಿ ಶಾಪವಿತ್ತನು.

ಅದರಿಂದ ನಾನು ನನ್ನ ಪ್ರಿಯಕರನಿಂದ ಅಗಲುವಂತಾಯಿತು. ಪತಿಯ ವಿಯೋಗ ವ್ಯಥೆಯನ್ನು ತಾಳಲಾರದೆ ಸಾಯಲಿಕ್ಕೆ ಹೊರಟಿದ್ದೆ. ಆದರೆ ಒಬ್ಬ ಯಕ್ಷನು ಬಂದು ನನ್ನನ್ನು ತಡೆದನು. ಅವನ ಮಾತಿನಂತೆ ಶ್ರೀಕಂಠೇಶ್ವರ ದರ್ಶನಕ್ಕಾಗಿ ಇಲ್ಲಿಗೆ ಬಂದಿದ್ದೇನೆ. ಇಲ್ಲಿಯ ಪುಣ್ಯತೀರ್ಥದಲ್ಲಿ ಸ್ನಾನ ಮಾಡಬೇಕೆಂದು ಇಲ್ಲಿ ಯಾತ್ರೆಗಾಗಿ ಬಂದ ಅನೇಕಾನೇಕ ಜನರನ್ನು ನಾನು ನೋಡಿದೆ. ಆದರೆ ಅವರಲ್ಲಿ ನನ್ನ ಮನಸ್ಸಿಗೆ ಆಲ್ಹಾದ ವನ್ನುಂಟು ಮಾಡುವ ನನ್ನ ಪತಿ ಸುರಥನು ಮಾತ್ರ ಎಲ್ಲಿಯೂ ಕಾಣಲಿಲ್ಲ. ಅವನ ದರ್ಶನಕ್ಕಾಗಿ ಕಾತರಿಸಿ ಕಾಯುತ್ತಲಿದ್ದೇನೆ. ಇದು ನನ್ನ ಸಮಾಚಾರವಾಯಿತು. ಎಲೆ ಬಾಲೆಯೇ, ನೀನು ಯಾರು? ಯಾತ್ರೆಯ ಕಾರ್ಯಗಳು ಮುಗಿದ ಬಳಿಕ ಯಾತ್ರಿಕರೆಲ್ಲರೂ ಮನೆಗೆ ತೆರಳಿದ ಮೇಲೆ ನೀನು ಇಲ್ಲಿಗೆ ಬಂದುದೇಕೆ? ಇದೆಲ್ಲವನ್ನು ಹೇಳು.'' ಆಗ ದೇವವತಿ ಎಂಬ ಗಂಧರ್ವ ಕನ್ಯೆಯು ತನ್ನ ವೃತ್ತಾಂತವನ್ನು ಹೇಳತೊಡಗಿದಳು- ''ಚೆಲುವಿ, ಈ ಮಂದ ಭಾಗ್ಯಳಾದ ನಾರಿಯ ವೃತ್ತಾಂತವನ್ನು ನೀನು ಬಯಸಿದ್ದರಿಂದ ಹೇಳುತ್ತೇನೆ. ಕೇಳು. ಇಲ್ಲಿಯ ಜಾತ್ರೆಯೆಲ್ಲ ಮುಗಿದ ಬಳಿಕ ನಾನು ಈ ಪುಷ್ಕರ ಕ್ಷೇತ್ರಕ್ಕೆ ಬಂದ ಕಾರಣವನ್ನು ಹೇಳುತ್ತೇನೆ. ಆಲಿಸು.

ನಾನು ಪರ್ಜನ್ಯನಿಂದ ಘೃತಾಚಿಯಲ್ಲಿ ಜನಿಸಿದ್ದೇನೆ. ನನ್ನ ಹೆಸರು ದೇವವತಿ. ಒಂದು ದಿನ ವನಪ್ರಾಂತದಲ್ಲಿ ಆನಂದದಿಂದ ಆಟವಾಡುವಾಗ ಆಕಸ್ಮಿಕವಾಗಿ ಒಂದು ಕಪಿಯ ಕಣ್ಣಿಗೆ ಬಿದ್ದೆನು. ನನ್ನನ್ನು ನೋಡಿದ ಕೂಡಲೇ ಆ ಮಂಗವು ಓಡಿಬಂದು ''ಎಲೈ ವೇದವತಿ, ಎಲ್ಲಿಗೆ ಹೋಗುವಿ? ಭೂಲೋಕದಲ್ಲಿಯ ಒಂದು ಆಶ್ರಮದಲ್ಲಿ ನಾನು ನಿನ್ನನ್ನು ಬಚ್ಚಿಟ್ಟಿದ್ದೆ. ಅಲ್ಲಿಂದ ನಿನ್ನನ್ನು ಈ ಮೇರು ಪರ್ವತಕ್ಕೆ ಕರೆತಂದವರಾರು?'' ಎಂದು ಕೇಳಿತು. ಅದಕ್ಕೆ ನಾನು ''ಕಪೀ, ನಾನು ವೇದವತಿಯಲ್ಲ. ನನ್ನ ಹೆಸರು ದೇವವತಿ. ನಾನಿರುವದು ಈ ಮೇರುಪರ್ವತದಲ್ಲಿಯೇ. ನಾನು ಭೂಲೋಕಕ್ಕೆ ಎಂದೂ ಬಂದೇ ಇಲ್ಲ. ನೀನು ನನ್ನನ್ನು ಬಚ್ಚಿಟ್ಟಿದ್ದೂ ಇಲ್ಲ'' ಎಂದು ಹೇಳಿದೆನು. ಆದರೂ ಆ ದುಷ್ಟಕೋತಿಯು ನನ್ನ ಮಾತನ್ನು ಕೇಳದೆ ನನ್ನ ಮೈಮೇಲೆ ಏರಿ ಬಂದಿತು. ಗಾಬರಿಯಾದ ನಾನು ಪಕ್ಕದಲ್ಲಿಯೇ ಇದ್ದ ಬಂಧು ಜೀವ ಎಂಬ ಮರವನ್ನು ಏರಿದೆನು. ವೃಕ್ಷದ ಎತ್ತರವಾದ ಒಂದು ಟೊಂಗೆಯ ಮೇಲೆ ಹೋಗಿ ಕುಳಿತೆನು. ಅದನ್ನು ನೋಡಿ ಆ ಕಪಿಯೂ ಅದೇ ವೃಕ್ಷ ಶಾಖೆಯ ಮೇಲೆ ಟಣ್ಣನೆ ಹಾರಿ ಬಂದಿತು. ಹೀಗೆ ವೇಗದಿಂದ ಎರಗಿದ ಆ ದೈತ್ಯ ಕಪಿಯ ಪಾದಾಘಾತದಿಂದ ಆ ಮರದ

ಟೊಂಗೆಯು ಒಮ್ಮೆಲೇ ಮುರಿದು ಹೋಯಿತು. ಆದರೂ ಆ ಜೋತಾಡುವ ಭಗ್ನಶಾಖೆಗೆ ನಾನು ಬಲವಾಗಿ ಅಂಟಿಕೊಂಡಿದ್ದೆ. ಅದನ್ನು ನೋಡಿ ಆ ಕೋತಿಯು ನಾನು ಕುಳಿತ ಆ ಮುರಿದ ಟೊಂಗೆ ಸಹಿತ ಮರವನ್ನೇ ಕಿತ್ತಿ ಎತ್ತಿ ಬೀಸುಗೈಯಿಂದ ದೂರ ಸಮುದ್ರದೆಡೆಗೆ ಎಸೆಯಿತು. ನಾನು ನೇತಾಡುವಾ ಮುರಿದ ಟೊಂಗೆ ಸಹಿತ ಗಿಡವು ಕೋತಿಯ ವೇಗದ ಎಸೆತದಿಂದ ದೂರಹಾರಿ ತೂರಿಬಂದು ಸಮುದ್ರದೆಡೆಗೆ ಭರದಿಂದ ನಡೆಯಿತು. ನಾನು ಮೇರು ಶಿಖರದಿಂದ ಎಸೆದ ಆ ವೃಕ್ಷ ಶಾಖೆಯೊಂದಿಗೆ ಸಮುದ್ರದ ಮಾರ್ಗದಲ್ಲಿ ಆಕಾಶದ ಅಂತರಾಳದಲ್ಲಿ ಹಾರಿ ಬರುವಾಗ ಎಲ್ಲ ಚರಾಚರ ಪ್ರಾಣಿಗಳೂ ನನ್ನನ್ನೂ ನೋಡಿ ಹಾಹಾಕಾರಮಾಡಿದರು.

ಸಿದ್ಧಗಂಧರ್ವರು ''ಅಯ್ಯೋ! ಪಾಪ ಮಹಾತ್ಮನಾದ ಇಂದ್ರದ್ಯುಮ್ನನ ಪಟ್ಟದರಸಿಯಾಗಲಿರುವ ಈ ಹುಡುಗಿಯು ವ್ಯರ್ಥವಾಗಿ ಸಮುದ್ರ ಪಾಲಾಗುತ್ತಿರುವಳಲ್ಲ! ಸ್ವಯಂ ಬ್ರಹ್ಮದೇವರೇ ಈ ದೇವವತಿಯು ಸಾವಿರ ಯಜ್ಞ ಮಾಡುವ ಮನುಪುತ್ರ ಇಂದ್ರದ್ಯುಮ್ನನ ಮಹಿಷಿಯಾಗುವಳೆಂದು ಹೇಳಿದ್ದರು. ಅಕಟಕಟ! ಅಂಥವಳಿಗೆ ಇಂಥ ಪರಿಸ್ಥಿತಿ ಬಂದಿತೇ!'' ಎಂದು ಕೂಗಿಕೊಂಡರು. ಸಿದ್ಧಗಂಧರ್ವರ ಈ ಉದ್ಗಾರವನ್ನು ಕೇಳಿದಕೂಡಲೇ ನನಗೆ ಮೂರ್ಛೆ ಬಂದಿತು. ಮುಂದೆ ಯಾರೋ ನಾನು ಅಂಟಿಕೊಂಡ ಆ ಗಿಡವನ್ನು ಹೊಡೆದು ಸಾವಿರ ಭಾಗವಾಗಿ ಸೀಳಿದರು. ಆದರೆ ಅವರು ಯಾರೋ ನನಗೆ ಗೊತ್ತಿಲ್ಲ. ಮುಂದೆ ಒಂದು ಭಯಂಕರ ಬಿರುಗಾಳಿ ಬೀಸಿತು. ಆ ಗಾಳಿಯಿಂದ ನಾನು ಸಮುದ್ರದ ದಿಶೆತಪ್ಪಿ ಇಲ್ಲಿಗೆ ಬೀಸಿ ಒಗೆಯಲ್ಪಟ್ಟೆ. ಇಲ್ಲಿ ಬಂದ ಬಳಿಕ ಈ ತೀರ್ಥದ ತಡಿಯಲ್ಲಿ ನಿನ್ನನ್ನು ನೋಡಿದೆ.

ಇನ್ನು ಏಳು ಅತ್ತ ಹೋಗೋಣ. ಅಕೋ! ಇದೇ ಪುಷ್ಕರ ತೀರ್ಥದ ಆಚೆ ಉತ್ತರ ದಂಡೆಯ ಮೇಲೆ ನಿನ್ನಂತೆ ಇನ್ನೂ ಇಬ್ಬರೂ ಕನ್ಯೆಯರು ನಿಂತಿದ್ದಾರೆ. ಅವರನ್ನು ಮಾತನಾಡಿಸೋಣ ನಡೆ'' ಎಂದಂದು ಇಬ್ಬರೂ ಆ ಕನ್ಯೆಯರ ವೃತ್ತಾಂತವನ್ನು ಕೇಳುವ ಕುತೂಹಲದಿಂದ ಹೊರಟರು. ಅಲ್ಲಿಗೆ ಹೋಗಿ ಅವರಿಬ್ಬರನ್ನೂ ಮಾತನಾಡಿಸಿ ಅವರ ಪರಿಚಯ ಕೇಳಿದರು. ದೈತ್ಯರಾಜ ಕಂದರಮಾಲಿಯು ಹಾಗೂ ಯಕ್ಷರಾಜ ಅಂಜನನ ಮಕ್ಕಳಾದ ವೇದವತಿ ದಮಯಂತಿಯರೂ ತಮ್ಮ ತಮ್ಮ ಸಮಾಚಾರವನ್ನೆಲ್ಲ ತಿಳಿಸಿದರು. ಮತ್ತು ಚಿತ್ರಾಂಗದ ದೇವವತಿಯರೂ ತಮ್ಮ ಕಥೆಯನ್ನು ಅವರಿಗೆ ಹೇಳಿದರು. ಹೀಗೆ ನಾಲ್ವರೂ ಪರಸ್ಪರ ಪರಿಚಯ ಮಾಡಿಕೊಂಡು ಸಪ್ತಗೋದಾವರೀ ತೀರಕ್ಕೆ ಬಂದರು. ಅಲ್ಲಿರುವ ಹಾಟಕೇಶ್ವರನನ್ನು ಪೂಜಿಸುತ್ತ ಅನೇಕ ವರ್ಷಗಳವರೆಗೆ ಅಲ್ಲಿಯೇ ವಾಸ ವಾಗಿದ್ದರು. ಇತ್ತ ಈ ಹೆಣ್ಣುಮಕ್ಕಳನ್ನು ಹುಡುಕುತ್ತ ಇಕ್ಷ್ವಾಕು ರಾಜನಾದ ಶಕುನಿ ಮತ್ತು ಬಾಲತಪಸ್ವಿಯಾದ ಜಾಬಾಲಿ ಭೈರವಾಚಾರ್ಯನಾದ ಋತಧ್ವಜ ಈ ಮೂವರೂ ಅನೇಕ ವರ್ಷಗಳ ಪರ್ಯಂತರ ದೇಶದೇಶ ಅಲೆದಾಡಿದರು. ಜಾಬಾಲಿ ಮುನಿಯನ್ನು ಅವನ ಜಡೆಗಳಿಂದ ಆಲದ ಮರದ ಕೊಂಬೆಗೆ ಕಗ್ಗಂಟು ಹಾಕಿ ರಕ್ಷಾಯಂತ್ರವನ್ನು ಆ ದುಷ್ಟ ಕಪಿಯು ಮಾಡಿ ಹೋಗಿತ್ತಷ್ಟೇ? ಅದನ್ನು ಬಿಡಿಸಲಿಕ್ಕೆ ಯಾರಿಗೂ ಆಗಿದ್ದಿಲ್ಲ. ಆದರೆ ಶಕುನಿ ರಾಜಕುಮಾರನು ಈ ಜಾಬಾಲಿ ಮುನಿಯನ್ನು ಕಟ್ಟಿಹಾಕಿದ ಗಿಡದ ಸುತ್ತುಮುತ್ತಲಿನ ಟೊಂಗೆ ಹಾಗೂ ಲತಾಪಾಶಗಳನ್ನು ಬಾಣದಿಂದ ಕತ್ತರಿಸಿ ಹಾಕಿ ಆ

ಮುನಿಯ ತಲೆಗೆ ಗಂಟುಹಾಕಿದ ಕೊಂಬೆಯನ್ನೂ ಕಡೆದು ಅವನನ್ನು ಮಾತ್ರ ಅಲ್ಲಿಂದ ಬಿಡುಗಡೆ ಮಾಡಿಸಿದ್ದನು. ಇವನ ಜಡೆಗೆ ಗಂಟು ಹಾಕಿದ ಮರದ ಕೊಂಬೆ ಹಾಗೂ ಜಟಾಪಾಶಗಳ ಸಂಯುಕ್ತ ಹೆಣಿಗೆಯ ಕಗ್ಗಂಟು ಮಾತ್ರ ಯಾರಿಗೂ ಬಿಡಿಸಲು ಬಾರದೇ ಆ ಜಾಬಾಲಿಯು ಇದು ತನ್ನ ಪ್ರಾರಬ್ಧ ಎಂದು ಬಗೆದು ಕಗ್ಗಂಟು ಬಿದ್ದ ಆ ಗಿಡದ ಕೊಂಬೆಯ ತುಂಡನ್ನು ತಲೆಯಲ್ಲಿ ಹೊತ್ತುಕೊಂಡೇ ತಿರುಗಾಡಿ ದಣಿದಿದ್ದನು. ಹೀಗೆ ಬಹುಕಾಲ ಕಳೆದ ಬಳಿಕ ತಂದೆಯೊಡನೆ ಶಾಕಲ ದೇಶಕ್ಕೆ ಬಂದನು. ಅಲ್ಲಿ ಮನುವಿನ ಮಗನಾದ ಇಂದ್ರದ್ಯುಮ್ನ ಎಂಬ ದೊರೆಯು ರಾಜ್ಯವಾಳುತ್ತಿದ್ದನು.

ಅವನು ಈ ಮುನಿಪುಂಗವರ ಆಗಮನವನ್ನು ತಿಳಿದು ಅರ್ಘ್ಯ ಪಾದ್ಯಾದಿಗಳಿಂದ ಸ್ವಾಗತಿಸಿ ಭಕ್ತಿಯಿಂದ ಪೂಜಿಸಿದನು. ಅವರೊಂದಿಗೆ ಬಂದ ಶಕುನಿ ರಾಜಕುಮಾರನನ್ನೂ ಗೌರವದಿಂದ ಸತ್ಕರಿಸಿದನು. ಆ ಶಕುನಿ ರಾಜಕುಮಾರನು ಇಂದ್ರದ್ಯುಮ್ನನ ತಮ್ಮನಾದ ಇಕ್ಷ್ವಾಕುವಿನ ಮಗನೇ ಆದುದರಿಂದ ಅವನನ್ನು ಸ್ವಾಗತಿಸಲು ಇಂದ್ರದ್ಯುಮ್ನನಿಗೆ ಬಹಳ ಆನಂದವೆನಿಸಿತು. ಹೀಗೆ ಸ್ವಾಗತ ಸತ್ಕಾರಗಳು ಮುಗಿದ ಬಳಿಕ ಋತಧ್ವಜ ಮುನಿಯು ಇಂದ್ರದ್ಯುಮ್ನನಿಗೆ ''ರಾಜನ್, ನಮ್ಮ ದಮಯಂತಿ ಎಂಬ ಹೆಸರಿನ ನಮ್ಮ ಮಗಳು ಎಲ್ಲಿಯೋ ಕಳೆದು ಹೋಗಿದ್ದಾಳೆ. ಅವಳನ್ನು ಹುಡುಕುವುದಕ್ಕಾಗಿ ನಾವು ಇಡೀ ಭೂಮಂಡಲವನ್ನೆಲ್ಲ ಸುತ್ತಾಡಿದೆವು. ಆದರೆ ಅವಳು ಎಲ್ಲಿಯೂ ನಮಗೆ ದೊರಕಲಿಲ್ಲ. ಅದಕ್ಕಾಗಿ ನಿನ್ನ ಬಳಿ ಬಂದಿದ್ದೇವೆ. ಆದುದರಿಂದ ನೀನು ಈ ಏಳು. ಅವಳನ್ನು ಹುಡುಕಲು ಮಾರ್ಗದರ್ಶನ ಮಾಡು'' ಎಂದು ಹೇಳಿದನು.

ಇದನ್ನು ಕೇಳಿ ಆ ಇಂದ್ರದ್ಯುಮ್ನ ಮಹಾರಾಜನು ''ಪೂಜ್ಯರೇ ನನ್ನದೂ ಒಂದು ಸ್ತ್ರೀರತ್ನವು ಎಲ್ಲಿಯೋ ಕಳೆದುಹೋಗಿದೆ. ಎಷ್ಟು ಶ್ರಮಪಟ್ಟು ಸಂಶೋಧಿಸಿದರೂ ಅವಳು ನನಗೆ ದೊರಕಲಿಲ್ಲ. ನನ್ನ ಈ ದುಃಖವನ್ನು ಯಾರ ಮುಂದೆ ಹೇಳಲಿ? ಹಿಂದೊಮ್ಮೆ ಆಕಾಶಮಾರ್ಗದಿಂದ ಪರ್ವತಾಕಾರವಾಗಿ ಒಂದು ದೊಡ್ಡ ಮರವು ಹಾರಿ ಸಮುದ್ರಾಭಿಮುಖವಾಗಿ ಕೆಳಗೆ ಬೀಳತೊಡಗಿತು. ಆಗ ಸಿದ್ಧರೂ, ಗಂಧರ್ವರೂ ನುಡಿದ ವಚನವನ್ನು ಕೇಳಿ ನಾನು ಬಾಣಬಿಟ್ಟು ಆ ಗಿಡವನ್ನು ಕತ್ತರಿಸಿದೆ. ನನ್ನ ಬಾಣ ವೇಗದಿಂದ ಗಿಡಕೆ ಅಂಟಿಕೊಂಡಿದ್ದ ಓರ್ವ ಕನ್ಯಾಮಣಿಯು ಎಲ್ಲಿಯೋ ಚಿಮ್ಮಿ ದೂರ ಹಾರಿ ಹೋಗಿಬಿದ್ದಳು. ಅವಳು ಎಲ್ಲಿ ಇರುವಳೋ ನನಗೆ ತಿಳಿದಿಲ್ಲ. ಅವಳನ್ನು ಹುಡುಕಲು ನಾನೂ ಈಗ ಹೋಗಬೇಕಾಗಿದೆ'' ಎಂದು ಹೇಳಿ ಆ ಮಹಾರಾಜನೂ ಅವರೊಂದಿಗೆ ಹೊರಟನು. ತನ್ನ ಸೋದರನ ಮಗನಾದ ಶಕುನಿ ರಾಜಕುಮಾರನಿಗೂ ಮತ್ತು ಋತಧ್ವಜಾಚಾರ್ಯ ಹಾಗೂ ಅವನ ಮಗ ಜಾಬಾಲಿ ಇವಬ್ಬರಿಗೂ ಪ್ರತ್ಯೇಕವಾಗಿ ಎರಡು ರಥಗಳನ್ನು ಸಿದ್ಧಪಡಿಸಿದನು. ಹೀಗೆ ನಾಲ್ವರೂ ರಥಗಳನ್ನೂ ಏರಿ ಕುಳಿತುಹೋದ ಕನ್ಯಾರತ್ನಗಳ ಸಂಶೋಧನೆಗೆ ಹೊರಟರು. ಹೀಗೆ ಅವರು ಎಲ್ಲ ಕಡೆಗೂ ಹುಡುಕುತ್ತ, ಹುಡುಕುತ್ತ ಬದರಿಕಾಶ್ರಮಕ್ಕೆ ಬಂದರು. ಅಲ್ಲಿ ಒಬ್ಬ ತಪಸ್ವಿಯು ಚಿಕ್ಕ ವಯಸ್ಸಿನಲ್ಲಿದ್ದರೂ ಘೋರ ತಪಸ್ಸನ್ನು ಕೈಗೊಂಡಿದ್ದನು. ಉಗ್ರವಾದ ತಪೋನುಷ್ಠಾನದಿಂದ ಅವನ ದೇಹವೆಲ್ಲವೂ ಸೊರಗಿ, ಕೊರಗಿ ಕೃಶವಾಗಿತ್ತು. ಕೂದಲುಗಳೆಲ್ಲ ಕಪ್ಪಾಗಿ ಜಡೆಗಟ್ಟಿಹೋಗಿದ್ದವು.

ಸೊರಗಿ ಸೋತು ಹೋದ ಅವನಿಗೆ ಉಸಿರಾಡಲು ಆಯಾಸವಾಗುತ್ತಿತ್ತು. ಅವನ ಬಳಿಗೆ ಬಂದು ಇಂದ್ರದ್ಯುಮ್ನ ಮಹಾರಾಜನು "ತಪೋನಿಧಿಯೇ ಹರೆಯದ ವಯಸ್ಸಿನಲ್ಲಿಯೇ ಇಂಥ ಘೋರವಾದ ತಪಸ್ಸನ್ನು ಏಕೆ ಕೈಗೊಂಡಿರುವೆ? ಈ ತಪಸ್ಸಿನ ಉದ್ದೇಶವೇನು? ನಿನಗೆ ಏನು ಬೇಕಾಗಿದೆ? ಹೇಳು" ಎಂದು ಕೇಳಿದನು. ಇಂದ್ರದ್ಯುಮ್ನನ ಈ ಪ್ರಶ್ನೆಯನ್ನು ಕೇಳಿ ಆ ತಪೋಧನನು "ಮೊದಲು, ನೀನು ಯಾರು ಹೇಳು. ದುಃಖಾರ್ತನಾಗಿ ತಪಸ್ಸನ್ನು ಕೈಗೊಂಡ ನನ್ನನ್ನು ಸ್ನೇಹಭಾವದಿಂದ ಮಾತನಾಡಿಸುತ್ತಿರುವ ನೀನು ಯಾರು? ತಿಳಿಸು" ಎಂದು ಕೇಳಿದನು. ಆಗ ಇಂದ್ರದ್ಯುಮ್ನನು "ನಾನು ಶಾಕಲಪುರದ ರಾಜನಾದ ಇಂದ್ರದ್ಯುಮ್ನ. ಮನು ಮಹಾರಾಜನೇ ನನ್ನ ತಂದೆ. ಇಕ್ಷ್ವಾಕು ಮಹಾರಾಜನು ನನ್ನ ಸೋದರ" ಎಂದು ತನ್ನ ಪರಿಚಯವನ್ನು ಮಾಡಿಕೊಟ್ಟನು.

ಅನಂತರ ಆ ತಪಸ್ವಿಯು ತನ್ನ ವೃತ್ತಾಂತವನ್ನೆಲ್ಲ ಹೇಳಿ ತಾನು ಕೈಕೊಂಡ ತಪಸ್ಸಿನ ಕಾರಣವನ್ನು ಹೇಳಿದನು. ಅದನ್ನೆಲ್ಲ ಕೇಳಿ ತಿಳಿದ ಇಂದ್ರದ್ಯುಮ್ನನು "ನೀನು ನನ್ನ ಸೋದರನ ಮಗನೇ ಆಗಿರುವಿ. ನಿನ್ನ ಪ್ರೇಯಸಿಯನ್ನು ಹುಡುಕಲು ನಾನೂ ಬರುತ್ತೇನೆ. ಅವಳಿಗಾಗಿ ನೀನು ದೇಹವನ್ನು ಒಣಗಿಸಿ ಪ್ರಾಣಪರಿತ್ಯಾಗ ಮಾಡಬೇಡ" ಎಂದು ಹೇಳಿ ತಪಸ್ವಿಯಾದ ತನ್ನ ಸೋದರ ಪುತ್ರನನ್ನು ಗಾಢಾಲಿಂಗನ ಮಾಡಿದನು. ಮತ್ತು ಅವನನ್ನು ತನ್ನ ರಥದಲ್ಲಿ ಕೂಡ್ರಿಸಿಕೊಂಡು ಜಾಬಾಲಿ ಹಾಗೂ ಋತಧ್ವಜರಿಗೆ ಅವನ ಸಮಾಚಾರವನ್ನೆಲ್ಲ ತಿಳಿಸಿ ಹೇಳಿದನು. ಹೊಸ ತಾಪಸನ ಸಮಾಚಾರವನ್ನೆಲ್ಲ ಕೇಳಿ ತಿಳಿದ ಋತಧ್ವಜನು ಸಂಭ್ರಮದಿಂದ "ಬಾ, ಬಾ, ರಾಜನೇ, ನನ್ನ ಜೊತೆ ಬಾ. ನಿನಗೆ ಇಷ್ಟವಾದುದನ್ನು ಮಾಡುತ್ತೇನೆ. ನೈಮಿಷ ಕ್ಷೇತ್ರದಲ್ಲಿ ನೀನು ನೋಡಿದ ಕನ್ಯೆಯನ್ನು ಸಪ್ತಗೋದಾವರೀ ತೀರ್ಥದಲ್ಲಿ ನಾನೇ ಬಿಟ್ಟುಬಂದಿದ್ದೇನೆ. ಎಲ್ಲರೂ ಕೂಡಿ ಅಲ್ಲಿಗೆ ಹೋಗೋಣ ನಡೆ. ಆ ಕಾರಣಕ್ಕಾಗಿಯೇ ನಾವೂ ಈಗ ಹೊರಟಿದ್ದು. ಅಲ್ಲಿ ಚಿತ್ರಾಂಗದೆ ಅಲ್ಲದೇ ಇನ್ನೂ ಮೂವರೂ ಕನ್ಯೆಯರು ಮಿಲಿತರಾಗಲಿರುವರು" ಎಂದು ನುಡಿದನು.

ಬದರಿಕಾಶ್ರಮ ಕ್ಷೇತ್ರದಲ್ಲಿ ತಪಸ್ಸನ್ನು ಕೈಗೊಂಡ ವ್ಯಕ್ತಿಯು ಬೇರೆ ಯಾರೂ ಆಗಿರದೇ ಸುದೇವ ರಾಜನ ಮಗನಾದ ಸುರಥನೇ ಆಗಿದ್ದನು. ಹಿಂದೆ ಅವನು ನೈಮಿಷ ತೀರ್ಥದಲ್ಲಿ ಮೈತೊಳೆಯುವ ವಿಶ್ವಕರ್ಮಕುಮಾರಿ ಚಿತ್ರಾಂಗದೆಯನ್ನು ಕಂಡು ಮೋಹಗೊಂಡಿದ್ದನು ಮತ್ತು ತನ್ನನ್ನು ವರಿಸಬೇಕೆಂದು ಅವಳಿಗೆ ಬಿನ್ನಹ ಮಾಡಿಕೊಂಡಿದ್ದನು.

ಅವಳೂ ಇವನ ಪ್ರಾರ್ಥನೆಯನ್ನು ಮನ್ನಿಸಿ ತಂದೆಯನ್ನು ಕೇಳದೇ ಇವನನ್ನು ವಿವಾಹವಾಗಲು ಸಮ್ಮತಿಕೊಟ್ಟಿದ್ದಳು. ಇಷ್ಟರಿಂದಲೇ ಕುಪಿತನಾದ ಅವಳ ತಂದೆಯು ಶಾಪಕೊಟ್ಟು ಅವರಿಬ್ಬರನ್ನು ಬೇರ್ಪಡಿಸಿದ್ದನು. ಅದರಿಂದ ನಿರಾಶನಾದ ಸುರಥನು ತನ್ನ ದೇಹವನ್ನು ಒಣಗಿಸಿ ಪ್ರಾಣ ಬಿಡಬೇಕೆಂದು ಬದರಿಕಾಶ್ರಮದಲ್ಲಿ ಬಂದು ಕುಳಿತಿದ್ದನು. ಈಗ ಋತಧ್ವಜಾಚಾರ್ಯನ ಮಾತಿನಿಂದ ಅವನಲ್ಲಿ ಮತ್ತೆ ತನ್ನ ಪ್ರೇಯಸಿಯನ್ನು ಕಾಣುವ ಆಸೆಯ ಕಿರಣವು ಅಂಕುರಿಸಿತು. ಇವರೊಡನೆ ಅವನೂ ಆನಂದದಿಂದ ತನ್ನ ಪ್ರಿಯೆಯನ್ನು ಹುಡುಕಲು ಹೊರಟನು. ಅವರು ನಾಲ್ವರೂ ರಥಾರೂಢರಾಗಿ ಸಪ್ತಗೋದಾವರೀ ತೀರ್ಥದ ಕಡೆಗೆ ಹೊರಟರು. ಈ ಅವಧಿಯಲ್ಲಿ ಮಗಳನ್ನು ಕಳೆದುಕೊಂಡ ಘೃತಾಚೀ ಎಂಬ ಅಪ್ಸರೆಯು ಅತ್ಯಂತ ದುಃಖಸಂತಪ್ತಳಾಗಿ ಉದಯ

ಪರ್ವತದ ತುಂಬ ಹುಡುಕಿದಳು. ಎಷ್ಟು ಹುಡುಕಿದರೂ ಅವಳ ಮಗಳಾದ ದೇವವತಿಯು ಅವಳಿಗೆ ದೊರಕಲಿಲ್ಲ. ಆ ಪರ್ವತದಲ್ಲಿ ಹೀಗೆ ಹುಡುಕುತ್ತ ಹೊರಟಾಗ ಆ ಕೋತಿಯು ಅವಳಿಗೆ ಕಾಣಿಸಿತು. ಆಗ ಘೃತಾಚಿಯು ಅದನ್ನು ಹಿಡಿದು ನಿಲ್ಲಿಸಿ "ಕಪಿ, ನಿಜ ಹೇಳು. ನೀನು ನನ್ನ ಮಗಳನ್ನು ನೋಡಿಲ್ಲವೇ?" ಎಂದು ಕೇಳಿದಳು. ಆಗ ಆ ಕೋತಿಯು "ನಾನು ವೇದವತಿ ಎಂಬ ಕನ್ಯೆಯನ್ನು ನೋಡಿದ್ದೆ. ಅವಳನ್ನು ಯಮುನಾನದಿಯ ದಂಡೆಯ ಮೇಲಿರುವ ಶ್ರೀಕಂಠೇಶ್ವರ ದೇವಸ್ಥಾನದ ಬಳಿ ಆಶ್ರಮದಲ್ಲಿ ಇಟ್ಟು ಬಂದಿದ್ದೆ. ನಾನು ನಿನ್ನ ಮುಂದೆ ಸುಳ್ಳು ಹೇಳುವದಿಲ್ಲ" ಎಂದು ಹೇಳಿತು.

ಅದನ್ನು ಕೇಳಿ ಘೃತಾಚಿಯು "ವಾನರನೇ, ನನ್ನ ಮಗಳ ಹೆಸರು ವೇದವತಿಯಲ್ಲ, ದೇವವತಿ. ನೀನು ಆಶ್ರಮದಲ್ಲಿ ಇಟ್ಟು ಬಂದ ವೇದವತಿಯು ಬೇರೆ ಕನ್ಯೆ ಆಗಿರಬಹುದು. ಏನೇ ಆಗಲಿ. ಅಲ್ಲಿಯವರೆಗೆ ಹೋಗಿ ನೋಡಿ ಬರೋಣ ನಡೆ" ಎಂದು ಹೇಳಿ ಹೊರಟಳು. ಆ ಕಪಿಯು ವೇಗಗತಿಯಿಂದ ಆ ಅಪ್ಸರೆಯ ಬೆನ್ನ ಹಿಂದೆ ಹೊರಟಿತು. ಅವರಿಬ್ಬರೂ ಉರ್ವಾಚಲದಿಂದ ಹೊರಟು ದೀರ್ಘ ಮಾರ್ಗವನ್ನು ಕ್ರಮಿಸಿ ಕೌಶಿಕೀ ನದಿಯ ದಂಡೆಯಗುಂಟ ಬರುತ್ತಿದ್ದರು. ಆಗ ಮೂವರು ರಾಜಕುಮಾರರೂ ಇಬ್ಬರು ಬ್ರಾಹ್ಮಣ ತಪಸ್ವಿಗಳೂ ಬೇರೆ ಬೇರೆ ರಥಗಳನ್ನು ಆರೋಹಣ ಮಾಡಿ ಅಲ್ಲಿಗೇ ಬಂದರು. ಅವರೆಲ್ಲರೂ ರಥದಿಂದ ಇಳಿದು ಸ್ನಾನಕ್ಕಾಗಿ ನದಿಗೆ ನಡೆದರು. ಘೃತಾಚಿಯು ಮೈತೊಳೆಯಲಿಕ್ಕಾಗಿ ಅದೇ ನದಿಗೆ ಹೋದಳು.

ಘೃತಾಚಿಯ ಹಿಂದೆ ಅವಳನ್ನು ಅನುಸರಿಸಿ ಹೋಗುತ್ತಿದ್ದ ಕೋತಿಯು ಮೊದಲು ಜಾಬಾಲಿಯ ಕಣ್ಣಿಗೆ ಬಿದ್ದಿತು. ಅದನ್ನು ನೋಡಿದ ಕೂಡಲೇ ಜಾಬಾಲಿಯು ತನ್ನ ತಂದೆ ಋತಧ್ವಜನಿಗೂ ಮತ್ತು ತನ್ನನ್ನು ವೃಕ್ಷಬಂಧನದಿಂದ ಬಿಡಿಸಿದ ಶೂರ ರಾಜಕುಮಾರ ಶಕುನಿಗೂ ಕೋತಿಯ ಸಮಾಚಾರವನ್ನು ತಿಳಿಸಿ "ತಂದೆಯೇ, ಈ ಮೊದಲು ನನ್ನನ್ನು ಆಲದ ಮರದ ತುದಿಯಲ್ಲಿ ನನ್ನ ಜಡೆಗಳಿಂದ ಬಿಗಿದು ಕಟ್ಟಿದ ಆ ಬಲಿಷ್ಠ ಕೋತಿಯು ಮತ್ತೆ ಬರುತ್ತಲಿದೆ. ಅಕೋ! ಅಲ್ಲಿ ನೋಡಿರಿ" ಎಂದು ಹೇಳಿ, ಆ ಕಪಿಯನ್ನು ತೋರಿಸಿದನು. ಅದನ್ನು ಕಂಡ ಕೂಡಲೇ ಶಕುನಿಗೆ ಕೋಪ ಉಕ್ಕಿತು. ಕೂಡಲೇ ಅವನು ತನ್ನ ಬಿಲ್ಲನ್ನು ಬಾಗಿಸಿ ಬಾಣ ಹೂಡಿ ಆ ಬ್ರಾಹ್ಮಣ ತಂದೆ ಮಕ್ಕಳಿಗೆ ಕೇಳಿದನು. "ಪೂಜ್ಯರೇ ನನಗೆ ಅಪ್ಪಣೆ ನೀಡಿರಿ. ಒಂದೇ ಬಾಣದಿಂದ ಈ ಕೋತಿಯನ್ನು ಈಗಲೇ ಕೊಂದು ಹಾಕುವೆನು." ಬಾಣ ನೀಡಲು ಸಿದ್ಧನಾದ ರಾಜಕುಮಾರನ ಮಾತನ್ನು ಕೇಳಿ ಸರ್ವಪ್ರಾಣಿಗಳಿಗೂ ಹಿತವನ್ನು ಬಯುಸುವ ಋತಧ್ವಜ ಮಹರ್ಷಿಯು ಯುಕ್ತಿಯುಕ್ತವಾದ ಈ ಮಾತನ್ನು ಹೇಳಿದನು -

"ರಾಜಕುಮಾರನೇ, ಈ ಜಗತ್ತಿನಲ್ಲಿ ಯಾರೂ ಯಾರನ್ನು ಕಟ್ಟಲಾರರು ಮತ್ತು ಕೊಲ್ಲಲಾರರು. ವಧ ಮತ್ತು ಬಂಧನ ಇವೆರಡೂ ಪ್ರಾಣಿಗಳಿಗೆ ಅವರವರ ಪೂರ್ವಜನ್ಮದ ಕರ್ಮಾನುಸಾರವಾಗಿ ಆಗುತ್ತವೆ. ಜಾಬಾಲಿಗೆ ಉಂಟಾದ ಆ ವೃಕ್ಷ ಬಂಧನಕ್ಕೂ ಈ ಕೋತಿಯು ಕಾರಣವಲ್ಲ. ಅವನ ಪ್ರಾರಬ್ಧವೇ ಅದಕ್ಕೆ ಕಾರಣ. ಆದುದರಿಂದ ವ್ಯರ್ಥವಾಗಿ ನೀನು ಈ ಕೋತಿಯನ್ನು ಏಕೆ ಕೊಲ್ಲುವಿ?" ಆಗ ರಾಜಕುಮಾರ ಶಕುನಿಯು "ಪೂಜ್ಯರೇ, ಹಾಗಾದರೆ ಮುಂದೆ ಏನು ಮಾಡಬೇಕು? ಅಪ್ಪಣೆ ಕೊಡಿರಿ" ಎಂದು ನುಡಿದನು.

ಅನಂತರ ಆ ಋತಧ್ವಜ ಮುನಿಯು ಆ ಕೋತಿಯನ್ನು ಕರೆದು ಹೇಳಿದನು. ''ವಾನರನೇ, ನೀನು ಈ ನಿನ್ನ ಮಗನಾದ ಜಾಬಾಲಿಯನ್ನು ಅವನ ಜಡೆಗಳಿಂದಲೇ ಆಲದಮರದ ತುದಿಯಲ್ಲಿ ಬಲವಾಗಿ ಬಿಗಿದು ಬಂಧಿಸಿದ್ದೆ. ಈ ಮಹಾರಾಜನು ಎಷ್ಟು ಪ್ರಯತ್ನ ಮಾಡಿದರೂ ಅವನು ಹಾಕಿದ ಆ ಕಗ್ಗಂಟನ್ನು ಬಿಡಿಸಲು ಆಗಲಿಲ್ಲ. ಆ ಮಹಾರಾಜ ಆ ತನ್ನ ಬಿಲ್ಲಿನಿಂದ ಒಂದು ಬಾಣವನ್ನು ಬಿಟ್ಟು ಇವನನ್ನು ಕಟ್ಟಿದ ಆ ಟೊಂಗೆಯನ್ನು ಕಡಿದು ಮರದಿಂದ ಬೇರ್ಪಡಿಸಿದನು. ಮತ್ತೆ ಎರಡು ಬಾಣಗಳಿಂದ ಇವನ ತಲೆಗೆ ಹತ್ತಿದ ಶಾಖೆಯ ಎಲ್ಲ ರೆಂಬೆಗಳನ್ನು ಲತಾಪಾಶಗಳನ್ನು ಕತ್ತರಿಸಿದನು. ಆದರೆ ಇವನ ತಲೆಯನ್ನು ಮರದತುಂಡಿಗೆಜಡೆಗಳಿಂದ ಬಿಗಿದು ರಕ್ಷಾಯಂತ್ರವನ್ನಿರಿಸಿ ಕಗ್ಗಂಟು ಹಾಕಿ ಬಂಧಿಸಿದ ಆ ನಿನ್ನ ಕಟ್ಟನ್ನು ಮಾತ್ರ ಬಿಚ್ಚಲಿಕ್ಕೆ ಆಗಲಿಲ್ಲ. ಅದರಿಂದ ಅಷ್ಟು ಭಾಗ ಮರದ ತುಂಡನ್ನು ತಲೆಯ ಮೇಲೆ ಹೊತ್ತುಕೊಂಡೇ ಇವನು ತಿರುಗಾಡುತ್ತಿದ್ದಾನೆ. ಇದನ್ನು ಬೇರಾರಿಗೂ ಬಿಡಿಸಲು ಶಕ್ಯವಿಲ್ಲ. ಈ ಬ್ರಹ್ಮಗಂಟನ್ನು ನೀನೇ ಬಿಡಿಸು'' ಎಂದು ಹೇಳಿದನು. ಋಷಿಯ ಮಾತನ್ನು ಕೇಳಿ ಆ ಕಪಿಯು ಜಾಬಾಲಿ ಮುನಿಯ ಹತ್ತಿರ ಬಂದು ಮೆಲ್ಲಮೆಲ್ಲನೇ ಆ ಜಟಾಬಂಧವನ್ನು ಬಿಡಿಸತೊಡಗಿತು. ಒಂದು ಕ್ಷಣದಲ್ಲಿ ಇಷ್ಟು ದಿನ ಯಾರಿಗೂ ಬಿಡಿಸಲು ಬಾರದ ಆ ಕಗ್ಗಂಟು ಸರಳವಾಗಿ ಬಿಟ್ಟುಹೋಯಿತು. ಮುನಿಯ ತಲೆಯ ಮೇಲಿನ ಮರದ ತುಂಡು ದೂರವಾಗಿ ತಲೆ ಹಗುರವಾಯಿತು. ಅದರಿಂದ ಋತಧ್ವಜನಿಗೆ ಬಹಳ ಸಂತೋಷವಾಗಿ ಆ ಕಪಿಗೆ ''ವಾನರನೇ, ನನ್ನ ಮಗನ ಶಿರೋಬಂಧನವನ್ನು ಬಿಡಿಸಿದ್ದಕ್ಕಾಗಿ ನನಗೆ ಬಹಳ ಆನಂದವಾಗಿದೆ. ನಿನಗೆ ಬೇಕಾದ ವರ ಬೇಡು ಕೊಡುತ್ತೇನೆ. ಕೇಳಿಕೋ'' ಎಂದು ಅಂದನು. ಆಗ ಆ ಕಪಿಯು ಹೀಗೆ ವರವನ್ನು ಆ ಭೈರವಾಚಾರ್ಯನಲ್ಲಿ ಕೇಳಿಕೊಂಡಿತು.

''ಪೂಜ್ಯರೇ, ನಾನು ಜಾತಿಯಿಂದ ಕೋತಿಯಲ್ಲ. ಪೂರ್ವಜನ್ಮದಲ್ಲಿ ದೇವತೆಗಳ ಬಡಿಗನಾಗಿದ್ದ ವಿಶ್ವಕರ್ಮನೇ ನಾನು ನನ್ನನ್ನು ಕೋತಿಯನ್ನಾಗಿ ಮಾಡಿದವರೇ ನೀವು, ನನ್ನ ಮಗಳು ಚಿತ್ರಾಂಗದೆ. ಮೂಲನೋಡಿ ಅವರಿಬ್ಬರನ್ನು ಅಗಲಿಸಿದ್ದೆ. ಆ ಚಿತ್ರಾಂಗದೆಯ ದುಃಖವನ್ನು ಕಂಡು ಎದೆಕರಗಿ ನೀವು ಶಾಪಕೊಟ್ಟು ಕಪಿಯನ್ನಾಗಿ ಮಾಡಿದಿರಿ. ಈಗ ದಯಮಾಡಿ ಆ ಶಾಪವನ್ನು ಹಿಂತೆಗೆದುಕೊಂಡು ನನ್ನ ಕಪಿತ್ವವನ್ನು ಹೋಗಲಾಡಿಸಿರಿ ಮತ್ತು ನಾನು ಈ ವಾನರ ಜನ್ಮದಲ್ಲಿ ಕಪಿಸಹಜವಾದ ಚಾಪಲ್ಯದಿಂದ ಅನೇಕ ಅಪರಾಧಗಳನ್ನು ದುಷ್ಟಕಾರ್ಯಗಳನ್ನೂ ಎಸಗಿದೆ. ಆ ದುಷ್ಕೃತ್ಯಗಳಿಂದ ನನಗೆ ಉಂಟಾದ ಪಾಪಗಳೆಲ್ಲವೂ ನಿಮ್ಮ ವರದಿಂದ ಪರಿಹಾರವಾಗಲಿ.'' ಅದನ್ನು ಕೇಳಿ ಋತಧ್ವಜ ಮುನಿಯು ''ನೀನು ಘೃತಾಚಿಯಲ್ಲಿ ಮಹಾ ಬಲಿಷ್ಠನಾದ ಒಬ್ಬ ಮಗನನ್ನು ಹಡೆದ ಬಳಿಕ ನಿನಗೆ ಈ ಶಾಪದಿಂದ ಮುಕ್ತಿಯಾಗುವದು'' ಎಂದು ಹೇಳಿದನು. ಋತಧ್ವಜ ಮುನಿಯ ಶಾಪ ನಿವೃತ್ತಿಯ ಈ ವರದಿಂದ ಆ ಕಪಿಗೆ ಬಹಳ ಸಂತೋಷವಾಯಿತು. ಅದು ಆನಂದದಿಂದ ನದೀ ಸ್ನಾನಕ್ಕೆ ತೆರಳಿತು. ಎಲ್ಲರೂ ನದಿಯಲ್ಲಿ ಸ್ನಾನ ಮಾಡಿ ತಮ್ಮ ತಮ್ಮ ಪಿತೃಗಳಿಗೆ ತರ್ಪಣ ಕೊಟ್ಟರು. ದೇವರ ಪೂಜೆ ಮಾಡಿದರು. ಆ ನಂತರ ಎಲ್ಲರೂ ತಮ್ಮ ರಥಗಳನ್ನು ಏರಿ ಕುಳಿತರು. ಘೃತಾಚಿಯು ಸ್ವರ್ಗಕ್ಕೆ ನಡೆದಳು.

ಆ ಕಪಿರಾಜನೂ ಆ ಘೃತಾಚಿಯನ್ನು ಅನುಸರಿಸಿ ಹೊರಟನು. ಸ್ವರ್ಗಲೋಕದ ದಿವ್ಯ ಸೌಂದರ್ಯದ ರಾಶಿಯಂತಿದ್ದ ಅಪ್ಸರಾಮಣಿ ಘೃತಾಚಿಯನ್ನು ಕಂಡು ಆ ಕೋತಿಯ ಕಾಮ ಕೆರಳಿತು. ಅವಳಿಗೂ ಆ ಕೋತಿಯೆಂದರೆ ಜನ್ಮಾಂತರದ ವಿಶ್ವಕರ್ಮ ಎಂದು ತಿಳಿದು ಅದನ್ನು ಮೋಹಿಸಿದಳು. ಕೋಲಾಹಲ ಎಂಬ ಪರ್ವತದ ಸುಂದರ ಕಂದರಗಳಲ್ಲಿ ಆ ಸ್ವರ್ಗದ ಹೆಣ್ಣಿನೊಡನೆ ಆನಂದದಿಂದ ಆ ಕಪಿಯು ವಿಹರಿಸಿತು. ಘೃತಾಚಿಗೆ ಬಲಿಷ್ಠ ಕಪಿಯ ವಿವಿಧ ಕೇಳೀ ವಿಲಾಸದಿಂದ ಅತ್ಯಾನಂದವಾಯಿತು. ಹೀಗೆ ನಿಸರ್ಗ ರಮಣೀಯವಾದ ವನೋಪವನಗಳ ಮಂಜುಲತಾಕುಂಜಗಳಲ್ಲಿ ಬಹುಕಾಲ ಅವರು ವಿಹರಿಸಿದರು. ಮುಂದೆ ಕೆಲ ಸಮಯದ ನಂತರ ಅವರಿಬ್ಬರೂ ಪ್ರಣಯಿಗಳು ವಿಂಧ್ಯಪರ್ವತಕ್ಕೆ ಬಂದು ಸೇರಿದರು.

ಇತ್ತ ರಥಾರೂಢರಾಗಿ ಹೊರಟ ಮೂವರು ರಾಜಕುಮಾರರೂ, ಇಬ್ಬರೂ ಬ್ರಾಹ್ಮಣರೂ ಮಧ್ಯಾಹ್ನದ ಹೊತ್ತಿಗೆ ಸಪ್ತ ಗೋದಾವರೀ ತೀರಕ್ಕೆ ಬಂದು ತಲುಪಿ ದರು. ಅವರೆಲ್ಲರಿಗೂ ಬಹಳ ಬಳಲಿಕೆ, ಬಾಯಾರಿಕೆಯಾದದ್ದರಿಂದ ವಿಶ್ರಾಂತಿಗಾಗಿ ಎಲ್ಲರೂ ರಥಬಿಟ್ಟು ಇಳಿದರು. ಅವರ ಕುದುರೆಗಳೂ, ಸಾರಥಿಗಳೂ ಜಲಪಾನ ಜಲವಿಹಾರಗಳಿಂದ ದಣಿವು ಪರಿಹರಿಸಿಕೊಂಡು ವಿಶ್ರಮಿಸಿದವು. ಆ ರಮಣೀಯವಾದ ವನಪ್ರದೇಶದಲ್ಲಿ ಎಲ್ಲಿ ನೋಡಿದಲ್ಲೆಲ್ಲ ಹಚ್ಚಹಸಿರು ಮುರಿಯುವ ಹಸಿ ಹುಲ್ಲಿನ ಮೈದಾನಗಳು ಕಾಣುತ್ತಿದ್ದವು. ಹಸಿರು ಮೇಯಲಿಕ್ಕೆಂದು ಕುದುರೆಗಳನ್ನು ಆ ವನಾಂತರಾಳದಲ್ಲಿ ಬಿಚ್ಚಿಬಿಟ್ಟರು. ಎಳೆ ಹುಲ್ಲನ್ನು ಮೇದು ಆನಂದದಿಂದ ತೃಪ್ತಿಹೊಂದಿದ ಆ ಎಲ್ಲ ಕುದುರೆಗಳು ನೇರವಾಗಿ ಹಾಟಕೇಶ್ವರ ದೇವಾಲಯಕ್ಕೆ ಬಂದವು. ಆ ಕುದುರೆಗಳ ಖುರಪುಟಗಳ ಧ್ವನಿಯನ್ನು ಕೇಳಿ ''ಇದೇನು?'' ಎಂದು ಕುತೂಹಲದಿಂದ ಆ ನಾಲ್ವರೂ ''ವೇದವತಿ, ದಮಯಂತಿ, ಚಿತ್ರಾಂಗದಾ, ದೇವವತಿ'' ಎಂಬ ಕನ್ಯೆಯರು ಹಾಟಕೇಶ್ವರ ದೇವಾಲಯದಲ್ಲಿ ಬಂದು ಸೇರಿದರು.

ಅನಂತರ ದೇವಸ್ಥಾನದ ಮೇಲುಮಾಳಿಗೆಗಳ ಮೇಲೆ ಹತ್ತಿ ಎಲ್ಲ ಕಡೆಗೂ ನೋಡಿದರು. ದೂರ ಸಪ್ತ ಗೋದಾವರೀ ತೀರದ ಜಲ ಪ್ರವಾಹದಲ್ಲಿ ಸ್ನಾನ ಮಾಡುತ್ತಲಿರುವ ಮೂವರು ರಾಜಕುಮಾರರನ್ನು ಅವರು ನೋಡಿದರು. ಅವರಲ್ಲಿ ಋಷಿಯಂತೆ ಜಟಾಮಂಡಲವನ್ನು ಧರಿಸಿದ ಸುರಥರಾಜಕುಮಾರನನ್ನು ಕಂಡು ಚಿತ್ರಾಂಗದೆಗೆ ಅತ್ಯಾನಂದವಾಯಿತು. ಅವಳ ಮೈತುಂಬ ಹಿಗ್ಗಿನ ಮುಳ್ಳುಗಳು ನಿಮಿರಿನಿಂತವು. ಅವಳು ಮಂದಹಾಸ ಮಾಡುತ್ತ ತನ್ನ ಗೆಳತಿಯರಿಗೆ ಹೇಳಿದಳು -

''ಸಖಿಯರೇ, ಆ ನದೀ ತೀರದಲ್ಲಿ ನೀಲಮೇಘಶ್ಯಾಮನಾದ ನೀಳು ದೋಳಿನ ಒಬ್ಬ ಸುಂದರ ಯುವಕನು ಕಾಣುವದಿಲ್ಲವೇ! ಅವನೇ ಸುದೇವ ರಾಜನ ಮಗನಾದ ಸುರಥಕುಮಾರನು. ಅವನನ್ನೇ ಹಿಂದೆ ನಾನು ಪತಿ ಎಂದೂ ವರಿಸಿದ್ದೆ. ಮುಂದೆಯೂ ಅವನೇ ನನ್ನ ಪತಿ. ಅವನ ಆಚೆಗೆ ಬಂಗಾರದಂತೆ ಹೊಂಬಣ್ಣದಿಂದ ಹೊಳೆಯುವ ತಪೋವೃದ್ಧನು ಕಾಣುವನಷ್ಟೇ! ಆ ಶುಭ್ರ ಜಟಾಧಾರಿ ತಪಸ್ವಿಯೇ ಭೈರವ ಆಚಾರ್ಯನಾದ ಋತಧ್ವಜ ಮುನಿ, ಇದರಲ್ಲಿ ಸಂಶಯವೇ ಇಲ್ಲ.

ಅನಂತರ ಅಲ್ಲಿಯೇ ನಿಂತ ದಮಯಂತಿಯು ಆನಂದದಿಂದ ''ಸಖಿಯರೇ, ಅವನ ಪಕ್ಕದಲ್ಲಿಯೇ ಇರುವ ಆ ಚಿಕ್ಕ ತಪಸ್ವಿಯು ಋತಧ್ವಜ ಪುತ್ರನಾದ ಜಾಬಾಲಿ ಮಹರ್ಷಿ. ಇದರಲ್ಲಿ ಸಂದೇಹವಿಲ್ಲ'' ಎಂದು ನುಡಿದಳು. ಹೀಗೆ ಮಾತನಾಡಿ ಆ ಕನ್ಯೆಯರೆಲ್ಲರೂ ಉಪ್ಪರಿಗೆಯ ಮೇಲಿಂದ ಕೆಳಗಿಳಿದು ಬಂದರು. ತಾವು ಇಷ್ಟು ದಿನ ಹಾಟಕೇಶ್ವರನ ಸೇವೆ ಮಾಡಿದ್ದರ ಫಲ ತಮಗೆ ದೊರಕುವ ಕಾಲ ಬಂದಿತೆಂದು ಅವರೆಲ್ಲರಿಗೂ ಆ ಪರಮೇಶ್ವರನ ಬಗೆಗೆ ಭಕ್ತಿ ಭಾವವು ಉಕ್ಕೇರಿತು. ಅವರೆಲ್ಲರೂ ತಮ್ಮ ಮಧುರಕಂಠದಿಂದ ಮಹಾದೇವರ ಮೇಲೆ ಅನೇಕ ಹಾಡು ಹಾಡಿ ಕೊಂಡಾಡಿ ಸ್ತೋತ್ರ ಮಾಡಿದರು.

''ಓಂ ನಮೋಸ್ತು ಶರ್ವಶಂಭೋ ತ್ರಿನೇತ್ರ'' ಎಂದು ಮುಂತಾದ ಬಗೆಬಗೆಯ ಗದ್ಯಪದ್ಯಗಳನ್ನೂ, ಮಧುರ ಗೀತೆಗಳನ್ನೂ ಸಂಗೀತಭಂಗಿಯಿಂದ ಹೇಳಿ ಆ ಪರಮೇಶ್ವರನಿಗೆ ತಮ್ಮ ಗಾನಸೇವೆಯನ್ನು ಸಲ್ಲಿಸಿದರು. ಇದೇ ವೇಳೆಯಲ್ಲಿ ಆ ಎಲ್ಲ ರಾಜಕುಮಾರರು ಋಷಿ ಹಾಗು ಋಷಿಕುಮಾರರು ಸಪ್ತಗೋದಾವರಿಯಲ್ಲಿ ಸ್ನಾನ ಮಾಡಿ ತಮ್ಮ ಅನ್ಹಿಕ ಮುಗಿಸಿಗೊಂಡು ಹಾಟಕೇಶ್ವರ ದರ್ಶನಕ್ಕಾಗಿ ದೇವಸ್ಥಾನಕ್ಕೆ ಬಂದರು. ದೇವಾಲಯದ ರಂಗಮಂಟಪದಲ್ಲಿ ಹೆಂಗಳೆಯರ ಸಂಗೀತ ಸೇವೆ ನಡೆದಿತ್ತು. ಇವರೂ ಅಲ್ಲಿಯೇ ಹೋಗಿ ಅವರೆದುರು ಬಂದು ನಿಂತು ಕೊಂಡರು.

ಗಾಯಕಿಯರ ನಡುವೆ ಚಿತ್ರಾಂಗದೆಯೂ ಇದ್ದುದನ್ನು ಕಂಡು ಸುರಥನಿಗೆ ಪರಮಾನಂದವಾಗಿ ಮೈರೋಮಾಂಚನವಾಯಿತು. ಋತಧ್ವಜ ಮುನಿಯೂ ತನ್ನ ಯೋಗ ದೃಷ್ಟಿಯಿಂದ 'ಇವಳೇ ಚಿತ್ರಾಂಗದೆ' ಎಂದು ಅರಿತು ಅವರ ದುಃಖ ದೂರಾಗುವ ಸಮಯ ಬಂದಿತೆಂದು ತಿಳಿದು ಸಂತಸಗೊಂಡನು. ಅನಂತರ ಅವರು ಐವರೂ ಒಳಗೆ ಗರ್ಭಗುಡಿಯಲ್ಲಿ ಹೋಗಿ ಹಾಟಕೇಶ್ವರನನ್ನು ಒಬ್ಬೊಬ್ಬರಾಗಿ ಪೂಜೆಮಾಡಿ ಸ್ತೋತ್ರ ಮಾಡಿದರು. ಅನಂತರ ಚಿತ್ರಾಂಗದೆಯೂ ಕೂಡ ಋತಧ್ವಜನೇ ಮೊದಲಾದ ಆ ಐವರನ್ನು ಕಂಡು ತನ್ನ ಗೆಳತಿಯರೊಂದಿಗೆ ಎದ್ದು ಬಂದು ನಮಸ್ಕಾರ ಮಾಡಿದಳು. ಋತಧ್ವಜನು ಜಾಬಾಲಿಯೂ ಅವರಿಗೆಲ್ಲರಿಗೂ ಆಶೀರ್ವಾದ ಮಾಡಿದರು. ಆ ಬಳಿಕ ಅವರೆಲ್ಲ ರಾಜಕುಮಾರರೂ ಋಷಿಕುಮಾರರೂ ಆ ನಾಲ್ಕು ಕನ್ಯೆಯರೂ ದೇವಸ್ಥಾನದ ಮುಂಭಾಗದಲ್ಲಿ ಪ್ರಶಸ್ತವಾಗಿ ಕುಳಿತುಕೊಂಡರು.

ಅದೇ ವೇಳೆಯಲ್ಲಿ ಆ ಕಪಿರಾಜನು ಘೃತಾಚಿಯೊಂದಿಗೆ ಗೋದಾವರಿಯಲ್ಲಿ ಸ್ನಾನಮಾಡಿ ಹಾಟಕೇಶ್ವರನ ದರ್ಶನಕ್ಕಾಗಿ ಅಲ್ಲಿಗೆ ಬಂದಿತು. ಘೃತಾಚಿಯು ಅಲ್ಲಿಯೇ ಕುಳಿತ ತನ್ನ ಮಗಳಾದ ದೇವವತಿಯನ್ನು ಕಂಡು ಹರ್ಷಿತಳಾದಳು. ಅವಳಿಗೂ ತನ್ನ ತಾಯಿಯನ್ನು ನೋಡಿ ಪರಮಾನಂದವಾಯಿತು. ಘೃತಾಚಿಯು ತನ್ನ ಮಗಳಾದ ದೇವವತಿಯನ್ನು ಅಪ್ಪಿಕೊಂಡು ಅವಳ ಮುಡಿ ಮೂಸಿ ಆನಂದಬಾಷ್ಪಗಳನ್ನು ಉದುರಿಸಿದಳು. ಅನಂತರ ಋತಧ್ವಜನು ಆ ಕಪಿವೀರನಿಗೆ ಹೇಳಿದನು - ''ವಾನರೇಶ್ವರ, ನೀನು ಅಂಜನಾಚಲಕ್ಕೆ ಹೋಗು. ಅಲ್ಲಿರುವ ಅಂಜನ ಎಂಬ ಯಕ್ಷನನ್ನೂ, ಪಾತಾಳಕ್ಕೆ ಹೋಗಿ ಕಂದರ ಮಾಲಿ ದೈತ್ಯನನ್ನೂ, ಮೇರು ಪರ್ವತಕ್ಕೆ ಹೋಗಿ ಗಂಧರ್ವಪರ್ಜನ್ಯನನ್ನೂ ಬೇಗ ಕರೆದುಕೊಂಡು ಬಾ'' ಎಂದು ಹೇಳಿದನು. ಆಗ ವೇದವತಿಯು ''ಕಪಿಶ್ರೇಷ್ಠನೇ, ಗಾಲವಮುನಿಯನ್ನೂ ಇದ್ದಲ್ಲಿಂದ ನೀನು ಕರೆದುಕೊಂಡು ಬಾ'' ಎಂದು ಹೇಳಿದಳು.

ಆದರಂತೆ ಆ ಕಪಿಶ್ರೇಷ್ಠನು ತನ್ನ ಅಮಿತ ವಿಕ್ರಮದಿಂದ ಮನೋವೇಗದಿಂದ ಹಾರುತ್ತ ಹೋಗಿ ಮೊದಲು ಅಂಜನ ಪರ್ವತಕ್ಕೆ ಬಂದು ಅಂಜನ ಯಕ್ಷನನ್ನು ಬರಲಿಕ್ಕೆ ಹೇಳಿದನು. ಅನಂತರ ಮೇರು ಪರ್ವತಕ್ಕೆ ಹೋಗಿ ಪರ್ಜನ್ಯನನ್ನು ಆಹ್ವಾನಿಸಿ ಹಾಟಕೇಶ್ವರನ ಗುಡಿಗೆ ಕಳಿಸಿಕೊಟ್ಟು, ಪಾತಾಳಕ್ಕೆ ಹೋಗಿ ಕಂದರ ಮಾಲಿಯನ್ನು ಕರೆದು ಬಂದನು. ಭೂಲೋಕದಲ್ಲೆಲ್ಲ ಹುಡುಕಾಡಿ ಕೊನೆಗೆ ಮಾಹಿಷ್ಮತಿಯಲ್ಲಿರುವ ಗಾಲವ ಮುನಿಯನ್ನೂ, ದೇವಸ್ಥಾನಕ್ಕೆ ಕರೆದುಕೊಂಡು ಬಂದನು. ಆ ದೇವಸ್ಥಾನದಲ್ಲಿ ದಮಯಂತಿ ಹಾಗೂ ವೇದವತಿ ಇಬ್ಬರೂ ಇದ್ದುದನ್ನು ಗಾಲವ ಮುನಿಯು ನೋಡಿದನು. ಅವನನ್ನು ನೋಡಿದ ಕೂಡಲೇ ಅವರಿಬ್ಬರೂ ರಾಜಕುಮಾರರು ತಪಸ್ವಿಯಾದ ಗಾಲವ ಋಷಿಯನ್ನು ಗೌರವದಿಂದ ಪೂಜಿಸಿದರು. ಅನಂತರ ಎಲ್ಲರೂ ಆನಂದ ಭರಿತರಾಗಿ ಅಲ್ಲಿ ಕುಳಿತುಕೊಂಡರು. ಅಷ್ಟರಲ್ಲಿ ವಾನರನು ಹೋಗಿ ಕರೆದು ಬಂದ ಯಕ್ಷ, ಗಂಧರ್ವ, ದಾನವರು ಎಂದರೆ ಅಂಜನ, ಪರ್ಜನ್ಯ, ಕಂದರಮಾಲಿ ಮೂವರೂ ಬಂದರು. ಅವರನ್ನು ಕಂಡಕೂಡಲೇ ಅವರ ಮೂವರೂ ಹೆಣ್ಣುಮಕ್ಕಳು ದಮಯಂತಿ, ದೇವವತಿ, ವೇದವತಿ ಈ ಮೂವರೂ ಆನಂದ ಭರಿತರಾಗಿ ತಮ್ಮ ತಮ್ಮ ತಂದೆಗಳನ್ನು ಬಂದು ಆಲಿಂಗನ ಮಾಡಿಕೊಂಡರು. ತನ್ನ ಗೆಳತಿಯರು ಅಗಲಿದ ತಮ್ಮ ತಂದೆಗಳಿಂದ ಕೂಡಿಕೊಂಡದ್ದನ್ನು ಕಂಡು ಚಿತ್ರಾಂಗದೆಗೂ ಹರ್ಷದಿಂದ ಕಣ್ಣು ಹನಿಗೂಡಿದವು. ಆಗ ಅವಳನ್ನು ಕಂಡು ಋತಧ್ವಜ ಮುನಿಯು ''ಮಗಳೇ, ನಿನ್ನ ತಂದೆ ಬರಲಿಲ್ಲ ಎಂದು ವಿಷಾದಿಸಬೇಡ. ಈ ಕಪಿಯೇ ನಿನ್ನ ತಂದೆಯಾದ ವಿಶ್ವಕರ್ಮ'' ಎಂದು ಕೋತಿಯ ಕಡೆ ಕೈಮಾಡಿ ತೋರಿಸಿದರು.

ಮುನಿಯ ಈ ಮಾತನ್ನು ಕೇಳಿ ಚಿತ್ರಾಂಗದೆಯು ಆ ಕಪಿಯೆಡೆಗೆ ನೋಡಿದಳು. ಅದೊಂದು ಅಪ್ಪಟ ಕೋತಿ. ಅವಳಿಗೆ ಬಹಳ ನಾಚಿಕೆಯಾಯಿತು. ತಂದೆಯ ಈ ದುರವಸ್ಥೆಗೆ ನಾನೇ ಕಾರಣಳಾದೆ. ತಂದೆಯನ್ನು ಇಂಥ ದುರ್ದಶೆಗೆ ಈಡುಮಾಡಿದ ನಾನು ಬದುಕಿದ್ದಾದರೂ ಮಾಡುವದೇನು! ಎಂದು ಅವಳು ತನ್ನ ದೇಹತ್ಯಾಗ ಮಾಡಬೇಕೆಂದು ಮನಸ್ಸಿನಲ್ಲಿ ನಿರ್ಧಾರ ಮಾಡಿ ಋತಧ್ವಜ ಮುನಿಗೆ ಹೇಳಿದಳು- ''ಪೂಜ್ಯರೇ, ಪಿತೃಘಾತಕಿಯಾದ ನನ್ನನ್ನು ನೀವೇ ಕಾಪಾಡಬೇಕು. ನಮ್ಮ ತಂದೆಗೆ ಇಂಥ ವೈರೂಪ್ಯ ಹಾಗೂ ಕೀಳುಜನ್ಮ ಬರಲಿಕ್ಕೆ ನಾನೇ ಕಾರಣಳಾದೆ. ತಂದೆಗೆ ಅಪಚಾರ ಮಾಡಿದ ಈ ಪಾಪಿ ದೇಹವನ್ನು ಈಗ ನಾನು ಮರಣಹೊಂದಿ ಕೊನೆಗಾಣಿಸಬೇಕೆಂದು ಸಂಕಲ್ಪಿಸಿದ್ದೇನೆ. ಕಾರಣ ತಾವು ನನಗೆ ಸಾಯಲಿಕ್ಕೆ ಅನುಮತಿಯನ್ನು ನೀಡಬೇಕು.'' ಅವಳ ನಿರ್ಧಾರದ ಆ ನುಡಿಯನ್ನು ಕೇಳಿ ಋತಧ್ವಜ ಋಷಿಯು ಸಂತೈಸಿದನು-

''ಮಗಳೇ, ನೀನು ದುಃಖಪಡಬೇಡ. ಇನ್ನು ಕೆಲವೇ ದಿನಗಳಲ್ಲಿ ನಿನ್ನ ತಂದೆಯ ಈ ಕಪಿರೂಪವು ಹೋಗಿ ಅವನ ಮೊದಲಿನ ವಿಶ್ವಕರ್ಮ ಸ್ವರೂಪವು ಅವನಿಗೆ ಪುನಃ ಪ್ರಾಪ್ತವಾಗುವದು. ದೈವ ಸಂಕಲ್ಪ ಇದ್ದುದನ್ನು ಯಾರಿಗೂ ತಪ್ಪಿಸಲಿಕ್ಕಾಗುವದಿಲ್ಲ. ಘೃತಾಚಿಯಲ್ಲಿ ನಿನ್ನ ತಂದೆಗೆ ಒಂದು ಗಂಡು ಮಗು ಜನಿಸಿದ ಬಳಿಕ ಅವನು ಈ ಕೋತಿಯ ಜನ್ಮವನ್ನು ನೀಗಿ ಮೊದಲಿನಂತೆ ದೇವತೆಗಳ ಬಡಿಗನಾಗುವನು. ಆದುದರಿಂದ ನೀನು ದೇಹತ್ಯಾಗ ಮಾಡಬೇಡ.'' ಅನಂತರ ಅಲ್ಲಿಯೇ ನಿಂತ ಘೃತಾಚಿಯು ಚಿತ್ರಾಂಗದೆಯ ಬಳಿಗೆ ಬಂದು ನಸು ನಾಚುತ್ತ ಹೇಳಿದಳು -

''ಮಗಳೇ, ಶೋಕ ಮಾಡಬೇಡ, ಇನ್ನು ಹತ್ತು ತಿಂಗಳಲ್ಲಿ ನನ್ನಿಂದ ನಿನ್ನ ತಂದೆಯಂತೆಯೇ ತೇಜಸ್ವಿಯೂ, ಪರಾಕ್ರಮಿಯೂ ಆದ ಪುತ್ರನು ಜನಿಸುತ್ತಾನೆ'' ಎಂದು ಹೇಳಿದಳು. ಇದರಿಂದ ಚಿತ್ರಾಂಗದೆಯ ಚಿಂತೆ ಹಾಗೂ ದುಃಖಗಳೆಲ್ಲವೂ ಪರಿಹಾರವಾದುವು. ಅವಳ ಮನಸ್ಸಿಗೆ ಸಮಾಧಾನವಾಯಿತು. ತಮ್ಮ ತಂದೆಯು ತನ್ನ ಈ ಕಪಿಜನ್ಮವನ್ನು ನೀಗಿ ಮೊದಲಿನಂತೆ ವಿಶ್ವಕರ್ಮನಾಗಿ ಬಂದುದನ್ನು ನೋಡಿಯೇ ತಾನು ತನ್ನ ಪ್ರಿಯಕರನಾದ ಸುರಥನೊಡನೆ ಮದುವೆ ಮಾಡಿಕೊಳ್ಳುವದೆಂದು ನಿರ್ಧರಿಸಿದಳು. ಉಳಿದವರು ಕೂಡ ತಮ್ಮ ಗೆಳತಿಯರನ್ನು ಬಿಟ್ಟು ವಿವಾಹವಾಗಬಾರದೆಂದು ಅಲ್ಲಿಯವರೆಗೆ ಎಲ್ಲರೂ ವಿವಾಹವಾಗದೇ ಕಾಯುವ ದೆಂದು ನಿರ್ಧರಿಸಿದರು.

ಹೀಗೆ ಅವರೆಲ್ಲರೂ ನಿರ್ಧರಿಸಿ ಚಿತ್ರಾಂಗದೆಯ ಪ್ರೀತಿಗಾಗಿ ಹತ್ತು ತಿಂಗಳವರೆಗೆ ಕಾಯ್ದರು. ಹತ್ತು ತಿಂಗಳು ತುಂಬಿದ ಬಳಿಕ ಘೃತಾಚಿಯು ಅದೇ ಗೋದಾವರಿ ತೀರದಲ್ಲಿ ಒಂದು ಗಂಡು ಮಗುವನ್ನು ಹೆತ್ತಳು. ಆ ಕೂಸಿಗೆ ನಲ ಎಂದು ಹೆಸರಿಟ್ಟರು. ಪ್ರಸವವಾದ ಕೂಡಲೇ ಕೋತಿಯ ರೂಪಹೋಗಿ ವಿಶ್ವಕರ್ಮನು ತನ್ನ ಮೊದಲಿನ ದಿವ್ಯ ದೇಹವನ್ನು ಪಡೆದನು ಹಾಗೂ ಆನಂದದಿಂದ ತನ್ನ ಮಗಳಾದ ಚಿತ್ರಾಂಗದೆಯನ್ನು ತಬ್ಬಿಕೊಂಡನು ಮತ್ತು ತನ್ನ ಒಡೆಯನಾದ ದೇವೇಂದ್ರನನ್ನು ಸ್ಮರಿಸಿದನು. ಅವನು ನೆನೆದ ಕೂಡಲೇ ದೇವೇಂದ್ರನು ತನ್ನ ಎಲ್ಲ ಪರಿವಾರ ದೇವತೆಗಳಿಂದ ಒಡಗೂಡಿ ಹಾಟಕೇಶ್ವರ ದೇವಸ್ಥಾನಕ್ಕೆ ಬಂದು ಇಳಿದನು. ಎಲ್ಲ ಗಂಧರ್ವರೂ ಅಪ್ಸರೆಯರೂ ಕಿನ್ನರರೂ ಅಲ್ಲಿ ಬಂದು ಸೇರಿದರು. ಆಗ ಇಂದ್ರದ್ಯುಮ್ನ ಮಹಾರಾಜನು ಮುನಿಶ್ರೇಷ್ಠನಾದ ಋತಧ್ವಜ ಋಷಿಯನ್ನು ಕುರಿತು ಹೇಳಿದನು -

''ಪೂಜ್ಯರೇ, ಕಂದರ ಮಾಲಿ ದಾನವನ ಮಗಳಾದ ವೇದವತಿಯನ್ನು ತಮ್ಮ ಮಗನಾದ ಜಾಬಾಲಿ ಮುನಿಗೆ ವಧೂ ಎಂದು ಸ್ವೀಕರಿಸಿ ವಿವಾಹವನ್ನು ಮಾಡಬೇಕೆಂದು ಕಂದರ ಮಾಲಿಯ ಹಾಗೂ ನಮ್ಮೆಲ್ಲರ ಅಪೇಕ್ಷೆ ಇದೆ. ಅದನ್ನು ತಾವು ಒಪ್ಪಿ ಆ ಕಾರ್ಯವನ್ನು ನೆರವೇರಿಸಿಕೊಡಬೇಕು. ಯಕ್ಷ ಕುಮಾರಿಯಾದ ದಮಯಂತಿಯನ್ನು ರಾಜಕುಮಾರ ಶಕುನಿಯು ವಿವಾಹವಾಗಲಿ. ಬ್ರಹ್ಮದೇವರ ವಚನದಂತೆ ನಾನು ದೇವವತಿಯನ್ನು ಪಾಣಿಗ್ರಹಣ ಮಾಡುತ್ತೇನೆ. ಇದಕ್ಕೆ ತಮ್ಮ ಅನುಮತಿ ಇದ್ದರೆ ತಾವು ಅನುಗ್ರಹಿಸಬೇಕು, ಎಲ್ಲ ಮಂಗಳಕಾರ್ಯಗಳನ್ನೂ ಯಥಾಸಾಂಗವಾಗಿ ನೆರವೇರಿಸಿ ಕೊಡಬೇಕು.''

ಇಂದ್ರದ್ಯುಮ್ನ ಮಹಾರಾಜನ ಈ ಸೂಚನೆಯನ್ನು ಋತಧ್ವಜ ಮುನಿಯು ಆನಂದದಿಂದ ಅನುಮೋದಿಸಿದನು. ಅನಂತರ ಗಾಲವ ಮುನಿಯೇ ಮೊದಲಾದ ಮಹಾಮಹರ್ಷಿಗಳು ಪುರೋಹಿತ ರಾಗಿ ಸಂತೋಷದಿಂದ ಈ ನಾಲ್ಕೂ ಒಲವಿನ ಜೋಡಿಗಳ ವಿವಾಹವನ್ನು ಹೋಮಹವನ ಮುಂತಾದ ವೇದೋಕ್ತ ವಿಧಿವಿಧಾನಪೂರ್ವಕವಾಗಿ ನೆರವೇರಿಸಿದರು. ಆ ಮದುವೆಯ ಸಂಭ್ರಮದಲ್ಲಿ ಗಂಧರ್ವರು ಹಾಡಿದರು. ಅಪ್ಸರೆಯರು ನರ್ತನ ಮಾಡಿದರು. ಈ ಎಲ್ಲ ಮುನಿ ಮಹರ್ಷಿಗಳ ನೇತೃತ್ವದಲ್ಲಿ ಹಾಟಕೇಶ್ವರನ ಸನ್ನಿಧಿಯಲ್ಲಿ ಮೊದಲು ಜಾಬಾಲಿ ಮುನಿಯು ವೇದವತಿಯನ್ನೂ, ಇಂದ್ರದ್ಯುಮ್ನನು ದೇವವತಿ ಯನ್ನೂ, ಶಕುನಿಯು ದಮಯಂತಿಯನ್ನೂ, ಸುರಥನು ಚಿತ್ರಾಂಗದೆಯನ್ನೂ ಕೈಹಿಡಿದು ಶಾಸ್ತ್ರೋಕ್ತವಾಗಿ

ವಿವಾಹ ಮಾಡಿಕೊಂಡರು. ಹೀಗೆ ಮದುವೆಯ ಮಂಗಳ ಕಾರ್ಯಕ್ರಮವು ಯಥಾ ಸಾಂಗವಾಗಿ ನೆರವೇರಿತು. ಅನಂತರ ಋತಧ್ವಜ ಮುನಿಯು ಅಲ್ಲಿ ನೆರೆದ ಇಂದ್ರಾದಿ ದೇವತೆಗಳನ್ನು ಕುರಿತು - ''ಸುರೇಶ್ವರರೇ, ನೀವು ಈ ಸಪ್ತ ಗೋದಾವರೀ ತೀರ್ಥದಲ್ಲಿ ಯಾವಾಗಲೂ ಸನ್ನಿಹಿತರಾಗಿ ಇರಬೇಕು. ವಿಶೇಷವಾಗಿ ವೈಶಾಖ ಮಾಸದಲ್ಲಿ ನಿಮ್ಮ ಹೆಚ್ಚಿನ ಸಾನ್ನಿಧ್ಯವು ಈ ತೀರ್ಥದಲ್ಲಿ ಇರುವದು ಅತ್ಯಾವಶ್ಯಕ'' ಎಂದು ಹೇಳಿದರು. ಅದಕ್ಕೆ ಎಲ್ಲ ದೇವತೆಗಳು ಸಮ್ಮತಿಸಿ ಸಂತೋಷದಿಂದ ಸ್ವರ್ಗಲೋಕಕ್ಕೆ ತೆರಳಿದರು. ಋತಧ್ವಜ ಮುನಿಯು ಮಗ ಮತ್ತು ಸೊಸೆಯನ್ನು ಕರೆದುಕೊಂಡು ಎಲ್ಲ ಮುನಿಗಳೊಡನೆ ತಮ್ಮ ಸ್ಥಾನಕ್ಕೆ ಹೋದನು. ಮೂವರು ರಾಜಕುಮಾರರು ತಮ್ಮ ತಮ್ಮ ಮಡದಿಯನ್ನು ಕರೆದುಕೊಂಡು ತಮ್ಮ ರಾಜಧಾನಿಗೆ ಹಿಂದುರುಗಿದರು. ತಮ್ಮ ನಗರಗಳಲ್ಲಿ ತಮ್ಮ ನೆಚ್ಚಿನ ಸಖಿಯರೊಡನೆ ನಲುಮೆದುಂಬಿ ಲಲ್ಲೆಗೈಯುತ್ತ ವಿವಿಧ ವಿಷಯೋಪಭೋಗ ಗಳನ್ನು ಮಾಡುತ್ತ ಎಲ್ಲ ವಿಧವಾಗಿ ಇಂದ್ರಿಯ ಸುಖವನ್ನು ಅನುಭವಿಸಿದರು.''

ಇಂತು ಕಾಮಾತುರನಾದ ದಂಡಮಹಾರಾಜನು ಶುಕ್ರಾಚಾರ್ಯರ ಮಗಳಾದ ಅರಜೆಯನ್ನು ಒಲಿಸಿಕೊಂಡು ತನ್ನ ಕಾಮವಾಸನೆಯನ್ನು ತಣಿಸಿಕೊಳ್ಳಬೇಕೆಂಬ ಉದ್ದೇಶ ದಿಂದ ಎಲ್ಲ ಕಥೆಯನ್ನು ಹೇಳಿ ಮತ್ತೆ ಮತ್ತೆ ಅವಳನ್ನು ಸ್ತುತಿಸಿ 'ತಂದೆಯ ಸಮ್ಮತಿ ಯಿಲ್ಲದೇ ತಮ್ಮ ಮನಸದನ್ನನಿಗೆ ತನ್ನ ದೇಹ ಒಪ್ಪಿಸಿದವರು ಹಿಂದಕ್ಕೆ ಏನೂ ಬಾಧಕ ವಾಗದೇ ಸುಖವಾಗಿ ಇದ್ದರು' ಎಂದು ದೃಷ್ಟಾಂತ ತೋರಿಸಿ ಅವಳನ್ನು ಪುನಃ ಪ್ರಾರ್ಥಿಸಿ ದನು - ''ಕಮಲಗಣ್ಣಿನ ಕೋಮಲೆಯೇ, ಚಿತ್ರಾಂಗದೆಯು ತನ್ನ ತಂದೆ ವಿಶ್ವಕರ್ಮನ ಸಮ್ಮತಿ ಇಲ್ಲದೇ ಸುರಥ ರಾಜಕುಮಾರನಿಗೆ ತನ್ನನ್ನು ಒಪ್ಪಿಸಿದಳು. ಅದರಿಂದ ಅವಳಿಗೆ ಏನು ಹಾನಿಯಾಯಿತು! ಏನೂ ಇಲ್ಲ. ಕೊನೆಗೆ ಅವಳು ಅದೇ ಸುರಥ ರಾಜಕುಮಾರನನ್ನು ಮದುವೆಯಾಗಿ ಸುಖದಿಂದ ನಕ್ಕುನಲಿದಾಡುತ್ತ ಬಾಳಿದಳು. ಅದರಂತೆ ನೀನಾದರೂ ನಿಮ್ಮ ತಂದೆ ಶುಕ್ರಾಚಾರ್ಯರು ಬರುವವರೆಗೆ ಕಾಯುವದು ಬೇಡ. ಕಾಮಾತುರನಾಗಿ ಕೂಡಬಂದ ನನಗೆ ನಿನ್ನನ್ನು ಸಂತೋಷದಿಂದ ಒಪ್ಪಿಸಿ ನನ್ನ ವಶಳಾಗು. ಇದರಿಂದ ಆ ಚಿತ್ರಾಂಗದೆಯಂತೆ ನಿನಗೂ ಸುಖವಾಗುವದು. ನನಗೂ ಆನಂದವಾಗುವದು'' ಎಂದು ಪರಿಪರಿಯಾಗಿ ಮಾತುಗಳನ್ನಾಡಿ ಅವಳನ್ನು ಒಲಿಸಲಿಕ್ಕೆ ಪ್ರಯತ್ನಿಸಿದನು.

ಆದರೆ ಸಂಸ್ಕಾರ ಸಂಪನ್ನಳಾದ ಆ ಬ್ರಾಹ್ಮಣಕುವರಿಯು ಈ ದಂಡ ಮಹಾರಾಜನ ಮಧುರ ಮಾತಿನ ಮೋಡಿಗೆ ಮರುಳಾಗದೇ ಖಡಾಖಂಡಿತವಾಗಿ ತನ್ನ ಆರ್ಯ ಸಂಸ್ಕಾರಕ್ಕೆ ಅನುಗುಣವಾದ ಮಾತುಗಳನ್ನು ನಿರ್ಧಾರದ ಧ್ವನಿಯಲ್ಲಿಯೇ ಇಂತು ನುಡಿದಳು.

ವಾಮನ ಮಹಾಪುರಾಣದಲ್ಲಿ ಚಿತ್ರಾಂಗದೆ ವಾನರಚೇಷ್ಟೆ ಎಂಬ೬೫ನೇಯ ಅಧ್ಯಾಯವು ಮುಗಿದುದು

—o—

**ಅರಜಾ ಉವಾಚ - ನಾತ್ಮಾನಂ ತವ ದಾಸ್ಯಾಮಿ**
**ಬಹುನೋಕ್ತೇನ ಕಿಂ ತವ ।**
**ರಕ್ಷಂತೀ ಭವತಃ ಶಾಪಾದಾತ್ಮಾನಂ ಚ ಮಹೀಪತೇ ॥**

ಅರಜೆಯು ದಂಡನಿಗೆ ''ಹೆಚ್ಚು ಮಾತನಾಡುವದರಿಂದ ಏನು ಪ್ರಯೋಜನ? ನೀನು ಹಾಗೂ ನಾನು ಶಾಪಕ್ಕೆ ಗುರಿಯಾಗಬಾರದೆಂಬ ಉದ್ದೇಶದಿಂದ ನನ್ನನ್ನು ನಾನು ಎಂದೂ ಕಾಮಾಂಧನಾದ ನಿನಗೆ ದಾನ ಮಾಡಲಾರೆ'' ಎಂದು ಖಂಡಿತವಾಗಿ ಉತ್ತರಿಸಿದಳು. ಹೀಗೆಂದು ಪ್ರಲ್ಹಾದನು ತನ್ನ ಬಂಧುವಾದ ಅಂಧಕನಿಗೆ ಮುಂದಿನ ವೃತ್ತಾಂತವನ್ನೆಲ್ಲ ವಿವರಿಸಿದನು. ''ದಂಡನು ಕಾಮೋದ್ರಿಕ್ತನಾಗಿ ಮದಾಂಧನಾದುದರಿಂದ ಅವಳ ಇಚ್ಛೆಯ ವಿರುದ್ಧವಾಗಿ ಬಲಾತ್ಕಾರದಿಂದ ಅರಜೆಯನ್ನು ವಶಪಡಿಸಿಗೊಂಡು ಅವಳನ್ನು ಭ್ರಷ್ಟಳನ್ನಾಗಿ ಮಾಡಿದನು. ಅವನ ಸಂಪರ್ಕದಿಂದ ಅರಜೆಯು ಶುಕ್ಲಸಂಪರ್ಕವನ್ನು ಹೊಂದಿ ನಾಚಿಕೆಯಿಂದ ಅಧೋಮುಖಳಾಗಿ ಆಶ್ರಮದ ಹೊರಗೆ ನಿಂತು ತನ್ನ ತಂದೆಯನ್ನು ಸ್ಮರಿಸಹತ್ತಿದಳು. ಆಗ ಅವಳು ಮಹಾಗ್ರಹದಿಂದ ಗ್ರಸ್ತಳಾದ ಚಂದ್ರಪತ್ನಿಯಾದ ರೋಹಿಣಿಯಂತೆ ಕಂಡಳು.

ಕೆಲವು ಕಾಲವಾದ ನಂತರ ಯಜ್ಞಕಾರ್ಯಗಳನ್ನು ಮುಗಿಸಿ ಶುಕ್ರಾಚಾರ್ಯರು ಆಶ್ರಮಕ್ಕೆ ಹಿಂತಿರುಗಿದರು. ಬಂದೊಡನೆಯೇ ಮಗಳ ಮುಖಕಾಂತಿಯನ್ನು ನೋಡಿ ಪ್ರಶ್ನೆ ಕೇಳಿದರು. ''ಯಾರಿಂದ ನಿನಗೆ ಅವಮಾನವಾಗಿದೆ? ನಿನ್ನನ್ನು ಭ್ರಷ್ಟಳನ್ನಾಗಿ ಮಾಡಿದ ಪಾಪಿಯು ಎಲ್ಲಿ ಇರುವನು?'' ಎಂದು. ತಂದೆಯ ಈ ಪ್ರಶ್ನೆಗೆ ಅರಜೆಯು ಭಯದಿಂದ ನಡುಗುತ್ತ ಲಜ್ಜೆಯಿಂದ ತಲೆತಗ್ಗಿಸಿ ನುಡಿದಳು. ''ನಿನ್ನ ಶಿಷ್ಯನಾದ ದಂಡನು ನಾನು ಬೇಕಾದಷ್ಟು ಪ್ರತಿರೋದಿಸಿದರೂ ಬಲಾತ್ಕಾರದಿಂದ ಈ ದೋಷಕ್ಕೆ ನನ್ನನ್ನು ಗುರಿಮಾಡಿದನು.'' ಪುತ್ರಿಯ ಮಾತನ್ನು ಕೇಳಿ ಕೋಪದಿಂದ ಕೆಂಪು ಕಣ್ಣಿನವನಾದ ಶುಕ್ರಾಚಾರ್ಯನು ಆಚಮನದಿಂದ ಶುದ್ಧನಾಗಿ ಶಾಪವಚನವನ್ನಿತ್ತನು.

''ನನ್ನ ಪುತ್ರಿಯಾದ ಅರಜೆಯನ್ನು ಧರ್ಮಭ್ರಷ್ಟಳನ್ನಾಗಿ ಮಾಡಿದ ಅವಿನೀತನಾದ ದಂಡನು ಇನ್ನು ಏಳು ದಿನಗಳಲ್ಲಿ ರಾಷ್ಟ್ರ, ಬಲ, ವಾಹನ, ಸಮೇತನಾಗಿ ಭಸ್ಮವಾಗಲಿ.'' ಅನಂತರ ಶುಕ್ರಾಚಾರ್ಯರು ''ಎಲೈ ಪುತ್ರಿಯಾದ ಅರಜೆಯೇ, ನೀನು ಈ ಪಾಪದ ವಿಮೋಚನೆಗಾಗಿ ಇಲ್ಲಿಯೇ ತಪಸ್ಸನಾಚರಿಸುತ್ತಿರು. ದಂಡನಿಗೆ ಉಗ್ರವಾದ ಶಾಪವನ್ನಿತ್ತು ನಾನು ಪುನಃ ಪಾತಾಲಲೋಕಕ್ಕೆ ಹೋಗುವೆನು'' ಎಂದು ಹೇಳಿದರು. ಇತ್ತ ದಂಡನು ಆಚಾರ್ಯನ ಶಾಪದಿಂದ ಏಳು ದಿನಗಳಲ್ಲಿ ರಾಷ್ಟ್ರ ಬಲಸಮೇತ ನಾಗಿ ಭಸ್ಮವಾದನು. ಅಂದಿನಿಂದ ದೇವತೆಗಳು ಈ ಸ್ಥಾನವು ದಂಡಕಾರಣ್ಯವಾದುದರಿಂದ ತ್ಯಜಿಸಿದರು. ಇದು ರಾಕ್ಷಸರ ಆವಾಸಸ್ಥಾನವಾಯಿತು. ಹೀಗೆ ಪರಸ್ತ್ರೀಯರು ಅವಮಾನಿತರಾಗಿ ರಾಷ್ಟ್ರದ ನಾಶಕ್ಕೆ ಕಾರಣೀಭೂತರಾಗುವರು. ಆದುದರಿಂದ ಎಲೈ ಅಂಧಕಾಸುರನೇ, ಈ ವಿಧವಾದ ದುರ್ಬುದ್ಧಿಯನ್ನು ಮಾಡ ಬೇಡ. ಪ್ರಾಕೃತಸ್ತ್ರೀಯೂ ತನ್ನ ಶಕ್ತಿಯಿಂದ ಈ ರೀತಿ ದಹಿಸುವದಾದರೆ ಅಪ್ರಾಕೃತಳಾದ ಆ ಪಾರ್ವತಿಯು ಯಾವ ರೀತಿ ನಿನ್ನ ಅನಾಹುತಕ್ಕೆ

ಕಾರಣಳಾದಾಳು ಎಂಬುದನ್ನು ತರ್ಕಿಸು. ಶಂಕರನೇನು ಸಾಮಾನ್ಯನಲ್ಲ, ಸುರಾಸುರರೂ ಸಹ ಅವನನ್ನು ನೋಡಿ ಗಡಗಡ ನಡುಗುತ್ತಾರೆ. ಅವನೊಡನೆ ಯುದ್ಧ ಮಾಡುವದಂತೂ ದೂರದ ಕಥೆ.'' ಹೀಗೆ ಪ್ರಲ್ಹಾದನು ಹಿತವಚನಗಳನ್ನು ಹೇಳಿದೊಡನೆ ಅಂಧಕನು ಕೋಪದಿಂದ ಕಣ್ಣು ಕೆಂಪು ಮಾಡಿದನು ಹಾಗೂ ಅಹಂಕಾರದಿಂದ ಹೇಳಿದನು.

''ಎಲೈ ಪ್ರಲ್ಹಾದನೇ, ನನ್ನ ಸಾಮರ್ಥ್ಯದೆದುರು ಈ ಶಂಕರನದೇನು? ಎಲ್ಲೋ ಅಮಂಗಲವಾಗಿ ಬೂದಿ ಬಳಿದುಕೊಂಡು ಒಬ್ಬಂಟಿಗನಾಗಿ ವಾಸಿಸುವ ಶಂಕರನ ಶಕ್ತಿಯು ನನ್ನ ಮುಂದೆ ನಡೆಯಲಾರದು. ಇಂದ್ರಾದಿದೇವತೆಗಳನ್ನೂ ಕೂಡ ಹೂಂಕಾರದಿಂದ ದೂರೋಡಿಸಬಲ್ಲ ನನ್ನ ಎದುರಿನಲ್ಲಿ ಈ ಎತ್ತು ಹತ್ತಿದ ಹರನು ಏನು ತಾನೇ ಮಾಡಿಯಾನು!'' ಹೀಗೆ ಹರನಿಂದಾ ಪರವಾದ ಕಠೋರವಾದ ಮಾತುಗಳನ್ನು ಕೇಳಿ ಪ್ರಲ್ಹಾದನು ಅಂಧಕನಿಗೆ ಅಂದನು- ''ನ್ಯಾಯಯುತವಾದ ಈ ಮಾತು ನಿನಗೆ ಹೇಗೆ ತಾನೇ ಸರಿ ಬಂದಿತು? ಆ ಹರನ ಮುಂದೆ ನಿನ್ನ ಶಕ್ತಿಯೇನು? ಸಿಂಹ ನರಿಗಳು, ಅಗ್ನಿ ಪತಂಗಗಳು, ಆನೆ ಸೊಳ್ಳೆಗಳು, ಹೇಗೆ ದೊಡ್ಡ ಅಂತರವನ್ನು ಹೊಂದುವವೋ ಹಾಗೆಯೇ ನಿಮ್ಮಿಬ್ಬರಲ್ಲಿ ಮಹದಂತರ ಉಂಟು. ನೀನೇನೋ ಶೂರನಾಗಿರಬಹುದು. ಆದರೆ ಪರದೈವನಾದ ಶಿವನ ಮುಂದೆ ನಿನ್ನ ಆಟ ನಡೆಯಲಾರದು. ಆದುದರಿಂದಲೇ ನಾನು ನಿನ್ನನ್ನು ಬಾರಿ ಬಾರಿಗೂ ತಡಯುತ್ತಲಿದ್ದೇನೆ.

ಈ ವಿಷಯದಲ್ಲಿ ಅಸಿತ ಮಹರ್ಷಿಯ ಒಂದು ವಾಕ್ಯವಿದೆ, ಅದನ್ನು ಕೇಳು. ಯಾವನು ಕಾಮಕ್ರೋಧಾದಿಗಳನ್ನು ತ್ಯಜಿಸಿ ಪರಾಙ್ಮುಖನಾಗಿ ಧರ್ಮಶೀಲನಾಗಿರುವನೋ ಅವನಿಗೆ ಜಗತ್ತಿನಲ್ಲಿ ಯಾವ ಭಯವೂ ಇರುವದಿಲ್ಲ. ಇದರ ವಿರುದ್ಧವಾಗಿ ಯಾವನು ಕಲಹಪ್ರಿಯನೋ, ಪರಸಂಪತ್ತು ಹಾಗೂ ಪರಸ್ತ್ರೀಯರಲ್ಲಿ ಲೋಭವಿಟ್ಟಿರುವನೋ ಅಂಥ ಧರ್ಮಭ್ರಷ್ಟನಾದ ಮನುಷ್ಯನಿಗೆ ಇಹಪರಗಳಲ್ಲಿ ಸುಖಲೇಶವೂ ದೊರೆಯಲಾರದು. ಪೂಜ್ಯನಾದ ಪ್ರಭಾಕರನು ಧರ್ಮದಿಂದ ಬದುಕಿದನು. ವಾರುಣೀ ಎಂಬ ಮುನಿಯು ಸಿಟ್ಟನ್ನು ಬಿಟ್ಟು ಶಾಂತಿಯಿಂದ ಬದುಕಿದನು.

ಸೂರ್ಯಪುತ್ರನಾದ ಮನುವು ವಿದ್ಯೆಯಿಂದ ವಿನೀತನಾಗಿ ಬದುಕಿದನು. ಅಗಸ್ತ್ಯನು ಸ್ವಸ್ತ್ರೀಯಲ್ಲಿ ಸಂತುಷ್ಟನಾದನು. ಇದು ಪರಂಪರಾಗತವಾಗಿರುವ ಸದಾಚಾರವು. ಹಿಂದಿನ ಋಷಿಗಳು ಸದಾಚಾರದಿಂದಲೇ ಶಾಪಾನುಗ್ರಹ ಸಮರ್ಥರಾಗಿದ್ದರು. ಏತದ್ ವಿರುದ್ಧವಾಗಿ ಉದ್ದಮಿತನೆಂಬ ಅರಸನು ಅಧರ್ಮವನ್ನಾಚರಿಸಿದ್ದರಿಂದ, ವಿಭುವೆಂಬ ದೊರೆಯು ಕಲಹ ಪ್ರಿಯತೆಯಿಂದ, ದುರಾತ್ಮನಾದ ನಮುಚಿಯು ಪರಪೀಡೆಯಿಂದ, ಸನಕನೆಂಬ ರಾಜನು ಗರ್ವದಿಂದ ನಾಶ ಹೊಂದಿದರು. ಹಾಗೆಯೇ ಹಿರಾಣ್ಯಾಕ್ಷನು ಹಾಗೂ ಅವನ ತಮ್ಮನೂ, ಯದು, ಮೊದಲಾದ ಇನ್ನೊಬ್ಬರ ಸ್ವತ್ತನ್ನು ಆಶಿಸಿ ನಾಶಹೊಂದಿದರು. ಆದುದರಿಂದ ಸದ್ಧರ್ಮವನ್ನು ಬಿಡಬಾರದು. ಧರ್ಮಹೀನರಾದವರು ನರಕಕ್ಕೆ ಹೋಗುತ್ತಾರೆ. ಧರ್ಮವೇ ನಿಜವಾದ ಸುಖಕ್ಕೆ ಸಾಧನ. ಆದುದರಿಂದ ಅಧರ್ಮಕ್ಕೆ ಸಾಧನವಾದ ಪರಸ್ತ್ರೀ ಸೇವೆಯನ್ನು ಸರ್ವಥಾ ತ್ಯಾಗಮಾಡು. ಪರದಾರ ವರ್ಜನವೆಂಬ ಧರ್ಮವು ಪರಮಧರ್ಮವು. ಈ ರೀತಿಯಾದ ಕುಕರ್ಮವನ್ನು ತ್ಯಜಿಸಿ ನೀನು ಧರ್ಮವನ್ನು ಅವಲಂಬಿಸು.''

ಹೀಗೆ ವಿಧವಿಧವಾಗಿ ಹೇಳಿದ ಪ್ರಲ್ಹಾದನ ಮಾತುಗಳನ್ನು ಕೇಳಿ ಅಂಧಕನು ''ನೀನೊಬ್ಬನೇ ಧರ್ಮಪರನಾಗಿರು, ನಾನು ಅಂತಹ ಧರ್ಮವನ್ನಾಚರಿಸುವದಿಲ್ಲ'' ಎಂದನು. ಸಮೀಪದಲ್ಲಿಯೇ ಇರುವ ಶಂಬರನಿಗೆ ಆದೇಶಮಾಡಿದನು. ''ನನ್ನ ಆಜ್ಞೆಯಂತೆ ನೀನು ಶಂಕರನ ಹತ್ತಿರ ಹೋಗು. ನನ್ನ ಸಂದೇಹವನ್ನು ಮುಟ್ಟಿಸು - ವಿಲಾಸಗಳಿಗೆ ಯೋಗ್ಯವಾದ, ಸ್ವರ್ಗಸದೃಶವಾದ ಈ ಮಂದರಪರ್ವತದಲ್ಲಿ ಬೈರಾಗಿಯಾದ ನೀನು ಏಕೆ ವಾಸಮಾಡುವಿ? ಇದನ್ನು ನಿನಗೆ ಕೊಟ್ಟವರಾರು? ಹೇಳು. ಇಂದ್ರನೇ ಮೊದಲಾದ ದೇವತೆಗಳು ನನ್ನ ಆಜ್ಞಾಧೀನರಾಗಿರುವಾಗ ನನ್ನ ಆಜ್ಞೆಯ ವಿರುದ್ಧವಾಗಿ ಈ ಮಂದರ ಪರ್ವತದಲ್ಲಿ ಏಕೆ ವಾಸಿಸುತ್ತಿರುವಿ ? ವಾಸಿಸುವದೇ ನಿನಗೆ ಇಷ್ಟವಾಗಿದ್ದರೆ ನಿನ್ನ ಪತ್ನಿಯಾದ ಪಾರ್ವತಿಯನ್ನು ನನಗೆ ಶೀಘ್ರವಾಗಿ ತಂದೊಪ್ಪಿಸು.''

ಹೀಗೆ ಅಂಧಕನಿಂದ ಆಜ್ಞೆಯನ್ನು ಪಡೆದ ಶಂಬರನು ಮಂದರ ಪರ್ವತಕ್ಕೆ ತೆರಳಿದನು. ದೇವಿಯೊಡನೆ ಇರುವ ಶಂಕರನಿಗೆ ಈ ಸಂದೇಶವನ್ನು ಹೇಳಿದನು. ಆಗ ಕೂಡಲೇ ಗಿರಿಸುತೆಯಾದ ಪಾರ್ವತಿಯು ಉತ್ತರವಿತ್ತಳು, ''ಇಂದ್ರನು ಈ ಮಂದರಪರ್ವತವನ್ನು ನನಗೆ ಕೊಟ್ಟಿದ್ದಾನೆ. ಅದನ್ನು ಬಿಟ್ಟುಕೊಡಲು ಸಾಧ್ಯವಿಲ್ಲ.'' ಅನಂತರ ಶಂಕರನು ಹೇಳಿದನು, ''ಪಾರ್ವತಿಯು ತನ್ನ ಇಚ್ಛೆ ಇದ್ದರೆ ಬೇಕಾದವರನ್ನು ಸೇರಬಹುದು. ಇವಳ ಪತಿಯಾಗಲು ನಾನೇ ಸಮರ್ಥನಾಗಿರುವೆನು.'' ಆ ಸಮಯದಲ್ಲಿ ಪಾರ್ವತಿಯೂ ಸಹ ಜೋರಿನಿಂದ ಉತ್ತರಿಸಿದಳು. ''ಇದುವೇ ನನಗೂ ಕೂಡ ಸಮ್ಮತವಾದ ಮಾತು. ನಾನು ಪದಾತಿಯಾಗಿ ಯುದ್ಧರಂಗದಲ್ಲಿ ಬರುವೆನು. ನೀನು ದೊರೆಯಾದುದರಿಂದ ಬೇಕಾದ ವಾಹನವೇರಿ ಬರಬಹುದು.

ಪ್ರಾಣವನ್ನೇ ಪಣವಾಗಿಟ್ಟು ಯುದ್ಧದ್ಯೂತವನ್ನು ನಾವು ಆಡೋಣ. ಯಾರು ಜಯಿಸುವರೋ ಅವರು ತಮ್ಮ ಇಷ್ಟವನ್ನು ಹೊಂದುವವರು. ನೀನು ಪ್ರಾಣವನ್ನು ನೀಗುವಿ. ಶೇಖರನೇ ನನಗೆ ಪತಿಯಾಗಲು ಅರ್ಹನು.'' ವ್ಯಂಗ್ಯಾರ್ಥ ಸಮೇತವಾದ ಈ ಸಂದೇಹವನ್ನು ಶಂಬರನು ಅಂಧಕನಿಗೆ ತಂದು ಮುಟ್ಟಿಸಿದನು. ಈ ಮಾತನ್ನು ಕೇಳಿದೊಡನೆಯೇ ಅಂಧಕನ ಕಣ್ಣುಗಳಿಂದ ಕಿಡಿಗಳು ಹಾರತೊಡಗಿದವು. ದುರ್ಯೋಧನನೆಂಬ ಮತ್ತೊಬ್ಬ ದಾನವನನ್ನು ಕರೆಯಿಸಿ ''ಶೂರನೇ, ಗರ್ವಶೀಲಳಾದ ಸ್ತ್ರೀಯನ್ನು ದಮನ ಮಾಡಲು ಹೊರಡಬೇಕಾಗಿದೆ. ಯುದ್ಧಸನ್ನಾಹ ಸೂಚಕವಾದ ದೃಡವಾದ ಭೇರಿಯನ್ನು ಬೇಗನೇ ಮೊಳಗಿಸು.'' ಹಾಗೆ ಅಪ್ಪಣೆಯನ್ನು ಹೊಂದಿದ ದುರ್ಯೋಧನನು ತನ್ನ ಬಲವನ್ನೆಲ್ಲ ಪ್ರಯೋಗಿಸಿ ಭೇರಿಯನ್ನು ಹೊಡೆದನು. ಘೋರವಾದ ಯುದ್ಧನಾದವು ಎಲ್ಲೆಡೆಗೂ ಸೇರಿತು. ಎಲ್ಲ ಅಸುರರು ಧ್ವನಿ ಕೇಳಿ ಇದೇನೆಂದು ಕೇಳುತ್ತ ರಾಜಸಭೆಗೆ ಬಂದರು. ಸೇನಾಪತಿಯು ವೃತ್ತಾಂತವನ್ನೆಲ್ಲ ಎಲ್ಲರಿಗೂ ತಿಳಿಯಪಡಿಸಿದನು. ದಾನವರೆಲ್ಲರೂ ಯುದ್ಧ ಸಾಮುಗ್ರಿಗಳಿಂದ ಕೂಡಿ ಕುದುರೆ, ರಥ ಮೊದಲಾದ ವಾಹನ ಗಳೊಂದಿಗೆ ಅಂಧಕನೊಡನೆ ಹೊರಟರು. ಅಂಧಕನೂ ಸಹ ಒಂದು ದೊಡ್ಡರಥದಲ್ಲಿ ಕುಳಿತು ಪರಶಿವನನ್ನು ಪರಾಜಯ ಗೊಳಿಸುವ ದೃಢನಿಶ್ಚಯದಿಂದ ಹೊರಟನು.

ಅವನ ಸಂಗಡ ಜಂಭ, ಕುಜಂಭ, ಹುಂಡ, ತುಹುಂಡ, ಶಂಬರ, ಬಲಿ, ಬಾಣ, ಕಾರ್ತಸ್ವರ, ಮಹೋದರ, ಅಯಃಶಂಕು, ಶಾಲಿ, ವೃಷಪರ್ವ, ವಿರೋಚನ, ಹಯಗ್ರೀವ, ಕಾಲನೇಮಿ, ವೃಕ್ಷ, ದುರ್ಯೋಧನ, ವಿಪಾಶ, ಕಾಲ ಮೊದಲಾದ ಮಹಾವೀರರು ನಾನಾಯುಧಧಾರಿಗಳಾಗಿ ಹೊರಟರು. ಹೀಗೆ ಅಂಧಕನು ಕಾಲಪಾಶಕ್ಕೆ ಅಧೀನನಾಗಿ ಶಂಕರನೊಡನೆ ಯುದ್ಧ ಮಾಡಲು ಮಂದರಪರ್ವತಕ್ಕೆ ಹೊರಟನು.

ವಾಮನ ಮಹಾಪುರಾಣದಲ್ಲಿ ಅಂಧಕನ ಅಂಧಪ್ರಜ್ಞೆ ಎಂಬ ೬೬ನೇಯ ಅಧ್ಯಾಯವು ಮುಗಿದುದು



## ಹರನಲ್ಲಿರುವ ಹರಿ

ಅಧ್ಯಾಯ - ೬೭

೧. ಹರೋಽಪಿ ಸಮರಾಸನ್ನಃ ಸಮಾಹೂಯಾಥ ನಂದಿನಮ್ ।
ಪ್ರಾಹ ಮಂತ್ರಯ ಶೈಲಾದ್ಯಾನ್ ಯೇ ಸ್ಥಿತಾಸ್ತವ ಶಾಸನೇ ॥

ಇತ್ತ ಶೇಖರನೂ ಕೂಡ ಯುದ್ಧದ ತಯಾರಿ ನಡೆಸಿದನು. ನಂದಿಯನ್ನು ಕರೆದು ಶೈಲಾದಿಗಳೊಡನೆ ಮಂತ್ರಾಲೋಚನೆ ಮಾಡಲು ಆದೇಶ ಕೊಟ್ಟನು. ಈಶ್ವರನ ಆಜ್ಞೆಯಂತೆ ನಂದಿಯು ಲಗುಬಗೆಯಿಂದ ಶುದ್ಧಾಚಮನ ಮಾಡಿ ಗಣನಾಯಕ ರೆಲ್ಲರನ್ನೂ ಸ್ಮರಿಸಿದನು. ಕೂಡಲೇ ಸಾವಿರಾರು ಗಣಾಧಿಪತಿಗಳು ಶಿವನ ಎದುರು ಬಂದು ನಮಸ್ಕರಿಸಿ ನಿಂತರು. ಆಗ ನಂದಿಯು ಅಂದನು -

''ಶಂಭುವೇ, ತ್ರಿನೇತ್ರರಾಗಿ ಜಟಾಧಾರಿಗಳಾಗಿ ನಿಂತಿರುವ ಇವರೆಲ್ಲರೂ ಹನ್ನೊಂದು ಕೋಟಿ ಸಂಖ್ಯೆಯುಳ್ಳ ರುದ್ರರೆಂದು ಪ್ರಸಿದ್ಧಿ ಹೊಂದಿರುವರು. ಇವರೊಡನೆ ಪರಾಕ್ರಮಶಾಲಿಗಳಾದ ಸಿದ್ಧರು ಜೊತೆಗಾರರಾಗಿರುವರು. ಷಣ್ಮುಕರಾಗಿರುವ ಶಕ್ತಿಧಾರಿ ಗಳಾಗಿರುವ ಇವರೂ ಹಾಗೂ ನಿನ್ನ ಎದುರಿಗೆ ನಿಂತ ಮತ್ತೆ ಕೆಲವರೂ ಅರವತ್ತಾರು ಕೋಟಿ ಸಂಖ್ಯೆಯುಳ್ಳ ಸ್ಕಂದರೆಂದು ತಿಳಿ. ಇವರೆಲ್ಲರೂ ಮಯೂರಧ್ವಜರಾಗಿರುವರು. ಇವರಷ್ಟೇ ಸಂಖ್ಯೆಯ ಶಾಖನಾಮಕರಾದ ಷಡಾನನರೂ ಇರುವರು. ಇದಲ್ಲದೇ ಪ್ರಮಥೋತ್ತಮರು ಏಳುನೂರು ಕೋಟಿ ಸಂಖ್ಯೆಯುಳ್ಳವರಾಗಿದ್ದಾರೆ. ಇವರು ನಿನ್ನ ಭಕ್ತರಾದುದರಿಂದ ಭಸ್ಮಧಾರಣ ಮಾಡಿದವರೂ, ತ್ರಿನೇತ್ರರೂ, ಶೂಲಧಾರಿಗಳೂ ಆಗಿರುವರು. ಇದೂ ಅಲ್ಲದೇ ಪಿನಾಕಧಾರಿಗಳೂ ಕೂಡಾ ಆಗಿರುವರು. ಈಗ ಕೈಯಲ್ಲಿ ಯೋಗದಂಡಧಾರಿಗಳಾಗಿ ಶೌರ್ಯದಿಂದ ಯುದ್ಧ ಮಾಡಲು ಬಂದಿರುವರು. ಇವರಲ್ಲಿ ಕೆಲವರು ದಿಗಂಬರರಾಗಿಯೂ, ಜಟಾಧಾರಿಗಳಾಗಿಯೂ ಇರುವರು. ಇವರೆಲ್ಲರೂ ಪಾಶುಪತವೆಂಬ ಪ್ರಸಿದ್ಧಿಯಿಂದ ವಿಷ್ಣು ಹಾಗೂ ಶಿವ ಇವರಿಬ್ಬರ ನಿನ್ನ ರೋಮದಿಂದ ಉತ್ಪನ್ನರಾದ ಮತ್ತೊಂದು ಗಣವೂ ಕೂಡ ವಿಶಾಲವಾದದ್ದು ಇದೆ. ಇವರೆಲ್ಲರೂ ಸಿಂಹ ಮುಖದವರು. ಇವರನ್ನೆಲ್ಲ ಪ್ರೀತಿಯಿಂದ ಅನುಗ್ರಹಿಸಿ ಉಚಿತವಾದ ಕಾರ್ಯದಲ್ಲಿ ಇವರನ್ನು ತೊಡಗಿಸು.'' ಅನಂತರ ಶಂಕರನ ಗಣಗಳೆಲ್ಲವೂ ನಂದಿಯಿಂದ ಸತ್ಕೃತರಾಗಿ ತಮ್ಮ ತಮ್ಮ ಸ್ಥಳದಲ್ಲಿ ಕುಳಿತುಕೊಂಡರು. ಆಗ ಶಂಕರನು ತನ್ನ ಭಕ್ತರನ್ನೆಲ್ಲ ನೋಡಿ ಅವರನ್ನು ಪ್ರೀತಿಯಿಂದ ಬಿಗಿದಪ್ಪಿ ಸ್ನೇಹಭಾವವನ್ನು ತೋರಿಸಿದನು. ಅವರು

ಶಂಕರನಿಗೆ ಪ್ರಣಾಮ ಮಾಡಿದರು ಮತ್ತು ವಿಸ್ಮಯದ ದೃಷ್ಟಿಯಿಂದ ಶಂಕರನ ಕಡೆ ನೋಡಿದರು. ಅವರ ಭಾವವನ್ನು ತಿಳಿದ ನಂದಿಯು ನಗುತ್ತಾ ಶೂಲಪಾಣಿಯಾದ ಶಂಕರನನ್ನು ಕುರಿತು ನುಡಿದನು - ''ಎಲೈ ಮಹೇಶ್ವರನೇ, ನೀನು ಪ್ರೀತಿಯಿಂದ ಆಲಿಂಗನ ಕೊಟ್ಟದ್ದು ಎಲ್ಲ ಪಾಶುಪತರಿಗೆ ಆಶ್ಚರ್ಯವಾಗಿದೆ. ಅದರಿಂದ ಅವರು ಗೌರವವನ್ನನುಭವಿಸುತ್ತಿದ್ದಾರೆ. ಇಂಥ ಅನುಗ್ರಹಕ್ಕೆ ಪಾತ್ರರಾಗಬೇಕಾದರೆ ಅವರ ಸ್ವರೂಪವೆಂಥದು ಹೇಳಬೇಕು.''

ನಂದಿಯು ಹೀಗೆ ಪ್ರಾರ್ಥಿಸಲು ಶಂಕರನು ನುಡಿದನು, ''ಭಕ್ತಿಯುಕ್ತರಾದ ನೀವುಗಳು ಶುದ್ಧವಾದ ಮನಸ್ಸಿನಿಂದ ಶಿವನನ್ನು ಪೂಜಿಸಿದ್ದೀರಿ. ಆದರೆ ಅಹಂಕಾರದಿಂದ ಮೂಢರಾಗಿ ನಿಜವಾದ ಅಂಶವನ್ನರಿಯದೇ ವಿಷ್ಣುವನ್ನು ನಿಂದಿಸಿದ್ದೀರಿ. ನಿಮ್ಮ ಜ್ಞಾನವು ವಿಷ್ಣುವಿಗೂ ನನಗೂ ಇರುವ ಸಾಮ್ಯವನ್ನು ನಿರಾಕರಿಸುತ್ತದೆ. ವಾಸ್ತವವಾಗಿ ವಿಚಾರಿಸಿದ್ದಲ್ಲಿ ಶಿವ ವಿಷ್ಣುವೆಂದು ಭೇದವು ನಮ್ಮಲ್ಲಿಲ್ಲವೆಂದು ತಿಳಿಯಬೇಕಾಗಿದೆ. ಆದುದರಿಂದ ಈ ವಸ್ತು ತತ್ವವನ್ನು ತಿಳಿದ ಪುರುಷಶ್ರೇಷ್ಠರು ಮಹಾಪಾಶುಪತರು. ಅವರು ಸರಿಯಾದ ಜ್ಞಾನವನ್ನು ಮಾಡಿಕೊಂಡಿದ್ದಾರೆ. ಆದುದರಿಂದ ಉಭಯ ಚಿನ್ಹೆಗಳನ್ನು ಧರಿಸುತ್ತಿದ್ದಾರೆ. ಆದುದರಿಂದ ಮೂಢರಾದ ನಿಮಗೆ ಜ್ಞಾನವು ನಷ್ಟವಾಗಿದೆ. ಇಲ್ಲಿ ಸರ್ವತ್ರದಲ್ಲಿಯೂ ವ್ಯಾಪ್ತವಾದ ಭಗವಂತನ ಸ್ವರೂಪವೇ ಶಿವ, ವಿಷ್ಣು ಎಂಬ ಭಿನ್ನ ಭಿನ್ನ ಹೆಸರನ್ನು ಪಡೆಯುವದು ಎಂದು ತಿಳಿಯತಕ್ಕದ್ದು.''

ಮಹೇಶ್ವರನು ಈ ರೀತಿ ಹೇಳಲಾಗಿ ಕೆಲವು ಗಣದವರು ಪ್ರಶ್ನಿಸಿದರು. ''ಜ್ಞಾನದಿಂದ ನಿರ್ಮಲನಾದ, ಸ್ಫಟಿಕದಂತೆ ಪರಿಶುದ್ಧನಾದ ನೀನು ಕಾಡಿಗೆಯಂತೆ ಕಪ್ಪಾಗಿರುವ ವಿಷ್ಣುವಿನೊಡನೆ ಐಕ್ಯ ಹೊಂದಿರುವದು ಹೇಗೆ ಸರಿಹೋದೀತು?'' ಆಗ ಹರನು ನಗುತ್ತಾ ಗಂಭೀರವಾಗಿ ಉತ್ತರಿಸಿದನು, ''ಈ ನಿಮ್ಮ ತತ್ವ ಜಿಜ್ಞಾಸೆಯು ನಿಮ್ಮ ಅಭಿವೃದ್ಧಿಗೆ ಕಾರಣವಾಗಲಿ. ಈ ತತ್ವಜ್ಞಾನವು ಸಾಧಾರಣ ಜನರಿಗೆ ಹೇಳಲು ಅರ್ಹವಾಗದಿದ್ದರೂ ಲೋಕಾಪವಾದದ ಭಯದಿಂದ ರಹಸ್ಯವಾಗಿದ್ದರೂ ನಾನು ಅದನ್ನು ನಿಮಗೆ ತಿಳಿಸುತ್ತೇನೆ, ಕೇಳಿರಿ. ವಿಷ್ಣುವಿನಲ್ಲಿಯೂ ನನ್ನಲ್ಲಿಯೂ, ಒಬ್ಬ ಪರಮಾತ್ಮನನ್ನೇ ಚಿಂತಿಸುವದರಿಂದ ನನಗೆ ಸಂತೋಷವಾಗುತ್ತದೆ. ಇದನ್ನು ಚೆನ್ನಾಗಿ ನೀವು ಭಾವಿಸಿರಿ, ಹೀಗೆ ಭಾವನೆಯಿಂದ ನಿರುಕಿಸಿದ ನನ್ನ ಮೂರ್ತಿಯನ್ನು ಹಾಲು, ತುಪ್ಪ ಮೊದಲಾದವುಗಳಿಂದ ಅಭಿಷೇಕ ಮಾಡಿರಿ. ಈ ಭಾವನೆ ಇಲ್ಲದೇ ಯಾವ ಉತ್ತಮ ಪೂಜಾದ್ರವ್ಯಗಳಿಂದ ಪೂಜಿಸಿದರೂ ನನಗೆ ಪ್ರೀತಿಯುಂಟಾಗಲಾರದು. ಗರಗಸದಿಂದ ನನ್ನ ಛೇದನ ಮಾಡಿದರೂ ಅಲ್ಲಿ ಸನಾತನನಾದ ವಿಷ್ಣುವನ್ನು ನೀವು ಕಾಣುವಿರಿ.

೨. ಯತ್ನಾತ್ ಕ್ರಕಚಮಾದಾಯ ಛಿಂದಧ್ವಂ ಮಮ ವಿಗ್ರಹಂ
ತಥಾಪಿ ದೃಶ್ಯತೇ ವಿಷ್ಣುಃ ಮಮ ದೇಹೇ ಸನಾತನಃ ॥

ಇದರಿಂದ ದೇವರ ವ್ಯಾಪ್ತಿಯು ತಿಳಿಯುತ್ತದೆ. ಹರಭಕ್ತ, ವಿಷ್ಣುಭಕ್ತರಲ್ಲಿ ಭೇದವನ್ನು ಎಣಿಸಬಾರದು. ಅವರಲ್ಲಿ ಉಚ್ಚ ನೀಚ ಭಾವವಿಲ್ಲ. ಇಂತಹ ಭೇದಜ್ಞಾನದಿಂದ ನಿಮ್ಮನ್ನು ನರಕಕ್ಕೆ ಬೀಳದಂತೆ ತಪ್ಪಿಸಲು ಈಗ ಉಪದೇಶ ಮಾಡಲು ಹೊರಟಿರುವೆನು.

ಜಗನ್ನಾಥನಾಗಿಯೂ, ಸುಂದರ ರೂಪನಾಗಿಯೂ ಇರುವ ಆ ವಿಷ್ಣುವಿನ ನಿಂದೆಯು ನಿಮ್ಮ ನರಕ ಪಾತಕ್ಕೆ ಕಾರಣವಾಗುವದು. ಎಲ್ಲ ಗಣಗಳ ಅಧಿಪತಿ ಯಾಗಿಯೂ, ಸರ್ವವ್ಯಾಪಿಯಾಗಿಯೂ, ಇರುವ ಮಹಾಪುರುಷನು ಅವನೊಬ್ಬನೇ, ಅವನಿಗೆ ಸಮಾನರಾದವರು ಲೋಕದಲ್ಲಿ ಯಾರೂ ಇಲ್ಲ. ಅವನೇ ತನ್ನ ಇಚ್ಛೆಯಿಂದ ಒಮ್ಮೆ ಶ್ವೇತರೂಪಿಯಾಗಿಯೂ ಮತ್ತೊಮ್ಮೆ ಬೇರೆ ಬೇರೆ ಬಣ್ಣದ ರೂಪನಾಗಿಯೂ ಕಾಣುತ್ತಾನೆ. ಅವನಿಗಿಂತ ಉತ್ಕೃಷ್ಟವಾದ ವಸ್ತುವು ಲೋಕದಲ್ಲಿಲ್ಲ. ಈ ಮಹಾತ್ಮನು ತನ್ನ ಸ್ವೇಚ್ಛೆಯಿಂದ ಸಾತ್ವಿಕ, ರಾಜಸ, ತಾಮಸ ರೂಪಗಳನ್ನೂ ಅವುಗಳ ಸಂಬಂಧದಿಂದುಂಟಾದ ಮಿಶ್ರರೂಪಗಳನ್ನೂ ತಾನೇ ಧರಿಸುತ್ತಾನೆ. ಹೀಗೆ ಶಂಕರನ ಮಾತುಗಳನ್ನು ಕೇಳಿ ಶೈಲಾದಿಯೇ ಮೊದಲಾದ ಪ್ರಮತೋತ್ತಮರು ''ಅಂತಹ ಸದಾಶಿವನ ರೂಪವೆಂತಹದು?'' ಎಂದು ಕೇಳಿದರು.

ಶಂಕರನು ತನ್ನ ಶೈವ ರೂಪವನ್ನು ತೋರಿಸಿದನು. ಆ ರೂಪವು ಸಹಸ್ರ ಸೂರ್ಯ ರಷ್ಮಿ ತೇಜಸ್ವಿಯಾಗಿಯೂ, ಸಹಸ್ರಪಾದ ಭುಜಗಳಿಂದ ಕೂಡಿದ್ದಾಗಿಯೂ ಕಂಡು ಬಂದಿತು. ದೇವತೆಗಳ ಪ್ರಸಿದ್ಧವಾದ ಆಯುಧಗಳೆಲ್ಲವೂ ಆತನ ದಂಡಾಯುಧದಲ್ಲಿ ತೋರಿಬಂದವು. ಅನಂತರ ರುದ್ರ ಹಾಗೂ ವಿಷ್ಣುವಿನ ಅನೇಕಾನೇಕ ಚಿನ್ಹೆಗಳನ್ನು ಒಂದೇ ಶರೀರ ದಲ್ಲಿ ತೋರಿಸಿ ಪಕ್ಷಿ ಧ್ವಜತ್ವ, ವೃಷಭ ವಾಹನತ್ವ ಎಲ್ಲವನ್ನೂ ಅದೇ ವಿಗ್ರಹದಲ್ಲಿ ತೋರಿಸಿದನು. ಗಣಗಳೆಲ್ಲವೂ ಆಶ್ಚರ್ಯಚಕಿತರಾಗಿ ನೋಡಿದವು. ಈತನು ಹೀಗೆ ಅನೇಕ ರೂಪವನ್ನು ಧರಿಸಿದಂತೆಲ್ಲ ಮಹಾ ಪಶುಪತಿ ಗಣಗಳು ಹೆಚ್ಚುತ್ತ ಹೋದವು. ಈಗ ಬಹುರೂಪಿಯಾದ ಶಂಕರನು ಏಕರೂಪಿಯಾದನು. ಅನೇಕ ವರ್ಣವನ್ನು ಧರಿಸಿದ ವರ್ಣಹೀನನಾಗಿ ಮಹಾಪಾಶುಪತನಾಗಿ ಪರಿಣಮಿಸಿದನು. ಒಂದೇ ಕ್ಷಣದಲ್ಲಿ ಇಂದ್ರ, ಸೂರ್ಯ, ಶಂಕರ, ವಿಷ್ಣು ಮೊದಲಾದ ರೂಪ ಗಳನ್ನು ಧರಿಸಿದ ಈ ಆಶ್ಚರ್ಯಕರವಾದ ದೇವರ ರೂಪವನ್ನು ನೋಡಿ ಶೈವರೇ ಮೊದಲಾದ ಗಣಗಳು ಬ್ರಹ್ಮ ವಿಷ್ಣು ಇಂದ್ರರಲ್ಲಿ ಐಕ್ಯ ಬುದ್ಧಿಯನ್ನು ಗ್ರಹಿಸಿದರು. ಈಗ ಶಂಕರನು ಎಲ್ಲರಲ್ಲಿಯೂ ವ್ಯಾಪ್ತನಾದ ಈಶ್ವರನ ಅಭೇದ ಜ್ಞಾನದಿಂದ ಎಲ್ಲರೂ ನಿಷ್ಪಾಪರಾದೊಡನೆ ಸಂತುಷ್ಟಚಿತ್ತನಾಗಿ ಹೇಳಿದನು- ''ನಿಮ್ಮ ಈ ಜ್ಞಾನದಿಂದ ನಾನು ಪ್ರಸನ್ನಗೊಂಡಿದ್ದೇನೆ. ನೀವು ಬೇಕಾದ ವರವನ್ನು ಕೇಳಿಕೊಳ್ಳಿರಿ.'' ಈಗ ಅವರೆಲ್ಲರೂ ಅಂದರು, ''ಭೇದ ಜ್ಞಾನದಿಂದ ನಮಗೆ ಇದೂವರೆಗೆ ಉಂಟಾಗಿರುವ ಪಾಪವೆಲ್ಲವೂ ಹೋಗುವಂತೆ ಅನುಗ್ರಹಿಸು.''

**ಪುಲಸ್ತ್ಯರು ಹೇಳುತ್ತಾರೆ :-** ಅವರೆಲ್ಲರ ಪ್ರಾರ್ಥನೆಯಂತೆ ಶಂಭುವು ಹಾಗೆಯೇ ಆಗಲೆಂದನು. ಹೀಗೆ ಈಶ್ವರನಿಂದ ಸತ್ಕರಿಸಲ್ಪಟ್ಟ ಗಣಾಧಿಪರೆಲ್ಲರೂ ಮೇಘವೆಂಬ ರಥಾರೂಢನಾದ ಶಂಕರನೊಡನೆ ವೇದಪ್ರತಿಪಾದ್ಯವಾದ ಮಹಾಗಿರಿಗೆ ಹೋದರು. ಮೇಘದಂತೆ ಕಪ್ಪಾಗಿರುವ, ಪ್ರಮಥಗಣಗಳಿಂದ ಸುತ್ತುಗಟ್ಟಲ್ಪಟ್ಟ ಹಾಗೂ ಶುಭ್ರವಾದ ಈಶ್ವರನ ಪಾದದಿಂದ ಆಕ್ರಾಂತವಾದ ಮಂದರಪರ್ವತವು ಶರತ್ಕಾಲದ ಮೇಘದಂತೆ ತೋರಹತ್ತಿತು.

ವಾಮನ ಮಹಾಪುರಾಣದಲ್ಲಿ ಪರನಲ್ಲಿರುವ ಹರಿ ಎಂಬ ೬೭ನೇಯ ಅಧ್ಯಾಯವು ಮುಗಿದುದು

**೪. ಏತಸ್ಮಿನ್ನಂತರೇ ಪ್ರಾಪ್ತಃ ಸಮಂ ದೈತ್ಯೈಸ್ತಥಾಂಧಕಃ ।
ಮಂದರಂ ಪರ್ವತ ಶ್ರೇಷ್ಠಂ ಪ್ರಮಥಾಶ್ರಿತ ಕಂದರಮ್**

ಇತ್ತ ಅಂಧಕನು ದೈತ್ಯರೊಡನೆ ಕೂಡಿಕೊಂಡು, ಗುಹೆಗಳಲ್ಲಿ ಅಡಗಿದ ಪ್ರಮಥರಿಂದ ಕೂಡಿದ ಮಂದರ ಪರ್ವತಕ್ಕೆ ಬಂದು ಸೇರಿದನು. ಗುಹೆಯಲ್ಲಿರುವ ಪ್ರಮಥರೆಲ್ಲರೂ ಈ ದಾನವರನ್ನು ನೋಡಿ ಕಿಲಕಿಲ ಧ್ವನಿ ಮಾಡಿದರು. ಅದನ್ನು ಕೇಳಿ ಸಿಟ್ಟಿಗೆದ್ದ ದೈತ್ಯರು ಯುದ್ಧಸೂಚಕ ವಾದ್ಯಗಳನ್ನು ಮೊಳಗಿಸಿದರು. ಭಯಂಕರವಾದ ಆ ಧ್ವನಿಯನ್ನು ಕೇಳಿ ವಿನಾಯಕನು ತನ್ನ ಗಣದೊಂದಿಗೆ ಮಂದರ ಪರ್ವತಕ್ಕೆ ಬಂದು ತಂದೆಯಾದ ಶಂಕರನಿಗೆ ನಮಸ್ಕರಿಸಿ ಯುದ್ಧಕ್ಕೆ ಹೊರಡಲು ಪ್ರಾರ್ಥಿಸಿದನು. ವಿಘ್ನೇಶ್ವರನ ಮಾತಿನಂತೆ ಶಂಕರನು ಪಾರ್ವತಿಯ ಹತ್ತಿರ ಬಂದು "ನಾವು ಅಂಧಕನನ್ನು ಕೊಲ್ಲಲು ಹೋಗೋಣ ಅಥವಾ ನೀನೇ ಜಾಗರೂಕತೆಯಿಂದ ಹೋಗು" ಎಂದು ಹೇಳಿದನು. ಪಾರ್ವತಿಯು ಹರ್ಷದಿಂದ ಪುಲಕಿತಳಾಗಿ ಪ್ರೀತಿಯಿಂದ ಗಂಡನನ್ನು ಕಟಾಕ್ಷಿಸಿ ಈಶ್ವರನಿಗೆ ಗೋರೋಚನವೇ ಮೊದಲಾದ ಸುಗಂಧವನ್ನು ಲೇಪಿಸಿ ಪಾದಗಳಿಗೆ ವಂದಿಸಿದಳು.

ಆಗ ಶಂಕರನು ಪಾರ್ವತಿಯ ಸಖಿಯರಾದ ಜಯಾ, ವಿಜಯಾ, ಜಯಂತಿ ಮೊದಲಾದವರನ್ನು ಕರೆದು "ನೀವು ಪಾರ್ವತಿಯನ್ನು ಜಾಗರೂಕತೆಯಿಂದ ರಕ್ಷಿಸಬೇಕು" ಎಂದು ಹೇಳಿದನು. ಅನಂತರ ಆತನು ವೃಷಭಾರೂಢನಾಗಿ ಸಂತೋಷದಿಂದ ಹೊರಟನು. ಅವನೊಡನೆ ಅವನ ಗಣಗಳೂ, ಗಣಾಧಿಪತಿಗಳೂ ಹೊರಡಲನುವಾದರು. ಜಯ ಶಬ್ದವು ಎಲ್ಲ ಕಡೆಯಲ್ಲಿಯೂ ಮೊಳಗತೊಡಗಿತು. ಲೋಕನಾಯಕನಾದ ಶಿವನು ಶೂಲಧಾರಿಯಾಗಿ ಹೊರಟಾಗ ಮಂಗಲಪ್ರದವಾದ ಅನೇಕ ಸುಚಿನ್ಹಗಳು ಕಂಡುಬಂದವು. ಪಾರ್ವತಿಯು ಶಿವನ ಎಡಭಾಗದಲ್ಲಿ ಕುಳಿತು ಯುದ್ಧದ ಸಲುವಾಗಿ ಸಿಂಹನಾದ ಮಾಡುತ್ತ ಮುಂದೆ ನಡೆದಳು. ಮಾಂಸಾರ್ಥಿಗಳಾದ ಪ್ರಾಣಿಗಳು ರಕ್ತಪಾನಕ್ಕಾಗಿ ಕಾದುನಿಂತವು. ಆಗ ಹರನ ಬಲಭಾಗದ ಶರೀರವು ಅದುರಿತು. ಹಾರೀತವೆಂಬ ಪಕ್ಷಿಯು ಪರಾಙ್ಮುಖವಾಗಿ ನಡೆಯಿತು. ಈ ಶುಭ ಚಿನ್ಹೆಗಳನ್ನು ನೋಡುತ್ತಿರುವ ಹರನು ಮುಗುಳ್ನಗೆಯಿಂದ ಹೇಳುತ್ತಲಿದ್ದಾನೆ.

"ಎಲೈ ನಂದಿಯೇ ಈ ಯುದ್ಧದಲ್ಲಿ ಜಯವು ನಮಗೆ ಕಟ್ಟಿಟ್ಟದ್ದು." ನಂದಿಯು ಹೇಳಿದನು, "ಇದರಲ್ಲಿ ಸಂದೇಹವೇನಿದೆ? ನಿನಗಿಂತಲೂ ಉತ್ಕೃಷ್ಟರಾಗಿ ಇರುವವರಾರು?" ಹೀಗೆ ಶುಭಾಶಂಸೆಗಳನ್ನು ಮಾಡುತ್ತ ರುದ್ರಪಾಶುಪತಗಣಗಳು ಯುದ್ಧಕ್ಕೆ ಸನ್ನದ್ಧರಾಗಿ ಸಿಡಿಲು ಮರವನ್ನು ನಾಶಪಡಿಸಿದಂತೆ ದಾನವ ಸೈನ್ಯವನ್ನು ನಾಶಪಡಿಸಲು ಹೊರಟವು. ಈ ಮಹಾಯುದ್ಧವನ್ನು ನೋಡಲು ಇಂದ್ರ, ವಿಷ್ಣು, ಬ್ರಹ್ಮ ಮೊದಲಾದ ವರು ಇತರ ದೇವತೆಗಳೊಡನೆ ಆಕಾಶಮಾರ್ಗದಲ್ಲಿ ಬಂದುನಿಂತರು. ಗೀತವಾದ್ಯಾದಿ ಮಂಗಲಧ್ವನಿಯೂ, ಯುದ್ಧಕ್ಕೆ ಹುರುಪು ಕೊಡುವ ದುಂದುಭಿ ಧ್ವನಿಯೂ ಎಲ್ಲೆಡೆಯಲ್ಲಿ ಮೊಳಗತೊಡಗಿತು. ದೇವತೆಗಳು ಒಂದು ಕ್ಷಣದಲ್ಲಿ ಕೋಪದಿಂದ ದಾನವ ಸೈನ್ಯವನ್ನೆಲ್ಲ ಪ್ರಹರಿಸತೊಡಗಿದರು. ತಮ್ಮ ಚದುರಂಗ ಸೈನ್ಯವು

ನಾಶವಾಗುತ್ತಿರುವದನ್ನು ನೋಡಿ ದಂಡನು ಕೋಪಗೊಂಡವನಾಗಿ ಕೈಯಲ್ಲಿ ಆಯುಧವನ್ನು ತೆಗೆದುಕೊಂಡವನಾಗಿ ಹೊರಟನು. ಮುದ್ಗರಾಯುಧದ ಪ್ರಯೋಗ ಮಾಡಿ ಗಣಗಳನ್ನೆಲ್ಲ ಆತನು ಚೆದರಿಸಿ ಹತ್ತಿದನು. ಘಾಸಿಪಟ್ಟ ಗಣಗಳೆಲ್ಲ ಗಾಬರಿಯಾಗಿ ಓಡತೊಡಗಿದರು. ಓಡುತ್ತಿರುವ ಗಣಗಳನ್ನು ನೋಡಿ ಗಣಾಧಿಪತಿಯು ತುಹುರಡ ಎಂಬ ದೈತ್ಯನನ್ನು ಎದುರಿಸಲು ವೇಗದಿಂದ ಎದುರಾಗಿ ಓಡಿದನು. ಓಡಿ ಬರುತ್ತಿರುವ ಗಣಪತಿಯನ್ನು ನೋಡಿ ಆ ದುಷ್ಟನಾದ ದೈತ್ಯನು ಪರಿಘಾಯುಧದಿಂದ ಆತನ ಕುಂಭಸ್ಥಲವನ್ನು ಪ್ರಹರಿಸಿದನು. ಆದರೆ ಪರಿಘಾಯುಧವು ವಿನಾಯಕನ ಸ್ಪರ್ಶವಾದ ಕೂಡಲೇ ಅಶನಿಯು ಚೂರು ಚೂರಾದಂತೆ ಒಡೆದು ಹೋಯಿತು.

ಗಣಪತಿಯಿಂದ ಪರಿಘಾಯುಧವು ವ್ಯರ್ಥವಾದುದನ್ನು ನೋಡಿ ತುಹುರಡನು ಬಾಹುಗಳಿಂದ ಆತನನ್ನು ಬಂಧಿಸಿದನು. ವಿನಾಯಕನು ಮುದ್ಗರಾಯುಧದಿಂದ ತುಹುರಡನನ್ನೂ ಮಹೋದರನನ್ನು ಸದೆಬಡಿದನು. ತುಹುರಡನು ಭೂಮಿಗೆ ಬಿದ್ದನು. ಆದರೂ ಆ ದಾನವನು ತನ್ನ ಬಾಹುಬಂಧವನ್ನು ಬಿಡಲಿಲ್ಲ ಪ್ರಯತ್ನಪಟ್ಟರೂ ವಿನಾಯಕನು ವಿಫಲನಾದನು. ವಿನಾಯಕನು ಬದ್ಧನಾದುದನ್ನು ನೋಡಿ ಮತ್ತೊಬ್ಬ ಸೇನಾಧಿಪತಿಯು ಮುಸಲಾಯುಧವನ್ನು ತುಹುರಡನ ಮೇಲೆ ಪ್ರಯೋಗಿಸಿದನು. ಅನಂತರ ಕಲಶಧ್ವಜನೆಂಬವನು ರಾಹು ಎಂಬ ದೈತ್ಯನನ್ನು ಪ್ರಾಸಾಯುಧದಿಂದ ಹೊಡೆದನು. ಆಗ ರಾಹುವು ವಿಮುಖನಾದನು. ತುಹುರಡನು ಹತನಾದನು.

ಅನಂತರ ದೈತ್ಯರನ್ನು ನಾಶಪಡಿಸಲು ವಿನಾಯಕನು ಕುಂಡೋದರ ಮೊದಲಾದ ತನ್ನ ಸೈನ್ಯದೊಡನೆ ಕಾಲಾಗ್ನಿಯಂತೆ ನುಗ್ಗಿದನು. ಆಗ ಬಲಿಷ್ಠನಾದ ಬಲಿ ಎಂಬ ದಾನವನು ವಾಯುವೇಗದಿಂದ ಬಂದು ವಿನಾಯಕನ ಗಂಡಸ್ಥಲದಲ್ಲಿಯೂ, ಸೊಂಡಿಲಿನಲ್ಲಿಯೂ ಗದೆಯಿಂದ ವೇಗವಾಗಿ ಪ್ರಹಾರ ಮಾಡಿದನು. ಗಣಪತಿಯ ಸಹ ಸೈನಿಕರೂ ಕೂಡ ಮುಗ್ಗರಿಸಿದರು. ಈ ರೀತಿ ಗಣಾಧಿಪರೆಲ್ಲರೂ ವಿಮುಖರಾದುದನ್ನು ನೋಡಿ ಸುರೇಂದ್ರನೆಂಬ ಮಹಾದಾನವನು ಯುದ್ಧರಂಗಕ್ಕಿಳಿದನು. ವೇಗದಿಂದ ಬರುತ್ತಿರುವ ಆ ದಾನವನನ್ನು ನೋಡಿ ಮಹೇಶ್ವರನು ಶ್ರೇಷ್ಠನಾದ ಶೈಲಾದಿಗೆ ಆಜ್ಞಾಪಿಸಿದನು. ಶಂಕರನಿಂದ ಆಜ್ಞಪ್ತನಾದ ಶೈಲಾದ್ರಿಯು ಚಕ್ರಾಯುಧವನ್ನು ಕೈಯಲ್ಲಿ ಧರಿಸಿ ಬಲಿಯ ಸಮೀಪಕ್ಕೆ ಹೋಗಿ ಅವನ ತಲೆಯ ಮೇಲೆ ಹೊಡೆಯಲು ಬಲಿಯು ಮೂರ್ಛಿತನಾಗಿ ಭೂಮಿಗೆ ಬಿದ್ದನು. ಹಾಗೆ ಮೂರ್ಛೆಹೋಗಿ ಬಿದ್ದ ತನ್ನ ಅಣ್ಣನ ಮಗನನ್ನು ನೋಡಿ ಬಲಶಾಲಿಯಾದ ಕುಜಂಭನು ಮುಸಲಾಯುಧವನ್ನು ಪರಿಗ್ರಹಿಸಿ ಕೋಪಾವೇಶದಿಂದ ನಂದಿಯ ಮೇಲೆ ಪ್ರಯೋಗಿಸಿದನು. ಆದರೆ ನಂದಿಯು ಅವನ ಆಯುಧದಿಂದಲೇ ಅವನನ್ನು ಹೊಡೆಯಲು ಕುಜಂಭನು ನೆಲಕ್ಕುರುಳಿದನು. ಅಲ್ಲದೇ ಇನ್ನುಳಿದ ಸೈನಿಕರೆಲ್ಲರನ್ನು ನಂದಿಯು ವಜ್ರಾಯುಧದಿಂದ ಘಾಸಿಗೊಳಿಸಿದನು. ನಂದಿಯ ಪೀಡೆಗೆ ಒಳಗಾದ ದಾನವರೆಲ್ಲರೂ ದುರ್ಯೋಧನನಿಗೆ ಶರಣಾಗತರಾದರು. ನಂದಿಯ ವರ್ತಮಾನವನ್ನು ಕೇಳಿದ ದುಯೋಧನನು ಪಾಶಾಯುಧವನ್ನು ಕೈಯಲ್ಲಿ ಧರಿಸಿ ಮಿಂಚಿನ ವೇಗದಿಂದ ಹೊರಟನು.

ಬಂದಕೂಡಲೇ ಪಾಶಾಯುಧವನ್ನು ನಂದಿಯ ಮೇಲೆ ಪ್ರಯೋಗಿಸಿದನು. ಆದರೆ ನಂದಿಯು ತನ್ನ ವಜ್ರಾಯುಧದಿಂದ ಅದನ್ನು ವಿಭಿನ್ನಗೊಳಿಸಿದನು. ಆಗ ನಿರಾಯುಧ ನಾದ ದಾನವನು ದೃಢವಾದ ಮುಷ್ಟಿಬಂಧದಿಂದ ಗಣವನ್ನು ಪ್ರವೇಶಿಸಿದನು. ವಜ್ರಧಾರಿ ಯಾದ ನಂದಿಯು ದುರ್ಯೋಧನನ ಶಿರಸ್ಸನ್ನು ತಾಲಫಲದಂತೆ ಕತ್ತರಿಸಿದನು. ಈ ವೃತ್ತಾಂತವನ್ನು ಕೇಳಿದ ದುರ್ಯೋಧನನ ತಂದೆಯಾದ ಹಸ್ತಿಯು ನಂದಿ ಯನ್ನು ಎದುರಿಸಲು ಬಂದನು. ಬಂದ ಆ ಹಸ್ತಿಯು ಭಯಂಕರವಾದ ಬಾಣಗಳ ಪ್ರಯೋಗದಿಂದ ಮೇಘಗಳು ವೃಷ್ಟಿಗೈಯುವಂತೆ ನಂದಿಯನ್ನೂ ಅವನ ಜೊತೆಗಾರ ನನ್ನೂ ಬಾಣಗಳ ಮಳೆಯಿಂದ ಮುಚ್ಚಿಬಿಟ್ಟನು. ಗಣಗಳೆಲ್ಲರೂ ಸಿಂಹದಿಂದ ಚೆದುರಿಸಲ್ಪಟ್ಟ ಚಿಗರೆಗಳಂತೆ ಓಡಿಹೋದರು.

ಓಡುತ್ತಿರುವ ಗಣವನ್ನು ನೋಡಿ ಷಣ್ಮುಖನು ಶಕ್ತ್ಯಾಯುಧವನ್ನು ಧರಿಸಿ ಶತ್ರುಗುಂಪಿನ ಎದುರು ಬಂದು ಅವರ ಹೃದಯವನ್ನೇ ಭೇದಿಸಿದನು. ಈಗ ಹಸ್ತಿಯು ಹತನಾಗಿ ಸೇನೆಯ ಮಧ್ಯದಲ್ಲಿಯೇ ನೆಲಕ್ಕುರುಳಿದನು. ಹೀಗೆ ಭಗ್ನರಾಗುತ್ತಿರುವ ಶತ್ರುಗಳನ್ನು ನೋಡಿ ಗಣಾಧಿಪರೆಲ್ಲರೂ ದಾನವರ ಮೇಲೆ ಮುನ್ನುಗ್ಗಿ ಪ್ರಹರಿಸತೊಡಗಿದರು. ಈಗ ದೈತ್ಯರೆಲ್ಲರೂ ಪರಾಜಿತರಾಗಿ ಓಡತೊಡಗಿದರು.

ಅಷ್ಟರಲ್ಲಿ ಕಾಂತಸ್ವರನೆಂಬ ದಾನವನು ಗದಾಧಾರಿಯಾಗಿ ಮತ್ತೆ ಗಣಗಳನ್ನು ಎದುರಿಸಲು ಬರುತ್ತಿರಲಾಗಿ ನಂದಿಷೇಣನೆಂಬವನು ಪಟ್ಟಿಶಾಯುಧವನ್ನು ಅವನ ತಲೆಯ ಮೇಲೆ ಹೊಡೆಯಲು ವಿಕೃತಸ್ವರದಿಂದ ಅರಚುತ್ತ ಆತನು ಬಿದ್ದನು. ಅವನು ಹತನಾದ ನಂತರ ತುರಂಗಧ್ವಜನೆಂಬ ದಾನವನು ಕೈಯಲ್ಲಿ ಪಾಶಾಯುಧ ವನ್ನು ತೆಗೆದುಕೊಂಡು ನಂದಿಷೇಣನ ಎದುರಿಗೆ ಬಂದನು ಹಾಗೂ ಆತನನ್ನು ಆಯುಧದೊಡನೆ ಬಂಧಿಸಿದನು.

ಬಂಧಿತನಾದ ನಂದಿಷೇಣನನ್ನು ನೋಡಿ ಷಣ್ಮುಖನು ಅತೀವ ಕೋಪಗೊಂಡು ಕೈಯಲ್ಲಿ ಶಕ್ತ್ಯಾಯುಧವನ್ನು ಧರಿಸಿ ಯುದ್ಧರಂಗಕ್ಕಿಳಿದನು. ಅವನನ್ನು ನೋಡಿ ಅಯಃಶಿರಾ ಎಂಬ ದಾನವನು ಕೈಯಲ್ಲಿ ಪಾಶಾಯುಧವನ್ನು ತೆಗೆದುಕೊಂಡು ಷಣ್ಮುಖ ನೊಡನೆ ಯುದ್ಧ ಮಾಡಿ ಪಾಶದಿಂದ ಅವನನ್ನು ಬಂಧಿಸಿದನು. ಷಣ್ಮುಖನ ಈ ಅವಸ್ಥೆಯನ್ನು ನೋಡಿ ಗಣಾಧಿಪತಿಗಳಾದ ಶಾಖ, ನೈಗಮೇಯ ಎಂಬವರು ದಾನವನನ್ನು ಎದುರಿಸಲು ಹೊರಟರು. ಇವರಿಂದ ಆಕ್ರಾಂತನಾದ ಅಯಃಶಿರನು ಭೂಮಿಯಲ್ಲಿ ಬಿದ್ದವನು ಮತ್ತೆ ಏಳಲಿಲ್ಲ. ಹೇಗೋ ಚೇತರಿಸಿಕೊಂಡು ಪಾರಾಗಿ ಬಂದ ಅಯಃಶಿರನು ಶಂಬರನಲ್ಲಿಗೆ ಹೋಗಿ ತನ್ನನ್ನು ರಕ್ಷಿಸಲು ಕೇಳಿಕೊಂಡನು. ಇತ್ತ ಶಂಕರ ಪುತ್ರನಾದ ಶಾಖ, ನೈಗಮೇಯ ಎಂಬವರು ಶಕ್ತ್ಯಾಯುಧದಿಂದ ಪಾಶವನ್ನು ಕತ್ತರಿಸಿ ತಮ್ಮ ಸ್ಥಾನವನ್ನು ಹೊಂದಿದರು. ಶಂಬರನೂ ಈಗ ಕಣ್ಣು ಬಿಡುತ್ತ ದಣಿವಾಗಿ ಓಡಿಹೋದನು. ಆಗ ಕುಮಾರಸ್ವಾಮಿಯು ದಾನವನ ಸೈನ್ಯವನ್ನೆಲ್ಲ ನಾಶಪಡಿಸಲು ಮೊದಲು ಮಾಡಿದನು. ಇದರಿಂದ ಹೆದರಿದ ದಾನವ ಸೈನ್ಯವು ಶುಕ್ರಾಚಾರ್ಯರಲ್ಲಿ ಶರಣಾಗತವಾಯಿತು.

ವಾಮನ ಮಹಾಪುರಾಣದಲ್ಲಿ ಅಂಧಕನ ಯುದ್ಧ ಎಂಬ ೬೮ನೇಯ ಅಧ್ಯಾಯವು ಮುಗಿದುದು

—o—

೩. ತತಃ ಕುಜಂಭೇ ಚ ಯಮಾಲಯಂ ಗತೇ
ಹತೇ ಚ ಸೈನ್ಯೇ ಪ್ರಮಥೈರ್ಮಹಾರಥಃ ॥
ತ್ರಸ್ತೋಽಧಕೋಽಭ್ಯೇತ್ಯ ಗುರುಂ ಚ ಶುಕ್ರಂ
ಇದಂ ವಚಃ ಸಾನುನಯಸ್ತದಾಬ್ರವೀತ್ ॥

**ಪುಲಸ್ತ್ಯರು ಹೇಳುತ್ತಾರೆ** - ಕುಜಂಭನು ತನ್ನ ಸೈನಿಕರೊಡನೆ ನಾಶ ಹೊಂದಿದ ಮೇಲೆ ಮಹಾರಥಿಕನಾದ ಅಂಧಕನು ಭಯಪಟ್ಟು, ಶುಕ್ರಾಚಾರ್ಯರಲ್ಲಿಗೆ ಹೋಗಿ ವಿನಯದಿಂದ ಪ್ರಾರ್ಥಿಸಿದನು - ''ಪೂಜ್ಯರೇ, ನಿಮ್ಮ ಸಹಾಯದಿಂದಲೇ ನಾವು ದೇವ, ಗಂಧರ್ವ, ಕಿನ್ನರರನ್ನು ಬಾಧಿಸುತ್ತಲಿದ್ದೇವೆ. ಆದರೆ ಈಗ ಅನಾಥೆಯಾದ ಯುವತಿಯಂತೆ ಎಲ್ಲಿಯೋ ಅವಿತು ಕೊಳ್ಳುವ ಸಮಯವನ್ನು ನಾವು ಹೊಂದಿದ್ದೇವೆ. ಕುಜಂಭನಂಥ ಬಲಶಾಲಿಯೂ ಸಹ ಪ್ರಮಥರಿಂದ ನಾಶ ಹೊಂದಿದನು. ಆದುದರಿಂದ ಇತರರಿಗೆ ಯಾರಿಗೂ ತಿಳಿಯದಿರುವ ರೀತಿಯಲ್ಲಿ ನಾವು ಶತ್ರುಗಳನ್ನು ಜಯಿಸಲು ಗೂಢವಾದ ಉಪಾಯವನ್ನು ಆಲೋಚಿಸಿ ನಮಗಾಗಿ ನೀವು ಹೇಳಬೇಕು.''

ಅಂಧಕನ ಈ ಮಾತನ್ನು ಕೇಳಿ ಇವರ ಗುರುವಾದ ಶುಕ್ರಾಚಾರ್ಯನು ಸಂಜೀವಿನಿ ವಿದ್ಯೆಯನ್ನು ಕಲಿಸುವದಕ್ಕಿಂತ ಮೊದಲು ತೀರ್ಥದಲ್ಲಿ ಸ್ನಾನಮಾಡಿ ಆ ವಿದ್ಯೆಯು ಇನ್ನು ಹೆಚ್ಚು ಪರಿಶುದ್ಧವಾಗುವಂತೆ ಅದನ್ನು ಯಥಾವಿಧವಾಗಿ ಆವರ್ತಿಸತೊಡಗಿದನು. ಹೀಗೆ ಪವಿತ್ರವಾದ ಆ ಸಂಜೀವಿನೀ ವಿದ್ಯೆಯನ್ನು ದಾನವರಾಜನಾದ ಅಂಧಕನಿಗೆ ಕೊಡ ಬಯಸಿದನು. ಆ ವಿದ್ಯೆಯ ಪ್ರಭಾವದಿಂದ ಪ್ರಮಥರಿಂದ ಹತನಾದ ದೈತ್ಯಶ್ರೇಷ್ಠರೆಲ್ಲರು ಮತ್ತೆ ಯುದ್ಧ ಮಾಡಲು ಪ್ರಾರಂಭಿಸಿದರು. ಇದನ್ನು ತಿಳಿದ ನಂದಿಯು ಶಂಕರನನ್ನು ಕುರಿತು ''ಪ್ರಭುವೇ ನಾವು ಯುದ್ಧ ಮಾಡಿ ನಾಶಗೊಳಿಸಿದ ದೈತ್ಯರೆಲ್ಲರನ್ನೂ ಭಾರ್ಗವನು ತನ್ನ ವಿದ್ಯೆಯಿಂದ ಬದುಕಿಸಿರುವನು. ಆದುದರಿಂದ ನಾವು ಮಾಡಿದ ಕಾರ್ಯವೆಲ್ಲವೂ ವಿಫಲವಾಯಿತು.'' ಹೀಗೆ ವಿಜ್ಞಾಪಿಸಲು ಶಂಕರನು ಈ ರೀತಿಯಾಗಿ ಹೇಳಿದನು -

''ಎಲೈ ನಂದಿಯೇ, ಶುಕ್ರಾಚಾರ್ಯರನ್ನು ನನ್ನ ಸಮೀಪಕ್ಕೆ ಕರೆದುಕೊಂಡು ಬಾ. ಯೋಗಶಕ್ತಿಯಿಂದ ನಾನು ಅವರನ್ನು ಬಂಧಿಸುತ್ತೇನೆ.'' ರುದ್ರನ ಆಜ್ಞೆಯಂತೆ ನಂದಿಯು ಶುಕ್ರನನ್ನು ಓಡಿದುತಂದನು. ಆಗ ಬಲಶಾಲಿಯಾದ ಭಯಂಕರನೆಂಬ ಅಸುರನು ಸಿಂಹದ ಮಾರ್ಗವನ್ನು ಪಶುವು ನೋಡುವಂತೆ ನಂದಿಯನ್ನು ತಡೆದನು. ನಂದಿಯು ವಜ್ರಸದೃಶವಾದ ತನ್ನ ಚಕ್ರಾಯುಧದಿಂದ ಬಲವಾಗಿ ಪ್ರಹರಿಸಲು ಅವನು ಪ್ರಜ್ಞೆತಪ್ಪಿ ಕೆಳಗೆ ಬಿದ್ದನು. ಅನಂತರ ಕುಜಂಭ, ಜಂಭ, ಬಲ, ವೃತ ಎಂಬ ರಾಕ್ಷಸರು ನಂದಿಯನ್ನು ಎದುರಿಸಲು ಬಂದುನಿಂತರು. ಈ ಮಹಾಬಲಶಾಲಿಗಳಾದ ದಾನವರಿಂದ ಪ್ರಹರಿಸಲ್ಪಡುತ್ತಿರುವ ನಂದಿಯನ್ನು ಬ್ರಹ್ಮನೇ ಮೊದಲಾದ ಇಲ್ಲ ದೇವತೆಗಳೂ ನೋಡಿದರು. ಬ್ರಹ್ಮನು ಇಂದ್ರಾದಿಗಳಿಗೆ ಆಜ್ಞಾಪಿಸಿದನು, ''ಶಂಕರನಿಗೆ ಸಹಾಯ ಮಾಡಲು ಇದು ನಿಮಗೆ ಉತ್ತಮ ಸಮಯ. ಕೂಡಲೇ ನೀವು ಕಾರ್ಯಪ್ರವೃತ್ತರಾಗಿರಿ.''

ಆಗ ಇಂದ್ರಾದಿ ದೇವತೆಗಳು ಆಕಾಶಮಾರ್ಗದಿಂದಿಳಿದು ಶಿವಸೈನ್ಯದಲ್ಲಿ ಸೇರಿಕೊಂಡರು. ಈಗ ಪ್ರಮಥ ಗಣಗಳ ಸೈನ್ಯ, ದೇವ ಸೈನ್ಯ ಎರಡೂ ಕೂಡಿ ಮಹಾಸಮುದ್ರದಂತಾಯಿತು. ಸೈನ್ಯದ್ವಯಗಳಲ್ಲಿ ಸಂಘರ್ಷಣೆ ನಡೆಯಿತು. ಕೋಲಾಹಲ ಉಂಟಾಯಿತು. ಸಮಯವನ್ನು ಸಾಧಿಸಿ ನಂದಿಯು ಸಿಂಹವು ಕಾಡುಮೃಗವನ್ನಾಕ್ರಮಿಸುವಂತೆ ಭಾರ್ಗವನ ಮೇಲೆ ಆಕ್ರಮಿಸಹೋದನು. ಶುಕ್ರನನ್ನು ಹಿಡಿದುಕೊಂಡು ನಂದಿಯು ಹರನ ಸಮೀಪಕ್ಕೆ ಬಂದನು. ಬಂದಿರುವ ಶುಕ್ರನನ್ನು ತತ್‌ಕ್ಷಣದಲ್ಲಿ ಶಂಕರನು ನುಂಗಿಬಿಟ್ಟನು. ಈ ದೃಶ್ಯವನ್ನು ನೋಡಿ ದಾನವರೆಲ್ಲ ಚಕಿತರಾದರು. ಶಂಕರನ ಜಠರದಲ್ಲಿ ಪ್ರವೇಶಿಸಿದ ಶುಕ್ರನು ಅವನನ್ನು ಭಕ್ತಿಯಿಂದ ಸ್ತೋತ್ರ ಮಾಡತೊಡಗಿದನು. "ಸಕಲ ಗುಣಶಾಲಿಯಾದ ಜಗದುತ್ಪತ್ತಿಗೆ ಕಾರಣೀಭೂತವಾದ ಎಲೈ ತ್ರಿಲೋಚನನೇ, ನಿನಗೆ ಅನಂತ ನಮಸ್ಕಾರಗಳು. ನೀನು ಪರಮ ಪುರುಷನು." ಈ ರೀತಿ ಶುಕ್ರನ ಸ್ತೋತ್ರದಿಂದಲೇ ಹರನು ಸಂತುಷ್ಟನಾಗಿ ಬೇಕಾದ ವರವನ್ನು ಕೇಳಿಕೊಳ್ಳಲು ಹೇಳಿದನು. ಆಗ ಕೂಡಲೇ ಶುಕ್ರಾಚಾರ್ಯನು "ಪೂಜ್ಯನೇ, ನಿನ್ನ ಜಠರದಿಂದ ನನ್ನನ್ನು ಹೊರಗೆ ಹಾಕು" ಎಂದು ವರವನ್ನು ಬೇಡಿದನು.

ಆಗ ಹರನು ಕಣ್ಣುಮುಚ್ಚಿ "ಬ್ರಾಹ್ಮಣೋತ್ತಮನೇ, ನೀನು ಹೊರಗೆ ಬಾ" ಎಂದನು. ಆದರೆ ಭಾರ್ಗವನು ಆ ಈಶ್ವರನ ಉದರದಲ್ಲಿ ಅನಂತ ಪ್ರದೇಶದಲ್ಲಿ ತಿರುಗಿದನು. ಭೂಮಿ, ಸಮುದ್ರ ಪಾತಾಳ ಎಲ್ಲವೂ ಅಲ್ಲಿ ಕಂಡಿತು. ದ್ವಾದಶಾದಿತ್ಯರು, ಏಕಾದಶ ರುದ್ರರೂ, ವಿಶ್ವೇದೇವತೆಗಳೂ, ಯಕ್ಷಗಂಧರ್ವರೂ, ಎಲ್ಲರೂ ಅವನ ದೃಷ್ಟಿಗೋಚರರಾದರು. ಅಲ್ಲದೇ ಅನೇಕ ಅಚಲವಾದ ವಸ್ತುಗಳೂ, ಚಲವಾದ ಪ್ರಾಣಿಗಳೂ ಎಲ್ಲವೂ ಶಂಕರನ ಉದರದಲ್ಲಿ ಕಂಡು ಬಂದವು. ಎಲ್ಲ ಕಡೆಯಲ್ಲಿ ತಿರುಗಾಡಿ ಶುಕ್ರನು ಆಯಾಸದಿಂದ ಬಳಲಿದನು. ಆಗ ಭಾರ್ಗವನು ಮಹಾದೇವನಿಗೆ ಮತ್ತೆ ಶರಣು ಹೋದನು ಹಾಗೂ ಸ್ತೋತ್ರಗೈದನು. "ಎಲೈ ಜಗದ್ರೂಪಿಯೇ, ಸಹಸ್ರಾಕ್ಷನಾದ ಮಹಾದೇವನೇ, ಸರ್ಪಭೂಷಣನೇ, ನಾನು ನಿನಗೆ ಶರಣಾಗತನಾಗಿದ್ದೇನೆ. ಈ ನಿನ್ನ ಉದರದಲ್ಲಿ ಪ್ರಪಂಚವನ್ನು ನೋಡಿ ಭ್ರಾಂತನಾಗಿರುವೆನು." ಈ ರೀತಿ ಸ್ತೋತ್ರಮಾಡಿದ ನಂತರ ಶಂಕರನು ನಗುತ್ತ ಹೇಳಿದನು, "ಎಲೈ, ಭಾರ್ಗವನೇ, ನೀನು ನನಗೆ ಈಗ ಪುತ್ರನಾಗಿರುವಿ. ನನ್ನ ಶಿಶ್ನದಿಂದ ಹೊರಗೆ ಬಾ. ಇನ್ನು ಮುಂದೆ ಶುಕ್ರನೆಂಬ ಹೆಸರಿನಿಂದ ಪ್ರಪಂಚದಲ್ಲಿ ಪ್ರಸಿದ್ಧಿಯನ್ನು ಪಡೆ." ಶುಕ್ರನು ಹಾಗೇ ಹೊರಗೆ ಬಂದನು. ಅನಂತರ ಭಾರ್ಗವ ವಂಶಕ್ಕೆ ಶುಕ್ರನೆಂಬ ಹೆಸರಿನಿಂದಲೇ ಭೂಷಣನಾದನು. ಭಾರ್ಗವನು ಪುನಃ ಹೊರಗೆ ಬಂದುದನ್ನು ತಿಳಿದು ದಾನವರೆಲ್ಲರೂ ಸಂತುಷ್ಟರಾದರು. ಪುನಃ ಗಣಾಧಿಪತಿಗಳೊಡನೆ ಯುದ್ಧ ಮಾಡಲು ಸನ್ನದ್ಧರಾದರು. ಅಸುರರಿಗೂ ಗಣಗಳಿಗೂ ದ್ವಂದ್ವಯುದ್ಧವೇ ಪ್ರಾರಂಭವಾಯಿತು.

ಅಂಧಕನು ನಂದಿಯೊಡನೆ ಅಯಃಶಿರನು ಶಂಕುಕರ್ಣನೊಡನೆ ಬಲಿಯು ಕುಂಭಧ್ವಜನೊಡನೆ ವಿರೋಚನನು ನಂದಿಷೇಣನೊಡನೆ ಯುದ್ಧಮಾಡಲು ಪ್ರಾರಂಭಿಸಿದರು. ಎರಡೂ ಬಣದ ಸೈನಿಕರು ಹುಮ್ಮಸ್ಸಿನಿಂದ ಕಾದಿದರು. ಹೀಗೆ ದ್ವಂದ್ವಯುದ್ಧವು ದಾನವ ಹಾಗೂ ಗಣಗಳಲ್ಲಿ ದೇವದಾನವ ರೀತಿಯಿಂದ ಆರುನೂರು ವರ್ಷಗಳವರೆಗೆ ನಡೆಯಿತು.

ದೇವತೆಗಳೆಲ್ಲರೂ ಬಹಳವಾಗಿ ಬಳಲಿದರು. ಆಗ ದಾನವರು ದೇವತೆಗಳನ್ನು ನುಂಗಲಾರಂಭಿಸಿದರು. ಕ್ರಮವಾಗಿ ಪ್ರಮಥರೂ, ದೇವತೆಗಳೂ ಮಾಯವಾಗಹತ್ತಿದರು. ರಣರಂಗದ ಒಂದು ಭಾಗವು ಶೂನ್ಯವಾಗುತ್ತ ನಡೆಯಿತು. ಆಗ ರುದ್ರನು ಕೋಪಗೊಂಡು ಜೃಂಭಿಕಾ ಎಂಬ ಅಂಬಿಕೆಯನ್ನು ಯೋಗಶಕ್ತಿಯಿಂದ ನಿರ್ಮಿಸಿದನು. ಆ ಜೃಂಭಾಂಬಿಕೆಯು ದಾನವರನ್ನೆಲ್ಲ ಆಕ್ರಮಿಸಿದಾಗ ದಾನವರೆಲ್ಲರೂ ಆಲಸ್ಯದಿಂದ ತೂಕಡಿಸಹತ್ತಿದರು. ಕೈಯಲ್ಲಿ ಹಿಡಿದ ಶಸ್ತ್ರಗಳು ಕಳಚಹತ್ತಿದವು.

ಜೋರಾಗಿ ಆಕಳಿಸಿದಾಗ ಒಳಗೆ ಪ್ರವೇಶ ಮಾಡಿದ ಗಣಾಧಿಪರೂ ಹಾಗೂ ದೇವತೆಗಳೂ ಅಲ್ಲಿಂದ ಹೊರಬರತೊಡಗಿದರು. ಹೊರಬಂದ ಅವರೆಲ್ಲರೂ ಕೋಪದಿಂದ ಮತ್ತೆ ಯುದ್ಧ ಮಾಡಲು ಸನ್ನದ್ಧರಾದರು. ಯುದ್ಧಕಾರ್ಯವು ಅವಿಚ್ಛಿನ್ನವಾಗಿ ನಡೆಯಿತು. ಈ ಸಲದ ಯುದ್ಧದಲ್ಲಿ ಬಹಳ ಜನ ದಾನವರು ಪರಾಜಿತರಾದರು. ಆಗ ಹದಿನೈದುನೂರು ವರ್ಷಗಳು ಕಳೆದವು. ಅನಂತರ ಶಂಕರನು ಹದಿನೆಂಟು ಭುಜಗಳನ್ನು ಧರಿಸಿ ಸರಸ್ವತೀ ನದಿಯಲ್ಲಿ ಸ್ನಾನಮಾಡಿ ಸಂಧ್ಯಾವಂದನ ಕಾರ್ಯವನ್ನು ಮುಗಿಸಿ ತನ್ನ ಇಷ್ಟದೇವತೆಗಳಿಗೆ ಪುಷ್ಪಾಂಜಲಿಯನ್ನು ಅರ್ಪಿಸಿ ಕೃತಾರ್ಥನಾದನು. ಅನಂತರ ಪ್ರದಕ್ಷಿಣೆ ನಮಸ್ಕಾರ ಮಾಡಿ ''ಹಿರಣ್ಯಗರ್ಭ'' ಎಂಬ ಮಂತ್ರದಿಂದ ಸೂರ್ಯೋಪಸ್ಥಾನ ಮಾಡಿದನು. ಅನಂತರ ಶಂಕರನು ಕೈಯಲ್ಲಿ ಶೂಲವನ್ನು ಧರಿಸಿ ಗಂಭೀರಭಾವದಿಂದ ನರ್ತನ ಮಾಡತೊಡಗಿದನು. ದೇವತೆಗಳೆಲ್ಲರೂ ಅವನನ್ನು ಅನುಕರಿಸಿದರು. ಇಷ್ಟಾದ ಮೇಲೆ ಶಂಕರನು ಪುನಃ ದಾನವರೊಡನೆ ಯುದ್ಧ ಮಾಡಲು ಸಿದ್ಧನಾದನು ಅವನೊಡನಿರುವ ದೇವತೆಗಳೆಲ್ಲರೂ ನಿರ್ಭಯವಾಗಿ ಯುದ್ಧ ಮಾಡಿ ದೈತ್ಯರನ್ನು ಸೋಲಿಸಿದರು.

ಇದೆಲ್ಲವನ್ನು ನೋಡಿ ಅಂಧಕನು ಹೇಗಾದರೂ ಮಾಡಿ ಶಂಕರನನ್ನು ಜಯಿಸಬೇಕೆಂದು ಸುಂದನನ್ನು ಮುಂದಕ್ಕೆ ಕರೆದನು. ''ಎಲೋ ವೀರನಾದ ಸುಂದನೇ, ನೀನು ತಮ್ಮನಾಗಿದ್ದೀ. ಆದುದರಿಂದ ವಿಶ್ವಾಸ ಯೋಗ್ಯವಾದ ಒಂದು ಮಾತನ್ನು ಹೇಳುತ್ತೇನೆ ಕೇಳು. ಯುದ್ಧದಲ್ಲಿ ಸಮರ್ಥನಾದ ಶಂಕರನನ್ನು ಜಯಿಸಲು ಯಾರಿಗೂ ಸಾಧ್ಯವಿಲ್ಲ. ಪದ್ಮಾಕ್ಷಿಯಾದ ಪಾರ್ವತಿಯು ನನ್ನ ಹೃದಯದಲ್ಲೇ ನೆಲೆಸಿರುವಳು. ಹೇಗಾದರೂ ಮಾಡಿ ಅವಳನ್ನು ಅಪಹರಿಸಬೇಕು. ಆದುದರಿಂದ ಪಾರ್ವತಿ ಇರುವ ಸ್ಥಳಕ್ಕೆ ಹೋಗಿ ಶಂಭುವಿನ ರೂಪವನ್ನು ಧರಿಸಿ ಅವಳನ್ನು ಮೋಹಗೊಳಿಸೋಣ. ಈ ಕಾರ್ಯದಲ್ಲಿ ನೀನು ಸಹಾಯಕನಾಗು. ನೀನು ಶಂಕರನ ಭೃತ್ಯನಾದ ನಂದಿಯ ರೂಪವನ್ನು ಧರಿಸು. ಹೀಗೆ ಪಾರ್ವತಿಯನ್ನು ಕೈವಶ ಮಾಡಿಕೊಂಡ ಮೇಲೆ ಪ್ರಮಥರನ್ನು, ದೇವತೆಗಳನ್ನು ಜಯಿಸುವುದು ಸುಲಭವಾಗುವುದು.'' ಈ ಮಾತಿಗೆ ಸುಂದನು ಒಪ್ಪಿಕೊಂಡನು. ಸುಂದನು ಕೂಡಲೇ ನಂದಿಯಾದನು. ಅಂಧಕನು ಶಂಕರನಾದನು. ಈ ರೀತಿ ಅವರಿಬ್ಬರೂ ನಂದಿ ರುದ್ರರಾಗಿ ಶರೀರಗಳಲ್ಲಿ ಘಾಯದ ಚಿಹ್ನಗಳನ್ನು ಧರಿಸಿ ಹರನಗೃಹಕ್ಕೆ ಪ್ರವೇಶ ಮಾಡಿದರು. ಬರುತ್ತಿರುವ ಇವರಿಬ್ಬರನ್ನು ನೋಡಿ ಪಾರ್ವತಿಯು ಇವರಿಬ್ಬರೂ ಠಕ್ಕರೆಂದು ತರ್ಕಿಸಿದಳು. ಕೂಡಲೇ ಧೈರ್ಯದಾಳಿ ತನ್ನ ಸಖಿಯರಾದ ಮಾಲಿನಿ ವಿಜಯಾ ಮೊದಲಾದವರನ್ನು ಕರೆದು ಹೇಳಿದಳು, ''ಈ ವಂಚಕ ಶತ್ರುಗಳು ಹೇಗೆ ವೇಷ ಹಾಕಿ

ಬರುತ್ತಿದ್ದಾರೆ ನೋಡಿರಿ. ಈಗ ನಾವೊಂದು ಉಪಾಯ ಮಾಡೋಣ. ಚಿಂದಿ ಬಟ್ಟೆ, ಉಪ್ಪು, ಮೊಸರು ಇವುಗಳನ್ನು ಬೇಗ ತೆಗೆದುಕೊಂಡು ಬನ್ನಿರಿ. ಶಿವನಾಗಿ ಬಂದಿರುವ ಇವನ ಗಾಯಕ್ಕೆ ನಾನೇ ಮದ್ದು ಮಾಡುತ್ತೇನೆ.''

ಹೀಗೆ ಸಖಿಗಳಿಗೆ ಆಜ್ಞಾಪಿಸಿ ಬಂದಿರುವವನನ್ನು ಶಂಕರನೆಂದೇ ತಿಳಿಯುವಂತೆ ನಟಿಸಿ ಭಕ್ತಿಯಿಂದ ಭದ್ರಾಸನದಿಂದೆದ್ದು ಆತನನ್ನು ಎದುರುಗೊಂಡಳು. ಸಮೀಪಕ್ಕೆ ಬಂದು ಬಾಣದ ಅಗ್ರಭಾಗದಿಂದ ಗಾಯವನ್ನು ಶೋಧಿಸುತ್ತ ದಾನವರೀರ್ವರನ್ನೂ ನೋಡತೊಡಗಿದಳು. ಮಾಯೆಯಿಂದ ಬಂದ ಆ ದಾನವರನ್ನು ನೋಡಿ ಪಾರ್ವತಿಯು ಹೆದರಿ ಭಯ ದಿಂದ ಓಡಿದಳು. ದೇವಿಗೆ ವಿಷಯವು ತಿಳಿದಿದೆಯೆಂದು ಅಂಧಕನು ಸುಂದನನ್ನು ಅಲ್ಲಿಯೇ ಬಿಟ್ಟು ಪಾರ್ವತಿಯ ಬೆನ್ನಟ್ಟಿ ತಾನೂ ಹಿಂಬಾಲಿಸಿದನು.

ಹಾಗೆ ಅನುಸರಿಸಿ ಬರುತ್ತಿರುವ ಆ ದುಷ್ಟನನ್ನು ನೋಡಿ ಪಾರ್ವತಿಯು ಭಯದಿಂದ ಮನೆಯನ್ನು ಬಿಟ್ಟು ಗೆಳತಿಯರೊಡನೆ ಉದ್ಯಾನಕ್ಕೆ ಓಡಿದಳು. ಆ ಮದಾಂಧನಾದ ಅಂಧಕನು ಅಲ್ಲಿಯೂ ಬಂದನು. ಇಷ್ಟಾದರೂ ಪಾರ್ವತಿಯು ಅವನನ್ನು ಶಪಿಸಲಿಲ್ಲ. ಅಲ್ಲಿಯೇ ಸಮೀಪದಲ್ಲಿರುವ ಒಂದು ಎಕ್ಕೆ ಗಿಡದಲ್ಲಿ ಅವಿತುಕೊಂಡಳು. ಸಖಿಯರೂ ಕೂಡ ಅಲ್ಲಿಯೇ ಅಡಗಿದರು. ಆಗ ಅಂಧಕನು ಪಾರ್ವತಿಯು ಅದೃಶ್ಯಳಾದುದನ್ನು ತಿಳಿದು ನಿರಾಶನಾಗಿ ಸುಂದನೊಡನೆ ಕೂಡಿಕೊಂಡು ಬಂದ ಹಾದಿಗೆ ಸುಂಕವಿಲ್ಲವೆಂಬಂತೆ ಹಿಂತಿರುಗಿ ಬಂದನು. ಮತ್ತೆ ಪ್ರಮಥರೊಡನೆ ಘೋರವಾದ ಯುದ್ಧವನ್ನು ಆರಂಭಿಸಿದನು. ಈಗ ಸುರಾಗ್ರಣ್ಯನಾದ ಚಕ್ರಧಾರಿಯಾದ ವಿಷ್ಣುವು ಯುದ್ಧದಲ್ಲಿ ಭಾಗವಹಿಸಿದ್ದನು. ಶಾರ್ಙ್ಗವೆಂಬ ತನ್ನ ಧನುಸ್ಸಿನಿಂದ ಬಾಣ ಪ್ರಯೋಗ ಮಾಡಿ ಆರೇಳು ಜನ ದಾನವರನ್ನು ಒಂದೇ ಏಟಿಗೆ ನಾಶಪಡಿಸುತ್ತಿದ್ದನು. ಮತ್ತೆ ಕೆಲವು ದಾನವರನ್ನು ಗದೆಯಿಂದ ಸೆದೆ ಬಡಿಯುತ್ತಿದ್ದನು. ಚಕ್ರಾಯುಧದ ಪ್ರಯೋಗಕ್ಕೂ ಎಷ್ಟೋ ಜನ ದಾನವರು ತುತ್ತಾದರು. ಹಲಾಯುಧದಿಂದಲೂ, ಮುಸಲಾಯುಧದಿಂದಲೂ ಎಷ್ಟೋ ಜನರನ್ನು ಯಮಸದನಕ್ಕೆ ಕಳಿಸಿದನು.

ಗರುಡನೂ ಸಹ ತನ್ನ ಎರಡು ರೆಕ್ಕೆಗಳಿಂದ ಪ್ರಹಾರ ಮಾಡಿ ದಾನವರನ್ನು ನಾಶಪಡಿಸಲು ಪ್ರವರ್ತಿಸಿದನು. ಮಹಾವಿಷ್ಣುವು ತನ್ನ ಹಸ್ತಕಮಲಗಳನ್ನು ತಿರುಗಿಸುತ್ತ ಅದರ ತೀರ್ಥದಿಂದ ಎಲ್ಲರನ್ನೂ ಸಿಂಪಡಿಸಿದನು. ಈ ಕ್ರಿಯೆಯಿಂದ ಪ್ರಮಥರೂ ಹಾಗೂ ಅಮರರೂ ಮತ್ತಷ್ಟು ಉತ್ಸಾಹಿತರಾಗಿ ಯುದ್ಧಮಾಡಲು ತೊಡಗಿದರು. ಆದರೆ ಪಾಪಿಗಳಾದ ದಾನವರು ತೀರ್ಥದ ಸ್ಪರ್ಶದಿಂದ ವಜ್ರಾಯುಧದಿಂದ ಪರ್ವತಗಳು ನಾಶಹೊಂದುವಂತೆ ನಾಶಹೊಂದಿದರು. ಇತ್ತ ಬ್ರಹ್ಮದೇವನು ದಾನವರನ್ನು ನಾಶಪಡಿಸುವ ಕಾರ್ಯದಲ್ಲಿ ತೊಡಗಿದನು. ಇಂದ್ರನೂ ಆ ಕಾರ್ಯದಲ್ಲಿ ತೊಡಗಿದನು. ಹೀಗೆ ಬರುತ್ತಿರುವ ಇಂದ್ರನನ್ನು ನೋಡಿ ಬಲನೆಂಬ ಮಹಾದಾನವನು ಕೈಯಲ್ಲಿ ಗದೆಯನ್ನು ಹಿಡಿದುಕೊಂಡು ಎದುರು ಬಂದನು. ಆ ಅಜೇಯನಾದ ದಾನವನನ್ನು ಇಂದ್ರನು ತನ್ನ ವಜ್ರಾಯುಧದಿಂದ ಎದುರಿಸಿ ದನು. ಶ್ರೇಷ್ಠವಾದ ವಜ್ರವೂ ಕೂಡ ಶತ್ರುವಿನ ಸಂಪರ್ಕದಿಂದ ಹೋಳು ಹೋಳಾಯಿತು. ಬಲನು ಇಂದ್ರನ ಮೇಲೆ ಏರಿ ಬಂದನು. ಇಂದ್ರನು ಪರಾಙ್ಮುಖನಾದನು. ಜಂಭನು ಅವನ ಬೆನ್ನಟ್ಟಿದನು.

"ನೀನು ದೇವತೆಗಳ ರಾಜನಾಗಿಯೂ ಈ ರೀತಿ ಪಲಾಯನ ಮಾಡುವದು ಒಳಿತಲ್ಲ" ಎಂದನು. ಆಗ ಇಂದ್ರನು ಮತ್ತಷ್ಟು ಭಯಪಟ್ಟು ವಿಷ್ಣುವಿಗೆ ಶರಣಾಗತನಾದನು. "ಎಲೈ, ಪ್ರಭುವೇ, ನೀನು ಎಲ್ಲರಿಗೂ ನಾಥನಾಗಿರುವಿ. ನಾನೀಗ ನಿರಾಯುಧನಾಗಿದ್ದೇನೆ. ನನ್ನನ್ನು ನೀನು ರಕ್ಷಿಸು."

ಹೀಗೆ ಅಂದಾಗ ಹರಿಯು ನುಡಿದನು "ಎಲೈ ಇಂದ್ರನೇ, ಈಗ ನೀನು ವಜ್ರವನ್ನು ಬಿಟ್ಟು ಅಗ್ನಿಯಲ್ಲಿ ಹೋಗಿ ಆಯುಧವನ್ನು ಪ್ರಾರ್ಥಿಸಿಕೋ." ವಿಷ್ಣುವಿನ ಮಾತಿನಂತೆ ಇಂದ್ರನು "ನನ್ನ ವಜ್ರಾಯುಧವು ಹೋದುದರಿಂದ ಜಂಭನನ್ನು ಕೊಲ್ಲುವ ಬೇರೆ ಆಯುಧವನ್ನು ನನಗೆ ಕೊಡು" ಎಂದು ಅಗ್ನಿಯಲ್ಲಿ ಪ್ರಾರ್ಥಿಸಿದನು. ಈತನ ಪ್ರಾರ್ಥನೆಯಂತೆ ಅಗ್ನಿಯು ಸ್ವಶಕ್ತಿಯಿಂದ ಶಕ್ತ್ಯಾಯುಧವನ್ನು ಉತ್ಪಾದನೆ ಮಾಡಿ ಇಂದ್ರನಿಗೆ ಕೊಟ್ಟು ಸ್ವರ್ಗಕ್ಕೆ ತೆರಳಿದನು. ಅಗ್ನಿಯಿಂದ ಆ ಭಯಂಕರವಾದ ಆಯುಧವನ್ನು ಸ್ವೀಕರಿಸಿ ಇಂದ್ರನು ಜಂಭನನ್ನು ಕೊಲ್ಲಲು ಅಭಿಮುಖನಾದನು.

ಎದುರಾದಾಗ ಜಂಭನು ಬಹಳ ಕೋಪಗೊಂಡು ಮೊದಲು ಇಂದ್ರನ ಐರಾವತವನ್ನು ಪ್ರಹರಿಸಿದನು. ಜಂಭನ ಮುಷ್ಟಿ ಪ್ರಹಾರದಿಂದ ಬೃಹದಾಕಾರದ ಆ ಗಜವು ನೆಲಕ್ಕುರುಳಿತು. ಆನೆಯು ಬಿದ್ದ ಕೂಡಲೇ ಇಂದ್ರನು ವೇಗದಿಂದ ಜಿಗಿದು ಭೂಮಿಗೆ ಬಂದು ಸೇರಿದನು. ಬೀಳುತ್ತಿರುವ ಇಂದ್ರನನ್ನು ನೋಡಿ ಸಿದ್ಧ ಚಾರಣರು "ಇಂದ್ರನೇ ಭೂಮಿಗೆ ಬೀಳಬೇಡ" ಎಂದು ಹೇಳಿ ತಡೆದರು. "ವಾಹನವಿಲ್ಲದೇ ನಾನು ಶತ್ರುವಿನೊಡನೆ ಹೇಗೆ ಯುದ್ಧ ಮಾಡಲಿ ?" ಎಂದು ಇಂದ್ರನು ಕೇಳಿದನು. ಆಗ ಗಂಧರ್ವರು "ಪ್ರಭುವೇ ನೀನು ವಿಷಾದಿಸಬೇಡ. ನಿನಗಾಗಿ ರಥವನ್ನು ಸಿದ್ಧಪಡಿಸಿ ಕೊಡುವೆವು" ಎಂದು ಹೇಳಿ ಸ್ವಸ್ತಿಕ ಲಕ್ಷಣವುಳ್ಳ ಸುವರ್ಣಮಯವಾದ ಗಂಟೆಗಳಿಂದ ಶೋಭಿಸುವ ರಥವನ್ನು ಕೊಟ್ಟು ಅದಕ್ಕೆ ಯೋಗ್ಯವಾದ ಕುದುರೆಗಳನ್ನು ಇಂದ್ರನಿಗೆ ಕೊಟ್ಟರು. ಸಾರಥಿ ಲಭಿಸದೇ ಇರುವದರಿಂದ ಸ್ವತಃ ತಾನೇ ರಥಸಂಚಾಲನ ಮಾಡಿ ಇಂದ್ರನು ರಥದಿಂದ ಭ್ರಷ್ಟನಾಗಿ ಭೂಮಿಗೆ ಬಿದ್ದನು. ಅನಂತರ ಯುದ್ಧದ ಗೋಜಿಗೆ ಹೋಗುವ ವಿಚಾರವನ್ನು ಬಿಟ್ಟುಬಿಟ್ಟನು.

ಆಗ ಭೂಮಿಯು ನಡುಗಿತು. ಅದನ್ನು ನೋಡಿ ಶಮೀಕನೆಂಬ ಋಷಿಯ ಪತ್ನಿಯಾದ ತಪಸ್ವಿಯು ತನ್ನ ಪತಿಗೆ ಹೇಳಿದಳು. "ಪ್ರಭುವೇ, ಬಾಲನನ್ನು ಸುಖದಿಂದ ಹೊರಗೆ ಕಳುಹಿಸು." ಋಷಿಯು ಏತಕ್ಕೆಂದು ಕೇಳಲಾಗಿ "ಜ್ಯೋತಿಷ್ಯನು ಒಬ್ಬನು ನನಗೆ ಹೇಳಿದ್ದಾನೆ. ಭೂಮಿಯು ನಡುಗಿದೊಡನೆ ಇವನನ್ನು ಹೊರಗೆ ಹಾಕಿದ್ದಲ್ಲಿ ಇವನು ಎರಡರಷ್ಟು ಬೆಳೆಯುತ್ತಾನೆ" ಎಂದು. ಈ ಮಾತನ್ನು ಕೇಳಿ ಬ್ರಾಹ್ಮಣ ನಿರ್ಭಯವಾಗಿ ಹೊರಗೆ ಹಾಕಿದನು. ಹಾಗೆ ಹೊರಗೆ ಹಾಕಲ್ಪಟ್ಟ ಹುಡುಗನನ್ನು ನೋಡಲು ಅಲ್ಲಿ ಸಮರೂಪದ ಎರಡು ಬಾಲಕರಾಗಿದ್ದರು. ತಪಸ್ವಿಯು ಅವರನ್ನು ಕರೆದನು. ಆದರೆ ಅವನ ಪತ್ನಿಯು ಅವನನ್ನು ತಡೆದು "ಇವರಿಂದ ಹಾನಿಯುಂಟಾಗುತ್ತದೆ" ಎಂದಳು. ತಪಸ್ವಿಯು ಬಾಲಕನನ್ನೂ ಪತ್ನಿಯನ್ನು ನೋಡಿ "ಇದರ ವಿಚಾರವೇನು? ನನಗೆ ತಿಳಿದಿಲ್ಲ. ನೀನಾದರೂ ನನ್ನ ಪ್ರಶ್ನೆಗೆ ಉತ್ತರಿಸು" ಎಂದನು. ಆಗ ಭಾರ್ಯೆಯು ಅಂದಳು "ಇದಕ್ಕೆ ಉತ್ತರವನ್ನು ಈಗ ಹೇಳುವದಿಲ್ಲ. ಮುಂದೆ ನಾನು ಹೇಳುತ್ತೇನೆ."

''ನೀನುಹೇಳದಿದ್ದರೆನಾನು ಭೋಜನಮಾಡುವದಿಲ್ಲ'' ಎಂದು ಬ್ರಾಹ್ಮಣನುಹಟ ಹಿಡಿದನು. ''ಎಲೈ ಬ್ರಾಹ್ಮಣೋತ್ತಮನೇ, ನಿನಗೆ ಹಿತವನ್ನೇ ನಾನು ಹೇಳುತ್ತಲಿದ್ದೇನೆ. ಭಯಪಟ್ಟು ಕೇಳಿದುದೇ ಮುಂದಿನ ದುಃಖಾನು ಭವಕ್ಕೆ ಕಾರಣವಾಗಿದೆ.'' ಹೀಗೆ ಅನ್ನುತ್ತಿರುವಂತೆಯೇನಿಶ್ಚೇತನನಾದ ಆ ಬಾಲಕನು ಇಂದ್ರನಿಗೆಸಹಾಯಮಾಡಲುರಥ ವಿಶಾರದನಾಗಿನಡೆದನು. ಅವನಿಗೆ ವಿಶ್ವಾವಸುವೇ ಮೊದಲಾದ ಗಂಧರ್ವರು ತಮ್ಮ ತೇಜಸ್ಸಿನಿಂದ ಹೆಚ್ಚು ಶಕ್ತಿಯನ್ನು ಕೊಟ್ಟರು ಆ ಬಾಲಕನು ಇಂದ್ರನ ಹತ್ತಿರಕ್ಕೆ ಬಂದು ಅವನ ಸಾರಥಿಯಾದನು. ''ನೀನು ಯಾರಮಗು'' ಎಂದು ಕೇಳಿದನು ಇಂದ್ರ. ''ನಾನು ಶಮೀಕನ ಮಗನುಹಾಗೂಗಂಧರ್ವರಿಂದತೇಜಸ್ಸನ್ನು ಪಡೆದುಕೊಂಡು ಬಂದಿದ್ದೇನೆ. ಕುದುರೆಗಳನ್ನು ನಡೆಸುವ ವಿಷಯದಲ್ಲಿ ನನಗೆ ಮಹಾಸಾಮರ್ಥ್ಯವಿದೆ'' ಎಂದನು. ಈ ಮಾತನ್ನು ಕೇಳಿ ಇಂದ್ರನು ಯೋಗ ಮಹಿಮೆಯಿಂದ ಆಕಾಶಕ್ಕೆ ಹಾರಿದನು. ಆಗ ಬ್ರಾಹ್ಮಣಪುತ್ರನಾದ ಮಾತಲಿಯೂ ಅವನನ್ನು ಅನುಸರಿಸಿದನು. ಮಾತಲಿಯು ವೇಗವಾಗಿರಥವನ್ನು ನಡೆಯಿಸ ಹತ್ತಿದನು. ಇಂದ್ರನು ಈಗ ಮಂದರಪರ್ವತಕ್ಕೆ ಬಂದು ಶತ್ರುಸೈನ್ಯವನ್ನು ಪ್ರವೇಶಿಸಿ ಅಗ್ನಿಯು ಹೇಳಿದ ಧನುಸ್ಸನ್ನು ನೋಡಿದನು.

ಅನಂತರ ಅನೇಕ ವರ್ಣ ರಂಜಿತವಾದ ಧನುಸ್ಸನ್ನು ಬಾಣಗಳೊಡನೆ ಕೈಯಲ್ಲಿ ತೆಗೆದುಕೊಂಡು ವಿಷ್ಣು, ಬ್ರಹ್ಮ, ರುದ್ರರಿಗೆನಮಸ್ಕರಿಸಿ ಧನುಸ್ಸಿನಲ್ಲಿ ಬಾಣವನ್ನೇರಿಸಿದನು. ಎಲ್ಲ ದೇವತೆಗಳ ಶಕ್ತಿಯಿಂದ ಪ್ರಬಲನಾದ ಇಂದ್ರನು ಅಸುರನನ್ನು ನಾಶಪಡಿಸತೊಡಗಿದನು. ಈಗ ಇಂದ್ರನು ತನ್ನ ಬಾಣಪರಂಪರೆಯಿಂದ ಶತ್ರುಸೈನ್ಯವನ್ನು ಮುಚ್ಚಿಬಿಟ್ಟನು. ಇಂದ್ರನ ಬಾಣಪ್ರಯೋಗದಿಂದ ಜಂಭನ ಆನೆಯು ಭಗ್ನವಾಯಿತು. ರಥದ ಕುದುರೆಗಳು ನಾಶವಾದುವು. ಅಮಾತ್ಯನು ಭೂಮಿಗೆ ಬಿದ್ದನು. ಜಂಭನೂ ಸಹ ಕುಸಿದನು. ಈ ದೃಶ್ಯವನ್ನು ನೋಡಿ ಸೈನ್ಯವೆಲ್ಲವು ದುರ್ಬಲವಾಗಿ ನಿಂತಿತು. ಸೈನಿಕರ ದುರವಸ್ಥೆಯನ್ನು ಕಂಡ ಕುಜಂಭನು ಭಯಂಕರವಾದ ಆಯುಧವನ್ನು ಕೈಯಲ್ಲಿ ತೆಗೆದುಕೊಂಡು ಇಂದ್ರನ ಎದುರಿಗೆ ಬಂದನು. ಹಾಗೆ ವೇಗದಿಂದ ಬರುತ್ತಿರುವ ದಾನವನನ್ನು ನೋಡಿ ವಿಷ್ಣುವು ತನ್ನ ಸುದರ್ಶನ ಚಕ್ರವನ್ನು ಅವನ ಮೇಲೆ ಪ್ರಯೋಗಿಸಿದನು. ಕುಜಂಭನು ಮೃತನಾಗಿ ನೆಲಕ್ಕುರುಳಿದನು. ಅಣ್ಣನಾದ ಕುಜಂಭನು ವಿಷ್ಣುವಿನಿಂದ ಕೊಲ್ಲಲ್ಪಟ್ಟಿದ್ದನ್ನು ನೋಡಿ ಕೋಪಾವಿಷ್ಟನಾದ ಜಂಭನು ಬುದ್ಧಿಕಳೆದುಕೊಂಡ ಜಿಂಕೆಯು ಸಿಂಹವನ್ನೆದುರಿಸುವಂತೆ ಇಂದ್ರನನ್ನು ಎದುರಿಸಲು ಹೊರಟನು. ಹಾಗೆ ಬರುತ್ತಿರುವ ಜಂಭನನ್ನು ನೋಡಿ ಇಂದ್ರನು ಕೈಯಲ್ಲಿ ಯಮದಂಡದಂತಿರುವ ಶಕ್ತಿಯನ್ನು ತೆಗೆದುಕೊಂಡು ಹೊರಟನು. ಜಂಭನೂ ಕೂಡ ಗದೆಯಿಂದ ಶಕ್ತ್ಯಾಯುಧವನ್ನು ಪ್ರಹರಿಸಿದನು. ಆದರೆ ಶಕ್ತ್ಯಾಯುಧವು ಗದೆಯನ್ನು ಭಸ್ಮ ಮಾಡಿ ಜಂಭನನ್ನು ಭೇದಿಸಿತು. ಜಂಭನು ಮೃತನಾಗಿ ನೆಲಕ್ಕೆ ಬಿದ್ದನು. ಇದನ್ನು ಕಂಡ ದೈತ್ಯರೆಲ್ಲರೂ ಭಯದಿಂದ ವಿಮುಖರಾಗಿ ಓಡತೊಡಗಿದರು. ಅನಂತರ ಗಣಗಳೆಲ್ಲ ವಿಷ್ಣುವನ್ನು ಪೂಜಿಸುತ್ತ ಇಂದ್ರನ ಪರಾಕ್ರಮವನ್ನು ಪ್ರಶಂಸಿಸತೊಡಗಿದರು. ಇಂದ್ರನು ದೈತ್ಯನಿಗ್ರಹಮಾಡಿದನಂತರ ಶಿವನ ಸಮೀಪಕ್ಕೆ ಬಂದು ನಿಂತನು.

ವಾಮನ ಮಹಾಪುರಾಣದಲ್ಲಿ ಮೋಸದ ವೇಷ ಎಂಬ ೬೯ನೇಯ ಅಧ್ಯಾಯವು ಮುಗಿದುದು

—o—

## ಶಿವನ ದಾಸನಾದ ಅಂಧಕ



ದೈತ್ಯಬಲವು ಬಹಳವಾಗಿ ನಷ್ಟವಾದ ನಂತರ ಇಂದ್ರನು ಅಂಧಕನನ್ನು ಕುರಿತು ಹೇಳಿದನು. ''ನಿಮ್ಮ ಸೇನಾಪತಿಗಳೂ ಸೈನ್ಯವೂ ಬಹಳವಾಗಿ ನಷ್ಟವಾಗಿದೆ. ಮಂದರ ಪರ್ವತಕ್ಕೆ ಹೋಗಿ ಮತ್ತೆ ಯುದ್ಧಮಾಡೋಣ ಬಾ'' ಎಂದಾಗ ಅಂಧಕನು ''ಹೌದು ನಿನ್ನ ಮಾತು ನಿಜ. ಈ ಸಲ ನಾನು ಯುದ್ಧಕ್ಕೆ ಹೊರಟರೆ ಇಂದ್ರ, ಮಹೇಶ್ವರನನ್ನು ಜಯಿಸಿಯೇ ಬರುವೆನು. ಅಂದರೆ ಮಾತ್ರ ನನ್ನ ವಂಶಕ್ಕೆ ಗೌರವ ಬರುವದು'' ಎಂದು ಬೇಗನೆ ರಥ ಹೊರಡಿಸಲು ಸಾರಥಿಗೆ ಆಜ್ಞೆ ಮಾಡಿದನು.

ಅಪ್ಪಣೆಯಂತೆ ಸಾರಥಿಯು ಉತ್ತಮವಾದ ಕುದುರೆಗಳನ್ನು ಕೂಡಿದ ರಥವನ್ನು ತಂದು ನಿಲ್ಲಿಸಿದನು. ಅಂಧಕನು ಅದರಲ್ಲಿ ಹೊರಟನು. ಆದರೆ ಆ ರಥದ ಕುದುರೆಗಳು ಹರನ ಸಮೀಪಕ್ಕೆ ಹೋಗಲು ಸರ್ವಥಾ ನಿರಾಕರಿಸಿದವು. ಹೇಗೋ ಮಾಡಿ ಪ್ರಮಥರ ಸೈನ್ಯದ ಸಮೀಪಕ್ಕೆ ಹೋಗಿ ಅಂಧಕನು ತನ್ನ ಬಿಲ್ಲನ್ನು ಹೆದೆಯೇರಿಸಿ ತೀಕ್ಷ್ಣವಾದ ಬಾಣಗಳಿಂದ ಇಂದ್ರ, ವಿಷ್ಣು, ಮಹೇಶ್ವರರನ್ನು ಪ್ರಹರಿಸಿದನು. ಇವನ ಬಾಣಪ್ರಯೋಗ ದಿಂದ ಪ್ರಮಥರ ಸೈನ್ಯವೆಲ್ಲಾ ಆಚ್ಛಾದಿತವಾಯಿತು. ಆಗ ಚಕ್ರಧಾರಿಯಾದ ವಿಷ್ಣುವು ದೇವತೆಗಳಿಗೆ ಅಂದನು. ''ಹೇಡಿಗಳಂತೆ ಹೀಗೇಕೆ ಕುಳಿತಿರುವಿರಿ? ಕೂಡಲೇ ಹೊರಟು ಇವನ ರಥವನ್ನು ಛೇದನ ಮಾಡಿರಿ. ರಥವು ಭಿನ್ನವಾದ ನಂತರ ಶಂಕರನೇ ಅವನನ್ನು ದಹಿಸುತ್ತಾನೆ.'' ವಿಷ್ಣುವಿನ ಮಾತನ್ನು ಕೇಳಿ ಪ್ರಮಥರೆಲ್ಲರೂ ದೇವತೆಗಳೊಡನೆ ಸೇರಿ ಯುದ್ಧ ವಾದ್ಯಗಳನ್ನು ಮೊಳಗಿಸುತ್ತ ಉತ್ಸಾಹದಿಂದ ಹೊರಟರು. ವಿಷ್ಣುವು ಗದಾಧಾರಿಯಾಗಿ ಒಂದೇ ನಿಮಿಷದಲ್ಲಿ ಅಂಧಕನ ರಥದ ದೊಡ್ಡ ದೊಡ್ಡ ಕುದುರೆಗಳನ್ನು ನಾಶಪಡಿಸಿದನು. ವಿನಾಯಕನೇ ಮೊದಲಾದ ಪ್ರಮಥರು ಅಂಧಕನ ರಥವನ್ನು ಧ್ವಜ, ಅಚ್ಚು ಸಹಿತವಾಗಿ ಮುರಿದು ಹಾಕಿದರು.

ಈ ರೀತಿ ರಥವು ನಾಶವಾದ ನಂತರ ಅಂಧಕನು ಧನುಸ್ಸನ್ನು ಬಿಸುಟು ಕೈಯಲ್ಲಿ ಗದೆಯನ್ನು ಹಿಡಿದು ದೇವತೆಗಳನ್ನು ಓಡಿಸಿಕೊಂಡು ಬಂದನು. ಸ್ವಲ್ಪ ಮುಂದಕ್ಕೆ ಬಂದು ಗಂಭೀರ ಧ್ವನಿಯಿಂದ ಅಂಧಕನು ಶಂಕರನಿಗೆ ಹೇಳಿದನು. ''ಎಲೈ ಭಿಕ್ಷುವೇ, ನೀನು ಭಿಕ್ಷುವಾಗಿದ್ದರೂ ನಿನ್ನ ಸುತ್ತಲೂ ಸೈನ್ಯವು ಆವರಿಸಿ ನಿಂತಿದೆ. ನಾನು ಶೂರನಾದ ರಾಜನಾದರೂ ಸಹ ಈಗ ಅಸಹಾಯನಾಗಿ ನಿಂತಿರುವೆನು. ಆದರೂ ನಿನ್ನನ್ನು ಜಯಿಸಿಯೇ ತಿರುತ್ತೇನೆ'' ಎಂದು ತನ್ನ ಪೌರುಷವನ್ನು ಕೊಚ್ಚಿ ಕೊಂಡನು. ಈ ಮಾತನ್ನು ಕೇಳಿದೊಡನೆಯೇ ಶಂಕರನು ತನ್ನ ಯೋಗಶಕ್ತಿಯಿಂದ ಬ್ರಹ್ಮೇಂದ್ರಾದಿ ದೇವತೆಗಳನ್ನು ತನ್ನ ಶರೀರದಲ್ಲಿಯೇ ಅಂತರ್ಭಾವ ಹೊಂದಿಸಿದನು. ಆಮೇಲೆ ಅಂಧಕನಿಗೆ ಹೀಗೆಂದನು. ''ಎಲೈ ದುಷ್ಟಾತ್ಮನೇ, ನಾನೂ ನಿನ್ನಂತೆ ಏಕಾಕಿಯಾಗಿ ಅಸಹಾಯಕನಾಗಿ ನಿನ್ನೊಡನೆ ಯುದ್ಧ ಮಾಡುತ್ತೇನೆ ಬಾ.''

ಹೀಗೆ ಒಮ್ಮೆಲೆ ದೇವತೆಗಳು ಮಾಯವಾದುದನ್ನು ನೋಡಿ ಅಂಧಕನು ಆಶ್ಚರ್ಯ ಪಟ್ಟು ಕೈಯಲ್ಲಿ ಗದೆಯನ್ನು ಧರಿಸಿ ಶಂಕರನನ್ನು ಎದುರಿಸಲು ವೇಗದಿಂದ ಬಂದನು. ಈ ಶಂಕರನು ತನ್ನ ವಾಹನವನ್ನು ತ್ಯಜಿಸಿದನು. ಕೈಯಲ್ಲಿ ಶೂಲವನ್ನು ತೆಗೆದುಕೊಂಡು

ಯುದ್ಧಕ್ಕೆ ನಿಂತನು ಭೈರವಮೂರ್ತಿಯಾದ ಶಂಕರನು ತನ್ನ ಶೂಲಾಯುಧದಿಂದ ವೇಗವಾಗಿ ಬರುತ್ತಿರುವ ಅಂಧಕನ ಹೃದಯದಲ್ಲಿ ಬಲವಾಗಿ ಛೇದಿಸಿದನು. ಆಗ ಹರನ ಆ ಭೈರವ ರೂಪವು ಭಯಂಕರವಾಗಿ ಕಂಡಿತು. ಕೋರೆ, ದಾಡೆಗಳು, ವ್ಯಾಘ್ರಚರ್ಮವು, ಜಟಾ-ಜೂಟವು ಧರಿಸಿರುವ ಸರ್ವಾಭರಣಗಳು ಹಣೆಯಲ್ಲಿರುವ ಅಗ್ನಿನೇತ್ರವು ಇವುಗಳಿಂದ ಅವನ ಭೈರವತೆಯು ಮತ್ತೂ ಭೀಕರವಾಗಿ ಕಂಡಿತು. ಈ ರೀತಿ ಭಯಂಕರನಾದ ಶಿವನು ಶೂಲಾಯುಧದಿಂದ ಅಂಧಕನನ್ನು ಛೇದಿಸಿದನು. ಆದರೂ ಅಂಧಕನು ಹೆದರದೇ ಶೂಲವನ್ನು ಹಾಗೆಯೇ ಎಳೆಯುತ್ತ ಹರದಾರಿಯ ವರೆಗೆ ಮುಂದೆ ಸರಿದನು. ಆ ಮೇಲೆ ದಯಾಳುವಾದ ಶಂಕರನು ಆ ಶತ್ರುವಿನ ಹೃದಯದಿಂದ ಶೂಲವನ್ನು ಜಾಗ್ರತೆಯಾಗಿ ಹೊರಗೆ ತೆಗೆದನು. ಆಗ ಚೇತರಿಸಿಕೊಂಡ ಆ ದೈತ್ಯನು ಹರನ ತಲೆಯ ಮೇಲೆ ಗದೆಯಿಂದ ಪ್ರಹರಿಸಿದನು.

ಈ ಗದಾ ಪ್ರಹಾರದಿಂದ ಶಂಕರನ ತಲೆಯಿಂದ ರಕ್ತವು ಚಿಮ್ಮಹತ್ತಿತು. ಆ ರಕ್ತದ ಮೊದಲನ ಧಾರೆಯಿಂದ ಅಗ್ನಿ ಸದೃಶನಾದ ಭೈರವನು ಹುಟ್ಟಿದನು. ಅವನು ವಿದ್ಯಾರಾಜನೆಂಬ ಹೆಸರಿನಿಂದ ಖ್ಯಾತಿಗೊಂಡನು. ಮತ್ತೊಂದು ಧಾರೆಯಿಂದ ಶೂಲಾಯುಧಧಾರಿಯಾದ ಮತ್ತೊಬ್ಬ ಭೈರವನು ಹುಟ್ಟಿದನು. ಅವನು ರುದ್ರನೆಂಬ ಹೆಸರಿನಿಂದ ಸರ್ವಪೂಜ್ಯನಾದನು. ಇತರ ರಕ್ತದಿಂದ ಚಂಡನೇ ಮೊದಲಾದ ಏಕಕಪಾಲಿ ಪರ್ಯಂತ ನಾಲ್ಕು ಭೈರವರು ಉತ್ಪನ್ನರಾದರು. ಭೂಮಿಯಲ್ಲಿ ಬಿದ್ದ ರಕ್ತದಿಂದ ಶೂಲಾಯುಧಧಾರಿಯಾದ ಭೈರವನು ಜನಿಸಿದನು. ಆತನಿಗೆ ಆಲಿತರಾಜನೆಂಬ ಹೆಸರು ಖ್ಯಾತವಾಯಿತು. ಹೀಗೆ ಹುಟ್ಟಿದ ಏಳು ಮಂದಿ ಭೈರವರು ಎಂಟನೇಯವನಾದ ವಿಘ್ನರಾಜನೂ, ಎಂಟು ಭೈರವರೆಂಬ ಪ್ರತೀತಿ ಇದೆ. ಆಗ ಮಹಾತ್ಮನಾದ ಶಂಕರನು ಮತ್ತೆ ಶೂಲಾಯುಧ ದಿಂದ ಅಂಧಕನನ್ನು ಛೇದಿಸಿ ಪೋಣಿಸಲ್ಪಟ್ಟ ಛತ್ರಿಯಂತೆ ಮೇಲೆತ್ತಿ ಹಿಡಿದನು. ಅವನ ಶರೀರದಿಂದ ಬಹಳವಾಗಿ ರಕ್ತ ಹರಿಯಿತು. ಅವನ ರಕ್ತ ಪ್ರವಾಹದಲ್ಲಿ ಶಂಕರನ ದೇಹವೆಲ್ಲ ನೆನೆಯಿತು.

ದೈತ್ಯನನ್ನು ನಾಶಮಾಡುವ ಶ್ರಮದಿಂದ ಹೆಚ್ಚಾಗಿ ಬೆವರೂರಿತು. ಹಣೆಯ ಮೇಲೆ ಗಾಯವಾಯಿತು. ಆ ಗಾಯದಿಂದ ಒಬ್ಬ ಕನ್ಯೆ ಜನಿಸಿದಳು. ಬೆವರಿನ ಹನಿಯು ಕೆಳಗೆ ಬಿದ್ದಾಗ ಅದರಿಂದ ಕೆಂಡದಂತಿರುವ ಒಬ್ಬ ಬಾಲಕನು ಜನಿಸಿದನು. ಅವನು ಬಹಳ ಬಾಯಾರಿಕೆಯಾದ್ದರಿಂದ ರಕ್ತವನ್ನೆಲ್ಲ ಪಾನಮಾಡಿದನು. ಹಣೆಯಿಂದ ಹುಟ್ಟಿದ ಆ ಕನ್ಯೆಯು ರಕ್ತವನ್ನೆಲ್ಲ ನೆಕ್ಕಿದಳು. ಆಗ ಶಂಕರನು ಆ ಕನ್ಯೆಗೆ ಹೇಳಿದನು. ''ಎಲ್ಲೆ ಶುಭಂಕರಿಯೇ, ದೇವಯಕ್ಷ ಗಂಧರ್ವರು ಮತ್ತು ಮಹರ್ಷಿಗಳು ನಿನ್ನನ್ನು ಪೂಜಿಸುವರು. ರಕ್ತದಿಂದ ಚರ್ಚಿತಳಾದುದರಿಂದ ನಿನಗೆ ಚರ್ಚಿಕಾ ಎಂಬ ಶುಭನಾಮವುಂಟಾಗುವದು.'' ಹೀಗೆ ಶಂಕರನಿಂದ ವರಪಡೆದ ಕನ್ಯೆಯು ವಿಂಧ್ಯಗಿರಿಯಲ್ಲಿರುವ ವಿಂಧ್ಯವಾಸಿನಿಯನ್ನೇ ಅನುಸರಿಸಿ ಭೂಮಿಯನ್ನೆಲ್ಲ ಸಂಚರಿಸಿ ಹಿಂಗುಲಕವೆಂಬ ಪರ್ವತದಲ್ಲಿ ನೆಲೆಸಿದಳು. ಚರ್ಚಿಕೆಯು ಹೊರಟುಹೋದ ನಂತರ ಕುಜನೆಂಬ ಬಾಲಕನಿಗೆ ಗ್ರಹಾಧಿಪತ್ಯವನ್ನು ದಯಪಾಲಿಸಿ ಎಲ್ಲ ಗ್ರಹಗಳ ಶುಭಾಶುಭ ಫಲದಾತೃತ್ವದಲ್ಲಿ ಮುಖ್ಯನಾಗಿರುವಿಕೆಯನ್ನು ಅವನಿಗೆ ವರರೂಪದಲ್ಲಿ ಅನುಗ್ರಹಿಸಿದನು.

ಅನಂತರ ಹರನು ಒಂದು ಸಾವಿರ ವರ್ಷಪರ್ಯಂತ ಅಂಧಕನನ್ನು ತನ್ನ ಸೂರ್ಯ ರೂಪವಾದ ಕಣ್ಣಿನಿಂದ ಅವನನ್ನು ಒಣಗುವಂತೆ ಮಾಡಿ ಅವನಲ್ಲಿ ಕೇವಲ ಅಸ್ಥಿ ಚರ್ಮ ಗಳು ಮಾತ್ರ ಉಳಿಯುವಂತೆ ಮಾಡಿದನು. ಶಂಭುವಿನ ನೇತ್ರಾಗ್ನಿಯಿಂದ ಶುಷ್ಕನಾದ ಅಸುರನು ಪಾಪರಹಿತನಾದನು. ಅಜ್ಞಾನಕ್ಕೆ ಕಾರಣವಾದ ಪಾಪವೆಲ್ಲವೂ ನಷ್ಟವಾಗಿ, ಜ್ಞಾನೋದಯವಾಗಿ, ಅವನು ತ್ರಿಲೋಕಾಧಿಪತಿಯಾದ ಶಂಕರನನ್ನು ಬಹಳವಾಗಿ ಸ್ತೋತ್ರಮಾಡತೊಡಗಿದನು.

''ಲೋಕತ್ರಯರಕ್ಷಕನೇ ಕಪಾಲಪಾಣಿಯೇ, ಲೋಕಮಾತೆಯಾದ ಪಾರ್ವತಿಗೂ ಗುರುವಾದವನೇ, ನಿನಗೆ ನಮಸ್ಕಾರವಿರಲಿ. ರಾಕ್ಷಸರೆಲ್ಲರೂ ನಿನ್ನನ್ನು ರುದ್ರರೆಂದು ಪಿತೃಗಳು ಭವನೆಂದೂ ಪೂಜಿಸುವರು. ನಾನು ನಿನಗೆ ದಾಸನಾಗಿರುವೆನು. ಲೋಕ ನಾಥನೇ, ನನ್ನ ಪಾಪಗಳನ್ನೆಲ್ಲ ನಾಶಪಡಿಸು. ನೀನು ತ್ರಿಮೂರ್ತಿಗಳ ಸ್ವರೂಪದಲ್ಲಿದ್ದು ಕೃತ-ತ್ರೇತಾ-ದ್ವಾಪರಗಳೆಂಬ ಯುಗಗಳಿಗೆ ಅಧಿಪತಿಯಾಗಿರುವಿ. ಮೂರು ವಿಧವಾದ ಪುಷ್ಕರ ಕ್ಷೇತ್ರಕ್ಕೂ, ಸತ್ವರಜ ತಮೋ ರೂಪವಾದ ಗುಣತ್ರಯಕ್ಕೂ ನೀನು ಅಧಿಪತಿಯಾಗಿರುವಿ. ಇಂತಹ ನೀನು ನನ್ನನ್ನು ಪವಿತ್ರನನ್ನಾಗಿ ಮಾಡು. ನಾನು ನಿನಗೆ ಶರಣಾಗತನಾಗಿರುವೆನು. ನಚಿಕೇತನಿಂದ ಹುಟ್ಟಿದ ಮೂರು ಅಗ್ನಿಸಾಧ್ಯ ಕರ್ಮಗಳಿಗೆ ನೀನೇ ಫಲಪ್ರದವಾಗಿರುವಿ. ಸ್ವರ್ಗ, ಮರ್ತ್ಯ ಪಾತಾಳ ಲೋಕಗಳಲ್ಲಿ ನೀನೇ ವಾಸಿಸಿರುವಿ. ಮೂರು ಲೋಕಕ್ಕೂ ಅಧಿಪತಿಯಾಗಿರುವ ನೀನು ಶರಣಾಗತನಾಗಿ ಬಂದ ನನ್ನನ್ನು ಪರಿಶುದ್ಧ ಗೊಳಿಸು. ಗಿರೀಶನೇ, ನಾನು ನಿನ್ನಲ್ಲಿ ಮಹಾಪರಾಧಗೈದಿದ್ದೇನೆ. ನಿನ್ನ ಅನುಗ್ರಹದಿಂದ ಮಾನಸ ದೋಷವು ದೂರವಾದ ಮೇಲೆ ಶಿರಬಗ್ಗಿಸಿ ನಿನಗೆ ನಮಸ್ಕಾರ ಮಾಡುತ್ತಲಿದ್ದೇನೆ. ಮಹಾ ಪಾಪಿಷ್ಠನಾದ ನಾನು ಅನೇಕ ಪಾಪ ಹೇತುವಾದ ಕಾರ್ಯಗಳನ್ನು ಮಾಡಿರುವೆನು. ಇಂಥ ನನ್ನ ಸರ್ವ ಪಾಪಗಳನ್ನೂ ಹೋಗಲಾಡಿಸು.

ಅಥವಾ ಒಂದು ರೀತಿಯಲ್ಲಿ ನಾನು ಅಪರಾಧಿಯೇ ಅಲ್ಲವೆಂದೇ ಹೇಳಬಹುದು. ಯಾಕೆಂದರೆ ನನ್ನನ್ನು ನೀನು ಹಸ್ತದಿಂದ ಸ್ಪರ್ಶ ಮಾಡಿದ್ದೀಯೆ, ಎಲ್ಲ ಕಾರ್ಯ ಗಳಲ್ಲಿಯೂ ಸರ್ವತಂತ್ರ ಸ್ವತಂತ್ರನು ನೀನೇ ಆಗಿರುವಿ. ಸೃಷ್ಟಿ ಸ್ಥಿತಿಲಯ ಮಾಡುವ ಬ್ರಹ್ಮ ವಿಷ್ಣು ಮಹೇಶನೂ ನೀನೇ ಆಗಿರುವಿ. ವ್ಯಕ್ತಾವ್ಯಕ್ತ ವಸ್ತುಗಳೂ ಸಹ ನಿನ್ನಿಂದ ಅಧಿಕೃತವಾಗಿವೆ. ಸಹಸ್ರ ಪಾದ ಮತ್ತು ಹಸ್ತಗಳುಳ್ಳ ವಿರಾಟ್ ಪುರುಷನು ನೀನೇ ಆಗಿದ್ದೀಯೇ. ನೀನು ಸತ್ಯಸಂಕಲ್ಪನಾಗಿರುವಿ. ನಿನ್ನನ್ನೇ ಗೀರ್ವಾಣಪತಿಯೆಂತಲೂ, ಪಶುಪತಿಯೆಂತಲೂ ಕರೆಯುವರು. ಎಲ್ಲ ವೇದದಿಂದ ನೀನೇ ಪ್ರತಿಪಾದ್ಯನಾಗಿರುವಿ. ಜಯಸ್ವರೂಪನೂ ನೀನೇ ಆಗಿರುವಿ. ಮಂಗಲಸ್ವರೂಪನೂ ನೀನೇ ಆಗಿರುವಿ. ನೀನು ನನ್ನನ್ನು ರಕ್ಷಿಸು.'' ಹೀಗೆ ದೈತ್ಯಾಧಿಪತಿಯಾದ ಅಂಧಕನು ಸ್ತೋತ್ರ ಮಾಡಲಾಗಿ ಮಹಾದೇವನು ಸಂತುಷ್ಟನಾಗಿ ''ಎಲೈ ದಾನವನೇ, ನಿನ್ನ ಸ್ತೋತ್ರದಿಂದ ನಾನು ಸಂತೋಷಗೊಂಡಿದ್ದೇನೆ. ನಿನಗೆ ಮಂಗಳವಾಗಲಿ. ಇಷ್ಟವಾದ ವರವನ್ನು ಕೇಳಿಕೋ.''

ಆಗ ಅಂಧಕನು ಅಂದನು, ''ಅಂಬಿಕೆಯು ನನಗೆ ತಾಯಿಯು. ನೀನೇ ನನ್ನ ತಂದೆಯು. ನಿಮ್ಮಿಬ್ಬರ ಪಾದಗಳಲ್ಲಿ ನಾನು ವಂದನೆಯನ್ನು ಅರ್ಪಿಸುವೆನು. ತಾಯಿಯ

ವಿಷಯದಲ್ಲಿ ನಾನು ಮಹಾಪರಾಧವನ್ನೆಸಗಿರುವೆನು. ಅದನ್ನು ನೀನು ಮನ್ನಿಸಿ ಅನುಗ್ರಹಿಸು. ನನ್ನ ''ದೈತ್ಯ ಭಾವವು'' ನಿನ್ನ ಅನುಗ್ರಹದಿಂದ ದೂರವಾಗಲಿ. ನಿನ್ನ ವಿಷಯದಲ್ಲಿ ನನಗೆ ಸ್ಥಿರವಾದ ಭಕ್ತಿಯಿದೆ'' ಎಂದು ಬೇಡಿಕೊಳ್ಳಲು ಮಹಾದೇವನು ಹಾಗೇ ಆಗಲೆಂದು ದೈತ್ಯರಾಜನನ್ನು ಹರಸಿದನು.

''ನೀನು ದೈತ್ಯ ಭಾವದಿಂದ ಮುಕ್ತನಾಗಿ ಭೃಂಗೀ ಎಂಬ ಹೆಸರಿನಿಂದ ನನ್ನ ಗಣಪತಿಗಳಲ್ಲಿ ಒಬ್ಬನಾಗಿರು'' ಎಂದು ಹೇಳಿ ಯುದ್ಧದಲ್ಲಿ ಅವನಿಗಾದ ಗಾಯಗಳನ್ನೆಲ್ಲ ತಾನೇ ಹೋಗಲಾಡಿಸಿದನು. ಅನಂತರ ಮಹೇಶ್ವರನು ತನ್ನ ದೇಹದಲ್ಲಿ ಅಡಗಿಸಿಕೊಂಡ ಬ್ರಹ್ಮಾದಿದೇವತೆ ಗಳನ್ನೆಲ್ಲ ಹೊರಗೆ ಬರುವಂತೆ ಕರೆದನು. ಅವರೆಲ್ಲರೂ ಹೊರಗೆ ಬಂದು ಮಹೇಶ್ವರನನ್ನು ನಮಸ್ಕರಿಸಿದರು. ಮಹೇಶ್ವರನು ನಂದಿಯೊಡಗೂಡಿದ ಗಣಾಧಿಪತಿಗಳನ್ನೆಲ್ಲ ಕರೆದು ಭೃಂಗಿಯನ್ನು ಅವರ ಮುಂದೆ ಕುಳ್ಳಿರಿಸಿ ''ಇವನೇ ಅಂಧಕ''ನೆಂದು ಎಲ್ಲರಿಗೂ ತೋರಿಸಿದನು. ಇವನ ಮೇಲೆ ದಯೆ ತೋರಿಸಿ ಭೃಂಗೀ ಎಂದು ಕರೆದು ಗಣಾಧಿಪತ್ಯವನ್ನು ಕೊಟ್ಟಿದ್ದಕ್ಕಾಗಿ ಎಲ್ಲರೂ ಶಂಕರನನ್ನು ಪ್ರಶಂಸಿಸಿದರು.

ಸರಿ, ಎಲ್ಲರೂ ತಮ್ಮ ತಮ್ಮ ಸ್ಥಾನಕ್ಕೆ ತೆರಳಿದರು. ಇಂದ್ರನು ಮಲಯ ಪರ್ವತಕ್ಕೆ ಹೋಗಿ ಅಲ್ಲಿ ತನ್ನ ಕಾರ್ಯವನ್ನು ನೆರವೇರಿಸಿ ಸ್ವರ್ಗಕ್ಕೆ ತೆರಳಿದನು. ಬ್ರಹ್ಮ, ವಿಷ್ಣು ಇವರನ್ನು ಅವರವರಿಗೆ ಯೋಗ್ಯವಾದ ರೀತಿಯಲ್ಲಿ ಸತ್ಕರಿಸಿ ಕಳುಹಿಸಿಕೊಟ್ಟನು. ಎಲ್ಲ ದೇವತೆಗಳೂ ಹೊರಟು ಹೋದ ನಂತರ ಗಣಗಳನ್ನೆಲ್ಲ ದೇಹ ಮಧ್ಯಭಾಗ ದಿಂದ ಹೊರಗೆಡುಹಿದನು. ಅವರೂ ಸಹ ಹೊರಗೆ ಬಂದು ಶಂಕರನನ್ನು ನಮಸ್ಕರಿಸಿದರು. ತಮ್ಮ ತಮ್ಮ ವಾಹನಾರೂಢರಾಗಿ ತಮ್ಮ ತಮ್ಮ ಸ್ಥಳಕ್ಕೆ ಹೊರಟರು. ಆ ಪ್ರಮಥಗಣಗಳು ಹೋದ ದೇಶದಲ್ಲೆಲ್ಲ ಸಂಪತ್ ಸುಖ ಸಮೃದ್ಧಿಗಳು ನೆಲೆಗೊಂಡವು. ಪ್ರಮಥರೆಲ್ಲರೂ ಹೋದ ನಂತರ ನಂದಿಯು ಅಂಧಕನ ಕೈಯನ್ನು ಹಿಡಿದು ಅವನೊಡನೆ ಮಂದರ ಪರ್ವತಕ್ಕೆ ಬಂದು ಸೇರಿದನು. ಹರನೂ ಸಹ ಯುದ್ಧ ಕಾರ್ಯಗಳನ್ನೆಲ್ಲ ಮುಗಿಸಿ ಎರಡು ಸಾವಿರ ವರ್ಷಗಳ ನಂತರ ಮನೆಗೆ ಬಂದು ಸೇರಿ ಅಲ್ಲಿ ಬಿಳಿಯ ಎಕ್ಕೆ ಗಿಡದ ಹೂವಿನಲ್ಲಿ ಅಡಗಿಕೊಂಡಿದ್ದ ಪಾರ್ವತಿಯನ್ನು ನೋಡಿದನು. ಪಾರ್ವತಿಯು ಅಡಗಿದ್ದ ಹೂವನ್ನು ಬಿಟ್ಟು ಹೊರಗೆ ಬಂದು ಸಖಿಯರನ್ನು ಕರೆದಳು. ಅವರಿಂದೊಡಗೂಡಿದ ಪಾರ್ವತಿಯು ಹರದರ್ಶನ ಮಾಡಲು ಹೊರಟಳು. ಹರ್ಷದಿಂದ ಆತನನ್ನು ಹೊಂದಿದಳು. ಹರನು ಹೇಳಿದನು, ''ದೇವಿಯೇ, ಈ ಅಂಧಕನು ನಿನ್ನ ದಾಸನಾಗಿ ನಿನಗೆ ಶರಣಾಗತನಾಗಿರುವನು.'' ಪಾರ್ವತಿಯೂ ಸಹ ಆತನನ್ನು ಮುಂದಕ್ಕೆ ಕರೆದು ''ನಿನಗೆ ಶ್ರೇಯಸ್ಸುಂಟಾಗಲಿ'' ಎಂದು ಹರಸಿದಳು. ಆಗ ಅಂಧಕ ನಂದಿಯರಿಬ್ಬರೂ ಕೂಡ ದೇವಿಯ ಪಾದಗಳಿಗೆ ನಮಸ್ಕರಿಸಿದರು. ಆ ಸಮಯಕ್ಕೆ ಅವರು ಮಾಡಿದ ಭಕ್ತಿ ಸ್ತೋತ್ರವು ಶ್ರುತಿ ಸಮ್ಮತವೂ, ಪಾಪನಾಶಕವೂ ಆಗಿರುವದು.

''ಭವಪತ್ನಿಯಾಗಿಯೂ, ಭೂತ ಭಾವಿಸರ್ವವಸ್ತುಪ್ರಿಯಳಾಗಿಯೂ, ಷಣ್ಮುಖನ ತಾಯಿಯಾಗಿಯೂ, ಶಂಕರನ ಪ್ರಿಯೆಯಾಗಿಯೂ, ಇಷ್ಟಾರ್ಥ ಪ್ರದಳಾಗಿಯೂ, ಕಾಲರಾತ್ರಿರೂಪಳಾಗಿಯೂ ಇರುವ ನಿನಗೆ ಪುನಃ ಪುನಃ ಅನಂತ ನಮಸ್ಕಾರಗಳು. ಶರಣಾಗತನಾದ ನಾನು ನಿನ್ನನ್ನು ಆಶ್ರಯಿಸುವೆನು.''

ಈ ರೀತಿಯಾಗಿ ಅಂಧಕನು ಸ್ತೋತ್ರ ಮಾಡಲಾಗಿ ದೇವಿಯು ಪ್ರಸನ್ನ ಚಿತ್ತಳಾಗಿ ''ಇಷ್ಟವಾದ ವರವನ್ನು ಬೇಡಿಕೋ'' ಎಂದಳು. ಆಗ ಭೃಂಗಿಯು ಹೇಳಿದನು. ''ತಾಯಿಯೇ, ನಾನು ನಿನ್ನ ವಿಷಯದಲ್ಲಿ ಮನೋವಾಕ್ ಕಾಯಗಳಿಂದ ಮಾಡಿರುವ ಮೂರು ವಿಧವಾದ ಪಾಪಗಳು ನಾಶಹೊಂದಲಿ ಹಾಗೂ ಈಶ್ವರನಲ್ಲಿ ಅಚಲವಾದ ಭಕ್ತಿಯು ಉಂಟಾಗಲಿ'' ಎಂದು ಪ್ರಾರ್ಥಿಸಲು -

ಪಾರ್ವತಿಯು ''ಹಾಗೇ ಆಗಲೆಂದು'' ಹೇಳಿದಳು. ''ನೀನು ಈಶ್ವರನನ್ನು ಪೂಜಿಸುತ್ತ ಗಣಗಳಿಗೆ ಅಧಿಪತಿಯಾಗಿ ಮಹೇಶ್ವರನಿಗೆ ಪ್ರೀತಿಪಾತ್ರನಾಗಿ ಮಹೇಶ್ವರ ಸದೃಶವಾದ ಭೈರವ ರೂಪವನ್ನು ಧರಿಸುವ ಭೃಂಗೀರೂಪವನ್ನು ಹೊಂದಿ ವಾಸ ಮಾಡು.'' ಹೀಗೆ ಪುಲಸ್ತ್ಯರು ವೃತ್ತಾಂತವನ್ನು ಮುಗಿಸಿ ಈ ಆಖ್ಯಾನವು ಬಹಳ ಪುಣ್ಯಕರ ವಾದುದು. ಪಠಿಸುವವರಿಗೆ ಆಯುರಾರೋಗ್ಯಾದಿ ಫಲಗಳನ್ನು ಉಂಟು ಮಾಡಿ ಕೊಡುವದು ಎಂದು ಫಲಶ್ರುತಿಯನ್ನು ಹೇಳಿ ಉಪಸಂಹರಿಸಿದರು.

ವಾಮನ ಮಹಾಪುರಾಣದಲ್ಲಿ ಶಿವನ ದಾಸನಾದ ಅಂಧಕ ಎಂಬ ೭೦ನೇಯ ಅಧ್ಯಾಯವು ಮುಗಿದುದು

—o—

## ದಿತಿಯ ವ್ರತಭಂಗ

## ಅಧ್ಯಾಯ - ೭೧

೩. ಮಲಯೇಽ ಪಿ ಮಹೇಂದ್ರೇಣ ಯತ್ಕೃತಂ ದ್ವಿಜಸತ್ತಮ ।
ನಿಷ್ಪಾದಿತಂ ಸ್ವಕಂ ಕಾರ್ಯಂ ತನ್ಮೇ ತ್ವಂ ಖ್ಯಾತುಮರ್ಹಸಿ ॥
ಶ್ರೂಯತಾಂ ಯನ್ಮಹೇಂದ್ರೇಣ ಮಲಯೇ ಪರ್ವತೇ ಮುನೇ ।
ಕೃತಂ ಲೋಕಹಿತೇ ಕಾರ್ಯಮಾತ್ಮನಶ್ಚ ತಥಾ ಹಿತಮ್ ॥

''ಮಲಯಪರ್ವತದಲ್ಲಿ ಇಂದ್ರನೇನು ಮಾಡಿದನು? ಹಾಗೂ ಅವನಿಗೆ ಯಾವ ಸಿದ್ಧಿ ಯಾಯಿತು?'' ಎಂದು ನಾರದರು ಪ್ರಶ್ನೆ ಕೇಳಿದಾಗ ಪುಲಸ್ತ್ಯರು ಹೇಳುತ್ತಾರೆ. ಲೋಕ ಮತ್ತು ತನ್ನ ಹಿತಾಪೇಕ್ಷಿಯಾದ ಇಂದ್ರನ ಅಪ್ಪಣೆಯಂತೆ ಅಘಾಸುರನ ಮಾತಿನಂತೆ ಮಯ, ತಾರ ಮೊದಲಾದ ದಾನವರನ್ನು ದೇವತೆಗಳು ಜಯಿಸಿದ ನಂತರ ದಾನವರೆಲ್ಲ ಪಾತಾಳಕ್ಕೆ ಓಡಿಹೋದರು. ದಾರಿಯಲ್ಲೇ ಮಲಯ ಪರ್ವತ ಹತ್ತಿತು. ಆ ಪರ್ವತವು ಸಿದ್ಧ ಗಂಧರ್ವರ ವಿಹಾರ ಭೂಮಿಯಾದುದರಿಂದ ಪ್ರಕೃತಿ ಸೌಂದರ್ಯದ ನೆಲೆ ಬೀಡಾಗಿತ್ತು. ಪುಷ್ಪಗಳ ಪರಿಮಳ ಅಲ್ಲಲ್ಲಿ ಸೂಸುತ್ತಿತ್ತು.

ಈ ಮನೋಹರವಾದ ಪರ್ವತವನ್ನು ನೋಡಿ ದಾನವರೆಲ್ಲರೂ ಸ್ವಲ್ಪ ಸಮಯ ಅಲ್ಲೇ ವಿಶ್ರಾಂತಿಗಾಗಿ ತಂಗಿದರು. ಅಲ್ಲಿ ಅವರಿಗೆ ಮಂದಮಾರುತವು ಕಂಪಾದ ವಾಸನೆಯನ್ನು ಮೂಗಿಗೆ ತಂದೊಡ್ಡಿತು. ಅಲ್ಲಿಯೇ ಸಮೀಪದಲ್ಲಿ ವಾಸಿಸುತ್ತಿದ್ದ ತಪಸ್ವಿಗಳಿಗೆ ಈ ದಾನವರು ಕಿರುಕುಳ ಕೊಡಹತ್ತಿದರು. ಇದನ್ನು ತಿಳಿದ ಶಂಕರನು ಆ ಬಾಧೆಯನ್ನು ತಪ್ಪಿಸಲು ಇಂದ್ರನನ್ನು ಅಲ್ಲಿಗೆ ಕಳುಹಿಸಿದನು.

೪. ''ಸ ಚಾಪಿ ದದೃಶೇ ಗಚ್ಛನ್ ಪಥಿಗೋಮಾತರಂ ಹರಿಃ ।
ತಸ್ಯಾಃ ಪ್ರದಕ್ಷಿಣಾಃ ಕೃತ್ವಾ ದೃಷ್ಟ್ವಾ ಶೈಲಂ ಚ ಸುಪ್ರಭಮ್ ।

ಇಂದ್ರನು ಹೋಗುತ್ತಿದ್ದ ದಾರಿಯಲ್ಲಿ ಕಾಮಧೇನುವನ್ನು ನೋಡಿದನು. ಧೇನುವಿಗೆ ಪ್ರದಕ್ಷಿಣೆ ಮಾಡಿದನು. ಮಲಯ ಪರ್ವತದಲ್ಲಿ ಭೋಗಾಸಕ್ತರಾಗಿ ಸಂತೋಷದಿಂದಿದ್ದ ದಾನವರನ್ನು ನೋಡಿದನು. ಅವನು ಅಸುರರನ್ನು ಯುದ್ಧಕ್ಕೆ ಕರೆದನು. ಅವರು ಕೂಡಲೇ ಸಿದ್ಧರಾಗಿ ಬಾಣವೃಷ್ಟಿಯನ್ನೇ ಕರೆದರು. ಆದರೆ ಇಂದ್ರನೂ ಸಹ ಪ್ರತಿಯಾಗಿ ಮೇಘವು ಪರ್ವತವನ್ನು ನೋಡಿ ಮಳೆಗೆರೆಯುವಂತೆ ಬಾಣ ವೃಷ್ಟಿಯಿಂದ ಆಚ್ಛಾದಿಸಿಬಿಟ್ಟನು. ಅದರಲ್ಲಿಯೂ ವಿಶೇಷವಾಗಿ ಪಾಕನೆಂಬ ಅಸುರನನ್ನು ನಿಶಿತವಾದ ಬಾಣಕ್ಕೆ ಗುರಿಮಾಡಿ ಪ್ರಹರಿಸಿದನು.

**೫. ಪಾಕಂ ಜಘಾನ ತೀಕ್ಷ್ಣಾಗ್ರೈರ್ಮಾರ್ಗಣೈಃ ಕಂಕವಾಸಸೈಃ ।**
**ಪಾಕ ಶಾಸನ ಇತ್ಯೇವಂ ನಾಮ ಲೇಭೇ ತತಃ ಪ್ರಭುಃ ॥**

ಈ ಕಾರಣದಿಂದಲೇ ಇಂದ್ರನಿಗೆ ಪಾಕಶಾಸನ ಎಂಬ ಹೆಸರು ಖ್ಯಾತಿಗೆ ಬಂದಿತು.

**೬. ತಥಾನ್ಯಂ ಪುರನಾಮಾನಂ ಬಾಣಾಸುರ ಸುತಂ ಬಲೀ ।**
**ಸುಪುಂಖೈರ್ದಾರಯಾಮಾಸ ತತೋಽಭೂತ್ ಸ ಪುರಂದರಃ ॥**

ಇದರಂತೆಯೇ ಬಾಣಾಸುರನ ಮಗನಾದ ಪುರನೆಂಬವನನ್ನೂ ತನ್ನ ಬಾಣ ಪ್ರಯೋಗದಿಂದ ಸೀಳಿ ಒಗೆದುದರಿಂದ ಪುರಂದರ ಎಂಬ ಹೆಸರು ಪ್ರಸಿದ್ಧಿಗೆ ಬಂದಿತು. ಇಂದ್ರನ ಭಯದಿಂದ ದಾನವ ಬಲವು ಪಾತಾಳಕ್ಕೆ ಓಡಿತು. ಇಂದ್ರನು ಹೀಗೆ ದೈತ್ಯರನ್ನು ಓಡಿಸುವುದಕ್ಕಾಗಿಯೇ ಶಂಕರನ ಅನುಜ್ಞೆಯಂತೆ ಇಲ್ಲಿಗೆ ಬಂದಿದ್ದನು. ಮಧ್ಯದಲ್ಲಿ ನಾರದರು ಮತ್ತೆ ಪ್ರಶ್ನಿಸಿದರು, ''ಇಂದ್ರನಿಗೆ ಗೋತ್ರಭಿತ್ ಎಂಬ ಹೆಸರು ಏಕೆ ಪ್ರಾಪ್ತವಾಯಿತು?'' ಈ ನಾರದರ ಪ್ರಶ್ನೆಗೆ ಪುಲಸ್ತ್ಯರು ಹೇಳುತ್ತಾರೆ, ''ಹಿರಣ್ಯಕಶ್ಯಪುವು ಹತನಾದ ನಂತರ ಇಂದ್ರನು ದಾನವರ ನಾಶಕ್ಕಾಗಿ ಸಹಾಯ ಮಾಡುವುದನ್ನು ನೋಡಿ ಪುತ್ರನಾಶದಿಂದ ದುಃಖಿತಳಾದ ದಿತಿಯು ಕಶ್ಯಪರನ್ನು ಕುರಿತು ಪ್ರಾರ್ಥಿಸಿಕೊಂಡಳು. ''ಎಲೈ ನಾಥನೇ, ಇಂದ್ರನನ್ನು ನಾಶಪಡಿಸುವಂಥ ಶೂರನಾದ ಪುತ್ರನನ್ನು ನನಗೆ ಅನುಗ್ರಹಿಸು.''

**೭. ಸಮವತ್ಸರಾಣಾಂ ದಿವ್ಯಾನಾಂ ಸ್ಥಾಸ್ಯಸೇ ದಶತೀರ್ದಶ ।**
**ಶೌಚಾಚಾರ ಸಮಾಯುಕ್ತಾ ಪ್ರಾಪ್ಸ್ಯಸೇ ಶತ್ರುಹಂ ಸುತಮ್ ।**

ಆಗ ಕಶ್ಯಪರು ಹೇಳಿದರು, ''ಇದು ಕಠಿಣವಾದ ಕಾರ್ಯ. ನೀನು ಸಾವಿರ ವರ್ಷಗಳ ಪರ್ಯಂತರ ಶೌಚಾಚಾರಗಳಿಂದ ಶುದ್ಧಳಾಗಿ ವ್ರತವನ್ನಾಚರಿಸಿದರೆ ಮಾತ್ರ ಶತ್ರುನಾಶಕನಾದ ಪುತ್ರನು ಉತ್ಪನ್ನವಾಗುವ ಸಂಭವವಿದೆ.'' ಆ ಮಾತಿನಂತೆಯೇ ದಿತಿಯೂ ತನ್ನ ಪತಿಯು ಹೇಳಿದ ವ್ರತವನ್ನು ಕೈಕೊಂಡಳು. ಕಶ್ಯಪನು ಸಹ ಅವಳ ಇಚ್ಛೆಯಂತೆ ಅವಳಿಗೆ ಪುತ್ರೋತ್ಪತ್ತಿಯಾಗುವಂತೆ ಮಾಡಿ ಉದಯ ಪರ್ವತಕ್ಕೆ ತಪಸ್ಸಿಗೆ ಹೋದನು.

**೮. ಕರಿಷ್ಯಾಮ್ಯನು ಶುಶ್ರೂಷಾಂ ಭವತ್ಯಾ ಯದಿ ಮನ್ಯಸೇ ।**
**ಬಾಢಮಿತ್ಯಬ್ರವೀತ್ಸಾಪಿ ಭಾವಿ ಕರ್ಮ ಪ್ರಚೋದನಾತ್ ॥**

ಇತ್ತ ಇಂದ್ರನು ಆಶ್ರಮಕ್ಕೆ ದಿತಿಯನ್ನು ಕುರಿತು ಕೇಳಿಕೊಂಡನು, ''ನೀನು ವ್ರತನಿಯಮ ಪರಳಾಗಿರುವಿ. ನಿನ್ನ ಸೇವಾ ಶುಶ್ರೂಷೆ ಮಾಡಲು ನನಗೆ ಅನುಮತಿ

ಕೊಡು.'' ದಿತಿಯೂ ಕೂಡ ಮುಂದಿನ ಕರ್ಮಚೋದನೆ ಹಾಗೂ ವಿಧಿಯ ಪ್ರೇರಣೆಗೆ ಅನುಸಾರವಾಗಿ ಆಗಬಹುದೆಂದು ಒಪ್ಪಿದಳು. ಇಂದ್ರನು ಬಹಳ ವಿನೀತನಾಗಿ ಅವಳ ವ್ರತದ ಅನುಕೂಲತೆಗಳನ್ನು ಕಲ್ಪಿಸಿ ಕೊಟ್ಟನು. ವ್ರತದ ಸಮಯ ಮುಗಿಯುತ್ತ ಬಂದಿತು.

ಒಂದು ದಿನ ದೈವಯೋಗದಿಂದ ದಿತಿಯು ಶೋಕಾಕ್ರಾಂತಳಾದುದರಿಂದ ಕೇವಲ ಶಿರಸ್ನಾನಮಾಡಿ ತನ್ನ ಕೂದಲುಗಳನ್ನು ಹರವಿಕೊಂಡು ಮೊಳಕಾಲಿಗೆ ಶಿರಸ್ಸನ್ನು ಆತು ಮಲಗಿದ್ದಳು. ಕೇಶಗಳೆಲ್ಲವೂ ಕಾಲುಗಳ ಮೇಲೆ ಜೋಲು ಬಿದ್ದಿದ್ದವು. ಸಮಯವನ್ನು ಸಾಧಿಸುತ್ತಿದ್ದ ಇಂದ್ರನು ಇದೇ ಸುಸಮಯವೆಂದು ತಿಳಿದು ದಿತಿಯ ಮೂಗಿನ ರಂಧ್ರದಿಂದ ಅವಳ ಉದರಕ್ಕೆ ಪ್ರವೇಶಿಸಿದನು. ಅಲ್ಲಿ ಆತನು ಒಂದು ತೇಜಸ್ವಿಯಾದ ಬಾಲಮೂರ್ತಿಯನ್ನು ನೋಡಿದನು. ಆ ಬಾಲಕನ ಬಾಯಲ್ಲಿ ಒಂದು ಮಾಂಸದ ಚೀಲವಿದ್ದಿತ್ತು. ಇಂದ್ರನು ಆ ಮಾಂಸದ ಚೀಲವನ್ನು ಕಸಿದುಕೊಂಡು ಕೋಪಾವಿಷ್ಟನಾಗಿ ಮರ್ದಿಸಿದನು. ಆದರೂ ಅದು ಮೇಲ್ಭಾಗದ ಅರ್ಧಭಾಗ ಕೆಳಭಾಗದ ಅರ್ಧಭಾಗ ಭಿನ್ನಭಿನ್ನವಾಗಿ ಬೆಳೆಯತೊಡಗಿತು.

ಈ ರೀತಿ ಬೆಳೆದ ಮಾಂಸ ಪಿಂಡವನ್ನು ಕಂಡ ಇಂದ್ರನು ವಜ್ರಾಯುಧಧಾರಿಯಾದನು. ಆ ವಜ್ರಾಯುಧದಿಂದಲೇ ದಿತಿಯ ಆ ಗರ್ಭವನ್ನು ಇಂದ್ರನು ಏಳು ತುಂಡಾಗಿ ಕತ್ತರಿಸಿದನು. ಗರ್ಭವು ಗಟ್ಟಿಯಾಗಿ ಅತ್ತಿತ್ತು. ಇದರಿಂದ ಎಚ್ಚರಗೊಂಡ ದಿತಿಯು ಇಂದ್ರನ ಚೇಷ್ಟೆಯನ್ನು ತಿಳಿದಳು. ಅಳುತ್ತಿದ್ದ ತನ್ನ ಮಗುವಿನ ಧ್ವನಿಯನ್ನೂ ಕೇಳಿದಳು. ಒಳಗಿರುವ ಇಂದ್ರನು ''ಮೂಢಾ ಏತಕ್ಕೆ ಅಳುತ್ತಿ'' ಎಂದು ತಾನೇ ಮಾಡಿದ ಏಳು ಭಾಗಗಳನ್ನು ಪುನಃ ಏಳು ಭಾಗಗಳನ್ನಾಗಿ ಮಾಡಿದನು. ಅವರೇ ನಲವತ್ತೊಂಭತ್ತು ಜನ ಮರುತ್ತರು. ಹಿಂದುಗಡೆಯಲ್ಲಿ ಅವರೆಲ್ಲ ಇಂದ್ರನ ಸೇವಕರಾದರು. ಅವರು ಸುಖೋಪಚಾರದಿಂದ ವೃದ್ಧಿ ಹೊಂದಿದರು. ಅನಂತರ ಇಂದ್ರನು ವಜ್ರಧಾರಿಯಾಗಿ ಜಠರದಿಂದ ಹೊರಬಂದನು. ಭಯದಿಂದ ನಡುಗುತ್ತ ದಿತಿಗೆ ಕೈಮುಗಿದು ಹೇಳಿದನು, ''ತಾಯಿಯೇ, ನಿನ್ನ ಗರ್ಭದಲ್ಲಿ ಜನಿಸುವವನು ನನಗೆ ಶತ್ರುವಾದುದರಿಂದ ನಾನು ಅವನನ್ನು ಕೊಂದು ಹಾಕಿರುವೆನು. ಈ ವಿಷಯದಲ್ಲಿ ನನ್ನದೇನೂ ಅಪರಾಧವಿಲ್ಲ. ನನ್ನ ಕರ್ತವ್ಯವನ್ನು ನಾನು ಮಾಡಿದ್ದೇನೆ. ನೀನು ನನಗೆ ಕೋಪಮಾಡಿಕೊಳ್ಳಬೇಡ.''

ಈ ಮಾತನ್ನು ಕೇಳಿ ದಿತಿಯು - ''ಇಂದ್ರ ನಿನ್ನದೇನೂ ಇದರಲ್ಲಿ ಅಪರಾಧವಿಲ್ಲ. ಆ ಬಾಲಕನ ದುರದೃಷ್ಟವೇ ಅವನ ವಧೆಗೆ ಕಾರಣವಾಗಿದೆ. ಆದುದರಿಂದ ಅದು ನಿನ್ನಿಂದ ವಧವನ್ನು ಹೊಂದಿತು.'' ಹೀಗೆ ಹೇಳಿದ ದಿತಿಯನ್ನೂ, ಬಾಲಕರನ್ನೂ ಸಮಾಧಾನಪಡಿಸಿ ಬಾಲಕರೊಡನೆ ದಿತಿಯನ್ನು ಕಳುಹಿಸಿ ತ್ವರೆಯಿಂದ ಹೊರಟನು. ಈ ರೀತಿಯಾಗಿ ಭಯಗೊಂಡ ಇಂದ್ರನು ಗರ್ಭದಲ್ಲಿರುವ ತನ್ನ ಸೋದರರನ್ನು ವಜ್ರಾಯುಧದಿಂದ ಭೇದನ ಮಾಡಿದ್ದರಿಂದ ಅವನಿಗೆ ಗೋತ್ರಭಿತ್ ಎಂಬ ಹೆಸರು ಪ್ರಸಿದ್ಧಿಯಲ್ಲಿ ಬಂದಿತು.

ವಾಮನ ಮಹಾಪುರಾಣದಲ್ಲಿ ದಿತಿಯ ವ್ರತಭಂಗ ಎಂಬ ೭೧ನೇಯ ಅಧ್ಯಾಯವು ಮುಗಿದುದು

—o—

೯. "ಯೇ ಹ್ಯಮೀ ಭವತಾ ಪ್ರೋಕ್ತಾ ಮರುತೋ ದಿವಿಜೋತ್ತಮಾಃ ।
ತೇ ಕೇ ಚ ಪೂರ್ವಮಾಸನ್ವೈ ಮರುನ್ಮಾರ್ಗೆಷು ಕಥ್ಯತಾಂ ॥
ಪೂರ್ವಮನ್ವಂತರೇ ಚೈವ ಸಮತೀತೇಷು ಸತ್ತಮ ।
ಕೇ ತ್ವಾಸನ್ ವಾಯುಮಾರ್ಗಸ್ಥಾಸ್ತನ್ಮೇ ವ್ಯಾಖ್ಯಾತುಮರ್ಹಸಿ ॥

ನಾರದರು ಪ್ರಶ್ನೆ ಕೇಳುತ್ತಾರೆ "ಹಿಂದೆ ಹೇಳಿದ ಮರುತ್ತುಗಳೆಂಬವರು ಪೂರ್ವ ಜನ್ಮದಲ್ಲಿ ಯಾವ ದೇವಗೋಷ್ಠಿಗೆ ಸೇರಿದ್ದರು? ಕಳೆದ ಮನ್ವಂತರದಲ್ಲಿ ವಾಯು ಮಾರ್ಗದಲ್ಲಿ ಯಾರು ಯಾರು ಇದ್ದರು?" ಇದನ್ನು ನನಗೆ ಹೇಳಿರಿ. ಇದಕ್ಕೆ ಪುಲಸ್ತ್ಯರು ಉತ್ತರಿಸುತ್ತಾರೆ. ಸ್ವಾಯಂಭುವನಿಗೆ ಮನು ಎಂಬ ಧಾರ್ಮಿಕ ಮನೋಭಾವದ ಪುತ್ರನಿದ್ದನು. ಆತನಿಗೆ ಲೋಕವಿಖ್ಯಾತನಾದ ಸವನನೆಂಬ ಮಗನಿದ್ದನು. ಅವನು ಮಕ್ಕಳಿಲ್ಲದೇ ಹಾಗೆಯೇ ಮೃತನಾದನು. ಅವನ ಪತ್ನಿಯಾದ ಸುವೇದಾ ಎಂಬವಳು -

೧೦ ನ ದದಾತಿ ಯದಾ ದಗ್ಧುಂ ಸಮಾಲಿಂಗ್ಯಸ್ಥಿತಾ ಪ್ರಿಯಂ ।
ನಾಥ ನಾಥೇತಿ ಬಹುಶೋ ವಿಲಪಂತೀ ತ್ವನಾಥವತ್ ॥

ಬಹಳ ದುಃಖಿತಳಾಗಿ ದಹನಕ್ಕೂ ಅವಕಾಶ ಕೊಡದೇ ಪತಿಯ ಶವವನ್ನು ಅಪ್ಪಿಕೊಂಡು ಅನಾಥೆಯಂತೆ ಪ್ರಲಾಪಿಸುತ್ತ ಅಳತೊಡಗಿದಳು. ಆಗ ಒಂದು ಆಕಾಶವಾಣಿಯಾಯಿತು "ರಾಜಪತ್ನಿಯೇ, ನೀನು ಸುಮ್ಮನೇ ಅಳಬೇಡ, ಉತ್ತಮವಾದ ಸತ್ಯವ್ರತವು ನಿನ್ನಲ್ಲಿದ್ದರೆ ನೀನೂ ಅಗ್ನಿಯನ್ನು ಪ್ರವೇಶಿಸು."

೧೧. "ಶೋಚಾಮ್ಯೇನಂ ಪಾರ್ಥಿವಂ ಪುತ್ರಹೀನಂ ನೈವಾತ್ಮಾನಂ
ಮಂದಭಾಗ್ಯಂ ವಿಹಂಗ ।

ಆಗ ಅವಳು ಎಂದಳು "ನಾನು ನನಗಾಗಿ ದುಃಖಪಡುತ್ತಿಲ್ಲ. ದೊರೆಯು ಪುತ್ರಹೀನನಾಗಿ ಗತಿ ಇಲ್ಲದೇ ಹೊರಟಿರುವನಲ್ಲ!" ಎಂದು ದುಃಖಿಸುತ್ತಿರುವೆ.

೧೨. ಪುತ್ರಾಸ್ತೇವೈ ಭೂಮಿಪಾಲಸ್ಯ ಸಪ್ತ ಭವಿಷ್ಯಂತಿ
ವಹ್ನಿಮಾರೋಹ ಶೀಘ್ರಮ್ ॥

ಆಗ ಆಕಾಶದಿಂದ ಮತ್ತೆ ಶಬ್ದ ಕೇಳಿಸಿತು, " ಎಲೈ ರಾಣಿಯೇ, ನೀನು ಅಳಬೇಡ, ಅರಸನಿಗೆ ಏಳು ಜನ ಮಕ್ಕಳಾಗುತ್ತಾರೆ. ಜಾಗ್ರತೆಯಾಗಿ ನೀನು ಚಿತೆಯನ್ನು ಏರು. ಈ ಮಾತು ಸತ್ಯವೆಂದು ತಿಳಿ." ಆಕಾಶವಾಣಿಯಂತೆ ಸುವೇದೆಯು ತನ್ನ ಪತಿಯನ್ನು ಚಿತೆಯ ಮೇಲೆ ಹೇರಿ ತಾನೂ ಕೂಡ ಅಗ್ನಿ ಸಮೀಪಕ್ಕೆ ನಿಂತಳು. ತನ್ನ ಇಷ್ಟಾರ್ಥಗಳನ್ನು ಮನಸ್ಸಿನಲ್ಲಿ ಆಲೋಚಿಸತೊಡಗಿದಳು. ಸ್ವಲ್ಪೇ ಸಮಯದಲ್ಲಿ ಪತಿಯು ಅಗ್ನಿಯಿಂದ ಮೇಲಕ್ಕೆದ್ದು ಬಂದನು. ತನ್ನ ಪತ್ನಿಯೊಡನೆ ಆಕಾಶಕ್ಕೆ ಹಾರಿದನು. ಅವರಿಬ್ಬರ ಸಮಾಗಮದಿಂದ ಬಲಶಾಲಿಗಳಾದ ಪುತ್ರರು ಜನಿಸಿ ಮಹಾದೊರೆಗಳೆಂದು ಖ್ಯಾತಿಯನ್ನು ಪಡೆದರು. ಕಾಮಚಾರಿಯಾದ ಆ ಅರಸು ಭೂಮಿಯಲ್ಲಿ ಕೆಲವು ಪುತ್ರರನ್ನು ಪಡೆದ

ವೇತರ ಪತನಿಯೊಡನೆ ಆಕಾಶದಲ್ಲಿಯೇ ಐದುದಿನ ಸಂಚರಿಸಿದನು. ಆಕಾಶಮಾರ್ಗದಲ್ಲಿಯೇ ಪತಿಪತ್ನಿಯರು ವಿಹಾರದಲ್ಲಿ ತೊಡಗಿದರು. ವಿಹರಿಸುತ್ತಿರುವಾಗ ಆ ಅರಸನ ತೇಜಸ್ಸು ಆಕಾಶದಿಂದ ಕೆಳಕ್ಕೆ ಬಿದ್ದಿತು. ಶುಕ್ರೋತ್ಸರ್ಗವಾದೊಡನೆಯೇ ಅರಸನು ಪತ್ನಿಯೊಡನೆ ಬ್ರಹ್ಮಲೋಕಕ್ಕೆ ಹೋದನು. ಅವನ ಪುತ್ರರೆಲ್ಲರೂ ಭೂಮಿಯಲ್ಲಿ ಪ್ರಸಿದ್ಧ ರಾಜರಾದರು. ಇತ್ತ ಆಕಾಶದಿಂದ ಬೀಳುತ್ತಿರುವ ಆ ರಾಜನ ಶುಕ್ರವನ್ನು ಸಮಾದಾ, ನಲಿನಿ, ಪುಷ್ಕತಿ, ಚಿತ್ರಾ, ವಿಶಾಲಾ, ಹರಿತಾ ಅಲಿನೀಲಾ ಎಂಬ ಏಳು ಜನ ಋಷಿ ಪತ್ನಿಯರು ಕಾತುರತೆಯಿಂದ ನೋಡಿದರು. ಒಂದು ಕಮಲದಲ್ಲಿ ಬಿದ್ದ ಆ ಶುಕ್ರವನ್ನು ನೋಡಿ ಋಷಿ ಪತ್ನಿಯರು ಅದನ್ನು ಅಮೃತವೆಂದು ತಿಳಿದು ನಿತ್ಯ ತಾರುಣ್ಯ ಲಾಭೇಚ್ಛೆಯಿಂದ ಸ್ನಾನಾದಿಗಳಿಂದ ಪರಿಶುದ್ಧ ಭಾವನೆಯನ್ನು ತಂದುಕೊಂಡು ಪತಿಯನ್ನು ಪೂಜಿಸಿ ಅವರ ಅಪ್ಪಣೆಯಿಂದ ಪುಷ್ಕರ ಎಂಬ ಆ ಶುಕ್ರವನ್ನು ಎಲ್ಲರೂ ಪಾನ ಮಾಡಿದರು.

೧೩. ತಚ್ಛುಕ್ರಂ ಪಾರ್ಥಿವೇಂದ್ರಸ್ಯ ಮನ್ಯಮಾನಾಸ್ತದಾಮೃತಮ್ ।
ಬ್ರಹ್ಮತೇಜೋ ವಿಹೀನಾಸ್ತಾಃ ಪೀತ್ವಾ ಪತ್ನ್ಯಸ್ತಪಸ್ವಿನಾಮ್ ॥

ಕ್ಷತ್ರಿಯೋತ್ಪಾದಕವಾದ ಈ ಪಾನ ಪ್ರಭಾವದಿಂದ ತಾಪಸ ಸ್ತ್ರೀಯರೆಲ್ಲರೂ ಗರ್ಭಿಣಿಯರಾಗಿ ಬ್ರಹ್ಮತೇಜಸ್ಸಿನಿಂದ ಶೂನ್ಯರಾದರು. ಋಷಿಗಳು ಈ ಸ್ತ್ರೀಯರು ದುಷ್ಟರೆಂದು ತಿಳಿದು ಪರಿತ್ಯಾಗ ಮಾಡಿದರು. ಸಮಯ ತುಂಬಿ ಬಂದಾಗ ಗರ್ಭಿಣಿಯಾದ ಆ ಏಳುಜನ ತಾಪಸಿಯರು ಏಳು ಮಕ್ಕಳನ್ನು ಹಡೆದರು. ಹುಟ್ಟಿನಿಂದಲೇ ಆ ಮಕ್ಕಳು ಭಯಂಕರವಾದ ಧ್ವನಿಯಿಂದ ಅಳಹತ್ತಿದರು. ಆ ಧ್ವನಿಯು ಚತುರ್ಮುಖನಿಗೂ ಕೂಡ ಕೇಳಿತು.

೧೪. ಮರುತೋ ನಾಮ ಭವತಾಂ ಭವಿಷ್ಯತಿ ವಿಯತ್‌ಸ್ಥಿರಂ ।
ಇತ್ಯೇವಮುಕ್ತ್ವಾ ದೇವೇಶೋ ಬ್ರಹ್ಮಾ ಲೋಕಪಿತಾಮಹಃ ॥

೧೫. ತಾನಾದಾಯ ವಿಯಚ್ಚಾರೀ ಮಾರುತಾನಾದಿದೇಶ ಹ ।
ತೇ ತ್ವಾಸನ್ ಮರುತ್ತಸ್ತ್ವಾದ್ಯೇ ಮನೋಃಸ್ವಾಯಂಭುವಾಂತರೇ ॥

ಅವನು ಬಂದು ಸಮಾಧಾನಪಡಿಸಿದನು. ಮತ್ತು "ಮರುತ್ತಗಳೆಂಬ ಹೆಸರಿನಿಂದ ಆಕಾಶದಲ್ಲಿ ನಿಮಗಾಗಿ ಸ್ಥಾನವು ಭದ್ರವಾಗಿದೆ" ಎಂದು ಹೇಳಿ ಅವರನ್ನು ಕರೆದುಕೊಂಡು ಆಕಾಶ ಮಾರ್ಗದಿಂದ ಹೊರಟು ವಾಯುವಿಗೆ ಅಪ್ಪಣೆ ಮಾಡಿದನು. ಸ್ವಾಯಂಭುವ ಮನ್ವಂತರದಲ್ಲಿ ಅವರೇ ಮರುತ್ತುಗಳಾದರು. ಆದರೆ ಸ್ವಾರೋಚಿಷ ಮನ್ವಂತರದಲ್ಲಿ ಮತ್ತೆ ಬೇರೆಯವರು ಮರುತ್ತುಗಳು. ಸ್ವಾರೋಚಿಷನ ಮಗನಾದ ಋತಧ್ವಜನೆಂಬುವನು ಬಹಳ ಪ್ರಖ್ಯಾತನಾಗಿದ್ದನು. ಅವನಿಗೆ ಸೂರ್ಯನಂತೆ ತೇಜಸ್ವಿಗಳಾದ ಏಳು ಮಕ್ಕಳಾದರು. ಅವರು ಇಂದ್ರ ಪದವಿಯನ್ನು ಹೊಂದಲು ಮೇರುಪರ್ವತದಲ್ಲಿ ಬ್ರಹ್ಮನನ್ನು ಕುರಿತು ತಪಸ್ಸು ಮಾಡಿದರು. ಇದನ್ನು ತಿಳಿದ ಇಂದ್ರನು ತನ್ನ ಸ್ಥಾನದ ಚ್ಯುತಿಯ ಭಯದಿಂದ ಪೂತನಾ ಎಂಬ ಅಪ್ಸರೆಯನ್ನು ಕರೆದು ಅಪ್ಪಣೆ ಮಾಡಿದನು. "ನೀನು ವಿಲಾಸಿನಿಯಾಗಿ ಮೇರು ಪರ್ವತಕ್ಕೆ ಹೋಗಿ ಋತಧ್ವಜನ ಪುತ್ರರು ಮಾಡುತ್ತಿರುವ ತಪಸ್ಸಿನಲ್ಲಿ ವಿಘ್ನವನ್ನುಂಟು ಮಾಡಿ ತಪಸ್ಸು ನಿಲ್ಲುವಂತೆ ಮಾಡು."

ಇಂದ್ರನ ಅಪ್ಪಣೆಯನ್ನು ಪಡೆದ ರೂಪವತಿಯಾದ ಪೂತನಿಯು ರಾಜಪುತ್ರರು ತಪಸ್ಸು ಮಾಡುತ್ತಿರುವ ಸ್ಥಳಕ್ಕೆ ಹೋದಳು. ಆಶ್ರಮದ ಸಮೀಪದಲ್ಲಿಯೇ ಮಂದೋದವಾಹಿನಿ ಎಂಬ ನದಿಯಲ್ಲಿ ಸ್ನಾನ ಮಾಡಲು ಇಳಿದಳು. ಅಲ್ಲಿಯೇ ಆ ತಾಪಸಿಗಳು ಕೂಡ ಬಂದರು. ಸ್ನಾನಮಾಡಿ ಎದ್ದ ಸುಂದರವಾದ ಅವಳ ಅಂಗಸೌಷ್ಠವವನ್ನು ನೋಡಿ ರಾಜಪುತ್ರರೆಲ್ಲರೂ ಕ್ಷೋಭಗೊಂಡರು.

೧೬. ದದೃಶುಸ್ತೇ ನೃಪಾಃ ಸ್ನಾತಾಂ ತತಶ್ಚುಕ್ಷುಭಿರೇ ಮುನೇ ।
ತತೋಽಹಭ್ಯ ದ್ರವಚ್ಛುಕ್ರಂ ತತ್ಪಪೌ ಜಲಚಾರಿಣೀ ॥

೧೭. ಶಂಖಿಣೀ ಗ್ರಾಹ ಮುಖ್ಯಸ್ಯ ಮಹಾ ಶಂಖಿಸ್ಯ ವಲ್ಲಭಾ ।
ತೇಽತಿ ವಿಭ್ರಷ್ಟ ತಪಸೋ ಜಗ್ಮೂ ರಾಜ್ಯಂ ಚ ಪೈತೃಕಮ್ ॥

ಆಗ ಕಾಮವಿಕಾರದಿಂದ ಅವರ ಶುಕ್ರೋತ್ಸರ್ಗವಾಗಲು ಮಹಾಶಂಖನ ಪತ್ನಿಯಾದ ಶಂಖಿಣೀ ಎಂಬ ಮೊಸಳೆಯು ಆ ಶುಕ್ರವನ್ನು ಕುಡಿಯಿತು. ರಾಜಪುತ್ರರು ತಪೋಭಂಗವಾದುದರಿಂದ ಖಿನ್ನತೆಯನ್ನು ಹೊಂದಿ ಮತ್ತೆ ತಂದೆಯ ರಾಜ್ಯಕ್ಕೆ ಹಿಂದಿರುಗಿದರು. ಇತ್ತ ಆ ಅಪ್ಸರೆಯು ನಡೆದ ಸಮಾಚಾರವನ್ನೆಲ್ಲ ಬಂದು ಇಂದ್ರನಿಗೆ ತಿಳಿಸಿದಳು. ಅನಂತರ ಕೆಲವು ದಿನಗಳು ಕಳೆದ ಮೇಲೆ ಶಂಖಿಣಿ ಎಂಬ ಆ ಹೆಣ್ಣು ಮೊಸಳೆಯು ಒಬ್ಬ ಅಂಬಿಗನ ಒಂದು ಬಲೆಯಲ್ಲಿ ಸಿಕ್ಕುಬಿದ್ದಿತು.

೧೮. ಸ ತಾಂ ದೃಷ್ಟ್ವಾ ಮಹಾಶಂಖೀಂ ಸ್ಥಲಸ್ಥಾಂ ಮತ್ಸ್ಯಜೀವನಃ ।
ನಿವೇದಯಾಮಾಸ ಋತಧ್ವಜಸುತೇಷು ವೈ ॥

ಆ ಮೊಸಳೆಯು ನೀರಿನಿಂದ ಭೂಮಿಯ ಮೇಲೆ ಬಂದ ಮೇಲೆಯೂ ಸಹ ಉತ್ಸಾಹದಿಂದಿರುವುದನ್ನು ನೋಡಿ ಅಂಬಿಗನು ದೊರೆಯಾಗಿದ್ದ ಋತಧ್ವಜನ ಪುತ್ರರಲ್ಲಿ ಬಂದು ಅರಿಕೆ ಮಾಡಿಕೊಂಡನು. ಅವರು ಅಂಬಿಗನ ಹತ್ತಿರ ಬಂದರು. ಅವರಿಗೂ ಆಶ್ಚರ್ಯವಾಯಿತು. ಆ ಮೊಸಳೆಯನ್ನು ಹಿಡಿದುಕೊಂಡು ಹೋಗಿ ಊರಲ್ಲಿ ಒಂದು ಕೊಳದಲ್ಲಿ ಮತ್ತೆ ಬಿಟ್ಟರು. ಅಲ್ಲಿದ್ದ ಶಂಖಿಣಿಯು ಕೆಲವು ಕಾಲದನಂತರ ಏಳು ಜನ ಶಿಶುಗಳನ್ನು ಹಡೆಯಿತು. ಮಕ್ಕಳು ಹುಟ್ಟಿದೊಡನೆಯೇ ಶಂಖಿಣಿಯು ಪ್ರಾಣಬಿಟ್ಟು ಮೋಕ್ಷಮಾರ್ಗವನ್ನು ಹೊಂದಿತು. ಅನಂತರ ತಂದೆ ತಾಯಿಗಳಿಲ್ಲದ ಈ ಶಿಶುಗಳು ಮೊಲೆ ಹಾಲಿಲ್ಲದೇ ಅಳತೊಡಗಿದವು.

೧೯. ಮಾ ರುದಧ್ವಮಿತೀತ್ಯಾಹ ಸ್ವಸ್ಥಾಸ್ತಿಷ್ಠತ ಪುತ್ರಕಾಃ ।
ಯೂಯಂ ದೇವಾ ಭವಿಷ್ಯಧ್ವಂ ವಾಯುಸ್ಕಂಧ ವಿಚಾರಿಣಃ ॥

ಇದನ್ನು ತಿಳಿದ ಬ್ರಹ್ಮದೇವನು ಅಲ್ಲಿಗೆ ಬಂದನು ಮತ್ತೂ ಆ ಪುತ್ರರಿಗೆ ಸಮಾಧಾನ ಪಡಿಸಿದನು . ''ನೀವು ವಾಯುಸ್ಕಂದವಿಹಾರಕರಾದ ದೇವತೆಗಳಾಗುವಿರಿ'' ಎಂದು ಹೇಳಿ ವಾಯುಮಾರ್ಗದಲ್ಲಿ ವಿಚಾರಕರಾಗಿ ಅವರನ್ನು ನಿಯಮಿಸಿ ವಿರಾಜವೆಂಬ ತನ್ನ ಮನೆಗೆ ಹೊರಟುಹೋದನು. ಇವರು ಸ್ವಾರೋಚಿಷ ಮನ್ವಂತರದಲ್ಲಿ ನಿಯಮಿತರಾದ ಮರುತ್ತುಗಳು. ಇನ್ನು ಉತ್ತಮ ಮನ್ವಂತರದ ಮರುತ್ತುಗಳ ಉತ್ಪತ್ತಿಯನ್ನು ಹೇಳುತ್ತೇನೆ ಕೇಳು.

೨೦. ವಪುಷ್ಮಾನಿತಿ ವಿಖ್ಯಾತೋ ವಪುಷಾ ಭಾಸ್ಕರೋಪಮಃ ।
ತಸ್ಯ ಪುತ್ರೋ ಗುಣ ಜ್ಯೇಷ್ಠೋ ಜ್ಯೋತಿಷ್ಮಾನ್
ಧಾರ್ಮಿಕೋಽಭವತ್ ॥

ಉತ್ತಮ ಮನುವಿನ ವಂಶದಲ್ಲಿ ವಪುಷ್ಮಾನ್ ಎಂಬ ರಾಜನಿದ್ದನು. ಸೂರ್ಯನಂತೆ ತೇಜಸ್ವಿಯಾದ ಆ ದೊರೆಯು ಪ್ರಶಸ್ತವಾದ ದೇಹವುಳ್ಳವನೆಂದು ಪ್ರಸಿದ್ಧಿ ಇತ್ತು. ಅವನ ಮಗನಿಂದ ಜ್ಯೋತಿಷ್ಮಾನ್ ಎಂಬ ದೊರೆಯು ಬಹಳ ಧಾರ್ಮಿಕನಾಗಿದ್ದನು. ಅವನು ಮಕ್ಕಳಿಲ್ಲದುದರಿಂದ ಗಂಗಾತೀರದಲ್ಲಿ ತಪಸ್ಸು ಮಾಡತೊಡಗಿದನು. ಅವನ ಹೆಂಡತಿಯು ಬೃಹಸ್ಪತ್ಯಾಚಾರ್ಯರ ಪುತ್ರಿಯು. ಅವಳ ಹೆಸರು ಸುಶ್ರೋಣಿ ಎಂದು. ತಪಸ್ಸಿನಲ್ಲಿ ನಿರತನಾದ ತನ್ನ ಪತಿಯ ಸೇವೆಯಲ್ಲಿ ಅವಳು ನಿರತಳಾದಳು.

ತಪಸ್ವಿಗೆ ಉಪಯುಕ್ತವಾದ ಫಲಪುಷ್ಪಸಮಿತ್ತುಗಳನ್ನು ಒದಗಿಸಿಕೊಡುವದಲ್ಲದೇ ಬಂದ ಅತಿಥಿಗಳ ಪೂಜೆಯನ್ನು ಆಸಕ್ತಿಯಿಂದ ಮಾಡಿದಳು. ಅನವರತ ಕಾರ್ಯಗಳಿಂದ ಅವಳು ಕೃಶಳಾಗಿದ್ದರೂ ತೇಜಸ್ವಿಯಾಗಿದ್ದಳು. ಒಂದು ಸಲ ಸಪ್ತರ್ಷಿಗಳು ಅಲ್ಲಿಗೆ ದಯಮಾಡಿಸಿದರು. ಸುಂದರಿಯಾದ ಇವಳನ್ನು ನೋಡಿ ''ನೀನು ಹಾಗೂ ನಿನ್ನ ಪತಿಯು ತಪಸ್ಸನ್ನೇಕೆ ಆಚರಿಸುತ್ತಿರುವಿರಿ?'' ಎಂದು ಕೇಳಿದರು. ''ನಾವು ಪುತ್ರಪ್ರಾಪ್ತಿಗಾಗಿ ತಪಸ್ಸನ್ನಾಚರಿಸುವೆವೆಂದು'' ಅವಳು ಉತ್ತರಿಸಿದಳು. ಆಗ ಸಪ್ತರ್ಷಿಗಳು ''ಇನ್ನು ನೀವು ತಪಸ್ಸನ್ನು ಬಿಟ್ಟುಬಿಡಿರಿ. ನಿಮ್ಮ ಗುಣಕ್ಕೆ ತಕ್ಕಂತೆ ನಿಮಗೆ ಏಳು ಜನ ಮಕ್ಕಳಾಗುತ್ತಾರೆ'' ಎಂದು ಋಷಿಗಳು ಹೇಳಿದೊಡನೆ ರಾಜರ್ಷಿಯು ತಪಸ್ಸನ್ನು ಬಿಟ್ಟು ಪತ್ನಿಯೊಡನೆ ತನ್ನ ನಗರವನ್ನು ಸೇರಿದನು.

೨೧. ಅವಾಪ ಗರ್ಭಂ ತನ್ವಂಗೀ ತಸ್ಮಾನ್ನೃಪತಿಸತ್ತಮಾತ್ ।
ಗುರ್ವಿಣ್ಯಾಮಥ ಭಾರ್ಯಾಯಾಂ ಸ ಮಮಾರ ವರಾಧಿಪಃ ।
ಸಾ ಚಾಪ್ಯಾರೋಢುಮಿಚ್ಛಂತೀ ಭರ್ತಾರಂ ವೈ ಪತಿವ್ರತಾ ।

೨೨. ನಿವಾರಿತಾ ತದಾಮಾತ್ಯೈಃ ನ ತಥಾಪಿ ಪ್ರತಿಷ್ಠತಿ ॥

೨೩. ಸಮಾರೋಪ್ಯಾತ್ಮ ಭರ್ತಾರಂ ಚಿತಾಯಾಮಾರುಹಚ್ಚ ಸಾ ।
ತತೋಗ್ನಿಮಧ್ಯಾತ್ಸಲಿಲಮಾವ ಮೇವಾಪತನ್ಮುನೇ ॥

೨೪. ತದಂಭಸಾ ಸುಶೀತೇನ ಸಂಸಿಕ್ತಂ ಸಪ್ತಧಾಭವತ್ ।
ತೇಽಜಾಯಂತಾಥ ಮರುತಃ ಉತ್ತಮ ಸ್ಯೇತರೇ ಮನೋಃ ।

ಕೆಲವು ಕಾಲ ಕಳೆದನಂತರ ಪಟ್ಟ ಮಹಿಷಿಯು ಗರ್ಭಿಣಿಯಾದಳು. ಆದರೆ ದೈವವಶಾದ್ ದೊರೆಯು ಮೃತನಾದನು. ರಾಜಪತ್ನಿಯು ದೊರೆಯೊಡನೆ ಅಗ್ನಿಪ್ರವೇಶ ಮಾಡಲು ನಿಶ್ಚಯಿಸಿದಳು. ಮಂತ್ರಿಗಳು ತಡೆದರೂ ಅದಕ್ಕೆ ಅವಳು ಒಪ್ಪಲಿಲ್ಲ.

ಅವಳು ತನ್ನ ಪತಿಯೊಡನೆ ಚಿತೆಯಲ್ಲಿ ಪ್ರವೇಶಿಸುತ್ತಿರುವಾಗ ಚಿತಾಗ್ನಿ ಮಧ್ಯದಿಂದ ಜಲಧಾರೆ ಹೊರಟಿತು. ಆ ನೀರಿನಿಂದ ನೆನೆದ ರಾಜಪತ್ನಿಯ ಗರ್ಭವು ಏಳು ಭಾಗವಾಯಿತು. ಅವರೇ ಉತ್ತಮ ಮನ್ವಂತರದಲ್ಲಿ ಸಪ್ತಮರುತ್ತುಗಳಾದರು.

ತಾಮಸಮನ್ವಂತರದಲ್ಲಿ ಆಗಿರುವ ಮರುತ್ತುಗಳ ವಿವರವು ಇಂತಿದೆ. ತಾಮಸ ಮನುವಿನ ಪುತ್ರನಾದ ದಂತಧ್ವಜನೆಂಬವನು ಪ್ರಖ್ಯಾತನಾಗಿದ್ದನು.

ಅವನೂ ಕೂಡ ಸಂತಾನದ ಸಲುವಾಗಿ ಯಾಗ ಮಾಡತೊಡಗಿದನು. ಚಿತ್ರಕನೆಂಬ ಅವನು ತನ್ನ ಮಾಂಸ, ಅಸ್ಥಿ, ರಕ್ತ, ರೋಮ, ಕೇಶ, ಸ್ನಾಯು ಮಜ್ಜಾ, ಕರುಳು, ಶುಕ್ರ ಮೊದಲಾದ ಸಪ್ತಧಾತುಗಳನ್ನು ಪುತ್ರಾರ್ಥಿಯಾಗಿ ಅಗ್ನಿಯಲ್ಲಿ ಹೋಮ ಮಾಡಿದನು ಎಂದು ನಾವು ಕೇಳಿದ್ದೇವೆ. ಅಗ್ನಿಯ ಸಪ್ತಜುಹ್ವೆಯಲ್ಲಿ ಶುಕ್ರವಸ್ನು ಹೋಮ ಮಾಡಿದೊಡನೆಯೇ ''ಇದನ್ನು ಹೋಮ ಮಾಡಬೇಡವೆಂದು'' ಧ್ವನಿಯು ಕೇಳಿಸಿತು.

ಕೂಡಲೇ ಚಿತ್ರಕನೆಂಬ ಆ ದೊರೆಯು ಮೃತನಾದನು. ಆಗ ಆ ಅಗ್ನಿಯಿಂದ ತೇಜಸ್ವಿಗಳಾದ ಏಳು ಶಿಶುಗಳು ಹೊರಬಂದರು. ಹುಟ್ಟಿದೊಡನೆ ಅವರು ಜೋರಾಗಿ ಅತ್ತರು. ರೋದನ ಧ್ವನಿಯಿಂದ ಬ್ರಹ್ಮದೇವನು ಬಂದನು. ಆತನು ಬಂದು ಇವರನ್ನೆಲ್ಲ ಮರುತ್ತುಗಳನ್ನಾಗಿ ಮಾಡಿದನು. ಇವರೇ ತಾಮಸ ಮನ್ವಂತರದಲ್ಲಿಯ ಮರುತ್ತುಗಳು. ಇನ್ನು ರೈವತ ಮನ್ವಂತರದ ಮರುತ್ತುಗಳು ಹೀಗಿರುವರು. ರೈವತ ಮನುವಿನ ವಂಶದಲ್ಲಿ ಶತ್ರುನಾಶಕನಾದ ರಿಪುಜಿತ್ ಎಂಬ ದೊರೆಯು ಪ್ರಸಿದ್ಧನಾದನು. ಅವನಿಗೆ ಸಂತಾನವಿರಲಿಲ್ಲ.

೨೫. ಸ ಸಮಾರಾಧ್ಯ ತಪಸಾ ಭಾಸ್ಕರಂ ತೇಜಸಾಂ ನಿಧಿಮ್ ।
ಅವಾಪ ಕನ್ಯಾಂ ಸುರತಿಂ ತಾಂ ಪ್ರಗೃಹ್ಯ ಗೃಹಂ ಯಯೌ ।

೨೬. ತಸ್ಯಾಂ ಪಿತೃಗೃಹೇ ಬ್ರಹ್ಮನ್ ವಸಂತ್ಯಾಂ ಸ ಪಿತಾಮೃತಃ ।
ಸಾಪಿ ದುಃಖಪರೀತಾಂಗೀ ಸ್ವಾಂ ತನುಂ ತ್ಯಕ್ತುಮುದ್ಯತಾ ॥

೨೭. ತತಸ್ತಾಂ ವಾರಯಾಮಾಸುಃ ಋಷಯಃ ಸಪ್ತ ನಾರದ ।
ತಸ್ಯಾಮಾಸಕ್ತ ಚಿತ್ತಾಸ್ತು ಸರ್ವ ಏವ ತಪೋಧನಾಃ ॥

೨೮. ಅಪಾರಯಂತೀ ತದ್ದುಃಖಂ ಪ್ರಜ್ವಾಲ್ಯಾಗ್ನಿಂ ವಿವೇಶ ಸಾ ।
ತಾಮಮೃತಾಂ ಮುನಯೋ ದೃಷ್ಟ್ವಾ ಕಷ್ಟಂ ಕಷ್ಟೇತಿ ವಾದಿನಃ ॥
ಪ್ರಜಗ್ಮುಃ ಜ್ವಲನಾಚ್ಚಾಥ ಸಪ್ತಾ ಜಾಯಂತ ದಾರಕಾಃ ॥

ಅವನು ಸಂತಾನಕ್ಕಾಗಿ ಸೂರ್ಯನನ್ನು ಆರಾಧಿಸಿದನು. ಆ ಸೂರ್ಯ ದೇವನಿಂದ ಸುರತಿ ಎಂಬ ಕನ್ಯಾರತ್ನವನ್ನು ಹೊಂದಿ ಅವಳೊಡನೆ ಬಂದನು. ಆ ಕನ್ಯೆಯು ತಂದೆಯ ಮನೆಯಲ್ಲಿ ಇರುವಾಗಲೇ ತಂದೆಯು ಮೃತನಾದನು. ಆಗ ಆ ಕನ್ಯೆಯು ದುಃಖದಿಂದ ದೇಹಪರಿತ್ಯಾಗ ಮಾಡಲು ತೊಡಗಿದಳು. ಆ ಸಮಯಕ್ಕೆ ಸಪ್ತರ್ಷಿಗಳು ಬಂದು ಅವಳನ್ನು ತಡೆದರು ಹಾಗೂ ಅವಳಲ್ಲಿ ಆಸಕ್ತರಾದರು. ಈ ದುಃಖವನ್ನು ಸಹಿಸಲಾರದೆ ಆ ಕನ್ಯೆಯು ಅಗ್ನಿಯನ್ನು ಹೊತ್ತಿಸಿ ಅದರಲ್ಲಿ ಬಿದ್ದಳು. ಆಗ ಋಷಿಗಳೆಲ್ಲರೂ ಅವಳಲ್ಲಿಯೇ ಆಸಕ್ತಮನರಾಗಿದ್ದರು. ಹಾಗೆ ಮೃತಳಾದ ಅವಳನ್ನು ನೋಡಿ ಸಪ್ತರ್ಷಿಗಳು ವ್ಯಥೆಪಟ್ಟು ಹೊರಟುಹೋದರು. ಅನಂತರ ಆ ಅಗ್ನಿಯಿಂದ ಏಳು ಬಾಲಕರು ಹುಟ್ಟಿದರು. ತಾಯಿಯಿಲ್ಲದೇ ಅಳುತ್ತಿರುವ ಈ ಬಾಲಕರನ್ನು ಬ್ರಹ್ಮನು ಸಮಾಧಾನಪಡಿಸಿ ಇವರನ್ನು ರೈವತ ಮನ್ವಂತರದ ಮರುತ್ತುಗಳೆಂದು ಮಾಡಿದನು.

ಚಾಕ್ಷುಷ ಮನ್ವಂತರದ ಮರುತ್ತುಗಳು ಹೀಗೆ ಸಿದ್ಧರಾದರು. ಮಂಕಿ ಎಂಬ ಪ್ರಸಿದ್ಧನಾದ ಒಬ್ಬ ಋಷಿ ಇದ್ದನು. ಆತನು ತಪಸ್ವಿಯೂ ಸತ್ಯನಿಷ್ಠನೂ ಆಗಿದ್ದನು. ಆತನು ಸಪ್ತಸಾರಸ್ವತ ತೀರ್ಥದಲ್ಲಿ ತಪಸ್ಸನ್ನಾಚರಿಸುತ್ತಿದ್ದನು. ಆಗ ದೇವತೆಗಳು ಇವನ ತಪಸ್ಸಿಗೆ ವಿಘ್ನವನ್ನುಂಟು ಮಾಡಲು ತುಷಿತಾ ಎಂಬ ಅಪ್ಸರೆಯನ್ನು ಕಳುಹಿಸಿದರು.

೨೯. ಸಾ ಚಾಭ್ಯೇತ್ಯ ನದೀತೀರೇ ಕ್ಷೋಭಯಾಮಾಸ ಭಾಮಿನೀ
ತತೋಽಸ್ಯ ಪ್ರಾಚ್ಯವಚ್ಚುಕ್ರಂ ಸಪ್ತಸಾರಸ್ವತೇ ಜಲೇ ॥

೩೦. ತಾಂ ಚೈವಾಪ್ಯಶಪನ್ಮೂಢಾಂ ಮುನಿರ್ಮಂಕಣಕೋ ರಿಪುಂ ।
ಗಚ್ಛ ವೈವೇಚ್ಛ ಮೂಢೇ ತ್ವಂ ಪಾಪಸ್ಯಾಸ್ಯ ಮಹತ್ಫಲಮ್

೩೧. ವಿಧ್ವಂಸಸ್ತೇಹಿ ಭವಿತಾ ಸಂಪ್ರಾಪ್ತೇ ಯಜ್ಞ ಕರ್ಮಣಿ ॥
ಏವಂ ಶಪ್ತ್ವಾಋಷಿಃ ಶ್ರೀಮಾನ್ ಜಗಾಮಾಥ ಸ್ವಮಾಶ್ರಮಂ ॥
ಸರಸ್ವತೀಭ್ಯಃ ಸಪ್ತಭ್ಯಃ ಸಪ್ತ ವೈ ಮರುತೋಽಭವನ್ ॥

ಅವಳು ಬಂದು ನದೀ ತೀರದಲ್ಲಿಳಿದು ತನ್ನ ಅನೇಕ ಬಗೆಯ ವಿಲಾಸಗಳಿಂದ ಋಷಿಯ ಮನಸ್ಸನ್ನು ವಿಕೃತಗೊಳಿಸಿದಳು. ಆಗ ಋಷಿಯು ಶುಕ್ರವು ಸಪ್ತಸಾರಸ್ವತ ಕ್ಷೇತ್ರದಲ್ಲಿ ಸ್ಖಲಿತವಾಯಿತು. ಆಗ ಮಂಕಣನು ತಪಸ್ಸಿಗೆ ಶತ್ರುವಾಗಿ ಬಂದ ಅವಳನ್ನು ಶಪಿಸಿ ಹೇಳಿದನು,''ಎಲೈ ಮೂಢಳೇ, ನೀನು ಮಾಡಿದ ಮಹಾಪಾಪದ ಫಲವನ್ನು ಅನುಭವಿಸು. ತ್ರಿಯಜ್ಞವು ಸನ್ನಿಹಿತವಾದ ಸಮಯದಲ್ಲಿ ನೀನು ಧ್ವಂಸ ಹೊಂದುವಿ.'' ಈ ರೀತಿ ಶಾಪಕೊಟ್ಟು ಮಂಕಣ ಋಷಿಯು ತನ್ನಾಶ್ರಮಕ್ಕೆ ಹೊರಟನು. ಆ ಋಷಿಯ ಶುಕ್ರದಿಂದ ಏಳು ಸರಸ್ವತಿಯ ಶಾಖೆಗಳಿಂದಲೂ ಏಳು ಜನ ಮರುತ್ತುಗಳು ಉದಯಿಸಿದರು. ಈ ರೀತಿ ಪ್ರಸಿದ್ಧವಾದ ಮರುತ್ತುಗಳ ಉತ್ಪತ್ತಿಯನ್ನು ನಾನು ನಿನಗೆ ಹೇಳಿದೆನು. ಈ ಮಹಾತ್ಮರ ಉತ್ಪತ್ತಿ ಕ್ರಮವನ್ನು ಕೇಳಿದವರಿಗೆ ಪಾಪ ಹಾನಿಯುಂಟಾಗಿ ಪುಣ್ಯಾಭ್ಯುದಯವು ಒದಗುತ್ತದೆ.

ವಾಮನ ಮಹಾಪುರಾಣದಲ್ಲಿ ಮರುತ್‌ಗಳ ಜನನ ಎಂಬ ೭೧ನೇಯ ಅಧ್ಯಾಯವು ಮುಗಿದುದು

—೦—

**೩೨. ಏತದರ್ಥಂ ಬಲಿರ್ದೈತ್ಯಃ ಕೃತೋರಾಜಾ ಕಲಿಪ್ರಿಯ ।**
**ಮಂತ್ರಿ ಪ್ರದಾನ ಪ್ರಹ್ಲಾದ ಶುಕ್ರಶ್ಚಾಸೀತ್ಪುರೋಹಿತಃ ॥**

**ಪುಲಸ್ತ್ಯರು** - ಪ್ರಾಸಂಗಿಕವಾಗಿ ದೈತ್ಯರ ಮುಂದಿನ ವೃತ್ತಾಂತವನ್ನು ಹೇಳುತ್ತಾರೆ. ಅಂಧಕನು ಹರಭಕ್ತನಾದ ನಂತರ ದೈತ್ಯರು ವಿರೋಚನ ಮಗನಾದ ಬಲಿಯನ್ನು ತಮ್ಮ ರಾಜನನ್ನಾಗಿ ಮಾಡಿದರು. ಆತನಿಗೆ ಪ್ರಲ್ಹಾದನು ಮಂತ್ರಿಯಾಗಿಯೂ, ಶುಕ್ರನು ಪುರೋಹಿತನಾಗಿಯೂ ಇದ್ದರು. ರಾಜನಾದ ಬಲಿಯು ರಾಜ್ಯಾಭಿಷೇಕವಾದ ನಂತರ ಅಸುರರೆಲ್ಲರೂ ಅವನನ್ನು ಅಭಿನಂದಿಸಲು ಒಂದು ಸಭೆ ಕರೆದರು. ಅಸುರರೂ ಹಾಗೂ ಬಲಿಚಕ್ರವರ್ತಿಯೂ ವಿಚಾರ ವಿನಿಮಯ ಮಾಡಿದ ನಂತರ ಅಸುರರು ಎಲ್ಲರಿಗೂ ಶ್ರೇಯಸ್ಕರವಾದ ಕೆಲವು ಮಾತುಗಳನ್ನು ಬಲಿಗೆ ಹೇಳಲುಪಕ್ರಮಿಸಿದರು.

''ಎಲೈ ಚಕ್ರವರ್ತಿಯೇ, ನಿನ್ನ ತಾತನಾದ ಹಿರಣ್ಯಕಶಿಪುವು ದಾನವರೆಲ್ಲರನ್ನೂ ಚೆನ್ನಾಗಿ ರಕ್ಷಿಸಿ ಮೂರು ಲೋಕಗಳಲ್ಲಿಯೂ ತನ್ನ ಪ್ರಭಾವವನ್ನು ಬೀರಿ ಇಂದ್ರನಾಗಿ ಮೆರೆದನು. ಅವನನ್ನು ದೇವತೆಗಳಲ್ಲಿ ಶ್ರೇಷ್ಠನಾದ ವಿಷ್ಣುವು ಸಿಂಹದ ರೂಪವನ್ನು ಧರಿಸಿ ನಮ್ಮೆಲ್ಲರ ಎದುರಿನಲ್ಲಿಯೇ ಉಗುರುಗಳಿಂದ ಚೂರು ಚೂರು ಮಾಡಿ ಹಾಕಿದನು. ಇದಲ್ಲದೇ ನಮ್ಮಗೋಸ್ಕರ ಯುದ್ಧದಲ್ಲಿ ತೊಡಗಿದ ನಿಮ್ಮ ತಂದೆಯು ಇಂದ್ರನಿಂದ ಕೊಲ್ಲಲ್ಪಟ್ಟನು. ಹಾಗೆಯೇ ಜಂಭನೂ ಸಹ ನಾಶಕ್ಕೀಡಾದನು. ಕುಜಂಭನನ್ನು ವಿಷ್ಣುವು ನಾಶಪಡಿಸಿದನು. ಶಂಖ, ಪಾಕರು ಇಂದ್ರನ ಆಯುಧಕ್ಕೆ ಬಲಿಯಾದರು. ನಿನ್ನ ಅಣ್ಣನಾದ ಸುದರ್ಶನ ಹಾಗೂ ವಿರೋಚನರು ಕೊಲ್ಲಲ್ಪಟ್ಟರು. ಈ ರೀತಿ ದೇವತೆಗಳಿಂದ ದಾನವರ ಕುಲವೇ ಕ್ಷಯವನ್ನೈದಿತು. ಈ ವಿಷಯದಲ್ಲಿ ದೇವತೆಗಳೊಡನೆ ಪ್ರತೀಕಾರ ಮಾಡುವದಕ್ಕೋಸ್ಕರ ಇಂದ್ರ ಮೊದಲಾದವರನ್ನು ಹಿಂಸಿಸುವದು ನಮ್ಮ ಕರ್ತವ್ಯವೆಂದು ತಿಳಿ'' ಎಂಬ ವಿಚಾರವನ್ನು ತುಂಬಿ ಮತ್ತೆ ಆತನನ್ನು ಯುದ್ಧದಲ್ಲಿ ತೊಡಗಿಸಿದರು.

ರಥ, ಆನೆ, ಕುದುರೆ, ಕಾಲಾಳು, ಇವೆಲ್ಲವನ್ನು ತೆಗೆದುಕೊಂಡು ದಾನವರು ಯುದ್ಧಕ್ಕೆ ಹೊರಟರು. ತಮ್ಮ ಅಗ್ರಭಾಗದಲ್ಲಿ ಸೇನಾಪತಿಯನ್ನು ಮುಂದೆ ಮಾಡುತ್ತ, ಮಧ್ಯದಲ್ಲಿಯೂ ಬಲಿಷ್ಠರನ್ನು ಸೇರಿಸಿಕೊಂಡು ಕಾಲನೇಮಿ ದಾನವನು ಸೈನ್ಯದ ಹಿಂಭಾಗದಲ್ಲಿ ಉಳಿದನು. ಎಡಭಾಗದಲ್ಲಿ ಶಾಲ್ವನು, ಬಲಭಾಗದಲ್ಲಿ ತಾರಕನೂ, ಹೀಗೆ ಸಹಸ್ರಾರು ಮಂದಿ ದಾನವರು ದೇವತೆಗಳೊಡನೆ ಯುದ್ಧ ಮಾಡುವದಕ್ಕೋಸ್ಕರ ಹೊರಟರು. ಇತ್ತ ಇಂದ್ರನು ಅಸುರರ ಯುದ್ಧ ತಯಾರಿಯನ್ನು ತಿಳಿದು ತಾನೂ ಯುದ್ಧೋನ್ಮುಖನಾಗಲು ತನ್ನ ಸಾರಥಿಯಾದ ಮಾತಲಿಗೆ ಆಜ್ಞಾಪಿಸಿದನು. ರಥಕ್ಕೆ ಉತ್ತಮವಾದ ಕುದುರೆಗಳನ್ನು ಜೋಡಿಸಿದನು. ಹೀಗೆ ಇಂದ್ರನು ಉತ್ಸಾಹದಿಂದ ಹೊರಟಾಗ ಇತರ ದೇವತೆಗಳೂ ಕೂಡ ತಮ್ಮ ತಮ್ಮ ವಾಹನ ಏರಿ ಯುದ್ಧೋದ್ಯಮದಲ್ಲಿ ತೊಡಗಿದರು. ದ್ವಾದಶಾದಿತ್ಯರು, ಅಷ್ಟವಸುಗಳು, ಏಕಾದಶ ರುದ್ರರೂ, ಸಾಧ್ಯರು, ವಿಶ್ವೇದೇವತೆ ಗಳೂ, ಅಶ್ವಿನೀದೇವತೆಗಳೂ, ಯಕ್ಷ, ರಕ್ಷ, ವಿದ್ಯಾಧರರೂ ಎಲ್ಲರು ಯುದ್ಧೋನ್ಮುಖರಾಗಿ ಹೊರಟರು. ಹಾಗೆಯೇ,

ರಾಜರ್ಷಿಗಳೂ, ಸಿದ್ಧರೂ ಗುಂಪುಗಟ್ಟಿಕೊಂಡು ಆನೆ ಹಾಗೂ ರಥಗಳನ್ನು ಏರಿ ದೈತ್ಯಬಲವಿರುವ ಸ್ಥಳಕ್ಕೆ ಹೊರಟರು. ಸರಿಯಾದ ಸಮಯಕ್ಕೆ ಗರುಡಾರೂಢನಾದ ವಿಷ್ಣುವೂ ಕೂಡ ಬಂದನು, ವಿಷ್ಣುವಿನ ದರ್ಶನವಾದೊಡನೆಯೇ ದೇವತೆಗಳೆಲ್ಲರೂ ಶಿರಬಾಗಿ ವಂದಿಸಿದರು. ದೇವಸೈನ್ಯದ ಮುಂಭಾಗದಲ್ಲಿ ಗದೆಯನ್ನು ಕೈಯಲ್ಲಿ ಧರಿಸಿದ ಷಣ್ಮುಖನೂ, ಹಿಂಭಾಗದಲ್ಲಿ ವಿಷ್ಣುವೂ ಮಧ್ಯಭಾಗದಲ್ಲಿ ಇಂದ್ರನೂ ಸೈನ್ಯದ ರಕ್ಷಕರಾಗಿ ನಿಂತರು. ಎಡಭಾಗದಲ್ಲಿ ವರುಣನಿದ್ದನು.

ಹೀಗೆ ಎಲ್ಲರಿಂದ ರಕ್ಷಿಸಲ್ಪಟ್ಟ ಆ ಸೈನ್ಯವು ಅನೇಕ ಶಸ್ತ್ರಾಸ್ತ್ರಗಳಿಂದ ಕೂಡಿ ಶತ್ರು ಸೈನ್ಯವನ್ನು ಎದುರಿಸಿತು. ಈ ದೇವಾಸುರರ ಯುದ್ಧವು ರಮ್ಯವಾದ ಪಶುಪಕ್ಷಿಗಳ ಕಾಟವಿಲ್ಲದ ಉದಯ ಪರ್ವತದ ವಿಶಾಲವಾದ ತಪ್ಪಲು ಪ್ರದೇಶದಲ್ಲಿ ಜರುಗಿತು. ಈ ರಣಾಂಗಣದಲ್ಲಿ ಎರಡೂ ಬಗೆಯ ಸೈನಿಕರ ಉದ್ಧತವಾದ ಗತಿಯಿಂದ ರೌದ್ರವಾದ ಸನ್ನಿವೇಶವುಂಟಾಯಿತು. ದಾನವ ಮಹಾಸೈನ್ಯದ ಎದುರಿನಲ್ಲಿ ಷಣ್ಮುಖನಿಂದ ಅಧಿಷ್ಠಿತವಾದ ದೇವಸೈನ್ಯವು ಸನ್ನದ್ಧವಾಯಿತು. ಮಯನ ಪ್ರಮುಖತ್ವದಲ್ಲಿ ದಾನವ ಸೈನ್ಯವು ದೇವತೆಗಳ ಸೈನ್ಯದ ಮೇಲೆ ಆಕ್ರಮಿಸಿತು. ಯುದ್ಧಭೂಮಿಯಿಂದ ಹೊರಡುವ ಧೂಳಿಯು ಆಕಾಶ ವನ್ನಡರಿತು. ಆಗ ಆಕಾಶದಲ್ಲಿ ಕೆಂಪು ಮೋಡವಿದೆಯೇ ಎನ್ನುವಂತಾಯಿತು. ಸಂಕುಲವಾದ ಆ ಮಹಾ ಯುದ್ಧದಲ್ಲಿ ಹೊಡೆಯಿರಿ ಬಡೆಯಿರಿ ಎಂಬ ಧ್ವನಿಯೇ ಎಲ್ಲ ಕಡೆಗೂ ಕೇಳಿಸತೊಡಗಿತು.

ಉಭಯ ಸೈನ್ಯಗಳಲ್ಲಿಯೂ ನಡೆಯುತ್ತಿರುವ ಭಟರುಗಳ ನಾಶದಿಂದುಂಟಾದ ರಕ್ತಪ್ರವಾಹವು ಧೂಳಿಯನ್ನು ಶಮನ ಮಾಡಿತು. ರಣಧೂಳಿಯು ಶಾಂತವಾದ ನಂತರ ದೇವತೆಗಳು ದಾನವ ಬಲವನ್ನು ಮತ್ತಷ್ಟು ಪ್ರಹರಿಸಿದರು. ಇತ್ತ ಮಯನಿಂದ ಕೂಡಿದ ದೈತ್ಯರೂ ಸಹ ದೇವತೆಗಳನ್ನು ಹೆಚ್ಚು ಹೆಚ್ಚು ಹತ್ತಿಕ್ಕಿದರು. ದೇವತೆಗಳೆಲ್ಲರೂ ಅಮೃತಪಾನವಿಲ್ಲದೇ ಬಳಲಿದವರಾಗಿ ದೈತ್ಯರಿಂದ ಬಹಳವಾಗಿ ನಿರ್ಜಿತರಾದರು. ಹಾಗೆ ಸೋತು ಹೋದ ದೇವತೆಗಳನ್ನು ನೋಡಿ ಗರುಡಧ್ವಜನಾದ ವಿಷ್ಣುವು ಕೈಯಲ್ಲಿ ಧನುಸ್ಸನ್ನು ಹಿಡಿದು ದೈತ್ಯಬಲವನ್ನು ಸಂಹಾರ ಮಾಡತೊಡಗಿದನು. ಆಗ ದಾನವರು ವಿಷ್ಣುವಿನಿಂದ ಹೆದರಿ ಕಾಲನೇಮಿ ಎಂಬ ಮಹಾದೈತ್ಯನಲ್ಲಿ ಶರಣು ಹೋದರು. ಅವನು ಅವರಿಗೆ ಅಭಯ ಪ್ರಧಾನ ಮಾಡಿದನು.

ಅವನಲ್ಲಿ ಒಂದು ವಿಚಿತ್ರವಾದ ಶಕ್ತಿಯಿದ್ದಿತು. ಅವನು ದೇವತೆಗಳನ್ನಾಗಲೀ ಯಕ್ಷ, ಕಿನ್ನರರನ್ನೇ ಆಗಲಿ ನೋಡಿದರೆ ಅವರನ್ನು ಕೈಯಿಂದ ಬಾಯಲ್ಲಿ ಹಾಕಿಕೊಂಡು ಜಿಡುತ್ತಿದ್ದನು. ದಾನವರಲ್ಲಿ ಅಗ್ರಗಣ್ಯನಾದ ಕಾಲನೇಮಿಯು ತಾನು ಶಸ್ತ್ರರಹಿತನಾಗಿದ್ದರೂ ದೇವಸೈನ್ಯವನ್ನು ತನ್ನ ಉಗುರುಗಳಿಂದಲೇ ಮರ್ದಿಸಿ ಅಗ್ನಿಯಂತೆ ಪ್ರಜ್ವಲಿಸುತ್ತ ದೇವಸೈನ್ಯದ ಮೇಲೆ ವ್ಯಾಪಿಸತೊಡಗಿದನು. ಹೀಗೆ ಅಭಿವೃದ್ಧಿ ಹೊಂದುತ್ತಿರುವ ದೈತ್ಯರನ್ನು ನೋಡಿ ದೇವಸಿದ್ಧ ಗಂಧರ್ವರು ಆತನನ್ನು ಭಯಚಕಿತ ದೃಷ್ಟಿಯಿಂದ ನೋಡತೊಡಗಿದರು. ಇತ್ತ ದೈತ್ಯರು ದರ್ಪದಿಂದ ಕೊಬ್ಬಿ ವಿಜಯಾಪೇಕ್ಷೆಯಿಂದ ಕುಣಿಯಲಾರಂಭಿಸಿದರು.

ದೇವತೆಗಳಲ್ಲಿ ಪುರಸ್ಕರಿಸಲ್ಪಟ್ಟ ವಿಷ್ಣುವನ್ನು ಶಸ್ತ್ರಾಸ್ತ್ರ ಪ್ರಹಾರದಿಂದ ನಿಸ್ತೇಜಸ್ಕನನ್ನಾಗಿ ಮಾಡಿದರು. ಕಾಲನೇಮಿಯನ್ನು ಮುಂದೆ ಮಾಡಿ ಬಲಿಮಯ ಮುಂತಾದ ದೈತ್ಯರು ಈ ರೀತಿ ಹಿಂಸಾಕೃತ್ಯವನ್ನು ನಡೆಸುವದನ್ನು ನೋಡಿ ವಿಷ್ಣುವು ಶಾರ್ಙ್ಗವನ್ನು ಕೈಯಲ್ಲಿ ತೆಗೆದುಕೊಂಡನು. ಮರ್ಮಭೇದಿಗಳಾದ ಬಾಣಪ್ರಯೋಗದಿಂದ ಆ ದೈತ್ಯರ ಮೇಲೆ ಒಂದೇಸಮನೇ ಪ್ರಯೋಗಿಸಿ ದೈತ್ಯರು ಕಂಗಾಲಾಗುವಂತೆ ವಿಷ್ಣುವು ಮಾಡಿದನು.

ನಾರಾಚವೆಂಬ ತನ ವಿಶೇಷ ಬಾಣ ಪರಂಪರೆಯಿಂದ ಅವರೆಲ್ಲರನ್ನೂ ಮುಚ್ಚಿದನು. ಆಗ ದಾನವರು ಹೌಹಾರಿ ಜ್ವಲಿಸುತ್ತ ಬರುತ್ತಿರುವ ನಾರಾಚ ಹಾಗೂ ಅರ್ಧಚಂದ್ರ ಮೊದಲಾದ ಬಾನಗಳಿಂದ ಹೆದರಿ ಓಡತೊಡಗಿದರು. ಆದರೆ ಬಲಿ ಹಾಗೂ ಮಯರು ಮತ್ತೆ ಯುದ್ಧ ಮಾಡಲು ಕಾಲನೇಮಿಯನ್ನು ಪ್ರೋತ್ಸಾಹಿಸಿದರು. ಈಗ ಕಾಲನೇಮಿಯು ನೇರವಾಗಿ ವಿಷ್ಣವಿನ ಮೇಲೆಯೇ ಏರಿ ಬಂದನು. ಆಗ ವಿಷ್ಣುವು ಸಹಸ್ರ ಶೀರ್ಷನಾಗಿ ಪರ್ವತಾಕಾರದಲ್ಲಿದ್ದ ಆ ದೈತ್ಯನನ್ನು ಕೈಯಲ್ಲಿದ್ದ ಸುದರ್ಶನ ಚಕ್ರಪ್ರಯೋಗದಿಂದ ಕಾಲನೇಮಿಯನ್ನು ಭೇದಿಸಲುಪ ಕ್ರಮಿಸಿದನು. ಜಗತ್ತಿಗೆ ಮೂಲಕಾರಣನಾದ ವಿಷ್ಣುವನ್ನು ಕುರಿತು ಕಾಲನೇಮಿಯು ಹಾಸ್ಯಾಸ್ಪದವಾದ ಕೆಲವು ಮಾತುಗಳನ್ನಾಡಿದನು -

''ಹಿಂದೆ ದಾನವರನ್ನು ಜಯಿಸಿದವನು ಇವನೇ. ಈಗ ನನ್ನನ್ನು ನಾಶಮಾಡಲು ಆಯುಧಧಾರಿಯಾಗಿ ಬಂದಿರುವನು. ಈತನು ಹಿರಣ್ಯಾಕ್ಷನನ್ನು ಕೊಂದಿರುವದರಿಂದ ನನಗೆ ಪರಮ ಶತ್ರುವಾಗಿರುವನು. ನಾನು ಶಸ್ತ್ರ ಪ್ರಯೋಗ ಮಾಡಿದಾಗ ಹೇಗೆ ತಪ್ಪಿಸಿಕೊಳ್ಳುವನೋ ನೋಡುವೆನು. ತನ್ನ ಪ್ರಾಣದ ಆಸೆಯನ್ನೇ ಬಿಟ್ಟು ನನ್ನೊಡನೆ ಯುದ್ಧಮಾಡಲು ಬಂದಿರುವನು. ಈಗ ನನ್ನ ಮುಷ್ಟಿಪ್ರಹಾರದಿಂದ ಇವನು ಪುಡಿಪುಡಿಯಾಗುವ ದೃಶ್ಯವನ್ನು ದೇವತೆಗಳೆಲ್ಲರೂ ಸ್ವಲ್ಪೇಸಮಯದಲ್ಲಿ ನೋಡುತ್ತಾರೆ.'' ಹೀಗೆ ಕಾಲನೇಮಿಯು ಹಾಸ್ಯದ ಮಾತುಗಳನ್ನು ಹೇಳಿ ಕೋಪದಿಂದ ತುಟಿಯನ್ನಲುಗಾಡಿಸುತ್ತ ವಿಷ್ಣುವಿನ ವಾಹನವಾದ ಗರುಡನ ಮೇಲೆ ಗದೆಯ ಪ್ರಹಾರವನ್ನು ಮಾಡಿದನು. ಆದರೆ ಆ ಗದಾ ಪ್ರಹಾರವು ವಿಷ್ಣುವಿನ ಚಕ್ರಾಯುಧದ ಎದುರಿನಲ್ಲಿ ಪ್ರಹರಿಸಲು ಸಮರ್ಥವಾಗಲಿಲ್ಲ, ದರಿದ್ರನ ಮನೋರಥವನ್ನು ಪೂರ್ವ ದುಷ್ಕರ್ಮವು ನಾಶಪಡಿಸುವಂತೆ ಅವನ ಗದಾ ಪ್ರಹಾರವಾಯಿತು. ಹೀಗೆ ಆ ಗದೆಯನ್ನು ಕತ್ತರಿಸಿ ವಿಷ್ಣುವು ದೈತ್ಯನ ಸ್ಥೂಲ ಭುಜಗಳನ್ನೂ ತನ್ನ ಸುದರ್ಶನದಿಂದ ಕತ್ತರಿಸಿದನು. ಆಗ ಕಾಲನೇಮಿಯು ಅಗ್ನಿಯಿಂದ ದಗ್ಧವಾದ ಪರ್ವತದಂತೆ ತೋರಿದನು. ಆಗ ವಿಷ್ಣುವು ಕೋಪದಿಂದ ಪಕ್ವವಾದ ತಾಳೆ ಫಲವನ್ನು ಕೆಡವುವಂತೆ ಆ ದೈತ್ಯನ ಶಿರವನ್ನು ನೆಲಕ್ಕುರುಳಿಸಿದನು. ಅನಂತರ ತೋಳು ತಲೆಗಳಿಲ್ಲದ ಈ ಮಹಾದೈತ್ಯನು ಮೋಟ ಮರದಂತೆ ಅಚಲವಾಗಿ ನಿಂತನು. ಆಗ ಗರುಡನು ಬಂದು ಅವನನ್ನು ಭೇದಿಸಿ ಭೂಮಿಗೆ ಉರುಳಿಸಿದನು. ಈ ರೀತಿ ಸೇನಾನಾಯಕನಾದ ಕಾಲನೇಮಿಯು ಹತನಾಗಲು ದೇವತೆಗಳೆಲ್ಲರೂ ವಿಷ್ಣುವನ್ನು ಪ್ರಶಂಸಿಸತೊಡಗಿದರು. ಆದರೆ ದೈತ್ಯರು ಮಾತ್ರ ತಮ್ಮ ಅಸ್ತ್ರ, ಶಸ್ತ್ರಗಳನ್ನು ಬಿಟ್ಟು ಓಡತೊಡಗಿದರು. ಬಾಣನೆಂಬ ಒಬ್ಬ ಅಸುರನು ಮಾತ್ರ ಯುದ್ಧರಂಗದಲ್ಲಿ ಉಳಿದುಕೊಂಡನು.

ವಾಮನ ಮಹಾಪುರಾಣದಲ್ಲಿ ಎಪ್ಪತ್ತೂರನೇಯ ಅಧ್ಯಾಯವು ಮುಗಿದುದು

—o—

**೩೩. ಸನ್ನಿವೃತ್ತಬಲೇ ಬಾಣೇ ದಾನವಾಃ ಸತ್ವರಂ ಪುನಃ**
**ಪ್ರಯಾತಾ ದೇವತಾ ಸೇನಾಂ ಸಶಸ್ತ್ರಾಯುಧ ಲಾಲಸಾಃ ॥**

**ಪುಲಸ್ತ್ಯರು ಹೇಳುತ್ತಾರೆ** - ಯುದ್ಧರಂಗದಲ್ಲಿ ಉಳಿದ ಬಾಣಾಸುರನು ತನ್ನ ಅಳಿದುಳಿದ ಸೈನ್ಯದೊಂದಿಗೆ ಶಸ್ತ್ರಾಸ್ತ್ರಧಾರಿಯಾಗಿ ದೇವಸೈನ್ಯದ ಮೇಲೆ ಯುದ್ಧ ಮಾಡಲು ಹೊರಟನು. ಈ ವೃತ್ತಾಂತವನ್ನು ವಿಷ್ಣುವು ತಿಳಿದು ದೇವತೆಗಳನ್ನೆಲ್ಲ ಮತ್ತೆ ಯುದ್ಧಮಾಡಲು ತೊಡಗಿಸಿದನು. ಇಂದ್ರನೇ ಮೊದಲಾದ ದೇವತೆಗಳು ಯುದ್ಧ ಮಾಡತೊಡಗಿದರು. ಆ ಸಮಯದಲ್ಲಿ ಒಮ್ಮೆಲೇ ವಿಷ್ಣುವು ಅಂತರ್ಧಾನವನ್ನು ಹೊಂದಿದನು. ಇಂದ್ರನು ಬಲಿಯನ್ನು ಕುರಿತು ಹೇಳಿದನು -

''ನಮಗೆ ಈಗ ವಿಷ್ಣುವಿನ ಸಹಾಯವು ತಪ್ಪಿರುವದು. ನೀನು ದೇವತೆಗಳನ್ನು ಗೆದ್ದು ವಿಜಯವನ್ನು ಗಳಿಸು.'' ವಿಷ್ಣುವು ಹೊರಟುಹೋದನಂತರ ಇಂದ್ರನ ಮಾತಿನಂತೆಯೇ ಬಲಿಯು ಗಧಾಧಾರಿಯಾಗಿ ದೇವಸೈನ್ಯದ ಮೇಲೆ ಏರಿಬಂದನು. ಬಾಣನೂ ಸಹ ಸಹಸ್ರ ಬಾಹುಗಳಲ್ಲಿ ಆಯುಧಗಳನ್ನು ಹಿಡಿದು ದೇವ ಸೈನ್ಯದ ಮೇಲೆ ಧುಮ್ಮಿಕ್ಕಿದನು. ಮಯನು ಮಾಯ ಎಂಬ ರೂಪವನ್ನು ಸ್ವೀಕರಿಸಿ ದೇವಸೈನ್ಯದೊಡನೆ ಹೊರಾಡಿದನು. ವಿದ್ಯುಜ್ಜಿಹ್ವ, ವೀರಭದ್ರ, ವೃಷಪರ್ವ, ಅಸಿತೇಕ್ಷಣ, ವಿಪಾಕ, ವಿಕ್ಷರ ಮೊದಲಾದ ದೈತ್ಯರು ದೇವಸೈನ್ಯವನ್ನು ಬಹಳವಾಗಿ ಉಪದ್ರವಪಡಿಸಿದರು. ವಿಷ್ಣುವಿನ ಸಾನ್ನಿಧ್ಯವಿಲ್ಲದಿರುವದರಿಂದ ದಾನವರ ಪ್ರಬಲವಾದ ಪ್ರಹಾರದಿಂದ ಇಂದ್ರಾದಿ ದೇವತೆಗಳು ನಿಸ್ತೇಜಸ್ಕರಾಗಿ ಯುದ್ಧ ಭೂಮಿಯಿಂದ ವಿಮುಖರಾದರು. ಬಲಿ, ಬಾಣ ಮೊದಲಾದ ದಾನವರು ಓಡುತ್ತಿರುವ ಇವರನ್ನು ಬೆನ್ನಟ್ಟಿದರು. ಸ್ವರ್ಗದಲ್ಲಿ ದೇವತೆಗಳು ಯಾರೂ ಉಳಿಯಲಿಲ್ಲ. ಎಲ್ಲರೂ ಬ್ರಹ್ಮ ಲೋಕಕ್ಕೆ ಹೋದರು. ಈಗ ಸ್ವರ್ಗದಲ್ಲಿ ಬಲಿಯ ಅಧಿಪತ್ಯವು ನೆಲೆಗೊಂಡಿತು. ಬಲಿಷ್ಠನಾದ ಬಲಿಯೇ ಈಗ ಇಂದ್ರನಾದನು.

ಬಲಿಪುತ್ರನಾದ ಬಾಣನೇ ವರುಣನಾದನು. ಮಯನು ಚಂದ್ರನಾದನು. ಪ್ರಹ್ಲಾದನು ರಾಹುವೂ, ಕೇತುವು ಸೂರ್ಯನೂ, ಶುಕ್ರನೂ ಬ್ರಹಸ್ಪತಿಯಾದರು. ಚತುರ್ಯುಗದ ಆವೃತ್ತಿಯಲ್ಲಿ ದ್ವಾಪರಯುಗದ ಕೊನೆಯಲ್ಲಿ ಐದನೇಯ ಕಲಿಯುಗದಲ್ಲಿ ಈ ದೇವಾಸುರ ಯುದ್ಧವು ನಡೆಯಿತು. ಇಂಥ ಈ ಸಮಯಕ್ಕೆ ಪಾತಾಳವೇ ಮೊದಲಾಗಿ ಕೆಳಗಿನ ಏಳು ಲೋಕಗಳಿಗೂ ಮೇಲಿನ ಭೂ, ಭುವರ್ಲೋಕಗಳಿಗೆ ಬಲಿಯೇ ಏಕಚಕ್ರಾಧಿಪತಿಯಾದನು. ಬಲಿಯು ಸ್ವರ್ಗದಲ್ಲಿ ಇತರ ದುರ್ಲಭವಾದ ಭೋಗಗಳನ್ನನುಭವಿಸುತ್ತಿರುವಾಗ ವಿಶ್ವಾವಸುವೇ ಮೊದಲಾದ ಗಂಧರ್ವರು ಅವನನ್ನು ಸೇವಿಸಲು ಪ್ರಾರಂಭಿಸಿದರು. ತಿಲೋತ್ತಮೆಯೇ ಮೊದಲಾದ ಅಪ್ಸರೆಯರು ನರ್ತನ ಮಾಡಿದರು. ಯಕ್ಷ, ವಿದ್ಯಾಧರಾದಿಗಳು ಸಂಗೀತ ವಾದ್ಯಗಳನ್ನೇರ್ಪಡಿಸಿದರು. ಹೀಗೆ ಅನೇಕ ಸುಖೋಪಭೋಗ ಗಳನ್ನು ಅನುಭವಿಸುತ್ತಿದ್ದ ಬಲಿಯು ಒಂದು ಸಲ ತನ್ನ ತಾತನಾದ ಪ್ರಲ್ಹಾದನನ್ನು ಸ್ಮರಿಸಿದನು.

ಕೂಡಲೇ ಭಾಗವತೋತ್ತಮನಾದ ಆ ಪ್ರಲ್ಹಾದನು ಬಲಿಯ ಎದುರಿನಲ್ಲಿ ಉಪಸ್ಥಿತನಾದನು. ಆಗ ಬಲಿಯು ಪ್ರತ್ಯುತ್ಥಾನಾದಿಗಳಿಂದ ಪ್ರಲ್ಹಾದನನ್ನು ಸತ್ಕರಿಸಿದನು ಮತ್ತು ಸಿಂಹಾಸನದ ಮೇಲೆ ಕೂಡಿಸಿದನು. ಆಗ ಬಲಿಯು ಪ್ರಹ್ಲಾದನನ್ನು ಕುರಿತು ಅಂದನು, ''ನಿನ್ನ ಅನುಗ್ರಹದಿಂದ ನಾನು ದೇವತೆಗಳನ್ನೆಲ್ಲ ಜಯಿಸಿ ಇಂದ್ರನ ರಾಜ್ಯವನ್ನು ಪಡೆದಿದ್ದೇನೆ. ಮೂರು ಲೋಕ ಗಳೂ ನನ್ನ ಅಧೀನವಾಗಿವೆ. ಇದೆಲ್ಲವನ್ನೂ ನಿನ್ನ ಪಾದತಲದಲ್ಲಿ ಅರ್ಪಿಸ ಬಯಸುತ್ತೇನೆ.

ಈ ಇಂದ್ರನ ಐರಾವತವು ನಿನ್ನ ಸಂಚಾರಕ್ಕೆ ಉಪಯುಕ್ತವಾಗಲಿ. ನಾನೂ ಕೂಡ ನಿನ್ನ ಪರಮ ಭೃತ್ಯನಾಗಿ ನಿನ್ನ ಪಾದ ಸೇವೆ ಮಾಡಿ ಪುಣ್ಯಶಾಲಿಯಾಗುತ್ತೇನೆ. ಹಿರಿಯರ ಶುಶ್ರೂಷೆಯನ್ನು ಮಾಡುವದು ರಾಜನಾದವನ ಕರ್ತವ್ಯವು.'' ವಿನಯಯುಕ್ತವಾದ ಈ ಬಲಿಯ ಮಾತನ್ನು ಕೇಳಿ ಪ್ರಹ್ಲಾದನು ಧರ್ಮಯುಕ್ತ ವಾದ ಕೆಲವು ಮಾತುಗಳನ್ನು ಹೇಳಿದನು - ''ಮಗನೇ, ನಾನು ದೇವರ ಅನುಜ್ಞೆಯಂತೆ ನಿಷ್ಕಂಟಕವಾದ ರಾಜ್ಯವನ್ನನುಭವಿಸಿ ಅನೇಕ ದಾನಧರ್ಮ ಮಾಡಿರುವೆನು. ಪುತ್ರರನ್ನು ಪಡೆದಿರುವೆನು.

ಈಗ ನಾನು ಕೇವಲ ಯೋಗಸಾಧಕನಾಗಿರುವೆನು. ನನ್ನ ಕಾರ್ಯವೆಲ್ಲ ಮುಗಿದಿರು ವದರಿಂದ ನೀನೇ ಈ ರಾಜ್ಯವನ್ನು ಸ್ವೀಕರಿಸಿ ಹಿರಿಯರ ವಿಷಯದಲ್ಲಿ ಪೂಜ್ಯ ಭಾವನೆಯನ್ನಿಟ್ಟುಕೊಂಡು ರಾಜ್ಯವನ್ನಾಳು' ಎಂದು ಪ್ರಹ್ಲಾದನು ಅವನನ್ನು ಇಂದ್ರನ ಸಿಂಹಾಸನದಲ್ಲಿ ಕುಳ್ಳಿರಿಸಿದನು. ಬಲಿಯು ಸಿಂಹಾಸನದ ಮೇಲೆ ಇಂದ್ರನಂತೆಯೇ ವಿರಾಜಮಾನನಾದನು. ಕೈಮುಗಿದು ಪ್ರಹ್ಲಾದನಲ್ಲಿ ಪ್ರಾರ್ಥನೆ ಮಾಡಿಕೊಂಡನು -

''ತ್ರೈಲೋಕ್ಯವನ್ನು ರಕ್ಷಿಸುವ ನಾನು ಧರ್ಮ, ಅಧರ್ಮ, ಕಾಮ, ಮೋಕ್ಷಗಳೆಂಬ ಪುರುಷಾರ್ಥಗಳನ್ನು ಹೇಗೆ ಸಾಧಿಸಬೇಕು'' ಎಂಬುದನ್ನು ಹೇಳು. ಆಗ ಸಮೀಪದಲ್ಲಿ ಶುಕ್ರಾಚಾರ್ಯರು ಇದ್ದರು. ಪುರುಷಾರ್ಥಗಳನ್ನುಪದೇಶಿಸಲು ಶುಕ್ರಾಚಾರ್ಯರೂ ಸಹ ಪ್ರಹ್ಲಾದನಿಗೆ ಕೇಳಿಕೊಂಡರು. ಅವರ ಮಾತು ಕೇಳಿ ಪ್ರಹ್ಲಾದನು ಧರ್ಮಾರ್ಥಾನುಗುಣವಾದ ಉಪದೇಶವನ್ನು ಕೊಟ್ಟನು.

''ಅರಸನೇ, ಮುಂದಿನ ಹಿತದ ದೃಷ್ಟಿಯನ್ನಿರಿಸಿಕೊಂಡು ಧರ್ಮಕ್ಕೆ ಅವಿರೋಧ ವಾದ ರೀತಿಯಲ್ಲಿ ದ್ರವ್ಯವನ್ನು ಸಂಗ್ರಹಿಸುವದು ಅರ್ಥವೆಂಬ ಪುರುಷಾರ್ಥವು. ವತ್ಸನೇ, ಯಾವ ಕೆಲಸದಿಂದ ಪ್ರಾಣಿ ಮಾತ್ರಕ್ಕೂ ಸಂತೋಷವುಂಟಾಗುವದೋ ಮತ್ತೂ ಇಹಪರ ಲೋಕಗಳಲ್ಲಿ ಶ್ರೇಯಸ್ಸು ಉಂಟಾಗುವದೋ ಅಂಥ ಕಾರ್ಯವನ್ನೇ ನೀನು ಯಾವಾಗಲೂ ಆಚರಿಸು. ಹೀಗೆ ಕಾರ್ಯವನ್ನು ನೀನು ಮಾಡುವದರಿಂದ ಕೀರ್ತಿಯುಂಟಾಗುವದು. ಯಾವ ವಿಧವಾದ ನಿನ್ನ ಆಚರಣೆಯಿಂದ ಅಪಕೀರ್ತಿಯು ಉಂಟಾಗುವದಿಲ್ಲವೋ ಅಂತ ಆಚರಣೆಯನ್ನು ನೀನು ಇಟ್ಟುಕೋ. ಹೀಗೆ ಇರುವದರಿಂದ ಎಲ್ಲ ದೊಡ್ಡ ಜನರ ಮನಸ್ಸಿನ ಹಾರೈಕೆಯು ನಮ್ಮ ಮೇಲೆ ಉಂಟಾಗಿ ನಾವು ಸಂತೋಷದಿಂದ ಇರುವ ಸಮಯವು ಒದಗುವದು. ಸತ್ಕುಲಪ್ರಸೂತನಾದ ನೀನು ನಿನ್ನ ಮನೆತನದ ಶುದ್ಧತೆಯನ್ನು ಪ್ರಯತ್ನಪೂರ್ವಕವಾಗಿ ಕಾಯ್ದುಕೋ. ಹಾಗೆ ಮಾಡಿದಲ್ಲಿ ಲೋಕದಲ್ಲಿ ನೀನು ಯಶಸ್ವಿ ಯಾಗುವಿ.

ರಾಜ್ಯದಲ್ಲಿಯ ಬ್ರಾಹ್ಮಣೋತ್ತಮರನ್ನು ಎಲ್ಲ ರೀತಿಯಿಂದ ರಕ್ಷಿಸುವ ಕ್ಷತ್ರಿಯರು ಎಲ್ಲಿ ವಾಸಮಾಡುವರೋ, ಕೃಷಿ, ಗೋರಕ್ಷಣಾ ಮೊದಲಾದ ಕಾರ್ಯದಲ್ಲಿ ನಿರತರಾದ ವೈಶ್ಯರು ಮತ್ತು ಇವರ ಸೇವೆಯಲ್ಲಿ ಸದಾತೊಡಗಿದ ಶೂದ್ರರು ಎಲ್ಲಿ ವಾಸಮಾಡು ವರೋ ಆ ಭೂಮಿಯು ಅಭಿವೃದ್ಧಿಯ ಮೇಲ್ಮಟ್ಟವನ್ನು ಮುಟ್ಟುತ್ತದೆ. ಶಾಸ್ತ್ರಪಾರಂಗತರಾದ ಬ್ರಾಹ್ಮಣರು, ಅರಸರಿಂದ ಯಜ್ಞಯಾಗಾದಿಗಳನ್ನು ಮಾಡಿಸುವರು. ತಾವೂ ಯಜ್ಞಯಾಗಾದಿಗಳನ್ನು ಮಾಡುವರು. ಹೀಗೆ ಯಜ್ಞದಿಂದ ಉಂಟಾಗುವ ಹೊಗೆಯಿಂದಲೇ ರಾಜನ ಎಲ್ಲ ದೋಷಗಳ ಶಾಂತಿಯುಂಟಾಗುವದು.

ಬ್ರಾಹ್ಮಣರಾದವರು ಅಧ್ಯಯನ, ಅಧ್ಯಾಪನ, ಯಜನ, ಯಾಜನ ದಾನ, ಪ್ರತಿಗ್ರಹಗಳಲ್ಲಿ ನಿರತರಾಗಿಯೂ ಕ್ಷತ್ರಿಯರು ಶಸ್ತ್ರಜೀವಿಗಳಾಗಿಯೂ ಇದ್ದುಕೊಂಡು ನಿನ್ನ ಆಜ್ಞೆಯನ್ನು ಪರಿಪಾಲಿಸುವಂತಾಗಲಿ. ಅದರಂತೆಯೇ, ವೈಶ್ಯರು ಪಶುಪಾಲನೆ ಹಾಗೂ ವಾಣಿಜ್ಯವೃತ್ತಿಯಿಂದಲೂ, ಶೂದ್ರರು ಎಲ್ಲರ ಶುಶ್ರೂಷೆಯಿಂದಲೂ ಕಾಲಕಳೆಯುವಂತೆ ನೀನು ಯೋಜನೆಗಳನ್ನು ಮಾಡಿಕೋ. ಎಲ್ಲ ವರ್ಣದ ಜನರೂ ತಮ್ಮ ತಮ್ಮ ವರ್ಣೋಚಿತವಾದ ಕಾರ್ಯಗಳನ್ನು ಮಾಡುವದರಿಂದ ಧರ್ಮ ಹಾಗೂ ರಾಜ್ಯದ ಅಭಿವೃದ್ಧಿಯಾಗುತ್ತ ಹೋಗುವದು. ಅವರು ಧರ್ಮವನ್ನು ಬಿಟ್ಟರೆ ರಾಜನಿಗೆ ಅಳಿಗಾಲವು ಬರುವದು.'' ಈ ರೀತಿಯಾಗಿ ಪ್ರಹ್ಲಾದನ ಉಪದೇಶ ವಚನವನ್ನು ಕೇಳಿ ಮನನ ಮಾಡಿಕೊಂಡು ಬಲಿಯು ''ನಿನ್ನ ಅಪ್ಪಣೆಯಂತೆ ನಾನು ನಡೆಯುವೆನು'' ಎಂದು ಹೇಳಿ ಸುಮ್ಮನಾದನು.

ವಾಮನ ಮಹಾಪುರಾಣದಲ್ಲಿ ಸ್ವರ್ಗಲೋಕದಲ್ಲಿ ಬಲಿ ಎಂಬ ೭೪ನೇಯ ಅಧ್ಯಾಯವು ಮುಗಿದುದು

—o—

## ನಾಲ್ಕು ರೂಪವತಿಯುವತಿಯರು | ಅಧ್ಯಾಯ - ೭೫

೩೪. ತತೋ ಗತೇಷು ದೇವೇಷು ಬ್ರಹ್ಮಲೋಕಂ ತಪೋಧನ ।
ತ್ರೈಲೋಕ್ಯಂ ಪಾಲಯಾಮಾಸ ಬಲಿಃ ಧರ್ಮ ಸಮನ್ವಿತಃ ॥

೩೫. ಕಲಿಸ್ತದಾ ಧರ್ಮಯುತಂ ಜಗದ್ದೃಷ್ಟ್ವಾ ಕೃತೇ ಯಥಾ ।
ಬ್ರಹ್ಮಾಣಂ ಶರಣಂ ಭೇಜೇ ಸ್ವಭಾವಸ್ಯ ನಿಷೇಧನಾತ್ ॥

**ಪುಲಸ್ತ್ಯರು ಹೇಳುತ್ತಾರೆ** - ದೇವತೆಗಳೆಲ್ಲರೂ ಬಲಿಗೆ ಹೆದರಿ ಬ್ರಹ್ಮಲೋಕಕ್ಕೆ ಹೋದನಂತರ ಬಲಿಯು ಮೂರು ಲೋಕಗಳನ್ನು ಧರ್ಮನಿಂದಲೇ ಪಾಲಿಸಿದನು. ಕೃತಯುಗದಂತಿರುವ ಯುಗದಲ್ಲಿ ಕಲಿಯು ಬ್ರಹ್ಮನಲ್ಲಿ ಶರಣಾಗತ ನಾದನು. ಬ್ರಹ್ಮಲೋಕಕ್ಕೆ ಹೋಗಿ ಕಲಿಯು ಅಲ್ಲಿ ದೇವತೆಗಳಿಂದ ಸಮೇತನಾದ ಬ್ರಹ್ಮನನ್ನು ನೋಡಿದನು. ನಮ್ರವಾಗಿ ಆತನನ್ನು ನಮಸ್ಕರಿಸಿ ''ದೇವದೇವಾ -

೩೬. ''ಮಮ ಸ್ವಭಾವೋ ಬಲಿನಾ ನಾಶಿತೋ ದೇವಸತ್ತಮ''
ಬಲಿಯು ತನ್ನ ಸ್ವಭಾವವನ್ನೇ ಹತ್ತಿಕ್ಕಿಬಿಟ್ಟಿರುವನು'' ಎಂದು ದೂರಿದನು. ಆಗ

ಬ್ರಹ್ಮನು ಅಂದನು- ''ನಿನ್ನ ಸ್ವಭಾವವನ್ನೇ ಏಕೆ? ಬಲಿಷ್ಠನಾದ ಆ ಬಲಿಯು ಜಗತ್ತಿನ ಸ್ವಭಾವವನ್ನೇ ಬದಲಿಸಿಬಿಟ್ಟಿದ್ದಾನೆ. ಇಲ್ಲಿ ನೋಡು ಅವನಿಂದ ಬೆದರಿ, ದೇವೇಂದ್ರ, ವರುಣ, ಸೂರ್ಯದೀನರಾಗಿ ಬಂದು ಇಲ್ಲಿ ಸೇರಿದ್ದಾರೆ. ಆದುದರಿಂದ ಆ ಬಲಿಯ ವ್ಯಾಪಾರವನ್ನು ತಡೆಯಲು ಆ ಸಹಸ್ರಶೀರ್ಷನಾದ ಆ ವಿಷ್ಣುವಿನ ಹೊರತು ಮತ್ತಾರೂ ಶಕ್ತರಲ್ಲ.

೩೭. ಸ ಭೂಮಿಂ ಚ ತಥಾ ನಾಕಂ ರಾಜ್ಯಂ ಲಕ್ಷ್ಮೀಂ ಯಶೋ ಬಲಂ।
ಸಮಾಹರಿಷ್ಯತಿ ಬಲಿಃ ಕರ್ತಾಸೌ ಧರ್ಮಗೋಚರಮ್ ॥

ಧರ್ಮಾಚರಣೆಯ ಬಲದಿಂದ ಬಲಿಯು ಭೂಮಿಯನ್ನೂ, ಸ್ವರ್ಗವನ್ನೂ, ಲಕ್ಷ್ಮೀಯನ್ನೂ, ಯಶಸ್ಸನ್ನೂ ಸ್ವಾಧೀನಪಡಿಸಿಕೊಂಡು ಧರ್ಮಮಾರ್ಗದಲ್ಲಿ ನಿರತನಾಗಿರುವನು. ಬ್ರಹ್ಮನು ಹೀಗೆ ಹೇಳಲು '' ಇಂದ್ರಾದಿಗಳ ಸ್ಥಿತಿಯೇ ಹೀಗಿರುವಾಗ ನನ್ನ ಅವಸ್ಥೆ ಏನು'' ಎಂದು ಹೆದರಿ ಕಲಿಯು ವಿಭೀತಕವೆಂಬ ಕಾಡಿಗೆ ಹೊರಟು ಹೋದನು. ಆಗ ಮೂರು ಲೋಕಗಳ ತುಂಬೆಲ್ಲ ಧರ್ಮದ ಅಧಿಕ ಪ್ರಸಾರವಾಯಿತು. ಕಲಿಯ ಕತೆಯೇ ಎಲ್ಲಿಯೂ ಕೇಳದಂತಾಯಿತು. ಧರ್ಮವು ಎಲ್ಲ ವರ್ಣದವರಲ್ಲಿ ನಾಲ್ಕು ಪಾದಗಳಿಂದ ಬೇರೂರಿತು. ಅಹಿಂಸಾ, ಸತ್ಯ, ಶೌಚ, ಇಂದ್ರಿಯ ನಿಗ್ರಹ, ದಯೆ, ದಾನ ಮೊದಲಾದ ಗುಣಗಳು ಎಲ್ಲ ಕಡೆಯಲ್ಲಿಯೂ ಪ್ರಸಾರಗೊಂಡವು.

೩೮. ಕೃತಂ ಪ್ರಾವರ್ತತ ತದಾ ಕಲಿರ್ನಾಸೀಜ್ಜಗತ್ರಯೇ ।
ಧರ್ಮೋऽಭವಚ್ಚತುಷ್ಪಾದಃ ಚಾತುರ್ವರ್ಣ್ಯೇऽಪಿ ನಾರದ ॥

ಕೃತಯುಗವು ಬಲಾತ್ಕಾರದಿಂದ ನೆಲಸಿದಂತಾಯಿತು. ಆಯಾ ವರ್ಣದವರು ತಮ್ಮ ವರ್ಣೋಚಿತ ಕಾರ್ಯದಲ್ಲಿ ತೊಡಗಿದರು. ಈ ರೀತಿ ಮೂರುಲೋಕವು ಉತ್ತಮವಾದ ಧರ್ಮದಲ್ಲಿ ತೊಡಗಲು ತ್ರೈಲೋಕ್ಯಲಕ್ಷ್ಮೀಯು ಬಲಿಯ ಸಮೀಪಕ್ಕೆ ಬಂದಳು. ಹೀಗೆ ಬಂದ ಇಂದ್ರನ ಲಕ್ಷ್ಮಿಯನ್ನು ನೋಡಿ ಬಲಿಯು ಪ್ರಶ್ನಿಸಿದನು ''ನೀನು ಯಾರು? ಏತಕ್ಕಾಗಿ ಇಲ್ಲಿ ಬಂದೆ?'' ಈ ಪ್ರಶ್ನೆ ಕೇಳಿ ಲಕ್ಷ್ಮಿಯು ಅಂದಳು -

೩೯. ಅಪ್ರತರ್ಕ್ಯ ಬಲೋ ವಿಷ್ಣುಃಯೋऽಸೌ ಚಕ್ರ ಗದಾಧರಃ ।
ತೇನ ತ್ಯಕ್ತಸ್ತು ಮಘವಾನ್ ತತೋऽಹಂ ತ್ವಾಮಿಹಾಗತಾ ॥

ಕೇಳು, ನಾನು ಮಹಿಷಿಯಾಗಿ ನಿನ್ನಲ್ಲೇತಕ್ಕೆ ಬಂದಿರುವೆನೆಂದರೆ ಇಂದ್ರನು ಅಚಿಂತ್ಯಾದ್ಭುತ ಶಕ್ತಿಯುತನಾದ ಚಕ್ರಧರನಾದ ವಿಷ್ಣುವಿನ ವಿಷಯದಲ್ಲಿ ಆದರವನ್ನು ಕಡಿಮೆ ಮಾಡಿದನು. ಅದಕ್ಕಾಗಿ ವಿಷ್ಣು ಅವನನ್ನು ತ್ಯಜಿಸಿದ್ದಾನೆ. ಆದುದರಿಂದ ನಾನು ಇಂದ್ರನನ್ನು ಬಿಟ್ಟು ನಿನ್ನಲ್ಲಿ ಬಂದಿರುವೆನು. ಮಹಾವಿಷ್ಣುವು ರೂಪವತಿಯರಾದ ನಾಲ್ಕು ಜನ ಯುವತಿಯರನ್ನು ನಿರ್ಮಿಸಿದನು. ಅವನು ಸೃಷ್ಟಿಸಿದವರಲ್ಲಿ ಸತ್ವಗುಣ ಸಮೃದ್ಧಳಾದವಳು ಮೊದಲಿನವಳು. ಅವಳು ಬಿಳಿಯ ಬಟ್ಟೆಯನ್ನು ತೊಟ್ಟು ಬಿಳಿಯ ಮಾಲೆಯನ್ನು ಧರಿಸಿ ಬಿಳಿಯ ಆನೆಯ ಮೇಲೆ ಆರೂಢಳಾದವಳು. ಅವಳ ಶರೀರದ ಬಣ್ಣವೂ ಕೂಡ ಬಿಳಿಯದು. ಎರಡನೇಯವಳು ರಜೋಗುಣ ಸಮೃದ್ಧಳು. ಇವಳು ಕೆಂಪಾದ ಬಟ್ಟೆಗಳನ್ನು ಧರಿಸಿದ್ದಳು. ಕೆಂಪಾದ ಮಾಲೆಯನ್ನೇ ಧರಿಸಿ ಕೆಂಪು ಕುದುರೆಯ ಮೇಲೆ ಆರೂಢಳಾಗಿ ಕೆಂಪು ದೇಹದವಳಾಗಿದ್ದಳು.

ಇನ್ನು ಮೂರನೇಯವಳು ತಮೋಗುಣದವಳು. ತನ್ನ ಹೊಂಬಣ್ಣದ ಮೈಮೇಲೆ ಹೊಂಬಣ್ಣದ ವಸ್ತ್ರವನ್ನೇ ಧರಿಸಿದವಳು. ಹೊಂಬಣ್ಣದ ಮಾಲೆಯನ್ನೇ ಧರಿಸಿ ಚಂದನ ವನ್ನು ಹಚ್ಚಿಕೊಂಡು ಚಿನ್ನದ ರಥದಲ್ಲಿ ಕುಳಿತುಕೊಂಡವಳು. ಇನ್ನು ನಾಲ್ಕನೇಯವಳು. ಸತ್ವಾದಿ ಮೂರು ಗುಣಗಳಿಂದಲೂ ಕೂಡಿದವಳು. ತನ್ನ ಭ್ರಮರದಂತಹ ಮೈಮೇಲೆ ನೀಲವಸ್ತ್ರವನ್ನು ಧರಿಸಿ ನೀಲಮಾಂಗಲ್ಯವನ್ನು ಹಾಕಿಕೊಂಡು ಕಪ್ಪಾದ ಎತ್ತನ್ನು ಹತ್ತಿದವಳು ಇವಳು. ಇವರುಗಳಲ್ಲಿ ಮೊಲನೇಯವಳಾದ ಶ್ವೇತಾಂಬರಳು ಆನೆಯ ಮೇಲೆ ಕುಳಿತು ಬ್ರಹ್ಮನ ಹತ್ತಿರಕ್ಕೆ ಸೇರಿದಳು.

ಎರಡನೇಯವಳಾದ ರಕ್ತ ವಸ್ತ್ರಧಾರಿಣಿಯು ಕುದುರೆಯ ಮೇಲೆ ಕುಳಿತು ಇಂದ್ರ ಹಾಗೂ ಅವನ ಸಂಬಂಧಿಗಳ ಹತ್ತಿರಕ್ಕೆ ಬಂದಳು. ಇನ್ನು ಮೂರನೇವಳಾದ ಹೊಂಬಣ್ಣದ ರಮಣಿಯು ಚಿನ್ನದ ರಥವನ್ನೇರಿ ಪ್ರಜಾಪತಿ ಇಂದ್ರ ಹಾಗೂ ವೈಶ್ಯರ ಕೈವಶಳಾದಳು. ನಾಲ್ಕನೇವಳಾದ ನೀಲ ವಸ್ತ್ರದ ರಮಣಿಯು ಎತ್ತನ್ನು ಹತ್ತಿ ದಾನವ ರಾಕ್ಷಸ ಹಾಗೂ ಶೂದ್ರರ ಅಧೀನಳಾದಳು.

೪೦. ವಿಪ್ರಾದ್ಯಾಃ ಶ್ವೇತರೂಪಾ ತಾಂ ಕಥಯಂತಿ ಸರಸ್ವತೀಂ ।
ಸ್ತುವಂತಿ ಬ್ರಹ್ಮಣಾ ಸಾರ್ಧಂ ಮಖೇ ಮಂತ್ರಾದಿಭಿಃ ಸಹ ॥

ಮೊದಲನೆಯವಳಾದ ಶ್ವೇತರೂಪಳನ್ನು ಬ್ರಾಹ್ಮಣರೇ ಮೊದಲಾದವರು ಅವಳನ್ನು ಸರಸ್ವತಿ ಎಂದು ಕರೆದು ಯಜ್ಞಗಳಲ್ಲಿ ಬ್ರಹ್ಮನೊಡನೆ ಮಂತ್ರಗಳಿಂದ ಸ್ತೋತ್ರ ಮಾಡಿದರು. ಎರಡನೇಯವಳಾದ ರಕ್ತವರ್ಣದ ದೇವಿಯನ್ನು ಕ್ಷತ್ರಿಯರು ಜಯಶ್ರೀ ಎಂದು ಹೊಗಳಿದರು. ಇಂದ್ರ ಮತ್ತೂ ಮನುಗಳು ಕ್ಷತ್ರಿಯ ವರ್ಗದಲ್ಲಿ ಸೇರಿದರು.

ಮೂರನೇಯವಳಾದ ಹೊಂಬಣ್ಣದ ದೇವಿಯನ್ನು ವೈಶ್ಯ ಹಾಗೂ ಕ್ಷತ್ರಿಯರು ಬಂಗಾರದ ಬಣ್ಣದವಳಾದುದರಿಂದ ಲಕ್ಷ್ಮಿ ಎಂದು ಕರೆದರು. ಕೊನೆಯದಾಗಿ ನೀಲ ವರ್ಣದ ದೇವಿಯನ್ನು ಶೂದ್ರ ಹಾಗೂ ದೈತ್ಯರಾಕ್ಷಸರು ಪ್ರಿಯದೇವಿ ಎಂಬ ಹೆಸರಿನಿಂದ ಪೂಜಿಸಿದರು. ಈ ರೀತಿಯಾಗಿ ವಿಷ್ಣುವೇ ಆ ಯುವತಿಯರನ್ನು ವಿಭಾಗಿಸಿದನು.

ಶ್ವೇತರೂಪದವಳಲ್ಲಿ ಇತಿಹಾಸ ಪುರಾಣಗಳು, ಅಂಗಸಹಿತವಾದ ವೇದಗಳು ಚತುಷಷ್ಠಿ ಕಲೆಗಳು ಮಹಾಪದ್ಮ ನಿಧಿರೂಪದಲ್ಲಿ ಅವಿರ್ಭೂತವಾದವು. ರಕ್ತವರ್ಣದವರಲ್ಲಿ ರತ್ನ, ಚಿನ್ನ, ಬೆಳ್ಳಿ, ಗಜಾಶ್ವಗಳು ಇವೆಲ್ಲವೂ ಪದ್ಮ ನಿಧಿಯಾಗಿ ಉದಯವಾದುವು. ಪೀತರೂಪದವಳಲ್ಲಿ ಹಸು, ಎಮ್ಮೆ, ಕತ್ತೆ ಒಂಟೆ, ಸುವರ್ಣ, ವಸ್ತ್ರ, ಭೂಮಿ ಹಾಗೂ ಔಷಧಿಗಳೂ, ಮಹಾನೀಲ ನಿಧಿ ರೂಪದಲ್ಲಿ ಅವಿರ್ಭವಿಸಿದವು.

ಬ್ರಹ್ಮಕ್ಷತ್ರಿಯ, ವೈಶ್ಯರಲ್ಲಿ ದ್ವಿಜತ್ವವೆಂಬ ಒಂದೇ ಜಾತಿಯು ಉಳಿಯಿತು. ಎಲ್ಲಾ ವಸ್ತುಗಳಿಗೂನಾಶಕವಾದಶಂಖವೆಂಬನಿಧಿಯುನೀಲವರ್ಣದವಳಲ್ಲಿ ಅಡಕವಾಯಿತು. ಈ ನಾಲ್ವರಲ್ಲಿ ಶ್ವೇತರೂಪಿಣಿಯಾದ ಮಹಾಪದ್ಮ ವಿಧಿಯನ್ನಾಶ್ರಯಿಸಿದ ಮನುಷ್ಯರು ಆಚಾರವಂತರಾಗಿ ಪೂಜಾದಿಗಳಲ್ಲಿ ತೊಡಗಿ ಶಾಪಾನುಗ್ರಹ ಸಮರ್ಥರಾಗುತ್ತಾರೆ. ಮಹಾಪದ್ಮಾಶ್ರಿತರಾದ ಪುರುಷರು ಯಾಗವನ್ನು ಮಾಡುವವರು. ಭಾಗ್ಯಪಡೆದವರು. ಅಹಂಕಾರವನ್ನು ಹೊಂದಿದವರು ಆಗಿ ಸರ್ವಸಾಮಾನ್ಯವಾದ ಸುಖದಲ್ಲಿ ಆಸಕ್ತರಾಗುತ್ತಾರೆ.

ಮಹಾನೀಲಾಶ್ರಿತರಾದ ಜನರು ಅರ್ಧ ಸತ್ಯ, ಅರ್ಧ ಅಸತ್ಯದಿಂದ ಕೂಡಿ ದಾನ ಯಾಗ ಶೀಲರಾಗಿಯೂ, ನ್ಯಾಯಾನ್ಯಾಯಗಳನ್ನು ತ್ಯಜಿಸಿ ಇತರರಿಗೆ ರಕ್ಷಕರಾಗಿರುವರು. ನೀಲರೂಪಳಾದ ಶಂಖರೂಪ ನಿಧಿಯನ್ನಾಶ್ರಯಿಸಿದ ಜನರು ನಾಸ್ತಿಕರೂ, ಆಚಾರಶೂನ್ಯರೂ ಕೃಪಣರೂ ಆಗಿ ಪರಿಣಮಿಸಿ ಸುಳ್ಳಾಡುವದು, ಕಳ್ಳತನ ಮಾಡುವದ ರಲ್ಲಿ ಆಸಕ್ತರಾಗುವರು'' ಎಂದು ತ್ರೈಲೋಕ್ಯ ಲಕ್ಷ್ಮಿಯು ಎಲ್ಲ ವಿವರವನ್ನು ಹೇಳಿ ತಾನು ರಾಗಿಣಿಯ ರೂಪದಲ್ಲಿರುವೆನೆಂದು ಹೇಳಿದಳು.

೪೧. ಮಮಾಸ್ತಿ ದಾವನಪತೇ ಪ್ರತಿಜ್ಞಾ ಸಾಧುಸಮ್ಮತಾ ।
ಸಮಾಶ್ರಯಾಮಿ ಶೌರ್ಯಾಂಕಂ ನಚ ಕ್ಲೀಬಂ ಕಥಂಚನ ॥

ಮತ್ತೂ ತನ್ನದೊಂದು ಸರ್ವಸಮ್ಮತವಾದ ಪ್ರತಿಜ್ಞೆ ಇದೆ ಎಂದಳು, ''ನಾನು ಶಕ್ತಿಶಾಲಿಯನ್ನೇ ಆಶ್ರಯಿಸುತ್ತೇನೆ. ದುರ್ಬಲನನ್ನು ನಾನೆಂದೂ ಆಶ್ರಯಿಸುವದಿಲ್ಲ. ಈಗ ಮೂರು ಲೋಕಗಳಲ್ಲಿಯೂ ನಿನಗಿಂತ ಬಲಾಢ್ಯರಾದವರಾರೂ ಇಲ್ಲ. ಆದುದುರಿಂದ ನಿನ್ನ ವಿಷಯದಲ್ಲಿ ನಾನು ಸಂಪೂರ್ಣವಾಗಿ ಸಂಪ್ರೀತಳಾಗಿದ್ದೇನೆ. ನೀನು ಪರಾಕ್ರಮದಿಂದ ಇಂದ್ರನನ್ನು ಪರಾಜಯಿಸಿದ್ದೀಯೇ. ನಿನ್ನ ಸತ್ವವನ್ನೂ ಅಸಾಧಾರಣ ಬಲವನ್ನೂ ನೋಡಿ ನಿನ್ನನ್ನಾಶ್ರಯಿಸಲು ನಾನಾಗಿಯೇ ಬಂದಿರುವೆನು. ದಾನವ ರಾಜನೇ, ಹಿರಣ್ಯಕಶ್ಯಪುವಿನ ವಂಶದಲ್ಲಿ ಉದ್ಭವಿಸಿ ನಿನಗೆ ಈ ಅಸಾಧಾರಣ ಬಲವಿರುವದು ಆಶ್ಚರ್ಯದ ಸಂಗತಿಯೇನಲ್ಲ. ನಿನ್ನ ಪಿತಾಮಹನೂ ಕೂಡ ನಿನ್ನ ಈ ಕಾರ್ಯದಿಂದ ಪರಮ ಸಂತುಷ್ಟನಾಗಿದ್ದಾನೆ. ಮೂರು ಲೋಕಗಳ ಮೇಲೆ ನಿನ್ನ ಆಧಿಪತ್ಯವಿದೆ.'' ಹೀಗೆ ಜಗದ್ವ್ಯಾಪಿನಿಯಾದ ಆ ರಾಗಿಣಿಯು ಜಯಶ್ರೀ ರೂಪಿಣಿಯಾಗಿ ದಾನವ ರಾಜನಾದ ಬಲಿಯಲ್ಲಿ ಪ್ರವೇಶಿಸಿದಳು. ಆಗ ಆತನು ಹೆಚ್ಚು ಪ್ರಕಾಶಶೀಲನಾದನು -

೪೨. ಜಯಶ್ರೀಃ ಚಂದ್ರವದನಾ ಪ್ರವಿಷ್ಟಾऽದ್ಯೋತಯಚ್ಚುಭಾ ।
ತಸ್ಯಾಂ ಚೈವ ಪ್ರವಿಷ್ಟಾಯಾಂ ವಿಧವಾ ಇವ ಯೋಷಿತಃ ॥

ಅವನ ಪ್ರಕಾಶದ ಮುಂದೆ ಅವನ ಸ್ತ್ರೀಯರೆಲ್ಲರೂ ನಿಷ್ಪ್ರಭರಾದರು. ಜಯಲಕ್ಷ್ಮಿಯೊಡನೆ ಶ್ರೀ, ಕೀರ್ತಿ, ಕ್ಷಮೆ, ವಿದ್ಯಾ ಮೊದಲಾದ ಎಲ್ಲ ಗುಣಗಳೂ ಆತನನ್ನು ಆಶ್ರಯಿಸಿ ಸುಖದಿಂದ ನೆಲೆಸಿದವು. ಈ ಪ್ರಕಾರ ಬಲಿಚಕ್ರವರ್ತಿಯು ಜಯಲಕ್ಷ್ಮೀ ಪ್ರವೇಶದಿಂದ ತಪಸ್ವಿಯೂ ಜಿತೇಂದ್ರಿಯನೂ, ಸ್ವಪರಜನ ರಕ್ಷಕನೂ, ಸರ್ವಗುಣ ಪರಿಪೂರ್ಣನೂ ಆಗಿ ಪರಿಣಮಿಸಿದನು. ಇವನು ರಾಜ್ಯವನ್ನಾಳುತ್ತಿರುವಾಗ ಯಾವ ಒಬ್ಬ ಸಾಧಾರಣ ಮನುಷ್ಯನೂ ಸಹ ದುಃಖಪೀಡಿತನೂ, ದೀನನೂ ಆಗಲಿಲ್ಲ. ಎಲ್ಲ ಜನರೂ ಸಂಪತ್ ಸಮೃದ್ಧರಾಗಿ ಧರ್ಮನಿಷ್ಠರಾಗಿ ಶಾಸ್ತ್ರಸಮ್ಮತವಾದ ಕಾಮೋಪಭೋಗ ಮಾತ್ರದಲ್ಲಿ ನಿರತರಾದರು.

ವಾಮನ ಮಹಾಪುರಾಣದಲ್ಲಿ ನಾಲ್ಕು ರೂಪವತಿಯುವತಿಯರು
ಎಂಬ ೭೫ನೇಯ ಅಧ್ಯಾಯವು ಮುಗಿದುದು.

—o—

**೪೩. ಗತೇ ತ್ರೈಲೋಕ್ಯ ರಾಜ್ಯೇತು ದಾನವೇಷು ಪುರಂದರಃ ।**
**ಜಗಾಮ ಬ್ರಹ್ಮ ಸದನಂ ಸಹ ದೇವೈಃ ಶಚೀಪತಿಃ ॥**

**ಪುಲಸ್ತ್ಯರು ಹೇಳುತ್ತಾರೆ** - ಮೂರು ಲೋಕದ ರಾಜ್ಯವು ಅಸುರರ ಕೈವಶವಾದ ನಂತರ ಇಂದ್ರನು ಖೇದಗೊಂಡು ಬ್ರಹ್ಮದೇವನ ಭವನಕ್ಕೆ ಹೋದನು. ಅಲ್ಲಿ ಬ್ರಹ್ಮದೇವನು ಋಷಿಗಳಿಂದೊಡಗೂಡಿ ಕಮಲಾಸನದಲ್ಲಿ ಆಸೀನನಾಗಿದ್ದನು. ದೇವತೆಗಳ ತಂದೆಯಾದ ಕಶ್ಯಪರೂ ಸಹ ಅಲ್ಲಿಯೇ ಇದ್ದರು. ಇಂದ್ರನು ಅವರೆಲ್ಲರಿಗೂ ತಲೆಬಾಗಿ ನಮಸ್ಕಾರ ಮಾಡಿದನು ಮತ್ತು ಬ್ರಹ್ಮದೇವ ನಲ್ಲಿ ಬೇಡಿಕೊಂಡನು- ''ಎಲೈ ಪಿತಾಮಹನೇ, ಬಲಿಷ್ಠನಾದ ಬಲಿಯು ನನ್ನ ರಾಜ್ಯವನ್ನೆಲ್ಲ ಅಪಹರಿಸಿದನು.''

**೪೪. ''ಬ್ರಹ್ಮಾ ಪ್ರೋವಾಚ ಶಕ್ರೈತತ್ ಯುಜ್ಯತೇ ಕುಕೃತಂ ಫಲಮ್ ॥**

ಆಗ ಬ್ರಹ್ಮದೇವನು ಉತ್ತರಿಸಿದನು, ''ಇದು ನೀನು ಮಾಡಿದ ಪಾಪಕ್ಕೆ ಸರಿಯಾದ ಫಲವಾಗಿದೆ.'' ತನ್ನ ಪಾಪದ ಕಾರ್ಯದ ಅರಿವು ಇಂದ್ರನಿಗಾಗಲಿಲ್ಲ. ಆಗ ಬ್ರಹ್ಮದೇವನು ಅದನ್ನು ಬಿಡಿಸಿ ಹೇಳಿದನು. ''ದಿತಿಯ ಉದರದಲ್ಲಿರುವ ಗರ್ಭವನ್ನು ಕತ್ತರಿಸಿದ್ದರಿಂದ ನಿನಗೆ ಭ್ರೂಣಹತ್ಯೆ ಎಂಬ ಮಹಾಪಾತಕವು ಬಂದಿದೆ.'' ಆಗ ಇಂದ್ರನು ''ಪ್ರಭುವೇ ಅದು ನನ್ನ ತಪ್ಪಲ್ಲ.

**೪೫. ಪಿತರಂ ಪ್ರಾಹ ದೇವೇಂದ್ರಃ ಸಮಾತುರ್ದೋಷತೋ ವಿಭೋ ।**
**ತನ್ನೂನಂ ಪ್ರಾಪ್ತಂ ಗರ್ಭಃ ಯದಶೌಚಾ ಹಿ ಸಾಽಭವತ್ ॥**

ತಾಯಿಯಾದ ದಿತಿಯು ಅಶುಚಿಯಾದುದರಿಂದ ಗರ್ಭವು ವಿಪತ್ತಿಗೆ ತುತ್ತಾಯಿತು.'' ಅಲ್ಲಿಯೇ ಇದ್ದ ಕಶ್ಯಪರು ಹೇಳಿದರು, ''ತಾಯಿಯೇ ದೋಷವನ್ನು ಒಪ್ಪಿದರೂ ನೀನು ಗರ್ಭದಲ್ಲಿ ಪ್ರವೇಶಿಸಿ ವಜ್ರಾಯುಧದಿಂದ ಭ್ರೂಣವನ್ನು ಪ್ರಹರಿಸಿದ್ದರಿಂದ ಭ್ರೂಣಹತ್ಯೆಯು ನಿನಗೆ ತಪ್ಪಿದ್ದಲ್ಲ.'' ಈ ಮಾತನ್ನು ಕೇಳಿ ಇಂದ್ರನು ತಪ್ಪನ್ನು ಒಪ್ಪಿಕೊಂಡು ಪ್ರಾಯಶ್ಚಿತ್ತವನ್ನು ಹೇಳಲು ಕೇಳಿಕೊಂಡನು. ಆಗ ಎಲ್ಲರೂ ವಿಚಾರಿಸಿ ಎಲ್ಲರಿಗೂ ಬಂದ ವಿಪತ್ತನ್ನು ಪರಿಹರಿಸುವವನು ಮಹಾವಿಷ್ಣು ಎಂದು ನಿರ್ಧರಿಸಿ ಅವನಲ್ಲಿ ಶರಣಾಗತನಾಗಲು ಹೇಳಿದರು. ಇಂದ್ರನು ಹಿರಿಯರ ಈ ಮಾತನ್ನು ಕೇಳಿ ತನ್ನ ಪಾಪವಿಮೋಚನೆಗಾಗಿ ಮಾಧವನ ಹತ್ತಿರ ಹೋಗಲು ಹೊರಟನು. ಅವನ ಸಂಗಡ ಮರೀಚಿ ಪುತ್ರರಾದ ಕಶ್ಯಪರೂ, ವಸಿಷ್ಠರೂ ಇದ್ದರು. ಅವರೊಡನೆ ಅವನು ಮೊದಲು ಗಯಾ ಎಂಬ ಪುಣ್ಯಕ್ಷೇತ್ರಕ್ಕೆ ಬಂದನು.

ಈ ಕ್ಷೇತ್ರವು ಕಾಲಂಜರ ದೇಶದ ಉತ್ತರದಲ್ಲಿ ಹಿಮವತ್ ಪರ್ವತದ ದಕ್ಷಿಣದಲ್ಲಿ ಇರುವದು. ಆ ಕ್ಷೇತ್ರದಲ್ಲಿ ಹಿಂದೊಂದು ಸಲ ಗಯನೆಂಬ ಪ್ರಸಿದ್ಧವಾದ ಅರಸನು ಬಹುದಕ್ಷಿಣೆಯುಳ್ಳ ಅಶ್ವಮೇಧ ಯಾಗವನ್ನು ಎಷ್ಟೋ ಸಲ ಮಾಡಿದ್ದನು. ಹಾಗೂ ದುರ್ಜಯನೆಂಬವನು ಬಹಳ ಸಲ ಮನುಷ್ಯ ಮೇಧವನ್ನು ಮಾಡಿದ್ದನು. ಈ ಮನುಷ್ಯಮೇಧವು ಬಹಳ ದೊಡ್ಡ ಯಜ್ಞವೆಂದು ಪ್ರಸಿದ್ಧಿ ಹೊಂದಿತು.

ಪೂಜ್ಯನಾದ ಮಹಾವಿಷ್ಣುವು ಅವ್ಯಕ್ತ ಸ್ವರೂಪನಾಗಿ ನಿಂತು ದುರ್ಜಯನಿಗೆ ದ್ವಾಪರಪಾಲಪದವನ್ನಿತ್ತನು. ಆಗ ಅವನಿಗೆ ಗದಾಧರನೆಂಬ ಹೆಸರು ಬಂದಿತ್ತು. ಅಂದಿನಿಂದ ಆ ಕ್ಷೇತ್ರದಲ್ಲಿ ಜನಿಸಿ ಬ್ರಾಹ್ಮಣರು ಹೆಚ್ಚು ವಿದ್ಯಾವಂತರಾಗಿದ್ದರು. ಕ್ಷೇತ್ರಮಹಾತ್ಮ್ಯದಿಂದ ಬ್ರಹ್ಮನಿಗೆ ಸಮಾನರಾಗುತ್ತಾರೆ ಎಂದು ಪ್ರಸಿದ್ಧಿಯುಂಟಾಯಿತು. ಈ ಕ್ಷೇತ್ರದಲ್ಲಿ ಪಿತೃಗಳ ಸಂತೋಷಪಡಿಸಿದವರು ದೇವರ ಅನುಗ್ರಹದಿಂದ ದೊಡ್ಡ ಯಜ್ಞದ ಫಲವನ್ನು ಹೊಂದುವರು. ಈ ಕ್ಷೇತ್ರದಲ್ಲಿ ಸುರರ್ಷಿಪುತ್ರಿಯಾದ ಮಹಾನದಿಯು ತನ್ನ ನೀರಿನಿಂದ ಸ್ನಾನಪಾನ ಮಾಡಿದವರನ್ನು ಪಾಪರಹಿತರನ್ನಾಗಿ ಮಾಡುವಳು. ಈ ತೆರನಾದ ಪುಣ್ಯಕ್ಷೇತ್ರದಲ್ಲಿ ಇಂದ್ರನು ಆಶ್ರಮವನ್ನು ಕಟ್ಟಿ ಮಹಾವಿಷ್ಣುವಿನ ಆರಾಧನೆ ಮಾಡತೊಡಗಿದನು. ಆರಾಧ್ಯದೇವತೆಯು ಗಧಾದರ ವಿಷ್ಣುವು. ಪ್ರಾತಃಕಾಲ ದಲ್ಲಿ ಸ್ನಾನಮಾಡಿ, ಸ್ತೋತ್ರಮಾಡಿ, ಒಂದು ಸಲ ಮಾತ್ರ ಆಹಾರವನ್ನು ತೆಗೆದುಕೊಳ್ಳುತ್ತ ಭೂಶಯನ ಮಾಡುತ್ತ ಅಯಾಚಿತ ವೃತ್ತಿಯಿಂದ ಘೋರವಾದ ತಪಸ್ಸನ್ನಾಚರಿಸಿದನು.

ಹೀಗೆ ಜಿತೇಂದ್ರಿಯನಾಗಿ ಒಂದು ವರ್ಷದವರೆಗೆ ಕಳೆದನು. ಆಗ ಗದಾಧರನಾದ ವಿಷ್ಣುವು ಪ್ರಸನ್ನನಾದನು ಮತ್ತೂ ಹೀಗೆ ಹೇಳಿದನು - ''ನಾನು ಸಂತುಷ್ಟನಾಗಿದ್ದೇನೆ. ನಿನ್ನ ಪಾಪ ವಿಮೋಚನೆಯಾಗಿದೆ ಹೋಗು. ನಿನ್ನ ರಾಜ್ಯವು ನಿನಗೇ ಬೇಗನೇ ಸಿಗುವದು. ನಿನಗೆ ಶ್ರೇಯಸ್ಸು ಬರುವಂತೆ ನಾನು ಪ್ರಯತ್ನಿಸು ವೆನು.'' ಹೀಗೆ ವಿಷ್ಣುದೇವರಿಂದ ಅನುಗ್ರಹ ಪಡೆದುಕೊಂಡು ಇಂದ್ರನು ನದಿಯಲ್ಲಿಳಿದು ಸ್ನಾನ ಮಾಡಿದನು. ಸ್ನಾನ ಮುಗಿದೊಡನೆಯೇ ಇಂದ್ರನ ಶರೀರದಲ್ಲಿದ್ದ ಪಾಪಗಳು ಮನುಷ್ಯ ರೂಪದಿಂದ ಹೊರಗೆ ನಿಂತವು. ಈ ಭಯಂಕರಾಕಾರವುಳ್ಳ ವ್ಯಕ್ತಿಯನ್ನು ನೋಡಿ ''ನೀನು ಪುಲಿಂದನಾಗು (ಬೇಡನಾಗು)'' ಎಂದು ಇಂದ್ರನು ಅಂದನು.

ಆತನು ಕಾಲಿಂಜರಪರ್ವತದ ಮಧ್ಯದಲ್ಲಿ ಪುಲಿಂದವಂಶದ ಕಾರಣೀಭೂತನಾದನು. ಇತ್ತ ಇಂದ್ರನು ತನ್ನ ಪಾಪಗಳನ್ನು ಕಳೆದುಕೊಂಡು ಸಿದ್ಧ ಯಕ್ಷಾದಿಗಳಿಂದೊಡಗೂಡಿ ತಾಯಿಯಾದ ಅದಿತಿಯ ಆಶ್ರಮಕ್ಕೆ ಹೊರಟನು. ಅಲ್ಲಿ ಅದಿತಿಯನ್ನು ನೋಡಿ ಬಹಳ ನಮ್ರತೆಯಿಂದ ಶಿರಬಾಗಿ ನಮಸ್ಕರಿಸಿ ತನ್ನ ವೃತ್ತಾಂತವನ್ನೆಲ್ಲ ಹೇಳಿದನು. ಆಗ ಅದಿತಿಯೂ ಸಹ ಪ್ರೀತಿಯಿಂದ ಆತನನ್ನು ಕಂಡು ಆಲಿಂಗಿಸಿ ಆಘ್ರಾಣ ಮಾಡಿ ''ನಿನ್ನ ದುಃಖಕ್ಕೆ ಕಾರಣವೇನೆಂದು'' ಕೇಳಿದಳು. ಬಲಿಯಿಂದ ದೇವತೆಗಳಿಗೆ ಉಂಟಾದ ಪರಾಜಯವನ್ನೂ, ತಾವೆಲ್ಲರೂ ಗತಿಯಿಲ್ಲದೇ ಬ್ರಹ್ಮಲೋಕದಲ್ಲಿ ವಾಸಿಸುವದನ್ನು ಇಂದ್ರನು ಹೇಳಿದನು. ಅನಂತರ ಅದಿತಿಯು ಇಂದ್ರನ ದುರವಸ್ಥೆಯನ್ನು ಕೇಳಿ ಕರುಣೆಯಿಂದೊಡಗೂಡಿ ಜಗದ್ವಂದ್ಯನಾದ ಮಹಾವಿಷ್ಣುವಿನಲ್ಲಿ ಶರಣಾಗತಳಾದಳು. ಅನಂತರ ''ಅದಿತಿಯು ಯಾವ ಕಾಲದಲ್ಲಿ ಚರಾಚರ ಪ್ರಪಂಚಕ್ಕೆ ಕಾರಣೀಭೂತನಾದ ವಿಷ್ಣುವಿನನ್ನು ಆರಾಧಿಸಿದಳು?'' ಎಂದು ನಾರದರು ಕೇಳಿದಾಗ ಪುಲಸ್ತ್ಯರು ಹೇಳುತ್ತಾರೆ. ದೇವತೆಗಳಿಗೆಲ್ಲ ಉತ್ಪಾದಕಳಾದ ಅದಿತಿಯು ಇಂದ್ರನ ದುರವಸ್ಥೆಯನ್ನು ನೋಡಿ ಘೃತಾರ್ಚಿ ಎಂಬ ಪರಬ್ರಹ್ಮ ತೇಜಸ್ವಿಗೆ ಆಶ್ರಯನಾದ ಸೂರ್ಯನು ಮಕರ ರಾಶಿಯಲ್ಲಿರುವಾಗ ಶುಕ್ಲಪಕ್ಷದ ಸಪ್ತಮಿ ತಿಥಿಯಲ್ಲಿ ಸೂರ್ಯಮಂಡಲವಾಸಿಯಾದ ನಾರಾಯಣನನ್ನು ಆರಾಧಿಸಿದಳು.

ಅದಿತಿಯು ಆ ವಿಷ್ಣುವನ್ನು ಹೀಗೆ ಸ್ತೋತ್ರ ಮಾಡುತ್ತಾಳೆ, "ಸಂಸಾರ ವೃಕ್ಷಕ್ಕೆ ಕೊಡಲಿಯಂತಿರುವ, ವಿಶ್ವಮೂರ್ತಿಯಾದ ಪರಮಾತ್ಮನೇ, ಎಲ್ಲರಿಗೂ ನೀನೇ ರಕ್ಷಕನಾಗಿರುವಿ. ನನ್ನನ್ನೂ ಕಾಪಾಡು. ಇಂದ್ರಾಂತರ್ಯಾಮಿಯಾದ ನೀನು ಇಂದ್ರನಲ್ಲಿ ವಾಸವಾಗಿದ್ದರೂ ಇಂದ್ರನು ತನ್ನ ರಾಜ್ಯ ಹಾನಿಯನ್ನು ಹೊಂದಿದ್ದಾನೆ. ಇಂದ್ರನು ರಾಜ್ಯಲಾಭವೆಂಬ ಫಲವನ್ನು ಮತ್ತೆ ಹೊಂದಲಿ ಇಂತೆಂದು ನಾನು ನಿನ್ನಲ್ಲಿ ಶರಣಾಗತಳಾಗಿದ್ದೇನೆ." ಹೀಗೆ ಸ್ತೋತ್ರ ಮಾಡಿ ರಕ್ತಚಂದನದಿಂದ ಭಗವಂತನನ್ನು ಪೂಜಿಸಿ ಕಣಗಿಲೆ ಹೂಗಳಿಂದ ಆತನನ್ನು ಆರಾಧಿಸಿ ಧೂಪ ದೀಪ ನೈವೇದ್ಯಗಳನ್ನು ಅರ್ಪಿಸಿ ಸ್ತೋತ್ರ ಮಾಡುತ್ತ ನಿರಾಹಾರಳಾಗಿ ಕುಳಿತಳು.

ಅನಂತರ ಜಗದ್ಭಾಸಕನಾದ ಘೃತಾರ್ಚಿ ಎಂಬ ಹೆಸರಿನ ನಾರಾಯಣನು ಸೂರ್ಯಮಂಡಲದಿಂದ ಹೊರಟು ಬಂದು ಅದಿತಿ ಎದುರಿಗೆ ನಿಂತನು. ಮತ್ತೂ ಹೀಗೆ ಹೇಳಿದನು. "ಎಲೈ ದಕ್ಷ ಕನ್ಯೆಯೇ, ನಿನ್ನ ತಪಸ್ಸಿನಿಂದ ನಾನು ಸಂತುಷ್ಟನಾಗಿದ್ದೇನೆ. ನನ್ನ ಅನುಗ್ರಹದಿಂದ ನೀನು ನಿನಗೆ ಬೇಕಾದ ಮನೋರಥಗಳನ್ನು ಹೊಂದುವಿ. ಎಲೈ ಸುರಮಾತೆಯೇ, ನಿನ್ನ ಉದರದಿಂದ ನಾನು ಜನಿಸಿ ದಾನವರನ್ನೆಲ್ಲ ಧ್ವಂಸಗೊಳಿಸಿ ತ್ರೈಲೋಕ್ಯದ ರಾಜ್ಯವನ್ನು ನಿನ್ನ ಮಕ್ಕಳಿಗೆ ಕೊಡಿಸುತ್ತೇನೆ. ನೀನು ಭಯಪಡಬೇಡ" ಎಂದನು. ಈ ಮಾತನ್ನು ಕೇಳಿ ಅದಿತಿಯು ಭಯದಿಂದ ಕಂಪಿತಳಾದಳು "ಹೇ ಪ್ರಭುವೇ, ಜಗತ್ಕಾರಣನಾದ ನಿನ್ನನ್ನು ನಾನು ಉದರದಲ್ಲಿ ಹೇಗೆ ಧರಿಸಲಿ?" ಎಂದಳು.

"ಯಾವ ನಿನ್ನ ಉದರದಲ್ಲಿ ಸ್ಥಾವರ ಜಂಗಮಾತ್ಮಕ ಸಮಸ್ತ ಜಗತ್ತೂ ಕೂಡ ಸಪ್ತ ಸಮುದ್ರ ಹಾಗೂ ಪರ್ವತದಿಂದ ಕೂಡಿದುದಾಗಿ ಇರುತ್ತದೆಯೋ ಅಂತಹ ನಿನ್ನನ್ನು ಯಾರು ತಾನೇ ಧರಿಸಿಯಾರು? ನಾನು ಬೇಡುವದಿಷ್ಟೇ. ಇಂದ್ರನು ತಾನು ಕಳೆದುಕೊಂಡ ರಾಜ್ಯವನ್ನು ಹೇಗೆ ಪಡೆಯಬಹುದೋ ಅಷ್ಟನ್ನು ಮಾತ್ರ ನನಗೆ ಅನುಗ್ರಹಿಸು." ಆಗ ವಿಷ್ಣುವು ಹೇಳಿದನು, "ಭಾಗ್ಯಶಾಲಿಯಾದ ದೇವಮಾತೆಯೇ, ಸುರಾಸುರರೂ ಸಹ ನನ್ನನ್ನು ಧರಿಸಲಾರರು ಎಂಬ ನಿನ್ನ ಮಾತು ನಿಜ. ನಿನ್ನ ಉದರದಲ್ಲಿ ನಾನು ಜನಿಸಿ ನನ್ನನ್ನೂ ನನ್ನನ್ನಾಶ್ರಯಿಸಿದ ಪ್ರಪಂಚ ಹಾಗೂ ನಿನ್ನನ್ನೂ ಕೂಡ ನಾನೇ ಯೋಗಶಕ್ತಿಯಿಂದ ಧರಿಸುತ್ತೇನೆ. ವ್ಯರ್ಥವಾಗಿ ಈ ವಿಷಯದಲ್ಲಿ ನೀನು ಭಯಪಡಬೇಡ. ನಿನ್ನ ಉದರದಲ್ಲಿ ನಾನು ಉದಯವಾಗುತ್ತಲೇ ದೈತ್ಯರೆಲ್ಲರೂ ನಿಸ್ತೇಜಸ್ಕರಾಗುವರು. ಈ ವಿಷಯದಲ್ಲಿ ಸ್ವಲ್ಪವೂ ಸಂದೇಹವಿಲ್ಲ" ಎಂದು ಹೇಳಿ ವಾಸುದೇವನು ತನ್ನ ಸಂಕಲ್ಪಕ್ಕನುಸರಿಸಿ ಇಂದ್ರನ ಹಿತಕ್ಕಾಗಿ ತನ್ನ ತೇಜಸ್ಸಿನಿಂದ ದಿತಿಯ ಉದರದಲ್ಲಿ ಪ್ರವೇಶಿಸಿದನು.

ವಾಮನ ಮಹಾಪುರಾಣದಲ್ಲಿ ಎಪ್ಪತ್ತಾರನೇಯ ಅಧ್ಯಾಯವು ಮುಗಿದುದು

—o—

**೪೬. ದೇವ ಮಾತುಃ ಸ್ಥಿತೇ ದೇವೇ ಉದರೇ ವಾಮನಾಕೃತೌ**
**ನಿಸ್ತೇಜಸೋ ಸುರಾ ಜಾತಾಃ ಯಥೋಕ್ತಂ ವಿಶ್ವಯೋನಿನಾ॥**

ವಾಮನ ರೂಪವನ್ನು ಹೊಂದಿ ವಿಷ್ಣುವು ಅದಿತಿಯ ಗರ್ಭದಲ್ಲಿ ಪ್ರವೇಶಿಸಿದ ನಂತರ ಅವನ ಅಪ್ಪಣೆಯಂತೆ ದೈತ್ಯರೆಲ್ಲರೂ ತೇಜೋಹೀನರಾದದ್ದನ್ನು ನೋಡಿ ಬಲಿಯು ಪ್ರಹ್ಲಾದನಿಗೆ ಪ್ರಶ್ನೆ ಮಾಡಿದನು. ''ನೀನು ಮುಂದಿನ ಶುಭಾಶುಭಗಳನ್ನು ತಿಳಿಯಲು ಸಮರ್ಥನು. ದೈತ್ಯರು ಏಕೆ ತೇಜೋಹೀನರಾಗಿರುವರು? ಇದಕ್ಕೆ ಕಾರಣವೇನೆಂಬುದನ್ನು ಹೇಳು.'' ಮೊಮ್ಮಗನಾದ ಬಲಿಯ ಮಾತನ್ನು ಕೇಳಿ ಪ್ರಹ್ಲಾದನು ಸ್ವಲ್ಪ ಧ್ಯಾನಮಗ್ನನಾಗಿ ಚಿಂತಿಸಿ ಆಕಸ್ಮಿಕ ತೇಜೋಹಾನಿಗೆ ಕಾರಣವನ್ನು ತಿಳಿಸಿದನು. ವಾಸುದೇವನಿಂದಲೇ ದೈತ್ಯರಿಗೆ ಮಹಾಭಯವು ಸನ್ನಿಹಿತವಾಗಿದೆ ಎಂದು ಧ್ಯಾನ ದೃಷ್ಟಿಯಿಂದ ನೋಡಿ ಮತ್ತೆ ಆಲೋಚನಾಪರನಾದನು. ಆಗ ಆತನು ಮಹಾವಿಷ್ಣುವಿನ ವಿರಾಡ್ ರೂಪವನ್ನು ಚಿಂತಿಸಿದನು. ಆತನ ನಾಭಿಯ ಪ್ರದೇಶಕ್ಕಿಂತ ಕೆಳಗಿರುವ ಏಳುಲೋಕಗಳನ್ನೂ, ನಾಭಿಯ ಮೇಲ್ಭಾಗಕ್ಕಿರುವ ಭೂ, ಭುವ, ಮೊದಲಾದ ಸಪ್ತಲೋಕಗಳನ್ನೂ ಆಲೋಚಿಸಿದನು. ಕಮಲದಂತಿರುವ ಭೂಮಿಯನ್ನೂ, ಅದರ ಮಧ್ಯದಲ್ಲಿ ಸ್ವರ್ಣಮಯವಾದ ಕಮಲದಂತಿರುವ ಮೇರು ಪರ್ವತವನ್ನೂ ಸಾಕ್ಷಾತ್ಕರಿಸಿದನು. ಮೇರು ಪರ್ವತದ ಮೇಲ್ಭಾಗದಲ್ಲಿರುವ ಎಂಟು ಮಹಾನಗರಗಳಲ್ಲಿ ವಾಸಿಸುವ ಲೋಕಪಾಲರನ್ನು ನೋಡಿ ವೈರಾಜವೆಂಬ ಬ್ರಹ್ಮಪುರವನ್ನು ಅಲ್ಲಿ ನೋಡಿದನು.

ಆ ಬ್ರಹ್ಮಪುರದ ಕೆಳಭಾಗಕ್ಕೆ ರಮ್ಯವಾದ ಅದಿತಿಯ ಆಶ್ರಮವಿದ್ದಿತು. ಆಶ್ರಮದಲ್ಲಿ ಬಹಳ ತೇಜಸ್ವಿನಿಯಾದ ದೇವಜನನಿಯಾದ ಅದಿತಿಯನ್ನು ನೋಡಿ ಅಲ್ಲಿಯೇ ಮಧುಸೂದನನು ವಾಸ ಮಾಡುವನೆಂದು ಧ್ಯಾನ ದೃಷ್ಟಿಯಿಂದ ಅಲ್ಲಿ ಪ್ರವೇಶಿಸಿದನು. ಅಲ್ಲಿ ಪ್ರಹ್ಲಾದನು ಜಗನ್ನಾಥನಾದ ಲಕ್ಷ್ಮೀಪತಿಯು ವಾಮನಮೂರ್ತಿಯಾಗಿ ನೆಲಸಿರುವದನ್ನು ಕಂಡನು. ವಾಮನ ರೂಪದಲ್ಲಿರುವ ಈ ಪುಂಡರೀಕಾಕ್ಷನನ್ನು ನೋಡಿ ದೈತ್ಯರ ತೇಜೋವಧೆಗೆ ಇವನೇ ಕಾರಣನಾಗಿರುವನೆಂದು ತಿಳಿದು ಯೋಗಸಮಾಧಿ ಯಿಂದಿಳಿದು ಪೂರ್ವಾವಸ್ಥೆಗೆ ಮುಟ್ಟಿದನು. ಅನಂತರ ಭಕ್ತಿಯಿಂದ ವಿಷ್ಣುವಿಗೆ ನಮಸ್ಕರಿಸಿ ಬಲಿಚಕ್ರವರ್ತಿಯನ್ನು ಕುರಿತು ಮಧುರ ಮಾತಿನಿಂದ ಹೇಳಿದನು. ''ಎಲೈ ದೈತ್ಯರಾಜನೇ, ನಿಮ್ಮೆಲ್ಲರಿಗೂ ತೇಜೋಹೀನತೆಯು ಉಂಟಾಗಿರುವ ಕಾರಣವನ್ನು ಹೇಳುತ್ತೇನೆ ಕೇಳು. ನೀನು ಇಂದ್ರ, ರುದ್ರ ಮೊದಲಾದ ದೇವತೆಗಳನ್ನು ಪರಾಜಯಿಸಿದ ನಂತರ ಅವರೆಲ್ಲರೂ ಮಹಾವಿಷ್ಣುವಿನಲ್ಲಿ ಶರಣಾಗತರಾದರು. ಆಗ ಜಗದ್ಗುರುವಾದ ಹರಿಯು ದೇವತೆಗಳಿಗೆ ಅಭಯಪ್ರದಾನ ಮಾಡಿ ಅದಿತಿಯ ಜಠರದಲ್ಲಿ ಅವತರಿಸಲಿದ್ದಾನೆ. ಆತನ ಅವತಾರ ಮಾತ್ರದಿಂದಲೇ ನಿಮ್ಮವರ ತೇಜಸ್ಸೆಲ್ಲವೂ ಅಪಹರಣವಾಗಿದೆ. ಸೂರ್ಯೋದಯವಾದಾಗ ಕತ್ತಲೆಯು ಉಳಿಯಬಲ್ಲುದೇ?'' ಪ್ರಹ್ಲಾದನ ಮಾತನ್ನು ಕೇಳಿ ಬಲಿಗೆ ಕೋಪ ಬಂದಿತು. ತುಟಿಯನ್ನು ನಡುಗಿಸುತ್ತ ತನ್ನ ಭವಿಷ್ಯಕ್ಕನುಗುಣವಾಗಿ ಕೇಳಿದನು-

''ನಮಗೆ ಇಷ್ಟುಮಟ್ಟಿಗೆ ಭಯವನ್ನು ತಂದುಕೊಟ್ಟ ಆ ಹರಿಯು ಯಾರು? ಅವನಿಗಿಂತ ಎಷ್ಟೋಪಟ್ಟು ಪರಾಕ್ರಮಿಗಳಾದ ರುದ್ರೇಂದ್ರಾದಿಗಳನ್ನು ಎಷ್ಟೋ ಸಲ ನಾನು ಸೋಲಿಸಿದ್ದೇನೆ. ಇಂಥ ನನ್ನ ಮುಂದೆ ಯಾರು ನಿಲ್ಲಬಲ್ಲರು! ನನ್ನೊಡನೆ ಇರುವ ವೀರರೇನೂ ಸಾಮಾನ್ಯರಲ್ಲ. ವಿಪ್ರಚಿತ್ತಿಯು ಸೂರ್ಯನ ರಥದಿಂದ ಚಕ್ರವನ್ನೇ ಕಿತ್ತೆಳೆದವನು. ಇವನು ನಮ್ಮ ಸೇನೆಯ ಅಗ್ರನಾಯಕನು.

ಅಲ್ಲದೇ, ಶುಕ್ಲ, ಶಿಬಿ, ಶಂಕು, ಅಸಿಲೋಮ, ವಿರೂಪಾಕ್ಷ, ತ್ರಿಶಿರ, ಮಕರಾಕ್ಷ, ವೃಷಪರ್ವ ಇವರೇ ಮೊದಲಾದವರು ಅಸ್ತ್ರಗಳನ್ನು ಕೈಯಲ್ಲಿ ಹಿಡಿದುಕೊಂಡು ನಿಂತಾಗ ನಿಮ್ಮ ವಿಷ್ಣುವಿನ ಗಣನೆಯೇನು?'' ವಿಷ್ಣುನಿಂದಾಪರವಾದ ಈ ಮಾತನ್ನು ಕೇಳಿ ಪ್ರಹ್ಲಾದನು ಬಲಿಯನ್ನು ಜರಿದು ಮಾತನಾಡತೊಡಗಿದನು.

''ಛೀ, ಪಾಪೀ, ನಿನ್ನ ಬುದ್ಧಿಗೆ ಧಿಕ್ಕಾರವಿರಲಿ, ಹರಿಯನ್ನು ನಿಂದಿಸುವ ನಿನ್ನ ನಾಲಿಗೆ ಸೀಳಿಹೋಗಲಿ, ದುರ್ಬುದ್ಧಿಯಾದ ನೀನು ತ್ರಿಲೋಕ ಗುರುವಾದ ವಿಷ್ಣುವನ್ನು ನಿಂದಿಸುತ್ತಿರುವಿ. ವಿಷ್ಣುವಿಗೆ ಅವಮಾನ ಮಾಡಿದ ಮೂರ್ಖನಾದ ನೀನು ನಿನ್ನ ತಂದೆಗೂ ಕೂಡ ಅಪಕೀರ್ತಿಯನ್ನೂ, ದುರ್ಗತಿಯನ್ನೂ ತಂದೊಡ್ಡುವಿ. ಆ ಜನಾರ್ದನನು ಎಲ್ಲ ದೇವತೆಗಳಲ್ಲಿಯೂ ಶ್ರೇಷ್ಠನು. ಈ ಮಾತನ್ನು ನೀವು ತಿಳಿದಿರುತ್ತೀರಿ. ಹೀಗೆ ತಿಳಿದರೂ ನಿಂದಿಸುವಿರಾದುದರಿಂದ ನಿಮಗೆ ವಿಪತ್ಕಾಲ ಮೊದಲಾಗಿದೆ.

ನಿನ್ನ ತಂದೆಗೆ ನಾನು ಪೂಜ್ಯನು. ನನಗೂ ಕೂಡ ಅತೀವ ಪೂಜ್ಯನಾದ ಹರಿಯು ನಿನಗೂ ಪೂಜ್ಯನಾಗಲೇಬೇಕು. ಅವನನ್ನು ನಿಂದಿಸಿದ ಮೇಲೆ ನನ್ನನ್ನು ನಿಂದಿಸಿದಂತೆಯೇ. ಹೀಗೆ ಪೂಜ್ಯರನ್ನು ನಿಂದಿಸಿ ಏಕೆ ಅಧಃಪಾತವನ್ನು ಹೊಂದುವಿ? ನೀನು ಮೂರ್ಖನಾಗಿ ದಾನವರಿಗೆಲ್ಲ ಶೋಚನೀಯ ಪರಿಸ್ಥಿತಿಯನ್ನು ತಂದೊದಗಿಸಿರುವಿ. ಎಲ್ಲರಿಗೂ ಆಶ್ರಯಣೀಯನಾದ ಶ್ರೀಹರಿಯನ್ನು ನಿಂದಿಸಿ ನಿಜವಾಗಿಯೂ ನೀನು ರಾಜ್ಯಭ್ರಂಶವನ್ನು ಹೊಂದುವಿ. ಮನೋ, ವಾಕ್, ಕರ್ಮಗಳಿಂದ ಎಲ್ಲರಿಗೂ ಆರಾಧ್ಯನಾಗಿರುವ ವಾಸುದೇವನ ನಿಂದಕನಾದವನು ರಾಜ್ಯಭ್ರಷ್ಟನಾಗುವುದರಲ್ಲಿ ಸ್ವಲ್ಪವೂ ಸಂದೇಹವಿಲ್ಲ.

ಈ ಚತುರ್ದಶ ಲೋಕಗಳಲ್ಲಿ ವಾಸುದೇವನಿಗೆ ಸಮಾನನಾದವನು ಇನ್ನಾರೂ ಇಲ್ಲವೆಂದು ನೀನು ತಿಳಿ. ಎಲ್ಲರೂ ಆತನನ್ನು ಹೊಂದುವದರ ಸಲುವಾಗಿಯೇ ಪ್ರಯತ್ನ ಮಾಡುತ್ತಾರೆ.'' ಕುಪಿತನಾದ ಪ್ರಹ್ಲಾದನು ಹೀಗೆ ಹೇಳುತ್ತಿರುವ ಮಾತನ್ನು ಕೇಳಿ ಬಲಿಯು ತ್ವರೆಯಿಂದೆದ್ದು ಸಿಂಹಾಸನದಿಂದ ಕೆಳಕ್ಕಿಳಿದು ಸಾಷ್ಟಾಂಗವಾಗಿ ನಮಸ್ಕರಿಸಿ ಪ್ರಹ್ಲಾದನಿಗೆ ''ಗುರುವೆ, ನನ್ನ ವಿಷಯದಲ್ಲಿ ಪ್ರಸನ್ನನಾಗು, ಶಿಶುಗಳು ಅಪರಾಧ ಮಾಡಿದರೂ ಹಿರಿಯರು ಕ್ಷಮಿಸುವದು ಸ್ವಾಭಾವಿಕವಲ್ಲವೇ? ಅಪರಾಧಿಯಾದ ನನಗೆ ರಾಜ್ಯದಿಂದ ಭ್ರಷ್ಟನಾಗುವಿ ಎಂದು ನೀನು ಶಾಪ ಕೊಟ್ಟುದು ಸರಿಯಾದ ಮಾತಾಗಿದೆ. ನಿನ್ನ ವಿಷಯ ದಲ್ಲಿ ಅಪರಾಧ ಮಾಡಿ ನಾನು ನೀಚನಾಗಿರುವೆನು. ನನ್ನ ಅಪರಾಧವನ್ನು ಕ್ಷಮಿಸು.'' ಹೀಗೆ ಬಲಿಯು ಪ್ರಾರ್ಥಿಸಿದ ನಂತರ ಮಹಾತ್ಮನಾದ ಪ್ರಹ್ಲಾದನು ಹರಿಪಾದ ಪದ್ಮಗಳಲ್ಲಿ ಭಕ್ತಿಯಿಂದ ನಮಸ್ಕರಿಸಿ ಕೋಪಾಶಾಂತಿಯನ್ನು ಹೊಂದಿ ಬಲಿಯನ್ನು ಕುರಿತು ಮಾತನಾಡತೊಡಗಿದನು-

"ಪುತ್ರನೇ, ನಾನು ಕೋಪಕ್ಕೆ ಒಳಗಾಗಿ ತಿಳಿಗೇಡಿತನವನ್ನು ಮಾಡಿದೆನು. ವಿಷ್ಣುವು ವ್ಯಾಪಕನೆಂದು ತಿಳಿದಿದ್ದರೂ ಆ ವಿಷ್ಣುವಿನ ದೇಹದಲ್ಲಿ ಸೇರಿರುವ ನಿನ್ನನ್ನು ಅವಿವೇಕದಿಂದ ಶಪಿಸಿದೆನು. ನಿನಗೆ ಅವಿವೇಕವುಂಟಾದಂತೆ ನನಗೂ ವಿವೇಕವೂ ನಾಶವಾಗಿದೆ. ಆದುದರಿಂದ ನಾನು ನಿನ್ನ ರಾಜ್ಯ ಭ್ರಂಶದ ಶಾಪವನ್ನು ಕೊಟ್ಟೆನು ಆ ವಿಷಯದಲ್ಲಿ ನೀನು ಪರಿತಪಿಸಬೇಡ.

ನಮಗೆ ನಿಯತವಾದ ಸುಖ ದುಃಖಾದಿಗಳು ಎಂದೂ ತಪ್ಪಲಾರವು. ರಾಜ್ಯ ಪುತ್ರ, ಮಿತ್ರ, ಕಲತ್ರಾದಿಗಳು ದೈವವಶಾದ್ ಬಂದಾಗ ತಿಳಿದವನು ಸುಖಪಡುವದೂ ಇಲ್ಲ. ಬಿಟ್ಟು ಹೋದಾಗ ದುಃಖಪಡುವದೂ ಇಲ್ಲ. ಪೂರ್ವ ಕರ್ಮಗಳ ಪರಿಪಾಕಕ್ಕನುಸರಿಸಿ ಸುಖದುಃಖಗಳು ಬರುವದು ಹೋಗುವದು ನಡೆದಿರುವದು. ಜಿತೇಂದ್ರಿಯನಾದವನು ವಿಪತ್ತುಗಳು ಬಂದಾಗ ವಿಷಾದಪಡಬಾರದು. ಸಂಪತ್ತುಗಳು ಬಂದಾಗ ಉಬ್ಬಿ ಕೊಬ್ಬಿದವನಾಗಬಾರದು. ತಾವು ಮಾಡತಕ್ಕ ಕಾರ್ಯಗಳಲ್ಲಿ ನಿರತರಾಗಬೇಕು. ಅವರೇ ಪುರುಷೋತ್ತಮರೆನ್ನಿಸಿಕೊಳ್ಳುವರು. ಹೀಗೆ ಸುಖದುಃಖಗಳ ಸ್ವಭಾವವನ್ನು ತಿಳಿದು ಜ್ಞಾನಿಯಾದ ನೀನು ವಿಷಾದಪಡಬಾರದು.

ಮತ್ತೊಂದು ವಿಷಯವನ್ನು ನಾನು ಹೇಳುತ್ತೇನೆ ಕೇಳು. ನಿನ್ನ ಸ್ವಂತ ವಿಚಾರದಿಂದಾಗಲೀ, ಮತ್ತೊಬ್ಬರಿಂದ ಕೇಳಿಯಾಗಲೀ, ಶರಣಾಗತ ರಕ್ಷಕನಾದ ಪುರುಷೋತ್ತಮನಲ್ಲಿ ಅನನ್ಯ ಭಾವದಿಂದ ಶರಣುಹೋದರೆ ಅವನೇ ನಿನ್ನ ರಕ್ಷಕನಾಗುವನು. ಸಕಲೈಶ್ವರ್ಯ ಸಮೇತನಾದ ವಿಷ್ಣುವನ್ನು ಆಶ್ರಯಿಸಿದವನಿಗೆ ಈ ಭೂಮಿಯಲ್ಲಿ ಯಾವ ಸಂತಾಪವೂ ಉಂಟಾಗುವದಿಲ್ಲ. ನೀನು ಯಾವಾಗಲೂ ವಿಷ್ಣುವಿನಲ್ಲಿ ಮನಸ್ಸನ್ನಿಟ್ಟು ಧ್ಯಾನ ಮಾಡು. ಅವನೇ ಎಲ್ಲ ವಿಧವಾದ ಶ್ರೇಯಸ್ಸನ್ನು ನಿನಗೆ ಉಂಟು ಮಾಡುತ್ತಾನೆ. ನಾನೂ ನನ್ನ ಅವಿವೇಕಕ್ಕಾಗಿ ಪಶ್ಚಾತ್ತಾಪಪಟ್ಟು ಭಗವಂತನ ಅನುಗ್ರಹ ಸಂಪಾದಿಸುವದಕ್ಕೋಸ್ಕರ ತೀರ್ಥಯಾತ್ರೆಗೆ ಹೊರಡುವೆನು.

ಹೀಗೆ ಆತನನ್ನು ಆರಾಧಿಸುವದರಿಂದ ಪಾಪ ವಿಮೋಚನೆಯನ್ನು ಹೊದುವೆನು. ನೀನೂ ಕೂಡ ಲೋಕಪತಿಯಾದ ನೃಸಿಂಹನನ್ನೇ ಯಾವಾಗಲೂ ಸ್ಮರಿಸುತ್ತಿರು." ಹೀಗೆ ಬಲಿಗೆ ಸಮಾಧಾನ ಹೇಳಿ ಯೋಗೀಶ್ವರನಾದ ವಿಷ್ಣುವನ್ನು ಸ್ಮರಿಸಿ ಪ್ರಹ್ಲಾದನು ಶುಭವಾದ ತೀರ್ಥವನ್ನು ಸೇವಿಸಲು ಯಾತ್ರೆಗೆ ಹೊರಟನು.

ವಾಮನ ಮಹಾಪುರಾಣದಲ್ಲಿ ಬಲಿಯಲ್ಲಿ ಕಲಿ ಎಂಬ ಎಪ್ಪತ್ತೇಳನೇಯ ಅಧ್ಯಾಯವು ಮುಗಿದುದು

—○—

೪೭. ಕಾನಿ ತೀರ್ಥಾಣಿ ವಿಪ್ರೇಂದ್ರ ಪ್ರಹ್ಲಾದೋऽನುಜಗಾಮ ಹ ।
ಪ್ರಹ್ಲಾದ ತೀರ್ಥಯಾತ್ರಾಂ ಮೇ ಸಮ್ಯಗಾಖ್ಯಾತುಮರ್ಹಸಿ

''ಪ್ರಹ್ಲಾದನು ಯಾವ ತೀರ್ಥದಲ್ಲಿ ಯಾತ್ರೆಗೈದನು?'' ಎಂಬ ನಾರದರ ಪ್ರಶ್ನೆಗೆ ಪುಲಸ್ತ್ಯರು ಉತ್ತರ ಹೇಳುತ್ತಾರೆ, ''ಪ್ರಹ್ಲಾದನು ಭೂಮಂಡಲಕ್ಕೆಲ್ಲ ಪ್ರಸಿದ್ಧವಾದ ಕನಕಾಚಲೇಂದ್ರ ತೀರ್ಥಕ್ಕೆ ಆತನು ಹೋದನು. ಅದಕ್ಕೆ ಮಾನಸ ತೀರ್ಥವೆಂಬ ಹೆಸರು ಉಂಟು. ಆ ತೀರ್ಥವನ್ನು ದೇವತೆಗಳು ಕೂಡ ಸೇವಿಸುತ್ತಾರೆ. ಮತ್ಸ್ಯಾವತಾರಿಯಾದ ಈಶ್ವರನು ಅಲ್ಲಿ ನೆಲೆಸಿರುವನು.

೪೮. ಸಂತ್ಯಜ್ಯ ಮೇರುಂ ಕನಕಾಚಲೇಂದ್ರತೀರ್ಥಂ
ಜಗಾಮಾಮರ ಸಂಘಜುಷ್ಟಂ ॥
ಖ್ಯಾತಂ ಪೃಥಿವ್ಯಾಂ ಶುಭದಂ ಹಿ ಮಾನಸಂ
ಯತ್ರ ಸ್ಥಿತೋ ಮತ್ಸ್ಯವಪುಃಪರೇಶಃ ॥

೪೯. ತಸ್ಮಿಂಸ್ತೀರ್ಥವರೇ ಸ್ನಾತ್ವಾ ಸಂತರ್ಪ್ಯ ಪಿತೃದೇವತಾಃ ।
ಸಂಪೂಜ್ಯ ಚ ಜಗನ್ನಾಥಂ ಅಚ್ಯುತಂ ಶ್ರುತಿಭಿರ್ಯುತಮ್ ॥

೫೦. ಉಪೋಷ್ಯ ಭೂಯಃ ಸಂಪೂಜ್ಯ ದೇವರ್ಷಿಪಿತೃಮಾನವಾನ್ ।
ಜಗಾಮ ಕಚ್ಛಪಂ ದ್ರಷ್ಟುಂ ಕೌಶಿಕ್ಯಾಂ ಪಾಪನಾಶನಮ್ ॥

೫೧. ಸಾಂಪ್ರತಂ ಭಗವಾನ್ವಿಷ್ಣುಃ ತ್ರೈಲೋಕ್ಯಾ ಕ್ರಮಣಂ ವಪುಃ ।
ಕರಿಷ್ಯತಿ ಜಗತ್ಸ್ವಾಮೀ ಬಲೇರ್ಬಂಧನಮೀಶ್ವರಃ ॥

೫೨. ತತ್ಕಥಂ ಪೂರ್ವಕಾಲೇಪಿ ವಿಭುರಾಸೀತ್ ತ್ರಿವಿಕ್ರಮಃ ।
ಕಸ್ಯ ವಾ ಬಂಧನಂ ವಿಷ್ಣುಃಕೃತವಾನ್ ತಚ್ಚ ಮೇ ವದ ॥

೫೩. ಶ್ರೂಯತಾಂ ಕಥಯಿಷ್ಯಾಮಿ ಯೋಽಯಂ ಪ್ರೋಕ್ತ ಸ್ತ್ರಿವಿಕ್ರಮಃ।
ಯಸ್ಮಿನ್ ಕಾಲೇ ಬಭೂವಾಥ ಯಂ ಚ ವಂಚಿತವಾನಸೌ ॥

ಈ ತೀರ್ಥದಲ್ಲಿ ಸ್ನಾನಮಾಡಿ ಪಿತೃದೇವತೆಗಳಿಗೆ ತರ್ಪಣ ಕೊಟ್ಟು ವೇದದಿಂದ ಒಡಗೂಡಿದ ಮತ್ಸ್ಯರೂಪಿಯಾದ ಪರಮಾತ್ಮನನ್ನು ಪ್ರಹ್ಲಾದನು ಪೂಜಿಸಿದನು. ಅನಂತರ ಕೌಶಿಕಿಯಲ್ಲಿ ನೆಲೆಸಿರುವ ಕೂರ್ಮಾವತಾರ ರೂಪವನ್ನು ಪೂಜಿಸಿ ಉಪವಾಸದಿಂದ ಶುದ್ಧನಾಗಿ ಬ್ರಾಹ್ಮಣರಿಗೆ ದಕ್ಷಿಣಾದಿಗಳನ್ನು ಸಮರ್ಪಿಸಿ ತನ್ನನ್ನು ಪುನೀತನನ್ನಾಗಿ ಮಾಡಿಕೊಂಡನು. ಅನಂತರ ಆತನು ಕೃಷ್ಣಾ ನದಿಯಲ್ಲಿ ಹಯಗ್ರೀವ ದೇವರನ್ನು ಸೇವಿಸಿದನು. ಅಲ್ಲಿ ದೇವಹ್ರದವೆಂಬ ತೀರ್ಥದಲ್ಲಿ ಸ್ನಾನಮಾಡಿ ಪಿತೃದೇವತೆಗಳಿಗೆ ತೃಪ್ತಿಪಡಿಸಿ ಗಜ ತೀರ್ಥ ಎಂಬ ಕ್ಷೇತ್ರಕ್ಕೆ ಹೊರಟನು. ಅಲ್ಲಿ ಸ್ನಾನ ಮಾಡಿ ಚಕ್ರಪಾಣಿಯಾದ ಗೋವಿಂದನನ್ನು ಪೂಜಿಸಿ ಯಮುನಾ ನದಿಗೆ ಹೊರಟನು. ಅಲ್ಲಿ ಲೋಕನಾಥನಾದ ತ್ರಿವಿಕ್ರಮನನ್ನು ನಮಸ್ಕರಿಸಿ ಪಿತೃಗಳಿಗೆ ತರ್ಪಣಕೊಟ್ಟನು. ಮಧ್ಯದಲ್ಲಿ

ಪ್ರಾಸಂಗಿಕವಾಗಿ ನಾರದರು ಪ್ರಶ್ನೆ ಮಾಡಿದರು – ಇನ್ನು ಮುಂದೆ ತಾನೇ ತ್ರಿವಿಕ್ರಮಾವತಾರವಾಗುವದು? ಪೂರ್ವದಲ್ಲಿ ತ್ರಿವಿಕ್ರಮನು ಹೇಗೆ ಬಂದ! ಎಂದು ಪ್ರಶ್ನಿಸಲು ಪುಲಸ್ತ್ಯರು ಹೇಳುತ್ತಾರೆ. ಎಲೈ ನಾರದ, ಕೇಳೂವಂಥವನಾಗು. ''ಕಶ್ಯಪನಿಗೆ ದನುವಿನ ಗರ್ಭದಲ್ಲಿ ಹುಟ್ಟಿದ ಔರಸ ಪುತ್ರನೊಬ್ಬನಿದ್ದನು. ಅವನು ಧುಂಧು ಎಂಬ ಹೆಸರಿನಿಂದ ಪ್ರಸಿದ್ಧನಿದ್ದನು. ಮಹಾಬಲಿಷ್ಠನಾದ ಆತನು ತನ್ನ ಉಗ್ರವಾದ ತಪಸ್ಸಿನಿಂದ ಬ್ರಹ್ಮದೇವನನ್ನು ಒಲಿಸಿಕೊಂಡು ಇಂದ್ರಾದಿ ದೇವತೆಗಳಿಂದ ತನಗೆ ಸಾವು ಬರಬಾರದೆಂದು ವರಬೇಡಿಕೊಂಡನು. ತಪಸ್ಸಿನಿಂದ ಸಂತುಷ್ಟನಾದ ಬ್ರಹ್ಮದೇವನು ಅವನಿಗೆ ವರವನ್ನೂ ಕೊಟ್ಟನು. ಅತಿ ಗರ್ವಿತನಾದ ಧುಂಧುವು ಸ್ವರ್ಗದ ಮೇಲೆ ಧಾಳಿಯಿಕ್ಕಿದನು.

೫೪. ಚತುರ್ಥಸ್ಯ ಕಲೇರಾದೌ ಜಿತ್ವಾ ದೇವಾನ್ ಸವಾಸವಾನ್ ।
ಧುಂದುಃ ಶಕ್ರತ್ವಮಕರೋದ್ಧಿರಣ್ಯ ಕಶಿಪೌ ಸತಿ ॥

೫೫. ತತೋಽಸುರಾ ಯಥಾ ಕಾಮಂ ವಿಚರಂತಿ ತ್ರಿವಿಷ್ಟಪೇ ।
ತ್ರಿದಶಾ ಬ್ರಹ್ಮಲೋಕೇ ಚ ಸಂಸ್ಥಿತಾ ದುಃಖ ಸಂಯುತಾಃ ॥

೫೬. ಇತಃ ಸಹಸ್ರೈರ್ಬಹು ಯೋಜನಾಖ್ಯೈರ್ಲೋಕೋ ಮಹರ್ನಾಮ ಮಹರ್ಷಿಜುಷ್ಟಃ।
ಯೇಷಾಂಹಿದೃಷ್ಟ್ಯರ್ಪಣಚೋದಿತೇನದಹ್ಯಂತಿದೈತ್ಯಾಃಸಹಸೇಕ್ಷಣೇನ॥

೫೭. ತತೋಪರೋ ಯೋಜನಕೋಟಿಭಿಸ್ತು ತ್ರಿಂಶದ್ಭಿರಾದಿತ್ಯ ಸಹಸ್ರ ದೀಪ್ತಃ ।
ಸತ್ಯಾಭಿಧಾನೋ ಜಗವನ್ನಿವಾಸಃ ವರಪ್ರದೋಽಭೂದ್ ಭವತೋಹಿ ಯೌಽಸೌ ॥

೫೮. ಯಸ್ಯ ವೇದ ಧ್ವನಿಂ ಶ್ರುತ್ವಾ ವಿಕಸಂತಿ ಸುರಾದಯಃ ।
ಸಂಕೋಚ ಮಸುರಾ ಯಾಂತಿ ಯೇ ಚ ತೇಷಾಂ ಸಧರ್ಮಿಣಃ

೫೯. ತಸ್ಮಾನ್ನಾತ್ವಂ ಮಹಾಬಾಹೋ ಮತಿಮೇತಾಂ ಸಮಾದಧಃ ।
ವೈರಾಜ್ಯಂ ಭುವನಂ ಧುಂಧೋ ದುರಾಹೋಽಹಂ ಸದಾ ನೃಭಿಃ ॥

ನಾಲ್ಕನೇ ಕಲಿಯುಗದ ಆದಿಭಾಗದಲ್ಲಿ ಹಿರಣ್ಯಕಶ್ಯಪು ಇರುವಾಗಲೇ ಇಂದ್ರಾದಿಗಳನ್ನೆಲ್ಲ ಗೆದ್ದು ತಾನೇ ಇಂದ್ರ ಪದವಿಯನ್ನು ಹೊಂದಿದನು. ಆ ಸಮಯದಲ್ಲಿ ಬಲಿಷ್ಠನಾದ ಹಿರಣ್ಯಕಶ್ಯಪುವು ಧುಂಧುವಿನೊಡನೆ ಸೇರಿಕೊಂಡು ದೇವತೆಗಳನ್ನೆಲ್ಲ ಹೆದರಿಸಿದನು. ಈಗ ಸ್ವರ್ಗದಲ್ಲಿ ಅಸುರರ ಯಥೇಷ್ಟವಾದ ಸಂಚಾರವಾಯಿತು. ದೇವತೆಗಳೆಲ್ಲರೂ ಹೆದರಿ ಬ್ರಹ್ಮಲೋಕಕ್ಕೆ ಓಡಿಹೋದರು. ಹೀಗೆ ಓಡಿ ಹೋದ ಸುದ್ದಿಯನ್ನು ಕೇಳಿ ಧುಂಧುವು ತನ್ನ ದೈತ್ಯಸೈನ್ಯದೊಂದಿಗೆ ಬ್ರಹ್ಮನ ಸಭೆಗೆ ಧಾವಿಸಿ ಬಂದನು. ಬರುವಾಗ ದೈತ್ಯರು ಧುಂಧುವಿಗೆ ಹೇಳಿದರು - ''ಬ್ರಹ್ಮನ ಸ್ಥಾನಕ್ಕೆ ಹೋಗಲು ನಮಗೆ ದಾರಿಯೇ ಇಲ್ಲ. ಅದು ವಿಲಕ್ಷಣವಾದ ಮಾರ್ಗವಿರುವದು. ಇಲ್ಲಿಂದ ಸಾವಿರಾರು ಯೋಜನಗಳ ದೂರದಲ್ಲಿ ಮಹರ್ಷಿಗಳಿಗೆ ಆಶ್ರಯವಾದ ಮಹಾಲೋಕವಿರುವದು ಅಲ್ಲಿರುವ ಮಹರ್ಷಿಗಳು ಸಿಟ್ಟಿನಿಂದ ನೋಡಿದರೆ ದೈತ್ಯರು ಸುಟ್ಟು ಬೂದಿಯಾಗುತ್ತಾರೆ. ಅದಕ್ಕಿಂತ ಮೇಲೆ ಕೋಟ್ಯಾಂತರ ಯೋಜನ ದೂರದಲ್ಲಿ ಜನೋ ಲೋಕವೆಂಬ ಲೋಕವಿದೆ. ಅಲ್ಲಿ ಗೋಮಾತೆಗಳಿರುವರು. ಅವರು ಅತಿಶಯ

ಶೂರರು. ಅವರಲ್ಲಿಯ ಒಬ್ಬಳನ್ನು ಎದುರಿಸುವ ಶಕ್ತಿಯೂ ನಮ್ಮ ಅಸುರರಲ್ಲಿ ಯಾರಿಗೂ ಇಲ್ಲ. ಅದಕ್ಕಿಂತ ಮೇಲೆ ಮೂವತ್ತು ಕೋಟಿ ಯೋಜನ ದೂರದಲ್ಲಿ ಸೂರ್ಯನಂತೆ ದೇದೀಪ್ಯಮಾನವಾದ ಸತ್ಯಲೋಕವೆಂಬ ಲೋಕವಿದೆ. ಅದುವೇ ಬ್ರಹ್ಮನ ಸ್ಥಾನವಾಗಿದೆ. ಆ ಲೋಕದ ವೇದಧ್ವನಿಯನ್ನು ಕೇಳಿ ದೇವತೆಗಳೆಲ್ಲರೂ ಸಂತುಷ್ಟರಾಗುತ್ತಾರೆ. ಅಸುರರೆಲ್ಲರೂ ಸಂಕೋಚ ಹೊಂದುತ್ತಾರೆ.

೬೦. ಕಥಂತು ಕರ್ಮಣಾ ಕೇನ ಗಮ್ಯತೇ ದಾನವರ್ಷಭಾಃ ।
ಕಥಂ ತತ್ರ ಸಹಸ್ರಾಕ್ಷಃ ಸಂಪ್ರಾಪ್ತಃ ಸಹದಾನವೈಃ ॥

೬೧. ನ ವಯಂ ವಿದ್ಮ ತತ್ಕರ್ಮ ಶುಕ್ರಸ್ತದ್ವೇತ್ಯಸಂಶಯಂ ।
ಪಪ್ರಚ್ಛ ಶುಕ್ರ ಕಿಂ ಕರ್ಮ ಕೃತ್ವಾ ಬ್ರಹ್ಮಸದೇಗತಿಃ ॥

೬೨. ಸಹಸ್ರಾಕ್ಷಃ ಶತಂ ಚೈಕಂ ಯಜ್ಞಾನಾಮಯಜತ್‌ಪುರಾ ।
ದೈತೇಂದ್ರ ವಾಜಿಮೇಧಾನಾಂ ತೇನ ಬ್ರಹ್ಮಸದೋಗತಿಃ ।

೬೩. ತದ್ವಾಕ್ಯಂ ದಾನವಪತಿಃ ಶ್ರುತ್ವಾ ಶುಕ್ರಸ್ಯ ವೀರ್ಯವಾನ್ ।
ಯಷ್ಟುಂ ಗೋಮೇಧಯಜ್ಞಾನಾಂ ಚಕಾರ ಮತಿಮುತ್ತಮಾಮ್ ॥

೬೪. ಅಥಾಮಂತ್ರ್ಯಾಸುರಗುರುಂ ದಾನವಾಂಶ್ಚಾಪ್ಯನುತ್ತಮಾನ್ ।
ಪ್ರೋವಾಚ ಯಕ್ಷ್ಯೇऽಹಂ ಯಜ್ಞೈಃ ಅಶ್ವಮೇಧೈಃ ಸುದಕ್ಷಿಣೈಃ ॥

೬೫. ಆಮಂತ್ರ್ಯಂತಾಂ ದ್ವಿಜಶ್ರೇಷ್ಠಾಃ ಪ್ರಯಾಮೋ ದೇವಿಕಾತಟಂ
ಸಾ ಹಿ ಪುಣ್ಯಾ ಸಚ್ಛ್ರೇಷ್ಠಾ ಸರ್ವಸಿದ್ಧಿ ಕರೀ ಸ್ಮೃತಾ ॥

ಆದುದರಿಂದ ಶೂರನಾದ ನೀನು ಅಲ್ಲಿಗೆ ಹೋಗುವ ವಿಚಾರವನ್ನೇ ಮಾಡ ಕೂಡದು.'' ಹೀಗೆ ದೈತ್ಯರ ಮಾತುಗಳನ್ನು ಕೇಳಿ ಧುಂಧುವು ಹೇಗಾದರೂ ಮಾಡಿ ಬ್ರಹ್ಮಲೋಕಕ್ಕೆ ಹೋಗಬೇಕೆಂದು ಮತ್ತೆ ವಿಚಾರದಲ್ಲಿ ತೊಡಗಿದನು. ''ಇಂದ್ರನು ಹೇಗೆ ಅಲ್ಲಿಗೆ ಹೋದನು?'' ಎಂದು ಧುಂಧುವು ಕೇಳಿದಾಗ ದಾನವರು ಹೇಳಿದರು, ''ಶುಕ್ರಾಚಾರ್ಯನು ಮಾತ್ರ ಅಲ್ಲಿಗೆ ಹೋಗುವ ಯುಕ್ತಿಯನ್ನು ತಿಳಿಯಬಲ್ಲ.'' ಈ ಮಾತನ್ನು ಕೇಳಿದೊಡನೆಯೇ ಧುಂಧುವು ಶುಕ್ರಾಚಾರ್ಯರನ್ನು ತನ್ನೆಡೆಗೆ ಕರೆಯಿಸಿದ ಹಾಗೂ ಈ ರೀತಿ ಪ್ರಶ್ನೆ ಮಾಡಿದ. ಆಗ ದೈತ್ಯಾಚಾರ್ಯ ಶುಕ್ರನು ಹೇಳಿದನು, ''ಇಂದ್ರನು ಸಾಮಾನ್ಯನಲ್ಲ. ಅವನು ಅಶ್ವಮೇಧ ಯಾಗವನ್ನು ಮಾಡಿದುದರಿಂದ ಬ್ರಹ್ಮಲೋಕ ಗಮನವು ಆತನಿಗೆ ಸಿದ್ಧಿಸಿದೆ.'' ಶುಕ್ರನ ಈ ಮಾತನ್ನು ಕೇಳಿ ಧುಂಧುವು ಗೋಮೇಧ ಯಾಗವನ್ನು ಮಾಡಲು ನಿಶ್ಚಯಿಸಿದನು. ಶುಕ್ರಾಚಾರ್ಯರೇ ಪ್ರಮುಖರಾದ ಎಲ್ಲ ದಾನವರು ಆಹ್ವಾನಿತರಾದರು. ಅವರೆಲ್ಲರಿಗೆ ಧುಂಧುವು ಅಂದನು. ''ನೀವು ಭೂಲೋಕಕ್ಕೆ ಹೋಗಿ ಅಲ್ಲಿನ ರಾಜರನ್ನೆಲ್ಲ ಜಯಿಸಿ ನಿಧಿ ಸಂಗ್ರಹದ ಕಾರ್ಯವನ್ನು ಮಾಡಿರಿ. ಗುಹ್ಯಕ ಹಾಗೂ ಬ್ರಾಹ್ಮಣೋತ್ತಮರೆಲ್ಲರನ್ನೂ ಆಹ್ವಾನಿಸಿರಿ. ಅನಂತರ ನಾವು ದೇವಿಕಾನದಿಯ ದಡಕ್ಕೆ ಹೋಗೋಣ. ಅಲ್ಲಿ ಅಶ್ವಮೇಧವನ್ನು ಮಾಡೋಣ''

ಎಂದನು. ಧುಂಧುವಿನ ಈ ಮಾತನ್ನು ಕೇಳಿ ಅಸುರಯಾಜಕರೆಲ್ಲರೂ ಒಪ್ಪಿಗೆಯನ್ನಿತ್ತರು. ಅನಂತರ ಸಂತುಷ್ಟನಾದ ಧುಂಧುವು ದೇವಿಕಾ ನದಿಯ ಪೂರ್ವ ದಡದಲ್ಲಿ ಶುಕ್ರಾಚಾರ್ಯರ ಆಚಾರ್ಯತ್ವದಲ್ಲಿ ಅಶ್ವಮೇಧದ ದೀಕ್ಷೆ ಪಡೆದನು.

೬೬. ತತೋ ಧುಂದುರ್ದೇವಿಕಾಯಾಂ ಪ್ರಾಚೀನೇ ಪಾಪನಾಶನೇ ।
ಭಾರ್ಗವೇಂದ್ರೇಣ ಶುಕ್ರೇಣ ವಾಜಿಮೇಧಾಯ ದೀಕ್ಷಿತಃ ॥

೬೭. ಯಜ್ಞಭಾಗ ಭುಜಸ್ತತ್ರ ಸ್ವರ್ಭಾನು ಪ್ರಮುಖಾ ಮುನೇ ।
ಕೃತಾಶ್ಚಾಸುರನಾಥೇನ ಶುಕ್ರಸ್ಯಾನುಮತೇಽ ಸುರಾಃ ॥

೬೮. ತತಃ ಪ್ರವೃತ್ತೋ ಯಜ್ಞಸ್ತು ಸಮುಚ್ಛ್ರಪ್ಪಸ್ತಥಾಹಯಃ ।
ಹಯಸ್ಯಾನು ಯಯೌ ಶ್ರೀಮಾನಸಿ ಲೋಮಾ ಮಹಾಸುರಃ ॥

೬೯. ತತೋಽಗ್ನಿ ಧೂಮೇನ ಮಹೀಸಶೈಲಾ ವ್ಯಾಪ್ತಾದಿಶೋ ವೈ ವಿದಿಶಶ್ಚ ಪೂರ್ಣಾಃ ।
ತೇನೋಗ್ರಗಂಧೇನ ದಿವಸ್ಪೃಶೇನ ಮರುದ್ವವೌ ಬ್ರಹ್ಮಲೋಕೇ ಮಹರ್ಷೇ ॥

೭೦. ತಂಗಂಧಂ ಮಾಘ್ರಾಯಸುರಾ ವಿಷಣ್ಣಾ ಜಾನಂತಿ ।
ಧುಂಧುಂ ಹಯಮೇಧ ದೀಕ್ಷಿತಂ ॥

೭೧. ತತಃ ಶರಣ್ಯಂ ಶರಣಂ ಜನಾರ್ದನಂ ।
ಜಗ್ಮುಃ ಸಶಕ್ರಾಃ ಜಗತಃ ಪರಾಯಣಮ್ ॥

೭೨. ಪ್ರಣಮ್ಯ ವರದಂ ದೇವಂ ಪದ್ಮನಾಭಂ ಜನಾರ್ದನಂ ।
ಪ್ರೋಚುಃ ಸರ್ವೇ ಸುರಗಣಾಃ ಭಯಗದ್ಗದಯಾ ಗಿರಾ ॥

೭೩. ಧುಂಧುರ್ನಾಮಾಸುರ ಪತಿಃ ಬಲವಾನ್ ಬಲಸಂವೃತಃ ।
ಸರ್ವಾನ್ ಸುರಾನ್ ವಿನಿರ್ಜಿತ್ಯ ತ್ರೈಲೋಕ್ಯಮಹರದ್ ಬಲೀ

೭೪. ಶತಂ ಕ್ರತೂನಾಮಿಷ್ಟ್ವಾಸೌ ಬ್ರಹ್ಮಲೋಕಂ ಮಹಾಸುರಃ
ಆರೋಢುಮಿಚ್ಛತಿ ವಶೀ ವಿಜೇತುಂ ತ್ರಿದಶಾನಪಿ ॥

ಶುಕ್ರನ ಅನುಮತಿಯಂತೆ ಸದಸ್ಯರೂ, ಋತ್ವಿಕ್ಕುಗಳೂ ಯಜ್ಞ ಮಾಡಲು ಸಿದ್ಧರಾದರು. ಯಜ್ಞಭಾಗವನ್ನು ಸ್ವೀಕರಿಸಲು ಸ್ವರ್ಭಾನುವೇ ಮೊದಲಾದ ಅಸುರರು ಸಿದ್ಧರಾದರು. ಅಶ್ವಮೇಧದ ಕುದುರೆಯು ಹೊರಬಿದ್ದಿತು. ಅಸಿಲೋಮನೆಂಬ ಮಹಾಸುರನು ಕುದುರೆಯ ಸಂರಕ್ಷಕನಾಗಿ ಹೊರಟನು. ಯಜ್ಞಾಗ್ನಿಯ ಹೊಗೆಯು ಎಲ್ಲ ದಿಕ್ಕುಗಳಲ್ಲಿ ವ್ಯಾಪಿಸಿತು. ಹೊಗೆಯಿಂದ ಸುಗಂಧಿತವಾದ ವಾಯುವು ಸತ್ಯಲೋಕದ ವರೆಗೆ ಮುಟ್ಟಿತು. ಈ ವಾಸನೆಯಿಂದ ದೇವತೆಗಳು ಧುಂಧುವಿನ ಯಜ್ಞದೀಕ್ಷೆಯನ್ನು ಅರಿತು ಬಹಳ ವಿಷಾದಪಟ್ಟರು. ಅನಂತರ ದೇವತೆಗಳೆಲ್ಲರೂ ಸರ್ವಶರಣ್ಯನಾದ ಜನಾರ್ದನನಲ್ಲಿ ಶರಣು ಹೊಕ್ಕರು. ಅವರು ಪದ್ಮನಾಭನಿಗೆ ನಮಸ್ಕರಿಸಿ ಗದ್ಗದಕಂಠ ದಿಂದ

ಪ್ರಾರ್ಥಿಸಿದರು. ''ದೇವ ದೇವೇಶನೇ, ದುಃಖನಾಶಕನಾದ ನೀನು ನಮ್ಮ ಈ ವಿಜ್ಞಾಪನೆಯನ್ನು ಲಾಲಿಸಬೇಕು. ಧುಂಧು ಎಂಬ ಬಲಿಷ್ಠ ಅಸುರನು ಮೂರು ಲೋಕವನ್ನು ತನ್ನ ಸಾಮರ್ಥ್ಯದಿಂದ ಗೆದ್ದು ಓಡಿ ಬಂದ ಇಂದ್ರನ ಮೇಲೆಯೂ ಸಹ ಮತ್ತೆ ಏರಿ ಬಂದಿದ್ದಾನೆ. ಇಂದ್ರನೇ ನಮಗೆ ರಕ್ಷಕನು. ಈ ಉಪದ್ರವದಿಂದ ನಮ್ಮನ್ನು ಹೇಗಾದರೂ ಮಾಡಿ ಪಾರು ಮಾಡು.

೭೫. ತಸ್ಮಾದ್ ಕಾಲಹೀನಂತು ಚಿಂತಯಸ್ವ ಜಗದ್ಗುರೋ ।
ಉಪಾಯಂ ಮಖವಿಧ್ವಂಸೇ ಯೇನ ಸ್ಯಾಮ ಸುನಿರ್ವೃತಾಃ ॥

ಈಗ ಆ ಧುಂಧುವು ಬ್ರಹ್ಮಲೋಕದಲ್ಲಿರುವವರನ್ನೂ ಜಯಿಸಲು ಶುಕ್ರಚಾರ್ಯರ ಅಭಿಪ್ರಾಯದಂತೆ ಅಶ್ವಮೇಧಯಾಗ ಮಾಡಲು ಹೊರಟಿರುವನು. ಆದುದರಿಂದ ಜಗದ್ಗುರುವಾದ ನೀನು ಈ ಸಮಯದಲ್ಲಿ ಕಾಲವಿಲಂಬ ಮಾಡದೇ ಆತನ ಯಜ್ಞಧ್ವಂಸ ಮಾಡಲು ಸರಿಯಾದ ಉಪಾಯವನ್ನು ಆಲೋಚಿಸಬೇಕು. ನಿನ್ನ ವ್ಯವಸಾಯದಿಂದ ನಾವು ದುಃಖದಿಂದ ದೂರಾಗುವೆವು.

೭೬. ಶ್ರುತ್ವಾ ಸುರಾಣಾಂ ವಚನಂ ಭಗವಾನ್ ಮಧುಸೂದನಃ ।
ದತ್ವಾಭಯಂ ಮಹಾಬಾಹುಃ ಪ್ರೇಷಯಾಮಾಸ ಸಾಂಪ್ರತಮ್ ।

೭೭. ಬಂಧನಾಯ ಮತಿಂ ಚಕ್ರೇ ಧುಂದೋರ್ಧರ್ಮಧ್ವಜಸ್ಯ ವೈ ।
ತತಃಕೃತ್ವಾ ಸ ಭಗವಾನ್ ವಾಮನಂ ರೂಪಮೀಶ್ವರಃ ॥

೭೮. ದೇಹಂ ತ್ಯಕ್ತ್ವಾನಿರಾಲಂಬಂ ಕಾಷ್ಠವದ್ದೇವಿಕಾಜಲೇ ।
ಕ್ಷಣಾನ್ಮಜ್ಜಂಸ್ತಥೋನ್ಮುಕ್ತಕೇಶೋ ಯದೃಚ್ಛಯಾ ॥

೭೯ ದೃಷ್ಟೋಥ ದೈತ್ಯಪತಿನಾ ದೈತೇಯೈಶ್ಚ ತಥರ್ಷಿಭಿಃ ।
ತತಃ ಕರ್ಮ ಪರಿತ್ಯಜ್ಯ ಯಜ್ಞೀಯಂ ಬ್ರಾಹ್ಮಣೋತ್ತಮಾಃ ॥

೮೦. ಸಮುತ್ತಾರಯಿತುಂ ವಿಪ್ರಮಾದ್ರವಂತ ಸಮಾಕುಲಾಃ ।
ಸದಸ್ಯಾ ಯಜಮಾನಶ್ಚ ಋತ್ವಿಜೋಽಥ ಮಹೌಜಸಃ ॥

೮೧. ನಿಮಜ್ಜಮಾನಮುಜ್ಜಹ್ರುಃ ತೇ ಚ ತೇ ವಾಮನಂ ದ್ವಿಜಂ ।
ಸಮುತ್ತಾರ್ಯ ಪ್ರಸನ್ನಾಸ್ತೇ ಪಪ್ರಚ್ಛುಃ ಸರ್ವ ಏವ ಹಿ ॥

೮೨. ಕಿಮರ್ಥಂ ಪತಿತೋಽಸೀಹ ಕೇನಾಕ್ಷಿಪ್ತೋಽಸಿ ವಾ ವದ ।
ಬ್ರಾಹ್ಮಣೋ ಗುಣವಾನಾಸೀತ್ ಪ್ರಭಾಸ ಇತಿ ವಿಶ್ರುತಃ ॥

೮೩. ತಸ್ಯ ಪುತ್ರದ್ವಯಂ ಜಾತಂ ಮಂದ ಪ್ರಜ್ಞಂ ಸುದುಃಖಿತಮ್।
ತತ್ರ ಜ್ಯೇಷ್ಠೋ ಮಮ ಭ್ರಾತಾ ಕನೀಯಾನಪರಸ್ತ್ವಹಮ್ ।
ಮಮ ನಾಮ ಪಿತಾ ಚಕ್ರೇ ಗತಿಭಾಸೇತಿ ಕೌತುಕಾತ್ ॥

ದೇವತೆಗಳ ಈ ಮಾತನ್ನು ಕೇಳಿ ಷಡ್ಗುಣೈಶ್ವರ್ಯ ಸಂಪನ್ನನಾದ ವಿಷ್ಣುವು ನಿಮ್ಮ ಇಚ್ಛೆಯಂತೆ ಆಗಲೆಂದು ಅಭಯವನ್ನಿತ್ತನು. ದೇವತೆಗಳನ್ನು ಕಳುಹಿಸಿ ಕೇವಲ ಖ್ಯಾತಿಗಾಗಿ

ಧರ್ಮವನ್ನು ಆಚರಿಸುತ್ತಿರುವ ಅಸುರನನ್ನು ನೇರವಾಗಿ ಜಯಿಸದೇ ಆತನನ್ನು ಬಂಧಿಸಬೇಕೆಂದು ವಿಷ್ಣುವು ನಿಶ್ಚಯಿಸಿದನು. ಅನಂತರ ವಾಮನ ರೂಪವನ್ನು ಹೊಂದಿ ದೇವಿಕಾ ನದಿಯ ನೀರಿನಲ್ಲಿ ತೇಲಾಡುತ್ತ ಯಜ್ಞಶಾಲೆಯ ಹತ್ತಿರವಿರುವ ಪ್ರವಾಹದಲ್ಲಿ ಬಂದಿಳಿದನು. ಅಲ್ಲಿರುವ ದೈತ್ಯರು ಮತ್ತು ಋಷಿಗಳು ಚಕಿತರಾಗಿ ಆತನನ್ನು ನೋಡಿದರು. ಯಜ್ಞದಲ್ಲಿ ತೊಡಗಿದ ಬ್ರಾಹ್ಮಣರು ತಮ್ಮ ಕರ್ಮವನ್ನು ಬಿಟ್ಟು ಪ್ರವಾಹದಿಂದ ಈ ಬ್ರಾಹ್ಮಣನನ್ನುಳಿಸಲು ತ್ವರೆ ಮಾಡಿ ಓಡಿಬಂದರು. ಸದಸ್ಯರೂ ಋತ್ವಿಜರೂ ಎಲ್ಲರೂ ಧಾವಿಸಿ ಬಂದು ವಾಮನಮೂರ್ತಿಯನ್ನು ಮೇಲಕ್ಕೆತ್ತಿ ದಡಕ್ಕೆ ತಂದು ಕೇಳಿದರು. "ನೀನು ಈ ಪ್ರವಾಹಕ್ಕೆ ಏತಕ್ಕಾಗಿ ಬಿದ್ದೆ? ಯಾರಾದರೂ ನಿನ್ನನ್ನು ಪ್ರವಾಹದಲ್ಲಿ ನೂಕಿದರೆ?" ಹೀಗೆ ಅನೇಕ ಪ್ರಶ್ನೆ ಮಾಡಲು ವಾಮನನು ನಡುಗುತ್ತ ತಾನು ಬೀಳುವ ಕಾರಣವನ್ನು ವಿವರಿಸತೊಡಗಿದನು. "ಪ್ರಭಾಸವೆಂದು ಪ್ರಖ್ಯಾತನಾದ ತತ್ವಜ್ಞನಾದ ಬ್ರಾಹ್ಮಣನನೊಬ್ಬ ನಿದ್ದನು. ಅವನು ವರುಣಗೋತ್ರದವನು. ಅವನಿಗೆ ಪ್ರಜ್ಞಾರಹಿತರಾದ ಇಬ್ಬರು ಪುತ್ರರುಂಟಾದರು. ಅವರಲ್ಲಿ ನೇತ್ರಭಾಸನೆಂದು ಪ್ರಖ್ಯಾತನಾಗಿದ್ದವನು ನನ್ನ ಅಣ್ಣನು. ತಂದೆಯಿಂದ ಗತಿಭಾಸನೆಂಬ ನಾಮಕರಣ ಮಾಡಲ್ಪಟ್ಟ ನಾನೇ ಕಿರಿಯವನು.

೮೪. ರಮ್ಯಶ್ಚಾವಸಥಶ್ಚಾಪಿ ಶುಭ ಆಸೀತ್ ಪಿತುರ್ಮಮ ।
ತತಃ ಕಾಲೇನ ಮಹತಾ ಆವಯೋಸ್ಸ ಪಿತಾ ಮೃತಃ ॥

೮೫. ತತೋ ಮಯೋಕ್ತೋ ಮೇ ಭ್ರಾತಾ ವಿಭಜಾಮ ಗೃಹಂ ವಯಂ ।
ತೇನೋಕ್ತೋ ನೈವ ಭವತೋ ವಿದ್ಯತೇ ಭಾಗ ಇತ್ಯಹಮ್ ।

೮೬. ಕುಬ್ಜವಾಮನ ಖಂಜಾನಾಂ ಕ್ಲೀಬಾನಾಂ ಶ್ವಿತ್ರಿಣಾಮಪಿ ।
ಉನ್ಮತ್ತಾನಾಂ ತಥಾಂಧಾನಾಂ ಧನ ಭಾಗೋ ನ ವಿದ್ಯತೇ ॥

೮೭. ಪ್ರಿಯಂ ವಾಕ್ಯಂ ಗ್ರಹೇ ವಾಸೋ ಭೋಜನಾಚ್ಛಾದನಾದಿಕಂ ।
ಏತಾವದ್ದೀಯತೇ ತೇಭ್ಯೋನಾರ್ಥಭಾಗಹರಾ ಹಿ ತೇ ॥

೮೮. ಏವಮುಕ್ತೋ ಮಯಾ ಸೊಥ ಕಿಮರ್ಥಂ ಪೈತೃಕಾದ್ ಗೃಹಾತ್ ।
ಧನಾರ್ಧಭಾಗಮರ್ಹಾಮಿ ನಾಹಂ ನ್ಯಾಯೇನ ಕೇನ ವಾ ॥

೮೯. ಇತ್ಯುಕ್ತೋ ಬಲವಾನ್ ಭ್ರಾತಾ ಕೇಶಾನಾ ಜಗ್ರಾಹ ಮೇಽಸುರ।
ಸಮುಕ್ಷಿಪ್ಯಾಕ್ಷಿಪನ್ನದ್ಯಾಂ ನ ಜಾನೇ ಹ್ಯವತಾರಣಮ್ ॥

ನನ್ನ ತಂದೆಗೆ ಸ್ವರ್ಗ ಸದೃಶವಾಗಿಯೂ ಸರ್ವಗುಣಗಳಿಂದ ಪರಿಪೂರ್ಣವೂ ಆದ ಮಂಗಲಮಯವಾದ ಮನೆಯೊಂದಿದ್ದಿತು. ದೈವವಶಾತ್ ತಂದೆಯು ಮೃತನಾದನು. ಉತ್ತರಕ್ರಿಯೆ ಮುಗಿದ ನಂತರ "ಮನೆಯನ್ನು ವಿಭಾಗ ಮಾಡಿಕೊಳ್ಳೋಣವೇ!" ಎಂದು ನಾನು ನನ್ನ ಅಣ್ಣನನ್ನು ಕೇಳಿದೆನು. "ಈ ಮನೆಯಲ್ಲಿ ನಿನಗೆ ಭಾಗವಿಲ್ಲ, ಇದಕ್ಕೆ ನಾನೇ ಯಜಮಾನನು" ಎಂದು ಅಣ್ಣನು ಉತ್ತರಿಸಿದನು. "ಡೂಗ, ಗಿಡ್ಡ, ಕುಂಟ, ನಪುಂಸಕ, ಕುಷ್ಟರೋಗಿ, ಹುಚ್ಚ, ಕುರುಡ ಇವರೆಲ್ಲರಿಗೂ ಶಾಸ್ತ್ರರೀತಿಯಿಂದ ಮನೆತನದ ಧನದಲ್ಲಿ ಭಾಗವಿಲ್ಲ. ಇವರನ್ನು ಭೋಜನ ವಸ್ತ್ರಾದಿಗಳಿಂದ ಪೋಷಿಸಲು ಮಾತ್ರ ಶಾಸ್ತ್ರವಿದೆ. ಇಷ್ಟು

ಮಾತ್ರ ಇವರಿಗೆ ಅಧಿಕಾರವಿರುವದು.'' ಅಣ್ಣನು ಹೀಗೆ ಹೇಳಿದ ನಂತರ ''ನನಗೇಕೆ ಮನೆಯಲ್ಲಿ ಭಾಗವಿರಬಾರದು? ಇದಾವ ನ್ಯಾಯ'' ಎಂದು ಕೇಳಲು ಕಲಹವು ಬೆಳೆದು ಬಲಶಾಲಿಯಾದ ನನ್ನ ಅಣ್ಣನು ನನ್ನನ್ನು ಕೂದಲು ಹಿಡಿದು ನದಿಯಲ್ಲಿ ನೂಕಿಬಿಟ್ಟನು.

**೬೦. ಮಮಾಸ್ಯಾಂ ನಿಮ್ನಗಾಯಾಂತು ಮಧ್ಯೇನ ಪ್ಲವತೋ ಗತಿಃ ।**
**ಕಾಲಃ ಸಂವತ್ಸರಾಖ್ಯಸ್ತು ಯುಷ್ಮಾಭಿರಮೃತೋ ಧೃತಃ ॥**

ನದಿಯ ಮಧ್ಯದಲ್ಲಿ ತೇಲಿಬರುತ್ತಿರುವ ನನಗೆ ಯಾವ ಆಸರೆಯೂ ಸಿಕ್ಕದೇ ಇರುವದರಿಂದ ಒಂದು ವರ್ಷ ಪರ್ಯಂತರ ಹೀಗೆ ತೇಲಿ ಬಂದು ನಿಮ್ಮ ಕೈಯಲ್ಲಿ ಸಿಲುಕಿದ್ದೇನೆ. ನನ್ನನ್ನು ಉದ್ಧರಿಸಲು ಬಂದ ನೀವು ಯಾರು? ನಿಮ್ಮ ಮಧ್ಯದಲ್ಲಿ ಇಂದ್ರನಂತೆ ತೇಜಸ್ವಿಯಾಗಿರುವ ಇವನು ಯಾರು? ಇದೆಲ್ಲವನ್ನು ಯಥಾರ್ಥವಾಗಿ ನನಗೆ ಹೇಳಿರಿ. ನೀವೆಲ್ಲರೂ ಋಷಿ ಸದೃಶರು'' ಎಂದು ವಾಮನನು ಸ್ತುತಿಸಿದನು. ವಾಮನನ ಈ ಮಾತುಗಳನ್ನು ಕೇಳಿ ಬ್ರಾಹ್ಮಣರು ಹೇಳಿದರು, ''ನಾವೆಲ್ಲರೂ ಭಾರ್ಗವ ವಂಶದ ಬ್ರಾಹ್ಮಣರು. ಇವನು ಧುಂಧು ಎಂಬ ರಾಜನು. ಈಗ -

**೬೧. ಅಸಾವಪಿ ಮಹಾತೇಜಾ ದುಂಧುರ್ನಾಮ ಮಹಾಸುರಃ ।**
**ದಾತಾ ಭೋಕ್ತಾ ಚ ಭರ್ತಾ ಚ ದೀಕ್ಷಿತೋ ಯಜ್ಞಕರ್ಮಣಿ।**

**೬೨. ದೀಯತಾಮಸ್ಯ ದೈತ್ಯೇಂದ್ರ ಸರ್ವೋಪಸ್ಕರ ಸಂಯುತಂ ।**
**ಶ್ರೀಮದಾವ ಸಥಂ ದಾಸ್ಯೋ ರತ್ನಾನಿ ವಿವಿಧಾನಿ ಚ ॥**

**೬೩. ಇತಿದ್ವಿಜಾನಾಂ ವಚನಂ ಶ್ರುತ್ವಾ ದೈತ್ಯಪತಿಸ್ತತಃ ।**
**ಪ್ರಾಹ ದ್ವಿಜೇಂದ್ರ ತೇ ದದ್ಮಿ ಯತ್ವಮಿಚ್ಛಸಿ ವೈ ಧನಮ್ ॥**

**೬೪. ತದ್ವಾಕ್ಯಂ ದಾನವ ಪತೇಃ ಶ್ರುತ್ವಾದೇವೋಽಥ ವಾಮನಃ ।**
**ಪ್ರಾಹಸುರ ಪತಿಂ ಧುಂಧುಂ ಸ್ವಾರ್ಥಸಿದ್ಧಿಕರಂ ವಚಃ ॥**

**೬೫. ಮಮ ಪ್ರಮಾಣಮಾಲೋಕ್ಯ ಮಾಮಕಂ ಚ ಪದತ್ರಯಂ ।**
**ಸ್ವಂ ಪ್ರಯಚ್ಛಸ್ವ ದೈತ್ಯೇಂದ್ರ ಏತದೇವಾರ್ಥಯೇಹ್ಯಹಮ್ ॥**

**೬೬. ಪ್ರಾದಾಚ್ಚ ವಿಪ್ರಾಯ ಪದತ್ರಯಂ ವಶೀ ಯದಾ ಸ ನಾನ್ಯತ್ ಪ್ರಗೃಹೀತವಾನ್ ಪುನಃ ।**
**ಚಕ್ರೇ ತತೋ ಲಂಘಯಿತುಂ ತ್ರಿಲೋಕೀಂ ತ್ರಿವಿಕ್ರಮಂ ರೂಪಮನಂತಶಕ್ತಿಃ ॥**

ರಾಜನು ಯಜ್ಞದಲ್ಲಿ ದೀಕ್ಷಿತನಾಗಿರುವನು'' ಎಂದು ಹೇಳಿ ಆ ಬ್ರಾಹ್ಮಣರು ಧುಂಧುವಿಗೆ ಹೇಳಿದರು. ''ಎಲೈ ರಾಜನೇ, ಈ ಬ್ರಾಹ್ಮಣೋತ್ತಮನಿಗೆ ಎಲ್ಲ ಸಾಮಗ್ರಿಗಳಿಂದ ಕೂಡಿದ ದಾಸದಾಸಿಯರಿಂದೊಡಗೂಡಿದ ಶ್ರೇಷ್ಠವಾದ ಮನೆಯನ್ನು ದಾನ ಮಾಡು.'' ಇವರುಗಳ ಮಾತನ್ನು ಕೇಳಿ ಧುಂಧುವು ವಾಮನನಿಗೆ ಹೇಳಿದನು. ''ಎಲೈ ಬ್ರಾಹ್ಮಣನೇ, ನಿನಗೆ ಇಷ್ಟ ಬಂದಷ್ಟು ಮನೆ, ಸುವರ್ಣ, ಗಜ, ಅಶ್ವ, ಗೋವು

ಮೊದಲಾದವುಗಳನ್ನು ಕೇಳಿಕೋ.'' ರಾಜನ ಈ ಮಾತನ್ನು ಕೇಳಿ ವಾಮನರೂಪಿಯಾದ ಪರಮಾತ್ಮನು ತನ್ನ ಸ್ವಾರ್ಥಸಿದ್ಧಿಗೆ ತಕ್ಕಂತೆ ಧುಂಧುವಿಗೆ ಈ ಮಾತನ್ನು ಹೇಳಿದನು. ''ವೀರ ರಾಜನೇ, ಬರಬೇಕಾದ ಸಂಪತ್ತನ್ನು ನನ್ನ ಅಣ್ಣನೇ ಎಲ್ಲವನ್ನೂ ಕಸಿದುಕೊಂಡು ಬಿಟ್ಟಿದ್ದಾನೆ. ಅಂಥ ನಿಷ್ಫಲವಾದ ಸಂಪತ್ತನ್ನು ನನಗೇಕೆ ಕೊಡುತ್ತಿಯೇ? ಅದೆಲ್ಲ ಸಂಪತ್ತನ್ನೂ ನಿಮ್ಮ ಬ್ರಾಹ್ಮಣರಿಗೆ ಕೊಟ್ಟುಬಿಡು. ನನ್ನ ಪ್ರಮಾಣಕ್ಕೆ ತಕ್ಕಂತೆ ನನ್ನ ಮೂರು ಹೆಜ್ಜೆಯ ಅಳತೆಯ ಭೂಮಿಯನ್ನು ನನಗೆ ಕೊಡು. ಇಷ್ಟು ಮಾತ್ರವೇ ನನ್ನ ಯಾಚನೆ.'' ಆ ವಾಮನನ ಈ ಮಾತನ್ನು ಕೇಳಿ ದೈತ್ಯಾಧಿಪತಿಯಾದ ಧುಂಧುವು ಉಪಹಾಸದ ಒಂದು ನಗುವನ್ನು ಬೀರಿ ಅವನ ಅಪೇಕ್ಷೆಯಂತೆ ಆಗಲೆಂದು ಮೂರು ಹೆಜ್ಜೆ ಭೂಮಿಯನ್ನೇ ಕೊಟ್ಟನು. ಹೀಗೆ ಧುಂಧುವಿನಿಂದ ಮಾತು ಹೊರಡುತ್ತಿರುವಂತೆಯೇ ಪ್ರಭುವಾದ ವಾಮನನು ಅಭಿವೃದ್ಧಿ ಹೊಂದತೊಡಗಿದ. ಮೂರು ಲೋಕವನ್ನೂ ಅತಿಕ್ರಮಿಸುವಂತಹ ತ್ರಿವಿಕ್ರಮ ರೂಪವನ್ನು ಧರಿಸಿದನು. ಆ ತರಹದ ರೂಪವನ್ನು ಧರಿಸಿ ದೈತ್ಯರನ್ನೆಲ್ಲ ನಾಶಪಡಿಸಿ ಋಷಿಗಳೆಲ್ಲರನ್ನೂ ಕ್ರಮವಾಗಿ ವಂದಿಸಿ ಮೊದಲನೇಯ ಪಾದದಿಂದ ಪರ್ವತ ಹಾಗೂ ಮಹಾಸಮುದ್ರಗಳಿಂದೊಡಗೂಡಿದ ಭೂಲೋಕವನ್ನಾಕ್ರಮಿಸಿದನು. ಎರಡನೇಯ ಪಾದದಿಂದ ಸೂರ್ಯಚಂದ್ರರಿಂದೊಡಗೂಡಿದ ಸ್ವರ್ಗಲೋಕವನ್ನಾಕ್ರಮಿಸಿದನು. ಅನಂತರ ಮೂರನೇಯ ಪಾದವನ್ನು ಮೇರುವಿನಂತೆ ಭಾರವಾದ ತನ್ನ ದೇಹದ ಭಾರದೊಡನೆ ಆ ಅಸುರನ ಬೆನ್ನನ್ನುಕ್ರಮಿಸಿದನು. ದಾನವನ ಮೇಲೆ ತ್ರಿವಿಕ್ರಮನು ಆಕ್ರಮಣ ಮಾಡಿದ ಕಾಲದಲ್ಲಿ ಅವನ ಭಾರದಿಂದ ಮೂವತ್ತು ಸಾವಿರಗಾವುದ ಪರಿಮಿತವಾದ ಭೂಭಾಗವು ಕುಗ್ಗಿ ಹಳ್ಳದಲ್ಲಿ ಸೇರಿಹೋಯಿತು. ಆಗ ದೈತ್ಯನನ್ನು ಎತ್ತಿ ಆ ಹಳ್ಳದಲ್ಲಿ ಹಾಕಿ ಅವನ ಮೇಲೆ ಮರಳಿನ ಮಳೆಗರೆದು ಆ ಹಳ್ಳವನ್ನು ಮುಚ್ಚಿದನು. ಅದಾದ ನಂತರ ವಾಸುದೇವನ ಈ ಅನುಗ್ರಹದಿಂದ ಇಂದ್ರನು ಸ್ವರ್ಗವನ್ನು ಅಧಿಕರಿಸಿ ರಾಜ್ಯವಾಳಿದನು. ಮೂರು ಲೋಕದ ಜನರೂ ನಿರಾತಂಕವಾಗಿ ಇರಹತ್ತಿದರು. ಭಗವಂತನು ದೈತ್ಯನನ್ನು ಮರಳಿನ ಸಮುದ್ರದಲ್ಲಿ ಬಂಧಿಸಿ ಕಾಲಿಂದೀ ರೂಪವನ್ನು ಅಂತರ್ಧಾನ ಹೊಂದಿದನು. ಹೀಗೆ ವಿಷ್ಣುವು ಪೂರ್ವದಲ್ಲಿಯೂ ಸಹ ಧುಂಧುವನ್ನು ಜಯಿಸುವದಕ್ಕಾಗಿ ತ್ರಿವಿಕ್ರಮನಾಗಿ ಅವತರಿಸಿದ್ದನು. ಅಂತಹ ತ್ರಿವಿಕ್ರಮನ ಸಾನ್ನಿಧ್ಯವುಳ್ಳ ಪುಣ್ಯಾಶ್ರಮಕ್ಕೆ ಪ್ರಹ್ಲಾದನು ತೀರ್ಥಯಾತ್ರಾ ಪ್ರಸಂಗದಲ್ಲಿ ಹೋದನು.

ವಾಮನ ಮಹಾಪುರಾಣದಲ್ಲಿ ತ್ರಿವಿಕ್ರಮಾವತಾರ - ದುಂಧುವಿನ ಸಂಹಾರ
ಎಪ್ಪತ್ತೆಂಟನೇಯ ಅಧ್ಯಾಯವು ಮುಗಿದುದು.

—o—

೯೭. ಕಾಲಿಂದೀಸಲಿಲೇ ಸ್ನಾತ್ವಾ ಪೂಜಯಿತ್ವಾ ತ್ರಿವಿಕ್ರಮಂ ।
ಉಪೋಷ್ಯ ರಜನೀಮೇಕಾಂ ಲಿಂಗಭೇದಂ ಗಿರಿಂ ಯಯೌ ॥

**ಪುಲಸ್ತ್ಯರು ಹೇಳುತ್ತಾರೆ** - ಅನಂತರ ಪ್ರಹ್ಲಾದನು ಕಾಲಿಂದೀ ನದಿಯಲ್ಲಿ ಸ್ನಾನ ಮಾಡಲು ತ್ರಿವಿಕ್ರಮ ದೇವರನ್ನು ಆರಾಧಿಸಿ ಒಂದು ರಾತ್ರಿ ಉಪವಾಸವಿದ್ದು ಲಿಂಗಭೇದವೆಂಬ ಪರ್ವತಕ್ಕೆ ಹೊರಟನು. ಅಲ್ಲಿ ಸ್ನಾನ ಮಾಡಿ ಶಿವನನ್ನಾರಾಧಿಸಿ ಕೇದಾರ ತೀರ್ಥಕ್ಕೆ ಪ್ರಯಾಣ ಮಾಡಿದನು. ಅಲ್ಲಿಯೂ ಸ್ನಾನಾದಿ ವಿಧಿಗಳನ್ನು ತೀರಿಸಿ ಏಳು ದಿನಗಳವರೆಗೆ ಇದ್ದು ಕುಬ್ಜಾಮ್ರ ಎಂಬ ಕ್ಷೇತ್ರಕ್ಕೆ ನಡೆದನು.

ಅಲ್ಲಿ ಹೃಷೀಕೇಶವನ್ನಾರಾಧಿಸಿ ಬದರಿಕಾಶ್ರಮಕ್ಕೆ ಹೊರಟನು. ಅಲ್ಲಿ ನಾರಾಯಣನನ್ನು ಸೇವಿಸಿ ಸರಸ್ವತೀ ನದಿಯಲ್ಲಿ ಸ್ನಾನ ಮಾಡಿ ವರಾಹ ತೀರ್ಥ, ಭದ್ರಕರ್ಣವೆಂಬ ತೀರ್ಥ, ಜಗನ್ನಾಥವೆಂಬ ತೀರ್ಥಗಳಿಗೆ ಪ್ರಯಾಣ ಬೆಳೆಸಿದನು. ಅಲ್ಲಿ ಎಲ್ಲ ಕಡೆಯಲ್ಲಿಯೂ ಜಗತ್ಪ್ರಭುವನ್ನಾರಾಧಿಸಿ ದುರ್ಲಭವಾದ ಯೋಗ ಸಿದ್ಧಿಯನ್ನು ಹೊಂದಿದನು. ಮಧ್ಯದಲ್ಲಿ ನಾರದರು '' ಪುರೂರವನು ವಿಷ್ಣುವನ್ನಾರಾಧಿಸಿ ತನ್ನ ವೈರೂಪ್ಯವನ್ನು ಹೋಗಲಾಡಿಸಿಕೊಂಡು ಸುಂದರವಾದ ರೂಪವನ್ನು ಹೇಗೆ ಹೊಂದಿದನು?'' ಎಂದು ಪ್ರಶ್ನೆ ಮಾಡಲು ಪುಲಸ್ತ್ಯರು ಹೇಳುತ್ತಾರೆ -

''ಹಿಂದಕ್ಕೆ ತ್ರೇತಾಯುಗದ ಆದಿಭಾಗದಲ್ಲಿ ಮದ್ರದೇಶವೆಂಬ ದೇಶವು ಪ್ರಖ್ಯಾತವಾಗಿದ್ದಿತು. ಅಲ್ಲಿ ಬ್ರಾಹ್ಮಣರು ಬಹಳವಾಗಿ ವಾಸಿಸುತ್ತಿದ್ದರು. ಆ ಪ್ರದೇಶದಲ್ಲಿ ಶಾಕಲವೆಂಬ ಶಾಖಾನಗರವಿದ್ದಿತು. ಅಲ್ಲಿ ಸಧರ್ಮನೆಂಬ ವೈಶ್ಯನು, ವ್ಯಾಪಾರವನ್ನು ಮಾಡಿಕೊಂಡು ಬಹಳ ಧನಗಳಿಸಿ, ಭೋಗ ವಿಲಾಸಿಯೂ, ನಾನಾ ಶಾಸ್ತ್ರದ ಅಧ್ಯಯನದಿಂದ ಗುಣಶಾಲಿಯೂ ಆಗಿದ್ದನು. ಅವನು ಒಂದು ಸಲ ಕೆಲವು ಜನ ಸಂಗಡಿಗರನ್ನು ಕರೆದುಕೊಂಡು ವ್ಯಾಪಾರದ ಕೆಲವು ವಸ್ತುಗಳನ್ನು ತೆಗೆದುಕೊಂಡು ಸೌರಾಷ್ಟ್ರ ದೇಶಕ್ಕೆ ಹೊರಟನು. ಮಧ್ಯ ಮಾರ್ಗದಲ್ಲಿ ಒಂದು ಮರುಭೂಮಿಯಲ್ಲಿ ಒಂದು ಕಳ್ಳರ ಗುಂಪಿಗೆ ಆತನು ಸಿಕ್ಕನು. ಅವನ ಸರ್ವಸ್ವವೂ ಅಪಹೃತವಾಯಿತು.

ನಿರ್ಗತಿಕನಾದ ವ್ಯಾಪಾರಿಯು ಮರುಭೂಮಿಯಲ್ಲಿ ಹುಚ್ಚನಂತೆ ತಿರುಗಾಡತೊಡಗಿದ. ಸಮೀಪದಲ್ಲಿಯೇ ಆತನಿಗೆ ಒಂದು ಬನ್ನಿ ಗಿಡವು ಸಿಕ್ಕಿತು. ಹಸಿವೆ ನೀರಡಿಕೆಗಳಿಂದ ಆತನು ಬಳಲಿದ್ದನು. ಆ ಬನ್ನೀ ಗಿಡದ ಅಡಿಯಲ್ಲಿಯೇ ವಿಶ್ರಾಂತಿ ತೆಗೆದುಕೊಂಡನು. ಅಲ್ಲಿ ಅವನಿಗೆ ಒಂದು ಪಿಶಾಚಿಗಳ ಗುಂಪು ಕಂಡುಬಂದಿತು. ಒಂದಕ್ಕೊಂದು ಪಿಶಾಚಿಗಳು ಕಲಹ ಮಾಡುತ್ತ ಈತನ ಹತ್ತಿರಕ್ಕೇ ಬಂದವು. ಆ ಪಿಶಾಚಿಗಳ ಮುಖ್ಯಸ್ಥನು ಈ ಸಧರ್ಮನೆಂಬ ವ್ಯಾಪಾರಿಯನ್ನು ನೋಡಿದನು. ಅವನು ಆತನನ್ನು ಮಿತ್ರನಂತೆ ಸ್ವಾಗತಿಸಿ ಕುಶಲ ಪ್ರಶ್ನೆ ಮಾಡಿದನು. ಪಿಶಾಚಾಧಿಪತಿಯು ವ್ಯಾಪಾರಿಗೆ ಕೇಳಿದನು. ''ನೀನು ಎಲ್ಲಿಂದ ಬರುತ್ತಿದ್ದಿಯೇ? ಈ ನಿರ್ಜನ ಅರಣ್ಯಕ್ಕೇಕೆ ಬಂದಿರುವಿ? ನೀನು ಸ್ವಲ್ಪವೂ ಭಯಪಡಬೇಡ. ಎಲ್ಲವನ್ನೂ ಹೇಳು.'' ಹೀಗೆ ಪ್ರಶ್ನೆ ಮಾಡಲು ಆ ವ್ಯಾಪಾರಿಯು ''ಕಳ್ಳರಿಂದ ಬಹಳ ಧನಹಾನಿ ಯಾಗಿದೆ'' ಯೆಂದು ಹೇಳಿದನು.

ಪಿಶಾಚಿಯು ಬಂಧುವಿನಂತೆ ಕೇಳಿ ಮಮ್ಮಲ ಮರುಗಿ ಹೇಳಿತು, ''ನೀನು ದುಃಖ ಪಡಬೇಡ. ನಿನ್ನ ದೈವವು ಪ್ರಬಲವಿದ್ದರೆ ನಿನ್ನ ವಸ್ತುಗಳನ್ನೆಲ್ಲ ನಾವು ತಂದು ಕೊಡಲು ಯತ್ನಿಸುವೆವು.'' ಹೀಗೆ ಅವನಿಗೆ ಅಭಯ ಕೊಟ್ಟು ಪಿಶಾಚಿಯು ತನ್ನ ಸೇವಕರಿಗೆ ಹೇಳಿತು. ''ನನ್ನ ಅತಿಥಿಯು ನನಗೆ ಬಂಧುವಿಗಿಂತ ಹೆಚ್ಚು. ಇವನ ಸಮ್ಮಿಲನದಿಂದ ನನಗೆ ಬಹಳ ಸಂತೋಷ ಉಂಟಾಗಿದೆ.'' ಹೀಗೆ ಅನ್ನುತ್ತಿರುವಂತೆಯೇ, ಮೊಸರನ್ನು ತುಂಬಿದ ಒಂದು ಮಣ್ಣಿನ ಪಾತ್ರೆ ಅವನ ಮುಂದೆ ಬಂದಿತು? ಹಾಗೆಯೇ ಸಿಹಿಯಾದ ನೀರೂ ದೊರಕಿದವು. ಆ ವ್ಯಾಪಾರಿಯೂ ಯಥೇಚ್ಛವಾಗಿ ಊಟ ಮಾಡಿದ ನಂತರ ಉಳಿದ ಅನ್ನವನ್ನು ಮತ್ತೆ ಉಪಯೋಗಕ್ಕಾಗಿ ಇಟ್ಟುಕೊಂಡನು. ಅವನೊಡನೆ ಪಿಶಾಚಿಯೂ ಭೋಜನ ಮಾಡಿತು.

ಅಲ್ಲಿದ್ದ ಪಾತ್ರೆಗಳೆಲ್ಲ ತನ್ನಷ್ಟಕ್ಕೆ ತಾವೇ ಮಾಯವಾದವು. ಈ ದೃಶ್ಯವನ್ನು ನೋಡಿದ ವ್ಯಾಪಾರಿಯು ಚಕಿತನಾಗಿ ಪಿಶಾಚಾಧಿಪತಿಗೆ ಕೇಳಿದನು - ''ಎಲೈ ಸಾಧುವೇ, ಈ ನಿರ್ಜನವಾದ ಅರಣ್ಯದಲ್ಲಿ ಇಂಥ ಸುಸ್ವಾದುವಾದ ಭೋಜನ ಹಾಗೂ ನೀರು ಎಲ್ಲಿಂದ ಬರುವವು? ಇಷ್ಟು ಭೋಜನ ಸಾಮಗ್ರಿಗಳಿದ್ದರೂ ನಿನ್ನ ಭೃತ್ಯರು ಏಕೆ ಕೃಶಕಾಯರಾಗಿದ್ದಾರೆ? ನೀನು ಮಾತ್ರ ತೇಜಸ್ವಿಯೂ ಹಾಗೂ ಪುಷ್ಟನೂ ಆಗಿರುವಿ. ಇದಕ್ಕೆ ಕಾರಣವೇನು? ಅಲ್ಲದೇ ನೀನು ಯಾರು? ನಿನ್ನ ಆಶ್ರಯವಾದ ಈ ಬನ್ನೀಮರವು ಎಂತಹದು? ಎಲ್ಲವನ್ನೂ ನನಗೋಸ್ಕರ ಹೇಳು.'' - ಎಂದಾಗ ಆ ಪಿಶಾಚಿ ನಾಯಕನು ಹೇಳತೊಡಗಿದನು. ''ನಾನು ಮೊದಲು ಶಾಕಲವೆಂಬ ನಗರದಲ್ಲಿ ಸೋಮಶರ್ಮನೆಂಬ ಪ್ರಸಿದ್ಧ ಬ್ರಾಹ್ಮಣನಾಗಿದ್ದೆನು. ನನ್ನ ಮನೆಯ ಸಮೀಪದಲ್ಲಿ ಮಹಾಧನಿಕನಾದ ಸೋಮಶರ್ಮನೆಂಬ ವ್ಯಾಪಾರಿ ಯಿದ್ದನು. ಅವನು ವಿಷ್ಣುಭಕ್ತನಾಗಿದ್ದನು.

ಮೂಢನಾದ ನಾನು ಧನವಂತನಾಗಿದ್ದರೂ ಮಹಾಕೃಪಣನಾಗಿ ತ್ಯಾಗ ಭೋಗ ಗಳಿಲ್ಲದೇ ಇದ್ದೆನು. ನಾನೆಂದೂ ಬ್ರಾಹ್ಮಣರಿಗೆ ದಾನ ಮಾಡಲಿಲ್ಲ. ಒಂದು ವೇಳೆ ಹಾಗೆ ಮಾಡಿದ್ದರೆ ಮೂರು ಜನ ಭೃತ್ಯರು ದೊಣ್ಣೆಯಿಂದ ನನ್ನನ್ನು ಹೊಡೆಯುತ್ತಿದ್ದರು. ದುಃಸಹವಾದ ಬೊಕ್ಕೆಗಳೇಳುತ್ತಿದ್ದವು. ಪಾಪಿಯಾದ ನಾನು ಬಹು ಕಷ್ಟದಿಂದ ಪ್ರಾಣಧಾರಣವನ್ನು ಮಾಡಿಕೊಂಡು ತವುಡು ಕಾಯಿಪಲ್ಲೆಗಳನ್ನೇ ತಿಂದುಕೊಂಡು ಕಾಲವನ್ನು ಕಳೆಯುತ್ತಿದ್ದೆನು. ಹೀಗೆ ಬಹಳ ಕಾಲದವರೆಗೆ ಕಳೆದೆನು. ಹೀಗಿರುವಾಗ ಭಾದ್ರಪದ ಮಾಸದ ಶ್ರವಣ ದ್ವಾದಶಿ ಎಂಬ ವ್ರತ ಬಂದಿತು. ಊರಿನಲ್ಲಿಯ ಬ್ರಾಹ್ಮಣ ಕ್ಷತ್ರಿಯೆಲ್ಲರೂ ಇರಾವತೀ ನದಿಯ ಸ್ನಾನಕ್ಕೆ ಹೊರಟರು. ಅವರೊಡನೆ ನಾನೂ ಕೂಡ ಹೋದೆನು. ಅವರೊಡನೆ ನಾನೂ ಏಕಾದಶೀ ಉಪವಾಸ ಮಾಡಿ ಸ್ನಾನಮಾಡಿ ಶುದ್ಧನಾದ ಬ್ರಾಹ್ಮಣೋತ್ತಮನಿಗೆ ದಧ್ಯನ್ನದ ಪಾತ್ರೆಯನ್ನು ದಾನ ಮಾಡಿದೆನು. ನಾನು ಬದುಕಿರು ವಷ್ಟು ದಿವಸಗಳಲ್ಲಿ ನಾನು ದಾನ ಮಾಡಿದುದೆಂದರೆ ಇದು ಒಂದೇ. ಮರಣ ಹೊಂದಿನಂತರ ಪಿಶಾಚಿಯಾದೆನು. ಈ ಪಿಶಾಚಿಗಳಿಗೆ ಅನ್ನವನ್ನು ಕೊಡುತ್ತಿರುವೆನು. ಉಳಿದ ಪಿಶಾಚಿಗಳು ದಾನ ಮಾಡದೇ ಇದ್ದುದರಿಂದ ನಾನು ಕೊಟ್ಟ ಅನ್ನದಿಂದಲೇ ಜೀವಿಸುತ್ತಿರುವವು? ನಾನು ಒಂದು ಪುಣ್ಯ ಮಾಡಿದುದರ ಫಲವಾಗಿ ನನಗೆ ಹಾಗೂ ನನ್ನ ಸಹಚರನಿಗೆ ಪ್ರತಿದಿನ ಮಧ್ಯಾನ್ಹ ಸಮಯಕ್ಕೆ ದಧ್ಯನ್ನ ಹಾಗೂ ನೀರಿನ ಪಾತ್ರೆ ದೊರಕುವವು.

ನಾನು ಊಟ ಮಾಡುವವರೆಗೂ ಅನ್ನವು ಕ್ಷಯಿಸುವದಿಲ್ಲ. ನಾನು ಊಟ ಮಾಡಿದ ನಂತರ ಎಲ್ಲವೂ ಅಂತರ್ಧಾನ ಹೊಂದುತ್ತದೆ. ನಾನು ದಾನ ಮಾಡಿದ ಛತ್ರಿಯೇ ಈ ಬನ್ನೀ ಮರವಾಗಿ ಹುಟ್ಟಿದೆ. ನಾನು ಪಾದರಕ್ಷೆಯನ್ನು ದಾನ ಮಾಡಿದುದರಿಂದ ಈ ಪಿಶಾಚಿಗಳೂ ನನಗೆ ವಾಹನವಾಗಿ ದೊರಕಿರುವವು. ನಾನು ಪಿಶಾಚಿಯಾದದ್ದನ್ನೂ ಪುಣ್ಯಪ್ರದವಾದ ಶ್ರವಣ ದ್ವಾದಶಿಯ ಮಾಹಾತ್ಮ್ಯವನ್ನೂ ನಿನಗೆ ಹೇಳಿದ್ದೇನೆ'' ಎಂದು ಪಿಶಾಚಿಯು ಮಾತನ್ನು ಮುಗಿಸಿತು. ಆಗ ವ್ಯಾಪಾರಿಯು ''ತಂದೆಯೇ, ಈಗ ನಾನು ಮಾಡತಕ್ಕದ್ದೇನೆಂಬುದನ್ನು ಆಜ್ಞಾಪಿಸು'' ಎಂದಾಗ ಪಿಶಾಚಾಧಿಪತಿಯು ಹೇಳಿತು -

''ನಿನಗೆ ಶ್ರೇಯಸ್ಕರವಾಗುವಂತೆಯೂ ನನಗೂ ಮುಂದೆ ಹಿತವಾಗುವಂತೆಯೂ ಹೇಳುತ್ತೇನೆ ಕೇಳು. ಗಯಾತೀರ್ಥದಲ್ಲಿ ಸ್ನಾನ ಮಾಡಿ ಪರಿಶುದ್ಧವಾದ ಮನಸ್ಸಿನಿಂದ ಹೋಮಾದಿಗಳನ್ನು ತೀರಿಸಿ ನನ್ನನ್ನುದ್ದೇಶಿಸಿ ನನ್ನ ನಾಮೋಚ್ಚಾರಪೂರ್ವಕವಾಗಿ ಪಿಂಡದಾನ ಮಾಡು. ಹಾಗೆ ನೀನು ಮಾಡುವದರಿಂದ ನಾನೂ ಸಹ ಪ್ರೇತಭಾವದಿಂದ ನಿವೃತ್ತಿ ಹೊಂದಿ ದಿವ್ಯ ಲೋಕವನ್ನು ಹೊಂದುವೆನು. ಭಾದ್ರಪದ ಮಾಸದ ಶುಕ್ಲ ಪಕ್ಷ ಬುಧವಾರ ಶ್ರವಣಾ ನಕ್ಷತ್ರದಿಂದ ಕೂಡಿದ ದ್ವಾದಶೀ ತಿಥಿಯು ಅತಿ ಪುಣ್ಯಕರವಾದುದೆಂದು ನೀನು ತಿಳಿ. ಹೀಗೆ ಆತನಿಗೆ ಹೇಳಿ ತನ್ನ ಭೃತ್ಯರಿಂದೊಡಗೂಡಿ ಆ ಪಿಶಾಚಾಧಿಪತಿಯು ಆ ವ್ಯಾಪಾರಿಯನ್ನು ತನ್ನ ಹೆಗಲ ಮೇಲೆ ಕೂಡಿಸಿಕೊಂಡು ಮರುಭೂಮಿಯನ್ನು ದಾಟಿಸಿ ರಮ್ಯವಾದ ಶೂರಸೇನವೆಂಬ ದೇಶಕ್ಕೆ ಕಳುಹಿಸಿಕೊಟ್ಟನು.

ಅಲ್ಲಿ ಹೋದ ನಂತರ ವ್ಯಾಪಾರಿಯು ದೈವಬಲದಿಂದ ಬಹಳ ಧನವನ್ನು ಸಂಪಾದಿಸಿ ಉತ್ತಮವಾದ ಗಯಾ ತೀರ್ಥಕ್ಕೆ ಹೊರಟು ಹೋದನು. ಅಲ್ಲಿ ತನಗೆ ಉಪಕಾರ ಮಾಡಿದ ಪಿಶಾಚಿ ವರ್ಗಕ್ಕೂ ಹಾಗೂ ಪಿತೃಗಳಿಗೂ ಪಿಂಡ ದಾನವನ್ನು ಮಾಡಿ ಆ ವ್ಯಾಪಾರಿಯು ತನ್ನ ಸದ್ಗತಿಯನ್ನೂ ಆಲೋಚಿಸಿ ತಿಲರಹಿತವಾದ ಆತ್ಮಶ್ರಾದ್ಧವನ್ನು ಮಾಡಿದನು. ಗೋತ್ರ ಜ್ಞಾತಿಗಳನ್ನುದ್ದೇಶಿಸಿ ಪಿಂಡ ಪ್ರದಾನವನ್ನು ಮಾಡಿದನು. ಹೀಗೆ ಮನಃಶುದ್ಧಿಯಿಂದ ಪಿಂಡದಾನವನ್ನು ಮಾಡಿದ ತತ್‌ಕ್ಷಣದಲ್ಲಿಯೇ ಆ ಬ್ರಾಹ್ಮಣರು ತಮ್ಮ ಪಿಶಾಚಧರ್ಮದಿಂದ ಬಿಡುಗಡೆ ಹೊಂದಿ ಬ್ರಹ್ಮಲೋಕಕ್ಕೆ ಹೋದರು. ಇತ್ತ ಆ ವ್ಯಾಪಾರಿಯೂ ಸಹ ಪಿಂಡ ದಾನ ಮಾಡಿ ಕೃತಕೃತ್ಯನಾಗಿ ತನ್ನ ಮನೆಗೆ ಬಂದನು. ಕಾಲಕ್ರಮಕ್ಕನುಸರಿಸಿ ಆತನು ಮರಣವನ್ನು ಹೊಂದಿದನು. ನಂತರ ಆತನು ಗಂಧರ್ವ ಲೋಕವನ್ನು ಹೊಂದಿ ದುರ್ಲಭವಾದ ಭೋಗಗಳನ್ನು ಬಹಳ ಕಾಲವರೆಗೆ ಅನುಭವಿಸಿ ಪುನಃ ಮನುಷ್ಯನಾಗಿ ಜನಿಸಿ ಸಾಕಷ್ಟು ಸುಖೋಪ ಭೋಗಗಳನ್ನು ಹೊಂದಿ ಶ್ರವಣ ದ್ವಾದಶೀ ಆಚರಣೆಯನ್ನು ಮಾಡುತ್ತ ದೇಹ ತ್ಯಾಗ ಮಾಡಿದ್ದರಿಂದ ಗುಹ್ಯಲೋಕಕ್ಕೆ ಹೋದನು. ಪುಣ್ಯಕ್ಷಯವಾದ ನಂತರ ಮತ್ತೆ ಮನುಷ್ಯ ಲೋಕಕ್ಕೆ ಬಂದನು.

ಈ ಸಲ ಆತನು ಕ್ಷತ್ರಿಯನಾದನು. ಕ್ಷತ್ರಿಯ ವೃತ್ತಿಗೆ ತಕ್ಕಂತೆ ದಾನ ಭೋಗಗಳಲ್ಲಿ ನಿರತನಾಗಿ ಜಿತೇಂದ್ರಿಯನಾಗಿ ದೇಹವನ್ನು ಬಿಟ್ಟಿದ್ದರಿಂದ ಆತನು ಇಂದ್ರಲೋಕಕ್ಕೆ ಹೋಗಿ ದೇವತೆಗಳ ಆದರ ಮನ್ನಣೆಗಳಿಗೆ ಪಾತ್ರನಾದನು. ಪುಣ್ಯಕ್ಷಯವಾಗುವವರೆಗೆ ಅಲ್ಲಿ ಇದ್ದು ಮತ್ತೆ ಭೂಲೋಕಕ್ಕೆ ಬಂದ ಶಾಕಲ ನಗರದಲ್ಲಿ ಬ್ರಾಹ್ಮಣನಾಗಿ ಹುಟ್ಟಿದನು.

ತಾನು ಸ್ವತಃ ಕುರೂಪಿಯಾಗಿದ್ದರೂ ಸರ್ವಶಾಸ್ತ್ರ ಸಂಪನ್ನನಾಗಿ ಅಸದೃಶ ರೂಪವುಳ್ಳ ಒಬ್ಬ ಬ್ರಾಹ್ಮಣ ಕನ್ನಿಕೆಯನ್ನು ವಿವಾಹ ಮಾಡಿಕೊಂಡನು. ಆ ಕನ್ಯೆಯು ತನ್ನ ಪತಿಯು ಈ ರೀತಿ ಕುರೂಪಿಯಾದುದಕ್ಕೆ ಬಹಳ ಪಶ್ಚಾತ್ತಾಪಪಟ್ಟಳು. ಇದನ್ನು ತಿಳಿದ ಬ್ರಾಹ್ಮಣನಿಗೆ ಕೆಡುಕೆನಿಸಿತು. ಆಗ ಅವನು ಇರಾವತೀ ದಡದಲ್ಲಿ ಒಂದು ಆಶ್ರಮವನ್ನು ಕಟ್ಟಿಕೊಂಡು ಅಲ್ಲಿ ರೂಪಧಾರಿಯೆಂಬ ಜಗತ್ಪತಿಯನ್ನು ನಕ್ಷತ್ರ ಪುರುಷರೊಡನೆ ಆರಾಧಿಸಿ ಅತೀವ ಸುಂದರವಾದ ರೂಪವನ್ನು ಹೊಂದಿದನು. ಅನಂತರ ಸುರೂಪಿಯಾದ ಆ ಬ್ರಾಹ್ಮಣನು ತನ್ನ ಹೆಂಡತಿಯ ಪ್ರೀತಿಗೆ ಪಾತ್ರನಾಗಿ ಭೋಗಿಯೂ, ತ್ಯಾಗಿಯೂ ಆಗಿ ಬದುಕಿದನು.

ಪೂರ್ವ ಜನ್ಮದ ಸಂಸ್ಕಾರಗಳಿಂದ ಮತ್ತೆ ಅವನು ಶ್ರವಣ ದ್ವಾದಶೀ ಆಚರಣದಲ್ಲಿ ನಿರತನಾದುದರಿಂದ ಭಗವದನುಗ್ರಹದಿಂದ ಮನ್ಮಥ ಸದೃಶವಾದ ಸುಂದರ ರೂಪವನ್ನು ಧರಿಸಿದನು. ಹಾಗೆಯೇ ಧರ್ಮನಿಷ್ಠನಾಗಿ ಮೃತನಾದುದರಿಂದ ಮತ್ತೆ ಉತ್ತರ ಜನ್ಮದಲ್ಲಿ ಪುರೂರವನೆಂಬ ರಾಜರ್ಷಿಯಾಗಿ ಜನಿಸಿದನು.

ವಾಮನ ಮಹಾಪುರಾಣದಲ್ಲಿ ದಾನದ ಮಹಿಮೆ ಎಂಬ ೭೯ನೇಯ ಅಧ್ಯಾಯವು ಮುಗಿದುದು



## ನಕ್ಷತ್ರ ಪುರುಷ

**ಅಧ್ಯಾಯ - ೮೦**

**೯೮. ಪುರೂರವಾ ದ್ವಿಜಶ್ರೇಷ್ಠ ಯಥಾ ದೇವಂ ಶ್ರಿಯಃ ಪತಿಂ ।**
**ನಕ್ಷತ್ರ ಪುರುಷಾಖ್ಯೇನ ಆರಾಧಯತ ತದ್ವದ ॥**

ಪುರೂರವನು ಶ್ರೀಪತಿಯಾದ ರೂಪೇಶ್ವರನನ್ನು ನಕ್ಷತ್ರ ಪುರುಷರೂಪದಿಂದ ಹೇಗೆ ಆರಾಧಿಸಿದನೆಂಬ ನಾರದರ ಪ್ರಶ್ನೆಗೆ ಪುಲಸ್ತ್ಯರು ಹೇಳುತ್ತಾರೆ - ದೇವ ದೇವನ ಅವಯವಗಳು ನಕ್ಷತ್ರಗಳಿಗೆ ಹೇಗೆ ಆಶ್ರಯವಾಗಿದೆ. ಎಂಬುದನ್ನು ಹೇಳುತ್ತೇನೆ ಕೇಳು. ಇದರಿಂದ ನಕ್ಷತ್ರ ಪುರುಷ ವ್ರತವನ್ನು ಹೇಳಿದಂತಾಗುವದು. ಮೂಲಾ ನಕ್ಷತ್ರವು ವಿಷ್ಣುವಿನ ಪಾದದಲ್ಲಿಯೂ, ರೋಹಿಣೀ ನಕ್ಷತ್ರವು ಮೊಳ ಕಾಲುಗಳಲ್ಲಿಯೂ ಅಶ್ವಿನಿಯು ಕುತ್ತಿಗೆಯ ಕೆಳಭಾಗದಲ್ಲಿಯೂ ಆಶ್ರಯಿಸಿವೆ. ಆಷಾಢ ದ್ವಯವು ಟೊಂಕಾದ ಮೇಲ್ಭಾಗವನ್ನು ಪೂರ್ವಾ, ಉತ್ತರಾ ನಕ್ಷತ್ರಗಳು ಗುಹ್ಯ ಪ್ರದೇಶವನ್ನು, ಕೃತ್ತಿಕಾ ನಕ್ಷತ್ತರಗಳೂ ಟೊಂಕಾದ ಭಾಗವನ್ನು, ಅನುರಾಧಾ, ವಿಶಾಖಾ, ಹಸ್ತಾ, ಪುನರ್ವಸು, ಆಶ್ಲೇಷಾ, ಜ್ಯೇಷ್ಠಾ, ಶ್ರವಣ, ಪುಷ್ಯ, ಸ್ವಾತಿ ಈ ನಕ್ಷತ್ರಗಳು ಭುಜ, ಕರ, ಪಾದ, ಉಗುರು, ಕುತ್ತಿಗೆ, ಕರ್ಣ, ತುಟಿ, ಹಲ್ಲುಗಳನ್ನು ಆಶ್ರಯಿಸಿವೆ.

ಈ ರೀತಿ ನಕ್ಷತ್ರ ಪುರುಷರು ಹರಿಯ ಅಂಗಾಂಗಗಳಲ್ಲಿ ನೆಲೆಸಿರುವರು. ಹೀಗೆ ಅನುಸಂಧಾನಪೂರ್ವಕ ಆರಾಧಿಸಲ್ಪಟ್ಟ ಹರಿಯು ಸಕಲ ಇಷ್ಟಾರ್ಥಗಳನ್ನು ಕೊಡುವನು. ಚೈತ್ರ ಶುಕ್ಲ ಅಷ್ಟಮಿಯಲ್ಲಿ ಚಂದ್ರನು ಮೂಲಾ ನಕ್ಷತ್ರದಲ್ಲಿರುವಾಗ ಹರಿಯ ಪಾದಗಳನ್ನು ಯಥಾವಿಧಿಯಾಗಿ ಪೂಜಿಸಬೇಕು. ರೋಹಿಣಿಯಲ್ಲಿ ಚಂದ್ರನಿರುವಾಗ ಹರಿಯ ಮೊಳಕಾಲನ್ನು ಪೂಜಿಸಬೇಕು. ವಿಶೇಷತೃಪ್ತಿಗಾಗಿ ಆಜ್ಯಾನ್ನವನ್ನು ಸಮರ್ಪಿಸಬೇಕು.

ಹೀಗೆಯೇ ಆಷಾಢದ್ವಯದಲ್ಲಿ ಚಂದ್ರನಿರುವಾಗ ಕಟಿಪ್ರದೇಶವನ್ನೂ, ಹುಬ್ಬಾ ಉತ್ತರಾಗಳಲ್ಲಿ ಚಂದ್ರನಿರುವಾಗ ಗುಹ್ಯ ಪ್ರದೇಶವನ್ನೂ ಕೃತ್ತಿಕಾ ನಕ್ಷತ್ರದಲ್ಲಿ ಚಂದ್ರ ನಿರುವಾಗ ಕಟಿಪ್ರದೇಶವನ್ನೂ ಭಾದ್ರಪದಯುಗ್ಮದಲ್ಲಿ ಚಂದ್ರನಿರುವಾಗ ಪಾರ್ಶ್ವ ಭಾಗವನ್ನೂ ರೇವತಿಯಲ್ಲಿ ಚಂದ್ರನಿರುವಾಗ ಕುಕ್ಷಿಪ್ರದೇಶವನ್ನೂ ಆರಾಧಿಸಬೇಕು.

ಹಸ್ತ ನಕ್ಷತ್ರಗಳಲ್ಲಿ ಹಸ್ತಗಳನ್ನು ಪೂಜಿಸಿ ಅರಗಿನ ರಸವನ್ನು ಸಮರ್ಪಿಸಬೇಕು. ಪುನರ್ವಸು ನಕ್ಷತ್ರದಲ್ಲಿ ಅಂಗುಲಿಯನ್ನು ಪೂಜಿಸಬೇಕು. ವಿಶೇಷ ಪ್ರೀತಿಗಾಗಿ ಪಡವಲಕಾಯಿಯನ್ನು ಸಮರ್ಪಿಸಬೇಕು. ಹೀಗೆ ಬೇರೆ ಬೇರೆ ನಕ್ಷತ್ರಗಳಲ್ಲಿ ಬೇರೆ ಬೇರೆ ಅವಯವಗಳನ್ನು ಪೂಜೆ ಮಾಡಿ ತತ್ಪ್ರೀತಿಕರವಾದ ಬೇರೆ ಬೇರೆ ಪದಾರ್ಥಗಳನ್ನು ಸಮರ್ಪಿಸಬೇಕು. ಈ ರೀತಿ ಪೂಜಿಸುವದೇ ನಕ್ಷತ್ರ ಪುರುಷ ಪೂಜೆ ಎಂದು ಪ್ರಸಿದ್ಧವಿದೆ.

ಸರ್ವಪಾಪ ನಾಶಕವಾದ ಈ ವ್ರತವನ್ನು ಪೂರ್ವದಲ್ಲಿ ಭೃಗುವು ಆಚರಿಸಿದನು. ಪ್ರಭುವಿನ ಈ ಅಂಗೋಪಾಂಗಗಳನ್ನು ಭಕ್ತಿಯಿಂದ ಪೂಜಿಸುವದರಿಂದ ಮನುಷ್ಯನ ಅಂಗೋಪಾಂಗಗಳೂ ಸ್ವರೂಪವುಳ್ಳದ್ದಾಗುತ್ತದೆ. ಏಳೂ ಜನ್ಮಗಳಿಂದ ಮಾಡಿದ ಪಾಪಗಳೆಲ್ಲವನ್ನೂ ಈ ರೀತಿ ಪೂಜಿಸಲ್ಪಟ್ಟ ಕೇಶವನು ನಾಶಮಾಡುವನು. ಉತ್ತಮವಾದ ದೇಹಾರೋಗ್ಯವು ಆತನಿಗೆ ಪ್ರಾಪ್ತವಾಗುತ್ತದೆ. ಸಂಪ್ರೀತನಾದ ನಕ್ಷತ್ರ ಪುರುಷನು ಪೂಜಕನ ವಾಙ್ಮಾಧುರ್ಯವನ್ನೂ ದೇಹಕಾಂತಿಯನ್ನೂ ಕೊಡುವನು. ಈ ತೆರನಾದ ಪೂಜೆಯಿಂದ ಅರುಂಧತೀ ದೇವಿಯು ಪ್ರಖ್ಯಾತಿ ಪಡೆದಳು.

ಅದಿತಿಯು ಸಹ ನಕ್ಷತ್ರ ಪುರುಷ ಪೂಜೆಯಿಂದಲೇ ರೈವತದಲ್ಲಿ ಸುರೂಪನಾದ ಪುತ್ರನನ್ನೂ ಪಡೆದಳು. ರಂಭೆಯು ರೂಪವನ್ನು ಹೊಂದಿದಳು. ತಿಲೋತ್ತಮೆಯು ವಾಙ್ಮಾಧುರ್ಯವನ್ನು ಹೊಂದಿದಳು. ಪುರೂರವನು ರಮ್ಯವಾದ ಕಾಂತಿಯನ್ನೂ, ರಾಜ್ಯವನ್ನೂ ಹೊಂದಿದನು. ಈ ವಿಧಾನದಿಂದ ನಕ್ಷತ್ರ ಪುರುಷನನ್ನು ಆರಾಧಿಸಿದವರು ತಮ್ಮ ಇಷ್ಟಾರ್ಥವನ್ನು ಹೊಂದಿದ್ದಾರೆ. ಇಂಥ ಪುರುಷರಿಗೆ ಮಂಗಲಕರವಾದ ನಕ್ಷತ್ರ ಪುರುಷ ಪೂಜಾ ವಿಧಾನವನ್ನು ಪ್ರಹ್ಲಾದನ ಪುಣ್ಯಕರವಾದ ತೀರ್ಥಯಾತ್ರಾ ಪ್ರಸಂಗದಲ್ಲಿ ನೀನು ಕೇಳಿದ್ದಾಯಿತು.

ವಾಮನ ಮಹಾಪುರಾಣದಲ್ಲಿ ನಕ್ಷತ್ರ ಪುರುಷ ಎಂಬ ಎಂಬತ್ತನೇಯ ಅಧ್ಯಾಯವು ಮುಗಿದುದು

—o—

೯೯. ಇರಾವತೀಮನುಪ್ರಾಪ್ಯ ಪುಣ್ಯಾಂ ತಾಮೃಷಿ ಕನ್ಯಕಾಂ ।
ಸ್ನಾತ್ವಾ ಸಂಪೂಜಯಾಮಾಸ ಚೈತ್ರಾಷ್ಟಮ್ಯಾಂ ಜನಾರ್ದನಂ ॥

**ಪುಲಸ್ತ್ಯರು ಹೇಳುತ್ತಾರೆ :** ಅನಂತರ ಪ್ರಹ್ಲಾದನು ಇರಾವತೀ ನದಿಯಲ್ಲಿ ಸ್ನಾನ ಮಾಡಿ ನಕ್ಷತ್ರ ಪುರುಷನನ್ನು ಆರಾಧಿಸಿ ಚೈತ್ರಾಷ್ಟಮಿಯಲ್ಲಿ ಜನಾರ್ದನನನ್ನು ಪೂಜಿಸಿ ಅಲ್ಲಿಂದ ಕುರುಕ್ಷೇತ್ರಕ್ಕೆ ತೆರಳಿದನು. ಅಲ್ಲಿ ಐರಾವತ ಮಂತ್ರದಿಂದ ಚಕ್ರತೀರ್ಥವನ್ನು ಆಮಂತ್ರಿಸಿ ಯಥಾ ವಿಧಿಸ್ನಾನ ಮಾಡಿ ಅಲ್ಲಿದ್ದ ಕುರುಧ್ವಜನನ್ನು ದರ್ಶನ ಮಾಡಿಕೊಂಡು ಮುಂದೆ ಹೊರಟನು. ಅನಂತರ ದೇವಿಕಾ ನದಿಯಲ್ಲಿ ಸ್ನಾನ ಮಾಡಿ ಅಲ್ಲಿ ನರಸಿಂಹನನ್ನು ಪೂಜಿಸಿ ಗೋಕರ್ಣಕ್ಕೆ ಹೊರಟನು. ಅಲ್ಲಿ ವಿಶ್ವಪತಿಯಾದ ಈಶ್ವರನನ್ನು ಪೂಜಿಸಿ ಕಾಮೇಶ್ವರನನ್ನು ಸೇವಿಸಲು ಹೊರಟನು. ಅನಂತರ ಮಹಾಂಭಸ್ತೀರ್ಥದಲ್ಲಿ ಪುಂಡರೀಕನನ್ನು ಸೇವಿಸಿ ಪಿತೃ ದೇವತೆಗಳನ್ನು ತೃಪ್ತಿಪಡಿಸಿ ಕೃಷ್ಣ ತೀರ್ಥಕ್ಕೆ ಬಂದನು. ಅಲ್ಲಿ ಸ್ನಾನ ಮಾಡಿ ಮೂರು ದಿವ ವಾಸವಾಗಿದ್ದು ಹಂಸ ಪದ ಕ್ಷೇತ್ರಕ್ಕೆ ಬಂದು ಅಲ್ಲಿ ಹಂಸ ಮೂರ್ತಿಯನ್ನು ದರ್ಶನ ಮಾಡಿಕೊಂಡು ಮುಂದೆ ಅಖಂಡಾಚ್ಯುತನನ್ನು ಸೇವಿಸಲು ಹೊರಟನು. ಅಲ್ಲಿಯೇ ಪಯೋಷ್ಣೀ ತೀರ್ಥವಿರುವದು. ಅಲ್ಲಿ ಸ್ನಾನ ಮಾಡಿ ಕುಮಾರಿಲನ ದರ್ಶನಕ್ಕಾಗಿ ಹೊರಟನು.

ಅಲ್ಲಿ ವಾಲಖಿಲ್ಯರು ಮರೀಚಿಗಳು ಸ್ನಾನ ಮಾಡಿದ್ದಾರೆ. ಆ ತೀರ್ಥದಲ್ಲಿ ಕಾಮಧೇನುವು ದೇವತೆಗಳ ಸಂತೋಷಕ್ಕಾಗಿ ಹಾಗೂ ಜನರ ಹಿತಕ್ಕಾಗಿ ಕಪಿಲೆ ಎಂಬ ಮಗಳನ್ನು ಸೃಷ್ಟಿಸಿತು. ಅನಂತರ ಪ್ರಹ್ಲಾದನು ಶಂಭುವನ್ನು ಪೂಜಿಸಿ ಮಣಿ ಮಂತವೆಂಬ ಕ್ಷೇತ್ರಕ್ಕೆ ಹೊರಟನು. ಆ ಮೇಲೆ ಅವನು ಮಧುನಂದಿನಿಗೆ ಹೊರಟನು. ಆ ತೀರ್ಥದಲ್ಲಿ ಸ್ನಾನ ಮಾಡಿ ಚಕ್ರಧಾರಿಯಾದ ಹರನನ್ನು ಶೂಲಧಾರಿಯಾದ ವಿಷ್ಣುವನ್ನು ದರ್ಶನ ಮಾಡಿಕೊಂಡನು.

**ಆಗ ನಾರದರು :** "ಶಂಭುವು ಏಕೆ ಸುದರ್ಶನವನ್ನು ಧರಿಸಿದ? ವಾಸುದೇವನು ಏಕೆ ಶೂಲವನ್ನು ಧರಿಸಿದ?" ಎಂದು ಪ್ರಶ್ನೆ ಮಾಡಲು ಪುಲಸ್ತ್ಯರು ಹೇಳುತ್ತಾರೆ. ಹಿಂದೆ ವಿಷ್ಣುವು ಪುನಃ ನಾನು ಭೂಮಿಯಲ್ಲಿ ಅವತರಿಸುವೆನೆಂದು ಒಂದು ಕಥೆಯನ್ನು ದೇವತೆಗಳಿಗೆ ತಾನೇ ಹೇಳಿದನು. ಹಿಂದೊಂದು ಕಾಲಕ್ಕೆ ಜಲೋದ್ಭವನೆಂಬ ಮಹಾಸುರನು ಬಹಳ ಪರಾಕ್ರಮ ಶಾಲಿಯಾಗಿದ್ದು ಘೋರವಾದ ತಪಸ್ಸನ್ನಾಚರಿಸಿ ಬ್ರಹ್ಮನನ್ನು ಮೆಚ್ಚಿಸಿದನು. ಪ್ರಸನ್ನನಾದ ಬ್ರಹ್ಮನು ದೇವಾಸುರರಿಂದ ವಧ ಹೊಂದದೇ ಇರತಕ್ಕ ಒಂದು ವರವನ್ನು ಕೊಟ್ಟನು. ಹೀಗೆ ಅಜೇಯನಾಗಿದ್ದ ಶತ್ರುವು ತನ್ನ ದರ್ಪದಿಂದ ಅಶಾಂತನಾದನು. ದೇವತೆ ಗಳನ್ನು ಮಹರ್ಷಿಗಳನ್ನು ಎಲ್ಲ ರಾಜರುಗಳನ್ನು ಬಾಧಿಸುತ್ತ ಸತ್ಕರ್ಮಗಳಿಗೆಲ್ಲ ವಿಘ್ನಗಳನ್ನು ತಂದೊಡ್ಡಿದನು.

ಆಗ ದೇವತೆಗಳು ಆಸರವಿಲ್ಲದವರಾಗಿ ಶ್ರೀಹರಿಯಲ್ಲಿ ಶರಣಾಗತರಾದರು. ಆಗ ಹರಿಯು ದೇವತೆಗಳೊಡನೆ ಹಿಮಾಚಲದಲ್ಲಿರುವ ಹರನ ಸಮೀಪಕ್ಕೆ ಹೋದನು.

ದೇವತೆಗಳಿಗೆ ಹೇಗೆ ಹಿತ ಮಾಡಬೇಕೆಂದು ಹರನೊಡನೆ ಕೂಡಿಕೊಂಡು ಸಮಾಲೋಚನೆ ಮಾಡಿ ಹರಿಹರರು ನಿರಾಯುಧರಾಗಿಯೇ ಶತ್ರುಗಳನ್ನು ಹುಡುಕಲಾರಂಭಿಸಿದರು. ಕೊಲ್ಲಲು ಬರುತ್ತಿರುವ ಇವರಿಬ್ಬರನ್ನು ನೋಡಿ ಜಲೋದ್ಭವನು ಭಯದಿಂದ ನೀರಿನಲ್ಲಿ ಪ್ರವೇಶಿಸಿದನು. ಹರಿಹರರಿಬ್ಬರೂ ನದಿಯ ದಂಡೆಯಲ್ಲಿಯೇ ಅತನ ನಿರೀಕ್ಷಣೆಯಲ್ಲಿಯೇ ಗೂಢವಾದ ರೂಪದಲ್ಲಿ ನಿಂತರು.

ಆಗ ಆ ದಾನವನು ಭಯದಿಂದ ನಡುಗಿ ಹೇಗೋ ತನ್ನ ಪ್ರಾಣ ರಕ್ಷಣೆಗಾಗಿ ಹಿಮವತ್ ಪರ್ವತಕ್ಕೆ ಹೊಕ್ಕನು. ಹರಿ ಶಂಕರರು ಅಲ್ಲಿಯೂ ಕೂಡ ಆತನನ್ನು ಬೆನ್ನಟ್ಟಿದರು. ಸಶಸ್ತ್ರರಾಗಿ ಬರುತ್ತಿರುವ ಅಂದರೆ ವಿಷ್ಣುವು ಶೂಲಧಾರಿಯಾಗಿಯೂ, ಹರನು ಚಕ್ರಧಾರಿಯಾಗಿಯೂ ವೇಗದಿಂದ ಆ ಗಿರಿ ಶಿಖರಕ್ಕೆ ಓಡಿ ಬಂದರು.

ಅವರನ್ನು ನೋಡಿ ದಾನವನು ಚಕ್ರಶೂಲಗಳಿಂದ ಕತ್ತರಿಸಲ್ಪಟ್ಟ ದೇಹವುಳ್ಳವನಾಗಿ ಆಕಾಶದಿಂದ ನಕ್ಷತ್ರವು ಕಳಚಿ ಬೀಳುವಂತೆ ಕೆಳಗೆ ಬಿದ್ದನು. ಹೀಗೆ ಶತ್ರು ಸಂಹಾರಕ್ಕಾಗಿ ವಿಷ್ಣುವು ತ್ರಿಶೂಲವನ್ನೂ ಹರನು ಚಕ್ರವನ್ನೂ ಧರಿಸಿದರು.

ಆ ದಾನವನು ಯಾವ ಸ್ಥಳದಲ್ಲಿ ಶೂಲಪ್ರಹಾರದಿಂದ ಭಿನ್ನನಾಗಿ ಪರ್ವತದಿಂದ ಭೂಮಿಗೆ ಬಿದ್ದನೋ, ಶಂಕರ ವಾಸುದೇವರು ಹೊರಟುಹೋದರೆಂದು ತಿಳಿದು ಹಿಮವತ್ ಪರ್ವತಕ್ಕೆ ಓಡಲು ನೀರಿನಿಂದ ಮೇಲಕ್ಕೆ ಎದ್ದನೋ ಅಂಥ ಹರಿಹರ ಸೇವಿತವಾಗಿದ್ದ ತೀರ್ಥವನ್ನು ಹೊಂದಿ ದೈತ್ಯಾಧಿಪತಿಯಾದ ಪ್ರಹ್ಲಾದನು ಶಿವ ವಿಷ್ಣು ಮಾರ್ಗವನ್ನು ಹೊಂದಿರುವ ಶಂಕರನನ್ನು ಸೇವಿಸಲು ಹಿಮವತ್ ಪರ್ವತಕ್ಕೆ ಬಂದನು.

ಅಲ್ಲಿ ಶಂಕರನನ್ನೂ, ಹರಿಯನ್ನೂ ಯಥೋಚಿತವಾಗಿ ಪೂಜಿಸಿ ಬ್ರಾಹ್ಮಣರ ಭೋಜನ ಮಾಡಿಸಿ ವಿತಸ್ತಾ ಹಾಗೂ ಹಿಮವತಿ ಎರಡು ನದಿಯನ್ನು ಸೇವಿಸಿ ಭೃಗುತುಂಗ ಎಂಬ ಕ್ಷೇತ್ರಕ್ಕೆ ಬಂದನು. ಆ ಸ್ಥಳದಲ್ಲಿಯೇ ಮಹಾತ್ಮನಾದ ಶಂಕರನು ಶತ್ರುನಾಶಕವಾದ ಚಕ್ರದ ಸಾಮರ್ಥ್ಯವನ್ನು ತಿಳಿದು ಅಂತಹ ದಿವ್ಯಾಯುಧವನ್ನು ವಿಷ್ಣುವಿಗೆ ಕೊಟ್ಟನು.

ವಾಮನ ಮಹಾಪುರಾಣದಲ್ಲಿ ಜಲೋದ್ಭವ ದಾನವ ಎಂಬ ೮೧ನೇಯ ಅಧ್ಯಾಯವು ಮುಗಿದುದು.

—o—

೧೦೦. ಭಗವಾನ್ ಲೋಕನಾಥಾಯ ವಿಷ್ಣವೇ ವಿಷಮೇಕ್ಷಣಃ ।
ಕಿಮರ್ಥಮಾಯುಧಂ ಚಕ್ರಂ ದತ್ತವಾನ್ ಲೋಕಪೂಜಿತಂ ॥

''ಶಂಕರನು ವಿಷ್ಣುವಿಗೆ ಏಕೆ ಚಕ್ರಾಯುಧವನ್ನು ಕೊಟ್ಟನು? ಎಂಬ ನಾರದರ ಪ್ರಶ್ನೆಗೆ ಪುಲಸ್ತ್ಯರು ಉತ್ತರ ಹೇಳುತ್ತಾರೆ.

''ವೇದ ವೇದಾಂಗ ಪಾರಂಗತನಾದ ವೀತಮನ್ಯು ಎಂಬ ಒಬ್ಬ ಬ್ರಾಹ್ಮಣನು ತನ್ನ ಗಾರ್ಹಸ್ಥ್ಯ ಧರ್ಮವನ್ನು ನಡೆಸುತ್ತಿದ್ದನು. ಅವನಿಗೆ ಧರ್ಮಪರಾಯಣಳಾದ ಧರ್ಮಶೀಲಾ ಎಂಬ ಪತ್ನಿಯು ಇದ್ದಳು. ಅವಳು ತನ್ನ ಪತಿಯನ್ನು ತನ್ನ ಪ್ರಾಣವೆಂದೇ ತಿಳಿಯುತ್ತಿದ್ದಳು. ಬಹಳ ದಿವಸದವರೆಗೆ ಅವರಿಗೆ ಸಂತಾನವಿರಲಿಲ್ಲ. ಕೊನೆಗೆ ಯೋಗ್ಯ ಋತುಕಾಲ ಗಮನದಿಂದ ಪತ್ನಿಯಲ್ಲಿ ಉಪಮನ್ಯು ಎಂಬ ಮಗನು ಜನಿಸಿದನು.

ದರಿದ್ರರಾದುದರಿಂದ ತಾಯಿಯ ಅಕ್ಕಿಯ ಹಿಟ್ಟಿನ ರಸವನ್ನೇ ಹಾಲೆಂದು ಹೇಳಿ ಕೊಟ್ಟು ತನ್ನ ಮಗನನ್ನು ಪೋಷಿಸಿದಳು. ಹೀಗಾಗಿ ಉಪಮನ್ಯುವು ಹಾಲಿನ ನಿಜವಾದ ರುಚಿಯನ್ನೇ ತಿಳಿದಿರಲಿಲ್ಲ. ಒಂದು ದಿನ ಆ ಬಾಲಕನು ತನ್ನ ತಂದೆಯೊಡನೆ ಒಬ್ಬ ಬ್ರಾಹ್ಮಣನ ಮನೆಗೆ ಊಟಕ್ಕೆ ಹೋಗಿದ್ದನು. ಅಲ್ಲಿ ಆತನು ಕ್ಷೀರಾನ್ನವನ್ನೂಟ ಮಾಡಿದನು. ಅಲ್ಲಿ ಅತನಿಗೆ ಹಾಲಿನ ನಿಜವಾದ ರುಚಿ ತಿಳಿಯಿತು.

ಮಾರನೇಯ ದಿನ ತಾಯಿಯ ಕೊಟ್ಟ ಅಕ್ಕಿಹಿಟ್ಟಿನ ರಸವನ್ನು ಅಲ್ಲಗಳೆದನು. ಹಾಲಿಗಾಗಿ ಬಹಳ ಅಂಗಲಾಚಿದನು. ಅಳುತ್ತಿರುವ ಮಗನನ್ನು ಕುರಿತು ತಾಯಿಯು ದುಃಖದಿಂದ ಕಣ್ಣೀರುದುರಿಸುತ್ತ ಗದ್ಗದ ಸ್ವರದಿಂದ ಹೇಳಿದಳು.

''ಮಗುವೇ, ಪಾರ್ವತೀಪತಿಯಾದ ಪರಮೇಶ್ವರನು ಪ್ರಸನ್ನನಾಗದ ಹೊರತು ನಿನಗೆ ಹಾಲಿನ ಭೋಜನವು ಹೇಗೆ ದೊರೆತೀತು! ನೀನು ಸರಿಯಾದ ಹಾಲನ್ನು ಅಪೇಕ್ಷಿಸುವದಾದರೆ ತ್ರಿಶೂಲಿಯಾದ ಪರಮಾತ್ಮನನ್ನಾರಾಧಿಸು. ಜಗನ್ಮೂರ್ತಿಯಾದ ಆತನು ಪ್ರಸನ್ನನಾದರೆ ಹಾಲಿನದೇನು ಮಹತ್ವ? ಅಮೃತ ಪಾನವೇ ಲಭಿಸೀತು!'' ಈ ತಾಯಿಯ ಮಾತನ್ನು ಕೇಳಿ ಬಾಲಕನು ''ಆರಾಧಿಸಬೇಕಾದ ಆ ವಿರೂಪಾಕ್ಷನಾರು?'' ಎಂದು ಪ್ರಶ್ನೆ ಕೇಳಿದನು. ಆಗ ಧರ್ಮಶೀಲೆಯ ಧರ್ಮಸಮ್ಮತವಾದ ಮಾತನ್ನು ಮಗನಿಗೆ ಹೇಳಿದಳು. ''ಮಗುವೇ ಕೇಳು, ಶ್ರೀದಾಮನೆಂಬ ಪ್ರಸಿದ್ಧನಾದ ಒಬ್ಬ ದಾನವನಿದ್ದನು. ಅವನು ಜಗತ್ತೆಲ್ಲವನ್ನು ಸುತ್ತಿ ತನ್ನ ದುರ್ವರ್ತನೆಯಿಂದ ಮೂರು ಲೋಕದ ಸಂಪತ್ತನ್ನೆಲ್ಲ ಅಪಹರಿಸಿದನು. ವಿಷ್ಣುವಿನ ಶ್ರೀವತ್ಸವೆಂಬ ರತ್ನವನ್ನು ಅಪಹರಿಸಲು ಇಚ್ಛೆಪಟ್ಟನು. ಆಗ ವಾಸುದೇವನು ಇವನ ಮನಸ್ಸಿನ ದುರಭಿಲಾಷೆಯನ್ನು ತಿಳಿದು ಅವನನ್ನು ನಾಶಮಾಡಬೇಕೆಂಬ ಇಚ್ಛೆಯಿಂದ ಶಂಕರನ ಸಮೀಪಕ್ಕೆ ಬಂದನು. ಆಗ ಶಂಕರನು ಹಿಮವತ್ ಪರ್ವತದ ಒಂದು ಭಾಗದಲ್ಲಿ ಯೋಗಸಮಾಧಿಯನ್ನು ಹೊಂದಿ ಧ್ಯಾನತನ್ಮಯನಾಗಿದ್ದನು. ಅ ಸಮಯಕ್ಕೆ ಹರಿಯು ಸಹಸ್ರಶೀರ್ಷವಾದ ತನ್ನ ರೂಪವನ್ನು ವ್ಯಕ್ತಪಡಿಸಿ ಯೋಗಿಯಾಗಿ ಕುಳಿತ ಶಂಕರನನ್ನು ಸ್ವಾತ್ಮಾಂತರ್ಯಾಮಿಯಾಗಿ ಭಾವಿಸಿ ಸತ್ಕರಿಸಿದನು.

ಹರಿಯ ಸಹಸ್ರವರ್ಷ ಪರ್ಯಂತರವಾಗಿ ಪಾದಾಂಗುಷ್ಠದಿಂದ ನಿಂತು ಶಿವನನ್ನು ಕುರಿತು ತಪಸ್ಸು ಮಾಡಿದನು. ಅನಂತರ ಸಂತುಷ್ಟನಾದ ಹರನು ವಿಷ್ಣುವಿಗೆ ತೇಜೋಭಾಸುರವಾದ ಸುದರ್ಶನವನ್ನು ಕೊಟ್ಟನು. ಸರ್ವಭೂತಮಯನಾದ ಶಂಕರನು ಉಜ್ವಲವಾದ ಚಕ್ರವನ್ನು ಕೊಟ್ಟು ವಿಷ್ಣುವಿಗೆ ಹೀಗೆ ಹೇಳಿದನು.

''ಇದು ಸರ್ವಾಯುಧನಾಶಕವಾದ ಸುದರ್ಶನವೆಂಬ ಅಸ್ತ್ರ. ಇದಕ್ಕೆ ಹನ್ನೆರಡು ಹಲ್ಲುಗಳುಂಟು. ಇದು ಪಕ್ಷಿಯಂತೆ ವೇಗಶಾಲಿಯಾಗಿದೆ. ಶಿಷ್ಟರನ್ನು ಸಂರಕ್ಷಣೆ ಮಾಡಲು ಇವರ ಹನ್ನೆರಡು ಹಲ್ಲುಗಳಲ್ಲಿ ದೇವತೆಗಳ ಸಾನ್ನಿಧ್ಯವುಂಟು. ಮಾಸ, ರಾಶಿ, ಋತುಗಳ ಸನ್ನಿಧಾನವಲ್ಲದೇ ಅಗ್ನಿ, ಚಂದ್ರ, ಸೂರ್ಯ ಮೊದಲಾದ ದೇವತೆಗಳೂ ವಾಸಿಸಿರುವರು. ಬಲಶಾಲಿಯಾದ ವಾಯುದೇವನೂ, ದೇವರ ವೈದ್ಯನಾದ ಧನ್ವಂತರಿಯೂ ಇದರಲ್ಲಿ ವಾಸಿಸಿರುವರು. ಈ ಚಕ್ರವನ್ನು ನೀನು ತೆಗೆದುಕೊಂಡು ನೀನು ದೇವತಾ ಶತ್ರುಗಳನ್ನು ನಾಶಮಾಡು. ಇದು ಅಮೋಘ ಅಸ್ತ್ರವಾಗಿದೆ. ನಾನೂ ಕೂಡ ತಪೋಬಲದಿಂದ ಇದನ್ನು ಧರಿಸಿದ್ದೇನು''. ''ಈ ಎಲ್ಲ ಮಾತುಗಳನ್ನು ಕೇಳಿ ವಿಷ್ಣುವು ''ಇದು ವ್ಯರ್ಥವೋ, ಅಥವಾ ಸಾರ್ಥಕವೋ ಎಂಬುದನ್ನು ನಾನು ಹೇಗೆ ತಿಳಿಯಲಿ? ಚಕ್ರವು ಸಫಲವಾದದ್ದೆಂತು ಎಂದು ತಿಳಿಯಲು ನಿನ್ನಲ್ಲಿಯೇ ಪ್ರಯೋಗಿಸುತ್ತೇನೆ'' ಎಂದು ಹೇಳಿ ಶಿವನ ಮೇಲೆ ಪ್ರಯೋಗಿಸ ತೊಡಗಿದನು. ಹಾಗೆಯೆ ಮಾಡೆಂದು ಶಂಕರನು ನಿಃಶಂಕವಾಗಿ ಉತ್ತರಿಸಿದನು. ಶಂಕರನ ಮಾತಿನಂತೆ ವಿಷ್ಣುವು ಶಂಕರನ ಮೇಲೆ ಪರೀಕ್ಷಾರ್ಥವಾಗಿ ಸುದರ್ಶನದ ಪ್ರಯೋಗ ಮಾಡಿದನು. ವಿಷ್ಣುವಿನ ಕೈಯಿಂದ ಪ್ರಯೋಗಿಸಲ್ಪಟ್ಟ ಚಕ್ರವು ಯಜ್ಞಪತಿಯಾದ ಶಂಕರನ ಶರೀರಕ್ಕೆ ತಗುಲಿ ಆತನ ಶರೀರವನ್ನು ಮೂರು ಭಾಗವಾಗಿ ವಿಭಾಗಿಸಿತು. ಈ ದೃಶ್ಯವನ್ನು ನೋಡಿದ ಹರಿಯು ತಾನು ತನ್ನ ತಿಳಿಗೇಡಿತನಕ್ಕೆ ಲಜ್ಜಿತನಾಗಿ ಶಂಕರನಿಗೆ ನಮಸ್ಕರಿಸಿದನು. ಪಾದಗಳಲ್ಲಿ ನಮ್ರನಾದ ಹರಿಯನ್ನು ನೋಡಿ ಶಂಕರನು 'ಏಳು ಏಳು' ಎಂದು ಬಾರಿ ಬಾರಿಗೂ ನುಡಿದನು. ''ಮಹಾತ್ಮನಾದ ವಿಷ್ಣುವೇ ನೀನು ವ್ಯಥೆ ಪಡಬೇಡ. ಭೇದ ಹೊಂದಿದ ಈ ತೆರನಾದ ವಿಕಾರ ನನಗೆ ಸಂಬಂಧಪಟ್ಟಿರುವದಿಲ್ಲ.

ನಾನು ಅಪ್ರಾಕೃತನಾದುದರಿಂದ ಛೇದ, ಭೇದಗಳು ನನಗಿರುವುದಿಲ್ಲ. ಈ ರೀತಿ ಛೇದ ಹೊಂದಿದ ನನ್ನ ಅಂಶಗಳು ಮನುಷ್ಯ ಲೋಕಕ್ಕೆ ಉಪಕಾರವೆಂದೇ ನೀನು ತಿಳಿ. ಇವುಗಳಲ್ಲಿ ಒಂದು ಹಿರಣ್ಯಾಕ್ಷ, ಎರಡನೆಯದು ಸುವರ್ಣಾಕ್ಷಿ ಮೂರನೇಯದು ವಿರೂಪಾಕ್ಷವೆಂದು ಪ್ರಸಿದ್ಧಿ ಹೊಂದಿ ಜನರಿಗೆ ಪುಣ್ಯಪ್ರದಗಳೇ ಆಗಿ ಪರಿಣಮಿಸುವುದರಲ್ಲಿ ಸಂದೇಹವಿಲ್ಲ. ಏಳು. ನೀನು ನಿನ್ನ ಶತ್ರುವನ್ನು ಸಂಹರಿಸಲು ಮುಂದುವರೆ. ಶ್ರೀದಾಮನು ಹತನಾದುದನ್ನು ತಿಳಿದು ದೇವತೆಗಳು ಸಂತೋಷ ಹೊಂದಲಿ.'' ಶಂಕರನು ಹೀಗೆ ಹೇಳಿದ ನಂತರ ವಿಷ್ಣುವು ಅಲ್ಲಿಂದ ಸುಮೇರು ಪರ್ವತದ ತಪ್ಪಲು ಪ್ರದೇಶಕ್ಕೆ ಹೊರಟನು. ಅಲ್ಲಿ ಶ್ರೀದಾಮನನ್ನು ನೋಡಿ ''ಎಲೈ ಶತ್ರುವೇ, ನೀನು ನಿಶ್ಚಿತವಾಗಿ ಹತನಾದೆ'' ಎಂದು ಹೇಳಿ ಅವನ ಮೇಲೆ ಚಕ್ರಪ್ರಯೋಗವನ್ನು ಮಾಡಿದನು. ಅಸಾಧಾರಣವಾದ ಚಕ್ರಪ್ರಯೋಗದಿಂದ ದೈತ್ಯನ ಶಿರಸ್ಸು ಕತ್ತರಿಸಲ್ಪಟ್ಟಿತು. ಅವನ ಧಡವು ಕೂಡಲೇ ನೆಲಕ್ಕೆ ಉರುಳಿತು. ಹೀಗೆ ಶ್ರೀದಾಮನು ಹತನಾದ ನಂತರ ವಿಷ್ಣುವು ತನಗೆ ಸಹಾಯ ಮಾಡಿದ ಶ್ರೀಶಂಕರನನ್ನು ಸತ್ಕರಿಸಿ ಚಕ್ರಾಯುಧವನ್ನು ಪಡೆದು ತನ್ನ ಸ್ಥಾನಕ್ಕೆ ತೆರಳಿದನು.

ವಿರೂಪಾಕ್ಷನು ಇಂತ ಮಹಿಮಾಶಾಲಿಯೂ, ನೀನು ಕ್ಷೀರವನ್ನು ಅಪೇಕ್ಷಿಸುವದಾದರೆ ಈತನನ್ನು ಆರಾಧಿಸು ಎಂದು ಹೇಳಿದ ತಾಯಿಯ ಮಾತನ್ನು ಕೇಳಿ ವೀತಮನ್ಯುವಿನ ಮಗನು ವಿರೂಪಾಕ್ಷನನ್ನು ಪೂಜಿಸಿ ಕ್ಷೀರಾನ್ನ ಹೊಂದುವೆನೆಂದು ನಿರ್ಧರಿಸಿದನು. ಈ ಚಕ್ರತೀರ್ಥದಲ್ಲಿಯೇ ಇದೆಲ್ಲ ನಡೆಯಿತು. ಇಂಥ ಪವಿತ್ರವಾದ ಚಕ್ರತೀರ್ಥಕ್ಕೆ ಪ್ರಲ್ಹಾದನು ನಡೆದನು.

ವಾಮನ ಮಹಾಪುರಾಣದಲ್ಲಿ ಚಕ್ರತೀರ್ಥದ ಕಥೆ ಎಂಬ ೮೨ನೇಯ ಅಧ್ಯಾಯವು ಮುಗಿದುದು

—○—

## ಪ್ರಹ್ಲಾದನ ತೀರ್ಥಯಾತ್ರೆ

**ಅಧ್ಯಾಯ - ೮೩**

**೧೦೧. ತಸ್ಮಿನ್ ತೀರ್ಥವರೇ ಸ್ನಾತ್ವಾ ದೃಷ್ಟ್ವಾದೇವಂ ತ್ರಿಲೋಚನಂ**
**ಪೂಜಯಿತ್ವಾ ಸುವರ್ಣಾಕ್ಷಂ ನೈಮಿಷಂ ಪ್ರಯಯೌ ತತಃ ॥**

ಪ್ರಹ್ಲಾದನು ಆ ತೀರ್ಥದಲ್ಲಿ ಸ್ನಾನ ಮಾಡಿ ಅಲ್ಲಿರುವ ಸುವರ್ಣಾಕ್ಷನೆಂಬ ತ್ರಿಲೋಚನನ್ನು ಆರಾಧಿಸಿ ನೈಮಿಷ ಕ್ಷೇತ್ರಕ್ಕೆ ಹೋದನು. ಅಲ್ಲಿ ಗೋಮತಿ, ಕಾಂಚನಾಕ್ಷಿ, ಶುಭದಾ ಎಂಬ ಮಹಾನದಿಗಳ ಮಧ್ಯದಲ್ಲಿ ಮೂವತ್ತು ಸಾವಿರ ತೀರ್ಥಗಳಿವೆ.

ಈ ಎಲ್ಲ ತೀರ್ಥಗಳಲ್ಲಿ ಸ್ನಾನಮಾಡಿ ಅಲ್ಲಿರುವ ಪೀತಾವಾಸಸನೆಂಬ ಹರಿಯನ್ನು ಐರಾಧಿಸಿ ಋಷಿಗಳನ್ನು ಸೇವಿಸಿ ಗಯೆಯಲ್ಲಿರುವ ಗೋಪತಿಯನ್ನು ಸೇವಿಸಲು ಹೊರಟನು. ಅಲ್ಲಿ ಬ್ರಹ್ಮತಟಾಕದಲ್ಲಿ ಸ್ನಾನಮಾಡಿ ಪಿತೃಗಳ ತೃಪ್ತಿಗಾಗಿ ಪಿಂಡ ಪ್ರದಾನ ಮಾಡಿ ಅನಂತರ ಉದಪಾನವೆಂಬ ತೀರ್ಥದಲ್ಲಿ ಸ್ನಾನಮಾಡಿ ಗದಾಪಾಣಿಯಾದ ನಾರಾಯಣನನ್ನು ಹಾಗೂ ಗೋಪತಿ ಎಂಬ ಶಂಕರನನ್ನು ಪೂಜಿಸಿದನು. ಅನಂತರ ಸರಯೂ ನದಿಯಲ್ಲಿ ಪಿತೃತರ್ಪಣ ಮಾಡಿ ಹೋಪ್ರತಾನೆಂಬ ಕುಶೇಶಯನೆಂಬ ಸ್ವಾಮಿಯನ್ನು ಭಕ್ತಿಯಿಂದ ಪೂಜಿಸಿದನು. ಅನಂತರ ರಜಸ್ತೀರ್ಥದಲ್ಲಿ ಸ್ನಾನಮಾಡಿ ಪಿತೃತರ್ಪಣಪೂರ್ವಕ ಅಜಿತನೆಂಬ ಪುರುಷೋತ್ತಮನ ದರ್ಶನ ಮಾಡಿಕೊಂಡನು. ಅಲ್ಲಿ ಆರು ದಿನಗಳವರೆಗೆ ಉಪಾವಾಸವಾಗಿದ್ದು ಮಹೇಂದ್ರನ ದಕ್ಷಿಣ ಭಾಗಕ್ಕೆ ಹೋಗಿ ಧವಲಮೂರ್ತಿಯೂ, ಅರ್ಧನಾರೀಶ್ವರನೂ ಆಗಿರುವ ಪರಮ ಶಿವನನ್ನು ಭಕ್ತಿಯಿಂದ ನಮಸ್ಕರಿಸಿದನು. ಅಲ್ಲಿಯೇ ಸೋಮತೀರ್ಥದಲ್ಲಿ ಸ್ನಾನಮಾಡಿ ಸಹ್ಯಾದ್ರಿಗೆ ಹೊರಟನು. ಅಲ್ಲಿ ಮಹೋದಕೀ ತೀರ್ಥದಲ್ಲಿ ಸ್ನಾನಮಾಡಿ ವೈಕುಂಠರೂಪಿ ಪರಮಾತ್ಮನನ್ನು ಪೂಜಿಸಿ ಪಿತೃದರ್ಪಣ ಪೂರ್ವಕ ಪಾರಿಯಾತ್ರವೆಂಬ ಪರ್ವತಕ್ಕೆ ಹೊರಟನು.

ಅಲ್ಲಿ ಲಾಂಗಲೀ ಎಂಬ ನದಿ. ಅಲ್ಲಿ ಸ್ನಾನಮಾಡಿ ಅಪರಾಜಿತ ಮೂರ್ತಿಯನ್ನು ಪೂಜಿಸಿ ಕಶೇರು ದೇಶಕ್ಕೆ ಹೋದನು. ಅಲ್ಲಿ ದೇವದೇವೋತ್ತಮನಾದ ಶಂಭುವು ಗಣಗಳಿಂದ ಪ್ರಾರ್ಥಿಸಲ್ಪಟ್ಟವನಾಗಿ ತನ್ನ ವಿಶ್ವರೂಪವನ್ನು ತೋರಿಸಿದ್ದನು. ಆ ವಿಶ್ವರೂಪವನ್ನು ಪ್ರಹ್ಲಾದನು ನೋಡಿದನು. ಅಲ್ಲಿ ಮಂಕಣಿಕಾ ಎಂಬ ನದಿಯು. ಅದರ ದಡದಲ್ಲಿಯೇ ಮಹೇಶ್ವರನ ಮಂದಿರ. ಅಲ್ಲಿ ಸ್ನಾನ ಪೂಜೆಗಳನ್ನು ತೀರಿಸಿ ನಿತ್ಯ ಸುಗಂಧಿಯಾಗಿರುವ ಮಲಯ ಪರ್ವತಕ್ಕೆ ಹೊರಟನು.

ಅಲ್ಲಿ ಮಹಾ ಹ್ರದವೆಂಬ ತೀರ್ಥ, ಶಂಕರನ ಮೂರ್ತಿ. ವಿಂಧ್ಯಪರ್ವತದಲ್ಲಿ ವಿಪಾಶಾ ಎಂಬ ನದಿ, ಸದಾಶಿವನ ಮೂರ್ತಿ. ಅವಂತೀ ನಗರದಲ್ಲಿ ಕ್ಷಿಪ್ರಾ ಎಂಬ ನದಿ, ವಿಷ್ಣುವಿನ ಮೂರ್ತಿ. ಎಲ್ಲ ಕಡೆಗಳಲ್ಲಿಯೂ ಸ್ನಾನ ಪೂಜೆಗಳನ್ನು ತೀರಿಸಿ ಸ್ಮಶಾನದಲ್ಲಿರುವ ಮಹಾಕಾಲರೂಪಿಯಾದ ಶಂಕರನನ್ನು ನೋಡಲು ಹೊರಟನು.

ಅಲ್ಲಿ ಶಂಕರನು ತಾಮಸ ರೂಪವನ್ನು ಧರಿಸಿ ಸರ್ವಪ್ರಾಣಿಗಳ ಸಂಹಾರಕ್ಕಾಗಿ ನೆಲೆಸಿದ್ದನು. ಅಲ್ಲಿರುವ ಶಂಕರನು ಯಮದೇವನನ್ನೂ ಸಹ ತನ್ನ ನೇತ್ರಾಗ್ನಿಯಿಂದ ದಹಿಸಿ ಶ್ವೇತಕಿ ಎಂಬ ಭಕ್ತನಾದ ದೊರೆಯನ್ನು ರಕ್ಷಿಸಿದನು. ಈ ಸ್ಥಳದಲ್ಲಿ ಹರನು ಅನೇಕ ಪ್ರಮಥ ಗಣಗಳಿಂದ ಪ್ರಾರ್ಥಿಸಲ್ಪಟ್ಟವನಾಗಿ ಮಹಾಕಾಲರೂಪಿಯಾದ ಯಮನಿಗೂ ಅಂತಕನಾಗಿ ನೆಲೆಸಿರುವನೆಂಬ ಪ್ರತೀತಿ ಇದೆ. ಹೀಗಿರುವ ಶಂಭುವನ್ನು ಪ್ರಹ್ಲಾದನು ಪೂಜಿಸಿ ನಿಷಧ ದೇಶಕ್ಕೆ ಹೊರಟನು. ಅಲ್ಲಿ ಆತನು ಅಮರೇಶ್ವರನನ್ನು ಸೇವಿಸಿ ಮಹೋದಯ ಕ್ಷೇತ್ರಕ್ಕೆ ಬಂದನು. ಅಲ್ಲಿಂದ ಅಶ್ವತೀರ್ಥಕ್ಕೆ ದಯಮಾಡಿಸಿ ಸ್ನಾನಮಾಡಿ ಅಲ್ಲಿರುವ ಹಯಗ್ರೀವ ದೇವರನ್ನೂ ಹಾಗೂ ಶ್ರೀಧರ ಮೂರ್ತಿಯನ್ನು ಪೂಜಿಸಿ ಪಾಂಚಾಲ ದೇಶಕ್ಕೆ ಬಂದನು. ಅಲ್ಲಿ ಪಾಂಚಾಲಕನನ್ನು ನೋಡಿ ಪ್ರಯಾಗಕ್ಕೆ ನಡೆದನು. ಅಲ್ಲಿ ಲೋಕ ಪ್ರಸಿದ್ಧವಾದ ಯಮುನಾ ತೀರ್ಥದಲ್ಲಿ ನೆಲೆಸಿರುವ ವಟೇಶ್ವರನೆಂಬ ಶಂಕರನನ್ನೂ, ಯೋಗಶಾಲಿಯಾದ ನಾರಾಯಣನನ್ನು ಪೂಜಿಸಿ ಮಾಘಮಾಸ ಪೂರ್ಣವಾಗಿ ಅಲ್ಲಿ ಇದ್ದು ಉಪವಾಸಾದಿಗಳಿಂದ ಪರಿಶುದ್ಧನಾಗಿ ವಾರಾಣಾಸಿಗೆ ಹೊರಟನು.

ಅಲ್ಲಿರುವ ಬೇರೆ ಬೇರೆ ತೀರ್ಥಗಳಲ್ಲಿ ಸ್ನಾನಮಾಡಿ ಪಿತೃದೇವತೆಗಳಿಗೆ ತೃಪ್ತಿ ಪಡಿಸಿ ಅಲ್ಲಿಯ ಅವಿಮುಕ್ತ ಹಾಗೂ ಕೇಶವಸ್ವಾಮಿ ಇವರನ್ನು ದರ್ಶನ ಮಾಡಿಕೊಂಡು ಮಧುವನಕ್ಕೆ ಹೊರಟನು. ಅಲ್ಲಿ ಪ್ರಹ್ಲಾದನು ಸ್ವಾಯಂಭುವ ದೇವನನ್ನು ನೋಡಿ ಪುಷ್ಕರಾರಣ್ಯಕ್ಕೆ ಹೊರಟನು. ಅಲ್ಲಿರುವ ಮೂರು ತೀರ್ಥಗಳಲ್ಲಿ ಸ್ನಾನಮಾಡಿ ಪಿತೃಗಳನ್ನು ತೃಪ್ತಿಪಡಿಸಿದನು. ಪವಿತ್ರವಾದ ಆ ಪ್ರಹ್ಲಾದ ತೀರ್ಥಯಾತ್ರೆಯು ಉಪಾಖ್ಯಾನವು ಮಹರ್ಷಿಗಳಾದ ಅಗಸ್ತ್ಯರಿಂದ ಹೇಳಲ್ಪಟ್ಟಿತು. ಇದರ ಕೀರ್ತನ ಶ್ರವಣವೂ ಕೂಡ ಯಶಸ್ಕರವಾದುದು ಆಗಿರುತ್ತದೆ.

ವಾಮನ ಮಹಾಪುರಾಣದಲ್ಲಿ ಎಂಭತ್ತಮೂರನೇಯ ಅಧ್ಯಾಯವು ಮುಗಿದುದು.

—o—

**೧೦೨. ಗತೇಷು ತೀರ್ಥಯಾತ್ರಾಯಾಂ ಪ್ರಲ್ಹಾದೇ ದಾನವೇಶ್ವರೇ**
**ಕುರುಕ್ಷೇತ್ರಂ ಸಮಭ್ಯಾಗಾದ್ದ್ರಷ್ಟುಂ ವೈರೋಚನೋ ಮುನೇ ॥**

ಪ್ರಹ್ಲಾದ ರಾಜನು ತೀರ್ಥಯಾತ್ರೆಗೆ ಹೊರಟ ನಂತರ ವಿರೋಚನ ಪುತ್ರನಾದ ಬಲಿಯು ಕುರುಕ್ಷೇತ್ರವನ್ನು ನೋಡಲು ಬಂದನು. ಆ ತೀರ್ಥದಲ್ಲಿ ಬ್ರಾಹ್ಮಣೋತ್ತಮನಾದ ಶುಕ್ರಾಚಾರ್ಯನು ಬಹಳ ಮಂದಿ ಬ್ರಾಹ್ಮಣರನ್ನು ಆಹ್ವಾನಿಸಿದ್ದನು.

ಅವನ ಕರೆಗೆ ಓಗೊಟ್ಟು ಬಂದ ಅತ್ರೇಯ, ಗೌತಮ, ಕೌಶಿಕ, ಅಂಗೀರಸ ಮೊದಲಾದ ಬ್ರಾಹ್ಮಣ ಶ್ರೇಷ್ಠರು ಶತದ್ರುವೀ ನದಿಯನ್ನನುಸರಿಸಿ ಕುರಜಾಂಗಲ ದೇಶಕ್ಕೆ ಹೊರಟನು. ಅಲ್ಲಿಯೇ ಸಮೀಪದಲ್ಲಿ ವಿವಾಸವೆಂಬ ಕ್ಷೇತ್ರವಿತ್ತು. ಎಲ್ಲ ಬ್ರಾಹ್ಮಣರು ಅಲ್ಲಿ ಸ್ನಾನಮಾಡಿ ಪಿತೃದೇವತೆಗಳಿಗೆ ತರ್ಪಣಕೊಟ್ಟು ಪುಣ್ಯಕರವಾದ ಕಿರಣಾ ನದಿಗೆ ಹೋದರು. ತದನಂತರ ದೇವಿಕಾ, ಪ್ರಯೋಷ್ಣೀ, ಭಾನವೀ, ನದಿಗಳಿಗೆ ಹೋಗಿ ಸ್ನಾನಮಾಡುವಾಗ ನೀರಿನಲ್ಲಿ ತಮ್ಮ ಪ್ರತಿಬಿಂಬವನ್ನು ನೋಡಿ ಅವರೆಲ್ಲರೂ ಚಕಿತರಾದರು. ದಡದ ಮೇಲೆ ಬಂದು ನಿಂತು ನೋಡಿದಾಗಲೂ ತಮ್ಮ ಪ್ರತಿಬಿಂಬದಿಂದ ಇನ್ನಷ್ಟು ಆಶ್ಚರ್ಯವಂತರಾದರು.

ಅನಂತರ ಅಲ್ಲಿ ಪ್ರತಿಷ್ಠಿತರಾಗಿದ್ದ ಪುಷ್ಕರಾಕ್ಷ ಅಯೋಗಂಧಿ ಹಾಗೂ ಬ್ರಹ್ಮರನ್ನು ಪೂಜಿಸಿ ಲೋಕವಿಖ್ಯಾತವಾದ ಸರಸ್ವತೀ ನದಿಗೆ ಬಂದರು. ಅಲ್ಲಿ ವೃಷಭಧ್ವಜನನ್ನು ಆರಾಧಿಸಿದರು. ಅದೇ ಸಮಯಕ್ಕೆ ಮಗಧ, ಸೈಂಧವ, ಧರ್ಮಾರಣ್ಯ, ಪುಷ್ಕರ, ದಂಡಕಾರಣ್ಯ, ಮೊದಲಾದ ದೇಶಗಳ ಕೋಟಿ ಕೋಟಿ ಬ್ರಾಹ್ಮಣೋತ್ತಮರು ಅಲ್ಲಿ ಬಂದು ಸೇರಿದರು. ಇವರೆಲ್ಲರನ್ನು ನೋಡಿ ಅಲ್ಲಿದ್ದ ಹರನು ಅವರಿಗೆ ತನ್ನ ದರ್ಶನವು ಸುಲಭವಾಗಿ ಲಭಿಸಬೇಕೆಂದು ಕೋಟಿ ಮೂರ್ತಿಯಾಗಿ ಪರಿಣಮಿಸಿದನು.

ಎಲ್ಲರೂ ರುದ್ರನ ಮೂರ್ತಿಯನ್ನು ನೋಡಿ ಸಂತೋಷಗೊಂಡರು. ಹಾಗೂ ಆ ತೀರ್ಥವನ್ನೇ ಆಶ್ರಯಿಸಿಕೊಂಡು ನಿಂತರು. ಆ ರೀತಿ ಅಲ್ಲಿ ಕೋಟಿ ವಿಗ್ರಹವನ್ನು ರುದ್ರನು ಹೊಂದಿದ್ದರಿಂದ ರುದ್ರಕೋಟಿ ಎಂಬ ಹೆಸರು ಬಂದಿತು. ಅಂತಹ ಕೋಟಿ ತೀರ್ಥವನ್ನು ನೋಡಿ ಪ್ರಹ್ಲಾದನು ಭಕ್ತಿಯಿಂದ ಸ್ನಾನಮಾಡಿ ಪಿತೃದೇವತೆಗಳನ್ನು ತೃಪ್ತಿಪಡಿಸಿ ಕುರುಜಾಂಗಲ ಕ್ಷೇತ್ರಕ್ಕೆ ಬಂದನು. ಅಲ್ಲಿ ಸರಸ್ವತಿ ತೀರ್ಥದಲ್ಲಿ ಮುಳುಗಿರುವ ಸ್ಥಾಣು ರೂಪಿಯಾದ ಪಾರ್ವತೀ ಪತಿಯನ್ನು ನೋಡಿದನು.

ಅನಂತರ ಪ್ರಹ್ಲಾದನು ಸರಸ್ವತೀ ತೀರ್ಥದಲ್ಲಿ ಸ್ನಾನಮಾಡಿ ಭಕ್ತಿಯಿಂದ ಸ್ಥಾಣುರೂಪಿಯಾದ ಶಂಕರನನ್ನು ಪೂಜಿಸಿ ದಶಾಶ್ವಮೇಧವೆಂಬ ತೀರ್ಥಕ್ಕೆ ಹೋಗಿ, ಅಲ್ಲಿ ಸಹಸ್ರ ಲಿಂಗವನ್ನು ಪೂಜಿಸಿ ಶುಕ್ರಾಚಾರ್ಯರಿಗೆ ನಮಸ್ಕರಿಸಿ ಸೋಮತೀರ್ಥಕ್ಕೆ ಹೋದನು. ಅಲ್ಲಿ ಸೋಮಪ್ರಭುವನ್ನು ಪೂಜಿಸಿ ಕ್ಷೀರಿಕಾವಾಸವೆಂಬ ತೀರ್ಥವನ್ನು ಸೇರಿ ಅಲ್ಲಿರುವ ವಟವೃಕ್ಷವನ್ನು ಪ್ರದಕ್ಷಿಣೆ ಹಾಕಿ ಅಲ್ಲಿಯ ಕುರುಧ್ವಜನನ್ನು ನಮಸ್ಕರಿಸಿ ಪದ್ಮಾಕ್ಷೀ ನಗರಕ್ಕೆ ಹೊರಟನು.

ಅಲ್ಲಿ ಮಿತ್ರಾವರುಣರನ್ನು ಮತ್ತೂ ಭಾಸ್ಕರನನ್ನೂ ಪೂಜಿಸಿದನು. ಅನಂತರ ಕುಮಾರಧಾರಾ ಕಪಿಲಧಾರಾ ನರ್ಮದಾ ನದಿಗಳಿಗೆ ಹೋಗಿ ಷಣ್ಮುಖಸ್ಕಂದ ಹಾಗೂ ಲಕ್ಷ್ಮೀಪತಿಯಾದ ವಾಸುದೇವರನ್ನು ಪೂಜಿಸಿ, ಭೂವರಾಹದೇವರನ್ನು ದರ್ಶನ ಮಾಡಲು ವರಾಹ ಪರ್ವತಕ್ಕೆ ಹೊರಟನು. ಅಲ್ಲಿ ಕೋಕಾಮುಖವೆಂಬ ತೀರ್ಥದಲ್ಲಿ ಸ್ನಾನಮಾಡಿ ವರಾಹ ಮೂರ್ತಿಯನ್ನು ದರ್ಶನ ಮಾಡಿಕೊಂಡು ತ್ರಿಸೌವರ್ಣವೆಂಬ ಮಹಾದೇವ ಕ್ಷೇತ್ರಕ್ಕೆ ಹೊರಟನು. ಅಲ್ಲಿ ನಾರೀ ಹ್ರದವೆಂಬ ತೀರ್ಥ. ಅದರ ದಡದಲ್ಲಿ ಶಂಕರನ ಸ್ಥಾನ, ಸಮೀಪ ದಲ್ಲಿಯೇ ಕಾಲಿಂಜರವೆಂಬ ಕ್ಷೇತ್ರ. ಅಲ್ಲಿ ನೀಲಕಂಠನ ಆವಾಸಸ್ಥಾನ. ನೀಲತೀರ್ಥದ ಸಮೀಪದಲ್ಲಿ ಶಿವನವಾಸ, ನಾಗರ ಸಮೀಪದಲ್ಲಿರುವ ಪ್ರಭಾಸ ತೀರ್ಥದಲ್ಲಿರುವ ಈಶ್ವರ, ಇವರೆಲ್ಲರನ್ನು ದರ್ಶನ ಮಾಡಿಕೊಂಡು ಸೋಮೇಶ್ವರ ತೀರ್ಥಕ್ಕೆ ಹೊರಟು ಬಂದನು.

ಆ ಕ್ಷೇತ್ರದಲ್ಲಿ ಪೂರ್ವದಲ್ಲಿ ದಕ್ಷನ ಶಾಪಕ್ಕೆ ಗುರಿಯಾಗಿ ದಗ್ಧನಾಗಿ ಕ್ಷಯವನ್ನು ಹೊಂದಿದ ತಾರಕಾಪತಿಯಾದ ಚಂದ್ರನು ವಿಷ್ಣು, ಶಂಕರರಿಂದ ಶೀತಲವಾಗಿ ಮಾಡಲ್ಪಟ್ಟು ರಕ್ಷಿಸಲ್ಪಟ್ಟನು. ಆ ವಿಷ್ಣು ಶಂಕರರನ್ನು ಪೂಜಿಸಿ ಮಹಾಲಯಕ್ಕೆ ಹೊರಟ ಪ್ರಹ್ಲಾದನು ಸಪ್ತ ಗೋದಾವರಿ ಕ್ಷೇತ್ರವನ್ನು ದಾಟಿ ದಾರುವನಕ್ಕೆ ಹೋದನು. ಅಲ್ಲಿ ಶಿವಲಿಂಗವನ್ನು ಪೂಜಿಸಿ ಪ್ಲಕ್ಷಾವತರಣ ಕ್ಷೇತ್ರಕ್ಕೆ ಹೋಗಿ ಶ್ರೀನಿವಾಸನನ್ನು ಪೂಜಿಸಿದನು.

ಅನಂತರ ಮಾಗದಾರಣ್ಯಕ್ಕೆ ಹೋಗಿ ಅಲ್ಲಿಂದ ಪ್ರಜಾಸುಖವೆಂಬ ಕ್ಷೇತ್ರದ ಮೇಲೆ ಹಾಯ್ದು ಮಹೀತೀರ್ಥವೆಂಬಲ್ಲಿಯ ವಾಸುದೇವನನ್ನು ವಂದಿಸಿ ಶೋಣಕ್ಷೇತ್ರಕ್ಕೆ ಹೊರಟನು. ಅನಂತರ ಗಿರಿವಜ್ರಕ್ಕೆ ಮಹೇಶ್ವರನನ್ನು ಯಥಾವಿಧಿಯಾಗಿ ಪೂಜಿಸಿ ಪರ್ವತ ಪುತ್ರನಾದ ತ್ರಿಕೂಟಕ್ಕೆ ಹೋಗಿ ಅಲ್ಲಿ ಚಕ್ರಪಾಣಿಯನ್ನು ಭಕ್ತಿಯಿಂದ ಪೂಜಿಸಿದನು. ಅಲ್ಲಿಯೇ ಪರಮ ಪವಿತ್ರನಾದ ಗಜೇಂದ್ರ ಮೋಕ್ಷಣವೆಂಬ ಸ್ತೋತ್ರವನ್ನು ಜಪಿಸಿದನು. ಅಲ್ಲಿ ಪ್ರಹ್ಲಾದನು ಗೆಡ್ಡೆಗೆಣಸುಗಳನ್ನೇ ತಿನ್ನುತ್ತ ಬ್ರಾಹ್ಮಣಾದಿಗಳಿಗೆ ಸುವರ್ಣಾದಿಗಳನ್ನು ದಾನ ಮಾಡುತ್ತ ಪ್ರತಿದಿನವೂ, ದೊಡ್ಡ ವೃಕ್ಷದ ರೂಪವನ್ನು ಧರಿಸಿ ದಿವ್ಯಾಕೃತಿಯಾಗಿಯೂ, ಅಜ್ಞಾನಕ್ಕೆ ಮೂಲನಾಶಕನಾಗಿಯೂ ಇರುವ ಪುಂಡರೀಕಾಕ್ಷನನ್ನು ದಿನಾಲು ದರ್ಶನ ಮಾಡಿಕೊಳ್ಳುತ್ತಿದ್ದನು. ಅನಂತರ ಅಲ್ಲಿಯೇ ಸಮೀಪದಲ್ಲಿರುವ ಸರ್ವಪಾಪ ಪ್ರಣಾಶವೆಂಬ ಕ್ಷೇತ್ರಕ್ಕೆ ಹೋಗಿ ಅಲ್ಲಿ ವರಾಹಮೂರ್ತಿಯಾದ ಭಗವಂತನು ಯಾವ ಸ್ತುತಿಗಳನ್ನು ಹೇಳಿದ್ದನೋ ಆ ಸ್ತುತಿಗಳನ್ನು ಪಠಿಸಿದನು. ಇಷ್ಟಾದ ಮೇಲೆ ಪ್ರಹ್ಲಾದನು ಶಾಲಿಗ್ರಾಮ ಕ್ಷೇತ್ರಕ್ಕೆ ಹೊರಟು ಬಂದನು. ಇಲ್ಲಿಯ ಪ್ರತಿಯೊಂದು ಪದಾರ್ಥಗಳಲ್ಲಿಯೂ ವಿಷ್ಣುವಿನ ಸಾನ್ನಿಧ್ಯವು ಅಧಿಕವಾಗಿದೆ ಯೆಂದು ತಿಳಿದುಕೊಂಡು ಅಲ್ಲಿಯೇ ಭಗವಂತನ ಪಾದಗಳನ್ನು ಪೂಜಿಸುತ್ತ ಮಹಾಭಾಗವತನಾಗಿ ನಿಂತನು. ಹೀಗೆ ಮಾಡಿರುವ ಪ್ರಹ್ಲಾದನ ಯಾತ್ರೆಯ ಪ್ರಸಂಗವನ್ನು ಪಠಿಸುವವರು ಶ್ರವಣ ಮಾಡುವವರು ಪಾಪಗಳಿಂದ ಬಿಡುಗಡೆ ಹೊಂದುತ್ತಾರೆ.

ವಾಮನ ಮಹಾಪುರಾಣದಲ್ಲಿ ಪ್ರಹ್ಲಾದನ ತೀರ್ಥಯಾತ್ರೆ ೮೪ನೇಯ ಅಧ್ಯಾಯವು ಮುಗಿದುದು

—o—

**೧೦೩. ಯಾನ್ ಜಪಾನ್ ಭಗದದ್ಭಕ್ತ್ಯಾ ಪ್ರಹ್ಲಾದೋ ದಾನವೋಽಜಪತ್
ಗಜೇಂದ್ರ ಮೋಕ್ಷಣಾದೀಂಸ್ತ್ವಂ ಚತುರಸ್ತಾನ್ ವದಸ್ವ ಮೇ॥**

ನಾರದರು ಪುಲಸ್ತ್ಯರಿಗೆ ಪ್ರಶ್ನಿಸುತ್ತಾರೆ:- ಪ್ರಹ್ಲಾದನು ಭಕ್ತಿಭರಿತನಾಗಿ ಸ್ತೋತ್ರ ಮಾಡಿದ ಗಜೇಂದ್ರ ಮೋಕ್ಷವೇ ಮೊದಲಾದ ನಾಲ್ಕು ಸ್ತುತಿಗಳನ್ನು ದಯವಿಟ್ಟು ನೀವು ಹೇಳಬೇಕು. ಆಗ ಪುಲಸ್ತ್ಯರು ಹೇಳುತ್ತಾರೆ-

ಈ ಸ್ತುತಿಗಳು ಬಹಳ ಪುಣ್ಯಕರವಾದುದು. ಪಠಿಸುವುದರಿಂದ, ಸ್ಮರಣ ಮಾಡುವದರಿಂದ ದುಃಸ್ವಪ್ನ ದೋಷವು ದೂರವಾಗುವದು. ಮೊದಲು ಗಜೇಂದ್ರ ಮೋಕ್ಷಣವನ್ನು ಕೇಳು. ಅನಂತರ ಸಾರಸ್ವತ, ಪಾಪಪ್ರಶಮನ ಸ್ತೋತ್ರಗಳನ್ನು ಹೇಳುವೆನು. ''ಚಿತ್ರಕೂಟವೆಂಬ ಪರ್ವತ ಶ್ರೇಷ್ಠವು ಸೂರ್ಯನಂತೆ ಪ್ರಜ್ವಲಿಸುವ ಸುಮೇರುವಿನ ಪುತ್ರವಾಗಿತ್ತು. ಸಮುದ್ರದಿಂದ ಭೇದಿಸಿಕೊಂಡು ಬಂದ ಆ ಪರ್ವತವು ಕ್ಷೀರ ಸಾಗರದ ಅಲೆಗಳನ್ನು ಹೊಂದಿತ್ತು.

ಅನೇಕ ಗಿರಿ ನದಿಗಳಿಂದಲೂ ಅದು ಕೂಡಿರುವದರಿಂದ ಅಪ್ಸರೆಯರು, ಯಕ್ಷ, ಗಂಧರ್ವ, ಕಿನ್ನರರು ಬಹಳ ಶ್ರೇಷ್ಠವಾದ ಆನೆಗಳು ಇವುಗಳ ಆವಾಸಸ್ಥಾನವಾಗಿತ್ತು. ಅಲ್ಲಿ ಬಹು ವಿಧವಾದ ವೃಕ್ಷಗಳು, ಲತೆ, ಪೊದೆಗಳು ವಿರಾಜಮಾನವಾಗಿದ್ದವು. ಅನೇಕ ರೀತಿಯಾಗಿ ಇರುವ ಗೈರಿಕಾದಿ ಧಾತುಗಳಿಂದಲೂ ರಮ್ಯವಾದ ಸಾನು ಪ್ರದೇಶಗಳಿಂದಲೂ ಆ ಪರ್ವತವು ರಮಣೀಯವಾಗಿ ಕಾಣುತ್ತಿತ್ತು. ಪಕ್ಷಿಗಳ ಕಿಲಕಿಲಾಟ, ಚಕೋರ ನವಿಲುಗಳ ನಲಿದಾಟ ಇವುಗಳಿಂದ ಅದರ ರಮ್ಯತೆಯು ಇನ್ನೂ ಹೆಚ್ಚಾಗಿತ್ತು. ಆ ತ್ರಿಕೂಟ ಪರ್ವತದ ಒಂದು ಬಹಳ ಎತ್ತರವಾದ ಪ್ರದೇಶವಿತ್ತು. ಅದು ಸುಗಂಧಿ ದ್ರವ್ಯಗಳಿಂದ ಕೂಡಿಕೊಂಡಿತ್ತು. ಅದರ ಸಮೀಪದಲ್ಲಿಯೇ ಮತ್ತೊಂದು ಶಿಖರ ಪ್ರದೇಶ. ಅದು ರಜತಮಯ ವಾದುದು. ಅಲ್ಲಿ ವಜ್ರ, ವೈಢೂರ್ಯ, ಇಂದ್ರ ನೀಲಮಣಿಗಳು ತಮ್ಮ ಕಾಂತಿಯಿಂದ ಬೆಳಗುತ್ತಿದ್ದವು. ಮೂರನೇಯದಾದ ಮತ್ತೊಂದು ಶಿಖರವು ಪ್ರಕೃತಿ ಸೌಂದರ್ಯದ ನೆಲೆ ಬೀಡಾಗಿತ್ತು. ಈ ಪ್ರದೇಶಕ್ಕೆ ಬಂದರೆ ಅರಸಿಕರೂ ರಸಿಕರಾಗುತ್ತಿದ್ದರು, ಘಾತುಕರಾದ ರಾಕ್ಷಸರೂ ಮಿದುಹೃದಯದವರಾಗುತ್ತಿದ್ದರು.

ಆ ಪರ್ವತದ ಹಿಂಭಾಗದಲ್ಲಿ ಒಂದು ಸರೋವರವಿದ್ದಿತು. ಅದು ಚಿನ್ನದ ಕಮಲ ಗಳಿಂದಲೂ, ರಾಜಹಂಸ ಪಕ್ಷಿಗಳಿಂದಲೂ, ನೈದಿಲೆ ಕಮಲಗಳಿಂದಲೂ, ಕೆಂದಾವರೆ ಗಳಿಂದಲೂ ರಾರಾಜಿಸುತ್ತಿತ್ತು. ಅದರ ದಡದಲ್ಲಿ ಪಚ್ಚೆಯ ಕಲ್ಲು ಹಾಸುಗಳಿದ್ದವು. ಹೊಂಬಣ್ಣದ ಹಾಗೂ ಬೇರೆ ಬೇರೆ ಬಣ್ಣದ ಹೂಗಳು ಅಲ್ಲಿ ಪ್ರತಿಬಿಂಬಿಸುತ್ತಿದ್ದವು. ಸುತ್ತಲೂ ಬಿದಿರಿನ ಮಳೆಗಳು ದಟ್ಟವಾಗಿ ಬೆಳೆದಿದ್ದವು. ಇಂಥ ಸರೋವರದ ಮಧ್ಯಭಾಗದಲ್ಲಿ ದುಷ್ಟ ಸ್ವಭಾವದ ಒಂದು ಮೊಸಳೆಯು ವಾಸ ಮಾಡಿಕೊಂಡಿತ್ತು. ಒಂದಾನೊಂದು ದಿನ ಮದೋದಕವನ್ನು ಸುರಿಸಿ ಪರ್ವತವನ್ನೇ ಸುಗಂಧವನ್ನಾಗಿ ಮಾಡುವ ಕೆಲವು ಆನೆಗಳು ತಮ್ಮ ಯೂಥಪತಿಯೊಡನೆ ಆ ಸರೋವರಕ್ಕೆ ಬಂದವು.

ಐರಾವತದಂತಿರುವ ಆ ಮುಖ್ಯ ಆನೆಯು ತನ್ನ ಸಹಚರಿಯರೊಡನೆ ಆ ಸರೋವರದಲ್ಲಿ ಸ್ನಾನಕ್ಕೆ ಇಳಿಯಿತು. ಆ ಕಮಲವನದಲ್ಲಿ ತನ್ನ ಜೊತೆಯ ಆನೆಗಳೊಡನೆ ಎಷ್ಟೋ ಹೊತ್ತು ವಿಹರಿಸಿತು. ಆ ಸರೋವರದಲ್ಲಿ ನಿಗೂಢವಾಗಿರುವ ಭಯಂಕರ ಮೊಸಳೆಯು ವೇಗದಿಂದ ಬಂದು ಯೂಥಪತಿಯನ್ನು ಹಿಡಿದುಕೊಂಡಿತು. ಈ ದೃಶ್ಯವನ್ನು ಕಂಡು ಹೆಣ್ಣಾನೆಗಳೆಲ್ಲವೂ ಚೀತ್ಕಾರ ಮಾಡಿದವು. ದೊಡ್ಡ ಆನೆಯನ್ನು ಹೊರಗೆಳೆಯಲು ಎಲ್ಲರೂ ಸಾಕಷ್ಟು ಪ್ರಯತ್ನವನ್ನೇ ಸಾಗಿಸಿದರು. ಆನೆ ಮೊಸಳೆಗಳ ಜಗ್ಗಾಟ ವರ್ಷ ಸಹಸ್ರ ಪರ್ಯಂತರ ನಡೆಯಿತು. ಕೊನೆಗೆ ಯೂಥಪತಿಯು ಸೋತು ಬೆಂಡಾಗಿ ವಿಫಲ ಪ್ರಯತ್ನವಾಯಿತು. ನಿರಾಶೆಯ ನಿಶ್ವಾಸವನ್ನು ವೇಗದಿಂದ ಬಿಡುತ್ತ ಮಹಾವ್ಯಥೆಯಿಂದ ಚೀತ್ಕರಿಸಹತ್ತಿತು. ಅನ್ಯಗತಿಯನ್ನು ಕಾಣದೇ ವಿಪತ್ತಿನಲ್ಲಿ ಸಿಲುಕಿದ ಆ ಆನೆಯು ಶ್ರೀಹರಿಯನ್ನೇ ಅನನ್ಯಭಾವದಿಂದ ಶರಣು ಹೋಯಿತು.

ಪೂರ್ವ ಸಂಸ್ಕಾರ ಬಲದಿಂದ ಭಗವದ್ಭಕ್ತಿಯ ಐಶ್ವರ್ಯವನ್ನು ಹೊಂದಿ ಆ ಗಜೇಂದ್ರನು ಶ್ರೀಹರಿಯೇ ತನಗೆ ಪರಮ ರಕ್ಷಕನು ಎಂದು ದೃಢವಾದ ನಂಬಿಕೆ ಇಟ್ಟು ತನ್ನ ಸರ್ವಸ್ವವನ್ನು ಆತನ ಚರಣಾರವಿಂದಗಳಲ್ಲಿ ಅರ್ಪಿಸಿತು. ಈ ತೆರನಾದ ಭಗವದ್ಭಕ್ತಿಗೆ ಪ್ರಪತ್ತಿ ಎಂದು ಹೆಸರು. ಈ ಪ್ರಪತ್ತಿಯನ್ನು ಗಜೇಂದ್ರ, ದ್ರೌಪದಿ, ಕಾಕಾಸುರ, ವಿಭೀಷಣ ಮೊದಲಾದವರು ಮಾಡಿದ್ದಾರೆ. ವಿಶುದ್ಧವಾದ ಮನಸ್ಸನ್ನು ಹೊಂದಿದ ಆ ಗಜೇಂದ್ರನು ತನ್ನ ಪ್ರಭುವಿನಲ್ಲಿ ತನ್ನಲ್ಲಿ ಅಂತರ್ಯಾಮಿಯಾಗಿದ್ದ ದೇವನಲ್ಲಿ ಏಕಾತ್ಮ ಬುದ್ಧಿಯನ್ನು ಹೊಂದಿತು. ಆದಿ ಪುರುಷನಾದ ದೇವದೇವೋತ್ತಮನಾದ, ಶಂಖ ಚಕ್ರ ಗದಾಧಾರಿಯಾದ, ಗರುಡಧ್ವಜನಾದ ನಾರಾಯಣನಲ್ಲಿ ತನ್ನ ಸೊಂಡಲಿನ ಅಗ್ರಭಾಗದಿಂದ ಸರೋವರದ ಕೆಂಪು ಕಮಲಗಳನ್ನು ತೆಗೆದುಕೊಂಡು ಅರ್ಪಿಸಿತು. ಮತ್ತು ವಿಪತ್ತಿನಿಂದ ಪಾರಾಗಲು ಈ ರೀತಿ ಸ್ತೋತ್ರವನ್ನು ಪಠಿಸಿತು.

ಗಜೇಂದ್ರನು ಸ್ತೋತ್ರ ಮಾಡಿದ್ದು- ''ಜಗತ್ತಿಗೆ ಆದಿಕಾರಣನಾದ ಪ್ರಭುವೇ, ಮೂಲ ಪ್ರಕೃತಿಯಲ್ಲಿ ಅಂತರ್ಯಾಮಿ ರೂಪಹೊಂದಿದ್ದು ಜಗದುತ್ಪತ್ತಿಗೆ ಕಾರಣನಾದವನೇ, ಅಜಿತ ಮೂರ್ತಿಯಾಗಿ ಮಹಾಮಹಿಮನಾದವನೇ ನಿನಗೆ ನಮಸ್ಕಾರಗಳು. ದೇಶಕಾಲ ವಸ್ತುಗಳಿರುವ ಮೂರು ವಿಧದ ಅಳತೆ ಹಾಗೂ ಪರಿಮಾಣಗಳು ನಿನಗೆ ಇರುವದಿಲ್ಲ. ಆದುದರಿಂದ ನೀನು ಅಪರಿಚ್ಛಿನ್ನನು ಅವ್ಯಕ್ತ ಮೂರ್ತಿಯೂ ಕೂಡ ನೀನೇ ಆಗಿರುವಿ. ಚೇತನಾ ಚೇತನರ ಅಂತಃಪ್ರದೇಶದಲ್ಲಿ ಪ್ರವೇಶಿಸಿ ಅವುಗಳ ಚಾಲನ ಕಾರ್ಯವನ್ನು ನೀನೇ ಅವತರಿಸಿ ಸಾಂಖ್ಯ ಶಾಸ್ತ್ರವನ್ನು ಉಪದೇಶಿಸಿರುವಿ. ಹಾಗೆಯೇ ಹಿರಣ್ಯ ಗರ್ಭಾಂತರ್ಯಾಮಿಯಾಗಿ ಯೋಗ ಶಾಸ್ತ್ರಕ್ಕೂ ಪ್ರವರ್ತಕನಾಗಿರುವಿ. ಅನಂತ ಕಲ್ಯಾಣ ಗುಣಗಣಗಳಿಗೆ ಆಶ್ರಯನಾದ ನೀನು ತ್ರಿವಿಕ್ರಮ ರೂಪದಿಂದ ಅಪರಿಮಿತ ಪರಾಕ್ರಮವನ್ನು ತೋರಿಸಿರುವಿ? ಪ್ರಳಯ ಕಾಲದಲ್ಲಿ ಎಲ್ಲ ವಸ್ತುಗಳು ನಷ್ಟವಾದರೂ ವೇದರಾಶಿಗಳು ಮಾತ್ರ ನಿನ್ನ ಜ್ಞಾನರೂಪದಲ್ಲಿ ಉಳಿದುಕೊಂಡಿದ್ದವು. ಚತುರ್ಮುಖ ಸೃಷ್ಟಿಯ ನಂತರಾ ವೇದಗಳನ್ನೇ ನೀನು ಆತನಿಗೆ ಉಪದೇಶಿಸಿರುವಿ. ಭೂಮಿಯನ್ನು ಧರಿಸಿ ಆದಿಶೇಷನಲ್ಲಿಯೂ ನೀನು ಅಂತರ್ಯಾಮಿಯಾಗಿ ನಿಂತುಕೊಂಡಿರುವಿ. ಮಹಾಸುರನ ನಾಶಕ್ಕಾಗಿ ನೃಸಿಂಹರೂಪವನ್ನು ಧರಿಸಿದ್ದಿ.

ದೇವದೇವೋತ್ತಮನಾದ ಅಚ್ಯುತನೇ, ನಿನಗೆ ಅನಂತ ನಮಸ್ಕಾರಗಳು. ಜಾಜ್ವಲ್ಯಮಾನವಾದ ಸುದರ್ಶನವನ್ನು ಧರಿಸಿ ದೇವೇಂದ್ರನ ವಿಘ್ನನಾಶದಲ್ಲಿ ಪರಾಕ್ರಮವನ್ನು ತೋರಿಸಿದ ನಿನಗೆ ಅನಂತ ನಮಸ್ಕಾರಗಳು. ನೀನು ಕೂಟಸ್ಥ ನಿತ್ಯನು. ಯೋಗಿಗಳಿಗೆ ನಿಯಾಮಕನು, ಪ್ರಕೃತಿ ಬಂಧ ರಹಿತನು, ಸ್ವೇಚ್ಛಾಧೀನವಾದ ಅಭಿವ್ಯಕ್ತಿಯುಳ್ಳವನು, ಇಂಥ ನಿನ್ನನ್ನು ನಾನು ಅನನ್ಯಭಾವದಿಂದ ಶರಣು ಬಂದಿದ್ದೇನೆ.

ಇಂದ್ರ, ಸೂರ್ಯ, ರುದ್ರ, ಅಶ್ವಿನಿಗಳೂ, ವಸುಗಳು ಇವರೆಲ್ಲರಿಗೂ ನಿಯಾಮಕನಾಗಿ, ಇರುವ ನೀನು ಹೇಯಗುಣಗಳಿಂದ ಸರ್ವಥಾ ರಹಿತನಾಗಿರುವಿ. ಸರ್ವಸಂಗ ಪರಿತ್ಯಾಗ ಮಾಡಿರುವ ಯತಿಗಳಿಗೆ ಪರಮಗಮ್ಯನಾಗಿರುವಿ. ಎಲ್ಲರಲ್ಲಿಯೂ ಅಂತರ್ಯಾಮಿಯಾಗಿಯೂ, ವ್ಯಕ್ತಾವ್ಯಕ್ತ ಸ್ವರೂಪನಾಗಿಯೂ, ಅಣು, ಬೃಹದ್ರೂಪನಾಗಿಯೂ ನೀನು ಇರುವಿ. ಇಂಥ ನಿನಗೆ ಅನಂತ ನಮಸ್ಕಾರಗಳು. ಭಕ್ತರಿಗೆ ಸದಾಕಾಲದಲ್ಲಿ ಅಭಯಪ್ರದನಾದ ನೀನು ಸಾವಿರ ತಲೆಗಳನ್ನು ಹೊಂದಿ ಅನಂತ ಮೂರ್ತಿಯಾಗಿರುವಿ. ಇಂಥ ನಿನಗೆ ಅನಂತ ನಮಸ್ಕಾರಗಳು. ಹೀಗೆ ಗಜೇಂದ್ರನು ಸ್ತೋತ್ರಮಾಡಿ ಶಂಖ, ಚಕ್ರಗದಾಧಾರಿಯಾದ ವಿಷ್ಣುವಿನನ್ನು ಭಕ್ತಿಯಿಂದ ಸ್ತೋತ್ರಗೈದುದರಿಂದ ಜಗತ್ಪ್ರಭುವಾದ ಮಹಾವಿಷ್ಣುವು ಗರುಡಾರೂಢನಾಗಿ ಗಜೇಂದ್ರನ ಎದುರಿನಲ್ಲಿ ಪ್ರತ್ಯಕ್ಷನಾದನು. ಕೂಡಲೇ ವಿಷ್ಣುವು ಗಜೇಂದ್ರನನ್ನು ಸರೋವರದ ಮೇಲೆ ನಿಲ್ಲಿಸಿ ಮೊಸಳೆಯನ್ನು ತನ್ನ ಚಕ್ರಾಯುಧದಿಂದ ಕತ್ತರಿಸಿ ಹಾಕಿದನು.

ಮೊಸಳೆಯ ರೂಪವನ್ನು ಹೊಂದಿದ್ದ ಹೂಹೂ ಎಂಬ ಗಂಧರ್ವನು ವಿಷ್ಣುವಿನ ಚಕ್ರಸ್ಪರ್ಶದಿಂದ ಶಾಪ ವಿಮೋಚನೆಯನ್ನು ಹೊಂದಿ ಸ್ವರ್ಗಕ್ಕೆ ತೆರಳಿದನು. ಗಜೇಂದ್ರನೂ ಸಹ ವಿಷ್ಣುವಿನ ಸ್ಪರ್ಶಮಾತ್ರದಿಂದಲೇ ಗಜರೂಪವನ್ನು ಬಿಟ್ಟು ದಿವ್ಯ ಶರೀರವನ್ನು ಧರಿಸಿ ಪುರುಷನಾಗಿ ನಿಂತನು. ಏಕಕಾಲದಲ್ಲಿ ಇಬ್ಬರ ಮುಕ್ತಿಯೂ ಆಯಿತು. ಇಬ್ಬರೂ ಪರಮಾತ್ಮನನ್ನು ಕೃತಜ್ಞತೆಯಿಂದ ಪೂಜಿಸಿದರು. ಪ್ರಸನ್ನನಾದ ಭಗವಂತನು ಮಧುರ ಮಾತಿನಿಂದ ಹೇಳಿದನು. ''ಎಲೈ ಭಕ್ತಾಗ್ರೇಸರನೇ, ನನ್ನ ಈ ಘಟನೆಯನ್ನೂ ಇಲ್ಲಿರುವ ಜಲಾಶಯವನ್ನೂ ಯಾರು ಸ್ಮರಿಸುವರೋ ಯಾರು ಈ ಸ್ತುತಿಪಾಠ ಮಾಡುವರೋ, ಅವರ ದುಸ್ವಪ್ನದ ಪಾಪವು ದೂರವಾಗುವದು.

ಮತ್ಸ್ಯ, ಕೂರ್ಮ, ವರಾಹ ಮತ್ತೂ ಗಜೇಂದ್ರ ಮೋಕ್ಷದ ಆಖ್ಯಾನವನ್ನು ಯಾರು ಪ್ರಾತಃಕಾಲದಲ್ಲಿ ಪಠಿಸುವರೋ, ಅವರು ಪುಣ್ಯಭಾಗಿಗಳಾಗುವರು.'' ಗರುಡಧ್ವಜನಾದ ಹೃಷಿಕೇಶನು ಹೀಗೆ ಹೇಳಿ ಗಜೇಂದ್ರನನ್ನೂ, ಗಂಧರ್ವನನ್ನೂ ಮಮತೆಯಿಂದ ಮೈದಡವಿದನು. ಕೂಡಲೇ ಗಜೇಂದ್ರನು ದಿವ್ಯರೂಪವನ್ನು ಧರಿಸಿ ನಾರಾಯಣನಲ್ಲಿ ಶರಣಾಗತನಾದನು. ಗರುಡಧ್ವಜನಾದ ಪರಮಾತ್ಮನು ಎಲ್ಲ ದೇವತೆಗಳಿಂದ ಸ್ತೋತ್ರಿಸಲ್ಪಟ್ಟವನಾಗಿ ಅಲ್ಲಿಯೇ ಅಂತರ್ಧಾನ ಹೊಂದಿದನು. ಇಂದ್ರನೇ ಮೊದಲಾದವರು ಈ ಗಜೇಂದ್ರ ಮೋಕ್ಷಣದ ಘಟನೆಯನ್ನು ನೋಡಿ ಆಶ್ಚರ್ಯಚಕಿತರಾದರು ಹಾಗೂ ಶ್ರೀಹರಿಯ ಭಕ್ತವತ್ಸಲತೆಯನ್ನು ಕೊಂಡಾಡಿದರು. ಅದರಂತೆಯೇ ಮಹರ್ಷಿಗಳೂ, ಸಿದ್ಧಚಾಣರರೂ ಪರಮಾತ್ಮನನ್ನು ಸ್ತುತಿಗೈದರು.

ಪ್ರಾತಃಕಾಲದಲ್ಲಿ ಈ ಸ್ತೋತ್ರವನ್ನು ಪಠಣ ಮಾಡುವವನೂ ಹೇಳುವವನೂ, ಕೇಳುವವನೂ, ಪಾಪಗಳಿಂದ ಬಿಡುಗಡೆಹೊಂದಿ ಪುಣ್ಯಭಾಗಿಯಾಗುವನು. ಈ ರೀತಿ ಉಪಾಖ್ಯಾನದ ಮಾಹಾತ್ಮ್ಯವನ್ನು ವಿವರಿಸಿ ಪುಲಸ್ತ್ಯರು ಅಂಥ ಮಹಿಮೋಪೇತನಾದ ಪರಮಾತ್ಮನಿಗೆ ತಾವೂ ನಮಸ್ಕರಿಸಿದರು.

ವಾಮನ ಮಹಾಪುರಾಣದಲ್ಲಿ ಎಂಬತ್ತೆಂದನೇಯ ಅಧ್ಯಾಯವು ಮುಗಿದುದು



## ರಾಕ್ಷಸನ ಪರಿವರ್ತನೆ

**ಅಧ್ಯಾಯ - ೮೬**

**ಪುಲಸ್ತ್ಯರು ಹೇಳುತ್ತಾರೆ :-** ಹಿಂದಿನ ಕಾಲಕ್ಕೆ ಒಬ್ಬ ಕ್ಷುದ್ರನಾದ ಕ್ಷತ್ರಿಯನಿದ್ದನು. ಆತನು ಬ್ರಾಹ್ಮಣ ದ್ರೋಹಿಯೂ, ಪರಪೀಡೆಯಲ್ಲಿ ಪ್ರವೀಣನೂ ಆಗಿದ್ದನು. ನಿರ್ದಯತೆ ಆತನ ಸ್ವಾಭಾವಿಕ ಗುಣವಾಗಿದ್ದಿತು. ದೇವಪಿತೃಗಳನ್ನು ಆತನೆಂದಿಗೂ ಪೂಜಿಸಿಲ್ಲ. ಆದುದರಿಂದ ಮರಣಾ ನಂತರದಲ್ಲಿ ಆತನು ರಾಕ್ಷಸ ಜನ್ಮವನ್ನು ಹೊಂದಿದನು. ರಾಕ್ಷಸನಾದ ಮೇಲೆ ಮತ್ತಷ್ಟು ಕ್ರೂರಕರ್ಮಗಳನ್ನು ಆತನು ಮಾಡತೊಡಗಿದನು. ಹೀಗೆಯೇ ತನ್ನ ಪಾಪಕರ್ಮಗಳಿಂದ ನೂರಾರು ವರ್ಷ ಆತನು ಕಳೆದನು. ಜುಗುಪ್ಸಿತ ಕಾರ್ಯ ಮಾಡುವ ರಾಕ್ಷಸನು ನೋಡಿದ ಪ್ರಾಣಿಗಳನ್ನೆಲ್ಲ ಹಿಂಸಿಸಿ ತಿನ್ನಲಾರಂಭಿಸಿದನು. ಒಂದು ದಿನ ಆ ರಾಕ್ಷಸನು ಒಂದು ನದೀ ತೀರಕ್ಕೆ ಬಂದನು ಅಲ್ಲಿ ಜಿತೇಂದ್ರಿಯನಾಗಿ ತಪಸನ್ನಾಚರಿಸುವ ಒಬ್ಬ ಮಹಾತ್ಮನನ್ನು ನೋಡಿದನು.

ಆ ತಪಸ್ವಿಯು ಯೋಗನಿರತನಾಗಿದ್ದನು. ತನ್ನೆಲ್ಲ ನಾಕುಗಳಲ್ಲಿ ಬೇರೆ ಬೇರೆ ಆಯುಧಗಳನ್ನು ಧರಿಸಿದ ವಿಷ್ಣುವು ರಕ್ಷಿಸುವನೆಂಬ ನಂಬಿಕೆಯಿಂದ ಅದೇ ತರಹದ ಮಂತ್ರವನ್ನು ಪಠಿಸುತ್ತ ಆತನು ಭಗವದ್‌ಧ್ಯಾನದಲ್ಲಿ ಮಗ್ನನಾಗಿದ್ದನು. ಮಹಾವಿಷ್ಣುವಿನ ಸುದರ್ಶನ ಚಕ್ರವು ಸುತ್ತಲೂ ತಿರುಗಾಡುತ್ತಿರುವ ಭೂತ ಪಿಶಾಚಾದಿಗಳನ್ನೂ ಮತ್ತು ಶಾಕಿನಿಡಾಕಿನಿಯರನ್ನೂ ನಾಶಪಡಿಸುವದರಲ್ಲಿ ಸಂದೇಹವಿಲ್ಲ. ವಾಸುದೇವನ ಶಾರ್ಙ್ಗವೆಂಬ ಧನುಸ್ಸಿನ ಟೇಂಕಾರವು ತನ್ನ ಶತ್ರುಗಳನ್ನು ದೂರೋಡಿಸುತ್ತದೆಂಬ ನಂಬಿಕೆಯು ಆತನಿಗಿತ್ತು. ವಿಷ್ಣುವಿನ ಶಂಖಧ್ವನಿಯಿಂದ ಯಕ್ಷ, ರಾಕ್ಷಸರು, ಕ್ರೂರಿಗಳಾದ ಹಿಂಸ್ರ ಪಶುಗಳು ದೂರ ಓಡಿ ಹೋಗುತ್ತವೆ. ಇವನ ಶಂಖಧ್ವನಿಯಿಂದ ಕೂಷ್ಮಾಂಡರು ದೂರ ಹೋಗುತ್ತಾರೆ. ಯಾರು ತಮ್ಮ ದುಷ್ಟವೃತ್ತಿಯಿಂದ ಸಜ್ಜನರ ಉತ್ತಮ ಕಾರ್ಯದಲ್ಲಿ ವಿಘ್ನತರುತ್ತಾರೆಯೋ, ಸಜ್ಜನರ ಭೋಗ್ಯ ವಸ್ತುಗಳನ್ನು ನಾಶಪಡಿಸುತ್ತಾರೋ ಅವರೇ ಕೂಷ್ಮಾಂಡರೆಂದು ಕರೆಯಲ್ಪಡುತ್ತಾರೆ.'' ಆ ತಪಸ್ವಿಯು ಮತ್ತೆ ಈ ರೀತಿಯಾಗಿ ಹೇಳುತ್ತಲಿದ್ದನು. ''ವಾಸುದೇವನ ಸಂಕೀರ್ತನೆಯಿಂದ ನನಗೆ ಸ್ಥಿರಬುದ್ಧಿಯು ಹುಟ್ಟಲಿ. ಸರ್ವತೋ ಮುಖವಾದ ನನ್ನ ಸಂರಕ್ಷಣೆಯನ್ನು ಆತನು ಮಾಡಲಿ. ಹರಿಯೇ ಪರಬ್ರಹ್ಮ ಸ್ವರೂಪನು. ನನ್ನ ಮೋಕ್ಷಕಾಲದಲ್ಲಿಯೂ ಆತನ ನಾಮಸಂಕೀರ್ತನೆಯು ನನ್ನ ಸ್ವಭಾವವಾಗಿ ಉಳಿಯಲಿ.''

ಹೀಗೆ ಪರಮಾತ್ಮನ ಸ್ಮರಣೆಯಿಂದ ಪುನೀತನಾಗಿ ತಪಸ್ಸನ್ನಾಚರಿಸುವ ಆ ಮಹಾ ಪುರುಷನನ್ನು ನೋಡಿ ಬಲಿಷ್ಠನಾದ ಆ ರಾಕ್ಷಸನು ಆ ತಪಸಿಯ ಸಮೀಪಕ್ಕೆ ಹೋದನು.

ಆದರೆ ಸರ್ವ ರಕ್ಷಕನಾದ ವಿಷ್ಣುಸ್ತೋತ್ರದಿಂದ ಆ ರಾಕ್ಷಸನು ನಿಸ್ತೇಜಸ್ಕನಾಗಿ ತಾಪಸಿಯ ಸಮೀಪಕ್ಕೆ ಹೋಗಲು ಅಸಮರ್ಥನಾದನು. ಹೀಗೆ ದೂರದಲ್ಲಿಯೇ ನಿಂತಿರುವ ರಾಕ್ಷಸನನ್ನು ನೋಡಿ "ದೂರನಿಲ್ಲಲು ಕಾರಣವೇನು?" ಎಂದು ತಾಪಸಿಯು ಕೇಳಿದನು.

ತಾನು ಬಂದಿರುವ ಉದ್ದೇಶವನ್ನು ಹಾಗೂ ತಾಪಸಿಯ ತಪಸ್ಸಿನಿಂದ ತನ್ನ ತೇಜೋ ಹಾನಿ ಉಂಟಾದುದನ್ನು ಯಥಾವತ್ತಾಗಿ ಹೇಳಿಕೊಂಡು ಪಶ್ಚಾತ್ತಾಪಪಟ್ಟು ಬ್ರಾಹ್ಮಣನನ್ನು ತನ್ನ ದುಷ್ಕರ್ಮಗಳನ್ನು ದೂರಮಾಡಿ ಉದ್ಧರಿಸಬೇಕೆಂದು ಬೇಡಿಕೊಂಡನು. ತನ್ನ ದುಷ್ಕರ್ಮಗಳನ್ನು ಮತ್ತೆ ಮತ್ತೆ ತೋಡಿಕೊಂಡನು. "ನಾನು ಅನೇಕ ಸತ್ಪುರುಷರನ್ನು ಕೊಂದುದಾಯಿತು. ಸ್ತ್ರೀಯರನ್ನು, ವಿಧವೆಯರನ್ನು, ನಿರಾಪರಾಧಿ ಗಳನ್ನು ಹಿಂಸೆಪಡಿಸಿದ್ದೇನೆ. ಇಂಥ ಎಲ್ಲ ಪಾಪಕೃತ್ಯಗಳಿಂದ ಬಿಡುಗಡೆ ಹೊಂದಲು ನಿನ್ನ ಅನುಗ್ರಹ ಅಪೇಕ್ಷಿಸಿದ್ದೇನೆ. ಈಗ ನನಗೆ ಪಶ್ಚಾತ್ತಾಪವಾಗಿದೆ. ನೀನು ನನಗೆ ಸದುಪದೇಶವನ್ನು ಅನುಗ್ರಹಿಸು." ರಾಕ್ಷಸನ ಈ ಮಾತುಗಳನ್ನು ಕೇಳಿ ಅಲ್ಲಿಯೇ ಸುತ್ತಲಿದ್ದ ಬ್ರಾಹ್ಮಣರು "ಇಷ್ಟು ದುರ್ಮಾರ್ಗಗಾಮಿಯಾದ ನಿನಗೆ ಇಷ್ಟು ಜಾಗ್ರತೆಯಾಗಿ ಧರ್ಮಮಾರ್ಗವನ್ನು ತಿಳಿಯಬೇಕೆಂದು ಇಚ್ಛೆಯು ಹೇಗೆ ಉಂಟಾಯಿತು.? ಎಂದು ಪ್ರಶ್ನೆ ಮಾಡಿದರು.

ಆಗ ರಾಕ್ಷಸನು ಹೇಳುತ್ತಾನೆ. "ಎಲ್ಲರನ್ನೂ ಹಿಂಸಿಸುವಂತೆ ನಿಮ್ಮನ್ನೂ ಹಿಂಸಿಸಲು ನಾನು ಬಂದೆನು. ಆದರೆ ನೀನು ಪಠಿಸುತ್ತಿರುವ ಈ ರಕ್ಷಾಕವಚದಿಂದ ನನ್ನ ಬಲವು ಕುಗ್ಗಿತು. ತತ್ವಜ್ಞಾನ ಪೂರ್ವಕವಾದ ನಿರ್ವೇದವು ಉಂಟಾಯಿತು. ಆದುದರಿಂದ ಇಷ್ಟು ಪರಣಾಮವನ್ನುಂಟು ಮಾಡಿದ ಆ ಕವಚವು ಯಾವುದು? ಎಂಬುದನ್ನು ನನಗೆ ಅರುಹು. ಇದರಿಂದ ನನ್ನ ಪಾಪಗಳು ನಾಶವಾಗುವಂತೆ ದಯೆ ತೋರು." ಹೀಗೆ ರಾಕ್ಷಸನು ಪ್ರಾರ್ಥಿಸಿದ ನಂತರ ಬ್ರಾಹ್ಮಣನು ಧ್ಯಾನದೃಷ್ಟಿಯಿಂದ ಸ್ವಲ್ಪ ವಿಮರ್ಶಿಸಿ ಹೇಳಿದನು -

ನಿಂದ್ಯವಾದ ನಿನ್ನ ವ್ಯವಹಾರದಿಂದ ನಿರುತ್ಸಾಹಿತನಾದ ನೀನು ಉಪದೇಶಕ್ಕಾಗಿ ಪ್ರಾರ್ಥಿಸುವದು ನ್ಯಾಯವಾದ ಮಾತಾಗಿದೆ. ಪಶ್ಚಾತ್ತಾಪವು ಪಾಪನಿವೃತ್ತಿಗೆ ಕಾರಣೀಭೂತವಾದುದು. ಆದರೆ ನಾನು ರಾಕ್ಷಸರಿಗೆ ಯಾವ ಉಪದೇಶವನ್ನೂ ಮಾಡುವ ಸಂಪ್ರದಾಯವನ್ನಿಟ್ಟುಕೊಂಡಿಲ್ಲ. ಆ ರೀತಿ ಸಂಪ್ರದಾಯ ಇಟ್ಟುಕೊಂಡಿರುವ ಬ್ರಾಹ್ಮಣರ ಬಳಿಗೆ ಹೋಗು. ಈ ಮಾತನ್ನು ಕೇಳಿ ರಾಕ್ಷಸನು ಚಿಂತೆಯಿಂದ ವ್ಯಾಕುಲನಾಗಿ ಉಪದೇಶಕ ಬ್ರಾಹ್ಮಣರನ್ನು ಹುಡುಕುತ್ತ ಹೊರಟನು.

ಹಸಿವೆ ನೀರಡಿಕೆಗಳಿಂದ ದಣಿದರೂ, ಬಳಲಿದರೂ ಈಗ ಆತನು ಪ್ರಾಣಿಹಿಂಸೆ ಮಾಡಲಿಲ್ಲ. ಹಾಗೆಯೇ ಬರುತ್ತಿರುವಾಗ ಕೈಯಲ್ಲಿ ಫಲಗಳನ್ನು ಹಿಡಿದುಕೊಂಡು ಬರುತ್ತಿರುವ ಒಬ್ಬ ಬ್ರಹ್ಮಚಾರಿಯು ಕಂಡನು. ರಾಕ್ಷಸನು ಆತನನ್ನು ಹಿಡಿದುಕೊಂಡನು. ಬ್ರಹ್ಮಚಾರಿಯು ಹೆದರಿ ಹೇಳಿದನು. "ಯಾವ ಉದ್ದೇಶದ ಸಲುವಾಗಿ ನನ್ನನ್ನು ನೀನು ಹಿಡಿದಿರುವಿ.?" ಆಗ ರಾಕ್ಷಸನು ಹೇಳಿದನು "ನನ್ನದೊಂದು ನಿಯಮವಿದೆ." ದಿವಸದ ಆರನೇ ಒಂದು ಭಾಗದಲ್ಲಿ ಯಾರು ಸಿಗುತ್ತಾರೆಯೋ ಅವರನ್ನು ಆಹಾರವನ್ನಾಗಿ ನಾನು ಮಾಡಿಕೊಳ್ಳುವೆನು. ಈ ಸಮಯದಲ್ಲಿ ನೀನು ನನಗೆ ದೊರೆತಿರುವಿ. ನಿನ್ನನ್ನು ಬಿಟ್ಟರೆ ಕ್ರೂರ ಪ್ರಕೃತಿಯಾದ ನನಗೆ ಈಗ ಹಸಿವೆಯು ಹೇಗೆ ತೀರಬೇಕು?" ಆಗ ಆ ಬ್ರಾಹ್ಮಣನು ಅಂದನು"

ಎಲೈ ರಾಕ್ಷಸನೇ, ನೀನು ನನ್ನನ್ನು ಭಕ್ಷಿಸಲು ಯಾವ ಅಭ್ಯಂತರವೂ ಇಲ್ಲ. ಗುರುಗಳಿಗಾಗಿ ನಾನು ಈಗ ಫಲ ತಂದಿರುವೆನು. ಅವುಗಳನ್ನು ಗುರುಗಳಲ್ಲಿ ಒಪ್ಪಿಸಿ, ಗುರುಭಕ್ತಿಯನ್ನು ತೋರಿಸಿ ಹಿಂತಿರುಗಿ ನಿನ್ನಲ್ಲಿಯೇ ಬಂದು ಬಿಡುವೆನು. ಈ ನನ್ನ ಕಾರ್ಯಕ್ಕೆ ಅವಕಾಶ ಕೊಡು.''

ಇಂತೆಂಬ ಈ ಮಾತನ್ನು ಕೇಳಿ ರಾಕ್ಷಸನು ಹೇಳುತ್ತಾನೆ. ''ಎಲೈ ಬ್ರಾಹ್ಮಣನೇ, ದಿವಸದ ಆರನೇಯ ಭಾಗದಲ್ಲಿ ನನಗೆ ಸಿಕ್ಕಿದವನು ದೇವತೆಯಾದರೂ ಅವನನ್ನು ಬಿಡಲು ಸಾಧ್ಯವಿಲ್ಲ.'' ಆದರೆ ನಿನ್ನ ಬಿಡುಗಡೆಗೆ ಒಂದು ಕಾರಣವಿದೆ. ಅದನ್ನು ನೀನು ನಡೆಸಿ ಕೊಟ್ಟಲ್ಲಿ ನಿನ್ನನ್ನು ಅವಶ್ಯವಾಗಿ ಬಿಡುವೆನು'' ಎಂದನು. ಆಗ ಬ್ರಾಹ್ಮಣನು ನುಡಿದನು, ''ನನ್ನ ಧರ್ಮ, ವ್ರತನಿಯಮಗಳಿಗೆ ವಿರುದ್ಧವಾಗದೇ ಇದ್ದರೆ ನಿನ್ನ ಮಾತನ್ನು ನಾನು ಖಂಡಿತವಾಗಿಯೂ ನಡೆಸಿಕೊಡುತ್ತೇನೆ.'' ಆಗ ರಾಕ್ಷಸನು ಹೇಳುತ್ತಾನೆ, ''ಎಲೈ ಬ್ರಾಹ್ಮಣೋತ್ತಮನೇ, ನಾನು ರಾಕ್ಷಸ ಜಾತಿಯವನಾದುದರಿಂದ ಕರ್ತವ್ಯಾಕರ್ತವ್ಯ ವಿವೇಕವಿಲ್ಲದೇ ಅನೇಕ ಪಾಪಕರ್ಮಗಳನ್ನು ಮಾಡಿರುವೆನು. ಪಾಪಾಚರಣದಲ್ಲಿ ನಿರತನಾಗಿರುವದರಿಂದಲೇ ರಾಕ್ಷಸ ಜನ್ಮವನ್ನು ಹೊಂದಿ ಪುನಃ ಪಾಪಕರ್ಮಗಳನ್ನೇ ಮುಂದುವರಿಸಿರುವೆನು.

ಅಂತಹ ಪಾಪಕರ್ಮಗಳಿಂದ ಬಿಡುಗಡೆ ಹೊಂದಲು ಸಮರ್ಥನಾದ ಉಪಾಯವನ್ನು ನನಗೆ ಉಪದೇಶಿಸು. ಹಾಗೆ ನೀನು ಉಪದೇಶಿಸುವದಾದರೆ ನಾನು ಈಗ ಹಸಿದಿದ್ದೂ ಖಂಡಿತವಾಗಿ ನಿನ್ನನ್ನು ಬಿಟ್ಟುಬಿಡುತ್ತೇನೆ.'' ಈ ರೀತಿಯಾದ ರಾಕ್ಷಸನ ಕೇಳಿಕೆಯನ್ನು ತಿಳಿದು ಮುನಿಕುಮಾರನು ಉಪದೇಶಿಸಲು ಮನಸ್ಸು ಮಾಡಿದರೂ ಸರಿಯಾದ ಉಪಾಯವನ್ನು ಹೇಳಲಶಕ್ತನಾಗಿ ಬಹಳ ಚಿಂತೆಗೊಳಗಾದನು. ಹಾಗೆಯೇ ಚಿಂತೆಯಿಂದ ಅಗ್ನಿಗೆ ಶರಣಾಗತನಾದನು. ''ನಿತ್ಯವೂ ಗುರು ಶುಶ್ರೂಷೆಯನ್ನು ಮಾಡಿ ನಾನು ಅಗ್ನಿಯನ್ನು ಆರಾಧಿಸಿದ್ದೇ ಆಗಿದ್ದರೆ ಅಗ್ನಿದೇವನು ನನ್ನನ್ನು ರಕ್ಷಿಸಲಿ. ಈ ಬ್ರಹ್ಮಚರ್ಯಾಶ್ರಮದಲ್ಲಿ ಅಗ್ನಿಯಲ್ಲಿ ವಿಶೇಷವಾಗಿ ಗೌರವ ಬುದ್ಧಿಯನ್ನು ಇಟ್ಟುಕೊಂಡ ನನ್ನನ್ನು ಅಗ್ನಿದೇವನು ರಕ್ಷಿಸಲಿ.'' ಹೀಗೆ ಅಗ್ನಿಯನ್ನು ಪ್ರಾರ್ಥಿಸಿರುವಂತೆ ಸರಸ್ವತಿಯೊಬ್ಬಳು ಆವಿರ್ಭವಿಸಿದಳು. ಬಂದ ಆ ಸರಸ್ವತಿಯು ರಾಕ್ಷಸನ ಬಂಧನಕ್ಕೆ ಸಿಲುಕಿ ವ್ಯಾಕುಲನಾದ ಬ್ರಾಹ್ಮಣನಿಗೆ ಹೇಳಿದಳು. ''ಎಲೈ ಪುತ್ರನೇ, ಭಯಪಡಬೇಡ, ನಾನು ನಿನ್ನನ್ನು ವಿಪತ್ತಿನಿಂದ ಬಿಡಿಸುತ್ತೇನೆ. ನಿನ್ನ ನಾಲಿಗೆಯಲ್ಲಿ ವಾಸಮಾಡಿ ಎಲ್ಲವನ್ನು ನಾನು ಹೇಳುತ್ತೇನೆ'' ಎಂದು ಹೇಳಿ ಸರಸ್ವತಿಯು ಅದೃಶ್ಯಳಾದಳು.

ಅನಂತರ ಬ್ರಾಹ್ಮಣನ ವಾಣಿಯಲ್ಲಿ ಒಂದು ಆವೇಶ ಬಂದಿತು. ಆಗ ಆತನು ರಾಕ್ಷಸನಿಗೆ ಹೇಳಿದನು ''ಇದು ಬಹಳ ಮಹತ್ವದ ಸ್ತೋತ್ರವಿದೆ. ಇದನ್ನು ಜಪಿಸುವವರು ಶಾಂತಿ, ಪುಷ್ಟಿಗಳನ್ನು ಹೊಂದುತ್ತಾರೆ. ಅದು ಯಾವದೆಂದರೆ.

ಓಂ, ಹರಿಕೃಷ್ಣಂ, ಹೃಷೀಕೇಶಂ, ವಾಸುದೇವಂ ಜನಾರ್ದನಂ
ಪ್ರಣತೋಸ್ಮಿ ಜಗನ್ನಾಥಂ, ಸ ಮೇ, ಪಾಪಂ ವ್ಯಪೋಹತು
ಚರಾಚರ ಗುರುಂ ನಾಥಂ ಗೋವಿಂದಂ ಶೇಷಶಾಯಿನಂ
ಪ್ರಣತೋಸ್ಮಿ ಪರಂ ದೇವಂ ಸರ್ವಪಾಪಂ ವ್ಯಪೋಹತು

ಹೀಗೆ ಚರಾಚರ ವಸ್ತುಗಳಲ್ಲಿ ಹಿತೈಷಿಯಾದ, ಶೇಷಶಾಯಿಯಾದ ಪರಮಾತ್ಮನು ಪಾಪನಾಶ ಮಾಡಲಿ, ಕೇಶಿ, ಕಂಸ, ಅರಿಷ್ಟ ಮೊದಲಾದ ದುಷ್ಟರನ್ನು ನಾಶಮಾಡಿ ಸಜ್ಜನರನ್ನು ಉದ್ಧರಿಸಿದ ಪ್ರಭುವಿಗೆ ನಾನು ನಮಸ್ಕರಿಸುತ್ತೇನೆ. ನನ್ನ ಎಲ್ಲ ಪಾಪಗಳನ್ನು ಆತನು ನಾಶಪಡಿಸಲಿ. ಆತನು ಸರ್ವ ವ್ಯಾಪಕನೂ ಸರ್ವಾಧಾರಕನೂ ಆಗಿರುವನು.

ಜ್ಞಾನಿಗಳಾದ ಮಹಾತ್ಮರು ತಮ್ಮ ಜ್ಞಾನ ಸಾಧನೆಯಿಂದ ಎಷ್ಟೋ ದಿವಸ ಚಿಂತನೆ ಮಾಡಿ ಯಾವ ವಾಸುದೇವನನ್ನು ಹೊಂದುವರೋ ಅಂಥ ಸೃಷ್ಟ್ಯಾದಿ ಅಷ್ಟ ಕರ್ತೃತ್ವವನ್ನು ವಹಿಸಿದ ಪರಮಾತ್ಮನಿಗೆ ನಾನು ನಮಸ್ಕರಿಸುತ್ತೇನೆ. ಭೂಮಿಯನ್ನು ಧರಿಸಿ ದೈತ್ಯರನ್ನು ನಾಶ ಮಾಡಿ ದೇವತೆಗಳನ್ನು ರಕ್ಷಿಸಿದ ಯಜ್ಞಯಾಮಕನಾದ ಆ ಪರಮಾತ್ಮನನ್ನು ನಾನು ಅನನ್ಯವಾಗಿ ನಮಸ್ಕರಿಸುತ್ತೇನೆ. ಪಾತಾಳಲೋಕದಲ್ಲಿರುವ ಪ್ರಾಣಿಗಳನ್ನೂ ಸಮಸ್ತ ಲೋಕವನ್ನೂ ಕಾಲರೂಪಿ ಯಾಗಿ ಸಂಹರಿಸುವ ದೇವ ಪಿತೃ ರಾಕ್ಷಸರಲ್ಲಿಯೂ ಅಂತರ್ಯಾಮಿಯಾಗಿ ನಿಂತುಕೊಂಡು ಎಲ್ಲ ಜೀವರಿಂದಲೂ ಕಾರ್ಯಮಾಡಿಸು ತ್ತಲಿರುವ ಪಶು ಮೃಗ ಸಸ್ಯಗಳಲ್ಲಿಯೂ ಸಹ ವ್ಯಾಪ್ತನಾಗಿ ಆಯಾ ಕಾರ್ಯಗಳನ್ನು ನಿರ್ವಹಿಸುತ್ತಿರುವ ಪರಮಾತ್ಮನನ್ನು ನಾನು ವಂದಿಸುತ್ತೇನೆ.

ಕಾಲನಿಯಾಮಕನಾದ ಪರಮಾತ್ಮನು ದುಷ್ಟರಲ್ಲಿ ನಿಂತುಕೊಂಡು ದುಷ್ಟ ವ್ಯವಹಾರಗಳನ್ನು ಮಾಡಿಸಿ ಅವರಿಗೆ ದುರ್ಗತಿಯನ್ನೇ ಉಂಟುಮಾಡಿ ಕೊಡುವವನು ಸಕಲ ಭೋಜ್ಯವಸ್ತುಗಳಲ್ಲಿಯೂ ಆತನೇ ವ್ಯಾಪ್ತನು. ಎಲ್ಲ ಕಡೆಯಲ್ಲಿಯೂ ವ್ಯಾಪ್ತನಾಗಿದ್ದರೂ ಭಿನ್ನಭಿನ್ನ ಸ್ಥಳಗಳಲ್ಲಿ ಬೇರೆ ನಾಮಗಳನ್ನು ಧರಿಸಿದಾ ಪರಮಾತ್ಮನಿಗೆ ಪುನಃ ಪುನಃ ನಮಸ್ಕಾರಗಳು. ನೀನೇ ವಂಚನೆಯಿಂದ ಬಲಿಯನ್ನು ಜಯಿಸಿದವನು, ಕಾರ್ತವೀರ್ಯನ ದರ್ಪವನ್ನು ನಾಶಪಡಿಸಿದವನು. ರಾವಣರಂತಹ ಅಸುರರನ್ನು ಹತ್ತಿಕ್ಕಿದವನು, ಪೂತನಾ ಮೊದಲಾದ ದುಷ್ಟರನ್ನು ನಿಗ್ರಹಿಸಿದವನು ಇಂಥ ನಿನಗೆ ನಮಸ್ಕಾರವಿರಲಿ.'' ಈ ರೀತಿಯಾದ ಉತ್ತಮೋತ್ತಮವಾದ ವೈಷ್ಣವ ಧರ್ಮ ರೂಪನಾದ ಈ ಸ್ತೋತ್ರವನ್ನು ನಿತ್ಯವೂ ಯಾರು ಜಪಿಸುತ್ತಾರೆಯೋ ಅವರು ಪುಣ್ಯಶಾಲಿಗಳೂ, ಮತ್ತೂ ಹಿಂದಿನ ಏಳು ಜನ್ಮಗಳಿಂದ ಮಾಡಿದ ಮಹಾಪಾತಕಗಳನ್ನು ನಾಶಮಾಡಿಕೊಳ್ಳುವವರೂ ಆಗುವರು. ಈ ಸ್ತೋತ್ರವನ್ನು ಜಪಿಸಿ ಎಳ್ಳಿನಿಂದ ತುಂಬಿದ ಹದಿನಾರು ಪಾತ್ರೆಗಳನ್ನು ದಾನ ಮಾಡುತ್ತ ಒಂದು ವರ್ಷದವರೆಗೆ ನಿಯಮವಂತನಾದವನು ವಿಷ್ಣುಲೋಕಕ್ಕೆ ಹೋಗುವನು.

ಇದು ಪರಮಸತ್ಯವಾದ ಮಾತು. ಹೀಗೆ ಆ ಬ್ರಾಹ್ಮಣಕುಮಾರನು ಆ ರಾಕ್ಷಸನಿಗೆ ಈ ಬೀಜ ಮಂತ್ರವನ್ನು ಉಪದೇಶಿಸಿ ಅವನಿಂದ ಬಿಡುಗಡೆಯನ್ನೂ ಹೊಂದಿದನು. ಮತ್ತೆ ಆ ಬ್ರಾಹ್ಮಣಕುಮಾರನು ಹೇಳಿದ್ದೇನೆಂದರೆ, ''ಎಲೈ ಪುಣ್ಯಶಾಲಿಯೇ, ಅಗ್ನಿಸೇವೆಯ ಬಲದಿಂದ ಸರಸ್ವತಿಯು ನನ್ನ ನಾಲಿಗೆಯಲ್ಲಿ ನಿಂತಿರುವದರಿಂದ ಈ ಸರ್ವಶಾಂತಿಪ್ರದವಾದ ವಿಷ್ಣುಸ್ತೋತ್ರವನ್ನು ನಾನು ನಿನಗೆ ಹೇಳಿರುವೆನು. ಈ ಸಾರಸ್ವತಸ್ತೋತ್ರವು ನಿನ್ನ ಸರ್ವ ಪಾಪಗಳಿಗೂ ನಾಶಕವಾಗಿರುತ್ತದೆ. ಈ ಸ್ತೋತ್ರದಿಂದ ಆ ಹೃಷಿಕೇಶನನ್ನು ದೃಢವಾದ ಭಕ್ತಿಯಿಂದ ಸ್ತೋತ್ರ ಮಾಡು. ನಿಜವಾಗಿಯೂ ನೀನು

ಎಲ್ಲ ಪಾಪಗಳಿಂದಲೂ ಮುಕ್ತಿಯನ್ನು ಹೊಂದುವಿ. ಹರಿಯ ಈ ಸ್ತೋತ್ರವು ಸರ್ವ ಪಾಪನಾಶಕವಾಗಿರುವದರಲ್ಲಿ ಸಂದೇಹವಿಲ್ಲ.''

ಇಷ್ಟು ಹೇಳಿದ ನಂತರ ಆ ರಾಕ್ಷಸನು ಬ್ರಾಹ್ಮಣನಿಂದ ಸ್ತೋತ್ರವನ್ನು ಕೇಳಿ ಭಕ್ತಿಯಿಂದ ಆತನನ್ನು ನಮಸ್ಕರಿಸಿ ತಪಸ್ಸನ್ನಾಚರಿಸುವದರ ಸಲುವಾಗಿ ಶಾಲಿಗ್ರಾಮವೆಂಬ ಕ್ಷೇತ್ರಕ್ಕೆ ಹೊರಟನು. ಈ ಸಾರಸ್ವತಸ್ತೋತ್ರವನ್ನು ಅಲ್ಲಿ ಅವನು ಅಹೋರಾತ್ರಿ ಜಪಿಸಿದನು. ಮಹಾವಿಷ್ಣುವಿನ ಅನುಗ್ರಹದಿಂದ ಸರ್ವಪಾಪಗಳಿಂದಲೂ ಮುಕ್ತಿಯನ್ನು ಹೊಂದಿ ಕೊನೆಗೆ ಶುಭವಾದ ವಿಷ್ಣುಲೋಕವನ್ನು ಹೊಂದಿದನು. ಬ್ರಾಹ್ಮಣನ ಮುಖವನ್ನಾಶ್ರಯಿಸಿ ಸ್ವಯಂ ಸರಸ್ವತಿಯೇ ಹೇಳಿದ ಈ ವಿಷ್ಣುಸಾರಸ್ವತ ಸ್ತೋತ್ರವು ಪರಮ ಮಂಗಲಕರವಾದುದು. ಯಾರು ಶ್ರದ್ಧೆಯಿಂದ ಇದನ್ನು ಪಠಿಸುತ್ತಾರೋ, ಅವರು ಸರ್ವ ದುಃಖಗಳಿಂದಲೂ ಬಿಡುಗಡೆಯನ್ನು ಹೊಂದುತ್ತಾರೆ.

**ವಾಮನ ಮಹಾಪುರಾಣದಲ್ಲಿ ರಾಕ್ಷಸನ ಪರಿವರ್ತನೆ ಎಂಬ ೮೬ನೇಯ ಅಧ್ಯಾಯವು ಮುಗಿದುದು**



## ಪಾಪ ಪ್ರಶಮನಸ್ತೋತ್ರ — ಅಧ್ಯಾಯ - ೮೭

**ನಮಸ್ತೇಽಸ್ತು ಜಗನ್ನಾಥ ದೇವದೇವ ನಮೋಽಸ್ತುತೇ ।**
**ವಾಸುದೇವ ನಮಸ್ತೇಽಸ್ತು ಬಹುರೂಪ ನಮೋಽಸ್ತುತೇ ॥**

ಪ್ರಹ್ಲಾದನು ಪಾಪಪ್ರಶಮನಸ್ತುತಿಯನ್ನು ಮಾಡುತ್ತಾನೆ. ಅದೇನೆಂದರೆ - ''ಎಲೈ ಜಗನ್ನಾಥನೇ, ಸರ್ವತೋಮುಖವಾದ ಬಲವುಳ್ಳವನೇ, ವೃಷಭಧ್ವಜನಾದ ಶಂಕರನಿಗೂ ಕೂಡ ಅಂತರ್ಯಾಮಿಯಾದವನೇ, ನಿನಗೆ ಅನಂತಾನಂತ ವಂದನೆಗಳು.

ನೀನು ಸರ್ವತ್ರದಲ್ಲಿಯೂ ವ್ಯಾಪಕನಾಗಿರುವಿ. ಪುರುಷೋತ್ತಮನಾದ ನೀನು ಅವಾಂತರ ಪ್ರಳಯಗಳಿಗೂ, ಮಹಾಪ್ರಳಯಗಳಿಗೂ ಕಾರಣನಾಗಿರುವಿ. ಸೃಷ್ಟಿಸುವ ಜಗತ್ತನ್ನೇ ಗರ್ಭದಲ್ಲಿ ಧರಿಸಿ ಧವಲಕೀರ್ತಿಯಾದ ನೀನು ಹಿರಣ್ಯ ಗರ್ಭಮೂರ್ತಿಯಲ್ಲಿ ಅಂತರ್ಭವಿಸಿ ಜಗತ್ತನ್ನು ಸೃಷ್ಟಿಸಿದಿ. ಧರ್ಮಾಧರ್ಮದರ್ಶಿಯಾದ ಯಮನನ್ನೇ ನೇತ್ರವಾಗಿ ಹೊಂದಿರುವ ನಿನಗೆ ಅನೇಕ ನಮಸ್ಕಾರಗಳು. ಜಗತ್ ಚಕ್ರಸಂಚಾಲಕನಾಗಿಯೂ ಚತುರ್ಮುಖಬ್ರಹ್ಮನಿಗೆ ಕಾರಣವಾದ ಪದ್ಮವನ್ನು ನಾಭಿಯಲ್ಲಿ ಧರಿಸಿದವನಾಗಿಯೂ, ಪಂಚಮಹಾಭೂತಗಳಲ್ಲಿ ಪ್ರವೇಶಿಸಿ ಅವುಗಳ ಆವಾಸಸ್ಥಾನವಾಗಿಯೂ ಮಹಾಲಕ್ಷ್ಮೀದೇವಿಗೂ ಕೂಡ ಆಶ್ರಯವಾಗಿರುವ, ನಿನಗೆ ಅನೇಕ ನಮಸ್ಕಾರಗಳು. ಅಷ್ಟಿಷೇಣ ಮಹಾಸೇನ ಎಂಬ ಅನೇಕ ಭಕ್ತರಿಂದ ಸ್ತೋತ್ರಿಸಲ್ಪಟ್ಟ, ಶ್ವೇತದ್ವೀಪವಾಸಿಯಾದ, ದ್ವಾದಶಾದಿತ್ಯರಿಗೂ ನಿಯಾಮಕನಾದ ಹರಿತವರ್ಣಕೇಶವುಳ್ಳ ಮಹಾಕೇಶನಾದ ರುದ್ರನಲ್ಲಿಯೂ ಅಂತರ್ಯಾಮಿಯಾದ ಇಂದ್ರಿಯಗಳಿಗೆ ನಿಯಾಮಕನಾದ, ಬಲರಾಮನ ರೂಪದಲ್ಲಿ ನಿಂತ ನಿನಗೆ ಅನಂತ ನಮಸ್ಕಾರಗಳು. ವ್ರತನಿಯಮದಿಂದ ನೀನು ದರ್ಭಶಾಯಿಯಾಗಿರುವಿ. ಯೋಗನಿದ್ರೆಯಿಂದ ನೀನು ಸಮುದ್ರಜಲಶಾಯಿಯಾಗಿರುವಿ. ಮಧುನಾಮಕ ದೈತ್ಯನ ನಾಶಕನಾದ ನೀನು ಸಹಸ್ರಶಿರಸ್ಸುಳ್ಳವನೂ ಚಂದ್ರಸೂರ್ಯ, ಅಗ್ನಿಗಳೆಂಬ ನೇತ್ರವುಳ್ಳವನೂ ಆಗಿರುವಿ.

ಅಥರ್ವಶಿರವೆಂಬ ವೇದ ಪ್ರತಿಪಾದ್ಯನಾದ ನೀನು ಬಹುಮುಖವಾದ ಭುಜ ಪರಾಕ್ರಮವನ್ನು ಹೊಂದಿ ಎಲ್ಲ ದೇವತೆಗಳಿಂದಲೂ ಪೂಜಿಸಲ್ಪಟ್ಟಿರುವಿ. ವಿಶ್ವಾತ್ಮಕ ವಿಶ್ವೋತ್ಪತ್ತಿ ಕಾರಣ ವಿಶ್ವರೂಪಿಯಾದ ನೀನು ಜಗತ್ತಿಗೆ ಮೂಲಕಾರಣನಾಗಿರುವಿ. ಇಂಥ ನಿನಗೆ ನಮಸ್ಕಾರಗಳು. ನೀನು ದೊಡ್ಡ ಆಲದಮರದಂತಿರುವಿ. ಅದರ ರೆಂಬೆಗಳೂ, ಎಲೆಗಳೂ, ಮೊಗ್ಗುಗಳು ನೀನೇ ಆಗಿರುವಿ. ನಿನ್ನ ಮೂಲಸ್ಥಾನವೇ ಬ್ರಾಹ್ಮಣರು. ಕೊಂಬೆಗಳು ಬುಡವೇ ಕ್ಷತ್ರಿಯರು. ಕೊಂಬೆಗಳೇ ವೈಶ್ಯರು, ತೊಗಟೆಯೇ ಶೂದ್ರರು. ಹೀಗೆ ನೀನು ವನಸ್ಪತಿ ರೂಪನಾಗಿರುವಿ. ಅಗ್ನಿಯೊಡನೆ ಬ್ರಾಹ್ಮಣರು ನಿನ್ನ ಮುಖದಿಂದಲೂ ಆಯುಧ ಧಾರಿಗಳಾದ ಕ್ಷತ್ರಿಯರು ನಿನ್ನ ಬಾಹುಗಳಿಂದಲೂ, ವೈಶ್ಯರೂ ತೊಡೆಗಳಿಂದಲೂ, ಶೂದ್ರರೂಪಾದಗಳಿಂದಲೂ ಉದಯಿಸಿದರು. ನಿನ್ನ ಭಿನ್ನ ಭಿನ್ನವಾದ ಅವಯವಗಳಿಂದ ಅಂತರಿಕ್ಷ, ಚಂದ್ರ, ಬ್ರಹ್ಮ, ರುದ್ರ ಮೊದಲಾದ ದೇವತೆಗಳು ಹುಟ್ಟಿದರು. ಇಂದ್ರಾಗ್ನಿಗಳು ನಿನ್ನ ಮುಖದಿಂದ ಉದಯಿಸಿದರು. ಪಶುಗಳೆಲ್ಲರೂ ನಿನ್ನ ಮಲದಿಂದ ಉಂಟಾದರು. ಔಷಧಿ ವಿಶೇಷಗಳೆಲ್ಲವೂ ನಿನ್ನ ರೋಮದಿಂದ ಉದಯಿಸಿ ದವು. ಇವೆಲ್ಲಕ್ಕೂ ಉತ್ಪಾದಕನಾಗಿದ್ದರೂ ನೀನು ಮಾತ್ರ ಪಾಪಲೇಪವಿಲ್ಲದ ಶುದ್ಧ ಮೂರ್ತಿಯಾಗಿರುವಿ. ವಷಟ್ಕಾರ, ವೌಷಟ, ಸ್ವಧಾ ಸ್ವಾಹಾಕಾರಗಳಿಗೆ ವಾಚ್ಯನಾಗಿರುವ ನೀನು ಯಜ್ಞದಲ್ಲಿ ಉದ್ದಿಷ್ಟರಾದ ದೇವತೆಗಳಲ್ಲಿ ಅಂತರ್ಯಾಮಿಯಾಗಿದ್ದುಕೊಂಡು ನೀನೇ ಫಲಪ್ರದನಾಗಿರುವಿ.

ಪ್ರಭುವೇ, ನೀನು ಸರ್ವವೇದಮಯನೂ, ಸರ್ವದೇವಮಯನೂ, ಸರ್ವಜ್ಞಮೂರ್ತಿಯೂ ಆಗಿರುವಿ. ಭೂಲೋಕ, ಭುವರ್ಲೋಕ, ಸುರ್ವಲೋಕ ಎಂಬ ಲೋಕಗಳಲ್ಲಿ ವ್ಯಾಪ್ತನಾಗಿ ಮೋಕ್ಷವೆಂಬ ಅಮೃತಪ್ರದಾನ ಮಾಡುವವನಾಗಿಯೂ, ಯಜ್ಞಕರ್ತುವಾದ ಯಜಮಾನನಲ್ಲಿ ಅಂತರ್ಯಾಮಿಯಾಗಿ ಯಜ್ಞಮಾಡಿಸುವವನಾಗಿಯೂ, ಯಜ್ಞ ಸಾಧನಗಳಾದ ಸ್ರುಕ್, ಸ್ರುವಗಳಲ್ಲಿ ವ್ಯಾಪ್ತನಾಗಿಯೂ, ಹೋಮ ದ್ರವ್ಯಸಾರ ಭೋಜಿಯಾಗಿಯೂ ನೀನು ಯಜ್ಞರೂಪನಾಗಿರುವಿ. ಯಜ್ಞದಲ್ಲಿ ಬ್ರಹ್ಮ, ಹೋತಾ, ಉದ್ಗಾತೃ ಎಂಬ ಋತ್ವಿಜರು ಇರುವರು. ಅವರಲ್ಲಿಯೂ ನೀನೇ ಆವಾಸವಾಗಿರುವಿ. ನಿನ್ನ ಪ್ರಕಾಶವು ಸಾವಿರಾರು ಸೂರ್ಯ ಚಂದ್ರರಷ್ಟು ಇರುವದು. ಮಾಸಗಳೆಂಬ ಹನ್ನೆರಡು ಹಲ್ಲುಗಳಿಂದ ಕೂಡಿದ ಋತುವೆಂಬ ಆರು ಮಧ್ಯಭಾಗದಿಂದ ಕೂಡಿದ ಕಾಲಚಕ್ರಕ್ಕೆ ನೀನೇ ಮುಖ್ಯ ಸಂಚಾಲಕನಾಗಿರುವಿ. ನಿನ್ನ ಕೀರ್ತಿಯು ಮಹೋನ್ನತವಾದುದು. ನಿನ್ನಲ್ಲಿ ನಾನು ಅನನ್ಯ ಶರಣಾಗತನಾಗಿದ್ದೇನೆ'' ಎಂದು ಪ್ರಹ್ಲಾದ ರಾಜನು ಸ್ತೋತ್ರಗೈದನು. ಈ ಸ್ತೋತ್ರವನ್ನು ವಾರಾಣಸಿಯಲ್ಲಿ ಮಹೇಶ್ವರನು ಕೇಶವಸ್ವಾಮಿಯ ಮುಂದೆ ಪಠಿಸಿ ಅಲ್ಲಿರುವ ತೀರ್ಥದಲ್ಲಿ ಸ್ನಾನಮಾಡಿ ಬ್ರಹ್ಮಹತ್ಯಾಪಾಪದಿಂದ ಮುಕ್ತನಾಗಿ ಉಪಶಾಂತಿಯಿಂದ ತುಷ್ಟನಾದನು. ಯಾರು ಈ ಸ್ತೋತ್ರವನ್ನು ಪಠಿಸುತ್ತಾರೆಯೋ ಅವರು ಪಾಪಮುಕ್ತರಾಗಿ ವಿಷ್ಣುಲೋಕದಲ್ಲಿ ಸಂತೋಷಿಸುತ್ತಾರೆ.

ಇತಿ ವಾಮನ ಮಹಾಪುರಾಣದಲ್ಲಿ ೮೭ನೇಯ ಅಧ್ಯಾಯವು ಮುಗಿದುದು

—o—

## ಎರಡನೆಯ ಪಾಪ ಪ್ರಶಮನ ಸ್ತೋತ್ರ | ಅಧ್ಯಾಯ - ೮೮

**ದ್ವಿತೀಯಂ ಪಾಪಶಮನಂ ಸ್ತವಂ ವಕ್ಷ್ಯಾಮಿ ತೇ ಮುನೇ ।**
**ಯೇನ ಸಮ್ಯಗಧೀತೇನ ಪಾಪನಾಶನಂ ಗಚ್ಛತಿ**

ಪುಲಸ್ತ್ಯರು ಪಾಪಶಮನವೆಂಬ ಮತ್ತೊಂದು ಸ್ತೋತ್ರವನ್ನು ಹೇಳುತ್ತಾರೆ-ದೇವತೆಗಳ ಒಡೆಯನಾದ ವಿಷ್ಣುವು ಮತ್ಸ್ಯಕೂರ್ಮರೂಪಿಯಾಗಿ ಭಕ್ತ ಜನರ ಕಲ್ಯಾಣವನ್ನು ಕೋರಿದ್ದಾನೆ. ಆತನಿಗೆ ನಮಸ್ಕಾರವನ್ನು ಸಲ್ಲಿಸುತ್ತಾರೆ. ಕುಮಾರಿಲ ರೂಪಿಯಾದ ಶಂಕರನನ್ನೂ ಗರುಡವಾಹನನಾದ ನಾರಾಯಣನನ್ನೂ, ವಿಜಯಪ್ರದನಾದ ನರಸಿಂಹನನ್ನೂ, ಬ್ರಾಹ್ಮಣಪ್ರಿಯನಾದ ಅಖಂಡನಾದ ಕಾಮಪಾಲನನ್ನೂ, ವಿಶ್ವಕಾರಣನಾದ ಅಜಿತಮೂರ್ತಿಯನ್ನೂ ನಾನು ನಮಸ್ಕರಿಸುತ್ತೇನೆ.

ಅನಂತರ ಶೂಲಪಾಣಿಯಾದ ಶಿವನನ್ನು, ಗದಾಪಾಣಿಯಾದ ಮಹಾವಿಷ್ಣುವನ್ನು, ಶಾಂತನಾದ ಮಾರ್ಕಂಡೇಯನನ್ನು, ಷಣ್ಮುಖನನ್ನು, ಗಜಮುಖದೇವನನ್ನೂ ನಾನು ಕ್ರಮವಾಗಿ ನಮಸ್ಕರಿಸುವೆನು. ನಾಚೀಕೇತವೆಂಬ ಅಗ್ನಿತ್ರಯವುಳ್ಳ ಕರ್ಮದಿಂದ ಲಭ್ಯನಾಗುವ ಸರ್ವವ್ಯಾಧಿ ನಾಶಕನಾದ ಬ್ರಹ್ಮಮೂರ್ತಿಯನ್ನೂ ಹಾಗೂ ಜಟಾಧಾರಿಯಾದ ಶಂಕರನನ್ನೂ ನಮಸ್ಕರಿಸಿದ ನಂತರ ಭೀಮೇಶ್ವರನನ್ನೂ, ಹಾಟಕೇಶ್ವರನ್ನೂ, ಸದಾಹಂಸ ಘ್ರಾಣತರ್ಪಣ ಮೂರ್ತಿ ಸುವರ್ಣಕವಚಧಾರಿ, ಮೊದಲಾದ ಮೂರ್ತಿಗಳನ್ನು ನಾನು ನಮಸ್ಕರಿಸುತ್ತೇನೆ. ಶ್ರೀಕಂಠ, ನೀಲಕಂಠ, ಸದಾಶಿವ, ಶರ್ಮ, ಗೌರೀಶ, ಲಕುಡೇಶ್ವರ, ಎಂಬ ತೀರ್ಥ ದೇವತೆಗಳನ್ನೂ ಕೃಷ್ಣನ ಅನೇಕ ಮೂರ್ತಿಗಳನ್ನು ಸುರರಿಂದ ಪೂಜಿತನಾಗಿ ಗದೆಯನ್ನು ಮರೆಮಾಚಿಕೊಂಡು ಪ್ರಕಾಶಿಸುವ ಸುನೇತ್ರನೆಂಬ ಭೂಧರ ಮೂರ್ತಿಯನ್ನೂ ನಾನು ನಮಸ್ಕರಿಸುವೆನು.

ವೃಷಭಾರೂಢನಾದ ಶಂಕರ, ಚಂದ್ರನಂತಿರುವ ವಿಶ್ವಮಿತ್ರ, ಸಾವಿರ ತಲೆಯುಳ್ಳ ಕುಂದಮಾಲಿ ಗಜಚರ್ಮಧಾರಿಯಾದ ರುದ್ರದೇವ ಇವರೆಲ್ಲರನ್ನೂ ನಮಸ್ಕರಿಸಿ ಊಹಿಸಲಶಕ್ಯವಾದ ಅನೇಕ ಮುಖವಾದ ಜ್ಯೋತಿಯುಳ್ಳ ಚತುರ್ಭುಜನಾದ ದೇವರಿಗೆ ನಾನು ನಮಸ್ಕರಿಸುತ್ತೇನೆ. ಪಾಪಲೇಪವಿಲ್ಲದೆಯೋ, ಪ್ರಾಕೃತಾಕಾರ ಇಲ್ಲದೆಯೋ ಇರುವ ಸರ್ವ ಪಾಪನಾಶ ನಾದ ಶರಣಾಗತನಾಗಿ ರಕ್ಷಕನಾದ ಪರಮಾತ್ಮನಲ್ಲಿ ನಾನು ಶರಣಾಗತನಾಗಿರುವೆನು. ಸರ್ವಪಾಪನಾಶಕವಾದ ಈ ಪಾಪನಾಶನಸ್ತವನವು ಅಗಸ್ತ್ಯ ಋಷಿಗಳಿಂದ ಹೇಳಲ್ಪಟ್ಟಿದೆ. ಇದರ ಸಂಕೀರ್ತನೆ ಸ್ಮರಣೆಗಳು ಸರ್ವಪಾಪಗಳ ನಾಶಕವಾಗಿಯೂ ಯಶಸ್ಕರವಾಗಿಯೂ ಇರುವವು.

ಇತಿ ವಾಮನ ಮಹಾಪುರಾಣದಲ್ಲಿ ಎಂಬತ್ತೆಂಟನೇಯ ಅಧ್ಯಾಯವು ಮುಗಿದುದು

—o—

**ಗತೇಽಥ ತೀರ್ಥಾಯಾತ್ರಾಂ ಪ್ರಲ್ಹಾದೇ ದಾನವೇಶ್ವರೇ ।**
**ಕುರುಕ್ಷೇತ್ರಂ ಸಮಭ್ಯಾಗಾದ್ ದ್ರಷ್ಟುಂ ವೈರೋಚನೋ ಬಲಿಃ॥**

ದಾನವರಾಜನಾದ ಪ್ರಹ್ಲಾದನು ತೀರ್ಥಯಾತ್ರೆಗೆ ತೆರಳಿದ ನಂತರ ವಿರೋಚನ ಪುತ್ರನಾದ ಬಲಿಯು ಕುರುಕ್ಷೇತ್ರದಲ್ಲಿ ಅತ್ರೇಯ, ಗೌತಮ ಮೊದಲಾದ ಬ್ರಾಹ್ಮಣೋ-ತ್ತಮರನ್ನು ಆಹ್ವಾನಿಸಿ ಶುಕ್ರಾಚಾರ್ಯರ ನೇತೃತ್ವದಲ್ಲಿ ಒಂದು ಸಭೆ ಕರೆದನು.

ಆ ಬ್ರಾಹ್ಮಣರೆಲ್ಲರೂ ಕುರುಜಾಂಗಲ ದೇಶದ ಉತ್ತರ ಭಾಗದಿಂದ ಹೊರಟು ಶತದ್ರವೀ ನದಿಗೆ ಬಂದು ಪಿತೃದೇವತೆಗಳಿಗೆ ತರ್ಪಣಕೊಟ್ಟು ಕಿರಣಾ ನದಿಗೆ ಬಂದರು. ಅನಂತರ ಐರಾವತಿ, ದೇವಿಕಾ, ಪ್ರಯೋಷ್ಣಿ ಎಂಬ ನದಿಗಳಲ್ಲಿಯೂ ಸ್ನಾನದಾನಾದಿಗಳನ್ನು ಮಾಡುತ್ತ ಹೊರಟರು. ಪಯೋಷ್ಣಿನದಿಯಲ್ಲಿ ಸ್ನಾನಕ್ಕಾಗಿ ಇಳಿದಾಗ ಅವರೆಲ್ಲರೂ ತಮ್ಮ ತಮ್ಮ ಪ್ರತಿಬಿಂಬವನ್ನು ಕಂಡರು. ಅದರಿಂದ ಅವರಿಗೆ ಬಹಳ ಆಶ್ಚರ್ಯವಾಯಿತು. ಮುಂದೆ ಹೊರಟ ನಂತರ ಒಂದು ದಟ್ಟವಾದ ಅರಣ್ಯವು ಸಿಕ್ಕಿತು. ಆ ಅರಣ್ಯವು ಅನೇಕ ವನ್ಯ ಪಶುಗಳಿಗೆ ಹೂ ಹಣ್ಣುಗಳ ಗಿಡಗಳಿಗೆ ಆಧಾರವಾಗಿದ್ದಿತು. ಕಮಲಗಳಿಂದ ಕೂಡಿದ ರಮ್ಯವಾದ ಸರೋವರಗಳು ಅಲ್ಲಿ ಇದ್ದವು. ಅವೆಲ್ಲವುಗಳನ್ನು ನೋಡಿ ಎಲ್ಲ ಬ್ರಾಹ್ಮಣೋತ್ತಮರೂ ಸಂತೋಷಪಟ್ಟರು.

ಆ ವನ ಮಧ್ಯದಲ್ಲಿ ಒಂಧು ಪುಣ್ಯಕರವಾದ ಆಶ್ರಮವಿತ್ತು. ನಾಲ್ಕು ಪಾಲಕರಿಂದ ನಿರ್ಮಿತವಾದ ನಾಲ್ಕು ಪುರುಷಾರ್ಥಗಳಿಗೆ ಅದು ಆಶ್ರಯವಾಗಿತ್ತು. ಬಾಳೆ ಹಾಗೂ ಅಶೋಕವನದಿಂದ ಕೂಡಿದ ಸುತ್ತುವರಿಯಲ್ಪಟ್ಟ ಪೂರ್ವಾಭಿಮುಖವಾದ ಧರ್ಮಾಶ್ರಮವೂ, ಪಶ್ಚಿಮಾಭಿಮುಖವಾದ ಅರ್ಥದ ಆಶ್ರಮವೂ, ದಕ್ಷಿಣಾಭಿಮುಖ ವಾದ ಕಾಮದ ಆಶ್ರಮವೂ ಅಲ್ಲಿ ಇದ್ದವು. ಆತ್ರೇಯರೇ ಮೊದಲಾದ ಮಹರ್ಷಿಗಳು. ಆ ಆಶ್ರಮಗಳನ್ನು ನೋಡಿ ಅದು ಅಖಂಡನಾದ ಮಹಾವಿಷ್ಣುವಿಗೆ ಮುಖ್ಯಸ್ಥಾನವಾಗಿರುವದರಿಂದಅಲ್ಲಿ ಸಂತೋಷಚಿತ್ತ ದಿಂದ ಕಾಲಕಳೆಯುತ್ತಿದ್ದರು. ಶಾಸ್ತ್ರಾರ್ಥ ಚರ್ಚೆಯಿಂದ, ತಪಸ್ಸಿನಿಂದ ಬ್ರಹ್ಮಚರ್ಯ ದಿಂದ ಆ ಅಖಂಡನಾದ ವಿಷ್ಣುವಿನ ಮೂರ್ತಿಯನ್ನೇ ಆರಾಧಿಸತೊಡಗಿದರು.

ಇವರ ಧರ್ಮಕಾರ್ಯದಲ್ಲಿ ಅಸುರರಿಂದ ಆಗಾಗ ಭಯ ಉಂಟಾಗುತ್ತಿತ್ತು. ಆಗ ಅವರು ಭಯದಿಂದ ಅಲ್ಲಲ್ಲಿ ಅವಿತುಕೊಳ್ಳುತ್ತಿದ್ದರು. ಕೆಲವರು ಹೆದರಿ ದಕ್ಷಿಣ ದಿಕ್ಕಿಗೂ ಹೊರಟರು. ಮತ್ತೆ ಕೆಲವರು ಅಸುರರಿಗೆ ಪ್ರವೇಶಿಸಲಶಕ್ಯವಾದ ಅವಂತೀ ದೇಶಕ್ಕೆ ಹೊರಟರು. ಶುಕ್ರಾಚಾರ್ಯರು ತಮ್ಮ ವಂಶಜರಾದ ಭಾರ್ಗವರೆಲ್ಲರನ್ನು ಕರೆದು ಬಲಿಚಕ್ರವರ್ತಿಗೆ ಯಜ್ಞದೀಕ್ಷೆಯನ್ನು ಕೊಟ್ಟು ಅದೆಲ್ಲದಕ್ಕೂ ತಾನು ನಿಯಾಮಕರಾಗಿ ನಿಂತುಕೊಂಡರು. ಯಜ್ಞದೀಕ್ಷೆಯನ್ನು ಹೊಂದಿದ ಬಲಿಚಕ್ರವರ್ತಿಯು ಬಿಳಿಯ ವಸ್ತ್ರವನ್ನುಟ್ಟು ಬಿಳಿಯ ಹೂವಿನ ಮಾಲೆಯನ್ನು ಧರಿಸಿ ಕೃಷ್ಣಾಜಿನದಲ್ಲಿ ಕುಳಿತುಕೊಂಡು ಹಯಗ್ರೀವ, ಕ್ಷುರ, ಮಯ, ಬಾಣ ಈ ಎಲ್ಲ ಸದಸ್ಯರುಗಳಿಂದ ಸುತ್ತುಗಟ್ಟಲ್ಪಟ್ಟನು.

ಆ ಬಲಿಚಕ್ರವರ್ತಿಯ ಪತ್ನಿಯಾದ ವಿಂಧ್ಯಾವಲಿಯು ಒಬ್ಬ ಋಷಿಪುತ್ರಿಯು. ಅವಳೂ ಕೂಡ ಯಜ್ಞದೀಕ್ಷಾ ನಿಯಮಹೊಂದಿ ಅನೇಕ ಸ್ತ್ರೀ ಪರಿವಾರದೊಡನೆ ಯಜ್ಞಶಾಲೆಯಲ್ಲಿ ಕುಳಿತಳು. ಇತ್ತ ಶುಕ್ರಾಚಾರ್ಯನು ಒಂದು ಬಿಳಿ ಕುದುರೆಯನ್ನು ಭೂಮಿಯಲ್ಲೆಲ್ಲ ಸಂಚರಿಸಲು ಚೈತ್ರಮಾಸದಲ್ಲಿ ಬಿಟ್ಟನು. ತಾರಕಾಕ್ಷನೆಂಬ ಒಬ್ಬ ದೈತ್ಯನನ್ನು ಯಜ್ಞಾಶ್ವದ ರಕ್ಷಣೆಗಾಗಿ ಹಿಂದೆ ಕಳುಹಿಸಿಕೊಟ್ಟನು.

ಇತ್ತ ಯಜ್ಞಕರ್ಮಗಳೆಲ್ಲವೂ ಯಥಾವಿಧಿಯಾಗಿ ಆರಂಭಿಸಲ್ಪಟ್ಟವು. ಅಗ್ನಿಯು ಹರಣ, ಹೋಮಹವನಾದಿ ಕಾರ್ಯಗಳಲ್ಲಿ ಪೂಜಿತನಾಗಿ ಪೂಜೆಯೇ ಮೊದಲಾದ ಕಾರ್ಯಗಳಲ್ಲಿ ಮಹೋತ್ಸವದಂತೆ ಮೂರು ತಿಂಗಳು ಕಳೆದವು. ಸೂರ್ಯನು ಮಿಥುನ ರಾಶಿಯಲ್ಲಿರುವ ಶುಭಸಮಯದಲ್ಲಿ ಇತ್ತ ದೇವಮಾತೆ ಯಾದ ಅದಿತಿಯು ವಾಮನಾಕಾರವುಳ್ಳ ಲಕ್ಷ್ಮೀಪತಿಯನ್ನು ಪ್ರಸವಿಸಿದಳು. ಲೋಕನಾಯಕನಾದ ನಾರಾಯಣನು ಅವತರಿಸಿದೊಡನೆಯೇ ಚತುರ್ಮುಖನು ಮಹರ್ಷಿಗಳೊಡನೆ ಅಲ್ಲಿ ಬಂದು ಸ್ತೋತ್ರಗೈದನು. ''ಎಲೈ ಸತ್ವಮೂರ್ತಿಯೇ ವಿಶ್ವಮೂರ್ತಿಯೇ, ನಿನಗೆ ನಮಸ್ಕಾರಗಳು. ನೀನು ಶತ್ರುಗಳ ಸಮೂಹವೆಂಬ ವನಕ್ಕೆ ದಾವಾಗ್ನಿಯಂತೆ ನಾಶಕನಾಗಿರುವಿ. ವಿಶ್ವೋತ್ಪತ್ತಿ ಕಾರಕನಾದ ಪುಂಡರೀಕಾಕ್ಷನೇ, ನೀನು ಸಮಸ್ತ ಜಗತ್ತಿಗೂ ಅನಿಷ್ಟನಿವಾರಕನೂ ಇಷ್ಟ ಪ್ರಾಪಕನೂ ಆಗಿರುವಿ. ನೀನು ಸರ್ವದೇವತೆಗಳಿಗೂ ಅಧಿಪತಿಯಾಗಿರುವಿ. ಇಂದ್ರನಿಗೆ ಒದಗಿದ ಆಪತ್ತನ್ನು ನೀನೇ ದೂರ ಮಾಡಬೇಕು. ಸೃಷ್ಟಿಸ್ಥಿತಿ ಲಯಗಳ ಕರ್ತನು ಆಗಿರುವ ನಿನಗೆ ಅನಂತ ನಮಸ್ಕಾರಗಳು.

ಹೀಗೆ ಚತುರ್ಮುಖನು ಸ್ತೋತ್ರ ಮಾಡಿದ ನಂತರ ಜಗತ್ಪತಿಯಾದ ಹರಿಯು ''ನನಗೆ ಉಪನಯನ ಸಂಸ್ಕಾರವಾಗಿಲ್ಲ. ಉಪನಯನ ಸಂಸ್ಕಾರವನ್ನು ಮಾಡಿರಿ'' ಎಂದು ಕೇಳಲಾಗಿ ಬೃಹಸ್ಪತಿಯ ಪುತ್ರನಾದ ಭಾರದ್ವಜ ಮುನಿಯು ಶ್ರೀಹರಿಗೆ ಜಾತಕರ್ಮಾದಿ ಸಂಸ್ಕಾರಗಳನ್ನೆಲ್ಲ ನೆರವೇರಿಸಿದನು. ಹಾಗೆಯೇ ಸರ್ವಜ್ಞನಾದ ಮುನಿಯು ಆ ಬ್ರಹ್ಮಚರ್ಯ ವ್ರತನಿಯಮಗಳನ್ನು ನೆರವೇರಿಸಿದನು. ಅಲ್ಲಿದ್ದ ಮಹರ್ಷಿಗಳೆಲ್ಲರೂ ಹರಿಯ ಬ್ರಹ್ಮಚರ್ಯ ವ್ರತಕ್ಕೆ ಅವಶ್ಯ ಉಪಕರಣಗಳನ್ನೆಲ್ಲ ಅರ್ಪಿಸಿದರು. ಪುಲಹ ಮಹರ್ಷಿಯು ಯಜ್ಞೋಪವೀತವನ್ನೂ ಪುಲಸ್ತ್ಯನು ಬಿಳಿಯ ವಸ್ತ್ರದ್ವಯವನ್ನೂ ಅಗಸ್ತ್ಯನು ಕೃಷ್ಣಾಜಿನವನ್ನೂ ಭರದ್ವಜನು ಮೌಂಜಿಯನ್ನೂ ಮರೀಚಿಯು ದಂಡವನ್ನೂ ವರುಣಪುತ್ರನು ಅಕ್ಷಮಾಲೆಯನ್ನೂ ಅಂಗಿರಸನು ದರ್ಭಾಸನ ಹಾಗೂ ನಾರುಮಡಿಗಳನ್ನು ಕೊಟ್ಟರು. ಸೂರ್ಯನು ಛತ್ರಿಯನ್ನೂ, ಭೃಗು ಋಷಿಯು ಪಾದುಕಾಯುಗ್ಮವನ್ನೂ ಬೃಹಸ್ಪತಿಯು ಕಮಂಡಲವನ್ನೂ ಅರ್ಪಿಸಿದರು. ಈ ರೀತಿ ಎಲ್ಲ ಸಂಸ್ಕಾರಗಳನ್ನು ಹೊಂದಿದ ಜಗತ್ಕಾರಣನಾದ ಪರಮಾತ್ಮನು ಸಾಂಗವಾದ ವೇದವನ್ನು ಅಧ್ಯಯನ ಮಾಡಿದನು. ಅಂಗಿರಸ ಭರದ್ವಾಜರಿಂದ ಸಾಮವೇದವನ್ನು ಗಾಂಧರ್ವಸಹಿತವಾದ ಆಖ್ಯಾನದೊಡನೆ ಅಧ್ಯಯನವನ್ನು ಮಾಡಿದನು.

ಸರ್ವಜ್ಞಮೂರ್ತಿಯಾದ ಶ್ರೀಹರಿಯು ಲೋಕಕ್ಕೆ ತೋರಿಸುವದಕ್ಕೋಸ್ಕರ ವರ್ಣಾಶ್ರಮೋಚಿತ ಆಚಾರಗಳನ್ನು ಮಾಡಿ ಒಂದೇ ತಿಂಗಳಿನಲ್ಲಿ ಪಂಡಿತೋತ್ತಮನಾಗಿ ಪರಿಣಮಿಸಿದನು. ಪರಮಾತ್ಮನು ಒಂದು ಸಲ ಭಾರದ್ವಾಜನನ್ನು ಕುರಿತು ಕೇಳುತ್ತಾನೆ.

''ನಾನು ಪುಣ್ಯಕರವಾದ ಕುರುಕ್ಷೇತ್ರಕ್ಕೆ ಹೋಗಬೇಕೆಂದಿರುವೆನು. ಅಲ್ಲಿ ದೈತ್ಯಪತಿಯಾದ ಬಲಿಚಕ್ರವರ್ತಿಯ ಪುಣ್ಯಕರವಾದ ಅಶ್ವಮೇಧವು ನಡೆಯುತ್ತಿದೆ. ಅಲ್ಲಿಗೆ ಹೋಗಲು ನನಗೆ ಅಪ್ಪಣೆ ಕೊಡು. ಕುರುಕ್ಷೇತ್ರದಲ್ಲಿ ನಡೆಯುತ್ತಿರುವ ಅಶ್ವಮೇಧಯಾಗದ ಆಚರಣೆಯಿಂದ ಭೂಮಂಡಲದಲ್ಲೆಲ್ಲ ತೇಜಸ್ಸು ವಿಸ್ತರಿಸಿದೆ. ಇದೇ ಕಾರಣದಿಂದಾಗಿ ಬಲಿಯು ಆ ಕ್ಷೇತ್ರದಲ್ಲಿ ಯಜ್ಞವನ್ನು ಮಾಡುತ್ತಲಿರುವನು.''

ಈ ರೀತಿಯ ವಾಮನನ ಪ್ರಶ್ನೆಗೆ ಭರದ್ವಾಜರು ಹೇಳುತ್ತಾರೆ. ''ನಿನಗೆ ಆಜ್ಞೆ ಮಾಡಲು ನಾನು ಸಮರ್ಥನಲ್ಲ. ನೀನು ನಿನ್ನ ಇಚ್ಛೆಯಂತೆ ವರ್ತಿಸು. ಬಲಿಯ ಯಾಗಕ್ಕೆ ನಾವೆಲ್ಲರೂ ಶೀಘ್ರವಾಗಿಯೇ ಹೊರಡುವೆವು. ಎಲೈ ಪುರುಷೋತ್ತಮನೇ, ಯಾವ ಯಾವ ಸ್ಥಳಗಳಲ್ಲಿ ನಿನ್ನ ವಿಶೇಷ ಸಾನ್ನಿಧ್ಯವಿರುವದು ? ಅದನ್ನು ನನಗೋಸ್ಕರ ನೀನು ಹೇಳು'' ಎಂದು ಕೇಳಿದನು. ವಿಷ್ಣುವು ಹೇಳುತ್ತಾನೆ. ಯಾವ ಯಾವ ಸ್ಥಳದಲ್ಲಿ ನಾನು ನಾಮರೂಪದಿಂದ ವಾಸಮಾಡುತ್ತೇನೋ, ಅವುಗಳನ್ನು ಹೇಳುತ್ತೇನೆ ಕೇಳು. ಭೂಮಿ, ಆಕಾಶ, ಪಾತಾಳ, ಸಮುದ್ರ, ಸ್ವರ್ಗ, ದಿಕ್ಕು ಇವೆಲ್ಲವೂ ನನಗೆ ಅಪರೂಪವಾದ ವ್ಯಾಪ್ತಿಯ ಸ್ಥಳಗಳು. ಸ್ವರ್ಗ, ಭೂಮಿ, ಜಲಾಕಾಶಗಳಲ್ಲಿ ಸಂಚರಿಸುವ ಪ್ರಾಣಿಗಳೆಲ್ಲರೂ ಇಂದ್ರ ಸೂರ್ಯ ಚಂದ್ರ ಮೊದಲಾದ ದೇವತೆಗಳೆಲ್ಲರೂ, ಪಶುಪಕ್ಷ್ಯಾದಿಗಳೂ ಸಹ ನನ್ನಿಂದಲೇ ಉತ್ಪತ್ತಿ ಹೊಂದಿರುವವು. ದೇವಸೇವಿತರಾದ ಪುಣ್ಯಶಾಲಿಗಳಾದ ಮಹಾತ್ಮರೂ ಯಾರ ದರ್ಶನವು ಸಮಸ್ತ ಪಾಪಗಳ ನಾಶಕ್ಕೆ ಕಾರಣವೋ, ಅಂತಹ ಮಹಾವ್ಯಕ್ತಿಗಳು ಎಲ್ಲ ಮನುಷ್ಯರೂ ನನ್ನಿಂದಲೇ ಉತ್ಪನ್ನವಾಗಿರುವರು.''

ವಾಮನ ಮಹಾಪುರಾಣದಲ್ಲಿ ಎಂಬತ್ತೊಂಬತ್ತನೇಯ ಅಧ್ಯಾಯವು ಮುಗಿದುದು.



**ಆದ್ಯಂ ಹಿ ಮತ್ಸ್ಯರೂಪಂ ಮೇ ಸಂಸ್ಥಿತಂ ಮಾನಸೇ ಹ್ರದೇ।**
**ಸರ್ವ ಪಾಪ ಕ್ಷಯಕರಂ ಕೀರ್ತನ ಸ್ಪರ್ಶನಾದಿಭಿಃ ॥**

ಭಗವಂತನು ಹೇಳುತ್ತಾನೆ :- ಮಾನಸ ಹ್ರದ ಎಂಬ ತೀರ್ಥದಲ್ಲಿ ನನ್ನ ಮೊದಲನೇಯ ಮತ್ಸ್ಯರೂಪವು ಸಾನ್ನಿಧ್ಯವನ್ನು ಹೊಂದಿದೆ. ಆದುದರಿಂದ ಆ ತೀರ್ಥದ ಸ್ನಾನ ದರ್ಶನಸ್ಪರ್ಶನಾದಿ ಗಳೆಲ್ಲವೂ ಪಾಪನಾಶಕವಾಗಿವೆ. ಇದರಂತೆಯೇ ನನ್ನ ಕೂರ್ಮ ರೂಪವು ಕೌಶಿಕಿ ನದಿಯಲ್ಲಿ ಸನ್ನಿಹಿತವಾಗಿದೆ. ಕೃಷ್ಣಾ ನದಿಯಲ್ಲಿ ಹಯಗ್ರೀವ ಎಂಬ ನನ್ನ ರೂಪವಿದೆ. ಹಸ್ತಿನಾವತಿಯಲ್ಲಿ ಗೋವಿಂದ ಎಂಬ ನನ್ನ ರೂಪ ಸನ್ನಿಧಾನವಿದೆ.

ಕಾಲಿಂದಿ ಅರ್ಥಾತ ಯಮುನಾ ನದಿಯಲ್ಲಿ ತ್ರಿವಿಕ್ರಮ ರೂಪವು ಲಿಂಗಭೇದ ತೀರ್ಥದಲ್ಲಿ ಭವ ಎಂಬ ನನ್ನ ಅಂಶವುಳ್ಳ ಸಾನ್ನಿಧ್ಯವಿದೆ. ಕೇದಾರದಲ್ಲಿ ಹರಿಹರ ರೂಪವು ಕುಬ್ಜಾಮ್ರದಲ್ಲಿ ಕೃಷ್ಣ ಬಲರಾಮರೂಪವು ಹೊಂದಿವೆ. ಬದರೀಕ್ಷೇತ್ರದಲ್ಲಿ ನಾನು ನಾರಾಯಣನಾಗಿಯೂ, ವರಾಹ ಕ್ಷೇತ್ರದಲ್ಲಿ ಗರುಡಧ್ವಜನಾಗಿ ಭದ್ರಕರ್ಣದಲ್ಲಿ ಜೀವೇಶನಾಗಿ, ಕುರುಕ್ಷೇತ್ರದಲ್ಲಿ ಕುರುಧ್ವಜನಾಗಿ ಕೃತಶೌಚವೆಂಬ ಕ್ಷೇತ್ರದಲ್ಲಿ ನೃಸಿಂಹನಾಗಿ, ಗೋಕರ್ಣದಲ್ಲಿ ವಿಶ್ವಧಾರಣನಾಗಿ ನಾನು ವಿಶೇಷ ಸಾನ್ನಿಧ್ಯದಿಂದ ವಾಸಮಾಡುತ್ತಿರುವೆನು. ಪಯೋಷ್ಣೀ ನದಿಯಲ್ಲಿ ಇರುವ ನನಗೆ ಅಖಂಡನೆಂದು ಎನ್ನುವರು. ಮಣಿಮತೀ ಹೃದಯದಲ್ಲಿ ನಾನು ಶಂಭು ರೂಪದಿಂದಿರುವೆನು.

ಹಿಮವತ್ ಪರ್ವತದಲ್ಲಿ ಶೂಲಬಾಹು ರೂಪದಿಂದಿರುವೆನು. ನೈಮಿಷ ಕ್ಷೇತ್ರದಲ್ಲಿ ಪೀತವಸ್ತ್ರವೆಂದೂ, ಗಯಾಕ್ಷೇತ್ರದಲ್ಲಿ ಗದಾಧರ, ಕುಶೇಶಯ ಮೊದಲಾದ ರೂಪವದನೆಂದೂ ನಾನೇ ಕರೆಯಲ್ಪಡುವೆನು. ಕಶೇರು ದೇಶದಲ್ಲಿ ನನಗೆ ದೇವೇಶಿವೆನ್ನುವರು, ಮಲಯ ಪರ್ವತದಲ್ಲಿ ಸೌಗಂಧಿ ಎನ್ನುವರು.

ಅವಂತೀ ದೇಶದಲ್ಲಿ ಧೀಷ್ಣನೆಂದೂ ಕರೆಯುವರು. ಪಾಂಚಾಲ ದೇಶದಲ್ಲಿ ಪಾಂಚಾಲಿಕನೆಂಬ ಹೆಸರು ನನಗಿದೆ. ಪಂಪಾ ಕ್ಷೇತ್ರದಲ್ಲಿ ಪದ್ಮ ಕಿರಣನೆಂದೂ, ಕುರುಜಾಂಗಲದಲ್ಲಿ ಸ್ಥಾಣುವೆಂದೂ, ಸುಕರಪರ್ವತದಲ್ಲಿ ತ್ರಿನಾಚಿಕೇತನೆಂದೂ ನನಗೆ ಹೆಸರು ಇರುವದು. ಮಹಾ ಪ್ರಳಯದಲ್ಲಿ ನಾನೇ ರುದ್ರರೂಪವನ್ನು ಧರಿಸುವೆನು. ಸಪ್ತ ಗೋದಾವರೀ ಕ್ಷೇತ್ರದಲ್ಲಿ ನಾನು ಹಾಟಕೇಶ್ವರನ ರೂಪದಲ್ಲಿರುವೆನು.

ಮಗಧೆಯಲ್ಲಿ ಸುಧಾಪತಿಯ ರೂಪದಿಂದ ನಾನು ನೆಲೆಸಿರುವೆನು. ತ್ರಿಕೂಟ ಶಿಖರದಲ್ಲಿ ಚಕ್ರಪಾಣಿಯಾದ ಈಶ್ವರನ ರೂಪವು ನನದೇ ಆಗಿದೆ. ಸುತವೆಂಬ ಲೋಕದಲ್ಲಿ ಸ್ಥಿರವಾದ ಕೂರ್ಮ ರೂಪದಿಂದ ನಾನು ಇದ್ದುಕೊಂಡು ವಿತಲದಲ್ಲಿ ಮಾತ್ರ ಪಂಕಜಾಸನ ರೂಪದಿಂದ ವಾಸಿಸಿರುವೆನು. ಮಹಾತಲದಲ್ಲಿ ಗುರು ಹಾಗೂ ಸಹಸ್ರಭುಜ ಪಾತಾಳದಲ್ಲಿ ಯೋಗೀಶ, ರೂಪಗಳನ್ನು ಧರಿಸಿ ನಾನು ನನ್ನ ವಿಶೇಷ ಸಾನ್ನಿಧ್ಯದಿಂದಿರುವೆನು. ಭುವರ್ಲೋಕದಲ್ಲಿ ಗರುಡ ರೂಪದಿಂದ, ಸ್ವರ್ಲೋಕದಲ್ಲಿ ವಿಷ್ಣು ರೂಪದಿಂದ ಮಹರ್ಲೋಕದಲ್ಲಿ ಅಗಸ್ತ್ಯರೂಪದಿಂದ ಜನಲೋಕದಲ್ಲಿ

ಕಪಿಲರೂಪದಿಂದ ತಪೋಲೋಕದಲ್ಲಿ ವಾಙ್ಮಯ ಬ್ರಹ್ಮರೂಪದಿಂದ ಬ್ರಹ್ಮಲೋಕದಲ್ಲಿ ಚತುರ್ಮುಖ ರೂಪದಿಂದ ನಾನು ವಾಸವಾಗಿರುವೆನು.

ಶೈವ ಸಿದ್ಧಾಂತದಲ್ಲಿ ಸನಾತನನೆಂದು ನನಗೆ ಹೆಸರು. ವೈಷ್ಣವ ಸಿದ್ಧಾಂತದಲ್ಲಿ ಪರಬ್ರಹ್ಮ, ನಿರಾಲಂಬಸಿದ್ಧಾಂತದಲ್ಲಿ ಅಪ್ರತರ್ಕ, ನಿರಾಕಾರ ಸಿದ್ಧಾಂತದಲ್ಲಿ ತಪೋಮಯ ಎಂಬ ಹೆಸರುಗಳು ನನ್ನವೇ ಆಗಿರುವವು. ಜಂಬು, ಕುಶ, ಪ್ಲಕ್ಷ, ಕ್ರೌಂಚ ಶಾಲ್ಮಲಿ, ಶಾಕ, ಪುಷ್ಕರವೆಂಬ ದ್ವೀಪಗಳಲ್ಲಿ ಕ್ರಮವಾಗಿ ಚತುರ್ಬಾಹು ಕುಶೇಶಯ, ಗರುಡವಾಹನ, ಪದ್ಮನಾಭ ವೃಷಭಧ್ವಜ, ಸಹಸ್ರಾಕ್ಷ, ವಾಮನ ರೂಪಗಳಿಂದ ನಾನು ವಾಸಿಸುವೆನು. ಭೂಮಿಯಲ್ಲಿರುವ ಎಲ್ಲಾ ಸಾಲಿಗ್ರಾಮಗಳಲ್ಲಿಯೂ ಇರುವ ನಾನು ಜಲಸ್ಥಲ ಗಳಲ್ಲಿ ನೆಲೆಸಿರುವೆನು. ಈ ಎಲ್ಲ ನನ್ನ ಆವಾಸಸ್ಥಾನಗಳು ಬಹಳ ಪುಣ್ಯಕರವಾದವುಗಳು. ಪಾಪನಾಶಕಗಳೂ ಆಗಿರುತ್ತವೆ. ಈ ಸ್ಥಾನಗಳ ಹೆಸರುಗಳನ್ನು ಯಾವಾಗಲೂ ಪಠಿಸತಕ್ಕದ್ದು. ಇವುಗಳ ಸಂಕೀರ್ತನೆಯೂ ಸಹ ಪಾಪನಾಶಕ ವಾಗಿರುವದು. ಈ ನನ್ನ ಅವಸ್ಥಾನಗಳನ್ನೆಲ್ಲ ನಿನಗೆ ಈ ರೀತಿಯಾಗಿ ಹೇಳಿ ದೇವತೆಗಳ ಹಿತಕ್ಕಾಗಿ ಮಹಾಸುರನಾದ ಬಲಿಯ ಯಜ್ಞಕ್ಕೆ ನಾನು ಹೊರಡುವೆನು. ಹೀಗೆ ಭರದ್ವಾಜ ಋಷಿಗಳಿಗೆ ತನ್ನ ಆವಾಸಸ್ಥಾನಗಳ ವೈಭವವನ್ನೆಲ್ಲ ಹೇಳಿ ಕುರುಜಾಂಗಲವೆಂಬ ಬಲಿಯ ಯಜ್ಞಸ್ಥಾನಕ್ಕೆ ಮಹಾವಿಷ್ಣುವು ಹೊರಟನು.

ವಾಮನ ಮಹಾಪುರಾಣದಲ್ಲಿ ಎಲ್ಲೆಡೆಯೂ ಭಗವಂತನ ರೂಪ ಎಂಬ೯೦ ನೇಯ ಅಧ್ಯಾಯವು ಮುಗಿದುದು



## ಜನ್ಮಾಂತರದ ಸ್ಮರಣೆ

**ಅಧ್ಯಾಯ - ೯೧**

**ತತಃ ಸಮಾಗಚ್ಛತಿ ವಾಸುದೇವೇ ಮಹೀ ಚ ಕಂಪೇ ಗಿರಯಶ್ಚ ಚೇಲುಃ**
**ಕ್ಷುಬ್ಧಾಃ ಸಮುದ್ರಾ ದಿವಿ ಸರ್ವಲೋಕೋ ಬಭೂವವಿಪರ್ಯ**
**ಸ್ತಗತಿರ್ಮಹರ್ಷೇ ॥**

ಶ್ರೀ ವಾಸುದೇವನು ಬಲಿಯು ಯಜ್ಞಭೂಮಿಗೆ ಬರುತ್ತಿರುವಾಗ ಸಮುದ್ರಗಳೆಲ್ಲ ಕ್ಷೋಭೆಗೊಂಡವು. ಭೂಮಿಯು, ಪರ್ವತಗಳು ಸಹ ನಡುಗಿದವು. ಮೇಲಿರುವ ಎಲ್ಲ ಲೋಕಗಳೂ ಅಸ್ತವ್ಯಸ್ತವಾದವು. ಮಧು ವೈರಿಯಾದ ವಾಸುದೇವನು ಏನು ಮಾಡುವನೋ ಎಂದು ವ್ಯಾಕುಲತೆಯಿಂದ ಎಲ್ಲರೂ ವ್ಯಥೆಗೊಂಡರು.

ಬಲಿಚಕ್ರವರ್ತಿಯು ಯಜ್ಞದಲ್ಲಿ ಅಸುರರಿಂದ ಅಗ್ನಿಯು ಪ್ರತಿಷ್ಠಾಪಿತನಾಗಿ ವೇದ ಮಂತ್ರಗಳ ಹೋಮವು ಮಾಡಲ್ಪಟ್ಟಿತು. ಹೀಗೆ ಮಂತ್ರಸಹಿತವಾಗಿ ಕೊಡಲ್ಪಟ್ಟ ಹೋಮ ಭಾಗವು ಪ್ರಭುವಾದ ವಾಸುದೇವನ ಭಯದಿಂದ ಆಯಾ ದೇವತೆಗಳಿಂದ ಸ್ವೀಕರಿಸಲ್ಪಡಲಿಲ್ಲ. ಈ ರೀತಿಯಾದ ಅಶುಭ ನಿಮಿತ್ತವನ್ನು ನೋಡಿ ದಾನವೇಶ್ವರನಾದ ಬಲಿಯು ಶುಕ್ರಾಚಾರ್ಯರನ್ನು ವಂದಿಸಿ ವಿನಯಪೂರ್ವಕವಾಗಿ ಕೇಳಿದನು. ''ಎಲೈ ಆಚಾರ್ಯರೇ ಈ ಭೂಮಿಯಲ್ಲವೂ ಗಾಳಿಯ ಹೊಡೆತದಿಂದ ಚಲಿಸುತ್ತಿರುವ ಬಾಳೆಯ

ಕಂಬದಂತೆ ಏಕೆ ನಡುಗುತ್ತಲಿರುವದು? ಅಸುರರಿಂದ ಪ್ರತಿಷ್ಠಾಪಿತವಾದ ಈ ಅಗ್ನಿಗಳು ಏಕೆ ತಮ್ಮ ಹೋಮ ಭಾಗವನ್ನು ಸ್ವೀಕರಿಸುತ್ತಿಲ್ಲ? ಸಮುದ್ರಗಳೆಲ್ಲ ಏಕೆ ಕ್ಷೋಭೆಗೊಂಡಿವೆ ? ಆಕಾಶದಲ್ಲಿ ನಕ್ಷತ್ರಗಳೂ ಸಹ ಮೊದಲಿನಂತೆ ಏಕೆ ಸಂಚರಿಸುತ್ತಿಲ್ಲ? ಎಲ್ಲ ದಿಕ್ಕುಗಳಲ್ಲಿ ಏಕೆ ಅಂಧಕಾರವು ವ್ಯಾಪಿಸಿದೆ? ಈ ಎಲ್ಲ ಅಶುಭಗಳು ಯಾರದೋಷದಿಂದ ಸಂಭವಿಸಿದೆ. ದಯವಿಟ್ಟು ಹೇಳಿರಿ'' ಎಂದು ಕೇಳಿದನು. ಆಗ ಶುಕ್ರಾಚಾರ್ಯರು ಜ್ಞಾನದೃಷ್ಟಿಯಿಂದ ಎಲ್ಲವನ್ನು ನೋಡಿ ಹೇಳಿದರು. ''ಎಲೈ ದೈತ್ಯರಾಜನೇ, ವಾಸುದೇವನು ಇಲ್ಲಿಗೆ ಬರಹತ್ತಿರಬಹುದು. ಅವನ ಪಾದ ವಿಕ್ಷೇಪವನ್ನು ಸಹಿಸಲು ಸಾಮರ್ಥ್ಯವಿಲ್ಲದೇ ಭೂಮಿ ಹಾಗೂ ದಿಕ್ಕುಗಳೆಲ್ಲವು ನಡುಗುತ್ತಲಿರುವವು. ಇದೇ ಕಾರಣದಿಂದಾಗಿ ಸಮುದ್ರಗಳೂ ಕ್ಷೋಭೆಗೊಂಡಿವೆ. ಈ ಕಾರಣದಿಂದಲೇ ನೀನು ಮಾಡಿದ ಹವನವೂ ವ್ಯರ್ಥವಾಗುತ್ತಲಿರಬಹುದು.''

ಹೀಗೆ ಹೇಳುತ್ತಿರುವ ಶುಕ್ರಾಚಾರ್ಯರ ಮಾತುಗಳನ್ನು ಕೇಳಿ ಬಲಿಚಕ್ರವರ್ತಿಯಲ್ಲಿ ಸತ್ವಸಂಚಾರವಾಗಿ ಗುರುಗಳಲ್ಲಿ ಕೇಳತೊಡಗಿದನು. ''ಪೂಜ್ಯರೇ ಸರ್ವೇಶ್ವರನಾದ ವಾಸುದೇವನು ಇಲ್ಲಿಗೆ ಬಂದಾಗ ನಾನು ಯಾವ ರೀತಿಯಾಗಿ ವರ್ತಿಸಬೇಕು ? ರತ್ನ, ಸುವರ್ಣ, ರಾಜ್ಯ, ಮೊದಲಾದವುಗಳನ್ನು ಅವನಿಗೆ ಸಮರ್ಪಿಸಬೇಕಲ್ಲವೇ ! ಅವನ ಹಾಗೂ ನನ್ನ ಹಿತಕ್ಕೆ ತಕ್ಕಂತೆ ಯಾವ ರೀತಿಯಾಗಿ ಸತ್ಯ ಹಾಗೂ ಪ್ರಿಯವಾದ ಮಾತುಗಳನ್ನಾಡಬೇಕೆಂದು ನನಗೆ ಅಪ್ಪಣೆ ಕೊಡಿರಿ.'' ಹೀಗೆ ರಾಜನು ಕೇಳಿದಾಗ ಸರ್ವಜ್ಞರಾದ ಶುಕ್ರಾಚಾರ್ಯರು ಎಲ್ಲ ವನ್ನೂ ಆಲೋಚಿಸಿ ಹೇಳಿದರು. ''ಎಲೈ ಅಸುರರಾಜನೇ, ವೇದೋಕ್ತ ಮಾರ್ಗದಿಂದ ಬಹಿಷ್ಕೃತ ನಾದ ಅಸುರರನ್ನೇ ನೀನು ಯಜ್ಞಭಾಗಾರ್ಹರನ್ನಾಗಿ ಮಾಡಿರುವಿ. ವಾಸ್ತವವಾಗಿ ಯಜ್ಞಭಾಗಾರ್ಹರು ದೇವತೆಗಳೆಂದ ವೇದ ಪ್ರಮಾಣದಿಂದ ಸಿದ್ಧವಾಗಿದೆ. ಹೋಮವೇನೋ ವೇದೋಕ್ತ ವಿಧಿಯಿಂದ ನಡೆಯುತ್ತಿರುವದು. ಇದು ಸರಿಯಾದ ರೀತಿಯಲ್ಲ. ಇದಕ್ಕಾಗಿಯೇ ಹರಿಯು ಇಲ್ಲಿಗೆ ಬರುತ್ತಿದ್ದಾನೆ.

ಹರಿಯು ಇಲ್ಲಿಗೆ ಬಂದಾಗ ಯಾಗದಲ್ಲಿಯ ಭೂಮಿ ಸುವರ್ಣ ಮೊದಲಾದವುಗಳಲ್ಲಿ ಒಂದು ಹುಲ್ಲಿನ ಚೂರನ್ನು ಕೂಡ ಅವನಿಗೆ ಕೊಡಕೂಡದು. ''ಕೇವಲ ಮೃದುಮಧುರವಾದ ಮಾತಿನಿಂದ ಆತನನ್ನು ಸಂತಯಿಸು. ಲೋಕತ್ರಯವನ್ನೇ ಉದರದಲ್ಲಿಟ್ಟುಕೊಂಡಂತ ನಿನಗೆ ಏನು ತಾನೇ ಕೊಟ್ಟು ನಾನು ತೃಪ್ತಿಪಡಿಸಬಲ್ಲೆನು ?'' ಎಂದು ಹೇಳು.'' ಈ ಮಾತನ್ನು ಕೇಳಿದಾಗ ಬಲಿಯು ಹೇಳುತ್ತಾನೆ. ''ಈ ಯಾಗದ ಸಂದರ್ಭದಲ್ಲಿ ಒಬ್ಬ ಸಾಧಾರಣ ಯಾಚಕನು ಬಂದರೂ ಕೂಡ ಅವನನ್ನು ಹಿಂತಿರುಗಿಸಲು ನನಗೆ ಉತ್ಸಾಹವಿಲ್ಲ. ಹೀಗಿರುವಾಗ ಪ್ರಭುವಾದ ವಾಸುದೇವನು ಅತಿಥಿಯಾಗಿ ಬಂದಲ್ಲಿ ಹೇಗೆ ನಾನು ನಿಷೇಧಾತ್ಮ ಶಬ್ದವನ್ನು ಹೇಳಬೇಕು? ಹಾಗೆ ಮಾಡಿದರೆ ನನ್ನ ದಾನದ ವಿಷಯದಲ್ಲಿ ಕಲಂಕವು ನನಗೆ ತಪ್ಪಲಾರದು? ತನ್ನ ಅಭ್ಯುದಯವನ್ನು ಅಪೇಕ್ಷಿಸುವ ಮನುಷ್ಯನು ಬ್ರಾಹ್ಮಣರು ಬೇಡಲು ಬಂದಾಗ 'ನಾಸ್ತಿ' ಎಂದು ಎಂದೂ ಹೇಳಬಾರದು. ಪೂರ್ವದಲ್ಲಿ ನಡೆದ ಕೋಶಕಾರನ ಮಗನ ಕಥೆಯನ್ನು ಕೇಳಿಲ್ಲವೇ ?''

ಆಗ ಶುಕ್ರನು ಹೇಳುತ್ತಾನೆ. ''ಆ ಪೌರಾಣಿಕ ಕಥೆಯನ್ನು ನಾನು ಕೇಳಲಿಲ್ಲ. ಅದೇನು ನನಗೆ ಹೇಳು'' ಎಂದಾಗ ಬಲಿಯು ಆ ಕಥೆಯನ್ನು ಹೇಳುವನು. ''ಮುದ್ಗಲನೆಂಬ ಮುನಿಗೆ ಕೋಶಾಕಾರನೆಂಬ ಮಗನಿದ್ದನು. ಆತನೂ ತಪಸ್ವಿಯೂ ಜ್ಞಾನಪಾರಂಗತನೂ ಆಗಿದ್ದನು. ಅವನಿಗೆ ವಾತ್ಸಯನನ ಮಗಳಾದ ಧರ್ಮಿಷ್ಠಾ ಎಂಬ ಪತ್ನಿ ಇದ್ದಳು. ಅವಳು ಪತಿವ್ರತಾಶಿರೋಮಣಿಯು. ಅವಳಲ್ಲಿ ಸ್ವಭಾವದಿಂದಲೇ ಜಡನಾದ ಒಬ್ಬ ಮಗನು ಜನಿಸಿದನು. ಹುಟ್ಟಿನಿಂದಲೇ ಕುರುಡನಂತಿರುವ ಮೂಕಾದ ಜಡನಾಗಿರುವ ಮಗನನ್ನು ನೋಡಿ ತಾಯಿಯು ಹುಟ್ಟಿದ ಆರನೇ ದಿನವೇ ಆ ಮಗುವನ್ನು ಹೊರಗೆ ತಂದು ಹಾಕಿದಳು. ಅದೇ ಸಮಯಕ್ಕೆ ಒಬ್ಬ ದುರಾಚಾರಿಣಿಯಾದ ಶೂರ್ಪಾಕ್ಷಿ ಎಂಬ ರಾಕ್ಷಸಿಯು ತನ್ನ ಕೃಶವಾಗಿದ್ದ ಮಗುವೊಂದನ್ನು ಕರೆದುಕೊಂಡು ಬಂದು ತನ್ನ ಮಗುವನ್ನು ಅಲ್ಲಿಬಿಟ್ಟು ಬ್ರಾಹ್ಮಣ ಶಿಶುವನ್ನು ಎತ್ತಿಕೊಂಡು ಹೋದಳು.

ಅನಂತರ ಅವಳು ಶಾಲೋದರ ಪರ್ವತಕ್ಕೆ ಹೋಗಿ ಆ ಮಗುವನ್ನು ಭಕ್ಷಿಸಲು ಉದ್ಯುಕ್ತಳಾದಾಗ ಅವಳ ಪತಿಯಾದ ಘಟೋಧರನೆಂಬವನು ''ಪ್ರಿಯೆಯೇ ನನಗೆ ತಿನ್ನಲು ಏನು ತಂದಿರುವಿ?'' ಎಂದನು. ನನ್ನ ಮಗನನ್ನು ಕೋಶಾಕಾರನೆಂಬ ಬ್ರಾಹ್ಮಣನ ಮನೆಯಲ್ಲಿ ಬಿಟ್ಟು ಅವನ ಮಗನನ್ನು ತಂದಿದ್ದೇನೆ'' ಎಂದು ಶೂರ್ಪಾಕ್ಷಿಯು ಹೇಳಿದಳು. ಆಗ ಅವಳ ಪತಿಯು ''ನೀನು ಮಾಡಿದ ಈ ಕಾರ್ಯವು ಸರಿಯಾದುದಲ್ಲ. ಬ್ರಾಹ್ಮಣರು ಜ್ಞಾನಿಗಳು ಶಪಿಸಲು ಸಮರ್ಥರು. ಆದುದರಿಂದ ಈ ಬ್ರಾಹ್ಮಣ ಪುತ್ರನನ್ನು ಅಲ್ಲಿಯೇ ಬಿಟ್ಟು ಬೇರೊಂದು ಶಿಶುವನ್ನು ತೆಗೆದುಕೊಂಡು ಬಾ'' ಎಂದನು. ಆಗ ಆ ರಾಕ್ಷಸಿಯು ಕಾಮರೂಪಿಣಿಯಾದುದರಿಂದ ಆಕಾಶಮಾರ್ಗದಿಂದ ಬ್ರಾಹ್ಮಣನ ಮನೆಗೆ ಹೋದಳು.

ಇತ್ತ ರಾಕ್ಷಸಿಯು ತನ್ನ ಮಗುವನ್ನು ಬಿಟ್ಟು ಹೋದ ಮೇಲೆ ಆ ಮಗುವು ತನ್ನ ಕಾಲಿನ ಅಂಗುಷ್ಠವನ್ನು ಬಾಯಲ್ಲಿಟ್ಟುಕೊಂಡು ಗಟ್ಟಿಯಾಗಿ ಅಳತೊಡಗಿತು. ಸ್ತ್ರೀಯು ಈ ಅಳುವ ಧ್ವನಿಯನ್ನು ಕೇಳಿ ಚಕಿತಳಾದಳು. ತನ್ನ ಪತಿಗೆ ಹೇಳಿದಳು. ನೋಡಲು ಇಬ್ಬರೂ ಧಾವಿಸಿ ಹೊರಗೆ ಬಂದರು. ರೂಪ ಹಾಗೂ ಅವಯವ ಸನ್ನಿವೇಶಗಳಿಂದ ಆ ಮಗುವು ತನ್ನ ಮಗುವಿನಂತೆಯೇ ಇದ್ದದ್ದನ್ನು ನೋಡಿ ಕೋಶಕಾರನು ತನ್ನ ಹೆಂಡತಿಗೆ ಅಂದನು. ಯಾವದೋ ಒಂದು ಭೂತವು ನಮ್ಮನ್ನು ವಂಚಿಸಲು ಈ ಮಗುವಿನ ಶರೀರದಲ್ಲಿ ಆವೇಶ ಹೊಂದಿ ಈ ರೂಪ ತಂದಿರಬಹುದು'' ಎಂದು ಹೇಳಿ ದರ್ಭಪಾಣಿಯಾಗಿ ಭೂಮಿಯಲ್ಲಿ ರೇಖೆಗಳನ್ನು ಕೊರೆದು ರಾಕ್ಷಸ ಶಿಶುವನ್ನು ಅಲ್ಲಿಯೇ ಬಂಧಿಸಿದನು. ಆ ಸಮಯಕ್ಕೆ ಆ ಶೂರ್ಪಾಕ್ಷಿಯು ಬಂದು ಅದೃಶ್ಯದಲ್ಲಿಯೇ ತಾನು ಅಪಹರಿಸಿಕೊಂಡಿದ್ದ ಬ್ರಾಹ್ಮಣಕುಮಾರನನ್ನು ಸ್ವಲ್ಪ ದೂರದಲ್ಲಿ ಇಟ್ಟಳು. ಅನಂತರ ತನ್ನ ಮಗುವನ್ನೆತ್ತಿಕೊಳ್ಳಲು ಬಂದಾಗ ಆ ರಾಕ್ಷಸಿಗೆ ಎತ್ತಿಕೊಳ್ಳಲು ಸಾಧ್ಯವಾಗಲಿಲ್ಲ. ಅವಳು ಅತ್ತ ಇತ್ತ ಅಲೆದು ತನ್ನ ಕಾರ್ಯದಲ್ಲಿ ವಿಫಲಳಾಗಿ ಗಂಡನ ಸಮೀಪಕ್ಕೆ ಬಂದು ಹೇಳಿದಳು. ''ಬ್ರಾಹ್ಮಣನು ತನ್ನ ಮಗುವನ್ನು ಅಪಹರಿಸಿರುವನು.'' ಇತ್ತ ರಾಕ್ಷಸಿಯು ಹೊರಟು ಹೋದನಂತರ ಆ ಬ್ರಾಹ್ಮಣನು ರಕ್ಷಿಸಲು ಆ ರಾಕ್ಷಸ ಶಿಶುವನ್ನು ನನ್ನ ಪತ್ನಿಗೇ ಕೊಟ್ಟನು. ಮಗುವನ್ನು ಹಾಲು, ಮೊಸರು, ಮುಂತಾದ ಸುಸ್ವಾದು ಪದಾರ್ಥಗಳಿಂದ ಸಂತೋಷಪಡಿಸಿದನು.

ಇಬ್ಬರೂ ಏಳುವರ್ಷದವರಾದರು. ತಂದೆಯು ಅವರಿಗೆ ನಿಶಾಕರ, ದಿವಾಕರನೆಂದು ಹೆಸರಿಟ್ಟನು. ರಾಕ್ಷಸ ಪುತ್ರನಿಗೆ ದಿವಾಕೀರ್ತಿ ಎಂದೂ ತನ್ನ ಮಗನಿಗೆ ನಿಶಾಕೀರ್ತಿಯೆಂದೂ ಹೆಸರಾಯಿತು. ಅವರಿಬ್ಬರ ಉಪಾಯನವೂ ಕೂಡ ನಡೆಯಿತು. ಉಪನಯನದ ನಂತರ ದಿವಾಕರನು ವೇದವನ್ನು ಪಠಿಸಿದನೆಂದೂ, ಜಡವಾದ ನಿಶಾಕರನು ಪಠಿಸಲಿಲ್ಲವೆಂದೂ ನಾವು ಕೇಳಿದ್ದೇವೆ. ನಿಶಾಕರನನ್ನು ಬಂಧು ಬಳಗದವರೆಲ್ಲರೂ ನಿಂದಿಸಿದರು. ತಂದೆಯೂ ಕೂಡ ಮಗನ ಜಡತೆಯಿಂದ ದುಃಖಪಟ್ಟು ಆತನನ್ನು ಒಂದು ನೀರಿಲ್ಲದ ಬಾವಿಯಲ್ಲಿ ಹಾಕಿಮುಚ್ಚಿದನು. ನಿಶಾಕರನು ಬಹಳ ವರ್ಷಗಳವರೆಗೆ ಬಾವಿಯಲ್ಲಿದ್ದನು. ಅಲ್ಲಿ ಬೆಳೆದಿದ್ದ ಫಲಭರಿತವಾದ ಒಂದು ನೆಲ್ಲಿ ಮರವು ಇವನ ಪೋಷಣೆಗಾಗಿ ಉಪಯುಕ್ತವಾಯಿತು. ಹೀಗೆ ಹತ್ತು ವರ್ಷಗಳು ಕಳೆದವು. ಅನಂತರ ಒಂದು ದಿನ ತಾಯಿಯಾದ ಧರ್ಮಿಷ್ಠೆಯು ಕಲ್ಲಿನಿಂದ ಮುಚ್ಚಿದ ಆ ಬಾವಿಯನ್ನು ನೋಡಿ "ಈ ಬಾವಿಯನ್ನು ಕಲ್ಲಿನಿಂದ ಮುಚ್ಚಿದವರಾರು?" ಎಂದು ಗಟ್ಟಿಯಾಗಿ ಕೂಗಿಕೊಂಡಳು. ಒಳಗಿದ್ದ ನಿಶಾಕರನು ತಾಯಿಯ ಸ್ವರವನ್ನು ಕೇಳಿ "ಅಮ್ಮಾ ತಂದೆಯೇ ಈ ಕಲ್ಲುಗಳನ್ನು ಎಳೆದಿರುವನು" ಎಂದನು. ಸ್ವರವನ್ನು ಕೇಳಿ ಧರ್ಮಿಷ್ಠೆಯು ಭಯಚಕಿತಳಾದಳು. "ಅದ್ಭುತ ಸ್ವರದಿಂದ ಮಾತನಾಡುತ್ತಿರುವಾಗ ನೀನಾರು" ಎಂದು ಕೇಳಿದಳು. ಆಗ ನಿಶಾಕರನು "ನಾನು ನಿನ್ನ ಮಗನು" ಎಂದನು. ಆಗ ಅವಳು "ನನಗೆ ದಿವಾಕರನೆಂಬ ಪ್ರಸಿದ್ಧ ಮಗನಿರುವನು ನಿಶಾಕರನೆಂಬ ಹೆಸರಿನ ಮಗನು ನನಗೆ ಯಾವನೂ ಇಲ್ಲ" ಎಂದಳು. ಆಗ ನಿಶಾಕರನು ತನ್ನ ಪೂರ್ವಚರಿತ್ರೆಯನ್ನೆಲ್ಲ ಸಮಗ್ರವಾಗಿ ತಾಯಿಗೆ ಹೇಳಿದನು. ಆ ಮಾತನ್ನು ಕೇಳಿ ಬಾವಿ ಮೇಲಿದ್ದ ಕಲ್ಲಿನ ಗುಂಪನ್ನು ಅವಳು ಕಿತ್ತು ಹಾಕಿದಳು.

ಆಗ ನಿಶಾಕರನು ಬಾವಿಯಿಂದೆದ್ದು ಬಂದು ತಾಯಿಯ ಪಾದಗಳಿಗೆ ನಮಸ್ಕರಿಸಿದನು. ಧರ್ಮಿಷ್ಠೆಯು ಅನುರೂಪನಾದ ತನ್ನ ಮಗನನ್ನು ಪತಿಯ ಸಮೀಪಕ್ಕೆ ಕರೆದುಕೊಂಡು ಬಂದು ಸಾದ್ಯಂತ ವರ್ತಮಾನವನ್ನು ಹೇಳಿದಳು. ಆಗ ಬ್ರಾಹ್ಮಣನು ಪುತ್ರನಿಗೆ "ನೀನು ಈ ರೀತಿಯಾಗಿ ಮೂಕನಾಗಿರಲು ಕಾರಣವೇನು? ಮೊದಲಿನ ಜನ್ಮದಲ್ಲಿ ಏನು ನಡೆಯಿತು? ಅದೆಲ್ಲವನ್ನೂ ನಾನು ಕೇಳಬೇಕೆಂದಿದ್ದೇನೆ ಹೇಳು" ಎಂದನು. ಆಗ ನಿಶಾಕರನು ತನ್ನ ಪೂರ್ವ ಜನ್ಮದ ಕತೆಯನ್ನು ತಂದೆತಾಯಿಗಳ ಮುಂದೆ ಹೇಳಲಾರಂಭಿಸಿದನು. "ನಾನು ಬಹಳ ಹಿಂದೆ ಪೂರ್ವಜನ್ಮದಲ್ಲಿ ಒಬ್ಬ ಬ್ರಾಹ್ಮಣೋತ್ತಮನಾದ ವೃಷಾಕಪಿ ಎಂಬವನ ಮಗನಾಗಿ ಮಾಲಾ ಎಂಬ ಅವನ ಪತ್ನಿಯಲ್ಲಿ ಜನಿಸಿದೆನು. ಆಗ ತಂದೆಯು ನನಗೆ ವೇದಶಾಸ್ತ್ರಗಳನ್ನು ಅಧ್ಯಯನ ಮಾಡಿಸಿದ್ದನು. ಈ ರೀತಿ ನಾನು ತತ್ವಜ್ಞಾನಿಯಾಗಿದ್ದರೂ ಮದಾಂಧನಾಗಿ ದುಷ್ಕಾರ್ಯದಲ್ಲಿಯೇ ಆಸಕ್ತನಾಗಿದ್ದೆನು ಅದರಿಂದ ನನಗೆ ಲೋಭವುಂಟಾಯಿತು. ನನ್ನ ಪಾಂಡಿತ್ಯವೆಲ್ಲ ಕುಸಿಯ ಹತ್ತಿತು. ಮೂಢನಾದ ನಾನು ಹೆಚ್ಚು ಪಾಪಕರ್ಮಗಳಲ್ಲಿ ತೊಡಗಿದೆನು. ಪರಸ್ತ್ರೀಸಂಪರ್ಕದಿಂದ, ಪರದ್ರವ್ಯಾಪಹರಣದಿಂದ ಅಪರಾಧಿಯಾಗಿ ನಾನು ನೇಣು ಹಾಕಿಕೊಂಡು ಮೃತನಾಗಿ ರೌರವ ನರಕಕ್ಕೆ ಹೋದೆನು.

ಅಲ್ಲಿ ಸಹಸ್ರವರ್ಷಪರ್ಯಂತರ ದುಃಖವನ್ನನುಭವಿಸಿ ಇನ್ನೂ ಪಾಪ ಶೇಷವು ಉಳಿದಿರುವದರಿಂದ ಹಿಂಸ್ರವಾದ ಸಿಂಹ, ವ್ಯಾಘ್ರಗಳ ಜನ್ಮವನ್ನು ಪಡೆದೆನು. ಹುಲಿಯೂ

ಕೂಡ ಆದೆನು. ಬೇಟೆಯಾಡಲಿಕ್ಕೆ ಒಬ್ಬ ದೊರೆಯು ನನ್ನನ್ನು ಪಂಜರದಲ್ಲಿ ಬಂಧಿಸಿ ನಗರಕ್ಕೆ ಒಯ್ದನು. ಬಂಧಿತನಾದಾಗ ಪೂರ್ವಜನ್ಮದಲ್ಲಿ ಹೊಂದಿದ ಧರ್ಮಾರ್ಥ ಶಾಸ್ತ್ರಗಳ ಸಂಸ್ಕಾರವು ನನಗೆ ಹೊಳೆಯಿತು. ಒಂದು ದಿನ ಅರಸನು ಗದೆಯನ್ನು ಕೈಯಲ್ಲಿ ಹಿಡಿದು ಒಂದೇ ವಸ್ತ್ರದಿಂದ ಕೂಡಿ ಯಾವದೋ ಕಾರಣದಿಂದ ನಗರದ ಹೊರಗೆ ಹೊರಟನು. ಅವನ ಹೆಂಡತಿಯಾದ ಅಜಿತಾ ಎಂಬವಳು ಅತಿ ಸುಂದರಿಯಾಗಿದ್ದು ದೊರೆಯು ಹೊರಟ ಮೇಲೆ ನನ್ನ ಸಮೀಪಕ್ಕೆ ಬಂದಳು. ಆಗ ನಾನು ಪೂರ್ವಾಭ್ಯಾಸ ವಶದಿಂದ ಕಾಮಪೀಡಿತನಾದೆನು. ಪರಸ್ತ್ರೀವಶೀಕರಣ ಮಾರ್ಗವನ್ನನುಸರಿಸಿ ನಾನು ಅವಳಿಗೆ ಹೇಳಿದೆನು. ಸುಂದರಿಯೇ, ಕೋಗಿಲೆಯು ತನ್ನ ಧ್ವನಿಯಿಂದ ಆಕರ್ಷಿಸುವಂತೆ ಯುವತಿಯಾದ ನೀನು ರೂಪದಿಂದ ನನ್ನ ಮನಸ್ಸನ್ನಾಕರ್ಷಿಸಿರುವಿ.''

ಇವನ ಮಾತಿನಿಂದ ಆಕರ್ಷಿತಳಾದ ಆ ಸ್ತ್ರೀಯು ''ಹುಲಿಯೇ, ನಮ್ಮಿಬ್ಬರಲ್ಲಿ ಸಂಗಮವು ಹೇಗೆ ತಾನೇ ಸಾಧ್ಯವಾದೀತು?'' ಎಂದಳು. ಆಗ ನಾನು ಆ ಸುಂದರಿಗೆ ಹೇಳಿದೆನು. ''ನೀನು ಪಂಜರದ ಬಾಗಿಲನ್ನು ತೆಗೆದಿದ್ದೇ ಆದರೆ ನಾನು ಹೊರಗೆ ಬರಬಹುದು.'' ನನ್ನ ಮಾತಿಗೆ ಮೋಸ ಬಿದ್ದು ಆಸುಂದರಿಯು ಮೆಲ್ಲನೇ ಬಾಗಿಲನ್ನು ತೆಗೆದಳು. ಒಡನೆಯೇ ನಾನು ಹೊರಗೆ ಬಂದೆನು. ನನಗೆ ಹಾಕಿದ್ದ ಸಂಕೋಲೆಗಳನ್ನು ಕಡಿದು ಹಾಕಲು ದೊರೆಯ ಹೆಂಡತಿಗೆ ನಾನು ಕೇಳಿಕೊಂಡೆನು. ಕೈ ಮುಂದೆ ಮಾಡಿದೆನು.

ಅಷ್ಟರಲ್ಲಿ ಅರಸನ ಸೇವಕರು ನನ್ನನ್ನು ನೋಡಿ ಅನೇಕ ಆಯುಧಗಳನ್ನು ಕೈಯಲ್ಲಿ ಹಿಡಿದುಕೊಂಡು ಓಡಿ ಬಂದು ದೊಡ್ಡದೊಂದು ಸರಪಳಿಯಿಂದ ಮತ್ತೆ ನನ್ನನ್ನು ಕಟ್ಟಿದರು. ''ಹೀಗೆ ನನ್ನನ್ನು ನೀವು ಕೊಲ್ಲಲ್ಲಾರಿರೆಂದು ಅವರಿಗೆ ಹೇಳಿದೆನು.'' ಆಗ ಅವರು ಒಂದು ಆಲದ ಮರಕ್ಕೆ ಭದ್ರವಾಗಿ ಕಟ್ಟಿ ಶಸ್ತ್ರಗಳಿಂದ ಗಾಯಗೊಳಿಸಿದರು. ಆಗ ನಾನು ಅಲ್ಲಿಯೇ ಮೃತನಾಗಿ ಪರಸ್ತ್ರೀವ್ಯಾಮೋಹದಿಂದ ಪುನಃ ನರಕವನ್ನು ಹೊಂದಿದೆನು. ಅಲ್ಲಿ ಸಹಸ್ರ ವರ್ಷ ಪರ್ಯಂತ ದುಃಖವನ್ನನುಭವಿಸಿದೆನು. ಇನ್ನೂ ಪಾಪಶೇಷವು ಉಳಿಯಿತು. ಆಗ ನಾನು ಬಿಳಿಯ ಕತ್ತೆಯಾಗಿ ಹುಟ್ಟಿದೆನು. ನಾನು ಅಗ್ನಿವೇಶ್ಯವೆಂಬ ಬಹುಕುಟುಂಬಿಯಾದ ಒಬ್ಬ ಬ್ರಾಹ್ಮಣನ ಮನೆಯಲ್ಲಿ ಸೇರಿದುದರಿಂದ ಈ ಕತ್ತೆಯ ಜನ್ಮದಲ್ಲೂ ಸಹ ಪೂರ್ವಾಭ್ಯಾಸದಿಂದ ಶಾಸ್ತ್ರದ ಸಂಸ್ಕಾರವು ಮನಸ್ಸಿನಲ್ಲಿ ಹೊಳೆಯಿತು. ಆ ಬ್ರಾಹ್ಮಣನ ಮನೆಯ ಸ್ತ್ರೀಯರು ನನ್ನನ್ನು ಪ್ರೀತಿಯಿಂದ ವಾಹನವನ್ನಾಗಿ ಮಾಡಿಕೊಂಡಿದ್ದರು. ಒಂದು ದಿನ ಆ ಬ್ರಾಹ್ಮಣಪತ್ನಿಯಾದ ವಿಮಲೆ ಎಂಬವಳು ನನ್ನನ್ನು ವಾಹನವನ್ನಾಗಿ ಮಾಡಿಕೊಂಡು ತನ್ನ ತಂದೆಯ ಮನೆಗೆ ಹೊರಟಳು. ಹೋಗುತ್ತಿರುವಾಗ ಅರ್ಧಮಾರ್ಗದಲ್ಲಿ ಆ ಯುವತಿಯು ನನ್ನನ್ನು ಒತ್ತಟ್ಟಿಗೆ ನಿಲ್ಲಿಸಿ ನದಿಗೆ ಸ್ನಾನ ಮಾಡಲು ಹೋದಳು. ಸ್ನಾನ ಮಾಡಿ ಬರುತ್ತಿರುವ ಆ ಸುಂದರಿಯನ್ನು ನೋಡಿದೊಡನೆಯೇ ಮತ್ತೆ ನಾನು ಕಾಮಾತುರನಾದೆನು. ನನ್ನಿಂದ ಆಕ್ರಮಿಸಲ್ಪಟ್ಟ ಆ ಯುವತಿಯು ಒಡನೆಯೇ ಭೂಮಿಯಲ್ಲಿ ಬಿದ್ದಳು. ಯುವತಿಗೆ ರಕ್ಷಕನಾಗಿ ಬಂದಿದ್ದ ಭೃತ್ಯನು ಕೋಲನ್ನೆತ್ತಿಕೊಂಡು ನನ್ನನ್ನು ಹೊಡೆಯಲು ಬಂದನು. ನಾನು ದಕ್ಷಿಣದ ಕಡೆಗೆ ಓಡಿಹೋದೆನು. ಓಡುವಾಗ ಕಡಿವಾಣದ ಹಗ್ಗವು ಸುತ್ತಿಕೊಂಡು ನನ್ನ ಪ್ರಾಣತ್ಯಾಗಕ್ಕೆ ಅದೇ ಕಾರಣವಾಯಿತು. ಮತ್ತೆ ನರಕವಾಸವಾಯಿತು. ಪಾಪಶೇಷದಿಂದ ಗಿಳಿಯ ಜನ್ಮ ಬಂದಿತು. ಅರಣ್ಯದಲ್ಲಿದ್ದಾಗ

ಒಬ್ಬ ಬೇಡನು ನನ್ನನ್ನು ಬಂಧಿಸಿದನು ಹಾಗೂ ಪಂಜರದಲ್ಲಿಟ್ಟನು. ಶಾಲಿ ಎಂಬ ವೈಶ್ಯಪುತ್ರನಿಗೆ ಮಾರಿದನು. ಆ ವೈಶ್ಯಪುತ್ರನು ನಾನು ಸರ್ವಶಾಸ್ತ್ರಜ್ಞ ನೆಂದು ತಿಳಿದು ಅಂತಃಪುರದಲ್ಲಿ ಸ್ತ್ರೀಸಮೀಪದಲ್ಲಿ ನನ್ನನ್ನು ಇಟ್ಟನು. ಸ್ತ್ರೀಯರು ನನ್ನನ್ನು ಅನೇಕ ತರಹದ ಹಣ್ಣು ಹಂಪಲುಗಳಿಂದ ನಿತ್ಯವೂ ಪೋಷಿಸುತ್ತಿದ್ದರು. ಒಂದು ದಿನ ಅತೀವ ಸುಂದರಿಯಾದ ಚಂದ್ರಾವಲಿ ಎಂಬ ವೈಶ್ಯಪುತ್ರಿಯು ಪಂಜರದ ಬಾಗಿಲನ್ನು ತೆರೆದು ಕೈಗಳಿಂದ ನನ್ನನ್ನು ಹಿಡಿದುಕೊಂಡು ನಗುತ್ತಾ ತನ್ನ ಸ್ತನಗಳ ಮೇಲೆ ಕುಳ್ಳಿರಿಸಿಕೊಂಡಳು. ಮತ್ತೆ ಕಾಮಾತುರತೆ ನನ್ನನ್ನು ಕಾಡಿತು. ಅವಳ ಹೊಡೆತದಿಂದ ನಾನುಕಪಿಗಳ ಬಂಧನಕ್ಕಾಗಿ ಹಾಕಿದ್ದ ಬಲೆಯಲ್ಲಿ ಮತ್ತೆ ಬಿದ್ದೆನು. ನನಗೆ ಮರಣವುಂಟಾಯಿತು. ಈಗ ನಾನು ಚಾಂಡಾಲರ ಹಳ್ಳಿಯಲ್ಲಿ ಎತ್ತಿನ ರೂಪದಿಂದ ಹುಟ್ಟಿದೆನು. ಅಲ್ಲಿಯ ಒಬ್ಬ ಚಾಂಡಾಲನು ಒಂದು ಗಾಡಿಗೆ ನನ್ನನ್ನು ಹೂಡಿ ಹೆಂಡತಿಯನ್ನು ಗಾಡಿಯಲ್ಲಿ ಕುಳ್ಳಿರಿಸಿ ವನಕ್ಕೆ ಹೊರಟನು. ಚಾಂಡಾಲನು ಮುಂದೆ ಹೋಗುತ್ತಿರುವಾಗ ಗಾಡಿಯ ಮೇಲಿದ್ದ ಅವನ ಪತ್ನಿಯು ಹಿಂದೆ ಇರುತ್ತಿದ್ದಳು. ವಿಲಾಸದಿಂದ ಗಾನ ಮಾಡುತ್ತಿದ್ದ ಅವಳ ಗಾನವನ್ನು ಕೇಳಿ ಮತ್ತೆ ನಾನು ಕಾಮಾತುರನಾದೆನು. ಹಿಂಭಾಗದಿಂದಲೇ ಅವಳನ್ನು ನೋಡಿ ನೆಗೆದು ಅವಳ ಮೇಲೆ ಬೀಳುವಾಗ ನೆಲದ ಮೇಲೆ ನಾನು ಬಿದ್ದೆನು. ಅಲ್ಲಿಯೇ ಮೃತಿಯನ್ನು ಹೊಂದಿದೆನು. ಸಾವಿರ ವರ್ಷಪರ್ಯಂತ ಪಾಪದ ಫಲವನ್ನುಂಡೆನು. ಈಗ ನಿನ್ನ ಮನೆಯಲ್ಲಿ ಹುಟ್ಟಿದೆನು. ನನಗೆ ಹಿಂದಿನ ಜನ್ಮದ ಜ್ಞಾನಗಳಿರುವದರಿಂದ ಹೊಂದಿದ ಎಲ್ಲ ಜನ್ಮಗಳನ್ನೂ ಕ್ರಮವಾಗಿ ನಾನು ಸ್ಮರಿಸುತ್ತಿರುವೆನು.

ಪೂರ್ವಾಭ್ಯಾಸಬಲದಿಂದ ಶಾಸ್ತ್ರಗಳ ಸ್ಮರಣೆ ಇರುವದರಿಂದ ಈಗ ನಾನು ಜ್ಞಾನವನ್ನು ಹೊಂದಿರುವದರಿಂದ ಘೋರವಾದ ಪಾಪಗಳನ್ನು ಮನಸ್ಸಿನಿಂದಲೂ ಕೂಡಿ ಇನ್ನು ಮುಂದೆ ಎಂದಿಗೂ ಮಾಡುವದಿಲ್ಲ. ಮನುಷ್ಯನಿಗೆ ಅಧ್ಯಯನ ಹಾಗೂ ಶಾಸ್ತ್ರ ಜೀವನಗಳು ಪೂರ್ವಾಭ್ಯಾಸದಿಂದಲೇ ಉಂಟಾಗುತ್ತವೆ. ನನ್ನ ಪೂರ್ವಜನ್ಮವನ್ನು ಸ್ಮರಿಸುವ ಮನುಷ್ಯನು ಪಾಪಗಳಿಂದ ಮುಕ್ತನಾಗುತ್ತಾನೆ. ಎಲೈ ತಂದೆಯೇ ನಾನು ನಿನ್ನ ಪಾಪನಾಶಕ್ಕಾಗಿ ಅರಣ್ಯಕ್ಕೆ ಹೊರಡುತ್ತೇನೆ. ನೀನು ದಿವಾಕೀರ್ತಿಯನ್ನೇ, ನಿನ್ನ ವಂಶವನ್ನು ಮುಂದುವರಿಸುವ ಗೃಹಸ್ಥ ಧರ್ಮದಲ್ಲಿ ನಿಯೋಗಿಸು.'' ಹೀಗೆ ನಿಶಾರಕನು ಹೇಳಿ ಪುಣ್ಯಕರವಾದ ಮುರಾರಿಯ ಸ್ಥಾನವೆಂದು ಪ್ರಸಿದ್ಧವಾದ ಬದರಿಕಾಶ್ರಮಕ್ಕೆ ಹೊರಟು ಹೋದನು. ಆದುದರಿಂದ ಎಲೈ ಬ್ರಾಹ್ಮಣನಾದ ಶುಕ್ರಾಚಾರ್ಯರೇ, ಪೂರ್ವಾಭ್ಯಾಸ ಬಲದಿಂದ ಬಂದಿರುವ ಈ ದಾನವನ್ನು ನಾನು ಬಿಡಲು ಸಾಧ್ಯವಾಗಲಾರದು. ದಾನ, ಅಧ್ಯಯನ, ತಪಸ್ಸು, ಚೌರ್ಯ, ಮಹಾಪಾತಕಗಳು, ಧರ್ಮಾರ್ಥಗಳು ಇವೆಲ್ಲವೂ ಮನುಷ್ಯನಿಗೆ ಪೂರ್ವಾಭ್ಯಾಸ ಬಲದಿಂದ ಬರುವವು. ಆಕಸ್ಮಿಕವಾಗಿ ಉಂಟಾಗುವದೇ ಇಲ್ಲ.'' ಈ ಪ್ರಕಾರ ಬಲಿಯು ಶುಕ್ರಾಚಾರ್ಯನಿಗೆ ಯುಕ್ತಿಯುಕ್ತನಾಗಿ ಹೇಳಿ ಶಂಖ, ಚಕ್ರಗದಾಪಾಣಿಯಾದ ನಾರಾಯಣನನ್ನೇ ಧ್ಯಾನಿಸುತ್ತ ನಿಂತನು.

ವಾಮನ ಮಹಾಪುರಾಣದಲ್ಲಿ ಜನ್ಮಾಂತರದ ಸ್ಮರಣೆ ೯೧ನೇಯ ಅಧ್ಯಾಯವು ಮುಗಿದುದು

—○—

ಬಲಿಶುಕ್ರರ ಸಂಭಾಷಣೆಯು ನಡೆಯುತ್ತಿರುವಂತೆ ವಾಮನ ರೂಪಿಯಾದ ಪರಮಾತ್ಮನು ಯಜ್ಞಶಾಲೆಗೆ ಬಂದನು.

''ಎಲೈ ದೈತ್ಯಪತಿಯೇ, ಓಂಕಾರ ಪೂರ್ವಕವಾದ ವೇದಗಳೆಲ್ಲವೂ ತಪಸ್ಸುಗಳ ರೂಪದಿಂದ ಯಜ್ಞದಲ್ಲಿ ನೆಲೆಸಿವೆ. ಅಶ್ವಮೇಧ ಎಂಬ ಯಜ್ಞವು ಬಹಳ ಶ್ರೇಷ್ಠವಾದುದು. ಈ ಸಂದರ್ಭದಿಂದ ನೀನು ಯುಕ್ತವಾದುದನ್ನು ಮಾಡು'' ಎಂದು ಉಚ್ಚಸ್ವರದಿಂದ ಪರಮಾತ್ಮನು ನುಡಿದನು. ಈ ಮಾತನ್ನು ಕೇಳಿದೊಡನೆಯೇ ಯಜ್ಞದೀಕ್ಷೆಯನ್ನು ಪಡೆದ ಬಲಿಯು ಅರ್ಘ್ಯಪಾದ್ಯಾದಿಗಳಿಂದ ವಾಮನ ಮೂರ್ತಿಯನ್ನು ಯಥಾ ವಿಧಿ ಪೂಜಿಸಿದನು. ಆಗ ವಾಮನನು ನಗುತ್ತ ಸನಿಹದಲ್ಲಿರುವ ಭಾರದ್ವಾಜರ ಕಡೆಗೆ ನೋಡಿ ಬಲಿಗೆ ಅಂದನು. ''ನನ್ನ ಗುರುಗಳ ವಿಶೇಷ ಅನುಗ್ರಹವನ್ನು ಪಡೆಯಲು ದಾನವರಾಜನಾದ ನಿನ್ನಲ್ಲಿ ತಮ್ಮ ಸ್ವಕೀಯವಾದ ಅಗ್ನಿಯನ್ನು ಸ್ಥಾಪಿಸಿರುವೆನು.

ಆದುದರಿಂದ ನಾನು ನಿನ್ನಲ್ಲಿ ಮೂರು ಹೆಜ್ಜೆಯಷ್ಟು ಭೂಮಿಯನ್ನು ಯಾಚಿಸುತ್ತಿರುವೆನು. ನನ್ನ ಶರೀರಕ್ಕನುಗುಣವಾಗಿ ಮೂರು ಹೆಜ್ಜೆ ಭೂಮಿಯನ್ನು ನೀನು ದಾನ ಮಾಡು. ಈ ಮಾತನ್ನು ಕೇಳಿ ಬಲಿಯು ಸಮೀಪದಲ್ಲಿರುವ ಹೆಂಡತಿ ಹಾಗೂ ಮಗನನ್ನು ನೋಡಿ ಹೀಗೆಂದನು ''ಈ ವಾಮನ ಮೂರ್ತಿಯು ತನ್ನಾಕಾರದಲ್ಲಿ ಮಾತ್ರವೇ ಲಘುವಾಗಿರದೇ ಮನೋರಥ ವಿಷಯದಲ್ಲೂ ಕೂಡ ಲಘುವಾಗಿರುವನು.

ಆದುದರಿಂದ ಬೇಕಾದಷ್ಟು ಕೊಡಲು ಸಮರ್ಥನಾದ ನನ್ನಲ್ಲಿಯೂ ಇಷ್ಟು ಚಿಕ್ಕ ಭೂಮಿಯನ್ನು ಯಾಚಿಸುತ್ತಿದ್ದಾನೆ.'' ಮತ್ತೆ ವಿಷ್ಣುವಿಗೆ ಹೇಳಿದ್ದೇನೆಂದರೆ ''ನನ್ನಲ್ಲಿ ಆನೆ, ಕುದುರೆ, ಧನಕನಕಾದಿಗಳು ಬೇಕಾದಷ್ಟು ಇರುವಾಗ ನಿನಗೆ ಇಷ್ಟವಾದ ವಸ್ತುವನ್ನು ಕೇಳು. ಈ ಮೂರು ಹೆಜ್ಜೆ ಭೂಮಿಯನ್ನು ಕೊಡಲು ನನಗೆ ಲಜ್ಜೆಯಾಗುತ್ತಲಿದೆ. ನನ್ನ ಆಧಿಪತ್ಯದಲ್ಲಿರುವ ಪಾತಾಳ, ಭೂಸರ್ಗಗಳಲ್ಲಿ ಯಾವದಾದರೊಂದು ಲೋಕವನ್ನು ಕೊಡಲು ಸಿದ್ಧನಿರುವೆನು.'' ಈ ಮಾತನ್ನು ಕೇಳಿ ವಾಮನನು ಅಂದನು. ''ದೊರೆಯೇ, ಉದಾರನಾದ ನೀನು ಇಷ್ಟಪಟ್ಟವರಿಗೆ ಬೇಕಾದಷ್ಟು ಕೊಡಬಹುದು.. ಆದರೆ ನಾನು ಮಾತ್ರ ಇಷ್ಟನ್ನೇ ಯಾಚಿಸಿರುವೆನು.'' ಬಲಿಯು ಕೂಡಲೇ ಚಿನ್ನದ ಹರಿವಾಣವನ್ನು ತರಿಸಿ ದಾನೋದಕವನ್ನು ಬಿಟ್ಟು ವಿಷ್ಣುವಿಗೆ ಮೂರು ಹೆಜ್ಜೆ ಪ್ರದೇಶವನ್ನು ದಾನಮಾಡಿದನು.

ದಾನೋದಕವು ಕೈಯಲ್ಲಿ ಬಿದ್ದೊಡನೆಯೇ ವಾಮನನು ಮೂರು ಲೋಕವನ್ನು ಆಕ್ರಮಿಸುವ ದಿವ್ಯರೂಪವನ್ನು ಧರಿಸಿದನು. ಆ ದಿವ್ಯ ರೂಪದಲ್ಲಿ ಭೂಮಿಯು ಪಾದದಲ್ಲಿಯೂ. ಅಂತರಿಕ್ಷವು ಮೊಳಕಾಲುಗಳಲ್ಲಿಯೂ ಸತ್ಯಲೋಕ, ತಪೋಲೋಕಗಳು ಮೊಳಕಾಲಿನ ಮೇಲ್ಭಾಗದಲ್ಲಿಯೂ ಮೇರು, ಮಂದರ ಪರ್ವತಗಳು ತೊಡೆಗಳಲ್ಲಿಯೂ ವಿಶ್ವದೇವತೆಗಳು ಸೊಂಟದಲ್ಲಿಯೂ ಆ ದೇಹದಲ್ಲಿ ಅಲ್ಲಲ್ಲಿ ನೆಲೆಸಿದರು. ಇನ್ನೂ ಭಿನ್ನ ಭಿನ್ನ ಅವಯವಗಳಲ್ಲಿ ಭಿನ್ನ ಭಿನ್ನ ದೇವತೆಗಳೂ ನದಿ ಪರ್ವತಗಳೂ ಅಂತರ್ಗತವಾದುವು. ಅಷ್ಟವಸುಗಳು ಕೈಗಳಾದರು. ಬ್ರಹ್ಮನು

ಹೃದಯದಲ್ಲಿ ಪ್ರತಿಷ್ಠೆ ಹೊಂದಿದನು. ಚಂದ್ರನು ಮನಸ್ಸಿನಲ್ಲಿ ನಿಂತನು. ಅಶ್ವಿನೀ ದೇವತೆಗಳು ಲಕ್ಷ್ಮಿಯೊಡನೆ ಹಣೆಯಲ್ಲಿಯೂ ಕಿವಿಗಳಲ್ಲಿಯೂ ನಿಂತರು. ನಕ್ಷತ್ರಗಳು ರೋಮ ಕೂಪದಲ್ಲಿ ಅಡಕವಾದರು. ಇಂಥ ಅದ್ಭುತ ರೂಪದಿಂದ ವಾಮನಮೂರ್ತಿಯು ಒಂದೇ ಹೆಜ್ಜೆಯಿಂದ ಚರಾಚರಾತ್ಮಕವಾದ ಜಗತ್ತೆಲ್ಲವನ್ನು ಸ್ವೀಕರಿಸಿದನು. ಎರಡನೇಯ ಹೆಜ್ಜೆಯ ಅರ್ಧಭಾಗದಿಂದ ಸ್ವರ್ಲೋಕ, ಮಹೋಲೋಕ ಜನಲೋಕ ತಪೋಲೋಕಗಳನ್ನೂ ಇನ್ನರ್ಧ ಭಾಗದಿಂದ ದ್ಯುಲೋಕಗಳನ್ನು ಆಕ್ರಮಿಸಿದನು. ವಿಶ್ವವನ್ನೇ ಆಕ್ರಮಣ ಮಾಡಿದಾ ಮಹಾಮೂರ್ತಿಯ ಪಾದಪ್ರಹಾರದಿಂದ ಬ್ರಹ್ಮಾಂಡದ ಮೇಲಿನ ಮುಚ್ಚಳವು ಭಗ್ನವಾಗಲು ಅಲ್ಲಿದ್ದ ಕುಟಿಲಾ ಎಂಬ ನದಿಯು ವ್ಯಾಕುಲವಾಗಿ ಆ ವಿಷ್ಣುಪಾದದ ಮಾರ್ಗದಿಂದಲೇ ಕೆಳಮುಖವಾಗಿ ಹರಿಯಿತು. ಆದುದರಿಂದಲೇ ಆ ನದಿಗೆ ವಿಷ್ಣುಪದೀ ಎಂಬ ಹೆಸರು ಬಂದಿತು. ವಾಮನನು ತನ್ನ ಮೂರನೇ ಹೆಜ್ಜೆಯನ್ನು ಇಡಬೇಕೆಂದು ಉಪಹಾಸಕ್ಕಾಗಿ ಬಲಿಗೆ ಕೇಳಿದಾಗ ಬಲಿಪುತ್ರನಾದ ಬಾಣನು ನಗುತ್ತ ವಿಷ್ಣುವನ್ನು ಕುರಿತು ಮಾತನಾಡಿದನು -

''ಎಲೈ ಜಗತ್ಪತಿಯೇ, ಇಚ್ಛಾ ಮಾತ್ರದಿಂದಲೇ ಜಗತ್ತನ್ನು ಸೃಷ್ಟಿಮಾಡುವ ನೀನು ಇದಕ್ಕಿಂತಲೂ ವಿಸ್ತಾರವಾದ ಭೂಮಿಯನ್ನು ಸೃಷ್ಟಿಮಾಡಿಲ್ಲವಲ್ಲ ? ಸೃಷ್ಟಿ ಮಾಡಿದಷ್ಟು ನಮ್ಮ ತಂದೆಯು ನಿನಗೆ ಕೊಟ್ಟುಬಿಟ್ಟಿರುವನು. ವಂಚಕತನದಿಂದ ಸಾಧ್ಯವಿಲ್ಲದ ಮಾತನ್ನು ಕೇಳಿ ನಮ್ಮ ತಂದೆಯನ್ನು ಏಕೆ ಋಣ ಬಂಧನ ಮಾಡುವಿ? ಆದುದರಿಂದಲೇ ಇಷ್ಟರಿಂದಲೇ ನೀನು ಪ್ರಸನ್ನನಾಗು ಬಂಧನದಿಂದ ಮುಕ್ತಮಾಡು.

ಸತ್ಪಾತ್ರರಲ್ಲಿ ಮಾಡಿದ ದಾನವು ಉತ್ತಮ ಫಲವನ್ನು ಕೊಡುವದೆಂದು ನಿನ್ನ ಆಜ್ಞಾ ರೂಪವಾದ ವೇದವು ಹೇಳುತ್ತದೆ. ಯಾರಿಗೆ ದಾನಮಾಡಿದರೂ ಅದು ನಿನಗೆ ಅರ್ಪಿತ. ದೇವದೇವೋತ್ತಮನಾದ ನೀನೇ ದಾನಕ್ಕೆ ಪಾತ್ರನು. ದಾನ ಮಾಡಿದ ಭೂಮಿಯು ಕುರುಕ್ಷೇತ್ರವೆಂಬ ಪುಣ್ಯಭೂಮಿಯು. ಪ್ರಭುವೇ ನೀನು ವೇದಗಳಿಗೆ ಪ್ರವರ್ತಕನು. ನಿಷ್ಪಕ್ಷಪಾತನು. ದೇವತೆಗಳಿಂದ ನಿನಗೆ ಯಾವ ಪ್ರಯೋಜನವೂ ಇಲ್ಲ. ಅಂತಹ ದೇವತೆಗಳ ಹಿತಕ್ಕಾಗಿ ನ್ಯಾಯಾನ್ಯಾಯಗಳನ್ನು ವಿಚಾರ ಮಾಡದೇ ದೈತ್ಯರಾಜನನ್ನು ಶಿಕ್ಷೆಗೆ ಗುರಿಮಾಡುವದು ಯಾವ ಪರಿಯ ನ್ಯಾಯ ? ಅಲ್ಪ ಪ್ರಮಾಣದಲ್ಲಿ ನೀನು ಇದ್ದಾಗ ದಾನಬೇಡಿ ಈಗ ನಿನ್ನ ಅದ್ಭುತ ಪ್ರಮಾಣಕ್ಕೆ ತಕ್ಕಂತೆ ಮೂರು ಹೆಜ್ಜೆ ಪ್ರದೇಶವನ್ನು ಸ್ವೀಕರಿಸುವದು ಯುಕ್ತವೇ! ಅಲೌಕಿಕವಾದ ನಿನ್ನ ಎರಡು ಹೆಜ್ಜೆಗಳಿಂದ ಜಗತ್ತೇ ವ್ಯಾಪಿಸಿದೆ ಎಂದು ಹೇಳುವದು ಆಶ್ಚರ್ಯವೇನಲ್ಲ. ಒಂದೇ ಹೆಜ್ಜೆಯಿಂದಲೇ ನೀನು ಮನಸ್ಸು ಮಾಡಿದರೆ ವ್ಯಾಪಿಸಬಹುದು. ಉಳಿದ ಹೆಜ್ಜೆಗಳ ಆಪಾದನೆಯನ್ನು ಬಲಿಯ ಮೇಲೆ ಮಾಡಬಹುದಾಗಿತ್ತು. ಒಂದೇ ಹೆಜ್ಜೆಯ ಆಪಾದನೆಯ ಕುಟಿಲಪ್ರಯತ್ನವೇಕೆ? ಎಲೈ ವಿಷ್ಣುವೇ ನ್ಯಾಯಬಾಹಿರವಾದ ಕಾರ್ಯದಲ್ಲಿ ನಿನ್ನಂತಹರು ಪ್ರವರ್ತಿಸಬಾರದು. ಚಿಕ್ಕ ಪ್ರಮಾಣದ ಭೂಮಂಡಲವನ್ನು ನೀನೇ ಸೃಷ್ಟಿ ಮಾಡಿರುವಿ. ಬಲಿಯ ಅಪರಾಧವು ಇದರಲ್ಲಿ ಯಾವುದೂ ಕಂಡುಬರುವುದಿಲ್ಲ. ಇದನ್ನು ನೀನೇ ಆಲೋಚಿಸು. ಹೆಚ್ಚು ಹೇಳುವದೇನು! ನಿನ್ನ ಇಚ್ಛೆ ಬಂದಂತಾಗುವುದು'' ಬಲಿಪುತ್ರನಾದ ಬಾಣನ ಆಶಯವನ್ನು ತಿಳಿದ ಜನಾರ್ದನ ಮೂರ್ತಿಯು ಅವನಿಗೆ ಹೇಳಿದನು.-

"ನಿನ್ನ ಪ್ರಶ್ನೆಗಳಿಗೆಲ್ಲ ಯುಕ್ತಿಯುಕ್ತವಾದ ಉತ್ತರವನ್ನು ಹೇಳುತ್ತೇನೆ ಕೇಳು. ನಾನು ಮೊದಲು ನನ್ನ ಪ್ರಮಾಣಕ್ಕೆ ತಕ್ಕಂತೆ ಮೂರು ಹೆಜ್ಜೆ ಪ್ರದೇಶವನ್ನು ಕೊಡು ಎಂದು ಕೇಳಿದೆನು. ನಿನ್ನ ತಂದೆಯಾದ ಬಲಿಯು ನನ್ನ ಪ್ರಮಾಣವನ್ನು ತಿಳಿದಿರಲಿಲ್ಲವೇ? ಹಾಗೆ ತಿಳಿಯದಿದ್ದಲ್ಲಿ ನಿರ್ಭಯವಾಗಿ ನಾನು ಹೇಳಿದ ಪಾದತ್ರಯವನ್ನು ಕೊಡಲು ಹೇಗೆ ಉದ್ಯುಕ್ತನಾಗುತ್ತಿದ್ದನು. ಮೊದಲು ಕೇಳಿರುವ ನನ್ನ ಪಾದಗಳೇ ಈ ಅಳತೆಯ ಪಾದಗಳು, ಬೇರೆಯವರ ಪಾದಗಳೇನಲ್ಲ. ಆದುದರಿಂದ ನಿನ್ನ ಆಕ್ಷೇಪದಲ್ಲಿ ಏನೂ ಅರ್ಥವಿಲ್ಲ.

ನೀನು ಹೇಳಿದಂತೆ ಒಂದೇ ಹೆಜ್ಜೆಯಿಂದ ಭೂರ್ಭುವಾದಿ ಲೋಕಗಳನ್ನೆಲ್ಲ ನಾನು ವ್ಯಾಪಿಸಬಲ್ಲೆ. ಆದರೆ ಬಲಿಯ ಹಿತಕ್ಕಾಗಿ ಎರಡು ಹೆಜ್ಜೆಯನ್ನಾಗಿ ಮಾಡಿ ಒಂದು ಹೆಜ್ಜೆಯ ಋಣವನ್ನು ಅವನ ಮೇಲೆ ಕಡಿಮೆ ಮಾಡಿದ್ದೇನೆ. ಎಲೈ ಪುತ್ರನೇ, ಈ ದಾನದಿಂದ ನಿನ್ನ ತಂದೆಗೇನೂ ನ್ಯೂನತೆಯಾಗಿಲ್ಲ. ದಾನೋದಕವನ್ನು ಬಿಟ್ಟುದರಿಂದ ಕಲ್ಪ ಪರ್ಯಂತರ ಆಯುಸ್ಸು ಉಂಟಾಗಿದೆ." ತ್ರಿವಿಕ್ರಮನು ಹೀಗೆ ಬಾಣನಿಗೆ ಮಾತುಗಳನ್ನು ಹೇಳಿ ಬಲಿಯ ಹತ್ತಿರ ಬಂದು ಹೇಳತೊಡಗಿದನು.

"ದೈತ್ಯರಾಜನೇ ಯಜ್ಞದಕ್ಷಿಣೆಯನ್ನು ಪೂರ್ತಿಯಾಗಿ ನೀನು ಕೊಟ್ಟಿರುವದರಿಂದ ಇದರ ಫಲವಾಗಿ ಸುತಲವೆಂಬ ಪಾತಾಳಕ್ಕೆ ಹೋಗಿ ಸುಖದಿಂದ ವಾಸ ಮಾಡು." ಆಗ ಬಲಿಯು ಅಂದನು "ಸುತಲದಲ್ಲಿ ಸುಖದಿಂದ ಜೀವಿಸಲು ಭೋಗಸಾಮಗ್ರಿಗಳೂ ಹೇಗೆ ಲಭಿಸುವವು?" ಎಂದಾಗ ಭಗವಂತನು ಹೇಳುತ್ತಾನೆ. "ಎಲೈ ಬಲಿಯೇ, ಒಂದು ರೀತಿಯಿಂದ ನಿಯಮವನ್ನು ಉಲ್ಲಂಘಿಸಿ ಯಾರು ದಾನಮಾಡುವರೋ ಅವರ ದಾನವು, ಶ್ರೋತ್ರಿಯರಿಲ್ಲದಿರುವ ಶ್ರಾದ್ಧಗಳೂ, ವ್ರತ ನಿಯಮವಿಲ್ಲದ ಅಧ್ಯಯನವು ನಿನಗೆ ಭೋಗ ಸಾಮಗ್ರಿಗಳನ್ನು ಒದಗಿಸಿ ಕೊಡುವವು.

ಹಾಗೆಯೇ ಇಂದ್ರನ ಮಹೋತ್ಸವವು ಮುಗಿದ ಮೇಲೆ ದೀಪಪ್ರದಾನವೆಂಬ (ದೀಪಾವಳಿ) ಮಹೋತ್ಸವವು ನಿನಗಾಗಿ ನಡೆಯುತ್ತದೆ. ಆ ಉತ್ಸವದಲ್ಲಿ ಮಾನವರು ಆದರದಿಂದ ನಿನ್ನನ್ನು ಅರ್ಚಿಸುತ್ತಾರೆ. ನಿನ್ನ ರಾಜ್ಯದಲ್ಲಿ ಈಗಿರುವಂತೆಯೇ ಅಲ್ಲಿಯೂ ಕೌಮುದೀ ಮಹೋತ್ಸವೇ ಮೊದಲಾದ ಉತ್ಸವಗಳು ನಡೆಯುತ್ತವೆ." ಹೀಗೆ ಎಲ್ಲ ಮಾತುಗಳನ್ನು ಹೇಳಿ ವಾಮನನು ಬಲಿಯನ್ನು ಪತ್ನಿ ಪುತ್ರರೊಡನೆ ಕಳುಹಿಸಿ ಕೊಟ್ಟು ಭೂಮಿಯನ್ನೆಲ್ಲ ಸ್ವಾಧೀನಪಡಿಸಿಕೊಂಡು ಅಲ್ಲಿಂದ ಹೊರಟನು. ಅನಂತರ ಇಂದ್ರನಿಗೆ ಸ್ವರ್ಗವನ್ನು ಕೊಟ್ಟು ದೇವತೆಗಳನ್ನೆಲ್ಲ ಯಜ್ಞಭಾಗಾರ್ಹರನ್ನಾಗಿ ಮಾಡಿ ಎಲ್ಲರೂ ನೋಡುತ್ತಿರುವಂತೆ ಅದೃಶ್ಯನಾದನು. ವಾಸುದೇವನು ಸ್ವಸ್ಥಾನಕ್ಕೆ ಹೋದ ನಂತರ ಶಾಲ್ವವೆಂಬ ಅಸುರನು ಮಹಾಸೈನ್ಯದೊಡನೆ ಸೌಭವೆಂಬ ನಗರವನ್ನು ನಿರ್ಮಿಸಿ ಆಕಾಶದಲ್ಲೆಲ್ಲ ಮನಬಂದಂತೆ ಸಂಚರಿಸಲು ಹೊರಟನು. ಮಯನೂ ಸಹ ಚಿನ್ನ, ಕಬ್ಬಿಣ, ತಾಮ್ರ, ಮೊದಲಾದವುಗಳಿಂದ ತ್ರಿಪುರವೆಂಬ ನಗರವನ್ನು ನಿರ್ಮಿಸಿದನು. ತಾರಕನೆಂಬ ಮಹಾಸುರನು ವೈದ್ಯುತನೊಡನೆ ಅಲ್ಲಿ ವಾಸಿಸಿದನು. ಬಲಿಪುತ್ರನಾದ ಬಾಣನೂ ಸಹ ಬಲಿಯು ಪಾತಾಳಕ್ಕೆ ತೆರಳಿದ ನಂತರ ಶೋಣಿತವೆಂಬ ನಗರವನ್ನು ನಿರ್ಮಿಸಿ ದಾನವರೊಡನೆ ವಾಸಿಸಹತ್ತಿದನು.

ಹೀಗೆ ವಾಮನ ರೂಪಧಾರಿಯಾದ ವಿಷ್ಣುವಿನಿಂದ ಇಂದ್ರ ಹಾಗೂ ಗೋ ಬ್ರಾಹ್ಮಣರ ಹಿತಕ್ಕಾಗಿ ಬಲಿಯು ಬಂಧಿತನಾದನು. ಪುಣ್ಯಕರವಾದ ವಾಮನ ಪ್ರಾದುರ್ಭಾವವೆಂಬ ಈ ಉಪಾಖ್ಯಾನದ ಶ್ರವಣ ಕೀರ್ತನ, ಸ್ಮರಣಗಳು ಪಾಪನಾಶಕಗಳಾಗಿ ಪುಣ್ಯಕಾರಕಗಳಾಗಿರುತ್ತವೆ. ಮುಂದೆ ಮತ್ತೇನು ಕೇಳಬೇಕೆನ್ನುತ್ತಿ ಕೇಳು ಎಂದರು.

ವಾಮನ ಮಹಾಪುರಾಣದಲ್ಲಿ ವಾಮನ ತ್ರಿವಿಕ್ರಮನಾದ ಎಂಬತ್ತೊಂಬತ್ತನೇಯ ಅಧ್ಯಾಯವು ಮುಗಿದುದು



## ವಿಶ್ವರೂಪ ದರ್ಶನ

**ಅಧ್ಯಾಯ - ೯೩**

**ನಾರದರು ಪ್ರಶ್ನೆ ಮಾಡುತ್ತಾರೆ** :- ವಿಷ್ಣು ಇಂದ್ರನಿಗೆ ಸ್ವರ್ಗವನ್ನು ಕೊಟ್ಟ ಮೇಲೆ ಅದೃಶ್ಯನಾದ ಆತನು ಎಲ್ಲಿಗೆ ಹೋದನು.?

**ಪುಲಸ್ತ್ಯರೇ ಹೇಳುತ್ತಾರೆ** :- ಬ್ರಹ್ಮನು ಹರಿಯನ್ನು ಯಥಾವಿಧಿಯಾಗಿ ಪೂಜಿಸಿ ''ಪ್ರಭುವೇ, ಏತಕ್ಕಾಗಿ ಸಂಚಾರವನ್ನು ಕೈಕೊಂಡಿರೀ?'' ಎಂದು ಕೇಳಿದಾಗ ಅವನು ಹೇಳಿದನು - ''ನಮ್ಮ ಶತ್ರುವನ್ನು ನಾಶ ಮಾಡಿ ಭೋಗ ಹೊಂದಲು ಅನುಕೂಲಿಸು'' ಎಂಬ ಸುರರ ಕೇಳಿಕೆಯಂತೆ ಬಲಿಬಂಧನವೆಂಬ ಕಾರ್ಯವನ್ನು ನಾನು ಮಾಡಿದೆನು.'' ಬ್ರಹ್ಮನು ಈ ಮಾತನ್ನು ಕೇಳಿ ಸಂತೋಷಪಟ್ಟು ''ನಿನ್ನ ಕಾರ್ಯ ಹಾಗೂ ರೂಪಗಳು ಅನಂತವಾದವು. ಅವುಗಳನ್ನು ನಾನೆಂತು ತಿಳಿಯಬಲ್ಲೆನು'' ಎಂದು ಕೇಳಿದನು. ಆಗ ಭಗವಂತನು ತನ್ನ ವಿಶ್ವರೂಪವನ್ನು ಪ್ರದರ್ಶಿಸಿದನು. ಯೋಜನ ವಿಸ್ತೀರ್ಣವಾದ ಪುಂಡರೀಕಾಕ್ಷನ ರೂಪವನ್ನು ನೋಡಿ ಬ್ರಹ್ಮನು ವಿನಯದಿಂದ ನಮಸ್ಕರಿಸಿದನು. ಆತನ ಕಾರ್ಯಗಳನ್ನು ಶ್ಲಾಘಿಸಿದನು. ಹಾಗೂ ಸ್ತೋತ್ರ ಮಾಡಿದನು.

''ಓಂಕಾರ ವಾಚ್ಯನಾದ ಮಹಾಪುರುಷನೇ, ನಿನಗೆ ಅನಂತ ನಮಸ್ಕಾರಗಳಿರಲಿ. ಎಲ್ಲಾ ಪ್ರಾಣಿಗಳಿಗೂ ಅವರವರ ಯೋಗ್ಯತಾನುಸಾರ ಭೋಗ್ಯವಸ್ತುಪ್ರದಾನ ಮಾಡಿ ಅಭಿವೃದ್ಧಿ ಪಡಿಸುವವನೇ ಕಪಿಲ ವರ್ಣನಾದ ಆಚಾರ್ಯಮೂರ್ತಿಯೇ ಸರ್ವಪಾಪ ನಾಶಕನಾದ ಪುರುಷಶ್ರೇಷ್ಠನೇ, ಮತ್ಸ್ಯ, ಕೂರ್ಮ ಮೊದಲಾದ ಅವತಾರಗಳನ್ನು ಹೊಂದಿ ಸಜ್ಜನರ ಆಪತ್ತನ್ನು ದೂರಮಾಡಿದವನೇ, ನಿನಗೆ ಅನಂತ ನಮಸ್ಕಾರಗಳಿರಲಿ. ಜ್ಞಾನಧ್ಯಾನಾದಿಗಳಿಗೆ ಗಮ್ಯನಾದ ನೀನು ಯಜ್ಞರೂಪನಾಗಿ ಇದ್ದು ಊರ್ಧ್ವ ರೇತಸ್ಸುಗಳಾದ ಮಹಾತಪಸ್ವಿಗಳಿಗೆ ಗತಿ ಪ್ರದನಾಗಿರುವಿ. ಇಂಥ ನಿನಗೆ ಅನಂತ ನಮಸ್ಕಾರಗಳು.'' ಹೀಗೆ ಚತುರ್ಮುಖನು ಸ್ತೋತ್ರ ಮಾಡಲಾಗಿ ಸಂತುಷ್ಟನಾದ ಹರಿಯು ''ಸತ್ವಗುಣಪೂರ್ಣನಾದ ನೀನು ಬೇಕಾದ ವರ ಕೇಳಿಕೋ'' ಎಂದನು. ''ಎಲೈ ಪ್ರಭುವೇ, ಪುಣ್ಯಕರವಾದ ನಿನ್ನ ರೂಪದಿಂದಲೇ ನನ್ನ ಮನೆಯಲ್ಲಿ ವಾಸಿಸಿ ದರ್ಶನದಿಂದ ನನ್ನನ್ನು ಪವಿತ್ರಗೊಳಿಸು.'' ಈ ಬ್ರಹ್ಮನ ಪ್ರಾರ್ಥನೆಯಂತೆ ವಾಮನ ರೂಪದಿಂದಲೇ ಬ್ರಹ್ಮನ ಮನೆಯಲ್ಲಿ ವಾಸಿಸಿ ಅವನಿಂದ ಪೂಜಿಸಲ್ಪಡುತ್ತಿರುವ ಶ್ರೀಹರಿ ಪರಮಾತ್ಮನ ಪ್ರೀತಿಗಾಗಿ ಅಪ್ಸರೆಯರೆಲ್ಲರೂ ನರ್ತನ ಮಾಡುವರು ದೇವತಾ ಸ್ತ್ರೀಯರು ಗಾನ ಮಾಡುವರು. ವಿದ್ಯಾಧರರು ವಾದ್ಯ ಬಾರಿಸುವರು.

ಹೀಗೆ ವಾದ್ಯ ಮೇಳದೊಡನೆ ಬ್ರಹ್ಮನು ಹರಿಯನ್ನು ಆರಾಧಿಸಿ ಪರಿಶುದ್ಧನಾದನು. ಅನಂತರ ಇಂದ್ರನು ಸತ್ಯಲೋಕಕ್ಕೆ ಬಂದನು. ಹರಿಯನ್ನು ಸ್ವರ್ಗ ಲೋಕಕ್ಕೂ ಕರೆದುಕೊಂಡು ಹೋಗಿ ತಾನೂ ಪೂಜಿಸಿದನು. ಆ ಸ್ವರ್ಗದಲ್ಲಿಯೂ ಸಹ ಸಹಸ್ರಪ್ರಯೋಜನ ಪರಿಮಿತವಾದ ಮಹಾ ಕ್ಷೇತ್ರದಲ್ಲಿ ವಾಮನ ಮೂರ್ತಿಯಾಗಿಯೇ ಇದ್ದು ಇಂದ್ರನಿಂದಲೂ ಸಹ ಬ್ರಹ್ಮನಂತೆಯೇ ಪೂಜೆಯನ್ನು ಅಂಗೀಕರಿಸಿದನು. ಹೀಗೆ ಪೂಜ್ಯನಾದ ತ್ರಿವಿಕ್ರಮನು ತನ್ನ ಅವತಾರಗಳಿಂದ ದೇವತೆಗಳಿಗೆ ಉಂಟು ಮಾಡಿದ ಹಿತವನ್ನೂ ಬಲಿಯು ನಿನಗೆ ಪಾತಾಳದಲ್ಲಿ ಸಲ್ಲಿಸುವದನ್ನು ನಿನಗೆ ಹೇಳಿದೆನು.

ವಾಮನ ಮಹಾಪುರಾಣದಲ್ಲಿ ವಿಶ್ವರೂಪ ದರ್ಶನ ೯೩ನೇಯ ಅಧ್ಯಾಯವು ಮುಗಿದುದು



## ಸುದರ್ಶನ ಚಕ್ರದ ಶಕ್ತಿ

**ಅಧ್ಯಾಯ - ೯೪**

ದೈತ್ಯರಾಜನಾದ ಬಲಿಯು ತ್ರಿವಿಕ್ರಮನ ಆಜ್ಞೆಯಂತೆ ಪಾತಾಳಲೋಕಕ್ಕೆ ಹೋಗಿ ಅಲ್ಲಿ ಸಕಲ ವೈಭವಗಳಿಂದ ಉಪೇತವಾದ ಒಂದು ಮಹಾನಗರವನ್ನು ನಿರ್ಮಿಸಿದನು. ವಿಶ್ವಕರ್ಮನೇ ಸ್ವತಃ ಸುಂದರವಾದ ರಾಜಗೃಹವನ್ನು ನಿರ್ಮಿಸಿ ದಿವ್ಯಮಾನುಷ ಭೋಗಸಾಮಗ್ರಿಗಳನ್ನು ಒದಗಿಸಿ ಕೊಟ್ಟನು. ಬಲಿಯು ವಿಂಧ್ಯಾವಲಿಯೊಡನೆ ಸುಖದಿಂದ ವಾಸಿಸಿದನು. ವಿಂಧ್ಯಾವಲಿಯು ಸತೀ ಧರ್ಮದಲ್ಲಿ ಅಗ್ರಗಣ್ಯಳು. ಆದರೆ ಬಲಿಯು ಅತಿಶಯವಾದ ಭೋಗಗಳಲ್ಲಿ ಆಸಕ್ತನಾದನು. ದೈತ್ಯರ ತೇಜಸ್ಸನ್ನಡಗಿಸುವುದಕ್ಕೋಸ್ಕರ ವಿಷ್ಣುವಿನ ಸುದರ್ಶನ ಚಕ್ರವು ಅಲ್ಲಿಗೆ ಬಂದಿತು.

ಅದು ಬಂದೊಡನೆ ದೈತ್ಯರೆಲ್ಲ ಕ್ಷೋಭೆಗೊಂಡರು. ಅದನ್ನು ನೋಡಿ ಬಲಿಯು ಕೂಡಲೇ ಖಡ್ಗಪಾಣಿಯಾಗಿ ನಿಂತನು. ಆಗ ಶೀಲವತಿಯಾದ ವಿಂಧ್ಯಾವಲಿಯು ಹಿರಿದ ಕತ್ತಿಯನ್ನು ಒರೆಯಲ್ಲಿಡಲು ಹೇಳಿದಳು. ಮೃದು ಮಧುರವಾದ ಮಾತಿನಿಂದ ಗಂಡನನ್ನು ಸಂತೈಸಿದಳು. ''ಇದು ಮಹಾಮಹಿಮನಾದ ಭಗವಂತನ ಚಕ್ರಾಯುಧ. ಇದನ್ನು ಭಕ್ತಿಯಿಂದ ಪೂಜಿಸಬೇಕು'' ಎಂದು ಹೇಳಿ ಹೊರಟುಹೋದಳು. ಸಾವಿರ ಹಲ್ಲಿನಿಂದೊಡಗೂಡಿದ ವಿಷ್ಣುಚಕ್ರವು ಎದುರಿಗೆ ಪ್ರತ್ಯಕ್ಷವಾದೊಡನೆ ಬಲಿಚಕ್ರವರ್ತಿಯು ಚಕ್ರವನ್ನು ಯಥಾವಿಧಿಯಾಗಿ ಪೂಜೆ ಮಾಡಿ ಕೈ ಮುಗಿದು ಸ್ತೋತ್ರ ಮಾಡತೊಡಗಿದನು. ''ದೈತ್ಯಸಮೂಹದ ನಾಶಕ್ಕಾಗಿ ಬಂದಿರುವ ಪ್ರಕಾಶಶೀಲವಾದ ಈ ಸುದರ್ಶನ ಚಕ್ರವನ್ನು ನಾನು ನಮಸ್ಕರಿಸುತ್ತೇನೆ. ಯಾವ ಚಕ್ರದ ಒಂದೊಂದು ಅವಯವ ಗಳಲ್ಲಿಯೂ ಭಿನ್ನ ಭಿನ್ನರಾದ ದೇವತೆಗಳು ವಾಸಮಾಡಿರುವರೋ ಅಂತಹ ಆಯುಧ ಶ್ರೇಷ್ಠವಾದ ಚಕ್ರವನ್ನು ನಾನು ಶಿರಸಾ ವಂದಿಸುತ್ತೇನೆ.

ಎಲೈ ಚಕ್ರವೇ, ನೀನು ಉಜ್ವಲ ಕಿರಣಗಳಿಂದ ನನ್ನ ಸರ್ವವಿಧವಾದ ಪಾಪಗಳನ್ನು ನಾಶಪಡಿಸು. ಕಲಿಸಂಬಂಧವಾದ ಹಾಗೂ ಮಾತಾಪಿತೃಗಳ ಸಂಬಂಧದಿಂದ ನನ್ನಲ್ಲಿ ಪಾಪಗಳುಂಟಾಗಿವೆ. ಅವುಗಳನ್ನು ನೀನು ನಾಶಮಾಡು. ನಿನ್ನನ್ನು ಸ್ಮರಿಸಿದರೂ ವಿಪತ್ತುಗಳು ದೂರ ವಾಗುವವು. ಹೀಗೆ ಸುದರ್ಶನವನ್ನೂ, ಪುಂಡರೀಕಾಕ್ಷನನ್ನೂ

ಸ್ಮರಿಸುತ್ತ ಬಲಿಯು ನಿಂತನು. ಹೀಗೆ ಪೂಜಿಸಲ್ಪಟ್ಟ ಆ ಚಕ್ರವು ದಾನವರನ್ನೆಲ್ಲ ನಿಸ್ತೇಜಸ್ಕರನ್ನಾಗಿ ಮಾಡಿ ವಿಷುವ ಎಂಬ ದಕ್ಷಿಣ ದಿಕ್ಕಿಗೆ ಪಾತಾಲದಿಂದ ಹೊರಟಿತು.

ದೈತ್ಯರೆಲ್ಲ ನಿಸ್ತೇಜಸ್ಕರಾದದ್ದನ್ನು ನೋಡಿ ಖಿನ್ನನಾದ ಬಲಿಯು ತನ್ನ ಪಿತಾಮಹನಾದ ಪ್ರಹ್ಲಾದನನ್ನು ಸ್ಮರಿಸಿದನು. ಸ್ಮರಣ ಮಾತ್ರದಿಂದಲೇ ಪ್ರಹ್ಲಾದನು ಅಲ್ಲಿ ಉಪಸ್ಥಿತನಾದನು. ಬಲಿಯು ಅರ್ಘ್ಯಪಾದ್ಯಾದಿಗಳಿಂದ ಪೂಜಿಸಿದನು. ಭಕ್ತಿಯಿಂದ ಆತನನ್ನು ಪ್ರಾರ್ಥಿಸಿದನು. ''ತಾತನೇ ನನ್ನ ಮೇಲೆ ದಯಮಾಡಿ ಸಂಸಾರದಲ್ಲಿ ಸಿಲುಕಿರುವ ಮನುಷ್ಯನ ಕರ್ತವ್ಯಗಳ ಬಗ್ಗೆ ಉಪದೇಶಿಸು. ಯಾವ ಕಾರ್ಯವನ್ನು ಮಾಡುವದರಿಂದ ಮನುಷ್ಯನಿಗೆ ಬಂಧವು ತಪ್ಪುವದು? ಈ ಬಂಧನದಿಂದ ಮುಕ್ತವಾಗುವ ಉಪಾಯವಾವುದು?'' ಬಲಿಯು ಹೀಗೆ ಕೇಳಿದಾಗ ದಾನವ ಶ್ರೇಷ್ಠನಾದ ಪ್ರಹ್ಲಾದನು ಹೀಗೆ ಹೇಳಿದನು. ''ಎಲೈ ದಾನವಶ್ರೇಷ್ಠನೇ, ನಿನಗೆ ಮೊದಲು ಈ ತೆರನಾದ ಬುದ್ಧಿಯುಂಟಾದುದು ಬಹಳ ಶ್ಲಾಘನೀಯವಾದುದು.

ಮನುಷ್ಯರಿಗೆಲ್ಲ ಹಿತಕರವಾದ ಮಾತುಗಳನ್ನೆಲ್ಲ ಹೇಳುತ್ತೇನೆ ಕೇಳು. ಸಂಸಾರವೆಂಬ ಮಹಾಸಮುದ್ರದಲ್ಲಿ ಹೊಕ್ಕ ಮನುಷ್ಯನು, ಅನೇಕ ವಿಷಯಾಭಿಲಾಷೆಗಳೆಂಬ ತೆರೆಗಳಿಂದ ಹೊಡೆಯಲ್ಪಟ್ಟವನಾಗಿ, ಬಂಧು ಬಾಂಧವರ ರಕ್ಷಣಾ ಭಾರದಿಂದ ಕುಗ್ಗಿದವನಾಗಿ ಮುಳುಗುತ್ತಲಿರುವನು. ಅವನಿಗೆ ಆಶ್ರಯವೆಂದರೆ ವಿಷ್ಣು ಎಂಬ ದೋಣಿಯು ಮಾತ್ರ. ಈ ದೋಣಿಯಿಂದ ಆತನು ಸಮುದ್ರವನ್ನು ದಾಟಬಲ್ಲನು.

ಯಾವನು ಮಹಾಮಹಿಮೋಪೇತನೋ, ತನ್ನನ್ನೂ ಹಾಗೂ ಇತರ ಜಗತ್ತನ್ನು ಪಡೆಯಲು ಸಮರ್ಥನೋ ಅಂಥ ನಾರಾಯಣನನ್ನು ಆಶ್ರಯಿಸಿದವರು ಯಮನ ಸ್ಥಾನವನ್ನು ಪ್ರವೇಶಿಸುವದಿಲ್ಲ. ವೈಷ್ಣವಾಗ್ರೇಸರರೆದುರಿನಲ್ಲಿ ಪಾಶಧರರಾದ ಯಮಕಿಂಕರರು ಬರಲು ಹೆದರುತ್ತಾರೆ. ಯಾವ ನಾಲಿಗೆಯು ಹರಿಯನ್ನು ಸ್ತೋತ್ರ ಮಾಡುತ್ತದೆಯೋ ಅದು ಉತ್ತಮ ವಾದ ನಾಲಿಗೆ. ಯಾವ ಕೈಗಳು ದೇವರ ಪೂಜೆಯಲ್ಲಿ ಆಸಕ್ತವಾಗುವುವೋ ಅಂತಹ ಕೈಗಳೂ ಸಾರ್ಥಕವಾದ ಕೈಗಳು. ನಾಲಿಗೆಯು ಹರಿಗುಣವನ್ನು ವರ್ಣನ ಮಾಡದಿದ್ದರೆ ಅದರ ಉಪಯೋಗವಿಲ್ಲ.

ಯಾವ ಮನುಷ್ಯನು ಪೂಜ್ಯನಾದ ತ್ರಿವಿಕ್ರಮನನ್ನು ನಾಲ್ಕು ರೀತಿಯಿಂದ ಪೂಜಿಸುತ್ತಾನೋ, ಅಂತಹ ಮನುಷ್ಯನು ಎಲ್ಲರಿಂದ ಪೂಜಿತನಾಗುತ್ತಾನೆ. ಎಲೈ ಪುತ್ರನೇ, ಸಮುದ್ರದಲ್ಲಿರುವ ರತ್ನಗಳಿಗೆ ಹೇಗೆ ಗಣನೆಯೇ ಇಲ್ಲವೋ ಹಾಗೆಯೇ ಹರಿಯಲ್ಲಿ ನೆಲೆಸಿರುವ ಗುಣಗಳಿಗೆ ಗಣನೆಯೇ ಇಲ್ಲ. ಯಾರು ಶಂಖ, ಚಕ್ರ ಗದಾಪಾಣಿಯಾದ ಲಕ್ಷ್ಮೀಪತಿಯನ್ನು ಆಶ್ರಯಿಸುವರೋ, ಅವರು ಎಂದೂ ದುಃಖಭಾಗಿಗಳಾಗುವದಿಲ್ಲ ಹಾಗೂ ಸಂಸಾರ ಎಂಬ ಕೊರಕಲಿನಲ್ಲಿ ಪುನಃ ಅವರು ಬೀಳುವದೇ ಇಲ್ಲ. ವೇದಶಾಸ್ತ್ರಗಳಲ್ಲಿ ಪಂಡಿತರಾಗಿ ತಮ್ಮ ತಮ್ಮ ಜ್ಞಾನಕ್ಕೆ ಉಚಿತವಾದ ಆಚರಣೆಗಳಿಂದ ಜ್ಞಾನಿಗಳಾದವರು ಯಾವ ಸದ್ಗತಿಯನ್ನು ಹೊಂದುತ್ತಾರೋ, ಅಂತಹ ಸದ್ಗತಿಯನ್ನೇ ವಿಷ್ಣುಭಕ್ತಿಯಿಂದ ಹೊಂದುತ್ತಾರೆ. ಪ್ರಪಂಚದ ಎಲ್ಲಾ ಭಾಗಗಳಲ್ಲಿಯೂ ಸೂಕ್ಷ್ಮರೂಪದಿಂದ ಅವ್ಯಕ್ತ ರೀತಿಯಲ್ಲಿ ದೇವರು ನೆಲೆಸಿರುವನು.

ಅಂತಹ ಪರಮಾತ್ಮನನ್ನು ಶಾಸ್ತ್ರಾಭ್ಯಾಸ ಮಾಡಿ ತಿಳಿದುಕೊಂಡವನು ಪುನಃ ಸಂಸಾರದಲ್ಲಿ ಬೀಳುವದಿಲ್ಲ. ಸ್ವೇಚ್ಛೆಯಿಂದ ಅವನು ಅನೇಕ ದೇಹಧಾರಣೆ ಮಾಡಿದರೂ ಕರ್ಮಬಂಧವು ಆತನಿಗಿರುವದಿಲ್ಲ. ಅಂತಹ ವಿಷ್ಣುವಿನಲ್ಲಿ ಭಕ್ತಿಯನ್ನಿಟ್ಟು ಅವನನ್ನೇ ಗತಿ ಎಂದು ನಂಬಿದವರು ಪುನಃ ಜನ್ಮವನ್ನೇ ಹೊಂದುವದಿಲ್ಲ. ಪ್ರಾತಃಕಾಲದಲ್ಲಿ ಇಂತಹ ಹರಿಸ್ಮರಣೆಯನ್ನು ಮಾಡಿದವರು ದುಃಖವನ್ನು ದಾಟುವರು. ಯಾವ ಭಾಗ್ಯಶಾಲಿಗಳೂ ಚಕ್ರಪಾಣಿಯಾದ ಹರಿಯಲ್ಲಿ ಭಕ್ತಿಮಾಡುವರೋ ಅಂತಹವರು ಹರಿಯಸ್ಥಾನವನ್ನೇ ಹೊಂದುವರು. ಆಶ್ರಮೋಚಿತವಾದ ಕರ್ಮಗಳಿಂದ ವಿಷ್ಣುಭಕ್ತಿಯನ್ನು ತೋರ್ಪಡಿಸಿದಾದಲ್ಲಿ ಪರಮಾತ್ಮನ ಅನುಗ್ರಹವು ಅವಶ್ಯಕವಾಗಿ ಆಗುವದು.

ಕೀರ್ತಿ ಕಾಮನೆಯಿಂದ ಯಜ್ಞ ದಾನ ಧರ್ಮಗಳನ್ನು ಮಾಡುವದು ವ್ಯರ್ಥವಾದ ಕಾರ್ಯ. ಆದುದರಿಂದ ''ಓಂ ನಮೋನಾರಾಯಣ'' ಎಂಬ ಮಹಾಮಂತ್ರವನ್ನು ಅನನ್ಯ ಭಾವದಿಂದ ಜಪಿಸಬೇಕು. ವಿಷ್ಣು ಭಕ್ತನಿಗೆ ಪರಾಜಯವೆಂಬುವದು ಯಾವ ರೀತಿಯಿಂದಲೂ ಬರುವದಿಲ್ಲ. ದುಷ್ಟ ನಡವಳಿಕೆಯಿಂದ ಉಂಟಾದ ಅನಿಷ್ಟಗಳು ವಿಷ್ಣುವಿನ ಸ್ಮರಣ ಮಾತ್ರದಿಂದಲೇ ನಾಶಹೊಂದುವವು. ಎಷ್ಟೋ ತೀರ್ಥಗಳಲ್ಲಿ ಸ್ನಾನ ಮಾಡಿದುದರ ಫಲ ಕೇವಲ ನಾರಾಯಣನ ಪ್ರಣಾಮದಿಂದುಂಟಾದ ಫಲದ ಹದಿನಾರನೇ ಒಂದು ಭಾಗವನ್ನೂ ಹೊಂದುವದಿಲ್ಲ. ಏಕನಿಷ್ಠೆಯಿಂದ ಹೃಷೀಕೇಶನನ್ನು ಪೂಜಿಸಿ ಮಾನವನು ಉತ್ತಮ ಗತಿಯನ್ನು ಹೊಂದುವನು.

ಮೂರು ಸಂಧ್ಯಾಕಾಲಗಳಲ್ಲಿ ಯಾರು ಪದ್ಮನಾಭನನ್ನು ಸ್ಮರಿಸುವರೋ ಅವರು ಉಪವಾಸದ ಫಲವನ್ನು ಹೊಂದುತ್ತಾರೆ. ಆದುದರಿಂದ ಎಲೈ ಬಲಿಯೇ, ಶಾಸ್ತ್ರ ಮಾರ್ಗವನ್ನು ಅನುಸರಿಸಿ ನೀನು ಯಾವಾಗಲೂ ಹರಿಯನ್ನು ಪೂಜಿಸು. ಅವನ ಅನುಗ್ರಹದಿಂದಲೇ ನೀನು ಉತ್ತಮವಾದ ಸಿದ್ಧಿಯನ್ನು ಹೊಂದುವಿ. ಅವನನ್ನೇ ಧ್ಯಾನ ಮಾಡು, ಅವನನ್ನೇ ಆರಾಧಿಸು. ಎಲ್ಲ ವಿಧದಲ್ಲೂ ಅವನನ್ನೇ ಆಶ್ರಯಿಸುವದಾದರೆ ನೀನು ಸುಖಿಯಾಗುವಿ. ಕಾಮಕ್ರೋಧಾದಿ ಮನೋದೋಷಗಳನ್ನು ನೀಗಿ ಶಾಂತಿಯಿಂದ ವಿಷ್ಣುವನ್ನು ಸೇವಿಸುವವರು ಜರಾಮರಣರಹಿತರಾಗಿ ಹರಿಯನ್ನು ಸೇರುತ್ತಾರೆ.

ಆದುದರಿಂದ ಮನುಷ್ಯನಾಗಿ ಹುಟ್ಟಿದವನು ಮಹಾವಿಷ್ಣುವಿನ ಧ್ಯಾನ ಸ್ಮರಣೆಗಳನ್ನೂ ಅವನ ನಾಮಕೀರ್ತನವನ್ನೂ ಕೊನೆಗೆ ಪಠನ ಮಾಡುತ್ತಿರುವ ಸತ್ಪುರುಷರಿಂದ ಶ್ರವಣವನ್ನಾದರೂ ಮಾಡಿಯೇ ಮಾಡಬೇಕು. ಇದು ಅವನ ಪೂಜೆಗೆ ಸಮಾನವೆಂದು ತಿಳಿದವರು ಹೇಳುತ್ತಾರೆ.

ವಾಮನ ಮಹಾಪುರಾಣದಲ್ಲಿ ಸುದರ್ಶನ ಚಕ್ರದ ಶಕ್ತಿ ೯೪ನೇಯ ಅಧ್ಯಾಯವು ಮುಗಿದುದು

—o—

ಬಲಿಯು ಪ್ರಹ್ಲಾದನಿಗೆ ಹೇಳುತ್ತಾನೆ, ''ಹರಿಯನ್ನು ಪೂಜಿಸಿ ಹೊಂದ'ಬಹುದಾದ ಉತ್ತಮಗತಿ ಯಾವದು? ಅದಕ್ಕೆ ಬೇಕಾದ ಕ್ರಮು ಯಾವದು ? ಯಾವ ವಿಧದ ಪೂಜೆಯಿಂದ ಹರಿಯು ಪ್ರೀತನಾಗುವನು. ಅವನ ಪ್ರೀತಿಗಾಗಿ ಮಾಡತಕ್ಕ ಪ್ರಶಸ್ತದಾನಗಳಾವವು ಹಾಗೂ ಯಾವ ತಿಥಿಯಲ್ಲಿ ಉಪವಾಸವನ್ನು ಮಾಡಬೇಕು?'' ಇದೆಲ್ಲವನ್ನೂ ನನಗೆ ದಯವಿಟ್ಟು ಹೇಳಬೇಕು. ಪ್ರಹ್ಲಾದನು ಉತ್ತರ ಹೇಳುತ್ತಾನೆ, ''ಹರಿಯನ್ನುದ್ದೇಶಿಸಿ ಯಾವ ದಾನ ವನ್ನಾದರೂ ಮಾಡಿದರೂ ಅದು ಅಕ್ಷಯ ಫಲ ಕೊಡುತ್ತದೆ. ದಾನದಿಂದ ಸತ್ಕಾರ ಹೊಂದಿದ ಬ್ರಾಹ್ಮಣನು ಸಂತುಷ್ಟನಾದಲ್ಲಿ ಹರಿಯು ಸಂತುಷ್ಟ ನಾಗುತ್ತಾನೆ. ಯಾಕೆಂದರೆ ಹರಿಯು ಬ್ರಾಹ್ಮಣಪ್ರಿಯನು. ಬ್ರಾಹ್ಮಣನು ಪಂಡಿತನೇ ಆಗಿರಲಿ, ಪಾಮರನೇ ಆಗಿರಲಿ, ಅವನನ್ನು ಅವಮಾನಿಸಬಾರದು.

ವಿಷ್ಣುವನ್ನು ಅನೇಕ ಪುಷ್ಪಗಳಿಂದ ಅರ್ಚಿಸಬೇಕು. ಜಾಜಿ, ಮಲ್ಲಿಗೆ, ಸಂಪಿಗೆ, ಅಶೋಕ, ಕಣಗಿಲೆ, ಕಾಡು ಮಲ್ಲಿಗೆ, ದಾಸವಾಳ ಮೊದಲಾದ ಹೂಗಳೂ ಅಚ್ಯುತನ ಪೂಜೆಗೆ ಪ್ರಶಸ್ತವಾದವುಗಳು. ಬಿಲ್ವಪತ್ರ, ಶಮೀಪತ್ರ, ಭೃಂಗಪತ್ರ, ಮೃಗಾಂಕಪತ್ರ, ಜಾಜಿಯ ಪತ್ರ ಇವೆಲ್ಲವೂ ವಿಷ್ಣುಪೂಜೆಗೆ ಉಪಯುಕ್ತವಾದ ಪತ್ರಗಳು. ಕಮಲ, ನೈದಿಲೆ, ಚಿಗುರೆಲೆಗಳು, ಎಳೆಯ ಗರಿಕೆ ಇವೂ ಕೂಡ ಪೂಜೆಯ ಸಾಧನಗಳು. ಕುಂಕುಮ, ಕೇಸರಿ, ಚಂದನ, ಲಾಮಂಚ, ಕಮಲ ಲತೆಯ ಕಾಷ್ಠ ಮರದರಶಿನ ಈ ಸುಗಂಧೀ ಚೂರ್ಣಗಳನ್ನು ಹರಿಗೆ ಲೇಪಿಸಬೇಕು. ದೇವದಾರು ಹಾಗೂ ಜಾಜೀನಮರದ ಧೂಪವನ್ನು ಸಮರ್ಪಿಸಬೇಕು. ತುಪ್ಪದಿಂದ ಸಂಸ್ಕರಿಸಲ್ಪಟ್ಟ ಗೋಧಿ, ಜವೆಗೋದಿ, ಸಣ್ಣಭತ್ತ, ಎಳ್ಳು, ಹೆಸರು, ಉದ್ದ ಭತ್ತ ಇವುಗಳಿಂದ ಸಿದ್ಧಪಡಿಸಿದ ಭಕ್ಷ್ಯ ಭೋಜನಗಳು ಹರಿಗೆ ಪ್ರಿಯವಾದವುಗಳು. ಭೂಮಿ, ವಸ್ತ್ರ, ಅನ್ನ, ಚಿನ್ನ ಇವುಗಳ ದಾನಗಳೂ ಹರಿಗೆ ಪ್ರಿಯಕರವಾಗಿರುತ್ತದೆ. ಮಾಘ ಮಾಸದಲ್ಲಿ ಎಳ್ಳಿನೊಡನೆ ಗೋವನ್ನು ದಾನ ಮಾಡಬೇಕು ಹಾಗೂ ಸೌದೆಯನ್ನು ದಾನಮಾಡಬೇಕು. ಫಾಲ್ಗುಣ ಮಾಸದಲ್ಲಿ ಭತ್ತ, ವಸ್ತ್ರ ಕೃಷ್ಣಾಜಿನಗಳನ್ನು ದಾನ ಮಾಡಬೇಕು.

ಚೈತ್ರಮಾಸದಲ್ಲಿ ವಸ್ತ್ರ, ಹಾಸಿಗೆ ಆಸನಗಳನ್ನೂ ಸಹ ಹರಿ ಪ್ರೀತಿಯ ಸಲುವಾಗಿ ಬ್ರಾಹ್ಮಣರಿಗೆ ದಾನ ಮಾಡಬೇಕು. ವೈಶಾಖ ಮಾಸದಲ್ಲಿ ಸುಗಂಧಿತ ಪದಾರ್ಥಗಳನ್ನು, ತುಂಬಿದ ಕೊಡವನ್ನು ಬೀಸಣಿಕೆಯನ್ನು ದಾನ ನೀಡಬೇಕು. ಆಷಾಢ ಮಾಸದಲ್ಲಿ ಪಾದರಕ್ಷೆ, ಛತ್ರಿ, ನೆಲ್ಲಿಕಾಯಿ ಮೊದಲಾದವುಗಳನ್ನು ವಾಮನ ಪ್ರೀತ್ಯರ್ಥವಾಗಿ ದಾನ ಮಾಡಬೇಕು. ಭಾದ್ರಪದ ಮಾಸದಲ್ಲಿ ಪಾಯಸ, ಜೇನುತುಪ್ಪ, ಉಪ್ಪು ಬೆಲ್ಲ ಮೊದಲಾದವು ಗಳನ್ನೂ, ಆಶ್ವಯುಜಮಾಸದಲ್ಲಿ ಕಪ್ಪಾದ ಕುದುರೆ ಹಾಗೂ ಎತ್ತು, ಮೊಸರು, ತಾಮ್ರ ಮೊದಲಾದವುಗಳನ್ನೂ ಪದ್ಮನಾಭಪ್ರೀತ್ಯರ್ಥವಾಗಿ ದಾನ ಮಾಡಬೇಕು. ಕಾರ್ತೀಕ ಮಾಸದಲ್ಲಿ ದಾಮೋದರ ಪ್ರೀತ್ಯರ್ಥವಾಗಿ ಬೆಳ್ಳಿ, ಚಿನ್ನ, ದೀಪ ಮೊದಲಾದವುಗಳನ್ನು, ಮಾರ್ಗಶಿರ ಮಾಸದಲ್ಲಿ ಕೇಶವ ಪ್ರೀತಿಗಾಗಿ ಕತ್ತೆ, ಒಂಟೆ, ಆನೆ ಮೊದಲಾದವುಗಳನ್ನು ದಾನ ಮಾಡಬೇಕು.

ಅವರವರ ಇಚ್ಛಾನುಸಾರವಾಗಿ ದಾಸಿಯರು, ಭೃತ್ಯರು, ಅಲಂಕಾರಗಳು, ಷಡ್ರಸೋಪೇತವಾದ ಅನ್ನ ಇವೆಲ್ಲವನ್ನೂ ದಾನ ಮಾಡಬೇಕು. ಕೇಶವನ ಪ್ರೀತಿಗಾಗಿ ದೇವಾಲಯವನ್ನು ನಿರ್ಮಿಸುವವನು ಶಾಶ್ವತವಾದ ಪುಣ್ಯಲೋಕವನ್ನು ಹೊಂದುವನು. ಹೂವಿನ ತೋಟಗಳನ್ನು ದೇವರಿಗಾಗಿ ಅರ್ಪಿಸುವವರು ತನ್ನ ವಂಶದ ಹಿಂದು ಮುಂದಿನ ಎಂಟು ತಲೆಮಾರುಗಳನ್ನು ಉದ್ಧರಿಸುವರು. ಪಿತೃಗಳು ಇಂಥವನು ನಮ್ಮ ವಂಶದಲ್ಲಿ ಹುಟ್ಟಿಯಾನೇ ಎಂದು ದಾರಿ ನೋಡುವರು. ಕೇಶವನ ಮಂದಿರದಲ್ಲಿ ಧ್ವಜವನ್ನು ಪ್ರತಿಷ್ಠಾಪನೆ ಮಾಡಿದವನು ಪುಣ್ಯನಾಗುವನು. ವಿಷ್ಣುವಿನ ಮಂದಿರವನ್ನು ಸಾರಣೆ ಕಾರಣೆಗಳಿಂದ ಚಿತ್ರಿಸಿ ಸಹಕರಿಸಿದವನು ಪಾಪಗಳಿಂದ ಮುಕ್ತನಾಗುವನು.

ಹರಿಯ ಸ್ವಾಂಶಗಳಾದ ಅನೇಕ ಅವತಾರಗಳಿಂದ ಬೇರೆ ಬೇರೆ ಮಂದಿರವನ್ನು ಪಂಚವರ್ಣಗಳಿಂದ ರಮ್ಯವಾದ ಚಿತ್ರಗಳನ್ನು ಬರೆಯಿಸಿದವನು, ದೀಪಗಳನ್ನು ಪ್ರತಿಷ್ಠಾಪನೆ ಮಾಡಿಸಿದವನು, ಶಾಶ್ವತವಾದ ಸುಖವನ್ನು ಹೊಂದುವನು. ದೇವಾಲಯದ ಸಮೀಪದಲ್ಲಿ ನೆರಳುಂಟುಮಾಡುವ ಉದ್ಯಾನಗಳನ್ನೇರ್ಪಡಿಸಿದವನು, ನಾನಾ ವಿಧವಾದ ದಾನಗಳಿಂದ ಬ್ರಹ್ಮಚಾರಿ ಶ್ರೋತ್ರಿಯ ಅಂಗವಿಕಲರಾದ ಜನರು ಇವರೆಲ್ಲರಿಗೂ ಉಪಯುಕ್ತವಾದ ದಾನ ಮಾಡುವದರಿಂದ ಉತ್ತಮ ಗತಿಯನ್ನು ಹೊಂದುವರು. ಹಿಂದಕ್ಕೆ ಜ್ಯಾಮಘನೆಂಬ ದೊರೆಯಿದ್ದನು. ಆತನು ವಿಷ್ಣುವನ್ನು ಪೂಜಿಸಿ ವಿಷ್ಣು ಲೋಕಕ್ಕೆ ಹೋದನು. ಅವನು ಸಾಸಿವೆ ಹಾಗೂ ಅಗಸಿತೈಲಗಳಿಂದ ವಿಷ್ಣು ಪ್ರೀತಿಗಾಗಿ ದೀಪ ಅರ್ಪಿಸಿ ಅಂಧತಾಮಿಸ್ರವೆಂಬ ನರಕವನ್ನು ತಪ್ಪಿಸಿಕೊಂಡು ವಿಷ್ಣುಲೋಕಕ್ಕೆ ಹೋದನು.

ಎಲೈ ಬಲಿಯೇ, ಈಗಲೂ ಸಹ ಹರಿಯ ಸೇವೆಯನ್ನು ಉಪೇಕ್ಷಿಸುವವರು ಜ್ಯಾಮಘನ ಮಾರ್ಗವನ್ನೇ ಅನುಸರಿಸುವರು. ಆದುದರಿಂದ ನೀನೂ ದೇವಾಲಯವನ್ನು ಏರ್ಪಡಿಸಿ ಹರಿಯನ್ನು ಆರಾಧಿಸಿ ಅನೇಕ ದಾನಗಳನ್ನು ಮಾಡು. ಐಶ್ವರ್ಯವಿರುವ ಕಾಲದಲ್ಲಿ ವಿತ್ತಸಂಕೋಚ ಮಾಡದೇ ಚಿತ್ತಸಂಕೋಚ ಮಾಡದೇ ದಾನವನ್ನು ನೀಡಬೇಕು. ಅಂಥವನಿಗೆ ವಿಷ್ಣುವು ಶುಭಪ್ರದನಾಗುತ್ತಾನೆ.'' ಈ ರೀತಿಯಾಗಿ ಪ್ರಹ್ಲಾದನು ಬಲಿಗೆ ಉತ್ತಮೋತ್ತಮವಾದ ಉಪದೇಶಗಳನ್ನು ಮಾಡಿ ಬಲಿಯಿಂದ ಸತ್ಕರಿಸಲ್ಪಟ್ಟು ಮುಕ್ತಿ ಹೊಂದಿದನು. ಆ ಸೌಧದಲ್ಲಿಯ ವರ್ಣಲೇಪ ಹಾಗೂ ಮಾರ್ಜನ ಮೊದಲಾದ ಕಾರ್ಯಗಳನ್ನು ಪತೀಸಮೇತನಾಗಿ ಸ್ವತಃ ಮಾಡಿದನು. ಸುಸ್ವಾದು ಪದಾರ್ಥಗಳನ್ನು ಮಾಡಿಸಿ ಪರರಿಗೆ ನಿವೇದಿಸಿದನು. ಬ್ರಾಹ್ಮಣೋತ್ತಮರಿಂದ ಹರಿಯ ನಾಮ ಕೀರ್ತನವಾಗುವಂತೆ ಏರ್ಪಡಿಸಿದನು. ಭಕ್ತಿಯಿಂದ ಸೇವಿಸುತ್ತಿರುವ ಬಲಿಯ ಸಂರಕ್ಷಣೆಗಾಗಿ ಜಗತ್ಪತಿಯಾದ ಜನಾರ್ದನನು ದಿವ್ಯದೇಹದಿಂದ ಅಲ್ಲಿ ವಾಸಮಾಡಿದನು. ಮುಸಲಾಯುಧವನ್ನು ಹಿಡಿದುಕೊಂಡು ಬಲಿಯ ಗೃಹರಕ್ಷಣೆಗಾಗಿ ದ್ವಾರಪಾಲಕನಾಗಿ ನಿಂತ ಜನಾರ್ದನನು ಬಲಿಯ ವೈರಿಗಳನ್ನು ದ್ವಾರದಲ್ಲಿಯೇ ನಿಗ್ರಹಿಸಿದನು. ತನ್ನ ಸೇವೆಯಲ್ಲಿರುವ ಬಲಿಯನ್ನು ರಕ್ಷಸಲು ದ್ವಾರಪಾಲಕನಾಗಿ ನಿಂತಿದ್ದರಿಂದ ಯಾವ ಆತಂಕವೂ ಬಲಿಗೆ ಬರಲಿಲ್ಲ. ನಾರಾಯಣನನ್ನು ಯಥಾವಿಧಿಯಾಗಿ ಅವನು ಪೂಜಿಸತೊಡಗಿದನು. ಈ ರೀತಿ ಅಸುರರಾಜನಾದ ಬಲಿಯು ಭಕ್ತಿಯಿಂದ ಪೂಜಿಸುತ್ತಿರುವದರಿಂದ ''ನಮೇಭಕ್ತಃಪ್ರಣಶ್ಯತಿ'' ಎಂಬಮಾತಿನಂತೆ ಇಂದ್ರನಂತೆಯೇ

ಪಾತಾಲದಲ್ಲಿ ಈತನೂ ಮೆರೆಯಲಾರಂಭಿಸಿದನು. ಇದರಿಂದ ತಿಳಿದುಬರುವದೇನೆಂದರೆ ಯಾರು ಹಿರಿಯರ ಉಪದೇಶದಿಂದ ತಮ್ಮ ಮನೋದೋಷಗಳನ್ನು ಕಳೆದುಕೊಂಡು ಸತ್ಕಾರ್ಯದಲ್ಲಿ ತೊಡಗಿರುವರೋ ಅವರು ಸುಖಶಾಂತಿಗಳನ್ನು ಪಡೆಯುತ್ತಾರೆ. ವಿಪತ್ತುಗಳೆಂಬ ಸರ್ಪಗಳಿಂದ ಕಚ್ಚಲ್ಪಟ್ಟ ಜನರಿಗೆ ಹಿರಿಯರ ವಾಕ್ಯಗಳೇ ಔಷಧಗಳಾಗಿ ಪರಿಣಮಿಸಿ ವಿಷಬಾಧೆಯನ್ನು ಹೋಗಲಾಡಿಸುತ್ತವೆ. ವಿಪತ್ತೆಂಬ ಮೊಸಳೆಯಿಂದ ಹಿಡಿಯಲ್ಪಟ್ಟವರನ್ನು ಬಿಡಿಸಲು ಜ್ಞಾನವೃದ್ಧರೇ ಸಮರ್ಥರು. ಹೀಗೆಂದು ಪುಲಸ್ತ್ಯರು ನಾರದರಿಗೆ ಹೇಳುತ್ತಾರೆ:- ವೃದ್ಧರ ವಚನಗಳನ್ನು ಕೇಳಿ ಅವುಗಳನ್ನು ಆಚರಣೆಯಲ್ಲಿ ತರುವವನು ಜಾಗ್ರತೆಯಾಗಿ ಸಿದ್ಧಿಮಾರ್ಗವನ್ನು ಹೊಂದುವನು. ಎಲೈ, ನಾರದನೇ, ಈ ವಿಧವಾದ ಪುಣ್ಯಕರವಾದ ವಾಮನಪುರಾಣವನ್ನು ನಿನಗೆ ನಾನು ಹೇಳಿದ್ದಾಯಿತು.

ಇದನ್ನು ಕೇಳಿದವನು ಕೀರ್ತಿವಂತನಾಗಿ ವಿಷ್ಣುಭಕ್ತನಾಗುತ್ತಾನೆ. ಯಾವನು ವಿಷಯದಲ್ಲಿ ತನ್ನ ಮನಸ್ಸನ್ನು ತೊಡಗಿಸಿದರೂ, ಈ ಪುರಾಣದ ಆಧಾರದಿಂದ ವಿಷ್ಣುವನ್ನು ಆರಾಧಿಸಿ ಆತನ ಚರಿತ್ರೆಯನ್ನು ಶ್ರವಣ ಮಾಡುವನೋ ಅವನು ನಿಷ್ಪಾಪನಾಗಿ ಅಶ್ವಮೇಧಯಾಗದ ಫಲವನ್ನು ಹೊಂದುವನು. ಈ ಭೂಮಿಯಲ್ಲಿ ಪುರುಷನೇ ಆಗಲಿ, ಸ್ತ್ರೀಯೇ ಆಗಲೀ, ಈ ಪುರಾಣದಲ್ಲಿ ಒಂದು ಪದ್ಯವನ್ನೇ ಆಗಲೀ, ಶ್ರವಣ ಮಾಡಿದ್ದೇ ಆದರೆ ಅನೇಕ ತೀರ್ಥಗಳಲ್ಲಿ ಸ್ನಾನ ಮಾಡಿದ ಫಲವು ಪ್ರಾಪ್ತವಾಗುತ್ತದೆ. ಈ ಪುಣ್ಯಚರಿತ್ರೆಯು ರಾಜಸೂಯ ಯಾಗದ ಫಲವನ್ನು ಕೊಡುವದು. ಈ ವಿಷಯದಲ್ಲಿ ಸ್ವಲ್ಪವೂ ಸಂದೇಹವಿಲ್ಲ. ಇದರ ಉಪಾಖ್ಯಾನವನ್ನು ಪಠಿಸುವವರು ದುರ್ಭಿಕ್ಷದಲ್ಲಿ ಅನ್ನದಾನ ಮಾಡಿದ ಫಲವನ್ನೂ, ಗತಿಯಿಲ್ಲದವರಿಗೆ ಗತಿಕಲ್ಪಿಸಿಕೊಟ್ಟವರು ಹೊಂದುವ ಫಲವನ್ನೂ ಹೊಂದು ವರು. ಈ ವಾಮನಾವತಾರವು ಹಿಂದಿನ ಕಲ್ಪ ಸಂಖ್ಯೆಯಿಂದ ಹದಿನಾಲ್ಕನೇಯದು. ಈ ವಾಮನ ಉಪಾಖ್ಯಾನದ ಪಠಣದಿಂದ ಪಾಪಿಗಳೂ ಸಹ ಗಂಗಾಜಲ ಸ್ನಾನದಿಂದ ಶುದ್ಧರಾಗುವಂತೆ ಸರ್ವವಿಧ ಪಾಪನಾಶಹೊಂದಿ ಶುದ್ಧರಾಗುತ್ತಾರೆ. ಯಾರು ಈ ವಾಮನ ಪುರಾಣವನ್ನು ಶ್ರವಣ ಮಾಡುತ್ತಾರೋ, ಅವರಿಗೆ ಹಾಗೂ ಅವರ ವಂಶದವರಿಗೆ ರೋಗ ಹಾಗೂ ವಿಪದಾದಿಗಳ ಭಯವಿರುವದಿಲ್ಲ. ಆದರೆ ಭಕ್ತಿ ಇಲ್ಲದವನಿಗೆ ಮಾತ್ರ ಇದನ್ನು ಹೇಳಬಾರದು. ವಾಮನಾವತಾರ ಹೊಂದಿದ ಜಗತ್ಕಾರಣ ಮೂರ್ತಿಯಾದ ವಿಷ್ಣು ಬಲಿಬಂಧನ ವ್ಯಾಜದಿಂದ ಲೋಕಕಲ್ಯಾಣಕ್ಕಾಗಿ ಆತನ ದ್ವಾರಪಾಲಕನಾದನು. ಇಂಥ ಭಕ್ತವತ್ಸಲನಾದ ನಾರಾಯಣನಿಗೆ ಅನಂತ ನಮಸ್ಕಾರಗಳು. ಇದನ್ನು ಪಠಣ ಮಾಡಿದವರಿಗೆ ಶ್ರವಣ ಮಾಡಿದವರು ಗೋ, ಭೂ, ಸುವರ್ಣಗಳನ್ನು ದಾನ ಮಾಡಬೇಕು. ದಾನ ಮಾಡತಕ್ಕ ವಸ್ತುಗಳಲ್ಲಿ ಲೋಭದಿಂದ ವರ್ತಿಸಬಾರದು. ಮನುಷ್ಯನು ಅಸೂಯಾದಿ ದೋಷಗಳನ್ನು ಬಿಟ್ಟು ಮೂರು ಸಂಧ್ಯಾಕಾಲಗಳಲ್ಲಿಯೂ ಈ ಪುರಾಣದ ಶ್ರವಣ ಪಠಣ ಮಾಡಿದರೆ ಸರ್ವಪಾಪ ರಹಿತನಾಗಿ ಸಂಪತ್ತನ್ನು ಹೊಂದುತ್ತಾನೆ.

ಇತಿ ಶ್ರೀ ವೇದವ್ಯಾಸಪ್ರಣೀತ ವಾಮನ ಮಹಾಪುರಾಣಂ ಸಂಪೂರ್ಣ

ಓಂ ಶಾಂತಿ ಶಾತಿ ಶಾತಿಃ

—o—

